# ಇಗೋ ಕನ್ನಡ

## ಸಾಮಾಜಿಕ ನಿಘಂಟು

ಪ್ರೊ|| ಜಿ. ವೆಂಕಟಸುಬ್ಬಯ್ಯ







## ಪ್ರೊ॥ ಜಿ. ವೆಂಕಟಸುಬ್ಬಯ್ಯ

*1913* ರಲ್ಲಿ ಮೈಸೂರಿನಲ್ಲಿ ಜನನ. *1937* ರಲ್ಲಿ ಮೈಸೂರು ಮಹರಾಜ ಕಾಲೇಜಿನಿಂದ ಎಂ. ಎ. ಪದವಿ. ಪ್ರಥಮ ಸ್ಥಾನಕ್ಕಾಗಿ ಸುವರ್ಣ ಪದಕ; ಹೊನ್ನಶೆಟ್ಟಿ ಬಹುಮಾನ. ಮುಂದೆ ಬಿ. ಟಿ. ಪದವಿ.

*1939* ರಿಂದ ಪ್ರಾರಂಭಿಸಿ ಕನ್ನಡ ಉಪನ್ಯಾಸಕ, ಕನ್ನಡ ಪ್ರಾಧ್ಯಾಪಕ, ಪ್ರಾಂಶುಪಾಲ, ಮುಂದೆ ನಿವೃತ್ತಿಯ ನಂತರ ಬೋಧನ ಮಾರ್ಗಗಳ ವಿಶೇಷ ಪ್ರಾಧ್ಯಾಪಕ ಹಾಗೂ ಸಂದರ್ಶನ ಪ್ರಾಧ್ಯಾಪಕ – ಹೀಗೆ ಶಿಕ್ಷಣ ಕ್ಷೇತ್ರದಲ್ಲಿ ಸುಮಾರು ನಲವತ್ತು ವರ್ಷಗಳ ಕಾಲ ಸೇವೆ. ಜತೆಯಲ್ಲೇ ಸಂಶೋಧನೆ, ಅನುವಾದ, ವಿಮರ್ಶೆ, ಗ್ರಂಥಸಂಪಾದನೆ, ನಿಘಂಟು ರಚನೆ ಇತ್ಯಾದಿ, ಕ್ಷೇತ್ರಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಕನ್ನಡ ಭಾಷೆಯನ್ನು ಸಮೃದ್ಧಿಗೊಳಿಸುವ ನಿರಂತರ ಕಾಯಕ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಹಲವು ಗೌರವ ಪುರಸ್ಕಾರಗಳ ವಿಜೇತ. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಹಲವು ಸಂಶೋಧನ ಮತ್ತು ವಿಮರ್ಶಾಲೇಖನಗಳಲ್ಲದೆ, ಸುಮಾರು ಐವತ್ತನಾಲ್ಕು ಕೃತಿಗಳ ರಚನೆ ಅಥವಾ ಸಂಪಾದನೆ. ಈ ಪೈಕಿ ವಿಶಿಷ್ಟವಾದದ್ದು **'ಇಗೋ ಕನ್ನಡ.'** ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸುವ ನಿಟ್ಟಿನಲ್ಲಿ ಇದು ಕನ್ನಡಕ್ಕೆ ಲೇಖಕರ ವಿಶಿಷ್ಟ ಕೊಡುಗೆ. ಈ ಸಾಮಾಜಿಕ ನಿಘಂಟು ಕನ್ನಡದಲ್ಲೇ ಪ್ರಥಮ ಪ್ರಯತ್ನ.

---

ಗ್ರಂಥಾಲಯ ಪ್ರತಿ ರೂ. 180
ಸಾಧಾರಣ ಪ್ರತಿ ರೂ. 140
ISBN 81-7302-275-5

# ಇಗೋ ಕನ್ನಡ

## (ಸಾಮಾಜಿಕ ನಿಘಂಟು)

ಪ್ರೊ॥ ಜಿ. ವೆಂಕಟಸುಬ್ಬಯ್ಯ






ನವಕರ್ನಾಟಕ ಪ್ರಕಾಶನ

# ನಿಘಂಟುಕಾರನ ಅರಿಕೆ

ಸುಮಾರು ಐದು ವರ್ಷಗಳ ಹಿಂದೆ, ಕನ್ನಡದ ಜನಪ್ರಿಯ ಪತ್ರಿಕೆಯಾದ 'ಪ್ರಜಾವಾಣಿ'ಯ ಸಂಪಾದಕ ವರ್ಗದವರೂ ನನ್ನ ವಿದ್ಯಾರ್ಥಿ ಮಿತ್ರರೂ ಆದ ಶ್ರೀ ರಾಮಣ್ಣನವರು ಕನ್ನಡದ ಭಾಷೆಯ ಬಗ್ಗೆ ಮತ್ತು ಶಬ್ದ ಪ್ರಯೋಗಗಳ ಬಗ್ಗೆ ಪ್ರೌಢಶಾಲೆಯ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ತಲೆದೋರುವ ಸಂದೇಹಗಳನ್ನು ಕುರಿತು ಒಂದು ಅಂಕಣವನ್ನು ರಚಿಸುವ ಸೂಚನೆಯನ್ನು ನೀಡಿದರು. ತಮ್ಮ ಪತ್ರಿಕಾ ವ್ಯವಸಾಯದ ಅನುಭವದಲ್ಲಿ ಅಂಥ ಅಂಕಣಕ್ಕೆ ಅಪೂರ್ವವಾದ ಸ್ವಾಗತವಿರುವುದಾಗಿ ತಿಳಿಸಿದರು.

ಹೀಗೆ ೧೨-೫-೯೧ ರಲ್ಲಿ ಪ್ರಾರಂಭವಾದ 'ಇಗೋ ಕನ್ನಡ' ಅಂಕಣವು ಬಹುಬೇಗ ಜನಪ್ರಿಯವಾಯಿತು. ಓದುಗರೇ ತಮಗೆ ತೋರುವ ಸಂದೇಹಗಳನ್ನು ಕುರಿತು ಪ್ರಶ್ನೆಗಳನ್ನು ಕಳುಹಿಸಲು ಮೊದಲು ಮಾಡಿದರು. ವಾರಕ್ಕೆ ನೂರಾರು ಪತ್ರಗಳು ಅಂಕಣಕಾರನ ಕೈ ಸೇರಿದುವು.

ಕನ್ನಡವನ್ನು ಚೆನ್ನಾಗಿ ಅಭ್ಯಾಸ ಮಾಡಿದ ಓದುಗರೂ, ಅಧ್ಯಾಪಕರೂ, ವಿದ್ಯಾರ್ಥಿಗಳೂ ಶ್ರೀಸಾಮಾನ್ಯರೂ ಕಳುಹಿಸಿದ ಪ್ರಶ್ನೆಗಳ ವೈವಿಧ್ಯ ನನಗೇ ಆಶ್ಚರ್ಯವನ್ನುಂಟುಮಾಡಿತು. ಅಂಥ ಪ್ರಶ್ನೆಗಳಿಗೆ ನಾನು ನೀಡಿದ ಉತ್ತರಗಳಿಂದ ಸಂದೇಹಗಳು ನಿವಾರಣೆಯಾದ ಬಗ್ಗೆ ಕೃತಜ್ಞತೆಯ ಪತ್ರಗಳೂ ಬಂದುವು. ಕೆಲವು ವಿವರಗಳ ಬಗ್ಗೆ ಸ್ಪಷ್ಟತೆಯನ್ನು ನಿರೀಕ್ಷಿಸಿ ವೈಯಕ್ತಿಕ ಪತ್ರಗಳನ್ನೂ ನನ್ನ ವಿದ್ವಾಂಸ ಮಿತ್ರರು ಬರೆದರು.

ಕನ್ನಡ ನಾಡಿನ ಎಲ್ಲ ಜಿಲ್ಲೆಗಳಿಂದಲೂ, ಹೊರನಾಡಿನ ಬೊಂಬಾಯಿ, ದೆಹಲಿ, ಮದರಾಸುಗಳಿಂದಲೂ ಪ್ರಶ್ನೆಗಳು ಆಗಮಿಸಿದುವು. ಹಾಗೆ ಪ್ರಶ್ನೆಗಳನ್ನು ಕಳುಹಿಸುವವರಲ್ಲಿ ಅನೇಕರು 'ಇಗೋ ಕನ್ನಡ' ಅಂಕಣದ ವಿಷಯಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರೆ ಬಹು ಸಹಾಯ ಒದಗುತ್ತದೆ ಎಂದು ತಿಳಿಸಿದರು. ಅನೇಕ ಅಧ್ಯಾಪಕರೂ ಪತ್ರಗಳನ್ನು ಬರೆದರು. ಅವರೆಲ್ಲರ ಒತ್ತಾಯಕ್ಕೆ ಮಣಿದು ಅಂಕಣದ ಬರಹವನ್ನೆಲ್ಲ ಪರಿಷ್ಕಾರಗೊಳಿಸಿ ಅವುಗಳನ್ನು ನಿಘಂಟಿನ ರೂಪಕ್ಕೆ ತಿರುಗಿಸಿದ್ದೇನೆ.

ಇದನ್ನು ಪರಿಶೀಲಿಸಿದ ನನ್ನ ಮಿತ್ರರು ಇದನ್ನು ಪ್ರಕಟಿಸಿದರೆ ಒಳ್ಳೆಯದು ಎಂಬ ಪ್ರೋತ್ಸಾಹವನ್ನು ನೀಡಿದರು. ಅವರೆಲ್ಲರ ಸೂಚನೆಯಂತೆ ಇದು 'ಇಗೋ ಕನ್ನಡ' (ಸಾಮಾಜಿಕ ನಿಘಂಟು) ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿದೆ.

ಈ ನಿಘಂಟನ್ನು ಉಪಯೋಗಿಸುವವರೆಲ್ಲರೂ ನಿಘಂಟಿನ ಪ್ರಾರಂಭದಲ್ಲಿರುವ ಪ್ರವೇಶ ಸಿದ್ಧತೆ ಎಂಬ ಭಾಗವನ್ನು ಓದಬೇಕಾಗಿ ನನ್ನ ಬಿನ್ನಹ. ಅದರಿಂದ ನಿಘಂಟಿನಲ್ಲಿ ಹೇಳಿರುವ ಅನೇಕ ವಿಷಯಗಳು ಸ್ಪಷ್ಟವಾಗುತ್ತವೆ. ಮುಖ್ಯವಾಗಿ ಈ ಎಲ್ಲ ಬರಹವೂ ಓದುಗರು ಕೇಳಿದ ಪ್ರಶ್ನೆಗಳಿಗೆ ನೀಡಿದ ಉತ್ತರ. ಆದುದರಿಂದ ಇಲ್ಲಿನ ವಿವರಗಳನ್ನು ಓದುವಾಗ ಆ ಉತ್ತರಕ್ಕೆಂದು ಕೇಳಿದ ಪ್ರಶ್ನೆ ಏನಿರಬಹುದು ಎಂಬುದು ತಾನಾಗಿ ಹೊಳೆಯುತ್ತದೆ. ಒಂದು ಸಮಸ್ಯೆಯನ್ನು ಬಗೆಹರಿಸಿರುವ ರೀತಿಯನ್ನು ಆಳವಾಗಿ ಅಭ್ಯಾಸ ಮಾಡಿದರೆ ಅದೇ ಬಗೆಯ ಇತರ ಸಮಸ್ಯೆಗಳನ್ನು ಓದುಗರೇ ಪರಿಹರಿಸಿಕೊಳ್ಳಬಹುದು. ವ್ಯಾಕರಣ ಪ್ರಕ್ರಿಯೆಗಳ ಬಗ್ಗೆ ಸೂಚನೆಗಳು ದೊರಕುತ್ತವೆ. ವಾಕ್ಯನಿರ್ಮಾಣದಲ್ಲಿ ತಲೆದೋರಬಹುದಾದ ತಪ್ಪುಗಳನ್ನು ನಿವಾರಿಸುವುದು ಹೇಗೆ ಎಂಬುದು ತಿಳಿಯಬರುತ್ತದೆ. ಕಾಲಹರಣಕ್ಕಾಗಿ ನಾಲ್ಕು ಜನ ಸೇರಿದಾಗ ಒಂದೆರಡು ಪುಟಗಳನ್ನು ಓದಿದರೂ ಚರ್ಚೆಗೆ ವಿಷಯ ಸಿಗುತ್ತದೆ. ಒಟ್ಟಿನಲ್ಲಿ ಭಾಷೆಯ ಕ್ಷೇತ್ರ

ಎಷ್ಟು ವಿಶಾಲವಾದುದು ಎಂಬುದು ಮನಸ್ಸಿಗೆ ತಟ್ಟುತ್ತದೆ.

ಇದು ಸಿದ್ಧವಾದ ಕೂಡಲೇ ಇದರ ಪ್ರಕಟಣೆಯ ಭಾರವನ್ನು ಹೊರಲು ಮುಂದಾದ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಸಂಸ್ಥೆಯ ಶ್ರೀ ರಾಜಾರಾಮ್ ಅವರಿಗೂ ಅವರ ಸಹಾಯಕರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

'ಇಗೋ ಕನ್ನಡ' ಅಂಕಣದಲ್ಲಿ ಬಂದ ಮುಖ್ಯ ವಿಷಯಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ಅನುಮತಿಯಿತ್ತ ಪ್ರಜಾವಾಣಿಯ ಆಡಳಿತ ವರ್ಗದವರಿಗೂ ಅದನ್ನು ನನಗೆ ಪತ್ರಮುಖೇನ ತಿಳಿಸಿದ ಶ್ರೀ ಜಿ. ಎನ್. ರಂಗನಾಥರಾವ್ ಅವರಿಗೂ ಶ್ರೀ ಡಿ. ವಿ. ರಾಜಶೇಖರ ಅವರಿಗೂ ನಾನು ವಂದನೆಗಳನ್ನು ತಿಳಿಸುತ್ತೇನೆ.

'ಪ್ರಜಾವಾಣಿ'ಯ ಸೌಜನ್ಯಕ್ಕೆ ನಾನು ಆಭಾರಿ. ಈ ಸಂದರ್ಭದಲ್ಲಿ ಶ್ರೀ ರಾಮಣ್ಣನವರನ್ನು ನೆನೆಯುವುದು ನನ್ನ ಕರ್ತವ್ಯ.

'ಇಗೋ ಕನ್ನಡ' ಅಂಕಣಕ್ಕೆ ಓದುಗರು ತೋರಿದ ವಿಶ್ವಾಸವನ್ನು ಈ ನಿಘಂಟಿಗೂ ತೋರುತ್ತಾರೆಂಬ ನಂಬಿಕೆ ನನಗಿದೆ. ಈ ಗ್ರಂಥದ ಮುದ್ರಣಕ್ಕೆಂದು ಹಸ್ತಪ್ರತಿಯನ್ನು ಸಿದ್ಧಗೊಳಿಸಿದ ನನ್ನ ವಿದ್ಯಾರ್ಥಿ ಮಿತ್ರ ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರಿಗೆ ನಾನು ಶುಭವನ್ನು ಹಾರೈಸುತ್ತೇನೆ.

ಓದುಗರು ಈ ನಿಘಂಟಿನಲ್ಲಿ ಇರಬಹುದಾದ ಲೋಪದೋಷಗಳನ್ನು ನನಗೆ ತಿಳಿಸಿದರೆ ಅವುಗಳನ್ನು ಅತ್ಯಂತ ವಿನಯದಿಂದ ಸ್ವೀಕರಿಸಿ ಪುನರ್ಮುದ್ರಣದಲ್ಲಿ ತಿದ್ದಿಕೊಳ್ಳುತ್ತೇನೆ.

ಈ ನಿಘಂಟು ಕನ್ನಡದ ವಿದ್ಯಾರ್ಥಿಗಳಿಗೂ ಉಪಾಧ್ಯಾಯ ವರ್ಗಕ್ಕೂ ಶ್ರೀಸಾಮಾನ್ಯರಿಗೂ ಉಪಯುಕ್ತವಾದರೆ ನನ್ನ ಶ್ರಮ ಸಾರ್ಥಕ.

ಈ ಗ್ರಂಥವು ಮುದ್ರಣಗೊಳ್ಳುತ್ತಿದ್ದಾಗ ಪ್ರತಿಪುಟವನ್ನೂ ಓದುಗರ ದೃಷ್ಟಿಯಿಂದ ಪರಿಶೀಲಿಸಿ ಏನು ಸೇರಬೇಕು ಎಂಬುದನ್ನು ನನ್ನ ಗಮನಕ್ಕೆ ತಂದು ಆ ಭಾಗವನ್ನು ಪೂರೈಸಲು ಸಹಾಯ ಮಾಡಿದ ನನ್ನ ಕಿರಿಯ ಮಗ ಜಿ. ಜಿ. ವಿ. ಅರುಣನಿಗೆ ನನ್ನ ಶುಭಾಶಯಗಳು.

ನಂ. ೫೮, ೩೧ನೇ ಕ್ರಾಸ್, ಜಿ. ವೆಂಕಟಸುಬ್ಬಯ್ಯ
೭ನೇ ಬ್ಲಾಕ್, ಜಯನಗರ
ಬೆಂಗಳೂರು ೫೬೦೦೮೨
೧೦-೬-೯೬

## ಎರಡನೆಯ ಮುದ್ರಣ

ಇಷ್ಟು ಬೇಗ ಈ ಗ್ರಂಥವು ಎರಡನೆಯ ಮುದ್ರಣವನ್ನು ಕಾಣುತ್ತಿರುವುದು ನನಗೆ ಸಂತೋಷದ ವಿಷಯ. ಭಾಷೆಯ ವಿಷಯದಲ್ಲಿ ನಮ್ಮ ಯುವಜನರು ಹೆಚ್ಚು ಆಸಕ್ತಿಯನ್ನು ತಳೆಯುತ್ತಿದ್ದಾರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಹಿಂದಿನ ಮುದ್ರಣದಲ್ಲಿದ್ದ ಕೆಲವು ಮುದ್ರಣ ದೋಷಗಳನ್ನು ಇಲ್ಲಿ ತಿದ್ದಲಾಗಿದೆ. ಈ ಕಾರ್ಯದಲ್ಲಿ ನೆರವಾದ ನನ್ನ ಅಭಿಮಾನಿ ಮೈಸೂರಿನ ಆರ್. ವೈದ್ಯನಾಥ, ನನ್ನ ಶಿಷ್ಯ ಮಿತ್ರ ಎನ್. ಎಸ್. ರಾಮಸ್ವಾಮಿ ಅಯ್ಯರ್ ಮತ್ತು ನನ್ನ ಕಿರಿಯ ಮಗ ಜಿ. ವಿ. ಅರುಣ ಇವರಿಗೆಲ್ಲ ನನ್ನ ಕೃತಜ್ಞತೆಯ ಶುಭಾಶಯಗಳು. ಇದರ ಮುದ್ರಣ ಭಾರವನ್ನು ಹೊರುತ್ತಿರುವ ನವಕರ್ನಾಟಕ ಪ್ರಕಾಶನದ ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಅವರ ಸಹಾಯಕ ವರ್ಗದವರಿಗೆ ನಾನು ಆಭಾರಿ.

ಬೆಂಗಳೂರು ಜಿ. ವೆಂಕಟಸುಬ್ಬಯ್ಯ
೧-೭-೯೭

# ಈ ನಿಘಂಟಿಗೆ ಒಂದು ಪ್ರವೇಶ ಸಿದ್ಧತೆ

| | |
|---|---|
| | *A word is dead* |
| ಶಬ್ದವದು ನುಡಿದೊಡನೆ | *When it is said* |
| ಅವಸಾನ ಹೊಂದಿತೆನ್ನುವರು | *Some say* |
| ನುಡಿದಂದೆ ಶಬ್ದವದು | *I say, it just* |
| ಬದುಕತೊಡಗುವುದೆಂಬೆ ನಾನು | *Begins to live* |
| | *That day* |

*EMILY DICKINSON*

ಭಾಷಾಶಾಸ್ತ್ರದಲ್ಲಿ ಇಂಗ್ಲಿಷ್ ಭಾಷೆಯಲ್ಲಿರುವ ಮೂರು ಶಬ್ದಗಳಿಗೆ ಬಹಳ ಪ್ರಾಮುಖ್ಯ ಬಂದಿದೆ. ಆ ಮೂರು ಶಬ್ದಗಳು Fist, Finger, Five. ಡಚ್ ಮತ್ತು ಜರ್ಮನ್ ಭಾಷೆಗಳಲ್ಲಿ ಈ ಶಬ್ದಗಳಿಗೆ ಜ್ಞಾತಿಶಬ್ದಗಳಿವೆ. ಡಚ್ ಭಾಷೆಯಲ್ಲಿ Vuist, Vinger, Vijf. ಜರ್ಮನ್ ಭಾಷೆಯಲ್ಲಿ Faust, Finger, Funf. ರಷ್ಯನ್ ಭಾಷೆಯಲ್ಲಿ ಪ್ರಾಚೀನ ಕಾಲದಲ್ಲಿ ಈ ಶಬ್ದಗಳ ಸಂಬಂಧೀಶಬ್ದಗಳು ಕಾಣಬರುತ್ತಿವೆಯಂತೆ. ಪ್ರಪಂಚದ ಅನೇಕ ಭಾಷೆಗಳಲ್ಲಿ ಈ ಶಬ್ದಗಳ ಜ್ಞಾತಿ ಶಬ್ದ ರೂಪಗಳು ಕಂಡುಬರುವುದರಿಂದ ಪ್ರಪಂಚದ ಎಲ್ಲ ಭಾಷೆಗಳಿಗೂ ಮೂಲವಾಗಿದ್ದ ಒಂದು ಭಾಷೆ ಇದ್ದಿರಬೇಕೆಂದು ಕೆಲವರು ಭಾಷಾಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಇವುಗಳಲ್ಲಿ Fist ಮೊದಲು ಪ್ರಯೋಗವಾಯಿತೋ Five ಮೊದಲು ಪ್ರಯೋಗವಾಯಿತೋ ಎಂಬುದು ನಿರ್ಧಾರವಾದರೆ ಪ್ರಾಚೀನ ಮಾನವನ ಮನಸ್ಸು ಹೇಗೆ ಕೆಲಸ ಮಾಡುತ್ತಿತ್ತು ಎಂಬುದನ್ನು ತಿಳಿಯಲು ಒಳ್ಳೆಯ ಮಾರ್ಗಸೂಚಿಯೊಂದು ದೊರಕಿದಂತಾಗುತ್ತದೆ ಎಂದು ಆ ವಿದ್ವಾಂಸರು ವಾದಿಸುತ್ತಾರೆ.

ಪ್ರಪಂಚದ ಜೀವರಾಶಿಯಲ್ಲಿ ಮಾನವನೊಬ್ಬನಿಗೆ ಮಾತ್ರ ತನ್ನ ಕೈಹೆಬ್ಬೆಟ್ಟನ್ನು ಮಿಕ್ಕ ನಾಲ್ಕು ಬೆರಳುಗಳಿಗೆ ಅಭಿಮುಖವಾಗಿಸುವ ಶಕ್ತಿಯಿದೆ; ಮಿಕ್ಕ ಯಾವ ಪ್ರಾಣಿಗೂ ಇಲ್ಲ ಎಂಬ ವಸ್ತುಸ್ಥಿತಿಯಿಂದ ಮಾನವನ ಎಲ್ಲ ದೈಹಿಕ ಬೌದ್ಧಿಕ ಪ್ರಗತಿ ಸಾಧಿತವಾಗಿದೆ. ಈ ವಿಷಯವನ್ನು ಗುರುತಿಸಿ ಅವರು ಮತ್ತೆ Finger, Five ಶಬ್ದಗಳ ಪ್ರಾಧಾನ್ಯವನ್ನು ಸ್ಮರಿಸುತ್ತಾರೆ.

ಗ್ರೀಕ್, ಲ್ಯಾಟಿನ್, ಸಂಸ್ಕೃತ ಮುಂತಾದ ಪ್ರಾಚೀನ ಇಂಡೋ – ಯುರೋಪಿಯನ್ ಭಾಷೆಗಳಿಂದಲೇ ಇಂಗ್ಲಿಷ್, ಡಚ್, ಜರ್ಮನ್, ರಷ್ಯನ್ ಭಾಷೆಗಳೂ, ಜರ್ಮಾನಿಕ್, ಸ್ಲಾವಿಕ್, ರೋಮಾನ್ಸ್, ಸೆಲ್ಟಿಕ್ ಮತ್ತು ಬಾಲ್ಟಿಕ್ ಭಾಷೆಗಳೂ ಬೆಳೆದು ಬಂದಿವೆ ಎಂಬುದನ್ನು ಸಾಮಾನ್ಯವಾಗಿ ಎಲ್ಲ ಭಾಷಾಶಾಸ್ತ್ರಜ್ಞರೂ ಒಪ್ಪುತ್ತಾರೆ.

ಆದರೆ ಗ್ರೀಕ್, ಲ್ಯಾಟಿನ್, ಸಂಸ್ಕೃತ ಮುಂತಾದ ಭಾಷೆಗಳಿಗಿಂತ ಹೆಚ್ಚು ಪ್ರಾಚೀನವಾದ ಮತ್ತೊಂದು ಭಾಷೆ ಇದ್ದಿರಬೇಕೆಂದೂ ಆ ಭಾಷೆಯನ್ನು PIE ಎಂದು ಸಂಕ್ಷೇಪವಾಗಿ ಕರೆಯಬೇಕೆಂದೂ ಸೂಚಿಸಿರುವ ಭಾಷಾಶಾಸ್ತ್ರಜ್ಞರೂ ಇದ್ದಾರೆ. ಅಷ್ಟೇ ಅಲ್ಲದೆ Uralic ಗುಂಪಿಗೆ ಸೇರಿದ Finnish, Estonian, Hungarian ಮುಂತಾದ ಭಾಷೆಗಳೂ, Altaic ಗುಂಪಿಗೆ ಸೇರಿದ Turkish ಮತ್ತು Mongolian ಭಾಷೆಗಳೂ Aero-Asiatic ಗುಂಪಿಗೆ ಸೇರಿದ Arabic, Hebrew ಭಾಷೆಗಳೂ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಎಲ್ಲ ಭಾಷೆಗಳೂ ಒಂದೇ ಭಾಷೆಯ ಮೂಲದಿಂದ ಬಂದವೆಂದೂ, ಆ ಭಾಷೆಯನ್ನು Nostratic ಎಂದು

ಕರೆಯಬಹುದೆಂದೂ ವಾದಿಸುವ ವಿದ್ವಾಂಸರ ವರ್ಗವೂ ಇದೆ. ಈ ಭಾಷೆ ಸುಮಾರು ೧೨೦೦೦ ವರ್ಷಗಳ ಹಿಂದೆ ಪ್ರಚಾರದಲ್ಲಿದ್ದಿರಬಹುದೆಂಬುದು ಆ ವಿದ್ವಾಂಸರ ಅಭಿಪ್ರಾಯ.

ಈ ಸಿದ್ಧಾಂತವು ತಪ್ಪೆಂದು ವಾದಿಸುವವರ ಸಂಖ್ಯೆಯೇ ಹೆಚ್ಚು. ಆದರೂ ಈಚೆಗೆ Nostratic ಭಾಷೆಯ ಬೆಂಬಲಿಗರು ಹೆಚ್ಚುತ್ತಿರುವುದರಿಂದ ಈಗೀಗ ಈ ವಿಚಾರವನ್ನು ಮತ್ತೆ ಪರಿಶೀಲಿಸಲು ಅನೇಕರು ಒಪ್ಪಿದ್ದಾರೆ.

Mito Chondrial DNA ಯನ್ನು ವಿಶ್ಲೇಷಣೆ ಮಾಡಿದ ವಿಜ್ಞಾನಿಗಳು ಎಲ್ಲ ಮಾನವರೂ ಒಂದೇ Genetic Stock ನಿಂದ ಬೆಳೆದು ಬಂದಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಹೀಗಿರುವುದರಿಂದ ಮೂಲಭಾಷೆಯೂ ಒಂದೇ ಆಗಿರಬೇಕೆಂಬುದು ಕೆಲವರ ಸೂಚನೆ.

ಹೀಗೆ ಈ ಕ್ಷೇತ್ರ ತುಂಬ ಗೊಂದಲದ ಸ್ಥಿತಿಯಲ್ಲಿದೆ. ಜ್ಞಾತಿಶಬ್ದಗಳು ಎಂಬುವು ನಿಜವಾಗಿ ಜ್ಞಾತಿಶಬ್ದಗಳಲ್ಲದಿರಬಹುದು. Papa, Mama ಎಂಬುವು ಎಲ್ಲ ಮಕ್ಕಳೂ ಮೊದಲು ಓಷ್ಠ್ಯವನ್ನು ಉಚ್ಚರಿಸುವುದರಿಂದ ಎಲ್ಲ ಭಾಷೆಗಳಿಗೂ ಅವು ಸಮಾನವಾಗುತ್ತವೆ. ಈ ಎಲ್ಲ ಕಾರಣಗಳಿಂದ ಯಾವುದೇ ಭಾಷೆಯ ಚಾರಿತ್ರಕ ಸತ್ಯವನ್ನು ಹುಡುಕಬೇಕಾದರೆ ಸದ್ಯಕ್ಕಾದರೂ ಉಪಲಬ್ಧವಾಗಿರುವ ಶಾಸನ, ಗ್ರಂಥ ಮತ್ತು ವಾಗ್ರೂಢಿಗಳಿಂದಲೇ ಪ್ರಭಾವಿತರಾಗಬೇಕಾದುದು ಅನಿವಾರ್ಯವಾಗಿದೆ. ಭಾಷೆಯ ಅಭ್ಯಾಸದಲ್ಲಿ ಮೊದಲು ಇದನ್ನು ನೆನಪಿಡಬೇಕು.

ಈ ಚರ್ಚೆ ಹೇಗೆ ತೀರ್ಮಾನವಾದರೂ ಸರಿಯೇ, ಇಂದಿನ ಮಾನವನಂತೂ ಮಾತನಾಡುವ ಪ್ರಾಣಿ. ತನ್ನ ಜೀವನದಲ್ಲಿ ನಡೆದು ಹೋದ ಹಿಂದಿನದನ್ನು ನೆನಪಿನಲ್ಲಿಡುವ ಮತ್ತು ಭವಿಷ್ಯದ ಬಗ್ಗೆ ಕನಸು ಕಾಣುವ ಶಕ್ತಿ ಇರುವುದು ಮಾನವ ಪ್ರಾಣಿಗೆ ಮಾತ್ರ. ಬಾಹ್ಯ ಜೀವನದಲ್ಲಿ ವಾಸ್ತವತೆಯ ಬಗ್ಗೆ ಹೊಳೆಯುವ ಭಾವನೆಗಳನ್ನೂ ಅಂತರಂಗದಲ್ಲಿ ಮೊಳೆಯುವ ಅತೀಂದ್ರಿಯ ಭಾವನೆಗಳನ್ನೂ ಇತರರಿಗೆ ತಿಳಿಸುವ, ಇತರರು ಹೇಳುವ ಮಾತಿನ ಅರ್ಥವನ್ನು ಗ್ರಹಿಸುವ, ಸಾಮರ್ಥ್ಯ ಇರುವುದು ಮಾನವನಿಗೆ ಮಾತ್ರ. ಈ ಮಾತು ಅಥವಾ ಭಾಷೆ ಎನ್ನುವುದು ಮಾನವನ ಮನಸ್ಸಿನ ಬೃಹದಾಯುಧಾಗಾರ; ಸಾಮಾಜಿಕರನ್ನು ಎಚ್ಚರಿಸಿ ಅನೇಕರನ್ನು ಒಗ್ಗೂಡಿಸುವ ಅಥವಾ ಭೇದಭಾವವನ್ನು ಸೃಷ್ಟಿಸಿ ಅವರನ್ನು ಇಬ್ಭಾಗವಾಗಿ ಒಡೆಯುವ ಸಾಮರ್ಥ್ಯವುಳ್ಳದ್ದು. ಭಾಷೆಯ ಈ ಎರಡು ಸಾಮರ್ಥ್ಯಗಳಿಗೂ ವಿಶ್ವದಲ್ಲಿ ಅನೇಕ ದೃಷ್ಟಾಂತಗಳು ಕಾಣಸಿಗುತ್ತವೆ. ನೈಜೀರಿಯಾ, ಕೆನಡ, ಬೆಲ್ಜಿಯಂ, ಬಾಂಗ್ಲಾದೇಶ ಮತ್ತು ಭಾರತ - ಈ ದೇಶಗಳಲ್ಲಿ ಭಾಷಾ ವೈಮನಸ್ಯಗಳಿಂದ ಆಗಿರುವ ಅನಾಹುತ ಎಲ್ಲರಿಗೂ ತಿಳಿದ ವಿಷಯ. ಆದರೆ ಭಾಷೆಯಲ್ಲಿ ಅಡಗಿರುವ ಐಕ್ಯಸಾಧನೆಯ ಸತ್ವವನ್ನು ಉಪಯೋಗಿಸಿಕೊಂಡು ಜನಾಂಗವನ್ನು ಕಟ್ಟುವ, ಬೆಳೆಸುವ ಅವಕಾಶವನ್ನು ಫಲಕಾರಿಯಾಗಿ ಮಾಡುವುದು ನಮ್ಮ ಅಧೀನವಾಗಿಯೇ ಇದೆ. ಅಭಿಮಾನ ಸದಾ ಫಲಕಾರಿ; ದುರಭಿಮಾನ ಸದಾ ಅಪಾಯಕಾರಿ. ಭಾಷೆಯ ದುರಭಿಮಾನ ಬೆಳೆದರೆ ಅದು ಮತಾಭಿಮಾನ, ಜಾತ್ಯಭಿಮಾನಗಳಿಗಿಂತ ಹೆಚ್ಚು ಉಪದ್ರವಕಾರಿ.

ಈಗಿನ ಭಾರತದ ರಾಜಕೀಯದಲ್ಲಿ ಭಾಷಾಭಿಮಾನಕ್ಕೆ ಅಗಾಧವಾದ ಪ್ರಾಧಾನ್ಯ ದೊರಕಿದೆ. ಭಾಷಾಭಿಮಾನವನ್ನು ರಾಜಕೀಯ ನಿಪುಣರು ಪಕ್ಷಪ್ರತಿಷ್ಠೆಗೆ ಒಂದು ಸಾಧನವನ್ನಾಗಿ ಉಪಯೋಗಿಸಿಕೊಳ್ಳುವುದೂ ಉಂಟು. ಅದೇ ಅಭಿಮಾನವನ್ನೇ ರಾಷ್ಟ್ರದ ಬೆಳವಣಿಗೆಯ, ಅಭಿವೃದ್ಧಿಯ ಉದ್ದೇಶಕ್ಕೆ ಮಾರ್ಗದರ್ಶಕವನ್ನಾಗಿ ಮಾರ್ಪಡಿಸಬೇಕು.

ಭಾರತದಲ್ಲಿ ಪ್ರಾಂತೀಯ ಭಾಷೆಗಳಿಗೆ ಅಧಿಕಾರಯುತವಾದ ಸ್ಥಾನವನ್ನು ನೀಡಿ ಆಯಾ ಪ್ರಾಂತಗಳಲ್ಲಿ ಆಯಾ ಭಾಷೆಗಳೇ ಆಡಳಿತ ಭಾಷೆಯಾಗಬೇಕೆಂಬ ತೀರ್ಮಾನವನ್ನು ಕೈಗೊಂಡಿರುವುದು ತುಂಬ ಸ್ವಾಗತಾರ್ಹವಾದ ವಿಚಾರ. ಇನ್ನು ಆಯಾ ಪ್ರಾಂತಗಳಲ್ಲಿರುವ ಪ್ರಾದೇಶಿಕ ಭೇದಗಳನ್ನೂ ಉಪಭಾಷೆಗಳನ್ನೂ ಗಮನದಲ್ಲಿಟ್ಟು ಅವುಗಳ ಸತ್ವವು ಕುಂದದಂತೆ

ಆಯಾ ಭಾಷೆಗಳನ್ನು ಆಧುನಿಕಗೊಳಿಸಿ (Modernize) ಅವುಗಳಿಗೆ ಒಂದು ಸಮಾನ ಗುಣಮಟ್ಟವನ್ನು (Standardisation) ತಂದುಕೊಡಬೇಕಾದುದೂ ಅಷ್ಟೇ ಮುಖ್ಯವಾದುದು. ಪ್ರಜಾವರ್ಗದ ಬಹುಜನರಿಗೆ ಸಹಾಯವಾಗುವಂತೆ ಪ್ರಾಂತಗಳಲ್ಲಿರುವ ಪ್ರಾದೇಶಿಕ ಭೇದಗಳನ್ನು ಸಾಧ್ಯವಾದಷ್ಟೂ ಒಂದುಗೂಡಿಸಿ ಎಲ್ಲ ಕಡೆಯ ಆಡುಮಾತಿನ ಸ್ವರೂಪವು ಎಲ್ಲರಿಗೂ ಅರ್ಥವಾಗುವಂತೆ ಮಾಡುವ ಶಿಕ್ಷಣ ಕ್ಷೇತ್ರದ ಸಾಧ್ಯತೆಯನ್ನು ಆಳವಾಗಿ ಪರಿಶೀಲಿಸಬೇಕು. ಇದಕ್ಕೆಂದೇ ಕನ್ನಡ ಭಾಷೆಯ ಶಿಕ್ಷಕರಿಗೆ ಪ್ರಾಥಮಿಕ ಶಾಲಾವರ್ಗದ ಮಟ್ಟದಿಂದ ವಿಶಿಷ್ಟವಾದ ತರಬೇತಿಯನ್ನು ನೀಡುವ ಅಗತ್ಯವಿದೆ. ಈ ದೃಷ್ಟಿಯಿಂದ ಭಾಷಾ ಪ್ರಯೋಗದಲ್ಲಿ ಇನ್ನಷ್ಟು ವ್ಯಾಪಕತೆಯನ್ನು ಹೊಂದಿಸಬೇಕಾಗುತ್ತದೆ. ಪ್ರಪಂಚದ ಎಲ್ಲ ಕಡೆಗಳಲ್ಲಿ ಇಂಥ ಪ್ರಯತ್ನಗಳು ನಡೆಯುತ್ತ ಇವೆ. ಸಾಮಾಜಿಕವಾಗಿ ಬೇರೆ ಬೇರೆ ವರ್ಗಗಳಲ್ಲಿ ಕಂಡುಬರುವ ಭಾಷಾವೈವಿಧ್ಯದಲ್ಲಿ ಸಂವಹನ ಸಾಧ್ಯವಾಗುವಂತೆ ಮಾಡುವುದಕ್ಕೆ ಇರುವ ಅಡೆತಡೆಗಳನ್ನು ನಿರ್ನಾಮ ಮಾಡುವ ಪ್ರಯತ್ನಗಳು ನಡೆಯುತ್ತಿವೆ. ಇಂಥ ಪ್ರಯತ್ನಗಳು ಫಲವನ್ನು ಕಾಣಬೇಕಾದರೆ ತಲೆಮಾರುಗಳ ಕಾಲ ಅಗತ್ಯ. ಭಾಷೆಯ ವಿಷಯದಲ್ಲಿ ಫಲಗಳ ಸದ್ಯಃಪ್ರಸೂತಿ ಅಸಾಧ್ಯ.

ಭಾರತದಲ್ಲಿ ಚಾಲನೆಗೆ ಬಂದ ತ್ರಿಭಾಷಾನೀತಿ ಫಲದಾಯಕವಾಗಿಲ್ಲ. ಅದರಿಂದ ಹಿಂದೀ ಭಾಷೆಗೆ ಪ್ರಾಧಾನ್ಯ ದೊರೆಯಿತೇ ಹೊರತು ಪ್ರಾಂತೀಯ ಭಾಷೆಗಳಿಗೆ, ಅದರಲ್ಲಿಯೂ ದಕ್ಷಿಣ ಭಾರತದ ಭಾಷೆಗಳಿಗೆ ಹೆಚ್ಚು ಪ್ರಯೋಜನವಾಗಲಿಲ್ಲ. ಬಹುಭಾಷಾದೇಶವಾದ ಭಾರತದ ಎಲ್ಲ ಭಾಷೆಗಳ ಸತ್ವಗಳನ್ನು ಅರಿಯದೆ ಮಾಡಿದ ಈ ರಾಜಕೀಯ ಸೂತ್ರ ಈಗ ಸೋತುಹೋಗಿದೆ.

ಬಹುಭಾಷಾದೇಶವಾದ ಭಾರತದಲ್ಲಿ ಆ ಭಾಷೆಗಳನ್ನು ಮಾತನಾಡುವ ಎಲ್ಲರ ಮನಸ್ಸಿನಲ್ಲಿಯೂ ಒಂದು ಆಂತರಿಕ ಐಕ್ಯವೂ ಬಹಿರಂಗದ ವೈವಿಧ್ಯವೂ ಮನೆ ಮಾಡಿಕೊಂಡಿವೆ. ಇದು ಒಂದು ಚಾರಿತ್ರಿಕ ಸತ್ಯ. ತಮ್ಮ ತಮ್ಮ ವೈಶಿಷ್ಟ್ಯವನ್ನು ರಕ್ಷಿಸಿಕೊಂಡು ಒಟ್ಟು ಭಾರತದ ಐಕ್ಯಕ್ಕಾಗಿ ದುಡಿಯುತ್ತಿರುವುದೇ ಎಲ್ಲ ಪ್ರಾಂತಗಳ ಸ್ವಭಾವವಾಗಿ ಬೆಳೆದುಬಂದಿದೆ.

ಆದುದರಿಂದಲೇ ಪ್ರಾಂತಗಳ ದ್ವಿಭಾಷಾಗಡಿಗಳಲ್ಲಿ ದ್ವಿಭಾಷಾಪ್ರಯೋಗ ಸತ್ವಯುತವಾಗುತ್ತ ಇದೆ. ಅನೇಕ ಸಾಮಾಜಿಕ ಸಂಘಸಂಸ್ಥೆಗಳಲ್ಲಿಯೂ ದ್ವಿಭಾಷಾಪ್ರಯೋಗ ಪ್ರಯೋಜನಕರವಾಗಿದೆ. ಹೀಗೆಯೇ ಭಾರತದ ಪ್ರತಿಯೊಂದು ಮುಖ್ಯ ಭಾಷೆಯೂ ಪ್ರಾಂತದ ಹೊರಗಡೆಯೂ ಮುಖ್ಯ ನಗರಗಳಲ್ಲಿ ತನ್ನ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬರುವಂತೆ ಆಯಾ ಭಾಷೆಯನ್ನು ಮಾತನಾಡುವ ಜನ ದುಡಿಯುತ್ತಿದ್ದಾರೆ. ಭಾರತದ ಎಲ್ಲ ಮುಖ್ಯ ನಗರಗಳಲ್ಲಿಯೂ ಜನತೆಯಲ್ಲಿ ಸಾಂಸ್ಕೃತಿಕವಾಗಿ ಒಂದು ಭಾಷಾಮಿಶ್ರಣ ಕಂಡುಬರುತ್ತಿದೆ. ಅಂದರೆ, ಒಂದೇ ಭಾಷೆಯನ್ನು ಉಪಯೋಗಿಸುವಾಗ ಕಂಡುಬರುವ ಎರಡು ಬೇರೆ ಬೇರೆ ಮಟ್ಟಗಳ ಆಡುಮಾತನ್ನು (Di-glossia) ಉಪಯೋಗಿಸುತ್ತಾರೆ. ಈ ದ್ವಿಸ್ತರದ ಭಾಷಾಪ್ರಯೋಗದಿಂದ ಒಂದು ಸಾಮಾಜಿಕ ಐಕ್ಯ ಸಾಧಿತವಾಗಿದೆ. ದ್ವಿಸ್ತರದ ಭಾಷೆ ಎಂದರೆ ದ್ವಿಭಾಷಾ ವರ್ಗದ ಸಾಮಾಜಿಕ ಸಾಂಸ್ಕೃತಿಕ ಸ್ತರದಲ್ಲಿ ಉಪಯೋಗಿಸುವ ಭಾಷಾವ್ಯವಸ್ಥೆ ಎಂದರ್ಥ. ಇದನ್ನೆಲ್ಲ ಭಾಷಾ ಶಾಸ್ತ್ರಜ್ಞರು ವಿವರಿಸಬೇಕು. ಸಾಮಾನ್ಯರೂ ರಾಜಕಾರಣ ನಿಪುಣರೂ ಇವುಗಳನ್ನು ಅರಿತುಕೊಳ್ಳಬೇಕು. ಒಟ್ಟಿನಲ್ಲಿ ನಮ್ಮ ಭಾಷಾನೀತಿ ಸಾಮಾನ್ಯ ಜನಸಮೂಹವನ್ನು ಸಾಕ್ಷರವನ್ನಾಗಿ ಮಾಡಿ ಪ್ರತಿಯೊಬ್ಬರ ಅಭ್ಯುದಯವನ್ನು ಸಾಧಿಸುವುದಾಗಿರಬೇಕು.

## ಭಾಷಾ ಪರಿವೀಕ್ಷಣ (Survey)*

ಭಾರತ ದೇಶದಲ್ಲಿ ಭಾಷೆಗಳ ವ್ಯಾಸಂಗ, ಅಧ್ಯಯನ, ಅಧ್ಯಾಪನಗಳು ಬಹಳ ಪ್ರಾಚೀನ ಕಾಲದಿಂದಲೂ ನಡೆದುಬಂದಿವೆ. ವೇದಗಳನ್ನು ಬಾಯಿಪಾಠ ಮಾಡಿ ವಿವಿಧ ರೀತಿಗಳಲ್ಲಿ ಅವುಗಳನ್ನು ಉದ್ಘೋಷಿಸುತ್ತಿದ್ದ ಕಾಲದಿಂದಲೂ ನಮ್ಮ ಜನರಿಗೆ ವೇದಗಳ ಮೂಲದ ಬಗ್ಗೆ ಚಿಂತನೆ ಇದ್ದೇ ಇತ್ತು. ವೈದಿಕ ನಿಘಂಟಿಗೆ ಯಾಸ್ಕನು ನಿರುಕ್ತ ರಚಿಸಿದ ಮೇಲೆ ಪಾಣಿನಿಯ ಕಾಲದಲ್ಲಿ ವೇದಗಳ ರಚನೆಯ ಬಗ್ಗೆ ಆಳವಾದ ಚಿಂತನೆ ನಡೆಯಿತು. ಈ ವಿಚಾರವಾಗಿ ಪತಂಜಲಿಯ ಮಹಾಭಾಷ್ಯದಲ್ಲಿ ಅನೇಕ ಸೂಚನೆಗಳು ದೊರೆಯುತ್ತವೆ. ಈ ಚಿಂತನೆ ಸಾರೋದ್ಧಾರವಾಗಿ ನಡೆಯದೆ ಇರಬಹುದು. ಆದರೆ ಅಲ್ಲಲ್ಲಿ ಇಂಥ ಚಿಂತನೆಯ ಕುರುಹುಗಳು ಕಂಡು ಬರುತ್ತವೆ. ಪ್ರಾಕೃತ ಭಾಷೆಗಳ ಬಗ್ಗೆ, ಭಾಷೆಗಳ ಭೌಗೋಳಿಕ ಪ್ರಸಾರದ ಬಗ್ಗೆ, ಸಾಮಾಜಿಕ ಭಾಷಾಶಾಸ್ತ್ರದ ಬಗ್ಗೆ, ವಿಸ್ತಾರವಾದ ಯಾವ ಕುರುಹುಗಳೂ ಕಂಡುಬರುವುದಿಲ್ಲ.

ಕಳೆದ ಶತಮಾನದಲ್ಲಿಯೂ, ಈ ಶತಮಾನದ ಪ್ರಾರಂಭದಲ್ಲಿಯೂ ಪಾಶ್ಚಾತ್ಯ ವಿದ್ವಾಂಸರು ನಡೆಸಿದ ಭಾಷೆಗಳ ವ್ಯಾಸಂಗದಿಂದ ಭಾಷೆಗಳ ಪರಿವೀಕ್ಷಣೆಗೆ ಚಾಲನೆ ದೊರಕಿತು. ಗ್ರೀಯರ್ ಸನ್ (Grierson) ಮತ್ತು ಸ್ಟೆನ್‌ಕೊನೋ (Stenkono) ಅವರು ಕೈಗೊಂಡ ಭಾರತ ಭಾಷೆಗಳ ಪರಿವೀಕ್ಷಣೆಯಿಂದ ಈ ವಿಚಾರದಲ್ಲಿ ಭಾಷೆಗಳಲ್ಲಿ ಆಸಕ್ತರಾದವರಿಗೆ ಉತ್ಸಾಹ ಬೆಳೆಯಲು ಕಾರಣವಾಯಿತು. ಈ ಶತಮಾನದ ಉತ್ತರಾರ್ಧದ ಪ್ರಾರಂಭದಲ್ಲಿ ಕೆಲವರು ವಿದ್ವಾಂಸರು ೧. ಶಬ್ದಗಳ ೨. ಉಪಭಾಷೆಗಳ ೩. ಸಾಮಾಜಿಕ ಭಾಷೆಯ ಪರಿವೀಕ್ಷಣೆಗಳನ್ನು ಅಲ್ಲಲ್ಲಿ ನಡೆಸಿದರು. ಈ ವ್ಯಾಸಂಗದಿಂದ ಒಂದು ಭಾಷೆಯಲ್ಲಿ ಕಂಡುಬರುವ ವ್ಯತ್ಯಾಸಗಳೂ ವೈವಿಧ್ಯಗಳೂ ಎಷ್ಟಿದ್ದರೂ ಭಾರತದ ಎಲ್ಲ ಭಾಷೆಗಳಲ್ಲಿಯೂ ಒಂದು ಏಕಸೂತ್ರತೆ ಕಂಡುಬರುತ್ತದೆ ಎಂಬುದು ವ್ಯಕ್ತವಾಯಿತು. ವ್ಯತ್ಯಾಸಗಳು ಭಾಷೆಯನ್ನು ಬದಲು ಮಾಡುವುದಿಲ್ಲ. ಅವುಗಳಿಂದ ಒಂದು ಭಾಷೆಯ ಶಬ್ದ ಸಂಪತ್ತು, ಪ್ರಯೋಗ ಸ್ವಾರಸ್ಯ, ಮಾತಿನ ಧೋರಣೆ, ಕಾಕುಗಳ ಅರ್ಥ ಇವು ಹೆಚ್ಚು ಸ್ಪಷ್ಟವಾಗಿ ಎದ್ದು ಕಾಣುತ್ತವೆ. ರಬ್ಬರನ್ನು ಎಳೆದಾಗ ಅದು ವಿಸ್ತಾರಗೊಂಡು, ಬಿಟ್ಟಾಗ ಮತ್ತೆ ಮೂಲಸ್ವರೂಪ ಬರುವ ಹಾಗೆ ಭಾಷೆಗಳ ವೈವಿಧ್ಯವು ಅವುಗಳ ವಿಸ್ತಾರದ ಸ್ವರೂಪ ಅಷ್ಟೇ! ಮತ್ತೆ ಮೂಲಸ್ವರೂಪಕ್ಕೇ ಅವು ಹಿಂದಿರುಗುತ್ತವೆ.

ಒಂದು ಭಾಷೆಯ ಪರಿವೀಕ್ಷಣೆಯಿಂದ ಆ ಭಾಷೆಯ ಶಬ್ದ ಸಂಪತ್ತು, ವೃತ್ತಿ, ಜಾತಿ, ಮತಗಳ ವಿಶಿಷ್ಟ ಶಬ್ದಗಳ ಪಟ್ಟಿ, ಅರ್ಥದ ಛಾಯೆಗಳು, ಭೌಗೋಳಿಕವಾಗಿ ಇರುವ ವ್ಯತ್ಯಾಸಗಳನ್ನು ಸರಳವಾಗಿ ಅರ್ಥ ಮಾಡಿಕೊಳ್ಳುವ ಬಗೆ ಮುಂತಾದ ವಿಚಾರಗಳು ಹೊರಪಡುತ್ತವೆ. ಭಾಷಾ ಶಾಸ್ತ್ರವು ಶಬ್ದಗಳ ಮತ್ತು ಶಬ್ದ ಪ್ರಯೋಗಗಳ ರಚನೆಯನ್ನು ಮಾತ್ರ ಪರಿಶೀಲಿಸುತ್ತದೆ. ಸಾಮಾಜಿಕ ಭಾಷಾಶಾಸ್ತ್ರವು ಜನರ ನಡುವೆ ಭಾಷೆಯ ಪ್ರಯೋಗಗಳು ಕೊಡುಕೊಳ್ಳುವಿಕೆಗೆ ಹೇಗೆ ಸಹಾಯ ಮಾಡುತ್ತವೆ, ಅವುಗಳಲ್ಲಿ ಯಾವುದು ಶಿಷ್ಟ, ಯಾವುದು ಅಶಿಷ್ಟ, ಯಾವುದು ಸ್ವಾಗತಾರ್ಹ, ಸಾಮಾಜಿಕವಾಗಿ ಹೆಚ್ಚು ಪ್ರಯೋಜನಕಾರಿ, ಅವುಗಳಿಂದ ಹೊರಬರುವ ಸಂಸ್ಕೃತಿಯ ರೀತಿ ಏನು, ಎಂದೆಲ್ಲ ವಿಚಾರ ಮಾಡುತ್ತದೆ.

ಈ ಬಗೆಯ ಭಾಷೆಯ ಪರಿವೀಕ್ಷಣೆ ಆಂಧ್ರ ಪ್ರದೇಶದಲ್ಲಿ ಸ್ವಲ್ಪ ವಿಸ್ತಾರವಾಗಿ ನಡೆದಿದೆ. **ವೃತ್ತಿ ಪದಕೋಶವೆಂಬ** ಹೆಸರಿನಲ್ಲಿ ಕೆಲವು ಸಂಪುಟಗಳು ಹೊರಬಿದ್ದಿವೆ. ಕೇರಳದಲ್ಲಿ ನಡೆದ ಸಂಶೋಧನೆಯ ಫಲ ಪ್ರಕಟಣೆಯಾಗಿಲ್ಲ. ಕನ್ನಡದ ಬಗ್ಗೆ ಪೂನಾದ ಡೆಕ್ಕನ್ ಕಾಲೇಜಿನಲ್ಲಿ ಸ್ವಲ್ಪ

*Survey ಶಬ್ದವನ್ನು ಸರ್ವೇಕ್ಷಣ ಎಂದು ಅನುವಾದ ಮಾಡಿ ಕೆಲವರು ಉಪಯೋಗಿಸುತ್ತಾರೆ.

ಕೆಲಸ ನಡೆದಿದೆ. ಇವೆಲ್ಲ ಪ್ರಶ್ನಾವಳಿಗಳಿಂದ ನಡೆದ ಪರಿವೀಕ್ಷಣೆಗಳು. ಆಡುಮಾತಿನ ನೇರ ಪರಿವೀಕ್ಷಣೆಯು ಮಾತನಾಡುವವನಿಗೆ ತಿಳಿಯದಂತೆ ನಡೆಯಬೇಕು. ಇದು ಕಷ್ಟದ ಕೆಲಸ. ಭಾಷಾಶಾಸ್ತ್ರವನ್ನು ಬಲ್ಲವನು ಅಜ್ಞಾತವಾಗಿ ಒಂದೆಡೆ ನೆಲೆನಿಂತು ತಿಂಗಳುಗಟ್ಟಲೆ ಕೆಲಸ ಮಾಡಬೇಕು. ಈ ಕಾರ್ಯ ಕನ್ನಡದಲ್ಲಿ ಹೆಚ್ಚಾಗಿ ನಡೆದಿಲ್ಲ; ಯುವ ವಿದ್ವಾಂಸರು ಹೊಸ ಸಂಶೋಧನೆ ನಡೆಸಲು ಫಲವತ್ತಾದ ನೆಲ.

## ಭಾಷಾವೈವಿಧ್ಯ

ಒಂದೇ ಭಾಷೆಯನ್ನಾಡುವವರಲ್ಲಿಯೂ ಅನೇಕ ಬಗೆಗಳು ಕಂಡುಬರುತ್ತವೆ. ಜನತೆ ಭೌಗೋಳಿಕವಾಗಿ ಬೇರೆ ಬೇರೆ ಕಡೆಗಳಲ್ಲಿ ವಾಸ ಮಾಡುತ್ತಾರೆ. ಆರ್ಥಿಕವಾಗಿ ಅವರಲ್ಲಿ ಬೇರೆ ಬೇರೆ ಸ್ತರಗಳಿರುತ್ತವೆ. ಮತೀಯವಾಗಿ ಅವರು ಹಂಚಿಹೋಗಿರುತ್ತಾರೆ. ಜಾತೀಯವಾಗಿ ವಿಭಾಗಗಳಿವೆ. ಈ ಕಾರಣಗಳಿಂದ ಅವರಲ್ಲಿ ಬೇರೆ ಬೇರೆ ಮಾತಿನ ಬಗೆಗಳೂ ಕಂಡುಬರುತ್ತವೆ. ಕನ್ನಡದಲ್ಲಿ ಬಹುಮುಖ್ಯವಾಗಿ ಕಾಣುವ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡಗಳನ್ನೇ ಗಮನಿಸಿದರೂ ಯಾವ ಇತರ ಸ್ತರಗಳನ್ನು ಲೆಕ್ಕಿಸದಿದ್ದರೂ ಭೌಗೋಳಿಕವಾಗಿ ಈ ಬಗೆಗಳಲ್ಲಿ ವ್ಯತ್ಯಾಸವನ್ನು ಕಾಣಬಹುದು. ಆರ್ಥಿಕವಾಗಿ ಮೇಲುವರ್ಗಕ್ಕೆ ಸೇರಿದ ಮಕ್ಕಳು ಮಾತನಾಡುವುದನ್ನೂ ಶ್ರಮಿಕಜೀವಿ ವರ್ಗದ ಮಕ್ಕಳು ಮಾತನಾಡುವುದನ್ನೂ ಪರಿಶೀಲಿಸಿದರೆ ಮೊದಲನೆಯ ವರ್ಗದ ಮಕ್ಕಳಲ್ಲಿ ವ್ಯಾಪಕವಾದ ಶಬ್ದ ಸಂಪತ್ತೂ ವಿಷಯ ವೈವಿಧ್ಯವೂ ಇರುವುದು ಸ್ಪಷ್ಟವಾಗಿ ಕಾಣುತ್ತದೆ. ಶ್ರಮಿಕವರ್ಗದ ಮಕ್ಕಳಲ್ಲಿ ಸೀಮಿತವಾದ ಶಬ್ದಸಮೂಹವೂ ವಿಷಯ ವ್ಯಾಪ್ತಿಯಲ್ಲಿ ಕುಂದೂ ಕಂಡುಬರುತ್ತವೆ.

ಸಾಹಿತ್ಯದ ಭಾಷೆ, ಆಡಳಿತದ ಭಾಷೆ, ಕೋರ್ಟಿನ ದೈನಂದಿನ ವ್ಯವಹಾರದ ಭಾಷೆ, ವೈಜ್ಞಾನಿಕವಾದ ಶಾಸ್ತ್ರೀಯ ಭಾಷೆ, ಮುಂತಾಗಿ ಭಾಷೆ ಬೇರೆಯಾಗಿಯೇ ಬೆಳೆದಿದೆ. ಇವೆಲ್ಲದರ ಮಧ್ಯೆ ಎಲ್ಲರಿಗೂ ಅನ್ವಯಿಸುವ ಒಂದು ಸರ್ವಸಮಾನವಾದ (Standard) ಭಾಷೆ ಇರುತ್ತದೆ. ಬೇರೆ ಬೇರೆ ಸ್ತರಗಳ ಜನರಲ್ಲಿ ಉಚ್ಚಾರಣೆಯ ಭೇದವೂ ಕಂಡುಬರುತ್ತದೆ. 'ಹ' ಕಾರ 'ಅ' ಕಾರಗಳ ಬದಲಾವಣೆ, ಮಹಾಪ್ರಾಣಲೋಪ, ಒತ್ತಕ್ಷರ ದೀರ್ಘಾಕ್ಷರಗಳಲ್ಲಿ ವಿಪರ್ಯಾಸ, ಇವುಗಳನ್ನು ಬೇಗ ಗುರುತಿಸಬಹುದು.

ಇಂಥ ಸ್ಥಿತಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಯಾವ ಬಗೆಯ ಭಾಷೆ ಪ್ರಯೋಗದಲ್ಲಿರಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈಗ ನೇಮಕವಾಗುತ್ತಿರುವ ಪಠ್ಯಪುಸ್ತಕಗಳ ಬಗ್ಗೆ ಆಗಿಂದಾಗ ಭಿನ್ನಾಭಿಪ್ರಾಯಗಳು ತಲೆದೋರುವುದೂ ಇದಕ್ಕಾಗಿಯೇ. ಶಿಕ್ಷಣ ಕ್ಷೇತ್ರದ ಈ ಸಮಸ್ಯೆಯನ್ನು ಪರಿಹರಿಸಬೇಕೆನ್ನುವವರು ನಮ್ಮ ಭಾಷಾ ಕ್ಷೇತ್ರದಲ್ಲಿ ಅನೇಕರಿದ್ದಾರೆ. ಇಂಥವರಲ್ಲಿ ಪ್ರಮುಖರನ್ನು ಬರಮಾಡಿಕೊಂಡು ಸೂಕ್ತ ಪರಿಹಾರ ಮಾರ್ಗವನ್ನು ಕಂಡುಹಿಡಿಯಬಹುದು.

## ಭಾಷೆಯನ್ನು ಆಧುನಿಕಗೊಳಿಸುವುದು

ಒಂದು ಸಮಾಜದ ಸಂಸ್ಕೃತಿಯಲ್ಲಿ ಹೊಸ ಅನುಭವಗಳೂ ಜೀವನದಲ್ಲಿ ಹೊಸ ಆಯಾಮಗಳೂ ತಲೆದೋರಿದಾಗ ಹೊಸ ಶಬ್ದಗಳೂ ಭಾಷಾಪ್ರಯೋಗಗಳೂ ತಲೆದೋರುತ್ತವೆ. ಇಲ್ಲಿಯವರೆಗೆ ಪ್ರಚಾರದಲ್ಲಿರುವ ಭಾಷೆಯ ಸ್ವರೂಪದಲ್ಲಿಯೇ ಹೊಸ ಶಬ್ದಗಳೂ, ಹೊಸ ಸಮಾಸಗಳೂ ಹೊಸ ನುಡಿಗಟ್ಟುಗಳೂ ಹುಟ್ಟಿಕೊಳ್ಳುತ್ತಿವೆ. ಈ ಬಗೆಯ ಸೃಷ್ಟಿ ನಿಜವಾಗಿ ಹೊಸದೇನೂ ಅಲ್ಲ. ಜನರು ಅವರವರ ವೃತ್ತಿಯಲ್ಲಿ ಆವಶ್ಯಕತೆ ಬಿದ್ದಾಗ ಹೊಸ ಶಬ್ದಗಳನ್ನು ಸೃಷ್ಟಿ ಮಾಡಿದ್ದಾರೆ. ಕೃಷಿಕರು ಅವರಿಗೆ ಅಗತ್ಯವಾದ ಸಾಧನೋಪಕರಣಗಳಿಗೆ, ಗಿಡ ಸಸಿಗಳಿಗೆ, ಅವುಗಳಿಗೆ ಅಂಟುವ ರೋಗಗಳಿಗೆ, ಔಷಧಗಳಿಗೆ

ಸ್ಪಷ್ಟವಾದ ಅರ್ಥ ನೀಡುವ ಶಬ್ದಗಳನ್ನು ಸೃಷ್ಟಿಸಿದ್ದಾರೆ. ಈಗ ತಾನೆ ಬಂದಿರುವ 'ಊಜಿಪುಡಿ' ಎಂಬ ಹೆಸರಿನ ಔಷಧಿಯನ್ನು ಗಮನಿಸಿ. ಇದು ಕನ್ನಡವೇ ಬಹುಜನ ಭಾಷೆಯಾಗಿರುವ ಪ್ರದೇಶದ ಕತೆ.

ಆದರೆ ದ್ವಿಭಾಷೆ ಅಥವಾ ಬಹುಭಾಷೆಗಳು ಪ್ರಯೋಗದಲ್ಲಿರುವ ಪ್ರದೇಶಗಳಲ್ಲಿ ಯಾವ ಭಾಷೆ ಪ್ರಧಾನವಾಗಿರುತ್ತದೆಯೋ ಅದರ ಪ್ರಭಾವವೂ ಹೆಚ್ಚಾಗಿರುತ್ತದೆ.

ವರ್ತಮಾನ ಪತ್ರಿಕೆಗಳು ಆಕಾಶವಾಣಿ ಮತ್ತು ದೂರದರ್ಶನ ವ್ಯವಸ್ಥೆಗಳೂ ಸಾಮಾನ್ಯವಾಗಿ ಹೊಸ ಶಬ್ದಗಳನ್ನು ನಿರ್ಮಾಣ ಮಾಡುತ್ತವೆ. ಇದೂ ಒಂದು ಸ್ವಾರಸ್ಯ ವಿಷಯವೇ.

ಕನ್ನಡದ ವರ್ತಮಾನ ಪತ್ರಿಕೆಗಳು ಸುಮಾರು ೬೦ ವರ್ಷಗಳ ಹಿಂದೆಯೇ ಹೊಸ ಭಾಷಾಶೈಲಿಯನ್ನು ರೂಪಿಸಿಕೊಂಡು ಅನೇಕ ಹೊಸ ಶಬ್ದಗಳನ್ನು ಸೃಷ್ಟಿ ಮಾಡಿದವು. ಆಗಿನ ಕಾಲದಲ್ಲಿ ಪತ್ರಿಕೆಗಳಲ್ಲಿ ಬರೆಯುತ್ತಿದ್ದವರೆಲ್ಲ ವಿಶ್ವವಿದ್ಯಾಲಯಗಳಲ್ಲಿ ಕಲಿತವರು, ಸಾಹಿತಿಗಳು, ವಿದ್ಯಾ ಇಲಾಖೆಯಲ್ಲಿ ದುಡಿಯುತ್ತಿದ್ದವರು. ಪತ್ರಿಕೆಯ ಭಾಷೆಯು ಗ್ರಾಂಥಿಕ ಭಾಷೆಗೆ ಹತ್ತಿರವಿರಬೇಕಾಯಿತು. ವರ್ತಮಾನ ಪತ್ರಿಕೆಗಳು ಬಹುಜನರಿಗೆ ತಲುಪಬೇಕಾಗಿದ್ದುದರಿಂದ ಸುಶಿಕ್ಷಿತರು ಪ್ರಯೋಗಿಸುತ್ತಿದ್ದ ಆಡುಮಾತಿಗೂ ಅದು ಹತ್ತಿರವಾಗಬೇಕಿತ್ತು. ತಾಯಿನಾಡು, ವೀರಕೇಸರಿ, ವಿಶ್ವಕರ್ನಾಟಕ ಮುಂತಾದ ಪತ್ರಿಕೆಗಳು ಈ ಕಾರ್ಯವನ್ನು ಚೆನ್ನಾಗಿಯೇ ಮಾಡಿದುವು. ವಿಶ್ವಕರ್ನಾಟಕದ ಸಂಪಾದಕರಾಗಿದ್ದ ತಿರುಮಲೆ ತಾತಾಚಾರ್ಯಶರ್ಮರು ಹೊಸ ಶಬ್ದಗಳ ಸೃಷ್ಟಿಗೆ ಪ್ರಖ್ಯಾತರಾಗಿದ್ದರು. ಅವರು ಸೃಷ್ಟಿಸಿದ ಶಬ್ದಗಳಲ್ಲಿ ಕೆಲವು ಇಂದಿಗೂ ಪ್ರಚಾರದಲ್ಲಿವೆ. ಸುಗ್ರೀವಾಜ್ಞೆ, Ordinance; ಅಗ್ರಲೇಖನ, Editorial; ಸಂಸತ್ತು, Parliament; ಗುಂಡುಸೂಜಿ, Pin; ಪ್ರತಿಬಂಧಕ, Preventive; ಇತ್ಯಾದಿ. ಸೀಮೆಎಣ್ಣೆ, ಸೀಮೆಸುಣ್ಣ, ಕಲ್ಲೆಣ್ಣೆ ಮುಂತಾದ ಶಬ್ದಗಳು ಇಷ್ಟು ಹೊತ್ತಿಗೆ ಆಗಲೆ ಹಳೆಯ ಶಬ್ದಗಳಾಗಿದ್ದುವು. ಆಗಿನ ಕಾಲದಲ್ಲಿ ಬೆಳೆದ ಹೊಸ ಶಬ್ದಗಳ ಸಂಪೂರ್ಣ ಪಟ್ಟಿಯನ್ನು ಇನ್ನೂ ಯಾರೂ ಸಿದ್ಧಪಡಿಸಿಲ್ಲ. ಆದರೂ ನನ್ನ ಗಮನಕ್ಕೆ ಬಂದ, ನವೀಕರಣದಲ್ಲಿ ತಲೆದೋರಿದ ಕೆಲವು ಶಬ್ದಗಳ ಪಟ್ಟಿಯನ್ನು ದಾಖಲಿಸುತ್ತೇನೆ.

| | |
|---|---|
| Air Hostess | ಗಗನ ಸಖಿ (ತೆಲುಗು: ಆಕಾಶ ಕನ್ಯೆ) |
| Amendment | ತಿದ್ದುಪಡಿ |
| Atmosphere | ವಾತಾವರಣ |
| Black Market | ಕಳ್ಳಸಂತೆ, ಕಳ್ಳ ವ್ಯಾಪಾರ, ಕಾಳಸಂತೆ |
| Black Money | ಕಪ್ಪು ಹಣ |
| Call | ಕರೆ |
| Call Attention Motion | ಗಮನ ಸೆಳೆಯುವ ಸೂಚನೆ |
| Chamber of Commerce | ವಾಣಿಜ್ಯ ಮಂಡಳಿ |
| Charge | ಆರೋಪ |
| Clarification | ಸ್ಪಷ್ಟನೆ, ಸ್ಪಷ್ಟೀಕರಣ |
| Constituency | ಚುನಾವಣಾ ವಿಭಾಗ, ಕ್ಷೇತ್ರ |
| Custody | ಹತೋಟಿ |
| Cut | ಕಡಿತ |
| Dark Chapter | ಕತ್ತಲ ಅಧ್ಯಾಯ, ಕಪ್ಪು ಅಧ್ಯಾಯ |
| Defection | ಪಕ್ಷತ್ಯಾಗ |



| | |
|---|---|
| Demand | ಕೋರಿಕೆ |
| Demonstration | ಪ್ರದರ್ಶನ |
| Democracy | ಪ್ರಜಾಸತ್ತೆ |
| Deteriorate | ಹದಗೆಡು |
| Electricity | ವಿದ್ಯುಚ್ಛಕ್ತಿ |
| Excitement | ಉದ್ರೇಕ |
| Fixed Deposit | ಇಡುಗಂಟು |
| Fuel | ಇಂಧನ |
| Home Industry | ಗೃಹ ಕೈಗಾರಿಕೆ |
| Hunger strike | ಉಪವಾಸ ಮುಷ್ಕರ |
| Illicit Liquor | ಕಳ್ಳಭಟ್ಟಿ |
| Industry | ಕೈಗಾರಿಕೋದ್ಯಮ |
| Inflation | ಹಣದುಬ್ಬರ |
| Lower House | ಕೆಳಮನೆ |
| Monopoly | ಸರ್ವಸ್ವಾಮ್ಯ, ಏಕಸ್ವಾಮ್ಯ |
| Motion, Proposal | ಮಂಡನೆ |
| Nepotism | ಸ್ವಜನ ಪಕ್ಷಪಾತ |
| Non-Aligned Nation | ತಟಸ್ಥ ರಾಷ್ಟ್ರ, ಅಲಿಪ್ತ ರಾಷ್ಟ್ರ |
| Poultry | ಕೋಳಿ ಸಾಕಣೆ |
| Radical | ತೀವ್ರಗಾಮಿ, ಉಗ್ರಗಾಮಿ |
| Radio | ಆಕಾಶವಾಣಿ |
| Release | ಬಿಡುಗಡೆ |
| Seat | ಸ್ಥಾನ |
| Secretariat | ಸಚಿವಾಲಯ (ಈಗ ವಿಧಾನ ಸೌಧ) |
| Small Scale Industry | ಸಣ್ಣ ಕೈಗಾರಿಕೆ |
| Smuggler | ಕಳ್ಳ ಸಾಗಾಣಿಕೆದಾರ |
| Smuggled goods | ಕಳ್ಳಸರಕು |
| Split | ಬಿರುಕು |
| Stalemate | ಯಥಾಸ್ಥಿತಿ |
| State of Emergency | ತುರ್ತು ಪರಿಸ್ಥಿತಿ |
| Terrorist | ಭಯೋತ್ಪಾದಕ |
| Underground | ಭೂಗತ |
| Upper House | ಮೇಲ್ಮನೆ |
| Well of the House | ಬಾವಿ |
| Zero Hour | ಶೂನ್ಯ ವೇಳೆ |

ಈಚಿನ ದಿನಗಳಲ್ಲಿ ಚಲಾವಣೆಗೆ ಬಂದಿರುವ ಕೆಲವು ಶಬ್ದಗಳನ್ನು, ಶಬ್ದ ಪುಂಜಗಳನ್ನು ಪರಿಶೀಲಿಸಬಹುದು.

ಹಿಂದೊದೆತ
ಸಾಧನೆ - ಸಮಾವೇಶ
ಮೌಲ್ಯಾಧಾರಿತ
ಚೆಂಡು ನಿಮ್ಮ ಅಂಗಳದಲ್ಲಿದೆ
ಕುರ್ಚಿಯ ಅಲುಗಾಟ
ಸಾಲಮೇಳ
ಫಲಾನುಭವಿ
ಪಕ್ಷಾಂತರ, ಪಕ್ಷತ್ಯಾಗ

ಇವೆಲ್ಲವೂ ರಾಜಕೀಯ ಕ್ಷೇತ್ರದ ನಿರ್ಮಾಣಗಳು.

ಹೀಗೆಯೇ ತಮಿಳು, ಮಲಯಾಳಂ ಮತ್ತು ತೆಲುಗು ಭಾಷೆಗಳಲ್ಲಿಯೂ ಹೊಸ ಶಬ್ದಗಳು ನಿರ್ಮಾಣವಾಗಿವೆ. ಅವುಗಳ ತೌಲನಿಕ ಅಭ್ಯಾಸವೂ ಸ್ವಾರಸ್ಯಕರ.

ಹೊಸ ಶಬ್ದಗಳನ್ನು ನಿರ್ಮಿಸುವಾಗ ಈ ನಿರ್ಮಾಣಕಾರರು ಯಾರೇ ಇರಲಿ ಅವರು ಅನುಸರಿಸಿರುವ ಮಾರ್ಗಗಳಾವುವು ಎಂಬುದು ವೈಜ್ಞಾನಿಕವಾಗಿ ಮುಖ್ಯವಾಗಿರುವ ಪ್ರಶ್ನೆ. ಆ ಮಾರ್ಗಗಳು ಇವು:

೧. *ಹಿಂದೆ ಇದ್ದ ಕನ್ನಡದ ಶಬ್ದಕ್ಕೆ ಇಂಗ್ಲಿಷ್ ಶಬ್ದದ ಹೊಸ ಅರ್ಥವನ್ನು ಹೊಂದಿಸುವುದು, ಉದಾ: ಬಿಡುಗಡೆ*
೨. *ಹೊಸ ಶಬ್ದಗಳನ್ನೇ ಸೃಷ್ಟಿಸುವುದು, ಉದಾ: ಕಪ್ಪು ಸಂತೆ, ಕಳ್ಳಭಟ್ಟಿ ಇತ್ಯಾದಿ.*
೩. *ಸಂಸ್ಕೃತ ಶಬ್ದಗಳಿಗೆ ಇರುವ ಹಳೆಯ ಅರ್ಥದ ಜೊತೆಗೆ ಹೊಸ ಅರ್ಥವನ್ನು ಹೊಂದಿಸುವುದು, ಉದಾ: ಆಕಾಶವಾಣಿ, ಭೂಗತ.*
೪. *ಇಂಗ್ಲಿಷ್ ಶಬ್ದಗಳಿಗೆ ಹೊಸದಾಗಿ ಸಂಸ್ಕೃತ ಶಬ್ದಗಳ ಸಮಾನ ಅರ್ಥವನ್ನು ಹೊಂದಿಸುವುದು. ಉದಾ: ಸ್ಥಾನ, ವಿನಂತಿಪತ್ರ (Memorandum)*
೫. *ಹೊಸ ಸಮಾಸಗಳ ಸೃಷ್ಟಿ. ಉದಾ: ಕೋಳಿಸಾಕಣೆ, ಉಪವಾಸಮುಷ್ಕರ*
೬. *ಇಂಗ್ಲಿಷ್ ಶಬ್ದಗಳನ್ನೇ ಕನ್ನಡ ಪ್ರತ್ಯಯಗಳ ಜೊತೆ ಉಪಯೋಗಿಸುವುದು. ಉದಾ: ಜಡ್ಜಿಗಳು, ಅಸೆಂಬ್ಲಿ, ಅಪೀಲು*
೭. *ಕನ್ನಡದ 'ಮಾಡು', 'ಹಾಕು' ಮುಂತಾದ ಶಬ್ದಗಳನ್ನು ಸೇರಿಸಿ ಹೊಸ ಕ್ರಿಯಾಪದವನ್ನು ಮಾಡುವುದು. ಉದಾ: ಕೇಸು ಹಾಕು, ಅಪೀಲು ಮಾಡು, ಅರ್ಜಿ ಹಾಕು, ಮೊಕದ್ದಮೆ ಹೂಡು ಇತ್ಯಾದಿ.*
೮. *ಇಂಗ್ಲಿಷ್ ಶಬ್ದಗಳನ್ನು ಅನುವಾದ ಮಾಡುವುದು. ಉದಾ: ವಿಕೇಂದ್ರೀಕರಣ, ಸ್ಥಾಪಿಸು, ಒದಗಿಸು, ಇವು Decentralization, Establish, Provide ಎಂಬ ಶಬ್ದಗಳ ಅನುವಾದಗಳು.*

ಇವು ಸಾಮಾನ್ಯವಾಗಿ ಪ್ರಯೋಗವಾಗಿರುವ ಮಾರ್ಗಗಳು.

ಇಂಥ ಶಬ್ದಗಳು ಗ್ರಾಮೀಣ ಪ್ರದೇಶದವರಿಗೂ ಸಂಪೂರ್ಣವಾಗಿ ಅರ್ಥವಾಗಬೇಕಾದರೆ ಸ್ವಲ್ಪ ಕಾಲ ಹಿಡಿಯಬಹುದು. ಆದರೂ ಈ ಪ್ರಯತ್ನಗಳು ನಡೆಯುತ್ತಿರಬೇಕು. ಭಾರತದ ಎಲ್ಲ ಪತ್ರಿಕಾಕರ್ತರೂ ಈ ಬಗ್ಗೆ ಆಲೋಚನೆ ಮಾಡಿ ಒಂದೇ ಬಗೆಯ ಶಬ್ದಗಳನ್ನು ಭಾರತದ ಆದ್ಯಂತ ಉಪಯೋಗಿಸುವುದು ಸಾಧ್ಯವಾದರೆ ಅದು ಪ್ರಾಂತಪ್ರಾಂತಗಳ ನಡುವಣ ಸಂಬಂಧವನ್ನು ಹೆಚ್ಚು ಸುಗಮಗೊಳಿಸುತ್ತದೆ.

ಪ್ರತಿಯೊಂದು ಭಾಷೆಯ ಚರಿತ್ರೆಯಲ್ಲಿಯೂ ಜನಜೀವನದ ಸಮೃದ್ಧಿಯ ಕಾಲವು

ಕಂಡುಬಂದಾಗ ಸಾಹಿತ್ಯಿಕ, ವೈಜ್ಞಾನಿಕ, ಪ್ರಾಯೋಗಿಕ ಮತ್ತು ಪಾರಮಾರ್ಥಿಕ ವಿಚಾರಗಳಲ್ಲಿ ಅತ್ಯಂತ ಅಧಿಕ ಕ್ರಿಯಾಶೀಲತೆಯು ತಲೆದೋರುತ್ತದೆ. ಆಗ ಆ ಭಾಷೆಯ ಶಬ್ದ ಸಂಪತ್ತು ಅಗಾಧವಾದ ಪ್ರಮಾಣದಲ್ಲಿ ವೃದ್ಧಿ ಹೊಂದುತ್ತದೆ. ಹೊಸ ಶಬ್ದಸೃಷ್ಟಿ, ಎರವಲು ಶಬ್ದಗಳ ಸಮೃದ್ಧ ಸೇರ್ಪಡೆ, ಇದ್ದ ಶಬ್ದಗಳಿಗೆ ವ್ಯಾಪಕವಾದ ಅರ್ಥವಿಸ್ತಾರ ಮುಂತಾಗಿ ಅನೇಕ ಪ್ರಕಾರಗಳಿಂದ ಕ್ರಿಯಾಶೀಲತೆ ಕೆಲಸ ಮಾಡುತ್ತದೆ. ವಿಜ್ಞಾನಿಗೆ ಮತ್ತು ವೇದಾಂತಿಗೆ ನಿರ್ದಿಷ್ಟವಾದ ಮತ್ತು ನಿಸ್ಸಂದಿಗ್ಧವಾದ ಶಬ್ದಗಳೇ ಬೇಕು. ಕವಿಗೆ ಮತ್ತು ಲೇಖಕನಿಗೆ ತಾನು ನೇಯುವ ಕಲ್ಪನೆಗೆ ಇರುವ ಶಬ್ದ ಜಾಲವೇ ಸಾಲದಾಗುತ್ತದೆ. ವಿಜ್ಞಾನಿಗೆ ಸ್ಪಷ್ಟತೆಯೇ ಪ್ರಧಾನವಾದರೆ ಕವಿಗೆ ಶಬ್ದಗಳ ಸಂದಿಗ್ಧತೆಯೇ ಅಗತ್ಯವಾದ ಸಾಧನವಾಗುತ್ತದೆ. ಹೊಸತನವನ್ನು ವಿರೋಧಿಸುವ ಸನಾತನಿಗಳು ಸದಾಕಾಲವೂ ಇದ್ದೇ ಇರುತ್ತಾರೆ. ಅತಿ ಪ್ರಾಚೀನವಾಗಿದ್ದು, ಬಳಕೆಯಲ್ಲಿಲ್ಲದೆ ಇರುವ ನಿರ್ಜೀವ ಶಬ್ದಗಳಿಗೆ ಜೀವತುಂಬಬೇಕೆಂಬುದು ಕೆಲವರ ಅಪೇಕ್ಷೆ. ಭಾಷೆಯಲ್ಲಿರುವ ಕಸಕಡ್ಡಿಗಳನ್ನು ಒಂದರಿ ಹಿಡಿದು ಆಚೆಗೆ ಬಿಸಾಡುವ ನಿಘಂಟುಕಾರರು ಬೇಕು ಎಂಬುದು ಕೆಲವರ ವಾದ. ಹೀಗೆ ಅನೇಕ ಬಗೆಯ ಅಭಿಪ್ರಾಯಗಳನ್ನು ಎದುರಿಸಿಯೂ ಭಾಷೆ ಬೆಳೆಯುತ್ತಾ ಹೋಗುತ್ತದೆ.

ಸೃಷ್ಟಿಶೀಲ ಸಾಹಿತ್ಯವನ್ನು ರಚಿಸುವವರಿಗೆಲ್ಲ ಒಂದು ಸಾಮಾನ್ಯ ಅನುಭವವಿರುತ್ತದೆ. ಕರೆದಾಗಲೆಲ್ಲ ಬೇಕಾದ ಶಬ್ದಗಳು ಬಂದು ಬಿಡುವುದಿಲ್ಲ ಎಂಬುದೇ ಆ ಪ್ರಸಿದ್ಧವಾದ ಅನುಭವ. ಒಬ್ಬ ಕವಿ ಹೇಳುವ ಹಾಗೆ:

***Our whitest pearls we never find***
***Our ripest fruit we never reach;***
***The flowering moments of the mind***
***Loose half their petals in our speech.***

**OLIVER WENDELL HOLMES**

ಆದರೂ ಹೊಸ ಶಬ್ದಗಳ ಸೃಷ್ಟಿಯಾಗದೆ ಭಾಷೆ ಬೆಳೆಯುವುದೆಂತು ?

ಇಂಗ್ಲಿಷ್ ಭಾಷೆಯ ಚರಿತ್ರೆಯನ್ನು ಓದುವವನಿಗೆ ಅನೇಕ ಆಶ್ಚರ್ಯಗಳು ಕಾದಿರುತ್ತವೆ. Cicero ಎಂಬ ಮಹಾವಾಗ್ಮಿಯು ಗ್ರೀಕ್ ಭಾಷೆಯಿಂದ ಲ್ಯಾಟಿನ್ ಭಾಷೆಗೆ Moral, Quality ಮುಂತಾದ ಶಬ್ದಗಳನ್ನು ತಂದುದರಿಂದ ಅವು ಇಂಗ್ಲಿಷಿಗೆ ಬಂದುವಂತೆ. W.J. Thomas ಎಂಬುವನು Folkloreಎಂಬ ಶಬ್ದವನ್ನು ಸೃಷ್ಟಿ ಮಾಡಿದನಂತೆ. Voltaireನ Candideಮೂಲಕ Optimism ಎಂಬ ಶಬ್ದ ಇಂಗ್ಲಿಷಿಗೆ ಬಂತಂತೆ. Blurb ಎಂಬ ಶಬ್ದ ೧೯೦೭ರಲ್ಲಿ ಸೃಷ್ಟಿಯಾಯಿತಂತೆ. ಅದನ್ನು Robert Bridges ಎಂಬ ಕವಿ 'Admirable Word And Quite Indispensible' ಎಂದು ವರ್ಣಿಸಿದನಂತೆ.

ಕನ್ನಡ ಭಾಷೆಯಲ್ಲಿ ನಾವು ಈಗ ಉಪಯೋಗಿಸುವ ಸಿನೆಮಾ, ಸುನೀತ, ಸಿನಿಕ, ಪಿಕ್ಚರು, ಕೋರ್ಟು, ಲಾಯರು, ಜೈಲು, ಖೈದಿ, ಆಯಾಮ ಮುಂತಾದ ಶಬ್ದಗಳೂ ಬಹು ಹಿಂದೆಯೇ ಕನ್ನಡದಲ್ಲಿ ಒಂದಾಗಿ ಸೇರಿಕೊಂಡ ಚಾಕರಿ, ತಲಾಷ್, ಷೋಕಿ, ತಮಾಷೆ, ಚಾಲಾಕು, ಹುಜೂರು, ಖಾವಂದ, ಇರಸಾಲು, ಗಲೀಜು, ಗರೀಬ, ಖಜಾನೆ, ಕೋಮು, ಜಮೀನು, ಜಿರಾಯತ್ತು ಮುಂತಾದ ಶಬ್ದಗಳೂ ಭಾಷೆಗೆ ಬರದೆ ಹೋಗಿದ್ದರೆ ಕನ್ನಡ ಇಂದಿನಷ್ಟು ಸಮೃದ್ಧವಾಗುತ್ತಿತ್ತೇ ?

## ಕನ್ನಡ ಭಾಷೆಯ ಬೆಳವಣಿಗೆ

ಪ್ರಪಂಚದಲ್ಲಿ ಒಂದು ಮಿಲಿಯನ್ ಅಂದರೆ ಹತ್ತು ಲಕ್ಷಕ್ಕೂ ಹೆಚ್ಚು ಜನ ಮಾತನಾಡುವ ಭಾಷೆಗಳ ಸಂಖ್ಯೆ ೨೦೦೦ಕ್ಕೂ ಹೆಚ್ಚಾಗಿದೆ. ಅವುಗಳಲ್ಲಿ ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಜನರ ಸಂಖ್ಯೆ ಸುಮಾರು ೧೩ ಕೋಟಿ. ಆ ಸಂಖ್ಯೆಯಲ್ಲಿ ಕನ್ನಡವನ್ನು ಮಾತನಾಡುವವರ ಸಂಖ್ಯೆ ಸುಮಾರು ನಾಲ್ಕು ಕೋಟಿ.

ಭಾರತದ ಉತ್ತರ ಭಾಗದಲ್ಲಿ ಇಂಡೋಯುರೋಪಿಯನ್ ಗುಂಪಿಗೆ ಸೇರಿದ ಭಾಷೆಗಳ ಪ್ರಚಾರ ಅಧಿಕವಾಗಿದೆ. ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳ ಪ್ರಚಾರ ಹೆಚ್ಚು. ದ್ರಾವಿಡ ಭಾಷೆಯನ್ನು ಮಾತನಾಡುವವರಲ್ಲಿ ತೆಲುಗರ ಸಂಖ್ಯೆ ಹೆಚ್ಚು. ಆ ಬಳಿಕ ತಮಿಳರೂ ಆಮೇಲೆ ಕನ್ನಡಿಗರೂ ಬರುತ್ತಾರೆ. ನಾಲ್ಕನೆಯ ಸ್ಥಾನದಲ್ಲಿ ಮಲಯಾಳಿಗಳಿದ್ದಾರೆ. ತುಳು ಮಾತನಾಡುವವರು ಸುಮಾರು ಮೂವತ್ತು ಲಕ್ಷ ಇರಬಹುದು. ಹಿಂದೀ, ಬಂಗಾಳಿ, ಉರ್ದು, ಬಿಹಾರಿ, ಮರಾಠಿ, ಪಂಜಾಬಿ, ಗುಜರಾತಿ, ರಾಜಸ್ಥಾನಿ, ಒರಿಯ, ನೇಪಾಲಿ ಮತ್ತು ಕಾಶ್ಮೀರಿ ಭಾಷೆಗಳು ಉತ್ತರ ಭಾರತದಲ್ಲಿ ಹರಡಿಕೊಂಡಿವೆ. ದಕ್ಷಿಣದಲ್ಲಿರುವ ದ್ರಾವಿಡ ಭಾಷೆಗಳಲ್ಲದೆ ಇತರ ಕೆಲವು ದ್ರಾವಿಡ ವರ್ಗದ ಭಾಷೆಗಳೂ ಉತ್ತರದಲ್ಲಿ ಅಲ್ಲಲ್ಲಿ ಹುದುಗಿಕೊಂಡಿವೆ.

ಕನ್ನಡ ತುಂಬ ಪ್ರಾಚೀನವಾದ ಭಾಷೆ. ಕ್ರಿಸ್ತಪೂರ್ವ ಒಂದನೆಯ ಶತಮಾನದಲ್ಲಿಯೇ ಕನ್ನಡದ ಅಸ್ತಿತ್ವವಿತ್ತು ಎಂದು ಒಂದು ಪ್ರಾಚೀನ ಗ್ರೀಕ್ ಪ್ರಹಸನದ ಆಧಾರದ ಮೇಲೆ ವಾದಿಸುವವರಿದ್ದಾರೆ. ಆದರೆ ಖಚಿತವಾದ ಶಾಸನದ ಆಧಾರ ದೊರಕಬೇಕಾದರೆ ನಾವು ಕ್ರಿ.ಶ. ೪೫೦ರ ಹತ್ತಿರ ಬರಬೇಕು. ಹಲ್ಮಿಡಿಯ ಶಾಸನ ಕ್ರಿ. ಶ. ೪೫೦ ಕ್ಕೆ ಸೇರಿರುವುದರಿಂದ ಅದಕ್ಕಿಂತ ಒಂದೆರಡು ಶತಮಾನಗಳಷ್ಟು ಹಿಂದಿನಿಂದ ಕನ್ನಡ ಆಡುಮಾತಾಗಿ ಇದ್ದಿರಬೇಕೆಂದು ಊಹಿಸಬಹುದು. ಈ ಭಾಷೆಯ ಬೆಳವಣಿಗೆಯನ್ನು ನಾಲ್ಕು ಹಂತಗಳಲ್ಲಿ ಗುರುತಿಸುತ್ತಾರೆ. ೧. ಪೂರ್ವದ ಹಳಗನ್ನಡ ೨. ಹಳಗನ್ನಡ ೩. ನಡುಗನ್ನಡ ೪. ಹೊಸಗನ್ನಡ/ಪೊಸಗನ್ನಡ. ಪೊಸಗನ್ನಡ ಎಂಬ ಶಬ್ದವು ಕನ್ನಡ ಸಾಹಿತ್ಯದಲ್ಲಿ ಕ್ರಿ. ಶ. ೧೧೧೨ರಲ್ಲಿಯೇ ದೊರಕುತ್ತದೆ. ಆದರೆ ಭಾಷೆ ನಿಜವಾಗಿ ಹೊಸತನವನ್ನು ಪಡೆಯುವುದು ೧೮ನೆಯ ಶತಮಾನದ ವೇಳೆಗೆ. ಹಿಂದಿನ ಶತಮಾನದ ಕೊನೆಯ ಕನ್ನಡವನ್ನೂ ಇಂದು ನಾವು ಆಡುವ, ಬರೆಯುವ ಕನ್ನಡವನ್ನೂ ಹೋಲಿಸಿದರೆ ಈಗಿನ ಕನ್ನಡವನ್ನು ಆಧುನಿಕ ಕನ್ನಡವೆಂದು ಬೇರೆಯ ಹೆಸರಿನಿಂದಲೇ ಕರೆಯಬೇಕು ಎಂದು ಅಭಿಪ್ರಾಯ ಬರುವಷ್ಟು ವ್ಯತ್ಯಾಸ ಕಂಡುಬರುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಕನ್ನಡದಲ್ಲಿ ಕಂಡುಬರುವ ಆಧುನಿಕತೆ ಆಶ್ಚರ್ಯಕರವಾಗಿದೆ.

ಸ್ವಂತ ರಾಜ್ಯದ ಆಡಳಿತ, ವೈಜ್ಞಾನಿಕ ಕ್ಷೇತ್ರದ ಬೆಳವಣಿಗೆ, ಕೃಷಿ ಕ್ಷೇತ್ರದ ಸಂಶೋಧನೆಗಳು, ನ್ಯಾಯತೀರ್ಮಾನದಲ್ಲಿ ಕನ್ನಡದ ಬಳಕೆ, ಸ್ಥಳೀಯ ಸಮಿತಿಗಳ ಕಾರ್ಯಾಚರಣೆ, ಸೋದರ ಭಾಷೆಗಳ ಅಧಿಕವಾದ ಸಂಪರ್ಕ ಮುಂತಾಗಿ ಅನೇಕ ಒತ್ತಡಗಳು ಬಂದು ನಮ್ಮ ಭಾಷೆ ಶಕ್ತಿಯುತವಾಗಿ ಬೆಳೆದಿದೆ. ಚಾರಿತ್ರಿಕ ಕಾರಣಗಳಿಂದ ಕನ್ನಡಕ್ಕೆ ಬಂದು ಸೇರಿರುವ ಅರಾಬಿಕ್, ಪಾರಸಿ, ಉರ್ದು, ಹಿಂದೂಸ್ತಾನಿ, ಇಂಗ್ಲಿಷ್ ಮುಂತಾದ ಭಾಷೆಗಳ ಶಬ್ದಗಳ ಪ್ರಯೋಗ ಹೆಚ್ಚು ಅರ್ಥವತ್ತಾಗುತ್ತಿದೆ.

ಶಾತವಾಹನ ಕಾಲದಿಂದ ಹಿಡಿದು, ಕದಂಬರು, ಚಾಲುಕ್ಯರಾಷ್ಟ್ರಕೂಟರು, ಕಲಚೂರ್ಯರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರು - ಈ ಎಲ್ಲ ರಾಜರೂ ಕನ್ನಡದ ಸಂಸ್ಕೃತಿಯೂ ಭಾಷಾಸಾಹಿತ್ಯಗಳೂ ಅಭಿವೃದ್ಧಿ ಹೊಂದಲು ನೆರವು ನೀಡಿದ್ದಾರೆ. ಸಮಾಜದಲ್ಲಿ ಆಡುಮಾತಿಗೆ ಹೆಚ್ಚು ಅರ್ಥವಂತಿಕೆ ಉಂಟಾಗಿದೆ. ಕನ್ನಡ

ಮಾಧ್ಯಮದ ಶಿಕ್ಷಣ, ಲೋಕವ್ಯವಹಾರದಲ್ಲಿ ಕನ್ನಡದ ವ್ಯಾಪಕವಾದ ಉಪಯೋಗ, ನಾಟ್ಯ, ಸಂಗೀತ, ಶಿಲ್ಪ, ಚಿತ್ರಕಲೆ ಮತ್ತು ಇತರ ಶಾಸ್ತ್ರಗಳ ಬಗ್ಗೆ ಕನ್ನಡದಲ್ಲಿ ಗ್ರಂಥಗಳ ರಚನೆ, ಅಕಾಡೆಮಿಗಳ ಕಾರ್ಯಕಲಾಪಗಳು ಇವುಗಳಿಂದ ಕನ್ನಡದ ಬೆಳವಣಿಗೆಗೆ ಒತ್ತು ಬಿದ್ದಿದೆ.

ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಭಾರತೀಯ ಮತ್ತು ಪಾಶ್ಚಾತ್ಯ ಸಾಹಿತ್ಯಗಳ ಸಂಪರ್ಕ ಹೆಚ್ಚಾಗಿದೆ. ಗ್ರಂಥ ರಚನೆ ಹೆಚ್ಚಿದೆ. ಸೋದರ ಭಾಷೆಗಳಲ್ಲಿ ಕೊಡುಕೊಳ್ಳುವಿಕೆ ಅಧಿಕವಾಗಿದೆ. ವಿಚಾರ ಸಂಕಿರಣಗಳು ತಾಲ್ಲೂಕು ಮಟ್ಟವನ್ನೂ ಮುಟ್ಟಿವೆ. ಭವಿಷ್ಯ ಬಹಳ ಆಶಾದಾಯಕವಾಗಿದೆ.

ಈ ಹಿಂದೆ ಹೇಳಿದ ಎಲ್ಲ ವಿಷಯಗಳೂ ಸಾಮಾಜಿಕ ಭಾಷಾಶಾಸ್ತ್ರದ ವ್ಯಾಸಂಗಕ್ಕೆ ಒಳಪಡುವ ಅಭ್ಯಾಸ ಕ್ಷೇತ್ರಗಳು.

'ಇಗೋ ಕನ್ನಡ' ನಿಘಂಟಿನಲ್ಲಿ ಆರಿಸಿರುವ ಶಬ್ದಗಳೂ, ಅವುಗಳ ವ್ಯುತ್ಪತ್ತಿ, ಅರ್ಥವಿಸ್ತಾರ, ಶಬ್ದ ಸ್ವರೂಪ, ರೂಢಿಪ್ರಯೋಗ ಇವುಗಳೂ ಸಾಮಾನ್ಯ ಜನಜೀವನಕ್ಕೆ ಸಂಬಂಧಪಟ್ಟವು. ಜನರು ಪ್ರಶ್ನೆಗಳನ್ನು ಕಳುಹಿಸಿದಾಗ ಅವನ್ನು ನಾನು ಮೂರು ವಿಧವಾಗಿ ವಿಂಗಡಿಸುತ್ತಿದ್ದೆ:

೧. ಆಸಕ್ತ ವಿದ್ವಾಂಸರಿಗೆ ತಲೆದೋರುವ ಪ್ರಶ್ನೆಗಳು.

೨. ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಗೆ ತೋರುವ ಸಂಶಯಗಳು.

೩. ಸಾಮಾನ್ಯ ಓದುಗರು ಎದುರಿಸುವ ಪ್ರಶ್ನೆಗಳು.

ಇದಲ್ಲದೆ ಶಬ್ದಗಳ ಅರ್ಥವಿಶೇಷ, ಗಾದೆಗಳ ಅರ್ಥ, ಕವಿಪ್ರಯೋಗದ ಅಂತರಾರ್ಥ ಇತ್ಯಾದಿಗಳನ್ನು ಕುರಿತು ಈ ನಿಘಂಟಿನಲ್ಲಿ ವಿವರಿಸಿದ್ದೇನೆ.

ಇವುಗಳನ್ನು ದೃಷ್ಟಾಂತಪಡಿಸುವುದಕ್ಕಾಗಿ ಮೇಲಿನ ಮೂರು ವಿಭಾಗಗಳಲ್ಲಿ ನನಗೆ ಬಂದ ಕೆಲವು ಪ್ರಶ್ನೆಗಳನ್ನೂ ಅವುಗಳಿಗೆ ನಾನು ನೀಡಿದ ಉತ್ತರಗಳನ್ನೂ ಈ ಮುಂದೆ ನಿರೂಪಿಸುತ್ತೇನೆ.

## I. ಆಸಕ್ತ ವಿದ್ವಾಂಸರ ಸಂದೇಹಗಳಿಗೆ ಉತ್ತರ

**ಇಗೋ** "ಇಗೋ ಕನ್ನಡ" ದಲ್ಲಿರುವ 'ಇಗೋ' ಶಬ್ದದ ಬಗ್ಗೆ ಪ್ರಶ್ನೆ ಮಾಡಿ ಇದು 'ಇಕ್ಕು' ಶಬ್ದದ ಕಡೆಯಿಂದ ಬಂದುದೆ ? ಎಂದು ಕೇಳಿದ್ದಾರೆ ಒಬ್ಬ ವಿದ್ವಾಂಸರು.

ಹತ್ತಿರ ಇರುವ ವಸ್ತು ಅಥವಾ ವಿಷಯವನ್ನು ಕುರಿತು ಅದರ ಕಡೆಗೆ ಗಮನವನ್ನು ಸೆಳೆಯಲು ಕನ್ನಡದಲ್ಲಿ 'ಇದೆಕೊಳ್' ಎಂಬ ಮಾತನ್ನು ಉಪಯೋಗಿಸುತ್ತೇವೆ. ಈ ಸಮಾಸವು 'ಇದೆ + ಕೊಳ್' ಎಂಬೆರಡು ಶಬ್ದಗಳು ಸೇರಿ ಆಗಿದೆ. ಆದರೆ ಅದನ್ನು ಅವ್ಯಯವಾಗಿ ಉಪಯೋಗಿಸುತ್ತೇವೆ. ಈ ಶಬ್ದಪುಂಜಕ್ಕೆ ಅನೇಕ ಪರ್ಯಾಯ ರೂಪಗಳಿವೆ. ಇಕೊ, ಇಕೋ, ಇಕ್ಕೊ, ಇಕ್ಕೋ, ಇಗಾ, ಇಗೊ, ಇಗೋ, ಇದಕೊ, ಇದಕೋ, ಇದಿಕೊ, ಇದಿಗೊ, ಇದುಕೊ, ಇದುಗೋ, ಇದೆಕೊ, ಇದೆಕೋ, ಇದೆಗೋ - ಈ ಎಲ್ಲ ರೂಪಗಳಿಗೂ ಕನ್ನಡಸಾಹಿತ್ಯದಲ್ಲಿ ನಿದರ್ಶನಗಳಿವೆ. ಈ ಶಬ್ದಕ್ಕೂ 'ಇಕ್ಕು' ವಿಗೂ ಏನೂ ಸಂಬಂಧವಿಲ್ಲ. ಕನ್ನಡದ ಶಬ್ದ ಮತ್ತು ಅರ್ಥಗಳಲ್ಲಿ ಯಾವುವು ಸರಿ ಎಂಬುದರ ಕಡೆಗೆ ಆಸಕ್ತರ ಮನಸ್ಸನ್ನು ಸೆಳೆಯಲು, ಶಬ್ದದ ಈ ಎಲ್ಲ ರೂಪಗಳಲ್ಲಿ ನಾನು ಹೆಚ್ಚಾಗಿ ಉಪಯೋಗಿಸುವುದನ್ನು ಆರಿಸಿದ್ದೇನೆ. ಅದೇ ಇಗೋ.

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಗೆ ೧೮೯೫ ರಲ್ಲಿ ಪಟ್ಟಾಭಿಷೇಕವಾದಾಗ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಹೊಸದುರ್ಗದ ಗಿರಿಯಪ್ಪನವರಿಗೆ ಕಳುಹಿಸಿದ್ದ ಆಹ್ವಾನದ ಈ ಪತ್ರದಲ್ಲಿರುವ ಮೇಲುಭಾಗದ ಮುದ್ರೆಯ ಅರ್ಥವೇನು ಎಂದು ಅವರ ವಂಶಸ್ಥರು ಪತ್ರವನ್ನು ಬರೆದು ಕೇಳಿದ್ದರು.



ಶುಭಮಸ್ತು.




ಪಟ್ಟಾಭಿಷೇಕ ಮಹೋತ್ಸವ ಲಗ್ನಪತ್ರಿಕಾ

**ಈ ಮುದ್ರೆಯಲ್ಲಿರುವ ಭಾಷೆ ಯಾವುದು ? ಮೈಸೂರು ಒಡೆಯರು ಈ ಮುದ್ರೆಯನ್ನು ಯಾತಕ್ಕೆ ಉಪಯೋಗಿಸುತ್ತಿದ್ದರು ?**

ಈ ಮುದ್ರೆಯಲ್ಲಿರುವುದು ಅರಬ್ಬಿ ಭಾಷೆಯಲ್ಲಿದೆ. 'ಅಹ್ಮದ್ ಶಾಹಿ, ರಾಜ ಚಿಕ್ಕದೇವ ಯುವರಾಜ' ಎಂದಿದೆ. ಕೆಳಗಡೆ ಹಿಜರಿ ಶಕ ೧೧೬೨ರ ಗುರುತು ಇದೆ. ಅಂದರೆ ಕ್ರಿ. ಶ. ೧೭೪೨ ಆಗುತ್ತದೆ. ಈ ಸಮಯದಲ್ಲಿ ಮೈಸೂರು ಅರಸರು ಸ್ವತಂತ್ರರಾಗಿರಲಿಲ್ಲ. ಅವರು ಮೊಘಲರ ರಾಜರಿಗೆ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ಬೀದರಿನ ಅಹಮ್ಮದ್ ಶಾಹಿಯ ಅಧಿಕಾರಿಗಳೂ ಮರಾಠರೂ ಮೈಸೂರು ಸಂಸ್ಥಾನದ ಕೆಲವು ಭಾಗಗಳಲ್ಲಿ ಸ್ವಂತವಾಗಿ ಕಂದಾಯವನ್ನು ವಸೂಲು ಮಾಡುತ್ತಿದ್ದರು. ಮೈಸೂರು ಅರಸರು ಅಹ್ಮದ್ ಶಾಹಿಗೆ ಒಳಗಾಗಿದ್ದರೆಂಬ ವಿಚಾರವನ್ನು ಈ ಮುದ್ರೆ ಸ್ಪಷ್ಟಪಡಿಸುತ್ತದೆ. ಈ ಬಗ್ಗೆ ಈ ಹಿಂದಿನ ಮಿಥಿಕ್ ಸೊಸೈಟಿಯ ಪತ್ರಿಕೆಯಲ್ಲಿ ಪ್ರಕಟವಾದ ಒಂದೆರಡು ಲೇಖನಗಳು ಇತರ ಅನೇಕ ವಿವರಗಳನ್ನು ನೀಡುತ್ತವೆ. ಅವನ್ನು ಓದಿ ತಿಳಿಯಬೇಕು. ನಮ್ಮ ಚರಿತ್ರೆಯ ಬಗ್ಗೆ, ಒಂದು ಹಳೆಯ ದಾಖಲೆ ವಿಚಾರವನ್ನು ಸ್ಪಷ್ಟಗೊಳಿಸುತ್ತದೆ ಎನ್ನುವುದಕ್ಕೆ ಇದೊಂದು ಒಳ್ಳೆಯ ಉದಾಹರಣೆ.

**ಈ ವಚನದ ಅರ್ಥವೇನು ?**

**ಆಡಾದನಾ ಅಜನು ಕೋಡಗಾದನು ಹರಿಯು**

*ನೋಡಿದರೆ ಶಿವನು ನರಿಯಾದನೀ ಬೆಡಗ*
*ರೂಢಿಯೊಳು ಬಲ್ಲವರು ಹೇಳಿ ಸರ್ವಜ್ಞ.*

ಇದೊಂದು ರೀತಿಯ ಪ್ರಹೇಳಿಕೆ. ಅರ್ಥದಲ್ಲಿ ಸ್ವಾರಸ್ಯವಿರುವ ಒಂದು ಪದ್ಯ. ಅಜ = ಬ್ರಹ್ಮ. ಹರಿ=ವಿಷ್ಣು. ಶಿವ=ಈಶ್ವರ. ಈ ಮೂವರೂ ದೇವತೆಗಳು. ಯಾವುದೋ ಕಾರಣದಿಂದ ಬ್ರಹ್ಮನು ಆಡಾಗಿಯೂ, ಹರಿಯು ಕೋತಿಯಾಗಿಯೂ, ಈಶ್ವರನು ನರಿಯಾಗಿಯೂ ಕಾಣಬರುತ್ತಾರೆ. ಇದೇ ಸಮಸ್ಯೆ. ಹೇಗೆ ಇದಕ್ಕೆ ಪರಿಹಾರ ? ಎಂಬುದು ಪ್ರಶ್ನೆ. ಇದರಲ್ಲಿ ಶ್ಲೇಷೆ ಎಂಬ ಅಲಂಕಾರವಿದೆ. ಸಂಸ್ಕೃತದಲ್ಲಿ ಅಜ ಎಂಬ ಶಬ್ದಕ್ಕೆ ಆಡು ಎಂಬ ಅರ್ಥವಿದೆ. ಅದಕ್ಕೆ ಬ್ರಹ್ಮ ಎಂಬ ಅರ್ಥವೂ ಇದೆ. ಇತರ ಅರ್ಥಗಳೂ ಇವೆ. ಸದ್ಯಕ್ಕೆ ಅವು ನಮಗೆ ಮುಖ್ಯವಲ್ಲ. ಹೀಗೆ ಶ್ಲೇಷಾರ್ಥ ಅಂದರೆ ಎರಡರ್ಥ ಇರುವುದರಿಂದ ಬ್ರಹ್ಮನು ಆಡಾದ ಹಾಗಾಯಿತು. ಹೀಗೆಯೇ ಹರಿ ಎಂಬ ಶಬ್ದಕ್ಕೆ ಕಪಿ ಎಂಬ ಅರ್ಥವಿದೆ. ಆದುದರಿಂದ ವಿಷ್ಣು ಕಪಿಯಾದ. ಶಿವ ಶಬ್ದಕ್ಕೆ ನರಿ ಎಂಬ ಈ ಅರ್ಥವಿಲ್ಲ. ಆದರೆ ಶಿವಾ ಎಂಬ ಶಬ್ದಕ್ಕೆ ಹೆಣ್ಣುನರಿ ಎಂಬ ಅರ್ಥವಿದೆ. ಸರ್ವಜ್ಞ ಶಿವಾ ಶಬ್ದವನ್ನು ತದ್ಭವ ಮಾಡಿಕೊಂಡು ಶಿವ ಮಾಡಿಕೊಂಡು ಆ ಬಳಿಕ ಅದಕ್ಕೆ ಎರಡು ಅರ್ಥಗಳಿವೆ ಎಂದು ಈ ಪದ್ಯದಲ್ಲಿ ಸೇರಿಸಿದ. ಇದೇ ಇಲ್ಲಿರುವ ಚಮತ್ಕಾರ.

**ಕುಮಾರವ್ಯಾಸನ ಒಂದು ಪದ್ಯದ ಸ್ವಾರಸ್ಯದ ವಿವರಣೆಯನ್ನು ಕೇಳಿದ್ದಾರೆ. ಆ ಪದ್ಯ ಹೀಗಿದೆ:**

*ಫಲಕುಜದ ಪಲ್ಲವದ ಪದ ಕರ*
*ತಳದ ವಿಪುಲ ತಮಾಲ ಪತ್ರದ*
*ಲಲಿತ ಕೇತಕಿನಖದ ದಾಡಿಮದಂತಪಂಕ್ತಿಗಳ*
*ನಳಿನನಯನದ ಮಧುಪಕುಲ ಕುಂ*
*ತಳದ ವನಸಿರಿ ಸವತಿಯಾದಳು*
*ಜಲಜಮುಖಿ ಪಾಂಚಾಲೆಗೆಂದನು ಧೌಮ್ಯಮುನಿ ನಗುತ ॥* ಸಭಾಪರ್ವ: ೧೬-೬೪

ಈ ಪದ್ಯದಲ್ಲಿ ಒಂದು ಅಕ್ಷರವು ತಪ್ಪಾಗಿ ಮುದ್ರಿತವಾಗಿರುವುದರಿಂದ ಸ್ವಲ್ಪ ಅನುಮಾನ ಬರಬಹುದು. ಮರುಜೂಜಿನಲ್ಲಿ ಧರ್ಮರಾಯನು ಸೋತಾಗ ಧೌಮ್ಯಋಷಿ ಆಡಿದ ಮಾತು ಈ ಪದ್ಯದಲ್ಲಿದೆ. ಪಾಂಚಾಲೆಗೆ ವನಲಕ್ಷ್ಮಿಯು ಸವತಿಯಾದಳು ಎಂದು ಅಪಹಾಸ್ಯದ ಮಾತನ್ನು ರೂಪಕಾಲಂಕಾರದಿಂದ ಕವಿಯು ವರ್ಣಿಸಿ ಧೌಮ್ಯನ ಬಾಯಿಯಲ್ಲಿ ನುಡಿಸಿದ್ದಾನೆ.

ಈ ಪದ್ಯದಲ್ಲಿ ಮೊದಲ ಪದ **ಫಲಕುಚದ** ಎಂದಿರಬೇಕು. ಕಾಡಿನ ಒಂದೊಂದು ಸಿರಿಯೂ ಪಾಂಚಾಲೆಯ ಸಿರಿಗೆ ರೂಪಕವಾಗಿದೆ. ಈ ಪದ್ಯದಲ್ಲಿ ವನಸಿರಿಗೆ=ವನಲಕ್ಷ್ಮಿಗೆ ಮರಗಳ ಹಣ್ಣೇ ಮೊಲೆಗಳು. ಚಿಗುರೇ ಅಂಗಾಲು ಅಂಗೈಗಳು. ಹೊಂಗೆಯ ಸೊಗಸಾದ ಎಲೆಯೇ ಸ್ತ್ರೀಯರ ಕೆನ್ನೆಯ ಮೇಲೆ ರಂಜಿಸುವ ಮಕರಿಕಾ ಪತ್ರ; ಲಲಿತಾಕಾರದ ತಾಳೆಯ ಹೂವೇ ಉಗುರುಗಳು, ದಾಳಿಂಬವೇ ಹಲ್ಲಿನ ಸಾಲು, ಕಮಲವೇ ಕಣ್ಣು, ತುಂಬಿಗಳ ಸಮೂಹವೇ ಕೇಶರಾಶಿ; ಹೀಗೆ ಸುಂದರಿಯಾಗಿರುವ ವನಲಕ್ಷ್ಮಿಯು ದ್ರೌಪದಿಗೆ ಸವತಿಯಾದಳು — ಪಾಂಡವರಿಗೆ ಮತ್ತೊಬ್ಬ ಪತ್ನಿಯಾದಳು ಎಂದು ನಗುತ್ತಾ ಹಾಸ್ಯ ಮಾಡುತ್ತಾನೆ.

ಇದೇ ಈ ಪದ್ಯದ ಅರ್ಥ. ಕುಮಾರವ್ಯಾಸನು ಧೌಮ್ಯನ ಕೈಯಲ್ಲಿ ಈ ಮಾತನ್ನು ಏಕೆ ಹೇಳಿಸಿದ ಎಂಬುದರ ಸಾರ್ಥಕ್ಯದ ಮಾತು ಬೇರೆಯ ವಿಚಾರಕ್ಕೆ ಸೇರಿದ್ದು!

**ಇದರ ಅರ್ಥವೇನು ?**

*ಕುಲದವನ ಹೃದಯಾಂಧಕಾರವ*

*ಕಳಚಲೆಂದು ಹಿಮಾಂಶು ಹರಹಿದ*
*ನೆಳೆಯ ಬೆಳುದಿಂಗಳನೆನಲು ಸುರರಿಪು ಕುಲಾಂತಕನು ನುಡಿದನು.*

ಉದ್ಯೋಗ ಪರ್ವ: ೮-೨೨

ಕೃಷ್ಣಸಂಧಾನದಲ್ಲಿ ಕೌರವನ ಸಭೆಯಲ್ಲಿ ಮಾತನಾಡಲು ಮೊದಲು ಮಾಡಿದಾಗ ಹೇಗಿತ್ತು ಕೃಷ್ಣನ ಭಾವ ಎಂಬುದನ್ನು ತಿಳಿಸಿದ್ದಾನೆ ಕವಿ.

ದುರ್ಯೋಧನನು ಚಂದ್ರವಂಶದ ದೊರೆ. ಅವನ ಅಂತರಂಗ ತಮೋಗುಣದಿಂದ ತುಂಬಿದೆ. ಅದು ಕತ್ತಲೆಯಿಂದ ತುಂಬಿದಂತಿದೆ. ಅಲ್ಲಿಗೆ ಬೆಳಕನ್ನು ಬೀರಿ ಜ್ಞಾನವೆಂಬ ಜ್ಯೋತಿಯನ್ನು ಪ್ರಖರಗೊಳಿಸಲು ತನ್ನ ಕುಲದವನಲ್ಲವೇ ಎಂಬ ಆತ್ಮೀಯತೆಯಿಂದ ಚಂದ್ರನೇ ಬೆಳದಿಂಗಳನ್ನು ಹರಡಿದನೋ ಎನ್ನುವಂತೆ ಕೃಷ್ಣನು ತನ್ನ ಹಲ್ಲುಗಳ ಕಾಂತಿ ಹೊರಹೊಮ್ಮುವಂತೆ ನಗುಮುಖದಿಂದ ಮಾತನಾಡಿದನು.

ಇದು ಇಲ್ಲಿರುವ ಅರ್ಥ. **ಕುಲದವನ** ಎಂದರೆ ದುರ್ಯೋಧನನ ಎಂದರ್ಥ.

## ಈ ಪದ್ಯದ ಅನ್ವಯ ಹೇಗೆ?

*ಶರನಿಧಿಯ ವಡಬಾನಳನ ದ*
*ಳ್ಳುರಿಯ ವರ್ಮವ ತಿವಿವ ತುಂಬಿಗೆ*
*ಮರಳುದಲೆಯುಂಟಾದಡದು ಭವಭವದ ಪುಣ್ಯಫಲ॥* ದ್ರೋಣಪರ್ವ: ೫-೪೬

ಈ ಪದ್ಯದಲ್ಲಿ ಧರ್ಮರಾಯನು ಅಭಿಮನ್ಯುವಿಗೆ ಪದ್ಮವ್ಯೂಹದ ಭೇದನಕ್ಕೆ ಅನುಮತಿ ಕೊಟ್ಟು ಅವನನ್ನು ಕಳುಹಿಸುವಾಗ ಆಡುವ ಮಾತುಗಳು ಇವೆ. ಪದ್ಮವ್ಯೂಹದ ಭೇದವು ಅಭಿಮನ್ಯುವಿಗೆ ಕಷ್ಟಸಾಧ್ಯವೆಂದು ಧರ್ಮರಾಯನಿಗೂ ಗೊತ್ತು. ಆದುದರಿಂದಲೇ ಈ ಮೇಲಿನ ಪದ್ಯಭಾಗದಲ್ಲಿರುವ ಮಾತುಗಳನ್ನು ತನ್ನಲ್ಲಿ ಹೇಳಿಕೊಂಡು ಬಹಿರಂಗವಾಗಿ 'ನೀನು ಶತ್ರುದಳವನ್ನು ತುಂಡು ಮಾಡಲು ಹೊರಡು. ನಾನು ಸೈನ್ಯ ಸಮೇತನಾಗಿ ಬರುತ್ತೇನೆ' ಎನ್ನುತ್ತಾನೆ.

ಈಗ ಮೇಲಿನ ಮೂರು ಸಾಲುಗಳ ಅರ್ಥವನ್ನು ನೋಡೋಣ. ಸಮುದ್ರ ಮಧ್ಯದಲ್ಲಿ ವಡಬಾನಳ ಎಂದರೆ ವಡಬ, ಬಡಬ ಎಂಬ ಅಗ್ನಿ ಹುದುಗಿದೆ. ಸಮುದ್ರದಲ್ಲಿ ಅದು ದಳ್ಳುರಿಯಾದರೂ ನೀರಿನ ಮಧ್ಯದಲ್ಲಿ ಇದೆ. ನೀರೆ ಅದಕ್ಕೆ ಕವಚದಂತಿದೆ. ನೀರಿನಲ್ಲಿ ಬೆಳೆಯುವ ಕಮಲದಲ್ಲಿ ಸುಖಪಡುವ ತುಂಬಿ ಇಂಥ ದಳ್ಳುರಿಯ ಬಳಿಗೆ ನುಗ್ಗಿ ಅದರ ವರ್ಮವನ್ನು ಎಂದರೆ ಕವಚವನ್ನು ತಿವಿದರೆ ಎಂದರೆ ಕೆಣಕಿದರೆ ತುಂಬಿಗೆ ಮರುಳುದಲೆ= ಹಿಂದಿರುಗುವಿಕೆ ಸಾಧ್ಯವೆ? ಹಾಗೆ ಬಂದರೆ ಅದು ಜನ್ಮಜನ್ಮಾಂತರಗಳ ಪುಣ್ಯ. ಇದು ಇಲ್ಲಿರುವ ಭಾವ. **ಮರಳು** ಎಂದರೆ ಹಿಂದಿರುಗು. ಈ ಶಬ್ದಕ್ಕೆ **ದಲೆ** ಎಂಬ ನಾಮಪ್ರತ್ಯಯವು ಹತ್ತಿದರೆ ಅದು **ಮರಳುದಲೆ** ಎಂದು ನಾಮಪದವಾಗುತ್ತದೆ. ತವು + ದಲೆ = ತವುದಲೆ ಎಂದು ಆಗುವ ಹಾಗೆ. ತವು = ನಾಶವಾಗು, ತವುದಲೆ = ನಾಶ. ಈ ಪದ್ಯದಲ್ಲಿ 'ಧರ್ಮರಾಯನ ಮನಸ್ಸಿನಲ್ಲಿ ಅಭಿಮನ್ಯು ಹಿಂದಿರುಗಲಾರ ಎಂಬ ಅಭಿಪ್ರಾಯವಿದೆ' ಎಂಬುದನ್ನು ಕವಿ ಸೂಚಿಸುತ್ತಿದ್ದಾನೆ.

## ದಂಡಂ ದಶಗುಣಂ ಭವೇತ್: ಇದರ ಅರ್ಥವೇನು?

ಈ ವಾಕ್ಯದಲ್ಲಿ ದಶಗುಣ ಎಂಬ ಶಬ್ದವಿದೆ. ಸಂಸ್ಕೃತದಲ್ಲಿ ಗುಣಗಳ ಸಂಖ್ಯೆ ಅನೇಕವಾಗಿವೆ. ೩ ರಿಂದ ಹಿಡಿದು ೪೬ ರವರೆಗೆ ಇವೆ ಎಂದು ನಿಘಂಟುಗಳು ಹೇಳುತ್ತವೆ. ಆಧರೆ ಮೇಲಿನ ಮಾತಿನಲ್ಲಿ ಅದಾವುದೂ ಗಮನದಲ್ಲಿಲ್ಲ. ಬುದ್ಧಿಯ ಮಾತಿನಿಂದ ಆಗದ ಕೆಲಸ ಶಿಕ್ಷೆಯಿಂದ

ಆಗುತ್ತದೆ ಎಂಬ ಪ್ರಾಚೀನ ನಂಬಿಕೆಯನ್ನು ಅದು ಸೂಚಿಸುತ್ತದೆ ಅಷ್ಟೆ.

ಇತರ ವಿವರಗಳಿಗೆ ಈ ವಾಕ್ಯಭಾಗ ಬರುವ ಶ್ಲೋಕವನ್ನೇ ಪರಿಚಯ ಮಾಡಿಕೊಳ್ಳಬೇಕು. ಆ ಶ್ಲೋಕದ ಸ್ವರೂಪ ನನಗೆ ನೆನಪಿರುವಂತೆ ಹೀಗಿದೆ:

*ವಿಶ್ವಾಮಿತ್ರಾಹಿ ಪಶ್ವಾದೌ ಕರ್ದಮೇಷು ಜಲೇಷುಚ*
*ಅಂಧೇ ತಮಸಿ ವಾರ್ಧಕ್ಯೇ ದಂಡೋ ದಶಗುಣೋ ಭವೇತ್*

ದಂಡ ಶಬ್ದವು ಪುಲ್ಲಿಂಗವಾದರೆ ಶ್ಲೋಕ ಹಾಗೆಯೇ ಇರುತ್ತದೆ. ದಂಡ ಶಬ್ದವನ್ನು ನಪುಂಸಕ ಲಿಂಗವಾಗಿ ಉಪಯೋಗಿಸಿದರೆ ಆಗ ಅದು 'ದಂಡಂ ದಶಗುಣಂ ಭವೇತ್' ಎಂದು ರೂಪವನ್ನು ತಾಳುತ್ತದೆ. ಈ ಶ್ಲೋಕದಲ್ಲಿ ಹಕ್ಕಿ, ನಾಯಿ, ಶತ್ರು, ಹಾವು, ಪಶು ಇವುಗಳನ್ನು ಓಡಿಸಲು ಸಹಾಯವಾಗಿರುವ ಮತ್ತು ಕೆಸರು, ನೀರು, ಕುರುಡ, ಕತ್ತಲೆ, ಮುಪ್ಪು ಇವುಗಳಲ್ಲಿ ಸಹಾಯಕವಾಗಿರುವ ಗುಣವನ್ನು ಹೊಂದಿ ದಂಡವು ದಶಗುಣ ಸಹಿತವಾಗುತ್ತದೆ ಎಂದು ಅರ್ಥ.

ಆದರೆ ಕನ್ನಡದಲ್ಲಿ ಯಾರೂ ಈ ಅರ್ಥದಲ್ಲಿ ಆ ಶ್ಲೋಕ ಭಾಗವನ್ನು ಉಪಯೋಗಿಸುವುದಿಲ್ಲ. ನಾನು ಹೇಳಿರುವ ಅರ್ಥದಲ್ಲಿ ಮಾತ್ರ ಅದು ಉಪಯೋಗವಾಗುತ್ತಿದೆ. ಈ ಬಗ್ಗೆ ಸ್ವಲ್ಪ ವಿವರವನ್ನು ನೀಡುತ್ತೇನೆ.

'ಸಾಮಾಜಿಕ ಭಾಷಾಶಾಸ್ತ್ರ'ದಲ್ಲಿ ಸಮಾಜದಲ್ಲಿ ಪ್ರಯೋಗದಲ್ಲಿರುವ, ಹೊಸದಾಗಿ ಪ್ರಯೋಗವಾಗುವ ಭಾಷಾ ಸ್ವರೂಪದ ಬಗ್ಗೆ ಸಂಶೋಧನೆಗೆ ಪ್ರಾಧಾನ್ಯವಿದೆ. ಒಂದು ಭಾಷೆಯನ್ನು ಉಪಯೋಗಿಸುವ ಪ್ರತಿಯೊಬ್ಬನೂ ತಾನು ವಾಸಿಸುವ ಸಮಾಜದ ಭಾಗವಾಗಿ ಉಪಭಾಷೆಯನ್ನೋ ವ್ಯಕ್ತಿ ಭಾಷೆಯನ್ನೋ ಪ್ರಯೋಗಿಸುತ್ತಾನೆ. ಹಾಗೆ ಅವನಾಡುವ ಭಾಷೆಯಲ್ಲಿ ಅವನ ಪರಿಸರವು ಪ್ರತಿಬಿಂಬಿತವಾಗುತ್ತದೆ. ಹೀಗೆ ಪ್ರತಿಬಿಂಬಿತವಾಗುವ ಅರ್ಥಗಳನ್ನು ಗಮನಿಸಿ ಶಬ್ದಗಳ, ವಾಕ್ಯಭಾಗಗಳ, ಗಾದೆ ಮಾತುಗಳ ಅರ್ಥವಿಶೇಷವನ್ನು ವಿವರಿಸುವುದು ಈ ನಿಘಂಟಿನ ಮುಖ್ಯ ಉದ್ದೇಶಗಳಲ್ಲಿ ಒಂದು. ಈ ದೃಷ್ಟಿಯಿಂದ ಕನ್ನಡದಲ್ಲಿ ದಂಡಂ ದಶಗುಣಂ ಭವೇತ್ ಎಂಬ ಮಾತಿಗೆ ನಾನು ಹೇಳಿರುವ ಅರ್ಥವೇ ಪ್ರಯೋಗದಲ್ಲಿರುವ ಅರ್ಥ. ಮೇಲಿನ ಶ್ಲೋಕದ ಅರ್ಥವನ್ನು ನಾವು ಎಷ್ಟು ಸಲ ಹೇಳಿದರೂ ಗಾದೆ ಮಾತಿನ ಅರ್ಥ ಪ್ರಯೋಗ ತಪ್ಪುವುದಿಲ್ಲ. ಹೀಗೆ ಕನ್ನಡದಲ್ಲಿ ನೆಲೆನಿಂತ ಅರ್ಥ ಪ್ರಯೋಗವನ್ನು ನಾವು ನಿರಾಕರಿಸಲಾಗುವುದಿಲ್ಲ.

**ನಂದೋರಾಜಾ ಭವಿಷ್ಯತಿ, ಯದ್ಭವಿಷ್ಯ, ವಾಚಾಮಗೋಚರ, ಆಟಾಟೋಪ, ತಂಚಾವಂಚ, ವೈದೀಕ, ಭಾನಸ, ಕಾಯಾವಾಚಾಮನಸಾ** ಮುಂತಾದ ಶಬ್ದಗಳ, ಶಬ್ದಪುಂಜಗಳ ಅರ್ಥಗಳನ್ನೂ ಅವುಗಳ ಮೂಲಪ್ರಯೋಗವನ್ನೂ ಪರಿಶೀಲಿಸಿದರೆ ನನ್ನ ಅಭಿಪ್ರಾಯದ ಬಗ್ಗೆ ಸ್ವಲ್ಪ ವಿಶ್ವಾಸ ಬರಬಹುದು. ಹೀಗೆಯೇ ಕನ್ನಡದಲ್ಲಿ ಸಂಸ್ಕೃತದ ಅನೇಕ ಪ್ರಯೋಗಗಳಿಗೆ ಬೇರೆ ಬೇರೆ ಅರ್ಥದಲ್ಲಿಯೇ ಔಚಿತ್ಯ ಹೆಚ್ಚು. ಲೋಕಾಭಿರಾಮವಾದ ಮಾತಿನಲ್ಲಿ **ಅಂಗವಸ್ತ್ರ =ಉಪಪತ್ನಿ, ಪಟ್ಟಾಭಿಷೇಕ=ಕ್ಷೌರ, ಭಗವದ್ಗೀತಾ ಪಾರಾಯಣ= ಇಸ್ಪೀಟಾಟ**, ಇತ್ಯಾದಿ.

ಹೀಗೆ ಅರ್ಥ ಮಾಡುವವರು ಯಾವ ಕಾರಣಕ್ಕಾಗಿ ಹಾಗೆ ಅರ್ಥ ಸ್ವಾರಸ್ಯವನ್ನೂ ಸೃಷ್ಟಿಸುತ್ತಾರೆ ಎಂಬುದು ನಮ್ಮ ಭಾಷಾಭ್ಯಾಸದ ಒಂದು ಅಂಶ.

ಈ ಬಗೆಯ ಅಭ್ಯಾಸ ವಿಶ್ವವಿದ್ಯಾಲಯಗಳಲ್ಲಿ ವಿಶೇಷ ವ್ಯಾಸಂಗಕ್ಕೆ ಅವಕಾಶವನ್ನೂ ಮಾಡಿಕೊಟ್ಟಿದೆ. ಅನೇಕ ಹಿರಿಯ ಭಾಷಾಶಾಸ್ತ್ರಿಗಳು ಈ ವ್ಯಾಸಂಗದಲ್ಲಿ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ **ಅಪರೂಪ, ಪ್ರಸ್ತಾಪ** ಎಂಬ ಶಬ್ದರೂಪಗಳಿವೆ. **ಅವಸರ** ಶಬ್ದಕ್ಕೆ

ಸಂಸ್ಕೃತದ ಅರ್ಥ ಕನ್ನಡದಲ್ಲಿ ಸಾಮಾನ್ಯರಿಗೆ ಯಾರಿಗೂ ತಿಳಿದಿಲ್ಲ. ಆದುದರಿಂದ ಈಗ ಸಾಮಾನ್ಯರು ಯಾವ ಅರ್ಥದಲ್ಲಿ ಉಪಯೋಗಿಸುತ್ತಾರೋ ಆ ಅರ್ಥವನ್ನು ತಪ್ಪೆಂದು ಹೇಳಲಾಗುವುದಿಲ್ಲ. ಅದು ಒಂದು ವಿಧವಾದ ಬೆಳವಣಿಗೆ (Development). ಬಳಿಕ ಅಗತ್ಯ ಬಿದ್ದರೆ ಆ ಶಬ್ದ ಪುಂಜಗಳ ಮೂಲವನ್ನು ಸಂಶೋಧನೆ ಮಾಡಿ ಹೊಸ ಅರ್ಥವು ಹುಟ್ಟಿಕೊಂಡ ಬಗೆಯನ್ನೂ ಅದಕ್ಕೆ ಕಾರಣಗಳನ್ನೂ ವಿಶ್ಲೇಷಿಸಬಹುದು. ಯಥಾಶಕ್ತಿ ನಾನು ಆ ಕೆಲಸವನ್ನು ಮಾಡುತ್ತೇನೆ.

ಕನ್ನಡದಲ್ಲಿ ಇಂಥ ಕೆಲವು ವಾಕ್ಯಗಳೇ ಅಲ್ಲ, ಅನೇಕ ಅಶುದ್ಧ ರೂಪಗಳೂ ನೆಲೆಸಿಂತಿವೆ. ಅವುಗಳನ್ನು ಕದಲಿಸುವುದಕ್ಕಾಗದ ಹಾಗೆ ಅವು ಭದ್ರವಾಗಿ ನಿಂತಿವೆ. ಇಂಥ ಅರ್ಥಗಳನ್ನು ಭಾಷಾಶಾಸ್ತ್ರದಲ್ಲಿ ಅರ್ಥಗಳು ಬೆಳೆದ ರೀತಿ ಎಂದು ಒಪ್ಪಿಕೊಳ್ಳುತ್ತಾರೆ.

**ಕನ್ನಡ ಭಾಷೆಗೆ ಪಾರಸೀ, ಅರಾಬಿಕ್ ಭಾಷೆಯ ಶಬ್ದಗಳು ಏಕೆ ಬಂದವು? ಹಿಂದೆ ಇದ್ದ ಕನ್ನಡ ಶಬ್ದಗಳನ್ನು ಏತಕ್ಕಾಗಿ ಕೈಬಿಟ್ಟರು?**

ಇದು ನಿಜವಾಗಿ ವಿಷಯಗಳನ್ನು ಆಳವಾಗಿ ತಿಳಿಯಬೇಕೆನ್ನುವವರು ಕೇಳುವ ಪ್ರಶ್ನೆ. ಇದಕ್ಕೆ ಸ್ವಲ್ಪ ವಿಸ್ತಾರವಾಗಿ ಉತ್ತರವನ್ನು ಕೊಡುತ್ತೇನೆ.

ಯಾವ ಜೀವಂತ ಭಾಷೆಯೂ ಇತರ ಭಾಷೆಗಳ ಸಂಸರ್ಗದಿಂದ ದೂರವಿರುವುದು ಸಾಧ್ಯವಿಲ್ಲ. ಎಲ್ಲ ಭಾಷೆಗಳಲ್ಲಿಯೂ ಬೇರೆ ಬೇರೆ ಭಾಷೆಗಳಿಂದ ಬಂದು ಸೇರಿರುವ ಶಬ್ದಗಳಿರುತ್ತವೆ. ಕನ್ನಡಕ್ಕೆ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಿಂದ ಬಂದು ಸೇರಿರುವ ಶಬ್ದಗಳ ಸಂಖ್ಯೆ ಅಪಾರವಾಗಿದೆ. ಪಾರಸಿ ಮತ್ತು ಅರಬ್ಬಿ ಭಾಷೆಗಳಿಂದ ಸುಮಾರು ಒಂದು ಸಾವಿರ ಶಬ್ದಗಳು ಬಂದಿವೆ.

ಪಾರಸಿ ಮತ್ತು ಅರಬ್ಬಿ ಶಬ್ದಗಳು ಕನ್ನಡಕ್ಕೆ ಬಂದು ಸೇರಲು ಭಾರತದಲ್ಲಿ ಮಹಮ್ಮದೀಯರ ಆಡಳಿತವಿದ್ದು ಅವರ ಭಾಷೆಯಲ್ಲಿ ಸರಕಾರ ವ್ಯವಹಾರ ಮಾಡುತ್ತಿದ್ದುದೇ ಮುಖ್ಯ ಕಾರಣ.

ಇತರ ಭಾಷೆಗಳ ಶಬ್ದಗಳೇ ಬೇಡವೆಂಬ ಮಡಿವಂತಿಕೆ ಕೆಲವರಿಗೆ ಈಗಲೂ ಇದೆ. ಹಿಂದೆ ಕನ್ನಡದಲ್ಲಿ ಆಂಡಯ್ಯನೆಂಬ ಒಬ್ಬ ಕವಿ ಸಂಸ್ಕೃತ ಶಬ್ದವೇ ಬೇಡ. ಅವುಗಳನ್ನು ತದ್ಭವ ಮಾಡಿಕೊಂಡೇ ಕಾವ್ಯ ಬರೆಯುತ್ತೇನೆಂಬ ಶಪಥ ಮಾಡಿ 'ಕಬ್ಬಿಗರ ಕಾವ' ಎಂಬ ಗ್ರಂಥವನ್ನು ಬರೆದಿದ್ದಾನೆ. ಆದರೆ ಅದನ್ನು ಓದುವುದೇ ಕಷ್ಟ, ಸಾಮಾನ್ಯರಿಗೆ.

ನಾವು ಒಂದು ಮುಖ್ಯ ಅಂಶವನ್ನು ನೆನಪಿಡಬೇಕು. ಯಾವ ಜನಾಂಗವೂ ತನ್ನದೇ ಆದ ಒಂದು ದ್ವೀಪವನ್ನು ಕಲ್ಪಿಸಿಕೊಂಡು ಅಲ್ಲಿ ಬಾಳುವುದು ಅಸಾಧ್ಯ. ಎರಡು ಭಾಷೆಗಳು ಅಕ್ಕಪಕ್ಕದಲ್ಲಿ ಪ್ರಚಾರದಲ್ಲಿದ್ದರೆ ಎರಡೂ ಕಡೆಗೆ ಶಬ್ದಗಳು ಹೋಗಿ ಸೇರುತ್ತವೆ. ಇವುಗಳನ್ನು ಎರವಲು ಶಬ್ದಗಳು ಎಂದು ಕೆಲವರು ಕರೆಯುತ್ತಾರೆ. ಕೆಲವು ಸಲ ಶಬ್ದಗಳು ಮೂಲ ರೂಪದಲ್ಲಿಯೇ ಸೇರುತ್ತವೆ. ಇನ್ನು ಕೆಲವು ವೇಳೆ ಸ್ವಲ್ಪ ರೂಪ ವ್ಯತ್ಯಾಸದೊಡನೆ ಬಂದು ಸೇರುತ್ತವೆ. ಕೆಲವು ಸಲ ಅರ್ಥವನ್ನು ಅನುವಾದ ಮಾಡಿ ಉಪಯೋಗಿಸುತ್ತೇವೆ. ಇನ್ನು ಕೆಲವು ಸಲ ನಮ್ಮಲ್ಲಿರುವ ಶಬ್ದ ಬೇರೆ ಭಾಷೆಯ ಶಬ್ದ ಎರಡೂ ಒಂದೇ ಅರ್ಥವಾಗಿದ್ದರೆ ಅವೆರಡೂ ಸೇರಿ ಜೋಡಿ ಶಬ್ದಗಳಾಗಿ ಒಂದೇ ಅರ್ಥವನ್ನು ಕೊಡುತ್ತವೆ.

ಜನಾಂಗಗಳು ಮಿಳಿತವಾದಾಗ ಇವೆಲ್ಲ ಆಗುವ ಕಾರ್ಯಗಳೇ. ಭಾರತದ ಚರಿತ್ರೆಯಲ್ಲಿ ಪುಲಕೇಶಿಯ ಆಸ್ಥಾನಕ್ಕೆ ಪರ್ಷಿಯಾ ದೇಶದ ಖುಸ್ರು ಎಂಬ ರಾಯಭಾರಿ ಬಂದಾಗಿನಿಂದ ನಮ್ಮ ಪಾರಸಿ ಭಾಷೆಯ ಸಂಬಂಧ ಮೊದಲಾಯಿತು. ಮುಹಮ್ಮದೀಯರು ನಮ್ಮ ದೇಶಕ್ಕೆ ದಂಡಯಾತ್ರೆ ಮಾಡಿದಾಗಿನಿಂದ ಪಾರಸಿ ಮತ್ತು ಅರಬ್ಬಿ ಭಾಷೆಗಳ ಸಂಪರ್ಕ ಹೆಚ್ಚಾಯಿತು. ರಾಷ್ಟ್ರಕೂಟರಿಗೂ ಅರಬ್ಬಿ ವ್ಯಾಪಾರಗಾರರಿಗೂ ಸಂಪರ್ಕವಿತ್ತು. ಮುಹಮ್ಮದ್ ಘಸ್ನಿ, ಮುಹಮ್ಮದ್ ಘೋರಿ, ತುಘಲಕ್ ಮತ್ತು ಖಿಲ್ಜಿ ಸಂತತಿಯ ರಾಜರು ೧೨ ನೆಯ ಶತಮಾನದಿಂದಲೇ ನಮ್ಮಲ್ಲಿ ನೆಲೆ

ನಿಂತರು. ದೆಹಲಿಯ ಸಿಂಹಾಸನದ ಮೇಲೆ ೫೦೦ ವರ್ಷಗಳ ತನಕ ಯಾವನಾದರೂ ಒಬ್ಬ ಮಹಮ್ಮದೀಯ ದೊರೆ ಆಳುತ್ತಲೇ ಇದ್ದನು. ಆಡಳಿತ ಅವರದ್ದಾಗಿದ್ದಾಗ ಸಾಹಿತ್ಯ, ಸಂಗೀತ, ಕಲೆಗಳು ಮುಂತಾದುವುಗಳ ಮೇಲೂ ವೇಷಭೂಷಣಗಳ ಮೇಲೂ ಆ ಜನರ ಪ್ರಭಾವ ಹೆಚ್ಚಾಯಿತು. ದಕ್ಷಿಣದೇಶದಲ್ಲಿ ಮಲ್ಲಿಕಾಫರನ ದಂಡಯಾತ್ರೆಯಾದ ಮೇಲೆ ಆಗಿಂದಾಗ ಹಿಂದೂ ರಾಜರಿಗೂ ಮಹಮ್ಮದೀಯ ರಾಜರಿಗೂ ಯುದ್ಧಗಳು ಆಗುತ್ತಲೇ ಇದ್ದುವು. ವಿಜಯನಗರದ ಅರಸರ ಕಾಲದಲ್ಲಿ ಇದೇ ಸ್ಥಿತಿ ಇತ್ತು. ಮೈಸೂರು ದೇಶದಲ್ಲಿ ಹೈದರ್, ಟಿಪ್ಪು ಇವರು ಆಳುತ್ತಿದ್ದಾಗ ಈ ಪ್ರಭಾವ ಇನ್ನೂ ಹೆಚ್ಚಾಯಿತು. ಹೀಗೆ ಆಡಳಿತ, ಮತ, ವಿದ್ಯಾಭ್ಯಾಸ, ಕಲೆಗಳು, ಕಸುಬು, ವ್ಯಾಪಾರ, ವಾಣಿಜ್ಯ ಈ ಎಲ್ಲ ಕ್ಷೇತ್ರಗಳಲ್ಲಿ ಪಾರಸಿ ಮತ್ತು ಅರಬ್ಬಿ ಶಬ್ದಗಳು ಬಂದು ಸೇರಿಕೊಂಡಿವೆ. ಈ ಶಬ್ದಗಳಿಂದ ಮತ್ತೊಂದು ಜನಾಂಗದ ವ್ಯವಹಾರ, ಸಂಸ್ಕೃತಿ ಮುಂತಾದ ವಿಚಾರಗಳಲ್ಲಿಯೂ ಹೊಸ ಹೊಸ ವಿಷಯಗಳು ಪರಸ್ಪರ ತಿಳಿವಳಿಕೆಗೆ ಬರುತ್ತವೆ. ಅಂತೂ ಇತರ ಭಾಷೆಗಳ ಶಬ್ದಗಳನ್ನು ಆಮದು ಮಾಡಿ ನಮ್ಮ ಜೀವನದಲ್ಲಿ ಅವುಗಳನ್ನು ಜೀರ್ಣಿಸಿಕೊಳ್ಳುವುದು ಒಂದು ವಿಧವಾದ ಆರೋಗ್ಯದ ಚಿಹ್ನೆ.

## ಗಾಳಿ ನುಂಗುವ ಮಂಚ ಎಂದರೇನು ?

ಇದಕ್ಕೆ ಹಾವು, ಆದಿಶೇಷ ಎಂದರ್ಥ. ಪುರಂದರದಾಸರು ವಿಷ್ಣುವಿನ ಮಂಚವನ್ನು ಕುರಿತು ಒಂದು ಕೀರ್ತನೆಯನ್ನು ರಚಿಸಿದ್ದಾರೆ. ಅದರಲ್ಲಿ ಪ್ರತಿಯೊಂದು ಸಾಲೂ ಮಂಚ ಎಂಬ ಶಬ್ದದಿಂದ ಕೊನೆಗಾಣುತ್ತದೆ. ಆ ಕೀರ್ತನೆಯಲ್ಲಿ ಈ ಪದಪುಂಜವು ಕಾಣಬರುತ್ತದೆ. ಆ ಪದ ಹೀಗಿದೆ:

*ಶೃಂಗಾರವಾಗಿದೆ ಸಿರಿರಂಗನ ಮಂಚ*

*ಅಂಗನೆ ಮಹಲಕುಮಿಯರಸಿ ಮಲಗುವ ಮಂಚ.....*

*ಕಾಲಿಲ್ಲದೋಡುವ ಮಂಚ, ಗಾಳಿ ನುಂಗುವ ಮಂಚ*

ಹಾವು ಕಾಲಿಲ್ಲದೆ ಹರಿದಾಡುತ್ತದೆ. ಅದಕ್ಕೆ ಗಾಳಿಯೇ ಆಹಾರ. ವಾತಾಶನ ಎಂದು ಹಾವಿಗೆ ಮತ್ತೊಂದು ಹೆಸರು. ಇಲ್ಲಿ ಕವಿಯ ಚಮತ್ಕಾರ ಕಾಣಬರುತ್ತದೆ.

**ಶ್ರೀರಾಮಚಂದ್ರ ಮತ್ತು ಸೀತಾಮಾತೆಯರು ವನವಾಸಕ್ಕೆ ತೆರಳಿದಾಗ ನಾರು ಮಡಿಯನ್ನುಟ್ಟು ಹೊರಟರು. ಹೀಗಿರುವಾಗ ಸೀತೆಯು ರಾವಣನಿಂದ ಅಪಹೃತಳಾದಾಗ ತನ್ನ ಒಡವೆಗಳನ್ನು ಬಟ್ಟೆಯಲ್ಲಿ ಕಟ್ಟಿ ಎಸೆದು ಬಿಟ್ಟಳೆಂದೂ ರಾಮನು ಮುದ್ರಿಕೆಯನ್ನೂ ಸೀತೆಯು ಚೂಡಾಮಣಿಯನ್ನೂ ಗುರುತಿಗಾಗಿ ಕಳುಹಿಸಿದರೆಂದೂ ಹೇಳುವುದು ಅಸಂಬದ್ಧವಾಗುವುದಿಲ್ಲವೇ ? ಇದು ಪ್ರಶ್ನೆ.**

ರಾಮಾಯಣದ ಕಥೆಯನ್ನು ಪೂರ್ತಿ ಓದದವರಿಗೆ ಇದು ಅಸಂಬದ್ಧವಾಗಿ ಕಾಣುತ್ತದೆ. ರಾಮಾಯಣದಲ್ಲಿ ರಾಮನನ್ನು ವನವಾಸಕ್ಕೆ ಕಳುಹಿಸುವಾಗ ಕೈಕೆ ವಲ್ಕಲವನ್ನು ಅಂದರೆ ನಾರುಬಟ್ಟೆಯನ್ನು ಅವರಿಬ್ಬರಿಗೂ ನೀಡಿದ್ದು ನಿಜ. ಸೀತೆಗೆ ವಲ್ಕಲವನ್ನು ಉಡುವುದು ತಿಳಿಯದೆ ರಾಮನು ಅವಳ ಸೀರೆಯ ಮೇಲೆಯೇ ವಲ್ಕಲವನ್ನು ಉಡಿಸಿದ ಸನ್ನಿವೇಶವಿದೆ. ಇದು ಹೃದಯವನ್ನು ಹಿಂಡುವಂಥ ಸನ್ನಿವೇಶ. ಆದರೆ ವಸಿಷ್ಠಾದಿಗಳು ಸೀತೆಯ ಆಭರಣಗಳನ್ನು ತೆಗೆಸುವುದಕ್ಕಾಗಲಿ, ವಲ್ಕಲವನ್ನು ಸೀತೆಗೆ ಉಡಿಸುವುದಕ್ಕಾಗಲಿ ಅವಕಾಶವನ್ನು ಕೊಡಲಿಲ್ಲ. ಅಷ್ಟೇ ಅಲ್ಲದೆ ಸೀತೆಯನ್ನು ಕಳಿಸುವಾಗ ೧೪ ವರ್ಷಗಳಿಗೆ ಬೇಕಾಗುವ ವಸ್ತ್ರಗಳನ್ನು, ಆಭರಣಗಳನ್ನು ರಥದಲ್ಲಿ ತುಂಬಿ ಕಳುಹಿಸಿದರು. ರಾಮಾಯಣದಲ್ಲಿ ಈ ಸಂದರ್ಭದಲ್ಲಿ ಬರುವ ಶ್ಲೋಕಗಳು ಈ ರೀತಿ ಇವೆ -

*ಅಥೋತ್ತಮಾನ್ಯಾಭರಣಾನಿ ದೇವಿ*
*ದೇಹಿ ಸ್ನುಷಾಯೈ ವ್ಯಸನೀಯ ಚೀರತು*
*ನ ಚೀರಮಸ್ಯಾಃ ಪ್ರವಿದೀಯತೇತಿ*
*ನ್ಯವಾರಯದ್ವಸನಂ ವಸಿಷ್ಠಃ॥*

*ಏಕಸ್ಯ ರಾಮಸ್ಯ ವನೇ ನಿವಾಸಃ*
*ತ್ವಯಾವೃತಃ ಕೇಕಯ ರಾಜಪುತ್ರಿ*
*ವಿಭೂಷಿತೇಯಂ ಪ್ರತಿಕರ್ಮ ನಿತ್ಯಾ*
*ವಸತ್ವರಣ್ಯೇ ಸಹರಾಘವೇನ ॥*

ಇದರ ಅರ್ಥ, 'ಎಲೌ ಕೈಕೆ, ಈ ನಾರು ಬಟ್ಟೆಯನ್ನು ಹಿಂದಕ್ಕೆ ತೆಗೆದುಕೊಂಡು ನಿನ್ನ ಸೊಸೆಗೆ ಉತ್ತಮವಾದ ವಸ್ತ್ರಾಭರಣಗಳನ್ನು ಕೊಡು' ಎಂದು ಹೇಳಿ ವಸಿಷ್ಠರು ವಲ್ಕಲವನ್ನು ತಪ್ಪಿಸಿದರು. ಅಲ್ಲದೆ 'ರಾಮನೊಬ್ಬನು ವನವಾಸ ಮಾಡಬೇಕೆಂದು ನೀನು ವರವನ್ನು ಕೇಳಿದ್ದೀಯೆ. ಹೀಗಿರುವುದರಿಂದ ಸದಾಕಾಲವೂ ಅಲಂಕರಿಸಿಕೊಂಡಿರಬೇಕಾದ ಸೀತೆಯು ವಸ್ತ್ರಾಭರಣಗಳಿಂದ ಭೂಷಿತಳಾಗಿ ವನದಲ್ಲಿ ರಾಮನೊಡನೆ ಇರಲಿ' ಎಂದು ಹೇಳಿ ಒಪ್ಪಿಸಿದರು.

ಅಷ್ಟೇ ಅಲ್ಲ. ಪಂಚವಟಿಯಲ್ಲಿ ಸೀತೆಯನ್ನು ಅಪಹರಿಸಲು ಬಂದ ರಾವಣನು ಕೂಡ ಸೀತೆಯ ಎದುರು ನಿಂತು ಮಾತನಾಡುತ್ತ ಅವಳನ್ನು ವರ್ಣಿಸುತ್ತ 'ರತ್ನಾಭರಣಗಳಿಂದ ಕೂಡಿದ ನಿನ್ನ ವಕ್ಷವು ಬಹು ಮನೋಹರವಾಗಿದೆ. ನಿನ್ನ ಕೇಶಪಾಶವು ದೀರ್ಘವಾಗಿದೆ. ನಿನ್ನಂಥ ಹೆಂಗಸನ್ನು ನಾನು ದೇವತೆಗಳಲ್ಲಾಗಲಿ ಗಂಧರ್ವರಲ್ಲಾಗಲಿ ಕಂಡಿಲ್ಲ' ಎನ್ನುತ್ತಾನೆ.

ಹೀಗಿರುವುದರಿಂದ ರಾಮಾಯಣದ ಕಥೆಯನ್ನು ಹೇಳುವುದರಲ್ಲಿ ವಾಲ್ಮೀಕಿ ತಪ್ಪು ಮಾಡಿಲ್ಲವೆಂಬುದು ಸ್ವಯಂ ಸ್ಪಷ್ಟ.

**"ಸ್ಮರಗರಲ ಖಂಡನಂ ಮಮ ಶಿರಸಿ ಮಂಡನಂ ಧೇಹಿ ಪದಪಲ್ಲವಮುದಾರಂ."**

**ಇದು ಎಲ್ಲಿಯ ಮಾತು ?**

ಇದು ಜಯದೇವ ಕವಿಯ 'ಗೀತಗೋವಿಂದ' ಎಂಬ ಸಂಸ್ಕೃತ ಕಾವ್ಯದ ಹತ್ತನೆಯ ಸರ್ಗದಲ್ಲಿ ಬರುವ ಹತ್ತೊಂಬತ್ತನೆಯ ಅಷ್ಟಪದಿಯ ಏಳನೆಯ ಪದ್ಯ. ಆ ಪದ್ಯ ಸಂಪೂರ್ಣವಾಗಿ ಹೀಗಿದೆ.

*ಸ್ಮರಗರಲ ಖಂಡನಂ ಮಮ ಶಿರಸಿ ಮಂಡನಂ*
*ಧೇಹಿ ಪದಪಲ್ಲವಮುದಾರಂ*
*ಜ್ವಲತಿ ಮಯಿ ದಾರುಣೋ ಮದನಕದನಾರುಣೋ*
*ಹರತು ತದುಪಾಹಿತ ವಿಕಾರಂ*

ಕೃಷ್ಣನು ರಾಧೆಯ ಕೋಪವನ್ನು ಶಮನ ಮಾಡಲು ಅವಳಿದ್ದೆಡೆಗೆ ತಾನೇ ಬರುತ್ತಾನೆ. ಅವನು ಬಂದದ್ದರಿಂದ ಸುಮುಖಳಾದ ಅವಳನ್ನು ಸಮೀಪಿಸಿ ಗದ್ಗದ ಕಂಠನಾಗಿ ಅನೇಕ ಸಮಾಧಾನದ ಮಾತುಗಳನ್ನಾಡುತ್ತಾನೆ. ಅವಳನ್ನು 'ಪ್ರಿಯೇ, ಚಾರುಶೀಲೆ' ಎಂದು ಕರೆದು ಗೌರವ ತೋರಿಸುತ್ತಾನೆ. ಆಗ ಅವನಾಡುವ ಮಾತುಗಳಲ್ಲಿ ಈ ಪದ್ಯವು ಒಂದು ಭಾಗವಾಗಿದೆ. ಆ ಒಟ್ಟು ಪದ್ಯದ ಅರ್ಥ ಹೀಗಿದೆ -

"ರಾಧೇ, ಕಾಮವೆಂಬ ವಿಷವನ್ನು ಪರಿಹರಿಸುವ ಔಷಧದ ಚಿಗುರಿನಂತಿರುವ ನಿನ್ನ ಪಾದಗಳನ್ನು ನನ್ನ ತಲೆಯ ಮೇಲೆ ಆಭರಣವಾಗುವಂತೆ ಇಡು. ನನ್ನನ್ನು ಸಹಿಸಲಸಾಧ್ಯವಾದ ಕಾಮಕದನವೆಂಬ ಸೂರ್ಯನು ತಪಿಸುತ್ತಿದ್ದಾನೆ. ನಿನ್ನ ಪಾದಗಳು ಆ ಬಾಧೆಯನ್ನು ನಿವಾರಣೆ

ಮಾಡುವಂತಾಗಲಿ.'

ಆ ಕಾವ್ಯದ ತುಂಬ ಇರುವ ರಸಮಯವಾದ ಸಂದರ್ಭಗಳಲ್ಲಿ ಇದೂ ಒಂದು. ಈ ಶ್ಲೋಕದಲ್ಲಿರುವ 'ಧೇಹಿ' ಶಬ್ದವನ್ನು ಶ್ರೀಕೃಷ್ಣನೇ ಬಂದು ಜಯದೇವನ ಹಸ್ತಪ್ರತಿಯಲ್ಲಿ ಬರೆದು ಹೋದನೆಂದೂ ಜಯದೇವನ ರೂಪದಲ್ಲಿಯೇ ಬಂದು ಬರೆದನೆಂದೂ ಅದನ್ನು ಜಯದೇವನ ಪತ್ನಿ ಕಂಡರೂ ಅವನು ಶ್ರೀಕೃಷ್ಣನೆಂಬುದು ಅವಳಿಗೆ ತಿಳಿಯಲಿಲ್ಲವೆಂದೂ ಅಂತರಾರ್ಥವುಳ್ಳ ಕತೆ ಬಂಗಾಳದಲ್ಲಿ ಜನಜನಿತವಾಗಿದೆ.

**ಏಳೇಳು ಜನ್ಮಗಳು** ಎಂಬುದರ ಬಗ್ಗೆ ನಾನು ಬರೆದ ಅಭಿಪ್ರಾಯವನ್ನು ಆಧರಿಸಿ ಓದುಗರೊಬ್ಬರು ಬರೆದ ಪತ್ರದಲ್ಲಿ ಸ್ವಾರಸ್ಯವಾದ ವಿಷಯವು ಅಡಗಿರುವುದರಿಂದ ಅದನ್ನು ಇಲ್ಲಿ ಗಮನಕ್ಕೆ ತರುತ್ತಿದ್ದೇನೆ. ಪತ್ರ ಹೀಗಿದೆ:

"**ಏಳೇಳು ಜನ್ಮದ** ಕಥೆ ಏನೆಂದು ತಿಳಿಯಬಯಸಿದ್ದೀರಷ್ಟೆ? ನಾನೂ ಆ ಬಗ್ಗೆ ಸಾಕಷ್ಟು ಆಲೋಚಿಸಿದ್ದು ಹಾಗೂ ಸಮಾಲೋಚಿಸಿದ್ದು ತತ್ಫಲವಾದ ನನ್ನ ಅಭಿಪ್ರಾಯ ಹೀಗಿದೆ.

ಸಪ್ತ ದ್ವೀಪಗಳು, ಸಪ್ತ ಧಾತುಗಳು, ಸಪ್ತ ನರಕಗಳು, ಸಪ್ತ ಮಾತೃಕೆಯರು, ಸಪ್ತ ಮಾರುತಗಳು, ಸಪ್ತರ್ಷಿಗಳು, ಸಪ್ತ ಲೋಕಗಳು, ಸಪ್ತ ವರ್ಣಗಳು, ಸಪ್ತ ಸ್ವರಗಳು, ಸಪ್ತ ಸಮುದ್ರಗಳು, ಸಪ್ತಾಶ್ವಗಳು.... ಈ ರೀತಿ ಏಳರ ಹಿರಿಮೆ ಕಂಡ ನಮ್ಮ ಜನಪದವು ಯಾವ ಆಧಾರದ ಬಗ್ಗೆಯೂ ಚಿಂತೆ ಮಾಡದೆ ಇನ್ನಷ್ಟು ಏಳರ ವರ್ಗಗಳನ್ನು ಸೃಷ್ಟಿಸಿತು. ಏಳು ಹೆಡೆಯ ಸರ್ಪ, ಏಳು ಸುತ್ತಿನ ಕೋಟೆ, ಏಳು ಜನ್ಮ..... ಹೀಗೆ.....

ಏಳು ಸಮುದ್ರ ದಾಟಿ ಏಳು ಸಮುದ್ರದಾಚೆ ಇರುವ ರಾಕ್ಷಸ, ಅವನ ಏಳು ಸುತ್ತಿನ ಕೋಟೆಯೊಳಗೆ ಬಂಧಿತಳಾದ ಕುಮಾರಿ, ಏಳು ಹೆಡೆಯ ಸರ್ಪದ ಕಾವಲಿನಲ್ಲಿರುವ ಮಾಣಿಕ್ಯ, ಋಷಿಯ ಶಾಪದಿಂದ ಏಳು ಜನ್ಮ ಕಳೆದು ಕೀಳು ಜನ್ಮವೆತ್ತಿದ್ದ ರಾಕ್ಷಸನ ಶಾಪವಿಮೋಚನೆ, ಏಳು ಹಗಲು ಏಳು ರಾತ್ರಿ (ಏಳು ಕುದುರೆಯ ಮೇಲೆ!) ಪ್ರಯಾಣ ಮಾಡಿ ರಾಜಕುಮಾರನು ಬಂಧಿತಳಾದ ರಾಜಕುಮಾರಿಯನ್ನು ಬಂಧಮುಕ್ತಗೊಳಿಸಿ ಮದುವೆಯಾಗುವುದು - ಈ ರೀತಿ ಮನೋರಂಜನೆಗಾಗಿ ನಮ್ಮ ಪೂರ್ವಿಕರು ಸೃಷ್ಟಿಸಿದ ಕಥೆಗಳಲ್ಲಿ ಅಂಥ ಕಥೆಗಳಿಗಾಗಿ ರೂಪು ತಳೆದ ಅನೇಕ ಏಳುಗಳಲ್ಲೊಂದು ಈ ಏಳು ಜನ್ಮ. ಇದನ್ನೇ ಒತ್ತಿ ಹೇಳಲು ಏಳೇಳು ಜನ್ಮವಾಯಿತು. ಏಳು ಹೆಡೆಗಳ ಸರ್ಪ, ಏಳು ಸಮುದ್ರ, ಏಳು ಸುತ್ತಿನ ಕೋಟೆಗಳಂತೆ ಘನ ಗಂಭೀರಘೋರವಾಗಲು ಏಳು ಜನ್ಮವು ಏಳೇಳು ಜನ್ಮವಾಯಿತು. ಅಂದು ಆ ರಾಕ್ಷಸನಿಗೆ ಏಳು ಜನ್ಮ ಕಳೆದು ಕೀಳು ಜನ್ಮವೆತ್ತಿದಾಕ್ಷಣ ಮೋಕ್ಷ ದೊರೆತರೆ ಇಂದು ನಮ್ಮ ಜನಗಳಿಗೆ ಏಳೇಳು ಜನ್ಮ ಕಳೆದರೂ ಬುದ್ಧಿ ಬರುವುದಿಲ್ಲ!

"ಹೌದು, ಅಂದ ಹಾಗೆ ತಾವು ನನಗೆ ಏಳೇಳು ಜನ್ಮ ಕೃತಜ್ಞನಾಗಿರುವುದು ಸಾಧ್ಯವೇ? ಈ ಜನ್ಮವೇ ತಮ್ಮ ಪಾಲಿನ ಕಡೆಯ ಜನ್ಮವಾಗಿದ್ದರೆ?"

ವಿಶ್ವಾಸದಿಂದ ಬರೆದ ಈ ಆತ್ಮೀಯವಾದ ಪತ್ರದಲ್ಲಿ ತಾತ್ವಿಕವಾದ ಚಿಂತನೆಯೂ ಅಡಗಿರುವುದರಿಂದ ಅದನ್ನು ಇಲ್ಲಿ ಮುದ್ರಿಸಲಾಗಿದೆ. ನಿಜವಾಗಿ ಈ ಸಪ್ತ ಶಬ್ದಕ್ಕೆ ಇರುವ ಪ್ರಾಧಾನ್ಯ ಮತ್ತು ಗೌರವ ನಮ್ಮ ಜನತೆಯಲ್ಲಿ ಅತ್ಯಪೂರ್ವವಾದುದು. ಸಪ್ತಕಪಾಲ, ಸಪ್ತ ಕುಮಾರಿಕಾವದಾನ, ಸಪ್ತಕೋಣ, ಸಪ್ತಗಂಗಾ, ಸಪ್ತಚಕ್ರ, ಸಪ್ತಚ್ಛದ, ಸಪ್ತಜಿಹ್ವ, ಸಪ್ತತಂತು, ಸಪ್ತಪದಿ, ಸಪ್ತರಶ್ಮಿ, ಸಪ್ತವ್ಯಸನ, ಸಪ್ತತಿ ಇತ್ಯಾದಿ.

ಹೀಗಿರುವುದರಿಂದ ಮೇಲಿನ ಸಪ್ತದಲ್ಲಿರುವ ಚಿಂತನದ ಅಂಶಕ್ಕೆ ಅಧಿಕವಾದ ಬೆಲೆ ಬರುತ್ತದೆ. ಈ ಬಗ್ಗೆ ನಿರ್ಮಮತೆಯಿಂದ ಆಲೋಚಿಸಬೇಕಾದದ್ದು ವಿದ್ವಾಂಸರಿಗೆ ಬಿಟ್ಟಿರುವ ವಿಷಯ.

ಕೆಲವರು ಓದುಗರು **ಗಾದೆಗಳ** ಅರ್ಥವನ್ನು ಕುರಿತು ಪ್ರಶ್ನೆಗಳನ್ನು ಕಳಿಸುತ್ತಾರೆ. ಅವುಗಳಲ್ಲಿ

ನಾನು ವಿವರಿಸಿದ ಎರಡು ಗಾದೆಗಳ ವಿವರಣೆ ಇಲ್ಲಿದೆ.

**ಮಳ್ಳಿ ಮಳ್ಳಿ ಮಂಚಕ್ಕೆಷ್ಟೇ ಕಾಲು ಅಂದ್ರೆ ಮೂರು ಮತ್ತೊಂದು ಎಂದಳಂತೆ.**

ಮಳ್ಳಿ ಎನ್ನುವುದು ಮರುಳಿ ಎಂಬ ಶಬ್ದದ ಪರ್ಯಾಯ ಶಬ್ದ. ಆ ಶಬ್ದಕ್ಕೆ ಈ ಸಂದರ್ಭದಲ್ಲಿ ಜಾಣತನಸಪಿದ್ದು ಜಾಣತನ ಇಲ್ಲದವಳಂತೆ ನಟಿಸುವವಳು ಎಂದರ್ಥ. ಅಂಥವಳಿಗೆ ಪ್ರಶ್ನೆ ಕೇಳಿದರೆ ತನಗೆ ಉತ್ತರ ಗೊತ್ತಿಲ್ಲವೆಂಬಂತೆ ತಪ್ಪು ಮಾಡಿ ಕೂಡಲೇ ಸರಿಪಡಿಸಿಕೊಳ್ಳುವವಳು ಅವಳು. ಈ ಗಾದೆಯಲ್ಲಿ ಮಂಚಕ್ಕೆ ಎಷ್ಟು ಕಾಲು ಎಂದು ಕೇಳಿದರೆ ಅವಳಿಗೆ ಗೊತ್ತಿದ್ದರೂ ಉತ್ತರ ಕೊಡುವಾಗ ಮೂರು ಎಂದು ಹೇಳಿ ಸ್ವಲ್ಪ ಅವಕಾಶ ಕೊಟ್ಟು ಮತ್ತೆ ಒಂದು ಎಂದು ಹೇಳುತ್ತಾಳೆ. ಅವಳು ಅಷ್ಟು ಜಾಣೆ. ನಮ್ಮನ್ನೇ ದಡ್ಡರನ್ನಾಗಿ ಮಾಡಬಲ್ಲಳು ಎಂದು ಆ ಗಾದೆಯ ಅರ್ಥ.

**ಅಣ್ಣೆ ಸೊಪ್ಪು ತಿನ್ನಲೂ ಪುಣ್ಯ ಮಾಡಿರಬೇಕು** ಎಂಬ ಗಾದೆಯ ಅರ್ಥವೇನು ?

ಅಣ್ಣೆ ಸೊಪ್ಪು ಎಂಬುದು ಗ್ರಾಮೀಣ ಪ್ರದೇಶದಲ್ಲಿ ವ್ಯಾಪಕವಾಗಿ ಬೆಳೆಯುವ ಸಸ್ಯ. ಒಳ್ಳೆಯ ರುಚಿಕರವಾದ ತರಕಾರಿ. ಹಳ್ಳಿಯ ಕಡೆ ಯಾವ ತರಕಾರಿ ಸಿಗದಿದ್ದರೂ ಈ ಸೊಪ್ಪನ್ನು ಆರಿಸಿಕೊಂಡು ಬರುವುದು ಸುಲಭ. ಅದರ ರುಚಿ ಮತ್ತು ರಾಗಿಮುದ್ದೆಯೊಡನೆ ಅದರ ಸಾಹಚರ್ಯ ಇವು ಗ್ರಾಮೀಣ ಪ್ರದೇಶದ ಸೌಭಾಗ್ಯಗಳಲ್ಲಿ ಒಂದು. ನಗರ ಪ್ರದೇಶದಲ್ಲಿ ಇದರ ಹೆಸರನ್ನು ಕೇಳಿಯೇ ಇರುವುದಿಲ್ಲ. ನಗರದ ಜನರಿಗೆ ಈ ರುಚಿಕರವಾದ ಊಟ ಅಲಭ್ಯ. ಅಲ್ಲದೆ ಬಡತನದಲ್ಲಿ ಬಾಳುವವರಿಗೆ ಇಷ್ಟಾದರೂ ದೇವರು ಕೊಟ್ಟಿದ್ದಾನೆ ಎಂಬ ತೃಪ್ತಿ ಇರುತ್ತದೆ. ಅದೂ ಇಲ್ಲದವರು ಪುಣ್ಯವಂತರು ಹೇಗಾದಾರು ?

## II ಪಾಠ ಮಾಡುವಲ್ಲಿ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ತಲೆದೋರಿದ ಸಂಶಯಗಳು.

**ಯಶಸ್ಸು, ಕೀರ್ತಿ, ವೈಭವ** ದಾನಧರ್ಮಕಾರ್ಯಗಳಿಂದ ಬರುವ ಹೆಸರುವಾಸಿಗೆ ಕೀರ್ತಿಯೆಂದೂ, ಶೌರ್ಯದಿಂದ ಬರುವುದು ಯಶಸ್ಸೆಂದೂ ಭೇದವನ್ನು ಹೇಳುತ್ತಾರೆ. ಆದರೂ ಕಾವ್ಯಗಳಲ್ಲಿ ಈ ಎರಡಕ್ಕೂ ಈ ಎರಡು ಶಬ್ದಗಳನ್ನು ಸಾಮಾನ್ಯವಾಗಿ ಪ್ರಯೋಗಿಸುತ್ತಾರೆ. ವೈಭವ ಎನ್ನುವುದು ವಿಭವ ಶಬ್ದದಿಂದ ಬಂದ ಭಾವನಾಮ. ವಿಭವ ಎಂದರೆ ಐಶ್ವರ್ಯ, ಸಂಪತ್ತು, ಧನಶಕ್ತಿ. ಇವುಗಳಿಂದ ಒದಗುವ ಸುಖಾದಿಗಳಿಗೆ ವೈಭವ ಎನ್ನುತ್ತಾರೆ.

**ಸಹಾನುಭೂತಿ - ಕರುಣೆ** ಸಹಾನುಭೂತಿ ಎಂದರೆ ಅನುಭವವೇ. ಮತ್ತೊಬ್ಬರು ಕಷ್ಟವನ್ನೋ ಹಿಂಸೆಯನ್ನೋ ಅನುಭವಿಸುತ್ತಿದ್ದಾಗ ನಾವೂ ಅವರ ಅನುಭವವನ್ನೇ ಪಡೆದಂತೆ ಭಾವಿಸುವುದು. ಸಹ + ಅನುಭೂತಿ. ಇದು ಮನಸ್ಸಿನಲ್ಲಿ ಅದೇ ಬಗೆಯ ಭಾವನೆಗಳನ್ನು ತಿಳಿದಿರುವಿಕೆ. ಕರುಣೆ ಎಂದರೆ ಇತರರ ದುಃಖವನ್ನು ನಿವಾರಣೆ ಮಾಡುವ ಅಪೇಕ್ಷೆ. ಇದು ಸಹಾನುಭೂತಿಯ ಮುಂದಿನ ಮಜಲು. ಆದ್ದರಿಂದ ಹೆಚ್ಚು ಪ್ರಯೋಜನಕರವಾದದ್ದು. 'ಕರುಣಾಳು ಬಾ ಬೆಳಕೆ' ಎಂಬ ಬಿ. ಎಂ. ಶ್ರೀ ಅವರ ಅನುವಾದವನ್ನು ಗಮನಿಸಿ.

**ಘಟನೆ, ಸಂಗತಿ** ಘಟನೆ ಎನ್ನುವುದು ಏನಾದರೂ ಒಂದು ಆಗುವುದು, ಉಂಟಾಗುವುದು ಅಥವಾ ಎರಡು ವಸ್ತು, ವಿಷಯ ಮುಂತಾದವು ಸೇರುವುದು. ಸಂಗತಿ ಎಂದರೆ ಸಂಬಂಧ, ಸಹವಾಸ, ಸಮಾಗಮ, ಹೊಂದಾಣಿಕೆಯಾಗುವುದು. ಈ ಶಬ್ದಕ್ಕೆ ತುಂಬ ವ್ಯಾಪಕವಾದ ಇತರ ಅರ್ಥಗಳೂ ಇವೆ.

**ಅಂಗಜ, ಮನಸಿಜ, ಮನೋಜ** ಈ ಮೂರೂ ಶಬ್ದಗಳು ಮನ್ಮಥನನ್ನು ನಿರ್ದೇಶಿಸುತ್ತವೆ.

ಅಂಗಾತ್ ಮನಸಃ ಜಾಯತೇ ಎಂದು ವಿವರಣೆ. ತನ್ನ ದೇಹದಿಂದ ಹುಟ್ಟಿದವನು ಅಂಗಜ = ಮಗ. ಮನಸಿಜ ಮನಸ್ಸಿನಲ್ಲಿ ಹುಟ್ಟಿದವನು. ಅಂದರೆ ಅನಂಗ. ಅನಂಗ ಎಂಬ ಶಬ್ದಕ್ಕೆ ದೇಹವಿಲ್ಲದಿರುವವನು ಎಂದರ್ಥ. ನಾಸ್ತಿ ಅಂಗಂ ಆಕಾರೋಯಸ್ಯ ಎಂದು ವಿಗ್ರಹವಾಕ್ಯ. ಮನೋಜ ಎಂದರೂ ಮನಸಿಜ ಎಂದರೂ ಒಂದೇ ಅರ್ಥ.

**ದೈತ್ಯ, ದಾನವ, ಅಸುರ, ರಾಕ್ಷಸ - ಇವರು ಯಾರು?** ಈ ಶಬ್ದಸ್ವರೂಪಗಳ ಜನನ, ಚರಿತ್ರೆಗಳ ಬಗ್ಗೆ ಅನೇಕ ಪುರಾಣಗಳಲ್ಲಿ ಬೇರೆ ಬೇರೆ ವಿಧವಾದ ಕತೆಗಳು ಬರುತ್ತವೆ. ಆಯಾ ಪುರಾಣಕ್ಕೆ ಇತಿಹಾಸಕ್ಕೆ ಅವು ಅನುರೂಪವಾಗಿರುತ್ತವೆ. ಅವೆಲ್ಲವನ್ನೂ ಒಂದೇ ಚಿತ್ರದಲ್ಲಿ ನೀಡಲಾಗುವುದಿಲ್ಲ. ಒಂದೊಂದು ಪುರಾಣವನ್ನೂ ಅನುಸರಿಸಿ ಬೇರೆ ಬೇರೆ ಬರೆಯಬೇಕು. ಉದಾಹರಣೆಗೆ ಭಾಗವತದಲ್ಲಿ ಬ್ರಹ್ಮನಿಂದ ಜನಿಸಿದ ಅಸುರರು ಅವನಿಗೇ ಹಿಂಸೆ ಮಾಡುತ್ತಾರೆ. ಕೊನೆಗೆ ಬ್ರಹ್ಮನು ವಿಷ್ಣುವಿನ ಮೊರೆ ಹೊಕ್ಕು ದೇಹತ್ಯಾಗ ಮಾಡಿದ ಕಥೆ ಬರುತ್ತದೆ. ಭಾಗವತದ ಆರನೇ ಸ್ಕಂಧದಲ್ಲಿ ಈ ಕಥೆ ಬರುತ್ತದೆ. ಸ್ವಾರಸ್ಯವಾಗಿದೆ.

**ಸಮಾವೇಶ, ಸಮ್ಮೇಳನ** ಎರಡೂ ಸಂಸ್ಕೃತ ಶಬ್ದಗಳೇ. ಸಮಾವೇಶ ಎಂದರೆ ಒಂದು ಕಡೆ ಜನ ಒಟ್ಟಿಗೆ ಸೇರುವುದು. ಒಂದು ಸ್ಥಳಕ್ಕೆ ಪ್ರವೇಶಿಸುವುದು. ಸಮ್ಮೇಳನ ಎಂದರೂ ಒಂದೇ ಕಡೆಯಲ್ಲಿ ಎಲ್ಲರೂ ಸೇರುವುದು. ಅರ್ಥ ಒಂದೇ ಆದರೂ ವ್ಯುತ್ಪತ್ತಿ ಬೇರೆ ಬೇರೆ. ಒಂದು ವಿಶ್‌ಧಾತುವಿನಿಂದ ಮತ್ತೊಂದು ಮಿಲ್ ಎಂಬ ಧಾತುವಿನಿಂದ ಬಂದಿದೆ.

**ಉಪಾಖ್ಯಾನ ಎಂದರೇನು?** ಇದು ಸಂಸ್ಕೃತ ಶಬ್ದ. 'ಉಪಾಖ್ಯಾನ' ದಲ್ಲಿ ಉಪ+ ಆಖ್ಯಾನ ಎಂಬ ಎರಡು ಭಾಗಗಳಿವೆ. 'ಉಪ' ಎಂಬುದು ಉಪಸರ್ಗ. ಇದಕ್ಕೆ 'ಸ್ವಲ್ಪ, ಕಡಿಮೆ, ಅಮುಖ್ಯ, ಅಪ್ರಧಾನ' ಎಂಬ ಅರ್ಥಗಳು ಬರುತ್ತವೆ. 'ಆಖ್ಯಾನ' ಎಂಬ ಭಾಗದಲ್ಲಿಯೇ 'ಆ' ಎಂಬ ಮತ್ತೊಂದು ಉಪಸರ್ಗವಿದೆ. ಇದಕ್ಕೆ 'ಚೆನ್ನಾಗಿ' ಎಂದು ಅರ್ಥ. 'ಖ್ಯಾನ' ಎಂದರೆ 'ಹೇಳುವುದು' ಪೂರ್ವಕಥೆಯನ್ನು ಹೇಳುವುದು. ಅದಕ್ಕೆ ಕಲ್ಪಿತವಾದ ಕಥೆ ಎಂಬ ಅರ್ಥವೂ ಇದೆ. ಆಖ್ಯಾನಂ ಪೂರ್ವ ವೃತ್ತೋಕ್ತಿಃ ಎಂದು 'ಸಾಹಿತ್ಯ ದರ್ಪಣ' ಎಂಬ ಅಲಂಕಾರ ಗ್ರಂಥದಲ್ಲಿ ವಿವರಣೆಯನ್ನು ನೀಡಲಾಗಿದೆ. ಒಟ್ಟಿನಲ್ಲಿ 'ಆಖ್ಯಾನ' ಒಂದು ಕಥೆ. 'ಉಪಾಖ್ಯಾನ' ಎಂದರೆ ದೊಡ್ಡ ಕಥೆಯ ನಡುವೆ ಬರುವ ಉಪಕಥೆ.

***೧. ಧ್ಯಾನ= ಏಕಾಗ್ರತೆ= ಆಧ್ಯಾತ್ಮಿಕ ಸಾಧನೆ.***
***೨. ಪ್ರೀತಿ= ಭಾವಪರವಶತೆ= ದೈಹಿಕ ಆಕರ್ಷಣೆ***
***೩. ಆದರ್ಶ= ಧ್ಯೇಯ — ಇವು ಸರಿಯೆ?***

ಈ ಪ್ರಶ್ನತ್ರಯ ಸ್ವಾರಸ್ಯವಾಗಿದೆ. ಒಂದು ಭಾಷೆಯ ಶಬ್ದಗಳನ್ನು ಪರಿಶೀಲಿಸುವಾಗ ನಾವು ಒಂದು ತತ್ವ ಅಥವಾ ಸಿದ್ಧಾಂತವನ್ನು ನೆನಪಿಡಬೇಕು. ಯಾವ ಒಂದು ಶಬ್ದಕ್ಕೂ ಸರಿಸಮಾನವಾದ, ಎಲ್ಲ ವಿಧದಲ್ಲಿ ಸಮಾನವೆಂದು ಹೇಳಬಹುದಾದ ಬೇರೆಯ ಶಬ್ದ ಇರುವುದೇ ಇಲ್ಲ. ಏನಾದರೂ ಸ್ವಲ್ಪ ವ್ಯತ್ಯಾಸ ಇದ್ದೇ ಇರುತ್ತದೆ. ಆದ್ದರಿಂದ ನಿಘಂಟುಕಾರರು ಪ್ರತಿಯೊಂದು ಶಬ್ದವೂ ಹೇಗೆ ವ್ಯುತ್ಪತ್ತಿ ಹೊಂದಿದೆಯೋ ಅದನ್ನು ಅನುಸರಿಸಿ ಮೊದಲ ಅರ್ಥವನ್ನು ಸೂಚಿಸುತ್ತಾರೆ. ಇತರ ಅರ್ಥಗಳೆಲ್ಲವೂ ಸಮೀಪಾರ್ಥಗಳು ಅಥವಾ ವ್ಯಾಕರಣಾರ್ಥಗಳು ಅಥವಾ ಆಲಂಕಾರಿಕ ಅರ್ಥಗಳು. ಒಂದು ಶಬ್ದಕ್ಕೆ ಅರ್ಥ ಹೇಗೆ ಬೆಳೆಯುತ್ತದೆ ಎಂದು ಅಭ್ಯಾಸ ಮಾಡುವುದೇ ಒಂದು ಸ್ವಾರಸ್ಯಕರವಾದ ವ್ಯಾಸಂಗವಾಗುತ್ತದೆ. ಈ ದೃಷ್ಟಿಯಿಂದ ಈ ಮೂರು ಪ್ರಶ್ನೆಗಳಿಗೆ ನಾನು ಉತ್ತರಿಸುತ್ತಿದ್ದೇನೆ.

ಧ್ಯಾನ ಎಂಬ ಶಬ್ದ 'ಧ್ಯೈ ಚಿಂತಾಯಾಮ್' ಎಂಬಂತೆ ಅರ್ಥವನ್ನು ನೀಡುತ್ತದೆ. ೧. ಮನಸ್ಸಿನಲ್ಲಿ ಆಲೋಚನೆ ಮಾಡುವುದು. ಮನನ. ೨. ಪರಮಾತ್ಮನ ಬಗ್ಗೆ ಆಲೋಚನೆ ಮಾಡುವುದು. ೩. ಮನಸ್ಸನ್ನು ಒಂದೇ ವಿಷಯದಲ್ಲಿ ನಿಶ್ಚಂಚಲವಾಗಿ ಇರುವಂತೆ ಮಾಡುವುದು

- ಹೀಗೆ ಅರ್ಥ ಬೆಳೆಯುತ್ತದೆ.

ಏಕಾಗ್ರತೆ ಶಬ್ದಕ್ಕೆ ಮನಸ್ಸಿನ ಮುಂದೆ ಒಂದೇ ತುದಿ ಅಥವಾ ಗುರಿ ಉಳ್ಳದ್ದು ಎಂದರ್ಥ. ಒಂದೇ ವಿಷಯದಲ್ಲಿ ಮನಸ್ಸನ್ನು ನಿಲ್ಲಿಸಿರುವುದು.

**'ಆಧ್ಯಾತ್ಮಿಕ ಸಾಧನೆ'** ಎನ್ನುವುದು ಆತ್ಮನನ್ನು ಕುರಿತು, ಪರಬ್ರಹ್ಮವನ್ನು ಕುರಿತು ಮಾಡುವ ಸಾಧನೆ. ಮೊದಲ ಎರಡು ಮೆಟ್ಟಿಲುಗಳೂ ಈ ಸಾಧನೆಗೆ ಸಹಾಯಕವಾಗುವ ಮನಸ್ಸಿನ ಸ್ಥಿತಿಗಳು. ಆದ್ದರಿಂದ ಮೂರೂ ಬೇರೆ ಬೇರೆ ಅರ್ಥವನ್ನು ಹೊಂದಿವೆ ಎಂದಾಯಿತು.

**'ಪ್ರೀತಿ'** ಶಬ್ದದ ಮೂಲ ತೃಪ್ತಿಪಡಿಸುವುದರಲ್ಲಿದೆ. ಅಲ್ಲಿಂದ ಮುಂದೆ ತೃಪ್ತಿ, ಸಂತೋಷ ಆಮೇಲೆ ಸ್ನೇಹ ಆಮೇಲೆ ಅನುರಾಗ ಹೀಗೆ ಅರ್ಥ ಬೆಳೆಯುತ್ತದೆ. ಇದು ಭಾವಪರವಶತೆಯಂತೂ ಅಲ್ಲ.

**'ಭಾವ'** ಎಂಬುದು ಭೂ= ಉಂಟಾಗು ಎಂಬ ಧಾತುವಿನಿಂದ ವ್ಯುತ್ಪತ್ತಿ ಪಡೆದ ಶಬ್ದ. ಇದಕ್ಕೆ ೧. ಆಶಯ ೨. ಇರುವಿಕೆ. ೩. ಸ್ಥಿತಿ ಎಂಬಂತೆ ಅರ್ಥಗಳು ಬೆಳೆಯುತ್ತವೆ. ಶಾಸ್ತ್ರಗಳಲ್ಲಿ ಈ ಶಬ್ದ ಉಪಯೋಗವಾದಾಗ ಭಾವ, ವಿಭಾವ, ಅನುಭಾವ ಮುಂತಾಗಿ ವಿವಿಧ ರೂಪಗಳನ್ನು ಹೊಂದುತ್ತದೆ. ಸ್ಥಾಯಿಭಾವ, ವ್ಯಭಿಚಾರಿಭಾವ ಮುಂತಾಗಿ ಬೆಳೆಯುತ್ತದೆ. ಈ ಶಬ್ದಕ್ಕೆ ನಿಘಂಟಿನಲ್ಲಿ ಸುಮಾರು ನಲವತ್ತು ಅರ್ಥಗಳನ್ನು ಕೊಡುತ್ತಾರೆ. **'ಭಾವಪರವಶತೆ'** ಎನ್ನುವುದು ಭಾವವು ಉದ್ರೇಕಗೊಂಡಾಗ ಉಂಟಾಗುವ ಮೈಮರೆಯುವಿಕೆ.

**'ದೈಹಿಕ ಆಕರ್ಷಣೆ'** ಇದು ದೇಹ ಸೌಂದರ್ಯದಿಂದ ಉಂಟಾಗುವ ಸೆಳೆತ. ಎಲ್ಲವೂ ಬೇರೆ ಬೇರೆ.

**ಆದರ್ಶ** - ಆ + ದೃಶ್ ಎಂಬುದು ಸೇರಿ ಆಗುವ ಈ ಶಬ್ದಕ್ಕೆ ಕಾಣು, ಎದುರಿಗಿರು, ಕಾಣಿಸಿಕೋ ಎಂಬ ಅರ್ಥಗಳು ಬರುತ್ತವೆ. ಆದ್ದರಿಂದಲೇ 'ಇಲ್ಲಿ ನಮ್ಮ ರೂಪವು ಕಾಣುತ್ತದೆ' ಎಂಬ ಅರ್ಥದಿಂದ, 'ಆದರ್ಶ' ಎಂದರೆ 'ಕನ್ನಡಿ' ಎಂದೂ ಅರ್ಥ. ಆಮೇಲೆ ಬೆಳೆದು ಬಂದ ಅರ್ಥ - ಸ್ವಸಂಪೂರ್ಣವಾದ ಒಂದು ಉದ್ದೇಶ, ಧ್ಯೇಯ.

ಹೀಗೆ ಶಬ್ದಾರ್ಥಗಳು ನಮಗೆ ಕಣ್ಣುಮುಚ್ಚಾಲೆ ಆಡಿಸುತ್ತವೆ.

**ಸಂಸ್ಕೃತದಲ್ಲಿ 'ಕು' ಎಂಬುದು 'ಕೆಟ್ಟದ್ದು' ಎಂಬ ಅರ್ಥವನ್ನು ಕೊಡುತ್ತದೆ. ಆದರೆ 'ಕುಲೀನ' ಎಂಬುದು ಏಕೆ ಒಳ್ಳೆಯ ಅರ್ಥವನ್ನು ಕೊಡಬೇಕು? ಕುಲಟೆ, ಕುಲೀನ ಈ ಬಗೆಯ ವ್ಯತ್ಯಾಸವೇಕೆ?**

ಈ ಎರಡು ಶಬ್ದಗಳಲ್ಲಿಯೂ 'ಕು' ಎಂಬ ಅವ್ಯಯವು ಸೇರಿಲ್ಲ. ಎರಡರಲ್ಲಿಯೂ 'ಕುಲ' ಎಂಬುದು ಮುಖ್ಯ.

**'ಕುಲ'** ಎಂದರೆ ಮನೆ, ಒಳ್ಳೆಯ ವಂಶ ಎಂಬ ಅನೇಕ ಅರ್ಥಗಳಿವೆ. 'ಕುಲಟಾ' ಎಂದರೆ 'ಮನೆಮನೆಗೂ ತಿರುಗಾಡುವ ಅಸಭ್ಯ ಹೆಂಗಸು' ಎಂದರ್ಥ. ಇದೇ ಕನ್ನಡದಲ್ಲಿ ಕುಲಟೆ ಎಂದು ತದ್ಭವವಾಗುತ್ತದೆ. ಅದಕ್ಕೂ 'ಸ್ವೈರಿಣಿ, ವ್ಯಭಿಚಾರಿಣಿ' ಎಂದೇ ಅರ್ಥ.

**'ಕುಲೀನ'** ಎಂದರೆ 'ಸತ್ಕುಲದಲ್ಲಿ ಹುಟ್ಟಿದವನು' ಎಂದರ್ಥ. ಯಸ್ಯಾಸ್ತಿ ವಿತ್ತಂ ಸನರಃ ಕುಲೀನಃ ಸಪಂಡಿತಃ ಸಶ್ರುತವಾನ್ ಗುಣಜ್ಞಃ ಎಂದು ಭರ್ತೃಹರಿ ವ್ಯಂಗ್ಯವಾಗಿ ರಚಿಸಿರುವ ಪದ್ಯವನ್ನು ಗಮನಿಸಿ.

**ಮಾತಿನೊಳಗಿರಲಿ—ಈ ಶಬ್ದದ ಸಂಧಿ ಏನು?**

ಮಾತಿನೊಳಗಿರಲಿ ಈ ಶಬ್ದದಲ್ಲಿ ಎಷ್ಟು ಸಂಧಿಗಳಿವೆ ನೋಡಿ.

೧. ಮಾತು + ಅ = ಮಾತಿನ (ಇನಾಗಮ) ೨. ಮಾತಿನ + ಒಳಗೆ= ಮಾತಿನೊಳಗೆ — ಲೋಪಸಂಧಿ, ೩. ಮಾತಿನೊಳಗೆ + ಇರಲಿ= ಮಾತಿನೊಳಗಿರಲಿ — ಲೋಪಸಂಧಿ.

**ಶರಣರ ವಚನಗಳಿಗೂ ದಾಸರ ಕೀರ್ತನೆಗಳಿಗೂ ಇರುವ ಅಂತರವೇನು?**

ಎರಡಕ್ಕೂ ಸಮಾನವಾದ ಅಂಶಗಳು ಬೇಕಾದಷ್ಟಿವೆ. ಮುಖ್ಯ ಅಂತರ ಅವರುಗಳು ನಂಬುವ ದೇವತೆಯಲ್ಲಿ. ಶರಣರು ಶಿವಭಕ್ತರು. ದಾಸರು ಹರಿಭಕ್ತರು. ಶರಣರು ಗದ್ಯದಲ್ಲಿ ಹೆಚ್ಚಾಗಿ ಬರೆದರು. ದಾಸರು ಪದಗಳನ್ನು ರಚಿಸಿದರು.

**ಭಾರತದ ಎಲ್ಲ ನದಿಗಳ ಹೆಸರೂ ಸ್ತ್ರೀಲಿಂಗದಲ್ಲಿವೆ. ಕೆಲವು ಮಾತ್ರ ಪುಲ್ಲಿಂಗ - ಭದ್ರ, ಭೀಮ, ಕೃಷ್ಣ, ಯಮುನ, ಬ್ರಹ್ಮಪುತ್ರ, ಇದು ಏಕೆ?**

ಭಾರತದ ನದಿಗಳೆಲ್ಲವೂ ಸ್ತ್ರೀ ಎಂದೇ ನಂಬಿಕೆ. ಭದ್ರಾ, ಭೀಮಾ, ಕೃಷ್ಣಾ, ಯಮುನಾ, ಬ್ರಹ್ಮಪುತ್ರಾ ಎಂಬ ನದಿಗಳೂ ಸ್ತ್ರೀಯರೇ. ಎಲ್ಲ ನದಿಗಳೂ ಸ್ತ್ರೀಯರೆಂದೂ ಸಮುದ್ರರಾಜನಿಗೆ ಪತ್ನಿಯರೆಂದೂ ಕವಿಗಳು ವರ್ಣಿಸುತ್ತಾರೆ. ಸಂಸ್ಕೃತದಲ್ಲಿ ನದೀ, ನದ ಎಂಬ ಎರಡು ಶಬ್ದಗಳಿವೆ. 'ನದೀ' ಸ್ತ್ರೀಲಿಂಗ. 'ನದ' ಪುಲ್ಲಿಂಗ. 'ಶೋಣ' ಎಂಬ ನದಿ ಪುರುಷ ಎಂಬ ನಂಬಿಕೆ ಇದೆ. ಇವೆಲ್ಲ ಪುರಾಣ ಕಥೆಗಳಿಗೆ ಸಂಬಂಧಪಟ್ಟ ವಿಷಯಗಳು.

## ರಿಸರ್ಚ್ ಎಂದರೇನು?

**Research**

ಎಂಬುದು ಇಂಗ್ಲಿಷ್ ಶಬ್ದ. ಅದು ಯಾವುದಾದರೂ ಕ್ಷೇತ್ರದಲ್ಲಿ ವ್ಯವಸ್ಥಿತವಾಗಿ ನಡೆಸುವ ವ್ಯಾಸಂಗ—ಇದು ಇರುವ ನಂಬಿಕೆ ಸ್ಥಿತಿಗತಿಗಳು ಸರಿಯೇ ಅಲ್ಲವೇ ಎಂಬುದನ್ನು ಪರೀಕ್ಷಿಸುವುದಕ್ಕೆ ಆಗಬಹುದು ಅಥವಾ ಹೊಸ ವಿಷಯಗಳನ್ನು ಕಂಡುಹಿಡಿಯುವುದಕ್ಕೆ ಎಂದಿರಬಹುದು. ಹೊಸ ವಿಷಯಗಳು ಹೊರಬಂದಂತೆ ಅದು ಸಫಲವಾದ Research ಆಗುತ್ತದೆ. ಈಗಿರುವ ತಿಳಿವಳಿಕೆ ತಪ್ಪೆಂದು ತಿಳಿಸುವುದೂ ಕೂಡ ಒಂದು ಬಗೆಯ ತಿಳಿವಿನ ಪ್ರಗತಿಯೇ ಆಗುತ್ತದೆ. ಕನ್ನಡದ **ಸಂಶೋಧನೆ** ಈ ಮಾತಿಗೆ ಸರಿಹೊಂದುವ, ಸಂಸ್ಕೃತದಿಂದ ಬಂದ ಶಬ್ದ.

## ವಿರುದ್ಧ ಶಬ್ದಗಳು

ಉಪಾಧ್ಯಾಯರಾದವರಲ್ಲಿ ಅನೇಕರಿಗೆ ಈ ಪ್ರಶ್ನೆ ತಲೆದೋರುವುದು ಸಹಜವಾಗಿದೆ. ವಾರ್ಷಿಕ ಪರೀಕ್ಷೆಗಳಲ್ಲಿ ಇಂಥ ಕೆಲವು ಪ್ರಶ್ನೆಗಳನ್ನು ಕೇಳಲೇಬೇಕೆಂದು ಅವರ ಪಠ್ಯ ವಿಷಯಗಳಲ್ಲಿ ನಿಶ್ಚಯಿಸಿರುವುದು ಈ ಬಗೆಯ ಗೊಂದಲಕ್ಕೆ ಕಾರಣವಾಗಿದೆ.

ವಿರುದ್ಧ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ.

೧. ತಡೆಯಲ್ಪಟ್ಟ ೨. ಪ್ರತಿಕೂಲವಾದ ೩. ವಿಪರೀತವಾದ, ತಲೆಕೆಳಗಾದ ೪. ಶತ್ರುವಾದ, ದ್ವೇಷವುಳ್ಳ ಇತ್ಯಾದಿ.

ಇವುಗಳಲ್ಲಿ ಪರೀಕ್ಷೆಯ ದೃಷ್ಟಿಯಿಂದ ಪ್ರತಿಕೂಲವಾದ ಎಂಬುದು ಮುಖ್ಯ. ಆದರೆ ಎಲ್ಲ ಶಬ್ದಗಳಿಗೂ ಪ್ರತಿಕೂಲವಾದ ಶಬ್ದಗಳು ಇರಲೇಬೇಕೆಂಬುದು ಸರಿಯಲ್ಲ. ನೀರು, ಗಾಳಿ, ಶಬ್ದಗಳಿಗೆ ವಿರುದ್ಧ ಶಬ್ದವನ್ನು ಹೇಗೆ ಹುಡುಕುವುದು? ಸಂಸ್ಕೃತದಲ್ಲಿ ಅ, ನಿರ್ ಮುಂತಾದುವುಗಳನ್ನು ಸೇರಿಸಿ ಶಬ್ದಗಳನ್ನು ಸೃಷ್ಟಿ ಮಾಡಬಹುದು. ಆದರೂ ಅವು ವಿರುದ್ಧವಾಗದೆ ಇರಬಹುದು. ವಾತ-ಗಾಳಿ, ನಿರ್ವಾತ-ಗಾಳಿಯಿಲ್ಲದ ಈ ಬಗೆಯ ರೂಪಗಳು ವಿರುದ್ಧ ಶಬ್ದಗಳಲ್ಲ. ಆದುದರಿಂದ ಉಪಾಧ್ಯಾಯರು ತಮ್ಮ ಚರ್ಚಾ ಸಭೆಗಳಲ್ಲಿ ಈ ಬಗ್ಗೆ ವಿವರವಾಗಿ ಪರ್ಯಾಲೋಚಿಸಿ ವಿರೋಧ ಶಬ್ದ ಎಂಬುದಕ್ಕೆ ಒಂದು ಸೂತ್ರವನ್ನು ರಚಿಸಬೇಕು. ಕನ್ನಡ ಭಾಷೆಯ ಶಬ್ದಕ್ಕೆ ಕನ್ನಡ ಭಾಷೆಯದೇ ವಿರೋಧ ಶಬ್ದವನ್ನು ಬರೆಯಬೇಕು.

| | | |
|---|---|---|
| ದಿಟ | x | ಸಟೆ |
| ಮೇಲು | x | ಕೀಳು |

ಹೀಗೆಯೇ ಸಂಸ್ಕೃತವಾದರೆ

| | | |
|---|---|---|
| ಸತ್ಯ | x | ಮಿಥ್ಯ |
| ಸುಖ | x | ದುಃಖ |
| ವಿಸ್ತಾರ | x | ಸಂಕೋಚ |
| ಧೈರ್ಯ | x | ಭಯ - ಇತ್ಯಾದಿ |

ಆದರೆ ಬಾವಿ ಶಬ್ದಕ್ಕೆ ವಿರುದ್ಧ ಪದವಾವುದು ? ಇದಕ್ಕೆ ಸ್ಪಷ್ಟವಾದ ಉತ್ತರ ಸಿಕ್ಕುವುದಿಲ್ಲ. ಅಂಥ ಶಬ್ದಗಳನ್ನು ಬಿಟ್ಟು ವಿರುದ್ಧ ಶಬ್ದಗಳಿರುವ ಶಬ್ದಗಳ ಪಟ್ಟಿಯೊಂದನ್ನು ತಯಾರು ಮಾಡಬೇಕು. ಇದು ಉಪಾಧ್ಯಾಯ ಸಂಘಗಳ ಕೆಲಸ.

ಈ ವಿವರ ಹಾಗಿರಲಿ. ಈ ಕೆಲವು ಶಬ್ದಗಳನ್ನು ನೋಡಿ. ತಂದೆ, ತಾಯಿ, ಹೆಂಡತಿ, ಗಂಡ ಈ ಶಬ್ದಗಳಿಗೆ ವಿರುದ್ಧ ಶಬ್ದಗಳಾವುವು ? ತಂದೆಗೆ ಸ್ತ್ರೀಲಿಂಗ ತಾಯಿ. ಹೆಂಡತಿಗೆ ಗಂಡ ಪುಲ್ಲಿಂಗ ಅಷ್ಟೆ. ಅವು ವಿರುದ್ಧ ಶಬ್ದಗಳಲ್ಲ.

ಇಂಗ್ಲೀಷಿನಲ್ಲಿ opposite ಎಂಬ ಶಬ್ದವಿದೆ. ಅದಕ್ಕೆ ಅರ್ಥ ೧. ಒಂದು ವಸ್ತು ಅಥವಾ ವ್ಯಕ್ತಿಯ ಪ್ರತಿಯಾಗಿ ಇರುವುದು. ೨. ಸಂಪೂರ್ಣವಾಗಿ ಬೇರೆಯಾಗಿರುವುದು. ೩. ಎದುರಿಗೆ ಇರುವುದು ಮುಂತಾದ ಅರ್ಥಗಳಿವೆ. ನಾವು ಈ opposite ಗೆ ವಿರುದ್ಧ ಎಂಬ ಶಬ್ದವನ್ನು ಸಮೀಕರಿಸಿ ಗೊಂದಲಕ್ಕೆ ಸಿಕ್ಕಿಬಿದ್ದಿದ್ದೇವೆ. **ಎದುರು ಪದ** ಎಂಬ ಶಬ್ದವನ್ನು ಉಪಯೋಗಿಸಿದರೆ ಅಥವಾ ಪ್ರತಿಯಾಗಿರುವ ಅರ್ಥದ ಶಬ್ದ ಎಂದು ಉಪಯೋಗಿಸಿದರೆ ಸ್ವಲ್ಪ ವಾಸಿ. ಈ ಬಗ್ಗೆ ತಜ್ಞರೂ ಭಾಷಾ ವಿದ್ವಾಂಸರೂ ಸೇರಿ ಒಂದು ನಿರ್ದಿಷ್ಟವಾದ ತೀರ್ಮಾನವನ್ನು ನೀಡಬೇಕು. ಅಂಥ ಸಭೆಯಲ್ಲಿ ನಾನು ಭಾಗವಹಿಸಲು ಸಿದ್ಧ.

**ಋ, ಐ, ಔ ಎಂಬ ಅಕ್ಷರಗಳನ್ನು ಬೇರೆಯ ರೀತಿಯಲ್ಲಿ ಬರೆಯಬಹುದಾದುದ ರಿಂದ ಕನ್ನಡ ವರ್ಣಮಾಲೆಯಿಂದ ಇವುಗಳನ್ನು ಬಿಡಬಹುದಲ್ಲವೆ ?**

**ೠ** ಕಾರದ ಬಗ್ಗೆ ಇದೇ ಬಗೆಯ ಪ್ರಶ್ನೆಯನ್ನು ಕೇಳುತ್ತಾರೆ. ಕನ್ನಡದಲ್ಲಿ ೠಕಾರವನ್ನು ಬಿಟ್ಟರೆ ಏನೂ ನಷ್ಟವಿಲ್ಲ. ಋಕಾರದಿಂದ ಪ್ರಾರಂಭವಾಗುವ ಯಾವ ಶಬ್ದವೂ ಕನ್ನಡದಲ್ಲಿ ಇಲ್ಲದಿದ್ದರೂ ಋತು, ಋಣ, ಋಷಿ, ಋಕ್ಕು ಮುಂತಾದ ಸಂಸ್ಕೃತ ಶಬ್ದಗಳು ನಮ್ಮ ಸಂಸ್ಕೃತಿಯ ಕೆಲವು ವಿಷಯಗಳನ್ನು ಪ್ರತಿನಿಧಿಸುತ್ತವೆ. ಅಲ್ಲದೆ ಋ, ಐ, ಔ ಎಂಬಂಥ ಅಕ್ಷರಗಳ ಉಚ್ಚಾರಣೆಯನ್ನು ಸರಿಯಾಗಿ ಕಲಿಯುವುದರಿಂದ ವಾಕ್‌ಶುದ್ಧಿಯುಂಟಾಗುತ್ತದೆ. ಇದು ಶಿಕ್ಷಾಶಾಸ್ತ್ರದ ಬಹುಮುಖ್ಯವಾದ ಪ್ರಯೋಜನ. ಸಂಸ್ಕೃತದ ಶಬ್ದಗಳಾದ ಕೈವಲ್ಯ, ಕೈಲಾಸ, ಐಪುರಿ, ಐಕ್ಯ, ಔತ್ಸುಕ್ಯ, ಔರಸ ಮುಂತಾದ ಶಬ್ದಗಳು ನಮ್ಮ ಸಾಹಿತ್ಯದಲ್ಲಿ ಅಪಾರ ಸಂಖ್ಯೆಯಲ್ಲಿ ಪ್ರಯೋಗಗೊಂಡಿವೆ. ಇವುಗಳನ್ನು ಕನ್ನಡದಲ್ಲಿ ಬರೆಯಬೇಕಾದರೆ ಆಯಾ ರೀತಿಗಳಲ್ಲಿಯೇ ಬರೆಯಬೇಕು. ಇವುಗಳಿಂದ ಕನ್ನಡದ ಕಾವ್ಯಗಳಲ್ಲಿ ಬಂಧದ ಬಿಗಿಯೂ ಚೆಲುವೂ ಎದ್ದು ಕಾಣುತ್ತದೆ. ಇವು ನಮ್ಮ ಆಸ್ತಿ. ಅದನ್ನು ನಾವು ಕಳೆದುಕೊಳ್ಳಬಾರದು. ಅಲ್ಲದೆ ಈ ಅಕ್ಷರಗಳು ಸ್ವರಗಳು. ಇವುಗಳ ಸಹಾಯವಿಲ್ಲದೆ ವ್ಯಂಜನಗಳ ಕಾಗುಣಿತವೇ ತಪ್ಪಾಗುತ್ತದೆ. ಆದುದರಿಂದ ಈ ಅಕ್ಷರಗಳನ್ನು ಬಿಡುವ ಆಲೋಚನೆಯನ್ನು ಬಿಡುವುದೇ ಉತ್ತಮ.

**ಋ, ೠ ಎಂಬ ಎರಡು ಅಕ್ಷರಗಳು ಕಾಣಬರುತ್ತವೆ. ಯಾವ ಉಪಯೋಗವೂ ಇಲ್ಲದ ೠಕಾರವನ್ನು ತೆಗೆದರೆ ತಪ್ಪೆ? ಋ, ಕ್ಷ, ಜ್ಞ ಎಂಬ ಮೂರು ಅಕ್ಷರಗಳನ್ನು ಕೈಬಿಟ್ಟಿದ್ದಾರೆ. ಇದು ಸರಿಯೇ ?**

ಮೊದಲು ಋ ವಿಚಾರವಾಗಿ ತಿಳಿದುಕೊಳ್ಳೋಣ. ಸಂಸ್ಕೃತದ ವರ್ಣಮಾಲೆಯಲ್ಲಿ ಇರುವ ಸ್ವರಗಳು ಇವು: ಅ, ಆ, ಇ, ಈ, ಉ, ಊ, ಋ, ೠ, ಌ (ಲೃ, ಎಂದು ಉಚ್ಚರಿಸಬೇಕು).

ಏ, ಐ, ಓ, ಔ – ಒಟ್ಟು ಹನ್ನೆರಡು. ಇವುಗಳಲ್ಲಿ ಅ, ಇ, ಉ, ಋ - ಇವು ಹ್ರಸ್ವ ಸ್ವರಗಳು. ಆ, ಈ, ಊ, ೠ – ಇವು ದೀರ್ಘಸ್ವರಗಳು. ಏ, ಐ, ಓ, ಔ - ಇವು ಸಂಧ್ಯಕ್ಷರಗಳು. ಌ ಎಂಬ ಸ್ವರಕ್ಕೆ ದೀರ್ಘವಿಲ್ಲ. ಸಂಧ್ಯಕ್ಷರಗಳು ಯಾವಾಗಲೂ ದೀರ್ಘ. ಅವಕ್ಕೆ ಹ್ರಸ್ವವಿಲ್ಲ.

ಕನ್ನಡ ವರ್ಣಮಾಲೆಗೂ ಸಂಸ್ಕೃತ ವರ್ಣಮಾಲೆಗೂ ಕೆಲವು ವ್ಯತ್ಯಾಸಗಳಿವೆ. ಕನ್ನಡದಲ್ಲಿ ಉಪಯೋಗದಲ್ಲಿಲ್ಲದ ೠ, ಌ, ಎಂಬ ಅಕ್ಷರಗಳನ್ನು ಕನ್ನಡ ವ್ಯಾಕರಣಕಾರರು ವರ್ಣಮಾಲೆಯಲ್ಲಿ ಸೇರಿಸಿದ್ದಾರೆ. ಸಂಸ್ಕೃತದಲ್ಲಿ ದೀರ್ಘವಿಲ್ಲದ ಌ ಕಾರಕ್ಕೆ ದೀರ್ಘವನ್ನೂ ಸೇರಿಸಿದ್ದಾರೆ. ಸಂಸ್ಕೃತದಲ್ಲಿಲ್ಲದ ಎ. ಒ. ಎಂಬ ಹ್ರಸ್ವ ಸ್ವರಗಳನ್ನೂ ಕನ್ನಡಕ್ಕೆ ಸೇರಿಸಿದ್ದಾರೆ. ಏಕೆಂದರೆ ಅವು ಕನ್ನಡದಲ್ಲಿ ಪ್ರಯೋಗದಲ್ಲಿವೆ.

ಇದು ಚರಿತ್ರೆ. ಋ, ೠ ಸ್ವರಗಳಾಗಿರುವುದರಿಂದ ಹ್ರಸ್ವ ದೀರ್ಘಗಳೆಂಬ ದೃಷ್ಟಿಯಿಂದ ವರ್ಣಮಾಲೆಯಲ್ಲಿ ಉಳಿಸಿಕೊಂಡಿದ್ದಾರೆ. ಋಕಾರವು ಇರುವ ಒಂದು ಹದಿನೈದು ಇಪ್ಪತ್ತು ಪದಗಳು ಕನ್ನಡದಲ್ಲಿಯೂ ಪ್ರಯೋಗದಲ್ಲಿವೆ. ಆದುದರಿಂದ ಋಕಾರ ಇರಬೇಕು. ೠಕಾರವನ್ನು ಬಿಟ್ಟರೆ ಅದರಿಂದ ಯಾವ ನಷ್ಟವೂ ಇಲ್ಲ. ಇದನ್ನು ತಿಳಿದು ಕೆಲವು ವರ್ಣಮಾಲೆಗಳಲ್ಲಿ ೠ ಅಕ್ಷರವನ್ನು ಬಿಟ್ಟಿದ್ದಾರೆ. ಇದರಿಂದ ಕಲಿಯುವ ಮಕ್ಕಳಿಗೆ ಸ್ವಲ್ಪ ಭಾರ ಕಡಿಮೆಯಾಯಿತು ಅಷ್ಟೆ! ಆದರೆ ೠಕಾರವನ್ನು ವ್ಯಂಜನ ಎಂದು ತಿಳಿಯಬಾರದು. ಇದು ನೆನಪಿನಲ್ಲಿರಬೇಕು. ಇನ್ನೊಂದು ಪ್ರಶ್ನೆಯಲ್ಲಿ ಕ್ಷ ಮತ್ತು ಜ್ಞ ಎಂಬ ಎರಡು ಅಕ್ಷರಗಳನ್ನು ವರ್ಣಮಾಲೆಗೆ ಸೇರಿಸಬೇಕೆಂಬ ಅಪೇಕ್ಷೆಯಿದೆ. ಕ್ಷ ಬೇರೆಯ ಸ್ವತಂತ್ರ ಅಕ್ಷರವಲ್ಲ. ಕ ಕಾರಕ್ಕೆ ಷ ಕಾರದ ಒತ್ತುಕೊಟ್ಟ ಸಂಯುಕ್ತಾಕ್ಷರ ಅದು. ಜ್ಞ ಎಂಬುದೂ ಅಷ್ಟೇ. ಜಕಾರಕ್ಕೆ ಞ ಒತ್ತನ್ನು ಕೊಟ್ಟಿರುವ ಸಂಯುಕ್ತಾಕ್ಷರ ಅದು. ೠ ಕಾರದ ಬಗ್ಗೆಯೂ ಒಂದು ಮಾತು ಹೇಳಬಹುದು. **ಪಿತೃ + ಋಣ** ಎಂಬ ಶಬ್ದಗಳು ಸೇರಿದರೆ **ಪಿತೄಣ** ಎಂದೇ ಆಗುತ್ತದೆ. ಆಗ ೠ ಕಾರಕ್ಕೂ ಅಸ್ತಿತ್ವ ಬರುತ್ತದೆ.

ಈ ವಿಚಾರದ ಸ್ಪಷ್ಟತೆಗೆ ಶ್ರೀ ಆರ್. ಎಲ್. ಅನಂತರಾಮಯ್ಯನವರು ರಚಿಸಿರುವ 'ಮುದ್ದುಕನ್ನಡ' ಪುಸ್ತಕವನ್ನು ಅಭ್ಯಾಸ ಮಾಡಿ (ನವಕರ್ನಾಟಕ ಪ್ರಕಟಣೆ). ಅದರಲ್ಲಿರುವ ಕಾಗುಣಿತದ ಪಟ್ಟಿಯನ್ನು ನೋಡಿ ( ಪುಟ.೪೬ ). ೠಕಾರವನ್ನು ಬಿಟ್ಟಿದೆ.

**ಮಾಡಿ, ಮಾಡಿರಿ. ಹೇಳಿ, ಹೇಳಿರಿ. ತಿನ್ನಿ, ತಿನ್ನಿರಿ ಎಂಬಂತೆ ಬಹುವಚನದ ಕ್ರಿಯಾಪದಗಳ ವಿಧಿರೂಪದ ಕೊನೆಯಲ್ಲಿ ರಿ ಸೇರಿಸುವುದು ಸರಿಯೆ?**

ಮಧ್ಯಮ ಪುರುಷದ ಬಹುವಚನ ರೂಪಗಳು–ಇವು ಎರಡೂ ಪ್ರಯೋಗದಲ್ಲಿವೆ. ಇಲ್ಲಿರುವ ಇ-ಇರಿ ಎರಡು ಪ್ರತ್ಯಯಗಳೂ ಹಳಗನ್ನಡದ ಇರ್ ಎಂಬ ಪ್ರತ್ಯಯದ ಬೇರೆ ರೂಪಗಳು. ಆದುದರಿಂದ ಆ ಎರಡು ರೂಪಗಳನ್ನೂ ಉಪಯೋಗಿಸಬಹುದು. ಈ ವಿಷಯದಲ್ಲಿ ಹಿಂದೆ ತೀ. ನಂ. ಶ್ರೀ.ಯವರು ಬರೆದ ಒಂದು ಕಿರುಲೇಖನವಿದೆ. (ಸಮಾಲೋಕನ: ಪುಟ ೨೪೫-೨೫೫).

**ಮಿತ್ರರೊಬ್ಬರು ಶಾಕುಂತಲ ನಾಟಕದ ಬಸವಪ್ಪ ಶಾಸ್ತ್ರಿಗಳ ಅನುವಾದದಿಂದ ಒಂದು ಪದ್ಯವನ್ನು ಬರೆದು ಕಳಿಸಿ ಅದರಲ್ಲಿರುವ ರೋಜಂ ಎಂಬುದಕ್ಕೆ ಗುಲಾಬಿ ಎಂಬ ಅರ್ಥ ಹೊಂದುವುದಿಲ್ಲ. ಏಕೆ? ಎಂದು ಕೇಳಿದ್ದಾರೆ.**

ಇದು ಶಾಕುಂತಲ ನಾಟಕದ ಮೂರನೆಯ ಅಂಕದ ಪ್ರಾರಂಭದಲ್ಲಿರುವ ಪದ್ಯ. ಈ ಅಂಕದಲ್ಲಿ ಪರಸ್ಪರ ಅನುರಾಗದಿಂದ ತಪಿಸುತ್ತಿರುವ ಪ್ರಿಯಪ್ರೇಯಸಿಯರು ಮಿಲನಗೊಳ್ಳುವ ಕಥಾಭಾಗವಿದೆ. ಶಕುಂತಲೆಯನ್ನು ಆಕೆಯ ಸಖಿಯರಾದ ಪ್ರಿಯಂವದೆ ಮತ್ತು ಅನಸೂಯೆ ಇಬ್ಬರೂ ಸಾಂತ್ವನಗೊಳಿಸುತ್ತ ಆಕೆಯ ತಾಪದ ಕಾರಣವನ್ನು ಕೇಳುತ್ತಿರುತ್ತಾರೆ. ಆ ವೇಳೆಗೆ

ದುಷ್ಯಂತನೂ ಅಲ್ಲಿಗೆ ಬಂದು ಅವರಿಗೆ ಕಾಣಿಸಿಕೊಳ್ಳದೆ ಅವರ ಮಾತುಗಳನ್ನು ಕೇಳುತ್ತಿರುತ್ತಾನೆ. ಆ ಸಂದರ್ಭದಲ್ಲಿ ವಿರಹತಾಪದಿಂದ ಬಳಲಿದ ಶಕುಂತಲೆಯನ್ನು ದುಷ್ಯಂತನು ವರ್ಣಿಸುತ್ತಿರುವ ಭಾಗ ಈ ಪದ್ಯದಲ್ಲಿದೆ. ಈ ಪದ್ಯದಲ್ಲಿ **ರೋಜ** ಎಂಬ ಶಬ್ದವೇ ಇಲ್ಲ.

ಅದು **ಉರೋಜ**. ಉರ ಎಂದರೆ ಸಂಸ್ಕೃತದಲ್ಲಿ ಎದೆ ಎಂದರ್ಥ. ಅದರಲ್ಲಿ ಹುಟ್ಟಿದ್ದು ಉರೋಜ=ಸ್ತನ, ಮೊಲೆ. ಆ ಪದ್ಯದ ಪೂರ್ತಿ ಅರ್ಥ ಹೀಗಿದೆ. "ಆಕೆಯ ತೋಳುಗಳು ಬಾಗಿಹೋಗಿವೆ. ಕೆನ್ನೆ ಬಡವಾಗಿದೆ. ಸ್ತನಗಳು ದೃಢತೆಯನ್ನು ಕಳೆದುಕೊಂಡಿವೆ. ಮೈ ಬಿಳಿಚಿಕೊಂಡಿದೆ. ಬಡ ನಡು ಆಯಾಸಗೊಂಡಿದೆ. ಹೀಗಿದ್ದರೂ ಈ ಕೋಮಲೆಯಾದ ಶಕುಂತಲೆ ವಿರಹದಿಂದ ಬೆಂದು ನನಗೆ ವ್ಯಸನವನ್ನೂ ಪ್ರೀತಿಯನ್ನೂ ಒಟ್ಟಿಗೆಯೇ ಉಂಟು ಮಾಡುತ್ತಿದ್ದಾಳೆ. ಅವಳು ಚೈತ್ರಮಾಸದ ಬಿಸಿಗಾಳಿಗೆ ಸಿಕ್ಕಿ ಎಲೆಗಳನ್ನು ಕಳೆದುಕೊಂಡ ವಾಸಂತಿಕೆಯಂತೆ ಕಾಣುತ್ತಿದ್ದಾಳೆ." ಇದೊಂದು ಸುಂದರ ಪದ್ಯ. ರತ್ನಾವಳೀ ಥಿಯೇಟ್ರಿಕಲ್ ಕಂಪನಿಯ ಎ. ವಿ. ವರದಾಚಾರ್ಯರು **ಶಾಕುಂತಲಾ** ನಾಟಕದಲ್ಲಿ ಈ ಪದ್ಯವನ್ನು ಹೇಳಿದುದನ್ನು ನಾನು ಕೇಳಿದ ನೆನಪಿದೆ.

## ಮನಸ್ಸು ಕಲ್ಲಾಗುವುದು. ಇಮೇಜ್ ಎಂದರೇನು?

**ಮನಸ್ಸು ಕಲ್ಲಾಗುವುದು** ಎಂದರೆ ಕಷ್ಟಗಳನ್ನು ಎದುರಿಸುವುದಕ್ಕೆ ಸಿದ್ಧರಾಗುವುದು. ಕಷ್ಟ ಬಂದಿತೆಂದು ಕೈಚೆಲ್ಲಿ ಕೂಡುವುದಲ್ಲ. ಇದು ಒಂದು ಅರ್ಥ. ಮಂಕುತಿಮ್ಮನ ಈ ಕಾವ್ಯವನ್ನು ಗಮನಿಸಿ:

***ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು***
***ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ.***

ಇಲ್ಲಿ ಈ ಅರ್ಥವಿದೆ. 'ನನ್ನ ವಿಚಾರದಲ್ಲಿ ಅವನ ಮನಸ್ಸು ಕಲ್ಲಾಗಿದೆ' ಎಂದರೆ ನನ್ನ ಬಗೆಗೆ ಅವನು ಕರುಣೆಯನ್ನು ತೋರಿಸುವುದಿಲ್ಲ ಎಂದರ್ಥ. "ಕಲ್ಲು ಮನಸಾದಾಗ ನಟ್ಟುದೀ ನೋಟ" (ದುಃಖಸೇತು) ಎಂಬ 'ಶ್ರೀ'ಯವರ ಪ್ರಸಿದ್ಧ ವಾಕ್ಯವನ್ನು ಗಮನಿಸಿ

**ಇಮೇಜ್** ಎಂದರೆ ಪ್ರತೀಕ, ಬಿಂಬ, ಆಕಾರ, ಸ್ವರೂಪ. ಕಂಡರಿಸಿದ ಚಿತ್ರದ ರೇಖೆಯಲ್ಲಿ ಮೂಡಿಸಿದ ಸ್ವರೂಪವೂ ಆಗಬಹುದು. ಇನ್ನೊಂದು ವಸ್ತುವಿನ ಪ್ರತಿಬಿಂಬವಾಗಬಹುದು. ತದ್ರೂಪು ಎಂದಾಗಬಹುದು. ಇಂಗ್ಲಿಷಿನಲ್ಲಿ He has no image ಎಂದರೆ ಸಾರ್ವಜನಿಕರು ಗೌರವಿಸಬಹುದಾದ ವ್ಯಕ್ತಿತ್ವವಿಲ್ಲ ಎಂದರ್ಥ. ಆದರೆ ಕಾವ್ಯದಲ್ಲಿ ಅದಕ್ಕೆ ಬೇರೆ ಅರ್ಥವಿದೆ. ಕಾವ್ಯದಲ್ಲಿ ಒಂದು ಶಬ್ದದಿಂದ, ನುಡಿಗಟ್ಟಿನಿಂದ, ಅಲಂಕೃತ ವಾಕ್ಯಗಳಿಂದ ಓದುಗನ ಮನಸ್ಸಿನಲ್ಲಿ ಸೃಷ್ಟಿಸುವ ಸಾಕಾರ ವಸ್ತುಗಳಿಗೆ ಸಮಾನವಾದ ಪ್ರತೀಕಗಳು IMAGEಗಳು. ಎಲ್ಲ ಸೃಷ್ಟಿಶೀಲ ಕಾವ್ಯದಲ್ಲಿಯೂ ಈ ಪ್ರತೀಕ ನಿರ್ಮಾಣ ಪ್ರಮುಖವಾದ ವಿಶಿಷ್ಟವಾದ ಸತ್ವವಾಗಿರುತ್ತದೆ.

**ಶಬ್ದಗಳಿಗೆ ಸಪ್ತಮೀ ವಿಭಕ್ತಿ ಪ್ರತ್ಯಯವನ್ನು ಹಚ್ಚುವಾಗ 'ಅಲ್ಲಿ' ಎಂದು ಹೇಳುವ ಪ್ರತ್ಯಯವನ್ನು ಸೇರಿಸುತ್ತಾರೆ. ಮನೆಯಲ್ಲಿ, ಶಾಲೆಯಲ್ಲಿ ಇತ್ಯಾದಿ. ಆದರೆ ಕೆಲವರು ಮನೇನಲ್ಲಿ, ಶಾಲೇನಲ್ಲಿ, ಬೀದೀನಲ್ಲಿ ಎಂದು ಉಪಯೋಗಿಸುತ್ತಾರಲ್ಲ. ಈ 'ನಲ್ಲಿ' ಯಾವ ಪ್ರತ್ಯಯ?**

ಭಾಷೆಯು ಉಪಯೋಗವಾಗುವ ಕ್ರಮವನ್ನು ಅನುಸರಿಸಿ ವ್ಯಾಕರಣ ಸೂತ್ರಗಳನ್ನು ವಿದ್ವಾಂಸರು ರಚಿಸಿರುತ್ತಾರೆ. ಆದುದರಿಂದ ಆ ಕ್ರಮವನ್ನು ಬಿಟ್ಟರೆ ಭಾಷೆಯಲ್ಲಿ ತಪ್ಪುಗಳು ಉಂಟಾಗುತ್ತವೆ. ಭಾಷೆಯ ವಿದ್ಯಾರ್ಥಿಗಳು ಇದನ್ನು ನೆನಪಿಡಬೇಕು. ಉದಾ: ಅಕಾರಾಂತವಾದ

ಮೂರು ಲಿಂಗದ ಶಬ್ದಗಳನ್ನು ನೋಡಿ. ರಾಮ ಎಂಬುದು ಸಪ್ತಮೀ ವಿಭಕ್ತಿಯಲ್ಲಿ ರಾಮನಲ್ಲಿ ಎಂದಾಗುತ್ತದೆ. ಹಾಗೆಯೇ ಅಕ್ಕ–ಅಕ್ಕನಲ್ಲಿ ಗಿಡ-ಗಿಡದಲ್ಲಿ. ಇಕಾರಾಂತವನ್ನು ನೋಡಿ. ಹರಿ-ಹರಿಯಲ್ಲಿ, ಗೌರಿ-ಗೌರಿಯಲ್ಲಿ, ಬೀದಿ-ಬೀದಿಯಲ್ಲಿ.

'ಉ' ಕಾರಾಂತವಾದ ಶಬ್ದಗಳನ್ನು ಗಮನಿಸಿ. ಶಂಭು - ಶಂಭುವಿನಲ್ಲಿ. ವಧು - ವಧುವಿನಲ್ಲಿ. ಚೊಂಬು - ಚೊಂಬಿನಲ್ಲಿ. ಹೀಗೆಯೇ 'ಎ' ಕಾರಾಂತ ಶಬ್ದಗಳನ್ನು ನೋಡೋಣ. ಹೆಗ್ಗಡೆ - ಹೆಗ್ಗಡೆಯಲ್ಲಿ. ಸೀತೆ - ಸೀತೆಯಲ್ಲಿ. ಮನೆ-ಮನೆಯಲ್ಲಿ. ಈ ಕ್ರಮವನ್ನರಿತು ಸಪ್ತಮೀ ವಿಭಕ್ತಿಯನ್ನು ಸೇರಿಸಬೇಕು. ಆದುದರಿಂದ ಮನೇನಲ್ಲಿ, ಬೀದೀನಲ್ಲಿ, ಶಾಲೇನಲ್ಲಿ ಎಂಬಂಥ ರೂಪಗಳು ಶುದ್ಧ ಅಬದ್ಧಗಳು.

## ಬತ್ತ – ಭತ್ತ ಇವುಗಳಲ್ಲಿ ಯಾವುದು ಸರಿ.

ಈ ಶಬ್ದದ ಕತೆ ಸ್ವಲ್ಪ ದೊಡ್ಡದಾಗಿದೆ. ಬಹಳ ಹಿಂದಿನಿಂದಲೂ ಈ ಎರಡು ರೂಪಗಳೂ ಪ್ರಚಾರದಲ್ಲಿವೆ; ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಪ್ರಯೋಗವಾಗಿದೆ. ಕ್ರಿ. ಶ. ೬೭೫ರ ಕೊಪ್ಪದ ಶಾಸನ ಒಂದರಲ್ಲಿ, ಕ್ರಿ. ಶ. ೧೦ನೆಯ ಶತಮಾನದ ವಡ್ಡಾರಾಧನೆಯಲ್ಲಿಯೂ ಇದರ ಪ್ರಯೋಗಗಳನ್ನು ಕಾಣಬಹುದು.

ಸಂಸ್ಕೃತದಲ್ಲಿ 'ಭಕ್ತ' ಎಂದರೆ ಧಾನ್ಯ, ಆಹಾರ ಎಂಬ ಅರ್ಥಗಳಿವೆ. ಭಕ್ತಕಂಸ=ಅನ್ನದಪಾತ್ರೆ. ಭಕ್ತಕಾರ = ಅಡಿಗೆ ಮಾಡುವವನು. ಭಕ್ತದಾಸ = ಅನ್ನಕ್ಕಾಗಿ ಜೀತ ಮಾಡುವವನು. ಭಕ್ತಪುಲಾಕ=ಅನ್ನದ ಅಗುಳು. ಭಕ್ತಮಂಡ= ಅನ್ನದ ಗಂಜಿ - ಮುಂತಾದ ಶಬ್ದಗಳಿವೆ. ಪ್ರಾಕೃತದಲ್ಲಿ ಇದು 'ಭತ್ತ' ಆಗುತ್ತದೆ. ಅಲ್ಲಿಂದ ವ್ಯಾಪಕವಾಗಿ ಕನ್ನಡದಲ್ಲಿ 'ಭತ್ತ — ಬತ್ತ' ಎಂಬ ಎರಡು ರೂಪಗಳೂ ಜನರಿಗೆ ಪರಿಚಯವಾಗಿವೆ. ಇಂಗ್ಲಿಷಿನ Paddy ಎಂಬ ಶಬ್ದಕ್ಕೂ batta ಎಂಬ ಶಬ್ದಕ್ಕೂ ಇದೇ ಮೂಲ. ಇದರ ವ್ಯಾಪಕವಾದ ಉಪಯೋಗದ ಮೂಲಕ ಭಾರತದ ಭಾಷೆಗಳಲ್ಲೂ ಯೂರೋಪಿನ ಭಾಷೆಗಳಲ್ಲೂ ಮಲಯಾ ಮುಂತಾದ ಕಡೆಗಳಲ್ಲಿಯೂ ಪ್ರಚಾರದಲ್ಲಿದೆ. ಇದರ ವ್ಯುತ್ಪತ್ತಿಯನ್ನು ಕುರಿತು ಅನೇಕ ವಿದ್ವಾಂಸರು ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಬಗೆಯ ಅಭಿಪ್ರಾಯಗಳ ವ್ಯಾಸಂಗ ತುಂಬ ಸ್ವಾರಸ್ಯಕರವಾಗಿರುತ್ತದೆ.

Paddy ಶಬ್ದಕ್ಕೆ ಇಂಗ್ಲಿಷಿನಲ್ಲಿ ಐರ್ಲೆಂಡ್ ದೇಶದ ವ್ಯಕ್ತಿ ಎಂಬ ಇನ್ನೊಂದು ಅರ್ಥವಿದೆ. ಅದು Patrick ಶಬ್ದದ ಸಂಕ್ಷಿಪ್ತವಾದ ಪ್ರೀತಿ ವಾಚಕ ಶಬ್ದ. ಈ ಎರಡು ಶಬ್ದಗಳನ್ನೂ ಬಲ್ಲ ವಿದ್ವಾಂಸನು ಬರೆದಿರುವ ಒಂದು ವಾಕ್ಯವನ್ನು ನಿಘಂಟುಕಾರರು ಉದಾಹರಿಸುತ್ತಾರೆ.

''In Ireland paddy makes riots, in Bengal raiyats make paddy; and in this lies the difference between the paddy of green Bengal and the paddy of the Emerald isle.''

## III ಶ್ರೀಸಾಮಾನ್ಯರು ಕೇಳಿದ ಪ್ರಶ್ನೆಗಳು

## ಖಂಡೇಂದುಧರ ಎಂದರೇನು ?

ಖಂಡ ಎಂದರೆ ಪೂರ್ಣವಲ್ಲದ, ಅಂದರೆ ಅರ್ಧ. ಇಂದು ಅಂದರೆ ಚಂದ್ರ. ಧರ ಎಂದರೆ ಧರಿಸಿರುವವನು. ಅರ್ಧ ಚಂದ್ರಧರ=ಶಿವ.

### ಹಳ್ಳಿಯ ಜನರು ಕುರಿಆಡುಗಳಿಗೆ ಬದುಕು ಎಂದು ಏಕೆ ಕರೆಯುತ್ತಾರೆ?

ಬದುಕು ಎಂಬ ಕನ್ನಡದ ಶಬ್ದಕ್ಕೆ ಮೂಲ ರೂಪ 'ಬರ್ದುಂಕು.' ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಪ್ರಾಣವನ್ನು ಉಳಿಸಿಕೋ, ಜೀವಧಾರಣೆ ಮಾಡು, ಜೀವಿಸು. ೨. ಜೀವನವನ್ನು ನಡೆಸು, ಹೊಟ್ಟೆ ಹೊರೆ. ೩. ಕಷ್ಟದಿಂದ ಬಿಡುಗಡೆ ಹೊಂದು ೪. ಸಾರ್ಥಕತೆಯನ್ನು ಪಡೆ ೫. ಪಾರಾಗಿ ಹೋಗು, ತಪ್ಪಿಸಿಕೊ ೬. ನೆಮ್ಮದಿಯನ್ನು ಕಾಣು, ಸುರಕ್ಷಿತವಾಗಿರು ೭. ಜೀವನೋಪಾಯ. ಕುರಿಆಡುಗಳು ಹಳ್ಳಿಗಳಲ್ಲಿ ಕೆಲವರಿಗೆ ಜೀವನೋಪಾಯವಾಗಿರುವುದರಿಂದ ಅವುಗಳನ್ನೇ ಬದುಕು ಎಂದು ಕರೆಯುತ್ತಾರೆ.

### NOTES ಈ ಶಬ್ದವನ್ನು ಕನ್ನಡದಲ್ಲಿ ಹೇಗೆ ಉಪಯೋಗಿಸಬೇಕು?

ಕನ್ನಡದಲ್ಲಿ ಇದಕ್ಕೆ ಟಿಪ್ಪಣಿ ಎಂದು ಬರೆಯಬಹುದು. NOTES ಎಂಬ ಬಹುವಚನದ ಇಂಗ್ಲಿಷ್ ಶಬ್ದಕ್ಕೆ ಪಠ್ಯಪುಸ್ತಕಗಳಿಗೆ ಬರೆದ ಕಿರುಪರಿಚಯದ ಗ್ರಂಥ ಎಂದೇ ಅರ್ಥ. ರೂಪಾಯಿಗಳ ನೋಟಿಗೆ NOTE ಎಂದು ಮಾತ್ರ ಉಪಯೋಗಿಸುತ್ತಾರೆ.

### ಸಾಲ ಮಾಡಿಯಾದರೂ ತುಪ್ಪವನು ಕುಡಿ ಎಂದರೇನು?

ಸಾಲ ಮತ್ತು ತುಪ್ಪದ ಸಮಾಚಾರ ಸಂಸ್ಕೃತದ ಒಂದು ಪದ್ಯದಲ್ಲಿ ಬರುತ್ತದೆ. ಆ ಮಾತು ಚಾರ್ವಾಕಮತವೆಂಬ ಒಂದು ಮತದ ಪ್ರಮುಖ ತತ್ವವನ್ನು ತಿಳಿಸುತ್ತದೆ. ಆ ಪದ್ಯ ಹೀಗಿದೆ.

*ಭಸ್ಮೀ ಭೂತಸ್ಯ ದೇಹಸ್ಯ ಪುನರಾಗಮನಃ ಕುತಃ*
*ತಸ್ಮಾತ್ ಸರ್ವಪ್ರಕಾರೇಣ ಋಣಂ ಕೃತ್ವಾ ಘೃತಂ ಪಿಬ ॥*

'ಬೂದಿಯಾದ ದೇಹ ಮತ್ತೆಲ್ಲಿ ಹಿಂದಕ್ಕೆ ಬರುತ್ತದೆ? ಆದ್ದರಿಂದ ಬದುಕಿರುವಾಗಲೇ ಸಾಲ ಮಾಡಿಯಾದರೂ ರುಚಿಯಾದ ಭೋಜನ ಮಾಡು.' ಎಂದು ಆ ಪದ್ಯದ ಅರ್ಥ. ಹೀಗೆ ಹೇಳುವ ಚಾರ್ವಾಕಮತವು ಆರು ನಾಸ್ತಿಕ ದರ್ಶನಗಳಲ್ಲಿ ಒಂದು. 'ಅದನ್ನು ನಂಬುವವರು ನಿರೀಶ್ವರವಾದಿಗಳು. ಇವರಿಗೆ ದೇವರ ಅಸ್ತಿತ್ವದಲ್ಲಿ ನಂಬಿಕೆಯಿಲ್ಲ' ಎಂದು ಅದರ ಅರ್ಥ.

### ಮುಕ್ತಿ - ವಿಮುಕ್ತಿ ಈ ಶಬ್ದಗಳಲ್ಲಿ ಇರುವ ವ್ಯತ್ಯಾಸವೇನು? ಪುಡಾರಿ - ಪುಂಡ- ಈ ಎರಡೂ ಒಂದೇ ಅರ್ಥವನ್ನು ನೀಡುತ್ತವೆಯೇ?

**ಮುಕ್ತಿ** ಎಂದರೆ ಬಿಡುಗಡೆ. ಮುಖ್ಯವಾಗಿ ಸಂಸಾರ ಬಂಧನದಿಂದ ನಿವೃತ್ತಿ. ಇದು ಅಪವರ್ಗ ಎಂಬ ಹೆಸರು ಪಡೆದಿದೆ. ಈ ಶಬ್ದಕ್ಕೆ ವೇದಾಂತದ ದೃಷ್ಟಿಯಿಂದ ತ್ರಿಮತಾಚಾರ್ಯರು ಕಿಂಚಿತ್ ಭೇದದ ವಿವರಣೆಗಳನ್ನು ನೀಡುತ್ತಾರೆ. ವಿಮುಕ್ತಿ ಎಂಬ ಶಬ್ದದಲ್ಲಿ ವಿ ಎಂಬುದು ಒಂದು ಉಪಸರ್ಗ. ಅರ್ಥ ಅದೇ.

**ಪುಂಡ** ಎಂದರೆ ತುಂಟ, ದುಷ್ಟ ಎಂದರ್ಥ. ಆದರೆ ಅದು ವ್ಯಾಪಕವಾಗಿ ನೀತಿಯಿಲ್ಲದವನು, ಪೋಲಿ ಎಂಬ ಅರ್ಥದಲ್ಲಿಯೂ ಉಪಯೋಗವಾಗುತ್ತದೆ. ಅದು ಕನ್ನಡದ ಶಬ್ದ. ದ್ರಾವಿಡ ಭಾಷೆಗಳಲ್ಲಿಯೂ ಮರಾಠೀ ಭಾಷೆಗಳಲ್ಲಿಯೂ ಉಪಯೋಗದಲ್ಲಿದೆ. ಪುಡಾರೀ ಎಂಬುದು ಮರಾಠೀ ಭಾಷೆಯ ಪುಢಾರೀ ಪುಢಾಕಾರೀ ಎಂಬ ಶಬ್ದಗಳಿಂದ ಬಂದುದು. ಆ ಶಬ್ದಕ್ಕೆ ಮುಂದಾಳು, ನಾಯಕ, Leader ಎಂಬ ಅರ್ಥಗಳಿವೆ. ಈಚೀಚೆಗೆ ಈ ಎರಡು ಶಬ್ದಗಳ ಅರ್ಥ ವ್ಯತ್ಯಾಸ ಮಾಯವಾಗುತ್ತಿದೆ.

## ಉಲಕೋಚಿ, ಹರಾಮಿ ಎಂಬ ಶಬ್ದಗಳು ದಾಸ ಸಾಹಿತ್ಯದಲ್ಲಿ ಎಲ್ಲಾದರೂ ದೊರಕುತ್ತವೆಯೇ?

ಈ ಶಬ್ದಗಳು ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಾರದಲ್ಲಿವೆ. ಬೇಂದ್ರೆಯವರು **ಉಲಕೋಚಿ** ಶಬ್ದವನ್ನು ಉಪಯೋಗಿಸಿದ್ದಾರೆ. ಇದಕ್ಕೆ ತುಂಟ, ಕೇಡಿಗ ಎಂದರ್ಥ. ದಕ್ಷಿಣ ಕನ್ನಡದಲ್ಲಿ, ಬೆಂಗಳೂರು ಕಡೆ **ಹರಾಮಿ** ಶಬ್ದವು ಪ್ರಯೋಗದಲ್ಲಿದೆ. ಇದಕ್ಕೆ ಅನ್ಯಾಯದ, ದುಷ್ಟ, ಕೆಡುಕು ಬುದ್ಧಿಯ ಹೆಂಗಸು ಎಂದರ್ಥ. ಹಿಂದೀ ಮತ್ತು ಮರಾಠೀ ಭಾಷೆಯಲ್ಲಿಯೂ ಇದರ ಪ್ರಯೋಗವಿದೆ. ಇದು ಹರಾಮ್ ಶಬ್ದದಿಂದ ಬಂದುದು. ನನ್ನ ಗಮನದಲ್ಲಿ ಇವೆರಡೂ ದಾಸಸಾಹಿತ್ಯದಲ್ಲಿ ಸಿಕ್ಕಿಲ್ಲ. ದಾಸಸಾಹಿತ್ಯಕ್ಕೆ ಸೇರದಂಥ ಶಬ್ದಗಳೇನೂ ಅಲ್ಲ.

## ಚರ್ವಿತಚರ್ವಣ, ಕರತಲಾಮಲಕ ಎಂದರೇನು?

ಸಂಸ್ಕೃತದ ಚರ್ವ್ ಶಬ್ದಕ್ಕೆ ಅಗಿದು ತಿನ್ನು ಎಂದು ಅರ್ಥ. ಚರ್ವಿತ ಎಂದರೆ ಅಗಿದದ್ದು ಚರ್ವಣ ಎಂದರೆ ಅಗಿಯುವುದು. ಚರ್ವಿತಸ್ಯ ಚರ್ವಣಮ್ = ಅಗಿದದ್ದನ್ನು ಅಗಿಯುವುದು. ಆಹಾರವನ್ನು ಅಗಿದ ಮೇಲೆ ಅದರ ಸಾರವೆಲ್ಲ ಗಂಟಲಿನ ಒಳಕ್ಕೆ ಹೋಗಿ ಚರಟ ಮಾತ್ರ ಬಾಯಿಯಲ್ಲಿರುತ್ತದೆ. ಉದಾ: ಕೊಬ್ಬರಿಯ ಚೂರು, ತಾಂಬೂಲ. ಕೊಬ್ಬರಿಯ ಚರಟವನ್ನು ಮತ್ತೆ ಮತ್ತೆ ಅಗಿಯುವುದರಿಂದ ಯಾವ ರುಚಿಯೂ ಒದಗುವುದಿಲ್ಲ. ಅದು ಅಪ್ರಯೋಜಕವಾದ ಕೆಲಸ. ಆದುದರಿಂದ ಚರ್ವಿತ ಚರ್ವಣ ಅಂದರೆ ನಿರುಪಯುಕ್ತವಾದ ಕೆಲಸ ಎಂದು ಅರ್ಥ ಸ್ಪಷ್ಟ. ಇದಕ್ಕೆ ಸಮಾನವಾದ ಮತ್ತೊಂದು ಶಬ್ದವೂ ಇದೆ. ಪಿಷ್ಟ ಪೇಷಣ = ಹಿಟ್ಟನ್ನು ಹಿಟ್ಟು ಮಾಡುವುದು. ಈ ಶಬ್ದಕ್ಕೂ ಅಪ್ರಯೋಜಕವಾದ ಕೆಲಸವನ್ನು ಮಾಡುವುದು ಎಂದೇ ಅರ್ಥ. ಸಂಸ್ಕೃತದಲ್ಲಿ ಈ ಎರಡು ಶಬ್ದಗಳನ್ನು 'ಚರ್ವಿತ ಚರ್ವಣ ನ್ಯಾಯ, ಪಿಷ್ಟ ಪೇಷಣ ನ್ಯಾಯ' ಎಂದು ಲೌಕಿಕ ನ್ಯಾಯಗಳಲ್ಲಿ ಪಟ್ಟಿ ಮಾಡಿದ್ದಾರೆ. ಕನ್ನಡದಲ್ಲಿ ಇದನ್ನೇ ನಾವು **'ತೌಡು ಕುಟ್ಟುವುದು'** ಎಂದು ಕರೆಯುತ್ತೇವೆ. ಕೆಲವರು **'ಗಾಳಿಯನ್ನು ಗುದ್ದುವುದು'** ಎಂದು ವಿವರಿಸುತ್ತಾರೆ. ಈ ಎರಡು ಕೆಲಸಗಳೂ ನಿರುಪಯುಕ್ತ ಕಾರ್ಯಗಳೇ ಅಲ್ಲವೇ! ಕೇವಲ ನಿರುಪಯುಕ್ತ ಎಂದು ಹೇಳುವುದಕ್ಕಿಂತ ಈ ಮೇಲೆ ವಿವರಿಸಿದ ಶಬ್ದಗಳಲ್ಲಿ ಯಾವುದನ್ನು ಉಪಯೋಗಿಸಿದರೂ ಹೆಚ್ಚು ಪರಿಣಾಮಕಾರಿಯಾಗಿ ಇರುತ್ತದೆಂಬುದನ್ನು ಭಾಷೆಯ ಪ್ರಯೋಗದಲ್ಲಿ ಚಾತುರ್ಯವುಳ್ಳವರು ಹೇಳಬಲ್ಲರು.

**ಕರತಲಾಮಲಕ** ಕರತಲ = ಅಂಗೈ. ಆಮಲಕ = ನೆಲ್ಲಿಯ ಕಾಯಿ. ಅಂಗೈನೆಲ್ಲಿಯಕಾಯಿ. ಒಂದು ನೆಲ್ಲಿಯ ಕಾಯಿಯನ್ನು ನಿಮ್ಮ ಅಂಗೈಯಲ್ಲಿಟ್ಟು ನೋಡಿ. ಆ ಕಾಯಿಯ ಸಂಪೂರ್ಣ ಪರಿಚಯವಾಗುತ್ತದೆ. ಬೇಕಾದರೆ ನೀವು ಆ ನೆಲ್ಲಿಯಕಾಯಿಯನ್ನು ಬಾಯಿಗೆ ಹಾಕಿಕೊಂಡು ಅದರ ರುಚಿಯನ್ನೂ ತಿಳಿಯಬಹುದು. ಅದು ನಾರುಕಾಯಿಯೋ, ಹಿಟ್ಟುಕಾಯಿಯೋ ಅದನ್ನೂ ಪರಿಶೀಲಿಸಬಹುದು. ಒಬ್ಬ ವ್ಯಕ್ತಿಗೆ ವೇದಾಂತ ಕರತಲಾಮಲಕವಾಗಿದೆ ಎಂದರೆ ಆ ವಿಷಯದಲ್ಲಿ ಆತನು ಪೂರ್ಣ ಜ್ಞಾನಿ ಎಂದರ್ಥ.

## ಸೋದರಮಾವನನ್ನು ಸಹೋದರ ಮಾವ ಎಂದು ಏಕೆ ಕರೆಯುವುದಿಲ್ಲ?

ಸೋದರ, ಸಹೋದರ ಎಂಬ ಎರಡೂ ಸರಿಯಾದ ಸಂಸ್ಕೃತ ಶಬ್ದಗಳು. ಸ+ಉದರ = ಸೋದರ. ಸಹ+ಉದರ = ಸಹೋದರ. ಮೊದಲಿನಿಂದಲೂ ನೆಂಟತನವನ್ನು ಸೂಚಿಸುವಾಗ ಸೋದರ ಶಬ್ದ ಪ್ರಚಾರದಲ್ಲಿದೆ. ಅದೊಂದು ಅಭ್ಯಾಸ, ಸಂಪ್ರದಾಯ. ಎಲ್ಲರೂ ಒಪ್ಪಿರುವ ಪ್ರಯೋಗವನ್ನು ಬಿಡಬೇಕಾದ ಅಗತ್ಯವಿಲ್ಲ.

**ಅವಗಾಹನೆಗೆ, ವಿನಯದಿಂದ, ನಿವೇದನೆ ಎಂಬ ಶಬ್ದಗಳನ್ನು ಯಾವ ಸಂದರ್ಭಗಳಲ್ಲಿ ಉಪಯೋಗಿಸಬೇಕು ?**

ಸರಕಾರದ ಕಚೇರಿಗಳ ವ್ಯವಹಾರಕ್ಕೆ ಸಂಬಂಧಿಸಿದವು ಈ ಶಬ್ದಗಳು. ಇಂಗ್ಲಿಷಿನಲ್ಲಿ For Perusal ಎಂದು ಬರೆಯುವಾಗ **ಅವಗಾಹನೆಗೆ** ಎಂದೂ Report ಎಂದು ಬರೆಯುವಾಗ ನಿವೇದನೆ ಎಂದೂ Submitted ಎಂದು ಬರೆಯುವಾಗ ವಿನಯದಿಂದ ಎಂದೂ ಬರೆದರೆ ಸರಿಹೋಗುತ್ತದೆ.

**ಚಕ್ಕಲಗುಳಿ ಎಂದರೇನು ?**

ಈ ಶಬ್ದವೂ ಅನೇಕ ಪರ್ಯಾಯ ಉಳ್ಳದ್ದು. ಚಕ್ಕಲಗುಲಿ, ಚಕ್ಕಳಗುಳಿ, ಚಕ್ಕಳಿಗುಳಿ, ಚಕ್ಕುಲಿಗುಲಿ, ಚಕ್ಕುಳಿಗುಳಿ, ಚಿಕ್ಕುಲಗುಲಿ, ಈಗ ಕಚಂಗುಳಿ, ಚಕಂಗುಳಿ ಬೇರೆ ಸೇರಿವೆ. ಇದರ ಅರ್ಥ ಮಾತ್ರ ಎಲ್ಲರಿಗೂ ಗೊತ್ತು. ಈಚೆಗೆ ನಡೆಸಿದ ಬೇರೆ ಬೇರೆ ಗ್ರಂಥಗಳ ವಾಚನದಲ್ಲಿ ನನಗೆ ಜಕ್ಕುಲಿ ಎಂಬ ಶಬ್ದದ ಪರಿಚಯವಾಯಿತು. ಅದಕ್ಕೆ ಕಂಕುಳು ಎಂದರ್ಥ. ಇದು ತಿಳಿದ ಮೇಲೆ ಜಕ್ಕುಲಿಸು ಎಂಬ ಶಬ್ದದ ಸಾಧ್ಯತೆಯು ಬಗ್ಗೆ ನಂಬಿಕೆ ಹುಟ್ಟಿತು. ಆಗ ಮೇಲೆ ತಿಳಿಸಿದ ಎಲ್ಲ ಶಬ್ದಗಳಿಗೂ ಜಕ್ಕುಲಿ, ಜಕ್ಕುಲಿಸು ಎಂಬ ಶಬ್ದಗಳೇ ಮೂಲವೆಂಬುದು ನಿರ್ಧಾರವಾಯಿತು.

**ಚಂದ್ರನನ್ನು ಮಾತ್ರ ಚಂದ್ರಮ್ಮ ಎನ್ನುತ್ತಾರೆ. ಸೂರ್ಯಮ್ಮ ಎಂದೇಕೆ ಇಲ್ಲ ?**

ಯಾರೂ ಚಂದ್ರನನ್ನು ಚಂದ್ರಮ್ಮ ಎಂದು ವರ್ಣಿಸಿಲ್ಲ. ಚಕೋರಂಗೆ ಚಂದ್ರಮನ ಚಿಂತೆ ಎಂಬ ವಚನವನ್ನು ಪರಿಶೀಲಿಸಿ. ಆ ಶಬ್ದ **ಚಂದ್ರಮ** ಅಷ್ಟೆ. ಸಂಸ್ಕೃತದಲ್ಲಿ **ಚಂದ್ರಮಸ** ಎಂಬ ಶಬ್ದವಿದೆ. ಅದರ ಸಂಕ್ಷಿಪ್ತರೂಪ ಚಂದ್ರಮ ಅಷ್ಟೆ. ಭಾರತದಲ್ಲಿ ಯಾವ ಭಾಷೆಯಲ್ಲಿಯೂ ಚಂದ್ರನು ಹೆಂಗಸಾಗಿಲ್ಲ. ಹೆಂಗಸರ ಮುಖಗಳನ್ನು ವರ್ಣಿಸುವಾಗ ಚಂದ್ರಮುಖಿ ಎಂದು ಕರೆಯುತ್ತಾರೆ. ಈಚೆಗೆ ಚಂದ್ರನ ವಿಚಾರವಾಗಿ ವಿಜ್ಞಾನಿಗಳು ಕೊಟ್ಟಿರುವ ವಿವರಣೆಯನ್ನು ಕೇಳಿದ ಮೇಲೆ ಹೆಂಗಸರು ಕೂಡ **ಚಂದ್ರಮುಖಿ** ಎಂದರೆ ಮುಖ ತಿರುಗಿಸುತ್ತಾರೆ. ನೀವು ಸೂರ್ಯನನ್ನೇಕೆ ಹೆಣ್ಣು ಮಾಡಬೇಕು ?

**ರ ಕಾರದ ಹಿಂದೆ ಸೊನ್ನೆ ಇರುವ ಶಬ್ದಗಳಿವೆಯೇ ?**

ಇವೆ. ದಂರೋಟು, ಸಂರಂಭ, ಸಾಂರಾಜ್ಯ ಹೀಗೆ ಇನ್ನಷ್ಟು ಹುಡುಕಬಹುದು.

**ಒಬ್ಬ ಓದುಗರು ಪದಪುಂಜಗಳನ್ನು ಕಳಿಸಿ ಅವುಗಳ ವಿವರಣೆಯನ್ನು ನಿರೀಕ್ಷಿಸಿದ್ದಾರೆ. ವಿಧಿಯ ಕರಾಳ ಛಾಯೆ. ದಾರಿಹೋಕ, ಕಂಬಿಯಿಲ್ಲದೆ ರೈಲು ಬಿಡು.**

ವಿಧಿ, ಹಣೆಯ ಬರಹ ಎಂಬುದು ಹೇಗೆ ವ್ಯವಹರಿಸುತ್ತದೆ ಎಂಬುದನ್ನು ಹೇಳಲಾಗುವುದಿಲ್ಲ. ಅದು ನಮಗೆ ಉಪಟಳವನ್ನುಂಟು ಮಾಡಿದಾಗ ಅದರ ಕರಿಯ ನೆರಳು ನಮ್ಮ ಮೇಲೆ ಬಿದ್ದಿದೆ ಎನ್ನುತ್ತೇವೆ. ಆ ಕರಿಯ ನೆರಳೇ ಕರಾಳವಾದ ಛಾಯೆ. ತುಂಬ ಕಷ್ಟಕರವಾದ ದಿನಗಳು ಎಂದರ್ಥ.

**ದಾರಿಹೋಕ** ಎಂದರೆ ದಾರಿಯಲ್ಲಿ ಓಡಾಡುವವನು ಎಂದರ್ಥ. ಅತಿ ಸಾಮಾನ್ಯ ಮನುಷ್ಯ ಎಂದರ್ಥ. ಸದಾ ಪ್ರಯಾಣದಲ್ಲಿರುವವರನ್ನೂ ದಾರಿಹೋಕರು ಎನ್ನುತ್ತಾರೆ.

**ರೈಲುಬಿಡು** ಎಂದರೆ ಬುರುಡೆ ಹೊಡಿ ಎಂದರ್ಥ. ಸ್ವಲ್ಪವೂ ಆಧಾರವಿಲ್ಲದ ಹೇಳಿಕೆಗೆ ಬುರುಡೆ ಎಂಬ ಹೆಸರು ಸಲ್ಲುತ್ತದೆ. ಬುರುಡೆ, ಖಾಲಿ ಬುರುಡೆ ಬೇರೆ. ರೈಲು

ಮುಂದುವರಿಯಬೇಕಾದರೆ ಕಂಬಿ ಬೇಕು. ಹಾಗೆಯೇ ನೆಲದ ಮೇಲೆ ರೈಲು ಬಿಟ್ಟರೆ ಏನಾಗುತ್ತದೆಯೋ ಹಾಗೆಯೇ ಬುರುಡೆ ಹೊಡೆಯುವುದೂ ನಿಷ್ಫಲವಾದುದು ಎಂದರ್ಥ. ತಳವಿಲ್ಲದೆ ಅಳೆಯುವುದು ಎನ್ನುವುದೂ ಇದೆ.

## IV. ಈ ಶಬ್ದಗಳ ಅರ್ಥವೇನು? ಎಂದು ಕೇಳಿ ಓದುಗರು ಕಳಿಸಿದ ಕೆಲವು ಶಬ್ದಗಳ ಬಗ್ಗೆ ವಿವರಣೆ:-

**ಮೋಜಣಿ** ಎನ್ನುವುದು ಮರಾಠೀ ಭಾಷೆಯ ಶಬ್ದ. ಅಲ್ಲಿಂದ ಕನ್ನಡಕ್ಕೆ ಬಂದಿದೆ. ಭೂಮಿಯನ್ನು ಅಳತೆ ಮಾಡುವುದು ಎಂದು ಅದರ ಅರ್ಥ. ಮೋಜಣೀದಾರ ಎಂಬುದು Surveyor ಎಂಬ ಇಂಗ್ಲೀಷಿನ ಪದಕ್ಕೆ ಸರಿಯಾದುದು. ಮೋಜಣಿ ಖಾತೆ ಎಂದರೆ ಭೂಮಾಪನ ಮಾಡುವ ಇಲಾಖೆ. ಇದು ರೆವಿನ್ಯೂ — ಕಂದಾಯದ ಗಳಿಕೆಗೆ ಬಹಳ ಅಗತ್ಯವಾದ ಇಲಾಖೆ.

**ನಂಜ** ಎಂದರೆ ನೀರಾವರಿ ಭೂಮಿ. ಇದಕ್ಕೆ ನಂಜೆ ಎಂಬ ಪರ್ಯಾಯ ರೂಪವೂ ಇದೆ. ಪುಂಜ, ಪುಂಜೆ ಅಂದರೆ ಒಣಭೂಮಿ, ಕುಷ್ಕಿ ಜಮೀನು. ಇದು ತಮಿಳಿನ ಪುಞ್ಜೈ ಎಂಬ ಶಬ್ದದಿಂದ ಬಂದದ್ದು. ಮಲಯಾಳದಲ್ಲಿ ಪುಞ್ಜ ಎಂಬ ಜ್ಞಾತಿ ಶಬ್ದವಿದೆ. ತುಳುವಿನ ಪುಂಜೋ ಎಂಬುದು ಇದೇ.

**ಬಾಗಾಯ್ತು** ಎಂಬುದು ತೆಂಗು ಅಡಿಕೆ ಮೊದಲಾದವು ಬೆಳೆಯುವ ತೋಟ. ಪಟ್ಟೆ ಜಮೀನು. ಹಿಂದೀ ಬಾಗಾತೀ, ಮರಾಠಿಯ ಬಾಗಾಈತ್ ಎಂಬ ಶಬ್ದಗಳಿಂದ ಕನ್ನಡಕ್ಕೆ ಬಂದಿದೆ.

**ಕುಲ್ಕುಂ, ಕದಿಂ** ಇವು ಉತ್ಸವ ಕಾಲದಲ್ಲಿ ಉಪಯೋಗಿಸುವ ಒಂದು ಬಗೆಯ ಫಿರಂಗಿ.

**ಕುಮ್ಕಿ** ಇದು ವ್ಯವಸಾಯಗಾರನಿಗೆ ಸಹಾಯ ಮಾಡಲು ಸರಕಾರವು ಮಾನ್ಯ ಮಾಡಿರುವ ಭೂಮಿ. 'ಕುಮ್ಕಿ ಹಕ್ಕು' ಎಂಬುದು ಸರಕಾರದ ಅಪ್ಪಣೆಯಿಂದ ಬಂದ ಅಧಿಕಾರ. ಕುಮಕಿ ಆನೆ ಎಂಬುದು ಖೆಡ್ಡಾಗಳಲ್ಲಿ ಆನೆಗಳನ್ನು ಹಿಡಿಯಲು ಉಪಯೋಗಿಸುವ ಪಳಗಿದ ಆನೆ. ಕುಮಕು ಎನ್ನುವುದು ತುರ್ಕಿ ಭಾಷೆಯಿಂದ ಬಂದುದು. ಮರಾಠಿಯಲ್ಲಿ ತುಂಬ ಪ್ರಚಾರದಲ್ಲಿದೆ. ಕುಮಕ್ ಕುಮ್ಮಕ್ಕು ಎಂದರೆ ಸಹಾಯ ಎಂದೇ ಅರ್ಥ.

**ಪಟ್ಟೆ** ಎಂದರೆ ತುಂಡುನೆಲ. ಒಂದು ಜಮೀನಿನ ಸರಿಯಾದ ಅಳತೆ ಮತ್ತು ಅದಕ್ಕೆ ಸಲ್ಲಬೇಕಾದ ಕಂದಾಯಗಳ ವಿವರಗಳನ್ನು ಒಳಗೊಂಡ ಸರ್ಕಾರಿ ದಾಖಲು ಪತ್ರ. ಈ ಶಬ್ದಕ್ಕೆ ಜಮೀನಿಗೆ ಸಂಬಂಧಪಡದ ಇನ್ನೂ ಅನೇಕ ಅರ್ಥಗಳಿವೆ. ಗೆರೆ, ರೇಖೆ, ನಡುಪಟ್ಟಿ, ಚಕ್ರದ ನೇಮಿ, ರೇಷ್ಮೆ ಕಂದಾಯ, ನಾಮ ಇತ್ಯಾದಿ.

**ಬಗರ್ ಹುಕುಂ** ಎಂದರೆ ಯಾವ ಅಧಿಕಾರವೂ, ಯಾರ ಅಪ್ಪಣೆಯೂ, ಇಲ್ಲದ ಎಂದರ್ಥ.

**ಗುಂಟೆ** ಒಂದು ಎಕರೆಯ ನಲವತ್ತನೆಯ ಒಂದು ಭಾಗ. ಕೆಲವು ಭಾಗದಲ್ಲಿ ಕುಂಟೆ ಎಂಬ ವ್ಯವಸಾಯದ ಉಪಕರಣಕ್ಕೂ ಗುಂಟೆ ಎಂದು ಉಪಯೋಗಿಸುತ್ತಾರೆ.

ಹೀಗೆ ಓದುಗರಿಗೆ ತೋರಬಹುದಾದ ಅನೇಕ ಪ್ರಶ್ನೆಗಳಿಗೆ ಈ ನಿಘಂಟಿನಲ್ಲಿ ಉತ್ತರ ದೊರಕುತ್ತದೆ.

ಈ ನಿಘಂಟನ್ನು ಉಪಯೋಗಿಸುವವರು ಇದರ ರಚನೆಯ ಮುಖ್ಯ ಉದ್ದೇಶವನ್ನು ನೆನಪಿಟ್ಟರೆ ಹೆಚ್ಚು ಪ್ರಯೋಜನವಾಗುತ್ತದೆ. ಸಮಾಜವು ಭಾಷೆಯ ಪ್ರಯೋಗದಲ್ಲಿ ತಂದಿರುವ ವ್ಯತ್ಯಾಸಗಳ ಕಡೆಗೆ ಹೆಚ್ಚು ಗಮನವನ್ನು ನೀಡಲಾಗಿದೆ. ಅರ್ಥಗಳಲ್ಲಿ ಸಂಶಯ ಬಂದ ಕಡೆ ಸೂಕ್ತವಾದ ಅರ್ಥವನ್ನು ಸೂಚಿಸಲಾಗಿದೆ. ಶಬ್ದ ಸ್ವರೂಪದ ಬಗ್ಗೆ ಖಚಿತವಾದ ನಿರ್ದೇಶನವಿದೆ. ಈ ದೃಷ್ಟಿಯಿಂದ ಈ ಗ್ರಂಥವನ್ನು ಉಪಯೋಗಿಸಬೇಕಾಗಿ ಸೂಚನೆಯನ್ನು ನೀಡಲಾಗಿದೆ.

ಈ ನಿಘಂಟಿನ ಪ್ರಯೋಜನವನ್ನು ಹೆಚ್ಚಿಸುವ ದೃಷ್ಟಿಯಿಂದ ಓದುಗರಲ್ಲಿ ಒಂದು

ಪ್ರಾರ್ಥನೆಯನ್ನು ಸಲ್ಲಿಸುತ್ತೇನೆ. ಗ್ರಂಥಗಳ ವಾಚನದಲ್ಲಿ ಆಸಕ್ತಿಯುಳ್ಳ ಓದುಗರು ತಮ್ಮ ವಾಚನ ಸಂದರ್ಭದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಈ ಬಗ್ಗೆ ಅವರು ಆ ಸಮಸ್ಯೆಗಳ ಪರಿಹಾರಗಳನ್ನು ಹುಡುಕಿಕೊಂಡು ಹೋಗುವುದು ವಿರಳ. ಸಮಸ್ಯೆ ಕಂಡುಬಂದಾಗ, ಕ್ಲಿಷ್ಟತೆ ಎದುರಾದಾಗ ಅವುಗಳನ್ನೆಲ್ಲ ಗುರುತು ಹಾಕಿ ನನಗಾಗಲಿ, ನವಕರ್ನಾಟಕದ ಕಚೇರಿಗಾಗಲಿ ಕಳುಹಿಸಿದರೆ ತುಂಬ ಉಪಕಾರವಾಗುತ್ತದೆ. ಓದುಗರ ಆಸಕ್ತಿಯ ಬಗ್ಗೆ ನಮಗೆ ಎಚ್ಚರ ಉಂಟಾಗುತ್ತದೆ. ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುವುದಕ್ಕೆ ಉತ್ತೇಜನ ದೊರೆಯುತ್ತದೆ. ಹಾಗೆ ಹೊಸದಾಗಿ ನಮ್ಮ ಗಮನಕ್ಕೆ ಬಂದ ಎಲ್ಲ ಸಮಸ್ಯೆಗಳನ್ನೂ ಪರಿಶೀಲಿಸಿ ಸೂಕ್ತ ಉತ್ತರಗಳನ್ನು ದಾಖಲಿಸಲು ಈ ಗ್ರಂಥದ ಮರುಮುದ್ರಣದಲ್ಲಿ ಅವಕಾಶವನ್ನು ನೀಡಲಾಗುತ್ತದೆ. ಹೀಗೆ ಓದುಗರಿಗೂ ಲೇಖಕರಿಗೂ ಬಾಂಧವ್ಯವನ್ನು ಬೆಳಸುವ ಕಾರ್ಯವನ್ನು ನಾವೆಲ್ಲ ಕೈಗೊಳ್ಳಬೇಕು. ನಮ್ಮ ಓದುಗರು ಈ ಬಗ್ಗೆ ತಮ್ಮ ಸಹಾಯ ಹಸ್ತವನ್ನು ನೀಡುತ್ತಾರೆಂದು ನಾನು ನಂಬಿದ್ದೇನೆ.

ಜಿ. ವೆಂಕಟಸುಬ್ಬಯ್ಯ

ಪ್ರೊ॥ ಜಿ. ವೆಂಕಟಸುಬ್ಬಯ್ಯ

---

# ಇಗೋ ಕನ್ನಡ

---

ಸಾಮಾಜಿಕ ನಿಘಂಟು

## ಅ

**ಅ** - ಹ ಮಾತನಾಡುವಾಗ ಶಬ್ದಗಳಲ್ಲಿ ಬರುವ ಹ ಕಾರವನ್ನು ಅನೇಕರು ಅ ಕಾರದಂತೆ ಉಚ್ಚರಿಸುತ್ತಾರೆ. ಇದಕ್ಕೆ ಒಂದು ಕಾರಣವಿದೆ. ಜನಸಾಮಾನ್ಯರು ಶಬ್ದಗಳ ಉಚ್ಚಾರಣೆಯಲ್ಲಿ ಸೌಲಭ್ಯವನ್ನು ಅಪೇಕ್ಷಿಸುತ್ತಾರೆ. ಅಂಥವರು ಸ್ವಾತಂತ್ರ್ಯವಿರುವುದರಿಂದ ಸುಲಭ ಮಾರ್ಗವನ್ನು ಅನುಸರಿಸುತ್ತಾರೆ. ಹ ಕಾರದ ಉಚ್ಚಾರ ಸ್ವಲ್ಪ ಕಷ್ಟ. ಸಂಸ್ಕೃತ ವ್ಯಾಕರಣಕಾರರ ಪ್ರಕಾರ ಅದು ಮಹಾಪ್ರಾಣ. ಹೀಗೆ ಕಷ್ಟವಾದುದನ್ನು ಸುಲಭ ಮಾಡಿಕೊಳ್ಳಲು ಸಾಮಾನ್ಯರು ಹಕಾರವನ್ನು ಅಕಾರವಾಗಿ ಉಚ್ಚರಿಸುತ್ತಾರೆ. ವಿದ್ಯಾವಂತರಾದವರು ಹಾಗೆ ಮಾಡುವುದಿಲ್ಲ. ಮಕ್ಕಳು ಇನ್ನೂ ಚಿಕ್ಕವರಾಗಿರುವಾಗಲೇ ತಂದೆ ತಾಯಿಗಳು ಈ ಸುಲಭೋಪಾಯವನ್ನು ತಮ್ಮ ಉಚ್ಚಾರಣೆಯ ದೃಷ್ಟಾಂತದಿಂದ ತಪ್ಪಿಸಬೇಕು.

**ಅಂ, ಅಃ - ಅಂ, ಆಃ** - ಈ ಎರಡರಲ್ಲಿ ಯಾವುದು ಸರಿ ? ಇದು ವರ್ಣಮಾಲೆಯಲ್ಲಿ ಅನುಸ್ವಾರ ವಿಸರ್ಗಗಳನ್ನು ಪರಿಚಯ ಮಾಡಿಕೊಡಲು ಕಂಡುಕೊಂಡಿರುವ ಒಂದು ಉಪಾಯ. 'ಂ' — ಇದು ಅನುಸ್ವಾರ. 'ಃ' — ಇದು ವಿಸರ್ಗ. ಇವು ವರ್ಣ ಸಮೂಹದಲ್ಲಿ ಸೇರುವುದಿಲ್ಲ. ಇವುಗಳನ್ನು ಸ್ವತಂತ್ರವಾಗಿ ಉಚ್ಚರಿಸುವುದಕ್ಕೆ ಆಗುವುದಿಲ್ಲ. ಈ ಕಾರಣಗಳಿಂದ ಇವುಗಳನ್ನು ಯೋಗವಾಹಗಳೆನ್ನುತ್ತಾರೆ. ಇವೆರಡೂ ಉಚ್ಚಾರಗೊಳ್ಳಬೇಕಾದರೆ ಇವುಗಳ ಹಿಂದೆ ಸ್ವರಾಕ್ಷರವು ಇರಲೇಬೇಕು. ಆದುದರಿಂದ ವರ್ಣಮಾಲೆಯನ್ನು ಮುದ್ರಿಸಿರುವ ಪಟಗಳಲ್ಲಿ ಅನುಸ್ವಾರ ವಿಸರ್ಗಗಳ ಹಿಂದೆ ಒಂದು ಸ್ವರವನ್ನು ಸೇರಿಸುತ್ತಾರೆ. ಕೆಲವರು ಮುದ್ರಕರು ಅಂ, ಅಃ ಎಂದು ಮುದ್ರಿಸಿದರೆ ಮತ್ತೆ ಕೆಲವರು ಅಂ, ಆಃ ಎಂದು ಮುದ್ರಿಸಿರುತ್ತಾರೆ. ಉಪಾಧ್ಯಾಯರು ಈ ಸ್ವರಗಳ ಸಹಾಯದ ಅಗತ್ಯವನ್ನು ತಿಳಿಸಿದರೆ ಆಗ ಈ ಎರಡು ಪಟಗಳಲ್ಲಿರುವ ವ್ಯತ್ಯಾಸ ಅಮುಖ್ಯವಾಗುತ್ತದೆ. ಆದರೂ ಒಂದೇ ಬಗೆಯ ವರ್ಣಮಾಲೆಯ ಪಟವನ್ನು ಮುದ್ರಿಸುವುದು ಬಾಲಕರಿಗೆ ಹೆಚ್ಚು ಸಹಾಯವನ್ನುಂಟು ಮಾಡುತ್ತದೆ, ಎಂದು ಸ್ಪಷ್ಟವಾಗಿ ಸೂಚಿಸಬಹುದು. **ಅಂ, ಅಃ** ಎಂದೇ ಇದ್ದರೆ ಎಲ್ಲರಿಗೂ ಅನುಕೂಲ. ನೋಡಿ: ಅನುಸ್ವಾರ.

**ಅಂಕ** ಈ ಶಬ್ದಕ್ಕೆ ಸಂಸ್ಕೃತದಲ್ಲಿ ಸುಮಾರು ೩೦ ಅರ್ಥಗಳಿವೆ. ಆದರೆ ಕನ್ನಡದಲ್ಲಿ ಅಂಕ, ಅಂಕಿ, ಅಂಕೆ ಎಂಬ ಮೂರೂ ರೂಪಗಳಲ್ಲಿ ಪ್ರಯೋಗವಾಗುವ ಈ ಶಬ್ದಕ್ಕೆ ಸಂಖ್ಯೆಯನ್ನು ಬರಹದಲ್ಲಿ ತೋರಿಸುವ ಗುರುತು, ಚಿಹ್ನೆ, ಎಂಬುದು ಮುಖ್ಯವಾದ ಅರ್ಥ. ಸಂಸ್ಕೃತದಲ್ಲಿ ಕೂಡ ಈ ಅರ್ಥವಿದೆ. ಒಂದು ಎಂಬುದನ್ನು ೧ ಎಂದು ಗುರುತಿಸುವಂತೆ. ಆದರೆ ಕನ್ನಡದಲ್ಲಿ ಅಂಕಗಳು ಎಂಬ ಬಹುವಚನದ ರೂಪವನ್ನು ಪರೀಕ್ಷೆಯಲ್ಲಿ ವಿದ್ಯಾರ್ಥಿಗಳು ಗಳಿಸುವ ಅಂಕವನ್ನು ಸೂಚಿಸಲು ಉಪಯೋಗಿಸುತ್ತಾರೆ. ಇದು Marks ಎಂಬ ಇಂಗ್ಲಿಷ್ ಶಬ್ದದ ಅನುವಾದ. ಇಂಗ್ಲಿಷಿನಲ್ಲಿ ಕೂಡ Marks ಶಬ್ದವನ್ನು ಉಪಯೋಗಿಸುವಾಗ Marks Card ಎಂಬ ಶಬ್ದ ಪುಂಜದಲ್ಲಿರುವ ರೀತಿಯಲ್ಲಿ ಉಪಯೋಗಿಸುತ್ತಾರೆ. ಒಂದು ಪ್ರಶ್ನಪತ್ರಿಕೆಯಲ್ಲಿ ೧೦ ಪ್ರಶ್ನೆಗಳಿದ್ದರೆ ಪ್ರತಿಯೊಂದು ಪ್ರಶ್ನೆಗೂ ಬೇರೆ ಬೇರೆಯಾಗಿರುವ ಉತ್ತರವನ್ನು ಪರಿಶೀಲಿಸುತ್ತಾರೆ. ಆಗ ಒಟ್ಟಾಗಿ ಬಂದ ಅಂಕಗಳು Marks. ಇದು Out of Hundred ಎಂಬಂತೆ ಸರಿ. ಕನ್ನಡದಲ್ಲಿಯೂ ಅಷ್ಟೆ. ಆದರೆ ಒಟ್ಟು ಒಂದು ಪತ್ರಿಕೆಗೆ ಬರುವ ಒಟ್ಟು ಅಂಕ ಮಾತ್ರ ಏಕವಚನದಲ್ಲಿರಬೇಕು. ೧೦೦ಕ್ಕೆ ೭೦ ಅಂಕ ಬಂದಿದೆ. ಎಲ್ಲ

ಪ್ರಶ್ನೆಗಳಿಗೂ ಒಟ್ಟು ೭೦ ಅಂಕಗಳಾಗುತ್ತವೆ. ಹೀಗೆ ವ್ಯತ್ಯಾಸವಿರಬೇಕು. ಆದರೆ ಈಗ ಮಾತನಾಡುವಾಗ "ನಿನಗೆ ೧೦೦ ಕ್ಕೆ ನೊನ್ನೆ ಅಂಕಗಳು ಬಂದಿವೆ" ಎಂಬಂತೆ ಮಾತನಾಡುತ್ತಾರೆ. ಇದು ತಪ್ಪು. ಕನ್ನಡದಲ್ಲಿ ನೋಟ್ಟು ಎಂಬ ಶಬ್ದದ ಅರ್ಥವನ್ನು ಗಮನಿಸಿ. ಅದಕ್ಕೆ ಟಿಪ್ಪಣಿ ಎಂಬ ಏಕವಚನದ ಅರ್ಥವೇ ಬರುತ್ತದೆ. "ನಿನ್ನ ನೋಟ್ಸು ಕೊಡು. ನಾಳೆ ಅದನ್ನು ಹಿಂದಿರುಗಿಸುತ್ತೇನೆ" ಎಂಬ ವಾಕ್ಯವನ್ನು ನೋಡಿ. ಈ ಬಗೆಯ ಪ್ರಯೋಗಗಳ ಬಗ್ಗೆ ಅಧ್ಯಾಪಕರು ಪರಿಶೀಲನೆ ನಡೆಸಬೇಕು.

**ಅಂಕಟಗದ್ದೆ** ಕುಂದಾಪುರದ ೧೪೪೯ನೆಯ ಇಸವಿಯ ಶಾಸನದಲ್ಲಿ ಈ ಶಬ್ದ ಪ್ರಯೋಗವಾಗಿದೆ. ಈ ಶಬ್ದಕ್ಕೆ ಅರ್ಥ ಏನೆಂದು ಹೇಳುವುದು ಕಷ್ಟ. ಮತ್ತೆ ಎಲ್ಲಾದರೂ ಬೇರೆ ಶಾಸನಗಳಲ್ಲಿ ಈ ಶಬ್ದ ಸಿಕ್ಕಿದರೆ ಆಗ ಸಂದರ್ಭವನ್ನು ಗಮನಿಸಿ ಅರ್ಥವನ್ನು ಹೇಳಬಹುದೇನೋ! ಅಷ್ಟೆ!

**ಅಂಕಣ** ನೋಡಿ: ಅಂಗಳ

**ಅಂಕುರಾರ್ಪಣ** ಈ ಸಂಸ್ಕೃತ ಶಬ್ದಕ್ಕೆ ಅಗೆ ಹಾಕುವುದು ಎಂದರ್ಥ. ಮೊಟ್ಟಮೊದಲು ಧಾನ್ಯಗಳನ್ನು ಮೊಳೆಯಲು ಹಾಕುವುದು. ಇದೊಂದು ಶುಭಕಾರ್ಯ. ರೈತರು ಈ ಕಾರ್ಯಕ್ಕೆ ತುಂಬ ಉತ್ಸಾಹದಿಂದ ಮುಂದೆ ಬರುತ್ತಾರೆ. ಆಶಾವಾದದ ನೆಲೆ ಇಲ್ಲಿದೆ.

**ಅಂಕೆ** ಅಂಕೆ ಎಂಬ ಶಬ್ದಕ್ಕೆ ೧. ಆಜ್ಞೆ, ಅಪ್ಪಣೆ ಎಂದೂ, ೨. ಹತೋಟಿ, ಅಧಿಕಾರ, ಹಿಡಿತ ಎಂದೂ ಬೇರೆ ಬೇರೆ ಅರ್ಥಗಳಿವೆ. ಆದರೆ ಈ ಶಬ್ದವು ಹೇಗೆ ವ್ಯುತ್ಪತ್ತಿಯಾಗಿದೆ ಎಂಬುದರ ಬಗ್ಗೆ ಸಂದೇಹವಿದೆ. ಆಂಕೆ ಎಂದರೆ ಎದುರಿಸುವುದು, ಪ್ರತಿಭಟಿಸುವಿಕೆ ಎಂದರ್ಥ. ತಪ್ಪು ಮಾಡಿದಾಗ ಪ್ರತಿಭಟಿಸಿ ಹತೋಟಿಗೆ ತರುವುದೇ ಅಂಕೆ. ಇವೆರಡಕ್ಕೂ ಏನಾದರೂ ಸಂಬಂಧವಿದೆಯೇ ಎಂಬುದನ್ನು ವಿದ್ವಾಂಸರು ಪರಿಶೀಲಿಸಿ ಇನ್ನೂ ನಿರ್ಧಾರ ಮಾಡಬೇಕಾಗಿದೆ. ಅಂಕೆಯಿಲ್ಲದ ಕಪಿ ಲಂಕೆಯನ್ನು ಸುಟ್ಟಿತು. ಯಾರೂ ಎದುರಿಸಲಾರದ ಹತೋಟಿಗೆ ತರಲಾರದ ಕಪಿ ಎಂದರ್ಥ ಇಲ್ಲಿ. ಆನ್ + ಇಕೆ = ಆನಿಕೆ = ಆಂಕೆ.

**ಅಂಗಡಿ** ಇದು ದ್ರಾವಿಡ ಶಬ್ದ. ಇದರ ಮೂಲ ರೂಪ ಅಂಗಾಡಿ. ಪಂಚದ್ರಾವಿಡ ಭಾಷೆಗಳಲ್ಲಿಯೂ ಇದು ದೊರಕುತ್ತದೆ. ಪದಾರ್ಥಗಳನ್ನು ಮಾರುವ ಸ್ಥಳ ಎಂದು ಇದರ ಅರ್ಥ. ಇದಕ್ಕೆ ಇನ್ನೊಂದು ಅರ್ಥವೂ ಇದೆ. ರುಬ್ಬುವ ಒರಳಿನ ಮೇಲ್ಭಾಗದಲ್ಲಿ ತಿರುವಿದ ಪದಾರ್ಥವು ನಿಲ್ಲುವಂತೆ ಮಾಡಿರುವ ಸ್ಥಳ. ಇದು ವ್ಯಾಪಕವಾದ ಅರ್ಥ. 'ಏನು ಅಂಗಡಿ ಹರಡಿದಿ ?' ಎಂದಾಗ ಅದಕ್ಕೆ ಚೆಲ್ಲಾಪಿಲ್ಲಿಯಾಗಿ ಹರಡಿರುವುದು ಎಂದರ್ಥ.

**ಅಂಗನವಾಡಿ** ೧೮೩೭ನೇ ಇಸವಿಯಲ್ಲಿ ಮಕ್ಕಳಿಗೆ ಶಿಕ್ಷಣವನ್ನು ನೀಡುವ ಬಗ್ಗೆ ಒಂದು ಹೊಸ ಪದ್ಧತಿಯು ಜಾರಿಗೆ ಬಂತು. ಇದನ್ನು ವೈಜ್ಞಾನಿಕವಾಗಿ ವಿವರಿಸಿದವನು ಮನಶ್ಶಾಸ್ತ್ರಜ್ಞನಾದ ಪೆಸ್ಟಲಾಟ್ಸಿ. ಆದರೆ ಅದನ್ನು ಶಿಕ್ಷಣ ಕ್ಷೇತ್ರದಲ್ಲಿ ಜಾರಿಗೆ ತಂದವನು ಜರ್ಮನಿಯ ಆಗಸ್ಟ್ ಫ್ರೋಬೆಲ್. ಈತನು ಒಬ್ಬ ದಾರ್ಶನಿಕ. ಅವನ ಜೀವನದಲ್ಲಿ ಅವನಿಗೆ ತಂದೆ ತಾಯಿಗಳ ಪ್ರೀತಿ ವಿಶ್ವಾಸಗಳು ದೊರಕಲಿಲ್ಲ. ಅದರಿಂದ ನೊಂದವನು ವಯಸ್ಸಿಗೆ ಬಂದಾಗ 'ಮಕ್ಕಳ ಸುಖ ಸಂತೋಷಕ್ಕೆ ತಂದೆ ತಾಯಿಗಳು ಬದುಕಬೇಕು' ಎಂದು ಬೋಧಿಸಿದ. ಅವನ ತತ್ತ್ವದಲ್ಲಿ ಶಾಲೆ ಎನ್ನುವುದು ಒಂದು ಹೂವಿನ ತೋಟ. ಅಲ್ಲಿರುವ ಮಕ್ಕಳು ಪುಷ್ಪಗಳು. ಉಪಾಧ್ಯಾಯರು ಹೂವಿನ ತೋಟಗಾರರು. ಮಕ್ಕಳ ಮನಸ್ಸು ಹೂವಿನಂತೆ ವಿಕಾಸವಾಗಿ ಸಮಾಜಕ್ಕೆ ಜೀವನ ಪರಿಮಳದ ಸೊಗಸನ್ನು ನೀಡಬೇಕೆಂಬುದು ಅವನ ಒಂದು ಹೊಸದಾದ ಶಿಕ್ಷಣ ತತ್ತ್ವ. ಇದನ್ನು ಜರ್ಮನ್ ಭಾಷೆಯಲ್ಲಿ Kindergarten ಎಂದು ಕರೆದರು. ಅದೇ ಈ ವಿಧವಾದ ಪದ್ಧತಿಯ ಮೂಲ.

ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಮನಶ್ಶಾಸ್ತ್ರ ವಿಭಾಗದ ಅಧ್ಯಯನವ

ಪ್ರಾರಂಭಿಸಿದುದು ೧೯೨೪ರಲ್ಲಿ. ಭಾರತದಲ್ಲಿ ಅದೇ ಮೊದಲ ವಿಶ್ವವಿದ್ಯಾಲಯ ಇಂಥ ಅಧ್ಯಯನವನ್ನು ಪ್ರಾರಂಭಿಸುವುದಕ್ಕೆ. ಆ ವಿಭಾಗಕ್ಕೆ ಪ್ರೊ. ಎಂ. ವಿ. ಗೋಪಾಲಸ್ವಾಮಿಯವರು ಮುಖ್ಯಸ್ಥರಾಗಿ ನೇಮಕವಾದರು. ಅವರು ಇಂಗ್ಲೆಂಡಿನಲ್ಲಿ ಪ್ರಸಿದ್ಧ ಮನಶ್ಶಾಸ್ತ್ರಜ್ಞರಲ್ಲಿ ಶಿಕ್ಷಣ ಪಡೆದವರು. ಆಗಿನ B.T.ತರಗತಿಗಳಿಗೆ ಅವರು ಶಿಕ್ಷಣಕ್ಕೆ ಸಂಬಂಧಿಸಿದ ಮನಶ್ಶಾಸ್ತ್ರವನ್ನು ಬೋಧಿಸುತ್ತಿದ್ದರು. ಅವರು ಸುಮಾರು ೧೯೩೧-೩೨ರಲ್ಲಿ ಮಕ್ಕಳ ಶಿಕ್ಷಣದಲ್ಲಿ Kindergarten ಪ್ರಯೋಗ ಮಾಡಲು ಕರ್ನಾಟಕದಲ್ಲಿಯೇ ಮೊದಲ ಶಿಶುವಿಹಾರವನ್ನು ತೆರೆದರು. ದಿ. ರಾಜರತ್ನಂ ಜಿ.ಪಿ. ಅವರು ಅಲ್ಲಿ ಒಂದು ವರ್ಷ ಉಪಾಧ್ಯಾಯರಾಗಿ ಕೆಲಸ ಮಾಡಿದುದು ನನ್ನ ನೆನಪಿಗೆ ಬರುತ್ತದೆ. ಪ್ರೊ. ಗೋಪಾಲಸ್ವಾಮಿಯವರು **ಬಣ್ಣದ ತಗಡಿನ ತುತ್ತೂರಿ** ಎಂಬ ಕವನದಿಂದ ಪ್ರಭಾವಿತರಾಗಿ ರಾಜರತ್ನಂ ಅವರನ್ನು ತಮ್ಮ ಶಿಶುವಿಹಾರಕ್ಕೆ ಆಹ್ವಾನಿಸಿದರು. ಹೀಗಿತ್ತು ಆಗಿನ ಕಾಲ. B.T. ವಿದ್ಯಾರ್ಥಿಯಾಗಿದ್ದಾಗ ನಾನೂ ಅಲ್ಲಿ ಕೆಲವು ಕಾಲ ಬೋಧಿಸಿದೆ. ಶಿಶುವಿಹಾರದ ಹೆಸರು ಜನಪ್ರಿಯವಾದ ಮೇಲೆ ಬಾಲೋದ್ಯಾನ, ಬಾಲವಿಹಾರ, ಬಾಲಿಕಾವಿಹಾರ, ಬಾಲವಾಡಿ ಮುಂತಾಗಿ ಇತರ ಹೆಸರುಗಳೂ ಹುಟ್ಟಿಕೊಂಡವು. ಅಂಗನವಾಡಿ ಎಂಬುದು ಹಿಂದೀ ಪದ. ಮಹಾರಾಷ್ಟ್ರದಲ್ಲಿಯೂ ಇದೇ ಪ್ರಚಾರದಲ್ಲಿದೆ. ಆಂಗನ್ ಎಂದರೆ ಹಿಂದಿಯಲ್ಲಿ ಅಂಗಳ. ಇದು ಸಂಸ್ಕೃತದ ಅಂಗಣ ಶಬ್ದದಿಂದ ಬಂದುದು. ವಾಡಿ ಎಂಬುದು ಸಂಸ್ಕೃತದ ವಾಟೀ ಶಬ್ದದಿಂದ ಬಂದುದು. ವಾಟೀ ಎಂದರೆ ಫಲಪುಷ್ಪಗಳ ತೋಟ. ಇವೆರಡೂ ಸೇರಿ ಆಂಗನವಾಡಿ =ಅಂಗನವಾಡಿ ಆದುವು. ಈ ಶಬ್ದವನ್ನು ಹಿಂದೀ ಪ್ರದೇಶಗಳಲ್ಲಿಯೂ ಮಹಾರಾಷ್ಟ್ರದಲ್ಲಿಯೂ ಉಪಯೋಗಿಸುತ್ತಿದ್ದರು. ಕರ್ನಾಟಕಕ್ಕೆ ಈ ಹೆಸರು ಪ್ರವೇಶವಾದದ್ದು ವಿಚಿತ್ರ ರೀತಿಯಲ್ಲಿ. ೧೯೭೪-೭೫ ರ ವೇಳೆಗೆ ಕೇಂದ್ರ ಸರಕಾರವು ಅಂಗನವಾಡಿಗಳಿಗೆ ಅನುದಾನ ಕೊಡಲು ಮೊದಲು ಮಾಡಿದಾಗ ಕರ್ನಾಟಕದ ಎಲ್ಲ ಭಾಗಗಳಲ್ಲೂ ಈ ಹೆಸರು ಪ್ರಸಿದ್ಧವಾಯಿತು. ಈಗ ಅದೇ ಪ್ರಮುಖವಾಗಿಬಿಟ್ಟಿದೆ. ಹಣದ ಪ್ರಭಾವ ಹೀಗೆ ಭಾಷೆಗಳಲ್ಲಿಯೂ ಕೆಲಸ ಮಾಡುತ್ತದೆ. ಆದರೆ ಶಿಶುವಿಹಾರ ಅಂಗನವಾಡಿಗಳಲ್ಲಿನ ಶಿಕ್ಷಣ ಕ್ರಮದಲ್ಲಿ ಈಗ ಬೇಕಾದಷ್ಟು ಪ್ರಗತಿ ಸಾಧಿತವಾಗಿದೆ.

**ಅಂಗಳ (ಅಂಗಳ, ಅಂಗಣ, ಅಂಕಣ)** ಅಂಗಳ ಕನ್ನಡ ಶಬ್ದ. ಬಯಲಾಗಿರುವ ಪ್ರದೇಶ ಎಂದು ಅದರ ಅರ್ಥ. ಇದು ಮನೆಯ ಭಾಗವಾಗಿರಬಹುದು. ಕೆರೆಯ ಒಳಾಯದ ಬಯಲಾಗಿರಬಹುದು. ದಿ. ವಿ. ಸೀತಾರಾಮಯ್ಯನವರ ಪ್ರಸಿದ್ಧ ಕವನವಾದ ಮನೆ ತುಂಬಿಸುವುದು ಎಂಬುದು ನನ್ನ ನೆನಪಿಗೆ ಬರುತ್ತದೆ. **ನಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು ನಿಮ್ಮ ಮಡಿಲೊಳಗಿಡಲು ತಂದಿರುವೆವು.** ಇದರ ಅರ್ಥ ಸ್ಪಷ್ಟ, ಕೈತೋಟ. ಸಂಸ್ಕೃತದ ಅಂಗಣ ಎಂದರೂ ಇದೇ ಅರ್ಥ, ಬಯಲು. ಕನ್ನಡದ ಮತ್ತು ಸಂಸ್ಕೃತದ ಈ ಎರಡು ಶಬ್ದಗಳಿಗೂ ಸಂಬಂಧವಿರುವಂತಿದೆ. ಸಭಾಂಗಣ ಎಂದರೆ ಇಂದಿನ Lecture Hall, ವಿಸ್ತಾರವಾದ ಪ್ರದೇಶವುಳ್ಳ ಕಟ್ಟಡದ ಒಳಭಾಗ ಎಂದು ಇದರ ಅರ್ಥ. ಸಮರಾಂಗಣ ಎಂದರೆ ಯುದ್ಧರಂಗ. ಕರ್ಣನನ್ನು ಕುಮಾರವ್ಯಾಸನು **ಸಮರಾಂಗಣಕಮಲ ಭೇರುಂಡ** ಎಂದು ವರ್ಣಿಸುತ್ತಾನೆ. ದಿ. ಬೇಂದ್ರೆಯವರ ಹಕ್ಕಿ ಹಾರುತಿದೆ ಎಂಬ ಪ್ರಸಿದ್ಧ ಕವನದ ಈ ಸಾಲನ್ನು ನೆನಪಿಗೆ ತಂದುಕೊಳ್ಳಿ: **ಮಂಗಳಲೋಕದ ಅಂಗಳಕೇರಿ ಹಕ್ಕಿ ಹಾರುತಿದೆ ನೋಡಿದಿರಾ!** ಇದು ಮಂಗಳ ಮುಂತಾದ ಗ್ರಹಗಳು ಇರುವ ಆಕಾಶದ ವಿಸ್ತಾರವಾದ ಬಯಲನ್ನು ಚಿತ್ರಿಸುತ್ತದೆ.

ಅಂಕಣ ಶಬ್ದವೇ ಬೇರೆ. ಮನೆಗಳಲ್ಲಿ ಎರಡು ಕಂಬಗಳ ಅಥವಾ ತೊಲೆಗಳ ನಡುವಣ ಪ್ರದೇಶದ ವಿಸ್ತಾರಕ್ಕೆ ಸಂಬಂಧಿಸಿದುದು ಇದು. ಎಂಟು ಅಂಕಣದ ಮನೆಯನ್ನು

ಕಟ್ಟಿಸಿದ್ದಾನೆ ಎಂದರೆ ಅಷ್ಟು ವಿಸ್ತಾರವಾದ ಮನೆಯನ್ನು ಕಟ್ಟಿಸಿದ್ದಾನೆ ಎಂದು ಅರ್ಥ. ಈಚೆಗೆ ವಾರ್ತಾ ಪತ್ರಿಕೆಗಳ, ನಿಯತಕಾಲಿಕಗಳ ಒಂದೊಂದು ಉದ್ದನೆಯ ಸಾಲಿಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಇಂಗ್ಲಿಷಿನ Columnಎಂಬುದಕ್ಕೆ ಇದು ಸಮಾನಾದುದು. ಇಂಗ್ಲಿಷಿನ ಶಬ್ದಕ್ಕೆ ಮೊದಲ ಒಂದು ಅರ್ಥ ಕಂಬ ಎಂದು = A Pillar. ಇತರ ಅರ್ಥಗಳೂ ಬೆಳೆದು ಬಂದಿವೆ. ಅಂಕಣಕಾರ ಎಂದರೆ ಇಂಗ್ಲಿಷಿನ Columnistಎಂದು ಅರ್ಥ. ಪ್ರತಿದಿನ ಅಥವಾ ಪ್ರತಿವಾರ ಬರುವ ಯಾವುದಾದರೂ ವಿಶೇಷ ವಿಷಯವನ್ನು ಕುರಿತ ಲೇಖನಕ್ಕೆ ಅಂಕಣ ಎಂದು ಹೆಸರು ಬಂದಿದೆ. ಇದು ದೇಶ್ಯ ಶಬ್ದವಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ಅಂಗೈನೆಲ್ಲಿಯಕಾಯಿ** ನೋಡಿ: ಪ್ರವೇಶ ಸಿದ್ಧತೆ, ಪುಟ ೩೫.

**ಅಂಜಲಿ** ಅಂಜಲಿ ಇದು ಸಂಸ್ಕೃತದ ಶಬ್ದ. ಇದಕ್ಕೆ ಬೊಗಸೆ; ಜೋಡಿಸಿದ ಕೈಗಳ ಸಂಪುಟ ಎಂದರ್ಥ. ಹೀಗೆ ಕೈಜೋಡಿಸುವುದರಿಂದ ಭಕ್ತಿಯು ಅಭಿವ್ಯಕ್ತವಾಗುತ್ತದೆ. ಇತರರಿಗೆ ಪ್ರಣಾಮ ಮಾಡುವುದನ್ನು ತೋರ್ಪಡಿಸುವುದರಿಂದ ಇದಕ್ಕೆ ಅಂಜಲಿ ಎಂದು ಹೆಸರು. ವೇದಾಭ್ಯಾಸ ಮಾಡುವಾಗ ಅಭ್ಯಾಸದ ಅಂಗವಾಗಿ ಕೈಜೋಡಿಸುವುದು ಎಂಬ ಅರ್ಥವೂ ಉಂಟು. 'ವೇದಪಾಠ ಸಮಯೇ ಅಧ್ಯಯನಾಂಗಭೂತಾಂಜಲಿ ನಾಮ' ಎಂದು ಅಮರದಲ್ಲಿ ಟೀಕೆಯಿದೆ.

**ಅಂಜು** ಎಂಬ ಶಬ್ದಕ್ಕೆ ಅರ್ಥವೇನು ? ಅದಕ್ಕೆ ವಿರುದ್ಧ ಪದ ಯಾವುದು ? 'ಅಂಜು' ಶಬ್ದಕ್ಕೆ ಹೆದರು, ಹಿಂಜರಿ, ಭಯಪಡು, ದಿಗಿಲು ಬೀಳು ಮುಂತಾಗಿ ಅರ್ಥಗಳಿವೆ. ಇದು ಕ್ರಿಯಾಪದ. 'ಅವನು ಹುಲಿಗೆ ಅಂಜುತ್ತಾನೆ. ಇವನು ಇಲಿಗೂ ಅಂಜುತ್ತಾನೆ' ಎಂಬ ವಾಕ್ಯವನ್ನು ನೋಡಿ. ಎಲ್ಲ ಶಬ್ದಗಳಿಗೂ ವಿರುದ್ಧ ಶಬ್ದಗಳಿರಲೇಬೇಕೆಂಬ ನಿಯಮವೆಲ್ಲಿದೆ ? ಇದು ಶಾಲೆಗಳಲ್ಲಿ ಪರೀಕ್ಷೆಯ ಸಮಯದಲ್ಲಿ ಉಪಾಧ್ಯಾಯರು ನೀಡುವ ಪ್ರಶ್ನೆಗಳ ಬಗ್ಗೆ ಬೆಳೆದಿರುವ ಕುತೂಹಲ, ಇರಲಿ. ಅಂಜು ಶಬ್ದಕ್ಕೆ ವಿರುದ್ಧ ಶಬ್ದವನ್ನು ಬರೆಯಲೇಬೇಕೆಂದರೆ ಎದುರಿಸು, ಎದುರಿಡು ಎಂದಾಗಬಹುದು. ಆದರೆ ಅಂಜಿಕೆಗೆ ಎದೆಗಾರಿಕೆ, ಗಂಡು, ಧೈರ್ಯ ಮುಂತಾದುವನ್ನು ಸೂಚಿಸಬಹುದು.

**ಅಂತ** ಈ ಸಂಸ್ಕೃತ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧ ಕೊನೆ, ನಾಶ, ಸಾವು. ೨. ಬಟ್ಟೆಯ *ಸೆರಗು, ಅಂಚು, ತುದಿ,* ೩. *ಹತ್ತಿರ* ೪. *ಎಲ್ಲೆ, ಗಡಿ* ೫. *ಒಳಭಾಗ, ಒಳಪ್ರಾಂತ* ೬. ಮುಕ್ತಾಯ, ಮುಗಿತಾಯ. ಇದು ಸೇರಿದಾಗ ಅನೇಕ ಸೊಗಸಾದ ಸಮಾಸಗಳಾಗುತ್ತವೆ. ಅಂತಃಕಲಹ =ಒಳಜಗಳ. ಅವರ ಮನೆತನದಲ್ಲಿ ತುಂಬ ಅಂತಃಕಲಹಗಳಿವೆ. ಅಂತಃಪುರ =ರಾಣಿಯರ ವಾಸಸ್ಥಳ. ರಾಜನು ರಾಣಿಯರಿಗಾಗಿ ಬೇರೆ ಬೇರೆ ಅಂತಃಪುರಗಳನ್ನು ಗೊತ್ತು ಮಾಡಿದ್ದನು. ಕೊನೆಯದಾಗಿ ಅಂತಕ = ಯಮ. ಈ ಶಬ್ದವನ್ನು ಚೆನ್ನಾಗಿ ತಿಳಿದು ಉಪಯೋಗ ಮಾಡಬೇಕು. ಇಲ್ಲದಿದ್ದರೆ ಕೆಲವು ವೇಳೆ ಅಂತಸ್ತಾಪದಿಂದ (= ೧. ಜ್ವರ ೨. ಒಳಚಿಂತೆ) ಸಂಕಟಪಡಬೇಕಾಗುತ್ತದೆ. ಗುಟ್ಟರಿತು ಪ್ರಯೋಗಿಸಿದರೆ ಅಂತರ್ಯಾಮಿ (ಪರಮಾತ್ಮ) ಕಾಪಾಡುತ್ತಾನೆ.

**ಅಂತಕನಿಗೂ ಆತಂಕಕ್ಕೂ ಏನು ಸಂಬಂಧ ?** ಅಂತಕ ಎಂದರೆ ಯಮ. ಆತಂಕ ಎಂದರೆ ಅನೇಕ ಅರ್ಥಗಳಿವೆ. *೧. ರೋಗ, ೨. ಜ್ವರ,* ೩. *ಸಂದೇಹ* ೪. *ಹೆದರಿಕೆ.* ಅಂತಕ ಎಲ್ಲರನ್ನೂ ಕೊನೆಗಾಣಿಸುವವನು. ಆತಂಕ ಅವನಿಂದ ಇದ್ದೇ ಇದೆ ಅಲ್ಲವೇ ? **ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ** ಎಂಬ ದಾಸರ ಪದವನ್ನು ನೆನಪಿಸಿಕೊಳ್ಳಿ. ಇದೇ ಆ ಎರಡು ಶಬ್ದಗಳ ಸಂಬಂಧ. ಈ ಸಂಬಂಧವಿಲ್ಲದೆ ಬೇರೆ ಬೇರೆ ಸನ್ನಿವೇಶಗಳಲ್ಲಿ ಈ ಎರಡೂ ಶಬ್ದಗಳನ್ನು ವಿಪುಲವಾಗಿ ಉಪಯೋಗಿಸುತ್ತಾರೆ.

**ಅಂತರರಾಷ್ಟ್ರೀಯ** ಅಂತರರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಈ ಎರಡು ಶಬ್ದಗಳಲ್ಲಿ ಯಾವುದು ಶುದ್ಧವಾದುದು ಎಂದು ಕೇಳುತ್ತಾರೆ. ಈ ಎರಡೂ ತಪ್ಪು ರೂಪಗಳು. ಸಂಸ್ಕೃತದಲ್ಲಿ ವಿಸರ್ಗಸಂಧಿ ಎಂಬ ಒಂದು ವ್ಯಾಕರಣ ಕ್ರಿಯೆಯಿದೆ. ಸಂಧಿಯಾಗುವಾಗ ರೇಫಕ್ಕೆ ರಕಾರವೇ ಪರವಾದರೆ ರೇಫವು ಲೋಪಗೊಳ್ಳುತ್ತದೆ. ಅಲ್ಲದೆ ಈ ರೇಫದ ಹಿಂದೆ ಹ್ರಸ್ವಸ್ವರವಿದ್ದರೆ ಅದು ದೀರ್ಘವಾಗುತ್ತದೆ. ಇದು ವ್ಯಾಕರಣ ನಿಯಮ. ಇದರ ಪ್ರಕಾರ ಅಂತರ್ +ರಾಷ್ಟ್ರೀಯ ಎನ್ನುವುದು ಅಂತಾರಾಷ್ಟ್ರೀಯ ಎಂದಾಗಬೇಕು. ಪುನರ್ +ರಚನೆ =ಪುನಾರಚನೆ ಎಂದಾಗಬೇಕು. ಧೂರ್ಜಟಿರ್ +ರಕ್ಷತಿ ಎನ್ನುವುದು ಧೂರ್ಜಟೀರಕ್ಷತಿ ಎಂದಾಗಬೇಕು. ಇದು ತಿಳಿಯದೆ ಇಂಥ ಶಬ್ದಗಳು ಬೇರೆ ಬೇರೆ ರೂಪಗಳನ್ನು ಪಡೆಯುತ್ತಿವೆ. ಸಾಮಾನ್ಯರು ಅಂತರ್ ರಾಷ್ಟ್ರೀಯ ಎಂದು ಸಂಧಿ ಮಾಡದೇ ಬರೆಯುವುದು ಸುಲಭ. ಹೀಗೆ ಸಂಧಿ ಬಿಡಿಸಿ ಬರೆಯುವುದರಿಂದ ಓದುಗರಿಗೆ ಅರ್ಥವಾಗುವುದೂ ಸುಲಭವಾಗುತ್ತದೆ. ಇದನ್ನು ಕನ್ನಡ ವ್ಯಾಕರಣಕಾರರು ಹಿಂದೆಯೇ ಸೂಚಿಸಿದ್ದಾರೆ. ಇದು ಶ್ರುತಿಕಷ್ಟವಾದುದು ಎಂದು ಹೇಳಿ ಎರಡು ರಕಾರಗಳನ್ನು ಸೇರಿಸಿ ಸಂಧಿ ಮಾಡಬಾರದು. ಅದು ಕಿವಿಗೆ ಹಿತವಾಗಿರುವುದಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಆದರೆ ಕನ್ನಡದ ಆಡುಮಾತಿನಲ್ಲಿಯೂ ಬರಹದಲ್ಲಿಯೂ ಅಂತರರಾಷ್ಟ್ರೀಯ, ಅಂತರ್ರಾಷ್ಟ್ರೀಯ, ಪುನರ್ರಚನೆ ಎಂಬ ಶಬ್ದಗಳು ವ್ಯಾಪಕವಾಗಿ ಉಪಯೋಗವಾಗುತ್ತಿವೆ. ಇವು ಈಗಾಗಲೇ ತಮ್ಮ ನೆಲೆಯನ್ನು ಸ್ಥಾಪಿಸಿಕೊಂಡಿವೆ. ಅವುಗಳನ್ನು ಗಡಿಪಾರು ಮಾಡುವುದು ಈಗ ಸಾಧ್ಯವಿಲ್ಲ. ಆದುದರಿಂದ ನಾವು ಪ್ರಯೋಗ ಶರಣರಾಗಿ ಅವುಗಳನ್ನು ಒಪ್ಪಿಕೊಳ್ಳಬೇಕು. ವ್ಯಾಕರಣಬದ್ಧವಲ್ಲದ ಶಬ್ದಗಳು ಅವು ಎಂಬ ತಿಳಿವಳಿಕೆಯೂ ಇರಬೇಕು. ಸಂಧಿ ಮಾಡದೆ ಅಂತರ ಎಂಬ ಸಂಸ್ಕೃತ ಶಬ್ದದೊಡನೆ ಈಗಾಗಲೇ ಅನೇಕರು ಅನೇಕ ಸಮಾಸಗಳನ್ನು ಮಾಡಿ ಪ್ರಯೋಗ ಮಾಡುತ್ತಲೇ ಇದ್ದಾರೆ. ಅಂತರ ಕಾಲೇಜು ಚರ್ಚಾಸ್ಪರ್ಧೆ. ಅಂತರ ಪ್ರೌಢಶಾಲಾ ನಾಟಕ ಸ್ಪರ್ಧೆ. ಅಂತರ ಮಾಧ್ಯಮಿಕ ಶಾಲಾ ಆಶುಭಾಷಣ ಸ್ಪರ್ಧೆ, ಎಂಬುವು ಉದಾಹರಣೆಗಳು. ಇಂಗ್ಲಿಷಿನ Inter - national ಮುಂತಾದ ಶಬ್ದಗಳಲ್ಲಿರುವ inter ಶಬ್ದಕ್ಕೆ between two, (ಇಬ್ಬರ ನಡುವೆ) ಅಥವಾ among many (ಬಹುಜನರ ನಡುವೆ) ಎಂಬರ್ಥ ಬರಬೇಕು. ಇಂಗ್ಲಿಷಿನ ಈ inter ಗೂ ಸಂಸ್ಕೃತದ 'ಅಂತರ್' ಗೂ ಜ್ಞಾತಿ ಸಂಬಂಧವಿದೆ. ಈಗ ಪ್ರಯೋಗಕ್ಕೆ ಬಂದಿರುವ ಮೇಲಿನ ಈ ರೂಪವನ್ನು ಸಂಧಿಯಿಲ್ಲದೆ ಉಪಯೋಗಿಸುವುದರಲ್ಲಿ ಯಾವ ತೊಂದರೆಯೂ ಇಲ್ಲ. ಅದು ತೊಂದರೆಯನ್ನು ಪರಿಹಾರ ಮಾಡುತ್ತದೆ ಎಂದೇ ಹೇಳಬಹುದು. ಸಂಸ್ಕೃತದ ಅಂತರ ಶಬ್ದಕ್ಕೆ between two, among many ಎಂಬ ಅರ್ಥ ಬರುತ್ತದೆಯೋ ಎಂದು ಪರಿಶೀಲಿಸಬೇಕು. ಅಷ್ಟೆ! ಕನ್ನಡದ ಪ್ರಯೋಗಗಳಿಂದ ಆ ಅರ್ಥ ಹೊಸದಾಗಿ ತುಂಬಿ ಬಂದರೂ ಆಕ್ಷೇಪಣೆಯಿರಲಾರದು.

**ಅಂತಹ** ಅಂತು + ಅಪ್ಪ = ಅಂತಪ್ಪ. ಈ ಶಬ್ದಕ್ಕೆ ಹಾಗೆ ಇರುವ ಎಂದು ಅರ್ಥ. ಅಂತಪ್ಪ ಎಂಬುದೆ ಮುಂದೆ ಅಂತಹ ಎಂದಾಯಿತು. ಅದೇ ಇತ್ತೀಚೆಗೆ ಅಂಥ ಎಂದು ಪ್ರಯೋಗವಾಗುತ್ತಿದೆ. ಇಲ್ಲಿ ಥ ಎಂಬ ಅಕ್ಷರ ತ, ಹ ಎಂಬ ಎರಡು ಅಕ್ಷರಗಳೂ ಸೇರಿ ಆಗಿರುವ ರೂಪ. ಅಂತಹ, ಅಂಥ ಎಂಬ ಎರಡು ರೂಪಗಳೂ ಸರಿಯಾದವು. ಅಂಥಹ, ಇಂಥಹ, ಎಂಥಹ ಎಂಬ ರೂಪಗಳು ತಪ್ಪು.

**ಅಂದ - ಚೆಂದ, ಗತ್ತು-ಗಮ್ಮತ್ತು, ಕುಂದು-ಕೊರತೆ** ಮುಂತಾದುವು ಜೋಡು ನುಡಿಗಳು. ಒಂದೇ ಅರ್ಥದ ಅಥವಾ ಸಮೀಪಾರ್ಥದ ಇಂಥ ಶಬ್ದಗಳು ಅವಧಾರಣೆಗಾಗಿ

ಪ್ರಯೋಗವಾಗುತ್ತವೆ. ಭಾಷೆಯಲ್ಲಿ ಇವುಗಳ ಪ್ರಯೋಗದಿಂದ ಕಾವ್ಯಗಳಲ್ಲಿ ಅಥವಾ ಭಾಷಣಗಳಲ್ಲಿ ಒಳ್ಳೆಯ ಪ್ರಭಾವವನ್ನು ಬೀರಬಹುದು. ಪ್ರತಿಯೊಂದು ಭಾಷೆಯಲ್ಲಿಯೂ ಇಂಥ ಜೋಡು ನುಡಿಗಳು ಇರುತ್ತವೆ.

**ಅಂದರೆ** ನಮ್ಮ ಮಹಿಳೆಯರು ಗಂಡಂದಿರನ್ನು **ಅಂದರೆ** ಎಂದು ಸಂಬೋಧಿಸುತ್ತಾರಲ್ಲ - ಇದರ ಹಿನ್ನೆಲೆ ಏನು? ಇದು ವಿಚಿತ್ರವಾದ ಕಥೆಯುಳ್ಳ ಸಂಪ್ರದಾಯ. ಗಂಡನನ್ನು ಹೆಸರಿಟ್ಟು ಕೂಗಬಾರದು ತಾನೆ, ನಮ್ಮ ಸಂಪ್ರದಾಯದಲ್ಲಿ. ಆಗ ಗಂಡನನ್ನು ಕರೆಯುವ ಈ ಹೊಸ ಸಂಪ್ರದಾಯ ಯಾವಾಗಲೋ ಹುಟ್ಟಿಕೊಂಡಿತು. 'ಏನೂ ಅಂದೆ' ಎಂದು ಕರೆದರೆ ಗಂಡ 'ಏನಂದೆ' ಎಂದು ಉತ್ತರ ಕೊಡುತ್ತಿದ್ದ. ಏನೂ ಅಂದೆ ಎನ್ನುವುದು ತನಗೇ ಹೇಳಿಕೊಂಡಂಥ ಉತ್ತರ ನಿರೀಕ್ಷಿಸುವ ಮಾತು. ಆದರೆ ಏಕವಚನ. ಗಂಡನಿಗೆ ಅನ್ವಯಿಸಬೇಕಾದರೆ ಇದಕ್ಕೆ ಬಹುವಚನದ ಗೌರವ ಬರುವ ಹಾಗೆ ಮಾಡಬೇಕು. ಆಗ ಅದಕ್ಕೆ ಬಹುವಚನದ ಆರ್ = ರಕಾರ ಸೇರಿಸಬೇಕು. ಹಾಗೆ ಸೇರಿದಾಗ ಅಂದ್ರೆ ಎಂದಾಗುತ್ತದೆ. ಆ ರೂಪ ಒಂದು ಸಂಬೋಧನಾ ವಿಭಕ್ತಿಯ ರೂಪ. ಅದಕ್ಕೆ ಪತಿದೇವರೇ ಅಥವಾ ಗಂಡನೇ ಎಂದರ್ಥ. ರ ಕಾರವನ್ನು ಗ್ರಾಮ್ಯಭಾಷೆಯಲ್ಲಿ ಉಪಯೋಗಿಸುವುದನ್ನು ನೀವು ಕೇಳಿರಬಹುದು. ಹೌದ್ರು, ಇಲ್ಲ ಕಾಣ್ರು, ಇಲ್ರು ಈ ರೂಪಗಳಲ್ಲಿ ಉತ್ತರದಲ್ಲಿ ಗೌರವಕ್ಕಾಗಿ ಸೇರುವ ರಕಾರಗಳು. ಹಾಗೆಯೇ ಇಂಥ ಪ್ರಯೋಗಗಳ ಶಿಷ್ಟ ರೂಪ ಅಂದ್ರೆ. ಬರಿಯ 'ಅಂದ್ರೆ' ಗೆ ಅರ್ಥವೇ ಇರುವುದಿಲ್ಲ. ಏನೂಂದ್ರೆ ಆದರೆ ಸಂಬೋಧನೆ, ಪ್ರಶ್ನೆ, ಹೇಳಿಕೆ ಎಲ್ಲದರ ಸತ್ವ ಅದರಲ್ಲಿ ಅಡಗಿದೆ. ಇದು ಭಾಷೆ ತನ್ನ ಪ್ರಯೋಗದಲ್ಲಿ ಕಂಡುಕೊಳ್ಳುವ ಪ್ರಯೋಜನದ ಸ್ವರೂಪದಲ್ಲಿ ಒಂದು ಬಗೆ. **ಏನೂ ಅಂದರೆ** ಎಂಬುದನ್ನು ಗಂಡನೂ ಹೆಂಡತಿಯೂ ಪರಸ್ಪರ ಮಾತನಾಡಲು ಪ್ರಾರಂಭಿಸುವ ಸೂಚನೆಯ ಪದ. ಇಂಗ್ಲಿಷಿನ Hallo ಇದ್ದ ಹಾಗೆ.

**ಅಂಬರ, ಆಕಾಶ, ಗಗನ** ಈ ಮೂರು ಶಬ್ದಕ್ಕೂ ಒಂದೇ ಅರ್ಥ. **ಅಂಬರೇ ಶಬ್ದಾಯತೇ** ಅಲ್ಲಿ ಶಬ್ದವಾಗುತ್ತದೆ ಎಂದು ಅಂಬರ, ಸೂರ್ಯ ಮುಂತಾದವರು ಅಲ್ಲಿ ಪ್ರಕಾಶಿಸುತ್ತಾರೆ ಎಂದು ಆಕಾಶ ಶಬ್ದ. ಅಲ್ಲಿ ಖಗಗಳು ಎಂದರೆ ಪಕ್ಷಿಗಳು ಓಡಾಡುತ್ತವೆ ಎಂದು ಗಗನ. ಹೀಗೆಯೇ ಈ ಶಬ್ದಕ್ಕೆ ಇನ್ನೂ ಇತರ ಪರ್ಯಾಯ ಶಬ್ದಗಳಿವೆ. ದ್ಯೋ, ದಿವ, ಅಭ್ರ, ವ್ಯೋಮ, ಪುಷ್ಕರ, ನಭ, ಅಂತರಿಕ್ಷ, ಅನಂತ, ಸುರವರ್ತ್ಮ, ಖ, ವಿಯತ್, ವಿಷ್ಣುಪದ, ವಿಹಾಯ ಎಂದು ಅಮರದಲ್ಲಿ ಈ ಹದಿಮೂರು ಶಬ್ದಗಳನ್ನೂ ಕೊಟ್ಟು ಅವೆಲ್ಲಕ್ಕೂ ಆಕಾಶ ಎಂದೇ ಅರ್ಥ ಹೇಳಿದೆ. ಕೆಲವಕ್ಕೆ ಬೇರೆ ಅರ್ಥಗಳೂ ಇವೆ.

**ಅಂಬಿಗ** ಎಂದರೆ ದೋಣಿಯನ್ನು ನಡೆಸುವವನು. ಪುರಂದರದಾಸರ ರಚನೆಯಲ್ಲಿ ದೇವರನ್ನು ಅಂಬಿಗ ಎಂಬ ರೂಪದಲ್ಲಿ ಸ್ತುತಿಸಿ ಸಂಸಾರ ಸಾಗರದಿಂದ ತಮ್ಮನ್ನು ಪಾರು ಮಾಡಬೇಕೆಂದು ದಾಸರು ಪ್ರಾರ್ಥಿಸಿದ್ದಾರೆ. ಈ ಕೃತಿಯಲ್ಲಿ ಬರುವ ಒಂಬತ್ತು ಛಿದ್ರಗಳು = ನವದ್ವಾರಗಳು ಎಂದರೆ ಬಾಯಿ, ಎರಡು ಕಿವಿಗಳು, ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು, ಮಲದ್ವಾರ ಮತ್ತು ಜಲದ್ವಾರಗಳು. ಹತ್ತು ಬೆಂಬಡಿಗರು = ದಶೇಂದ್ರಿಯಗಳು. ಅಂದರೆ ಪಂಚ ಕರ್ಮೇಂದ್ರಿಯಗಳು ಮತ್ತು ಪಂಚ ಜ್ಞಾನೇಂದ್ರಿಯಗಳು. ಆರು ತೆರೆ = ಷಡ್ರಿಪುಗಳು, ಅಂದರೆ ಕಾಮ, ಕ್ರೋಧ, ಲೋಭ, ಮದ, ಮೋಹ ಮತ್ತು ಮತ್ಸರ ಎಂಬ ಆರು ಶತ್ರುಗಳು. ಇವು ನಮ್ಮನ್ನು ಮುತ್ತಲಿವೆ ಎಂದರ್ಥ. ಇಲ್ಲಿರುವ ರೂಪಕ ಸ್ವಾರಸ್ಯವಾಗಿದೆ. ಇದು ಒಂದು ತರದ ಬೆಡಗು. ಇದು ಸುಲಭವಾಗಿ ಅರ್ಥವಾಗುತ್ತದೆ. ಆದರೆ ಎಲ್ಲ ಬೆಡಗಿನ ರಚನೆಗಳು ಬೇಗ ಅರ್ಥವಾಗುವುದಿಲ್ಲ.

**ಅಂಬು** ಈ ಶಬ್ದ ಸಂಸ್ಕೃತವಾದರೆ ನೀರು ಎಂದರ್ಥ. ಅಂಭಸ್ ಎಂಬ ಮತ್ತೊಂದು ಶಬ್ದವೂ ಇದೆ. ಅದಕ್ಕೂ ಇದೇ ಅರ್ಥ. ಕನ್ನಡದಲ್ಲಿ ಅಂಬು ಶಬ್ದಕ್ಕೆ ಬಾಣ ಎಂದರ್ಥ. ಸಂಸ್ಕೃತದ ಅಂಬು ಶಬ್ದದಿಂದ ಅನೇಕ ಸಮಾಸಗಳಾಗಿವೆ. ಅಂಬುಜ, ಅಂಬುಜನ್ಮ ಅಂಬುದ, ಅಂಬುಧಿ. ಇವುಗಳಿಗೆ ಕ್ರಮವಾಗಿ ಕಮಲ, ಪದ್ಮ, ಮೋಡ, ಸಮುದ್ರ ಎಂಬ ಅರ್ಥಗಳಿವೆ. ಕನ್ನಡದ ಅಂಬುವಿಗೆ ಒಂದು ಉದಾಹರಣೆ: ಅಂಬಿನ ಮೊನೆಯಲುಣಲಿಕ್ಕುವೆನು ರಣಭೂತಗಣಕ್ಕೆ ನಿನ್ನೊಡಲ (ಕುಮಾರವ್ಯಾಸ ದ್ರೋ. ೧.೫೫)

**ಅಂಬೆ** 'ಅಂಬಾ' ಎಂಬ ಸಂಸ್ಕೃತದ ಶಬ್ದ ಕನ್ನಡಕ್ಕೆ ತದ್ಭವವಾಗಿ ಬಂದಾಗ 'ಅಂಬೆ' ಎಂದಾಗುತ್ತದೆ. ಈ ಶಬ್ದಕ್ಕೆ ೧. ತಾಯಿ, ಮಾತೆ ೨. ಪಾರ್ವತಿ ೩. ಮಹಾಭಾರತದ ಪ್ರಸಿದ್ಧ ಸ್ತ್ರೀ ಪಾತ್ರ ಎಂಬ ಅರ್ಥಗಳಿವೆ. ಇದಲ್ಲದೆ ಅನೇಕ ಸ್ತ್ರೀಯರು ತಮ್ಮ ಹೆಸರಿನ ಮುಂದೆ ಅಂಬೆ, ಅಂಬಾ ಎಂದು ಸೇರಿಸಿಕೊಳ್ಳುತ್ತಾರೆ. ಪದ್ಮಾಂಬೆ, ನೀಲಾಂಬೆ, ನಾಗಲಾಂಬೆ ಇತ್ಯಾದಿ. ಅದು ಆ ಹೆಸರಿಗೆ ಒಂದು ಗೌರವವನ್ನು ತಂದುಕೊಡುತ್ತದೆ.

**ಅಂಬೋಣ** ಎನ್ನುವುದು ಅನು + ಓಣ = ಅಂಬೋಣ. ಮಧ್ಯೆ ಬಂದಿರುವ ಬ ಕಾರಕ್ಕೆ ಕಾರಣವಿದೆ. ಅಂಬುದು = ಹೇಳುವುದು ಎಂಬ ರೂಪವಿದೆ. ಅದರ ಪ್ರಭಾವದಿಂದ ಅಂಬೋಣ ಆಗಿದೆ. ಬೇಕಾದರೆ ಅಂಬುದು + ಓಣ = ಅಂಬೋಣ ಎಂದು ಬೇಕಾದರೂ ಹೇಳಬಹುದು. ಏಕೆಂದರೆ ಅಂಬುದೋಣ ಎಂಬ ರೂಪ ತುಂಬ ವಕ್ರವಾಗಿರುವಂತೆ ಕಾಣುತ್ತದೆ — ಉಚ್ಚಾರಣೆಗೆ. ಹೀಗೆ ಕೆಲವು ಸಲ ಬದಲಾವಣೆಯಾಗುವುದುಂಟು. ಓಣ ಎಂಬುದು ಒಂದು ಕೃದಂತ ಪ್ರತ್ಯಯ. ಉದಾಹರಣೆ ಕರೆಯೋಣ, ಓಡೋಣ, ಮಾಡೋಣ, ಇಳಿಯೋಣ, ಹತ್ತೋಣ ಇತ್ಯಾದಿ.

**ಅಂಭೃಣೀ, ಆಂಭೃಣೀ** ಎಂಬ ಎರಡೂ ಒಂದೇ ವ್ಯಕ್ತಿಯನ್ನು ಸೂಚಿಸುವ ಹೆಸರುಗಳು. ಈಕೆ ಶುಕ್ಲ ಯಜುರ್ವೇದವನ್ನು ಭಾಷೆಗೆ ಬರಮಾಡಿದವಳು ಎನ್ನುತ್ತಾರೆ. ಭೃ ಎಂಬ ಧಾತುವಿನಿಂದ ಬಂದುದು ಎಂದು ನಿಘಂಟುಗಳು ಹೇಳುತ್ತವೆ. ಭೃ ಧಾತುವಿಗೆ ಅನೇಕ ಅರ್ಥಗಳಿವೆ. ಆಕೆ ಮಹಾವಿದ್ವತ್ತು ಇದ್ದ ಜ್ಞಾನಿಯೆಂದೂ ಬೋಧಕಿಯಾಗಿದ್ದಳೆಂದೂ ತಿಳಿದುಬರುತ್ತದೆ.

**ಅಕಸ್ಮಾತ್** ನ +ಕಸ್ಮಾತ್ =ಅಕಸ್ಮಾತ್ ಎಂದು ಇದರ ವ್ಯುತ್ಪತ್ತಿ. ಯಾವ ಕಿಂಚಿತ್ತು ಕಾರಣವೂ ಇಲ್ಲದೆ ಇರುವುದು ಎಂದರ್ಥ. ಹಠಾತ್ತಾಗಿ, ನಿರೀಕ್ಷೆಯಿಲ್ಲದೆ ಎಂಬುದು ಇತರ ಅರ್ಥಗಳು. ಇದು ಸಂಸ್ಕೃತದಲ್ಲಿ ಒಂದು ಅವ್ಯಯ. ಹಿಂದೀ ಭಾಷೆಯ ಅಚಾನಕ್ ಎಂಬ ಶಬ್ದ ಇದಕ್ಕೆ ಸಮನಾದುದು. ಕನ್ನಡದಲ್ಲಿ ಆ ಶಬ್ದ ಅಚಾನಕ ಎಂದು ರೂಢಿಯಲ್ಲಿದೆ. ಅದಕ್ಕೂ ಅನಿರೀಕ್ಷಿತ ಎಂದೇ ಅರ್ಥ.

**ಅಕಾಡೆಮಿ** ಎಂಬುದು ಗ್ರೀಕ್ ಭಾಷೆಯ Akademia ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ೧. ಪ್ರೌಢ ಕಲಾಶಾಲೆ ೨. ತರಬೇತಿ ನೀಡುವ ಶಾಲೆ ಎಂದು ಮುಖ್ಯವಾದ ಅರ್ಥ. ಇನ್ನೊಂದು ಅರ್ಥವೂ ಇದೆ. ೩. ವಿದ್ವಾಂಸರ, ಕಲೆಗಾರರ ಸಂಘ ಎಂದು. ಸಂಸ್ಕೃತದಲ್ಲಿ ಪರಿಷತ್ತು ಎಂಬುದು ಸಭೆ ಎಂಬ ಅರ್ಥದಲ್ಲಿ ಪ್ರಸಿದ್ಧ. ಮೂರನೆಯ ಅರ್ಥದಲ್ಲಿ ಆ ಶಬ್ದ ಚೆನ್ನಾಗಿದೆ. ಪರಿಷತ್ತು ಎಂಬ ಶಬ್ದಕ್ಕೆ ವಿಧಾನ ಪರಿಷತ್ತು ಮುಂತಾದ ಶಬ್ದಗಳು ಪ್ರಸಿದ್ಧಿಗೆ ಬಂದ ಮೇಲೆ ಅರ್ಥ ಸಂಕುಚಿತವಾಗುತ್ತ ಇದೆ. ಆದುದರಿಂದ ಅಕಾಡೆಮಿ ಎಂಬುದು ಕನ್ನಡದಲ್ಲಿಯೂ ಇರಲಿ ಬಿಡಿ. ಅದನ್ನೇ ಉಪಯೋಗಿಸಿ. ಸಾಮಾನ್ಯರಿಗೆ ಪರಿಷತ್ತು ಎಂದು ಬರೆಯುವುದು ಕಷ್ಟ. ಕಾಗುಣಿತ ಸುಲಭವಾಗಿರುವ ಮತ್ತು ಆಗಲೇ ಪ್ರಚಾರಕ್ಕೆ ಬಂದಿರುವ ಅಕಾಡೆಮಿ ಶಬ್ದವನ್ನು ಸ್ವಾಗತಿಸಿ ಉಪಯೋಗಿಸಬಹುದು.

**ಅಕ್ಕಚ್ಚು** ಅಕ್ಕಿಯನ್ನು ತೊಳೆದ ನೀರು. ಅದೇ ಕಲಗಚ್ಚು ಅಕ್ಕಿ +ಕರ್ಚು =ಅಕ್ಕಿಗರ್ಚು. ಅದೇ

ಶಬ್ದ ಅಕ್ಕಚ್ಚು ಎಂದಾಗುತ್ತದೆ. ಕರ್ಚು ಎಂಬ ಶಬ್ದಕ್ಕೆ ತೊಳೆ, ಶುದ್ಧಿ ಮಾಡು ಎಂದರ್ಥ.

**ಅಕ್ಕರಾಸ್ತಿಕೆ** ಅಕ್ಕರೆ, ಆಸ್ತೆ ಎಂಬ ಎರಡು ಬೇರೆ ಬೇರೆ ಶಬ್ದಗಳಿವೆ. ಎರಡಕ್ಕೂ ಪ್ರೀತಿ ಎಂದು ಅರ್ಥ. ಅಕ್ಕರೆ ಕನ್ನಡ ಶಬ್ದ. ಆಸ್ತೆ ಎನ್ನುವುದು ಸಂಸ್ಕೃತದ ಆಸ್ಥಾ ಎಂಬ ಶಬ್ದದ ತದ್ಭವ. ಈ ಎರಡನ್ನೂ ಸೇರಿಸಿ ತುಂಬ ಪ್ರೀತಿ ಎಂಬ ಅರ್ಥದಲ್ಲಿ ಅಕ್ರಾಸ್ತೆ ಎಂಬ ಶಬ್ದವನ್ನು ಕೆಲವರು ಉಪಯೋಗಿಸುತ್ತಾರೆ. ಅಕರಾಸ್ತಿಕೆ ಎಂಬುದೂ ಕೂಡ ಇಂಥ ಒಂದು ರೂಪವಿರಬೇಕು. ಇದು ತಪ್ಪು ರೂಪ. ಎಲ್ಲಾದರೂ ಪ್ರಾದೇಶಿಕವಾಗಿ ಇದು ಉಪಯೋಗದಲ್ಲಿದ್ದರೆ ಅದು ತಪ್ಪೆಂದು ಹೇಳಲಾಗುವುದಿಲ್ಲ. ಇದು ಗ್ರಾಂಥಿಕವಾಗಿ ಪ್ರಯೋಗಕ್ಕೆ ಬರಲಾರದು.

**ಅಕ್ಕಲ್ ಹುಷಾರಿ** ಇಲ್ಲಿ ಎರಡು ಶಬ್ದಗಳಿವೆ. ಅಕ್ಕಲ್, ಹುಷಾರಿ. ಅರಬ್ಬಿಯಲ್ಲಿ ಅಕ್ಕಲ್ ಎಂದರೆ ಬುದ್ಧಿ, ವಿವೇಕ, ಜಾಣತನ. ಫಾರಸೀ ಭಾಷೆಯಲ್ಲಿ ಹುಶ್ಯಾರ್ ಎಂದರೆ ಜಾಣನಾದ, ಸದಾ ಎಚ್ಚರಿಕೆಯುಳ್ಳ. ಕನ್ನಡದಲ್ಲಿ ಈ ಎರಡು ಭಾಷೆಗಳ ಒಂದೇ ಅರ್ಥದ ಶಬ್ದಗಳು ಸೇರಿವೆ. ಒಳ್ಳೆಯ ಜತೆ. ತುಂಬ ಪ್ರಭಾವಶಾಲಿ ಶಬ್ದ.

**ಅಕ್ಕಿಬಾಡು** ಇದು ಗ್ರಾಮ್ಯ ಶಬ್ದ. ಹಕ್ಕಿಯ ಮಾಂಸ ಎಂಬುದಕ್ಕೆ ಸರಿಯಾದ ಶಬ್ದ ಹಕ್ಕಿ ಬಾಡು. ಹ ಕಾರದ ಉಚ್ಚಾರ ಕಷ್ಟವಾದುದರಿಂದ ಗ್ರಾಮೀಣ ಪ್ರದೇಶದಲ್ಲಿ ಇದನ್ನು ಅಕ್ಕಿ ಬಾಡು ಎಂದು ಉಚ್ಚರಿಸುತ್ತಾರೆ.

**ಅಕ್ಟೋಬರ್** ಇದು ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳ octo, Okto ಎಂಬ ಶಬ್ದದಿಂದ ಬಂದುದು. ಆ ಶಬ್ದಗಳಿಗೆ ಎಂಟು ಎಂದರ್ಥ. ಅಕ್ಟೋಬರ್ ರೋಮನರ ಲೆಕ್ಕದಲ್ಲಿ ಎಂಟನೆಯ ತಿಂಗಳಾಗಿತ್ತು. ಅವರ ವರ್ಷ ಮಾರ್ಚ್ ತಿಂಗಳಿನಿಂದ ಮೊದಲಾಗುತ್ತಿತ್ತು. ಆದುದರಿಂದಲೇ ಆ ಹೆಸರು ಬಂದಿದೆ.

**ಅಕ್ರಮ** ನೋಡಿ ಅತಿಕ್ರಮ

**ಅಕ್ಷತ, ಅಕ್ಷತಾ** ಅಕ್ಷತ ಎಂದರೆ ನುಚ್ಚಾಗದಿರುವ ಅಕ್ಕಿ. ಇದು ಶೋಭನಾಕ್ಷತೆ. ಆಶೀರ್ವಾದ ಮಾಡಲು ತಲೆಯ ಮೇಲೆ ಉದುರಿಸುವ ಮಂತ್ರಾಕ್ಷತೆ ಎಂಬ ಇತರ ಅರ್ಥಗಳೂ ಇವೆ. ಅಕ್ಷತಾ ಎಂದರೆ ಕನ್ಯೆ. ಇನ್ನೂ ಪುಷ್ಪವತಿಯಾಗದಿರುವ ಹುಡುಗಿ. ಪುರುಷನಿಂದ ಇನ್ನೂ ಅನುಭವಿಸಲ್ಪಡದವಳು. ಕನ್ನಡದಲ್ಲಿ ಅದು ತದ್ಭವವಾದರೆ ಅಕ್ಷತೆ. ಆಗ ಆ ರೂಪಕ್ಕೆ ಮೇಲಿನ ಎರಡು ಅರ್ಥಗಳೂ ಹೊಂದುತ್ತವೆ.

**ಅಕ್ಷತಯೋನಿಕನ್ಯೆ** ಈ ಶಬ್ದಕ್ಕೆ ಇನ್ನೂ ಸಂಭೋಗಕ್ಕೆ ಒಳಗಾಗದ ಯುವತಿ ಎಂದರ್ಥ. ಇದು ಇಂಗ್ಲಿಷಿನ Virgin ಎಂಬ ಶಬ್ದದ ಕನ್ನಡ ಅನುವಾದ. ಇಂಗ್ಲಿಷಿನಲ್ಲಿ ಆ ಶಬ್ದಕ್ಕೆ ಮದುವೆಯಾಗದ ಹೆಣ್ಣು ಎಂದೂ ಯಾವ ಅವಗುಣವೂ ಇಲ್ಲದ ಎಂದೂ ಬೇರೆಯ ಅರ್ಥಗಳೂ ಇವೆ.

**ಅಕ್ಷೋ(ಕ್ಷೌ)ಹಿಣಿ** ಎಂಬುದು ಒಂದು ಸಂಖ್ಯೆ. ಸೈನ್ಯದ ಸಂಖ್ಯೆ - ೨೧೮೭೦ ರಥಗಳು, ೨೧೮೭೦ ಆನೆಗಳು, ೬೫೬೧೦ ಕುದುರೆಗಳು, ೧೦೯೩೫೦ ಕಾಲಾಳು - ಇವಿಷ್ಟು ಸೇರಿದರೆ ಅಕ್ಷೋಹಿಣಿ. ಇಂಥ ೧೧ ಅಕ್ಷೋಹಿಣಿ ಸೈನ್ಯ ಕೌರವರ ಕಡೆಯಲ್ಲಿಯೂ, ೭ ಅಕ್ಷೋಹಿಣಿ ಸೈನ್ಯ ಪಾಂಡವರ ಕಡೆಯಲ್ಲಿಯೂ ಯುದ್ಧ ಮಾಡಿದುವು. ಅಪಾರ ನಷ್ಟವಾಯಿತು ಎರಡು ಕಡೆಯೂ. ಈಗಲೂ ಯಾರಿಗಾದರೂ ಪರಸ್ಪರ ದ್ವೇಷವಿದ್ದರೆ ೭-೧೧ ಎಂದು ವ್ಯಂಗ್ಯವಾಗಿ ಆಡಿಕೊಳ್ಳುತ್ತಾರೆ.

**ಅಗಲೀಕರಣ** ಕನ್ನಡದಲ್ಲಿ ಈಕರಣ ಎಂಬ ರೂಪವನ್ನು ಉಪಯೋಗಿಸಿ ಅನೇಕ ತಪ್ಪು ಶಬ್ದಗಳನ್ನು ಮಾಡುತ್ತಿದ್ದಾರೆ. ಆಧುನೀಕರಣ, ಕೈಗಾರಿಕೀಕರಣ, ಔದ್ಯಮೀಕರಣ, ಇತ್ಯಾದಿ. ಈ ಬಗೆಯ ಶಬ್ದಗಳನ್ನು ಜನರೇ ಒಪ್ಪುವುದಾದರೆ ಅವನ್ನು ಯಾರೂ ತಡೆಯುವುದಕ್ಕೆ

ಆಗುವುದಿಲ್ಲ. ಆದರೆ ಸರಿಯಾದ ಶಬ್ದಗಳಿರುವಾಗ ಹೀಗೇಕೆ ತಪ್ಪು ಮಾಡಬೇಕೆಂದು ಪ್ರಶ್ನೆ. ರಸ್ತೆಗಳನ್ನು ಅಗಲಗೊಳಿಸಲಾಗುತ್ತದೆ ಎಂದರೆ ತಪ್ಪೆ? ರಸ್ತೆಯ ಉದ್ದವನ್ನು ಹೆಚ್ಚಿಸಲಾಗುತ್ತದೆ (ಉದ್ದೀಕರಣ ಎಂಬುದರ ಬದಲು). ಆಧುನೀಕರಣಕ್ಕೆ ಬದಲು ಆದ್ಯತನಗೊಳಿಸು ಎಂದೇ ಉಪಯೋಗಿಸಬಹುದು. ಉಪಯೋಗಿಸುವ ಜನ ಸ್ವಲ್ಪ ಪರಿಶೀಲಿಸಬೇಕು. ಕೈಗಾರಿಕೆಗಳನ್ನು ಹೆಚ್ಚಿಸು, ಉದ್ಯಮಿಗಳಿಗೆ ಪ್ರಾಶಸ್ತ್ಯ ನೀಡು ಮುಂತಾಗಿ ಅರ್ಥವಾಗುವಂತೆ ಮಾತಾಡಬಹುದು, ಬರೆಯಲೂಬಹುದು. ಅಗಲೀಕರಣ ತಪ್ಪು

**ಅಗಳಿ, ಅಗುಣಿ** 'ಅಗಳಿ' ಎಂಬುದು ಸಂಸ್ಕೃತದ 'ಅರ್ಗಲ' ಎಂಬ ಶಬ್ದದ ತದ್ಭವ. ಬಾಗಿಲ ಕದವನ್ನು ಮುಚ್ಚಿದಾಗ ಅದನ್ನು ತೆಗೆಯಲಾಗದಂತೆ ಹಿಂದಿನಿಂದ ಹಾಕುವ ತಾಳು. ಇದಕ್ಕೆ 'ಲಾಳ ವಿಂಡಿಗೆ' ಎಂದೂ ಹೆಸರು. ಅಗಳಿ ಎಂಬುದು ಒಂದು ರೂಪ. ಕನ್ನಡದ ಬೇರೆ ಬೇರೆ ಭಾಗಗಳಲ್ಲಿ ಮಿಕ್ಕ ಅನೇಕ ರೂಪಗಳು ಪ್ರಯೋಗದಲ್ಲಿವೆ. ಅಗಣೆ, ಅಗುಣೆ, ಅಗುಳಿ, ಅಗರಿ ಇತ್ಯಾದಿ. ಈ ಎಲ್ಲ ಶಬ್ದಗಳಿಗೂ ಒಂದೇ ಅರ್ಥ. ಇಂಗ್ಲೀಷಿನ Bolt.

**ಅಗುಂದಲೆ** ಎಂದರೆ ಅಧಿಕ, ಹೆಚ್ಚಳ, ಅತಿಶಯ. ಇದು ಬಹು ಅಪೂರ್ವವಾಗಿ ಉಪಯೋಗವಾಗಿರುವ ಹಳಗನ್ನಡದ ಶಬ್ದ. ಕನ್ನಡದ ಹಿರಿಯ ಕವಿಗಳೆಲ್ಲ ಈ ಶಬ್ದವನ್ನು ಉಪಯೋಗಿಸಿದ್ದಾರೆ. ಪಂಪನೇ **'ಲೋಕಕ್ಕೆಲ್ಲಮಗುಂದಲೆಯಾದ ಬೀರಮೆಸೆಯೆ'** ಎಂದು ಪ್ರಯೋಗಿಸಿದ್ದಾನೆ. (ಪಂಪಭಾರತ ೧೨-೨೧೫)

**ಅಗುಣಿ** ನೋಡಿ: ಅಗಳಿ

**ಅಗುರ್ವು** ಎಂದರೆ ೧. ಭಯ, ಹೆದರಿಕೆ, ಅಂಜುವುದು. ೨. ಸಾಹಸ, ಪರಾಕ್ರಮ ೩. ಆಶ್ಚರ್ಯ ಎಂಬ ಅರ್ಥಗಳೂ ಇವೆ. **ಅಗುರ್** ಎಂಬುದು ಧಾತು. ಇದಕ್ಕೆ ೧. ಸಾಹಸ ಮಾಡು, ಸಾಹಸವನ್ನು ಪ್ರಕಟಿಸು. ೨. ಅತಿಶಯವಾಗು ಎಂಬ ಅರ್ಥಗಳಿವೆ. ಆ ಧಾತುವಿಗೆ **ಅಗುರ್** +ವು ಎಂದು ವಕಾರವು ಸೇರಿ ಅಗುರ್ವು ಆಗಿದೆ. ಅಭಿನವ ಪಂಪನು ತನ್ನ ರಾಮಚಂದ್ರ ಚರಿತ ಪುರಾಣವೆಂಬ ಕಾವ್ಯದಲ್ಲಿ ಇದನ್ನು ಪ್ರಯೋಗಿಸಿದ್ದಾನೆ. **ಕಲ್ತಲಿಸಿ ಕರಂಗಿದ ಬಲ್ಲಡವಿ ಕಣ್ಗೆ ಪಡೆದುವಗುರ್ವಂ.** (ಪಂಪರಾ ೭-೧೧೪) ಈ ಶಬ್ದಕ್ಕೆ ಅಗುರ್ಬು, ಗುರ್ವು, ಗುರ್ಬು ಎಂಬ ಪರ್ಯಾಯ ರೂಪಗಳೂ ಇವೆ.

**ಅಗ್ನಿದಿವ್ಯ** ದಿವ್ಯ ಎಂದರೆ ಒಂದು ಪರೀಕ್ಷೆ. ನಿಶ್ಚಿತವಾಗಿ ಸಾಕ್ಷಿಗಳೂ ಆಧಾರಗಳೂ ಇಲ್ಲದಿರುವಾಗ ವ್ಯಕ್ತಿಯು ಅಪರಾಧಿಯೇ ಅಲ್ಲವೇ ಎಂದು ಕಂಡುಹಿಡಿಯಲು ಹಿಂದೆ ಇಂಥ ಉಗ್ರವಾದ ಪರೀಕ್ಷೆಗಳನ್ನು ಒಡ್ಡುತ್ತಿದ್ದರು. ಈ ದಿವ್ಯಗಳು ಐದು ಬಗೆ: ೧. ಮಡಕೆ ೨. ಅಗ್ನಿ ೩. ಉದಕ ೪. ವಿಷ ೫. ಕೋಶ. ಇವುಗಳಲ್ಲಿ ಅಗ್ನಿದಿವ್ಯ ಎರಡನೆಯದು. ಬೆಂಕಿಯನ್ನು ಮುಟ್ಟಿ ಪ್ರಮಾಣ ಮಾಡಬೇಕಾದ ಪ್ರಸಂಗ. ಅಥವಾ ಬೆಂಕಿಯ ಮೇಲೆ ನಡೆದು ತನ್ನ ನಿರಪರಾಧ ಗುಣವನ್ನು ಪ್ರದರ್ಶಿಸಬೇಕಾದ ಪರೀಕ್ಷೆ.

**ಅಘಧ್ವಾಂತೌಘ ಮಧುಪಮಾಲಿಕೆ** ಎಂದರೇನು? ಅಘ =ಪಾಪ. ಧ್ವಾಂತ =ಕತ್ತಲೆ. ಓಘ = ಸಮೂಹ. ಮಧುಪಮಾಲಿಕೆ = ದುಂಬಿಗಳ ಸಾಲು. ಅಭಯ ರುಚಿಯ ಹಲ್ಲಿನ ಕಾಂತಿಯೆಂಬ ಚಂದ್ರೋದಯವು ಮಾರಿದತ್ತನ ಪಾಪದ ಕತ್ತಲೆಯ ಸಮೂಹವೆಂಬ ದುಂಬಿಗಳ ಸಮೂಹವನ್ನು ತೊಲಗಿಸುವಂತೆ ಅವನ ಕೈಯೆಂಬ ಕಮಲವು ಮುಚ್ಚಿಕೊಂಡಿತು. ಅಂದರೆ ಮಾರಿದತ್ತನು ಕೈಮುಗಿದಾಗ ಅವನ ಪಾಪಗಳೆಲ್ಲ ನಾಶವಾದುವು ಎಂದರ್ಥ. ಒಟ್ಟು ಪದ್ಯವನ್ನು ಓದಿದರೆ ಈಗ ಅರ್ಥವಾಗುತ್ತದೆ. (ಯಶೋಧರ ಚರಿತೆ ೧-೬೭) ಇದು ತುಂಬ ಸುಂದರವಾದ ಪದ್ಯ. ಎಲ್ಲ ರೂಪಕಗಳನ್ನೂ ಮೊದಲು ತಿಳಿದು ಆ ಬಳಿಕ ಒಟ್ಟು ಪದ್ಯವನ್ನು ಓದಬೇಕು.

**ಅಘಮರ್ಷಣ** ಇದು ಒಂದು ಮಂತ್ರ. ಎಲ್ಲ ಪಾಪಗಳ ನಾಶಕ್ಕಾಗಿ ಜಪಿಸುವ ಮಂತ್ರ. ಆ

ಮಂತ್ರವನ್ನು ಹೇಳಿಕೊಂಡು ತೀರ್ಥಸ್ನಾನಗಳಲ್ಲಿ ಮಾಡುವ ಸ್ನಾನಕ್ಕೂ ಈ ಹೆಸರಿದೆ. ಅಘ ಎಂದರೆ ಪಾಪ. ಅದನ್ನು ಮರ್ಷಣ ಮಾಡುವುದು ಎಂದರೆ ನಾಶ ಮಾಡುವುದು.

**ಅಚಾತುರ್ಯ** ಜಾಣತನದಿಂದ ವಂಚಿತವಾದದ್ದು. ಕೌಶಲ ಕೈ ಕೊಟ್ಟದ್ದು. ದಕ್ಷತೆ ಇಲ್ಲದೆ ಹೋದದ್ದು. ಚಾತುರ್ಯವಿಲ್ಲದ್ದು. ಇದು ಚತುರ ಎಂಬ ಶಬ್ದದ ಭಾವವಾಚಕವಾದ ಚಾತುರ್ಯ ಎಂಬುದರ ನಿಷೇಧರೂಪ.

**ಅಚಾನಕ ನೋಡಿ ಅಕಸ್ಮಾತ್**

**ಅಚ್ಚಿಗ** ಇದು ದ್ರಾವಿಡಭಾಷೆಯ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. *೧. ಚಿಂತೆ, ಕಳವಳ, ೨. ಶ್ರಮ, ೩. ಅಪಾಯ, ೪. ಉತ್ಸಾಹ, ಸಂಭ್ರಮ, ಸಡಗರ ೫. ಪ್ರಕಾರ, ಬಗೆ ೬. ನೆಪ ೭.* ಆಶ್ಚರ್ಯ. ಸಂದರ್ಭಕ್ಕೆ ತಕ್ಕಂತೆ ಈ ಅರ್ಥಗಳನ್ನು ಉಪಯೋಗಿಸಬೇಕು. ತಮಿಳಿನಲ್ಲಿ **ಅಚ್ಚಮ್** ತೆಲುಗಿನಲ್ಲಿ **ಅಚ್ಚಿಕ** ಎಂಬ ಜ್ಞಾತಿಶಬ್ದಗಳಿವೆ.

**ಅಚ್ಚುತ** ಇದು ಅಚ್ಯುತ ಎಂಬ ಸಂಸ್ಕೃತ ಶಬ್ದದ ತದ್ಭವ ರೂಪ. ಇದಕ್ಕೆ ವಿಷ್ಣು ಎಂದರ್ಥ. ಚ್ಯುತ ಎಂದರೆ ಕೆಳಕ್ಕೆ ಜಾರಿದ, ಬಿದ್ದ, ಭ್ರಷ್ಟನಾದ, ಚಲಿಸಿದ ಎಂಬ ಅರ್ಥಗಳಿವೆ. ಅ + ಚ್ಯುತ = ಅಚ್ಯುತ. ಇದಕ್ಕೆ ವಿವರಣೆ ಹೀಗೆ. **ನವಿದ್ಯತೇ ಚ್ಯುತಿಃ ಯಸ್ಯ ಸಃ ಅಚ್ಯುತಃ** ಯಾರಿಗೆ ಎಂದೂ ಚ್ಯುತಿ = ನಾಶ ಇಲ್ಲವೋ ಅವನೇ ಅಚ್ಯುತ.

**ಅಜಗರ** ಎಂದರೆ ಸಂಸ್ಕೃತದಲ್ಲಿ ಹೆಬ್ಬಾವು. ಈ ಪ್ರಾಣಿ ತುಂಬ ಜಡವಾದದ್ದು. ಚಟುವಟಿಕೆ ಇಲ್ಲದ್ದು. **ಅಜಗರ ಸ್ಥಿತಿ** ಎಂದರೂ **ಅಜಗರವ್ರತ** ಎಂದರೂ ಇಂಥ ಜಡತ್ವದಲ್ಲಿರುವವನು ಎಂದರ್ಥ. ಇದು ತುಂಬಾ ಹೀನ, ಬೌದ್ಧಿಕ, ದೈಹಿಕ ಸ್ಥಿತಿ ಎಂಬ ಬಗ್ಗೆ ಅನುಮಾನವೇ ಇಲ್ಲ.

**ಅಜಗರ ವೃತ್ತಿ** ಇದು ಸಂಸ್ಕೃತ ಶಬ್ದ. ಅಜಗರ ಎಂದರೆ ಹೆಬ್ಬಾವು. ದೊಡ್ಡ ಹಾವು. ಅಜಗರವು ತಾನು ಮಲಗಿದ್ದ ಕಡೆಗೆ ಬಂದ ಪ್ರಾಣಿಗಳನ್ನು ನುಂಗಿ ಸೋಮಾರಿಯಾಗಿ ಅಲ್ಲೇ ಬಿದ್ದಿರುತ್ತದೆ. ಇದು ಜಡವಾಗಿ ಇರುವ ಪ್ರಾಣಿ. ಯಾರು ತನಗೆ ಬಂದದ್ದರಲ್ಲಿ ತೃಪ್ತಿ ಹೊಂದಿ ಬಾಳುತ್ತಾನೋ ಅವನ ಜೀವನ ಕ್ರಮವೇ ಅಜಗರ ವೃತ್ತಿ. ಹೆಬ್ಬಾವನ್ನು ಅಜಗರ ವೃತ್ತಿ ಎಂದೂ ಕರೆಯುತ್ತಾರೆ.

**ಅಜಮಾಯಿಶಿ ನೋಡಿ: ಅಜಮಾಸು**

**ಅಜಮಾಸು,** ಅಜಮಾಸ್ ಎಂಬುದು ಪಾರಸೀ ಭಾಷೆಯಿಂದ ಬಂದ ಶಬ್ದ. ಅಲ್ಲಿ ಅದು **ಅಜ್‌ಮಾಯಿಷ್** ಎಂದಿದೆ. ಆ ಶಬ್ದಕ್ಕೆ ಪರೀಕ್ಷೆ, ತನಿಖೆ ಎಂದರ್ಥ. ಊಹೆ, ಕಲ್ಪನೆ ಎಂಬ ಅರ್ಥವೂ ಉಂಟು. ಇಂಗ್ಲಿಷಿನ approximateಎಂಬ ಶಬ್ದಕ್ಕೆ ಸರಿಸುಮಾರು ಇದೇ ಅರ್ಥ. ಹತ್ತಿರ, ಹತ್ತಿರ; ಹೆಚ್ಚು ಕಡಿಮೆ ಎಂಬ ಅರ್ಥವನ್ನು ಸೂಚಿಸುತ್ತದೆ. ಕನ್ನಡದಲ್ಲಿ ಅಜಮಾಯಿಶಿ ಎಂಬ ರೂಪ ಹೆಚ್ಚು ಪ್ರಚಾರದಲ್ಲಿದೆ.

**ಅಜಮಿಳ** ಇದು ಸರಿಯಾಗಿ ಅಜಾಮಿಳ ಎಂಬ ರೂಪದ್ದು. ಅಜಾಮಿಳನು ಕನ್ಯಾಕುಬ್ಜದ ಬ್ರಾಹ್ಮಣ. ಈತನ ಕಥೆ ಭಾಗವತದಲ್ಲಿ ಬರುತ್ತದೆ. ಇವನು ತಂದೆ, ತಾಯಿ, ಪತ್ನಿ - ಈ ಎಲ್ಲರನ್ನೂ ಬಿಟ್ಟು ಅನೇಕ ದುರಾಚಾರಗಳನ್ನು ಮಾಡಿ ವೇಶ್ಯೆಯ ಮನೆಯಲ್ಲಿ ಬಿದ್ದಿರುತ್ತಿದ್ದನು. ಆದರೂ ಸಾವು ಸಮೀಪಿಸಿದಾಗ ತನ್ನ ಮಗನಾದ 'ನಾರಾಯಣ'ನನ್ನು ಕರೆದುದರಿಂದ 'ನಾರಾಯಣ ಸ್ಮರಣೆ' ಮಾಡಿದಂತಾಯಿತೆಂದು ಅವನಿಗೆ ಸ್ವರ್ಗವು ದೊರಕಿತಂತೆ. 'ನಾರಾಯಣ ನಾಮ' ಮಹಿಮೆಯನ್ನು ತಿಳಿಸುವುದಕ್ಕೆ ಮಾಡಿದ್ದ ಕತೆ ಇದು. ಅಯೋಗ್ಯವಾದ ಕೆಲಸ ಮಾಡಿದ್ದಕ್ಕಾಗಿ ಅವನಿಗೆ ಅಜಾಮಿಳ ಅನ್ವರ್ಥ ನಾಮವಾಗಿತ್ತು.

**ಅಜಯ, ಅಜೇಯ** ಅಜಯ ಎಂಬ ಶಬ್ದವನ್ನು ಉಪಯೋಗಿಸುವುದಿಲ್ಲ. ಅಪಜಯ ಎಂದರೆ ಸೋಲು, ಗೆಲುವು ಇಲ್ಲದಿರುವಿಕೆ. ಅಜೇಯ ಎಂದರೆ ಗೆಲ್ಲಲು ಆಗದ, ಸೋಲಿಸಲಾಗದ

ವ್ಯಕ್ತಿ ಎಂದು ಅರ್ಥ. ಅಜಯು ಶಬ್ದವನ್ನು ಉಪಯೋಗಿಸಬಾರದು.

**ಅಜರಾಮರ** ಅಜರ + ಅಮರ = ಅಜರಾಮರ. ಅಜರ ಎಂದರೆ ಮುಪ್ಪು ಇಲ್ಲದಿರುವುದು. ಅಮರ ಎಂದರೆ ಮರಣವಿಲ್ಲದಿರುವುದು. ಎರಡೂ ಸೇರಿ ವ್ಯಕ್ತಿವಾಚಕವಾಗಿಯೂ ಉಪಯೋಗಿಸಬಹುದು. ಆಗ ಮುಪ್ಪು ಸಾವು ಇಲ್ಲದವನು, ದೇವತೆ ಎಂದರ್ಥ. ಗಾಂಧಿಯವರ ಹೆಸರು ವಿಶ್ವದಲ್ಲಿ ಅಜರಾಮರವಾಗಿದೆ. ಈ ವಾಕ್ಯವನ್ನು ಗಮನಿಸಿ.

**ಅಜಾತಶತ್ರು** ಯಾರಿಗೆ ಶತ್ರುವೇ ಇಲ್ಲವೋ ಅಂಥವನು; ಶತ್ರು ಹುಟ್ಟಿಲ್ಲದವನು; ಧರ್ಮರಾಯನಿಗೆ ಈ ಶಬ್ದ ಹೆಚ್ಚಾಗಿ ಅನ್ವಯವಾಗುತ್ತದೆ.

**ಅಜೇಯ** ನೋಡಿ: ಅಜಯು

**ಅಜೈರ್ಯಷ್ಟವ್ಯಂ** ಎಂಬ ಶಬ್ದ ಪಂಚತಂತ್ರದ ಕಥೆಯಲ್ಲಿ ಬರುತ್ತದೆ. ಮಾರ್ಜಾಲ - ಬೆಕ್ಕು ಕಪಟ ಸಂನ್ಯಾಸಿಯಂತೆ ಆಡಿದ ಮಾತು. ಅಜ — ೧. ಆಡು ೨. ಒಂದು ಬಗೆಯ ಬತ್ತ. ಅಜೈಃ — ಆಡುಗಳಿಂದ ಯಷ್ಟವ್ಯಂ — ಹೋಮ ಮಾಡಬೇಕು. ಆಡುಗಳಿಂದ ಹೋಮ ಮಾಡಬೇಕು ಎಂಬ ವಾಕ್ಯದ ಅರ್ಥವನ್ನು ಬೆಕ್ಕು ತಪ್ಪಾಗಿ ವಿವರಿಸುತ್ತದೆ. **'ಅಜ ಎಂದರೆ ಏಳು ವರ್ಷದಷ್ಟು ಹಳೆಯ ಬತ್ತ. ಅಂಥ ಬತ್ತದಿಂದ ಹೋಮ ಮಾಡಬೇಕು ಎಂದು ಅರ್ಥ. ಆದ್ದರಿಂದ ವೇದಗಳಲ್ಲಿಯೂ ಪ್ರಾಣಿಹಿಂಸೆ ಮಾಡಬಾರದು ಎಂದು ಹೇಳಿದೆ'** ಎಂದು ಹೇಳಿ, ಬಳಿಕ ತನ್ನ ಬಳಿಗೆ ಬಂದ ಮೊಲವನ್ನೂ ಗುಬ್ಬಿಯನ್ನೂ ಬೆಕ್ಕು ಸಾಯಿಸಿಬಿಡುತ್ತದೆ. ಇದು ಇಲ್ಲಿಯ ವಿವರಣೆ.

**ಅಟಾಟೋಪ** ಈ ಶಬ್ದದಲ್ಲಿ ಆಟೋಪ ಎಂಬ ಎರಡನೆಯ ಭಾಗ ಸಂಸ್ಕೃತ ಶಬ್ದ. ಮೊದಲನೆಯ ಭಾಗದ ಜಾತಕ ಸಂದಿಗ್ಧವಾಗಿದೆ. ಆಟೋಪ ಎಂದರೆ ೧. ಆಡಂಬರ, ಅಬ್ಬರ, ೨. ಗರ್ವದ ಪ್ರದರ್ಶನ, ದರ್ಪ ಎಂದು ಎರಡು ಅರ್ಥಗಳಿವೆ. ಕೆಲವರು ವಿದ್ವಾಂಸರು ಆಟೋಪ + ಆಟೋಪ ಎಂದು ದ್ವಿರುಕ್ತಿಯಾಗಿ ಅಟಾಟೋಪ ಬಂದಿದೆ ಎನ್ನುತ್ತಾರೆ. ಸಂಸ್ಕೃತದಲ್ಲಿ ನಾಗರಹಾವನ್ನು ವರ್ಣಿಸುವ ಒಂದು ಶ್ಲೋಕದ ಕಡೆಯಲ್ಲಿ ಸ್ಫಟಾಟೋಪೋ ಭಯಂಕರ: ಎಂದಿದೆ; ಸ್ಫಟಾ = ಹೆಡೆ. ಈ ಸಂಸ್ಕೃತ ಶಬ್ದವನ್ನು ಉಚ್ಚರಿಸಲಾರದವರು ಅದನ್ನೇ ಅಟಾಟೋಪ ಮಾಡಿರಬಹುದು ಎನ್ನುತ್ತಾರೆ. ಹೀಗೆ ಈ ಶಬ್ದದ ವ್ಯುತ್ಪತ್ತಿಯ ಬಗ್ಗೆ ಅನಿಶ್ಚಿತ ಸ್ಥಿತಿಯಿದೆ. ಆ ಸಂಸ್ಕೃತ ಶ್ಲೋಕ ಹೀಗಿದೆ:

> ***ನಿರ್ವಿಷೇಣಾಪಿ ಸರ್ಪೇಣ ಕರ್ತವ್ಯಾ ಮಹತೀಫಣಾ***
> ***ವಿಷಂ ಭವತುಮಾವಾಸ್ತು ಸ್ಫಟಾಟೋಪೋ ಭಯಂಕರಃ***

**ಅಡನಾಡಿ ಅಡ್ನಾಡಿ** ಎನ್ನುವುದು ಈ ಶಬ್ದದ ಗ್ರಾಮ್ಯರೂಪ. ವ್ಯವಹಾರದಲ್ಲಿ ಅಡ್ಡದಾರಿ ಹಿಡಿಯುವವನನ್ನು ಅಥವಾ ನೇರ ವ್ಯವಹಾರವಿಲ್ಲದವನನ್ನು ಅಡನಾಡಿ ಎನ್ನುತ್ತಾರೆ.

**ಅಡಿಗ** ಎಂದರೆ ಕೆಲಸದ ಆಳು ಎಂಬುದು ಅದರ ಮೂಲಾರ್ಥ. 'ನಾನೊಡೆಯ ಇವನಡಿಗ' ಎಂಬ ಮೋಳಿಗೆ ಮಾರಯ್ಯನ ವಚನವನ್ನು ನೋಡಿ. ಆ ಬಳಿಕ ಕರಾವಳಿಯಲ್ಲಿ ಅದಕ್ಕೆ ದೇವಾಲಯದ ಪೂಜಾರಿ ಎಂಬ ಅರ್ಥವಿದೆ. ಕರಾವಳಿಯಲ್ಲಿಯೇ ಕೆಲವು ಮನೆತನಗಳಿಗೆ ಈ ಹೆಸರು ಇದೆ. ಬಹುಶಃ ಈ ಮನೆತನದವರು ಹಿಂದೆ ದೇವಸ್ಥಾನಗಳಲ್ಲಿ ಮುಖ್ಯವಾದ ಪೂಜೆ ಮಾಡುವವರಾಗಿರಬೇಕು. ಅಡಿಗೆ ಮಾಡುವುದಕ್ಕೂ ಈ ಹೆಸರಿಗೂ ಏನೂ ಸಂಬಂಧವಿಲ್ಲವೆಂದು ಕಾಣುತ್ತದೆ.

**ಅಡಿಗೆ-ಅಡುಗೆ** ಇಲ್ಲಿರುವ ಧಾತು - ಅಡು = ಅಡುಗೆ ಮಾಡು. ಈ ಅಡು ಶಬ್ದಕ್ಕೆ ಗೆ ಎಂಬ ಪ್ರತ್ಯಯ ಸೇರಿ ಅಡುಗೆ ಎಂದಾಗುತ್ತದೆ. ಪಂಪಭಾರತದಲ್ಲಿ ಹಿಡಿಂಬ ಹಿಡಿಂಬೆಗೆ ಹೇಳುತ್ತಾನೆ: **ನಮ್ಮಯ ಭಕ್ಷದೊಳಡು ಪಣ್ಣಿಡು ಪೋಗು ನೀನುಮಾನುಂ ತಿಂಬಂ.**

ಇನ್ನೊಂದು ಕಡೆ ಎನ್ನಟ್ಟ **ಅಡುಗೆಯನುಂಡೊಡೆ** ಎಂಬ ಮಾತು ಬರುತ್ತದೆ. ಆದರೆ ಕ್ರಮೇಣ ಅಡಿಗೆ ಎಂಬ ಪರ್ಯಾಯ ಶಬ್ದವೂ ರೂಢಿಯಲ್ಲಿದೆ. ಅಡಿಗೆಯ ಭಟ್ಟ, ಅಡಿಗೆಯಿಳಿಸು, ಅಡಿಗೆಯ ಸಾಹಿತ್ಯ ಮುಂತಾಗಿ ಪ್ರಯೋಗಗಳಿವೆ. ಆದುದರಿಂದ ಅಡುಗೆ, ಅಡಿಗೆ ಎರಡೂ ಶುದ್ಧರೂಪಗಳೆಂದು ತಿಳಿದು ಉಪಯೋಗಿಸಬಹುದು. ಆದರೂ ಒಬ್ಬ ಲೇಖಕ ಯಾವುದಾದರೂ ಒಂದು ರೂಪವನ್ನೇ ಸದಾ ಬಳಸುವುದು ಒಳ್ಳೆಯದು.

**ಅಡುಗೆ** ನೋಡಿ: ಅಡಿಗೆ

**ಅಡುವಲಿ** ನೋಡಿ: ಅಡುಳ್ಳಿ

**ಅಡುಳ್ಳಿ** ಗ್ರಾಮ್ಯ ಶಬ್ದ. ಅದು ಅಡುವಲಿ ಎಂಬ ಶಬ್ದದ ಪರ್ಯಾಯ ರೂಪ. ಮದುವೆಯ ಗಂಡು ಹೆಣ್ಣಿನ ಒಡನೆ ಓಡಾಡಿಕೊಂಡಿರುವ ಗೆಳೆಯನಿಗೂ ಗೆಳತಿಗೂ ಈ ಮಾತನ್ನು ಉಪಯೋಗಿಸುತ್ತಾರೆ. ಅಡುವಲಿ ಎಂದರೆ ಬಳುವಳಿಯಾಗಿ ಕೊಡುವ ಪದಾರ್ಥಗಳು. ಇಂಥ ವ್ಯಕ್ತಿಗಳನ್ನೂ ಬಳುವಳಿಯಾಗಿಯೇ ಕಳುಹಿಸಿಕೊಡಬೇಕು; ಅವರ ಸ್ನೇಹ ಅಷ್ಟು ಗಾಢವಾಗಿದೆ ಎಂದು ತಿಳಿಸುವ ಶಬ್ದದ ಪ್ರಯೋಗ ಅದು.

**ಅಡ್ಡಗೋಡೆ** ಇದು ಎರಡು ಕಡೆಗೂ ಚಲನೆಗೆ ಅಡ್ಡಲಾಗಿರುವ ಗೋಡೆ. ಒಂದು ಬದಿಯಿಂದ ಅಡ್ಡಗೋಡೆಯ ಮೇಲೆ ದೀಪ ಇಟ್ಟಹಾಗೆ ಎಂಬ ಗಾದೆಯನ್ನು ಅನುಸರಿಸಿದರೆ ಆ ಗೋಡೆ ಮೇಲುಭಾವಣಿಯ ತನಕ ಹೋಗಿರುವುದಿಲ್ಲ, ಕುಳ್ಳಗೋಡೆಯಾಗಿರುತ್ತದೆ ಎಂಬರ್ಥ ಬರುತ್ತದೆ. ಅಡ್ಡಗೋಡೆ ಎಂದರೆ ಆಗ ಅದು ಅರ್ಧ ಗೋಡೆಯಾಗುತ್ತದೆ. ಏಕೆಂದರೆ ಅರ್ಧ ಎಂಬ ಶಬ್ದ ತದ್ಭವವಾದಾಗ ಅಡ್ಡ ಎಂದಾಗುತ್ತದೆ.

**ಅಡ್ಡ ಹೆಸರು** ಈ ಶಬ್ದ - ಅಡ್ಡ ಹೆಸರು - ಎಂಬುದಕ್ಕೆ ಕನ್ನಡನಾಡಿನಲ್ಲಿ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಅರ್ಥಗಳಿವೆ. ಮೈಸೂರು ಬೆಂಗಳೂರು ಮುಂತಾದ ಕಡೆ 'ಅಡ್ಡ ಹೆಸರು' ಎಂದರೆ ತಂದೆ ತಾಯಿಗಳು ಮಗು ಹುಟ್ಟಿದಾಗ ಇಟ್ಟ ಹೆಸರಿನ ಬದಲಾಗಿ ಅಥವಾ ಅದರ ಜತೆಯಾಗಿ ಉಪಯೋಗಿಸುವ ಇನ್ನೊಂದು ಹೆಸರು. ಇದು ವಿನೋದಕ್ಕಾಗಿ ಇಟ್ಟ ಹೆಸರೂ ಆಗಬಹುದು. ಮಂಗಳೂರು, ಧಾರವಾಡ, ರಾಯಚೂರು ಮುಂತಾದ ಕಡೆ ಅಡ್ಡ ಹೆಸರು ವಂಶದ ಪರಂಪರೆಯಾಗಿ ಬಂದ ವೃತ್ತಿ, ಹುಟ್ಟಿದ ಊರು, ಮನೆತನದ ಸಾಧನೆ ಮುಂತಾದುವನ್ನು ಸೂಚಿಸುವ, ವಂಶದವರಿಗೆಲ್ಲ ಅನ್ವಯಿಸುವ ಹೆಸರು. ಕರ್ನಾಟಕದಲ್ಲಿ ಎಲ್ಲ ಕಡೆ ಅಡ್ಡ ಹೆಸರಿಗೆ ಒಂದೇ ಅರ್ಥವಿಲ್ಲ.

**ಅಡ್ಡೇಟಿಗೊಂದು (ಗೊಡ್ಡೇಟು) ಗುಡ್ಡೇಟು** ಅಡ್ಡೇಟಿಗೊಂದು ಗುಡ್ಡೇಟು ಎಂಬುದು ಒಂದು ಗಾದೆ. ಈ ಗಾದೆಯ ಮೂಲ ರೂಪ ಜನರ ಬಾಯಲ್ಲಿ ಬರಬರುತ್ತಾ ತುಂಬ ವ್ಯತ್ಯಾಸ ಹೊಂದಿದೆ. ಅಡ್ಡೇಟು ಎಂಬುದಕ್ಕೆ ಗುರಿಯಿಲ್ಲದೆ ಹೊಡೆದ ಏಟು, ಹೊಡೆತ ಎಂದರ್ಥ. ಹೀಗೆ ಗುರಿಯಿಲ್ಲದೆ ಹೊಡೆಯುತ್ತಿದ್ದರೆ ಅಕಸ್ಮಾತ್ ಒಂದು ಗುರಿಯನ್ನು ತಲುಪಿ ಬಿಡಬಹುದು. ಇದನ್ನು ಇಂಗ್ಲಿಷಿನಲ್ಲಿ Flukeಎನ್ನುತ್ತಾರೆ. ಇದಕ್ಕೆ ಇಂಗ್ಲೀಷ್‌ನಲ್ಲಿ A stroke of good luck ಎಂದು ಅರ್ಥ. ಕನ್ನಡದ ಗಾದೆಯಲ್ಲಿಯೂ ಅದೇ ಅರ್ಥ ಇದೆ. ಆದರೆ ಗುಡ್ಡೇಟು ಅಥವಾ ಗೊಡ್ಡೇಟು ಎಂದಾಗಲಿ ಶಬ್ದವಿದ್ದರೆ ಅದಕ್ಕೆ ಆ ಅರ್ಥ ಬರುವುದಿಲ್ಲ. ಈ ಗಾದೆಯ ಅರ್ಥದ ಬಗ್ಗೆ ಅನುಮಾನವಿಲ್ಲದೆ ಇರುವುದರಿಂದ ಈ ಎರಡನೆಯ ಪದದಲ್ಲಿ ಆಗಿರುವ ಭಾಷಾ ಪ್ರಯೋಗದಲ್ಲಿರುವ ತಪ್ಪನ್ನು ಸರಿ ಮಾಡಬೇಕು. ನಿಜವಾಗಿ ಅದು ಅಡ್ಡೇಟಿಗೊಂದು ಕುರಿತೇಟು - ಕುರ್ತೇಟು. ಕುರ್ತೇಟು ಎಂದರೆ ಗುರಿಯಿಟ್ಟು ಹೊಡೆದ ಏಟು. ಈ ಕುರ್ತೇಟು ಎಂಬ ಶಬ್ದ ಅಡ್ಡೇಟು ಎಂಬ ಶಬ್ದದ ಪ್ರಾಸಕ್ಕಾಗಿ ಗುಡ್ಡೇಟು, ಗೊಡ್ಡೇಟು ಆಗಿದೆ. ಇದು ಭಾಷೆಯಲ್ಲಿ ಆಗಾಗ ಆಗುವ ವೈಚಿತ್ರ್ಯ.

**ಅಡ್ವೊಕೇಟ್** ಮತ್ತೊಬ್ಬರ ಪರವಾಗಿ ವಾದಿಸುವವನು. ಒಂದು ಪಕ್ಷವನ್ನು ವಹಿಸಿ ಅದಕ್ಕೆ

ಬೇಕಾದ ಎಲ್ಲ ವಾದಗಳನ್ನೂ ಶಿಫಾರಸು ಮಾಡುವವನು. ಇಂಗ್ಲಿಷಿನಲ್ಲಿ ಒಂದು ಗಾದೆಯಿದೆ. 'ಎ ಗುಡ್ ಲಾಯರ್, ಬಟ್ ಎ ಪೂರ್ ಅಡ್ವೊಕೇಟ್' ಎಂದು. 'ಎ ಗುಡ್ ಅಡ್ವೊಕೇಟ್, ಬಟ್ ಎ ಪೂರ್ ಲಾಯರ್' ಎಂಬುದು ಇನ್ನೊಂದು ಗಾದೆ. Devils advocate ಎಂಬುದು ಒಂದು ಪ್ರಮುಖ ನುಡಿಗಟ್ಟು. An adverse or captious critic ಎಂದರ್ಥ. ಈ ಶಬ್ದ ಲ್ಯಾಟಿನ್ ಭಾಷೆಯ Advocatus ಎಂಬ ಶಬ್ದದಿಂದ ಬಂದುದು.

**ಅಣ್ಣವಂಟಿಗಾರ** ಅಣ್ಣಾವಟ್ಟಗಾರ, ಅಣ್ಣಾವಂಟಗಾರ ಎಂಬ ಶಬ್ದವೇನೋ, ಕನ್ನಡದಲ್ಲಿ ರೂಢಿಯಲ್ಲಿದೆ. ಈ ಶಬ್ದದಲ್ಲಿ ತಮಿಳಿನ ವೇಟ್ಟುಕಾರನ್ ಶಬ್ದದ ಪ್ರಭಾವವಿದ್ದಂತಿದೆ. ಇದಕ್ಕೆ ಸೋಮಾರಿ ಎಂಬ ಅರ್ಥವಿದ್ದರೂ ಇನ್ನೂ ವ್ಯಾಪಕವಾದ ಅರ್ಥವಿರುವಂತಿದೆ. ಇದು ಸಂಶೋಧನೆಗೆ ಒಳ್ಳೆಯ ಸಾಮಗ್ರಿ. ಇದಕ್ಕೆ ಇತರ ಅಶುದ್ಧ ಪರ್ಯಾಯ ರೂಪಗಳೂ ಇವೆ. ಕಿಟೆಲ್ ಈ ಶಬ್ದಕ್ಕೆ A nice solitary man ಎಂದು ಅರ್ಥ ಹೇಳುತ್ತಾನೆ.

**ಅತಿಕ್ರಮ - ಅಕ್ರಮ** ಅತಿಕ್ರಮ - ತಮಗೆ ಸೇರದ, ಮತ್ತೊಬ್ಬರಿಗೆ ಸೇರಿದ ಸ್ಥಳಕ್ಕ ಅಂಥವರ ಅಪ್ಪಣೆಯಿಲ್ಲದೆ ಪ್ರವೇಶ ಮಾಡುವುದು. Tresspass ಎಂಬುದಕ್ಕೆ ಸರಿಯಾದ ಪದ. ಅಕ್ರಮ: ನ್ಯಾಯವಲ್ಲದ ಕಾರ್ಯ Illegal act ಎಂಬುದಕ್ಕೆ ಸರಿಯಾದ ಶಬ್ದ.

**ಅತಿಥಿ** 'ಅತಿಥಿ' ಎಂಬ ಶಬ್ದ ಇಂಥ ತಿಥಿಯಂದು ಅಂದರೆ ದಿವಸದಲ್ಲಿ ಒಬ್ಬರು ನಮ್ಮ ಮನೆಗೆ ಬರುತ್ತಾರೆ ಎಂಬುದು ತಿಳಿದಿರುವುದಿಲ್ಲವಾದುದರಿಂದ ಅಂಥವರು 'ಅತಿಥಿ' ಯಾಗುತ್ತಾರೆ. ನಾವು ಆಹ್ವಾನ ಮಾಡಿದಾಗ ನಮ್ಮ ಮನೆಗೆ ಬರುವವರನ್ನು 'ಅಭ್ಯಾಗತ' ಎಂದು ಕರೆಯುತ್ತೇವೆ. ಆದುದರಿಂದ ಅಭ್ಯಾಗತ ಎನ್ನುವುದು 'ಅತಿಥಿಗೆ' ವಿರೋಧ ಶಬ್ದ. ಆದರೆ ಕೆಲವು ವೇಳೆ ಅತಿಥಿ / ಅಭ್ಯಾಗತ — ಈ ಎರಡು ಶಬ್ದಗಳ ವ್ಯತ್ಯಾಸ ತಿಳಿಯದವರು ಎರಡನ್ನೂ ಒಂದೇ ಅರ್ಥದಲ್ಲಿ ಉಪಯೋಗಿಸುವ ಪರಿಪಾಠವಿದೆ. ಇದು ತಪ್ಪಿದರೆ ಒಳ್ಳೆಯದು. ಈ ಬಗ್ಗೆ ಮನುಸ್ಮೃತಿಯಲ್ಲಿ ಒಂದು ಶ್ಲೋಕವಿದೆ.

*ಏಕರಾತ್ರಂತು ನಿವಸನ್ನತಿಥಿರ್ಬ್ರಾಹ್ಮಣಃ ಸ್ಮೃತಃ*
*ಅನಿತ್ಯಂ ಹಿ ಸ್ಥಿತೋಯಸ್ಮಾತ್ತಸ್ಮಾದತಿಥಿರುಚ್ಯತೇ.*

*(ಮನುಸ್ಮೃತಿ, ಪುಟ ೮೧, ಶ್ಲೋಕ ೧೦೨)*

ಅನ್ಯರ ಮನೆಯಲ್ಲಿ ಒಂದು ರಾತ್ರಿ ಉಳಿಯುವವನೇ ಅತಿಥಿ. ಅದಕ್ಕಾಗಿಯೇ ಅವನಿಗೆ ಅತಿಥಿ ಅಂದರೆ ಎರಡನೆಯ ತಿಥಿ ಇಲ್ಲ ಎಂಬುದರಿಂದ ಈ ಹೆಸರು ಬಂದಿದೆ.

**ಅತ್ತಿಗೆ** ಈ ಶಬ್ದ ಕನ್ನಡದ ಹಿರಿಯ ವಿದ್ವಾಂಸರಿಂದ ಬಹುವಾಗಿ ಚರ್ಚೆಯಾಗಿರುವ ಶಬ್ದ. ಸಂಸ್ಕೃತದಲ್ಲಿ ಅತ್ತಿಕಾ ಎಂಬ ಶಬ್ದಕ್ಕೆ ಅಕ್ಕ ಎಂಬ ಅರ್ಥವಿದೆ. ಅದೇ ಅತ್ತಿಗೆ ಎಂದು ಕನ್ನಡದ ರೂಪ ಪಡೆಯಬಹುದು. ಆದರೆ ಕನ್ನಡದಲ್ಲಿ ಈ ಶಬ್ದವನ್ನು ಅಕ್ಕ ಎಂಬ ಅರ್ಥದಲ್ಲಿ ಯಾವಾಗಲೂ ಉಪಯೋಗಿಸಿಲ್ಲ. ಕನ್ನಡದಲ್ಲಿ, ತುಳುವಿನಲ್ಲಿ ಅತ್ತಿಗೆ ಎಂದರೆ ಅಣ್ಣನ ಹೆಂಡತಿ. ತಮಿಳಿನಲ್ಲಿಯೂ ಅತ್ತಾಚ್ಚಿ ಎಂದರೆ ಅಣ್ಣನ ಹೆಂಡತಿ. ಹೀಗೆ ಇದರ ಕಥೆ ಇದೆ. ಇನ್ನೊಂದು ಅತ್ತಿಗೆ ಎಂಬ ಶಬ್ದವಿದೆ. ಅದು ಹಳಗನ್ನಡದ ಅಟ್ಟಿಗೆ ಎಂಬ ಶಬ್ದದಿಂದ ಬಂದದ್ದು. ಅಟ್ಟಿ ಎಂದರೆ ಪ್ರೀತಿ ಎಂದರ್ಥ. ಆದ್ದರಿಂದ ಅಟ್ಟಿಗೆ, ಅತ್ತಿಗೆ ಎಂದರೆ ಪ್ರೀತಿಯನ್ನು ಹೊಂದಿರುವವಳು, ಪ್ರೀತಿಗೆ ಪಾತ್ರಳಾದವಳು ಎಂದು ಅರ್ಥವಾಗುತ್ತದೆ. ಈ ಅರ್ಥಕ್ಕೆ ಪಂಪನ ಬಹು ಪ್ರಸಿದ್ಧವಾದ ಪ್ರಯೋಗವನ್ನು ದೃಷ್ಟಾಂತವಾಗಿ ಕೊಡುತ್ತಾರೆ. **'ಅಬ್ಬೆಯೆಂದತ್ತಿಗೆಯೆಂಬ ಮಾತನೆನಗೇನೆನಲಕ್ಕುಮೊ ಪಂಕಜಾನನೆ'** (ಪಂಪಭಾರತ ೧:೭೫) ಇದು ಭೀಷ್ಮನ ಮಾತು.

ಅವನು ಹೇಳುತ್ತಾನೆ: 'ಅತ್ತ ದೇವಲೋಕ, ಇತ್ತ ಭೂಲೋಕ. ಮತ್ತೆ ಪಾತಾಳಲೋಕ.

ಹೀಗೆ ಸಮಸ್ತ ಮೂರು ಲೋಕದವರೆಲ್ಲ ತಿಳಿದಿರುವ ಹಾಗೆ ನಾನು ಪ್ರತಿಜ್ಞೆ ಮಾಡಿರುವುದು ನಾನು ಬ್ರಹ್ಮಚಾರಿಯಾಗಿ ಉಳಿಯುತ್ತೇನೆ ಎಂದು. ಈಗ ಅಂಬೆಯೆಂಬ ನಿನ್ನ ನೆವದಲ್ಲಿ ಸ್ತ್ರೀ ಸುಖಕ್ಕೆ ಮನಸ್ಸು ಮಾಡಿದರೆ ನನ್ನ ಪುರುಷವ್ರತವು ನಾಶವಾಗಿ ಹೋಗುತ್ತದೆ. ಇಲ್ಲಿಯವರೆಗೂ ಸ್ತ್ರೀಯರೆಲ್ಲರನ್ನೂ ಅಜ್ಜೆ ಎಂದು ತಿಳಿದಿದ್ದೇನೆ. ಈಗ ಅತ್ತಿಗೆ — ನಲ್ಲೆ ಎಂದು ಕರೆಯುವುದು ಸಾಧ್ಯವೇ? ನೀನೇ ಹೇಳು ಸುಂದರಿಯಾದ ಅಂಬೆಯೆ!' ಈ ಸಂದರ್ಭದಲ್ಲಿ ಅತ್ತಿಗೆ ಎಂದರೆ ಪ್ರೇಯಸಿ ಎಂದೇ ಅರ್ಥ. ಸೇಡಿಯಾಪು ಕೃಷ್ಣಭಟ್ಟರು ಈ ಬಗ್ಗೆ ಸ್ಪಷ್ಟವಾದ ಲೇಖನವೊಂದನ್ನು ಬರೆದಿದ್ದಾರೆ.

**'ಅತ್ಯತಿಷ್ಠದ್ದಶಾಂಗುಲಂ'** ಈ ಮಾತು ಋಗ್ವೇದದ ಹತ್ತನೆಯ ಮಂಡಲದಲ್ಲಿ ಬರುವ ಒಂದು ಸೂಕ್ತ. ಇತರ ಕಡೆಗಳಲ್ಲಿಯೂ ಇದು ಕಾಣಬರುತ್ತದೆ. ಇದಕ್ಕೆ 'ಪುರುಷ ಸೂಕ್ತ' ಎಂದು ಹೆಸರು. ಆ ಸೂಕ್ತದ ಮೊದಲನೆಯ ಋಕ್ಕು ಹೀಗಿದೆ.

*ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್*
*ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ.*

ಇಲ್ಲಿ ಪುರುಷ ಎಂದರೆ ನಾರಾಯಣ. ಎಂದರೆ ಬ್ರಹ್ಮಾಂಡವನ್ನೇ ಶರೀರವಾಗಿ ಉಳ್ಳ ಆತ್ಮ ಅದರ ವಿವರ ಇಲ್ಲಿದೆ. ಪುರುಷನಿಗೆ ಸಾವಿರ ಎಂದರೆ ಅನೇಕ ಅಂದರೆ ಲೆಕ್ಕವಿಲ್ಲದಷ್ಟು ತಲೆಗಳು. ಹಾಗೆಯೇ ಸಾವಿರಾರು ಕಣ್ಣು ಕಾಲುಗಳು. ಅವನು ಈ ಭೂಮಿಯನ್ನು ಎಲ್ಲ ಕಡೆಯಿಂದಲೂ ವ್ಯಾಪಿಸಿಕೊಂಡು ಅದನ್ನು ಮೀರಿ ಹತ್ತಂಗುಲಗಳಷ್ಟು ದೂರದಲ್ಲಿರುವವನು ಎಂದರ್ಥ. ಬ್ರಹ್ಮನು ಸಗುಣ ನಿರ್ಗುಣಗಳ ಕಲ್ಪನೆಯನ್ನು ಮೀರಿರುವ ವಸ್ತು ಎಂಬುದು ಇಲ್ಲಿರುವ ಅಂತರಾರ್ಥ. ಇದು ವೇದದ ಭಾಗವಾಗಿರುವುದರಿಂದ ಈ ಪುರುಷ ಸೂಕ್ತದ ಅರ್ಥವನ್ನು ಸಂಪೂರ್ಣವಾಗಿ ಗುರುಮುಖದಿಂದ ತಿಳಿದು ತೃಪ್ತಿ ಪಡಬೇಕು.

**ಅತ್ಯಾಚಾರ** ಎಂಬುದನ್ನು ಸವರ್ಣದೀರ್ಘ ಸಂಧಿ ಎಂದೇಕೆ ಕರೆಯಬಾರದು? ಸವರ್ಣಗಳು ಯಾವುವು ಎಂಬುದನ್ನು ಪರಿಶೀಲಿಸಿದರೆ ಉತ್ತರ ದೊರಕುತ್ತದೆ. ಸವರ್ಣ ಎಂದರೆ ಅ - ಆ, ಇ - ಈ, ಉ - ಊ, ಎ - ಏ, ಒ - ಓ ಎಂಬ ಅಕ್ಷರಗಳ ಜೋಡಿಗಳು. ಇವು ಸಂಧಿಯಾಗುವಾಗ ಅ + ಅ = ಆ. ಅ + ಆ = ಆ, ಆ + ಆ = ಆ ಎಂದರ್ಥ. ಅತಿ + ಆಚಾರ ಎಂಬಲ್ಲಿ ಇ + ಆ ಇವು ಸೇರುತ್ತವೆ. ಅವು ಸವರ್ಣಗಳಲ್ಲ. ಆದುದರಿಂದ ಅದು ಸವರ್ಣದೀರ್ಘ ಸಂಧಿ ಅಲ್ಲ. ಇದು ಯಣ್‌ಸಂಧಿ.

**ಅತ್ಯುತ್ತಮ** ಅತಿ + ಉತ್ತಮ = ಅತ್ಯುತ್ತಮ. ಇದು ಈ ಶಬ್ದವನ್ನು ಬಿಡಿಸಿದರೆ ತಿಳಿಯುವ ವಿವರಣೆ. ಅತಿ ಎನ್ನುವುದು ಒಂದು ಉಪಸರ್ಗ. ಹೆಚ್ಚಿನದಾದ ಎಂಬುದು ಇಲ್ಲಿ ಅದರ ಅರ್ಥ. ಉತ್ತಮ ಎಂಬುದು ಗುಣವಾಚಕವಾದರೆ ಶ್ರೇಷ್ಠವಾದ ಎಂದರ್ಥ. ನಾಮಪದವಾದರೆ ಶ್ರೇಷ್ಠನಾದ ವ್ಯಕ್ತಿ ಮತ್ತು ಶ್ರೇಷ್ಠವಾದುದು ಎಂದರ್ಥ. ಉತ್ತಮ ಶಬ್ದವನ್ನು ಬಿಡಿಸಿದರೆ ಉತ್ + ತಮ ಎಂದಾಗುತ್ತದೆ. ಇಲ್ಲಿರುವ ತಮ ಗುಣವಾಚಕದ ತರ ತಮ ಭಾವಗಳನ್ನು ತಿಳಿಸತಕ್ಕದ್ದು. ಈ ತಾರತಮ್ಯ ಜ್ಞಾನದಿಂದ ಅತ್ಯುತ್ತಮ ಎಂದರೆ ಎಲ್ಲರಿಗಿಂತ ಹೆಚ್ಚಾಗಿ ಶ್ರೇಷ್ಠನಾಗಿರುವ ವ್ಯಕ್ತಿ ಅಥವಾ ವಸ್ತು ಎಂದರ್ಥ. ಅತ್ಯುತ್ತಮ ಶಬ್ದದ ಮುಂದೆ ಯಾವ ಶಬ್ದ ಬರುತ್ತದೋ ಅದರಿಂದ ಈ ಶಬ್ದದ ಅರ್ಥವನ್ನು ಚೆನ್ನಾಗಿ ನಿರ್ಧಾರ ಮಾಡಬಹುದು.

**ಅದಿಲ್ ಷಾಹಿ** ಇದರಲ್ಲಿ ಅದಿಲ್ ವಂಶದವರಿಗೆ ಸಂಬಂಧಿಸಿದ ಆಡಳಿತ ಎಂಬರ್ಥವಿದೆ.

**ಅದುವೆ** ಈ ಶಬ್ದದಲ್ಲಿ ಅದು + ಎ ಎಂಬ ಎರಡು ಭಾಗಗಳಿವೆ. ಎ ಏ ಎನ್ನುವ ಅಕ್ಷರಗಳು

ಕನ್ನಡದಲ್ಲಿ ಅವಧಾರಣೆಯ ಪ್ರತ್ಯಯಗಳು. ಈ ಪ್ರತ್ಯಯವು ಅದು ಶಬ್ದಕ್ಕೆ ಸೇರಿದಾಗ ಅದು ಎರಡು ರೂಪಗಳನ್ನು ಪಡೆಯಬಹುದು. ಲೋಪಸಂಧಿಯಾದರೆ ಅದೆ, ಅದೇ ಎಂಬ ರೂಪಗಳನ್ನೂ ವಕಾರಾಗಮ ಸಂಧಿಯಾದರೆ ಅದುವೆ, ಅದುವೇ ಎಂಬ ರೂಪಗಳನ್ನು ಪಡೆಯುತ್ತದೆ. ನೋಡಿ: ಎಂತಲೆ

**ಅಧರ** ಈ ಸಂಸ್ಕೃತ ಶಬ್ದಕ್ಕೆ ಕೆಳಗಿನ ತುಟಿ ಎಂದರ್ಥ. ಓಷ್ಠ ಎಂದರೆ ಮೇಲು ತುಟಿ. ಕವಿಗಳು ಈ ಅಧರ ಶಬ್ದದಿಂದ ಅಧರ ಚುಂಬನ, ಅಧರಪಾನ ಮುಂತಾದ ಶೃಂಗಾರರಸ ವರ್ಣನೆಗೆ ಸಹಾಯಕವಾಗುವ ಶಬ್ದಗಳನ್ನು ಸೃಷ್ಟಿಸುತ್ತಾರೆ. ಓಷ್ಠಪಾನ, ಓಷ್ಠಚುಂಬನ ಎಂಬ ಶಬ್ದಗಳು ಪ್ರಯೋಗದಲ್ಲಿಲ್ಲ.

**ಅಧಿಕೃತ ಅಧಿಕಾರ ಹೊಂದಿದ ಅಧಿಕಾರಿ ಅಥವಾ ಅಧಿಕೃತ ಅಧಿಕಾರಿಗಳು.** ಈ ಪ್ರಯೋಗಗಳು ತಪ್ಪು, ಭಾಷೆಯ ಸೌಂದರ್ಯವನ್ನು ಕಾಪಾಡುವ ದೃಷ್ಟಿಯಿಂದ. ಸರಕಾರದಲ್ಲಿ ಒಂದೇ ಮಟ್ಟದ ಅಧಿಕಾರಿಗಳಲ್ಲಿ ಕೆಲವರಿಗೆ ವಿಶೇಷವಾದ ಕಾರ್ಯಗಳನ್ನು ನಿಯೋಜಿಸಿರುತ್ತಾರೆ. ಅಂಥವರಿಂದ ಈ ಬಗೆಯ ಜಾಹೀರಾತುಗಳು ಪ್ರಕಟವಾಗುತ್ತವೆ. 'ಅಧಿಕೃತ' ಎಂಬ ಶಬ್ದಕ್ಕೇ ಅಧಿಕಾರಿ ಎಂಬ ಅರ್ಥವಿದೆ. ಆದುದರಿಂದ ಅಧಿಕೃತ ಅಧಿಕಾರಿ ಎನ್ನುವುದು ಅಷ್ಟು ಸಮಂಜಸವಲ್ಲ. 'ನಿಯುಕ್ತ ಅಧಿಕಾರಿ' ಎಂದು ಉಪಯೋಗಿಸಬಹುದು. ಆಡಳಿತದಲ್ಲಿ ಕನ್ನಡ ಭಾಷೆಯನ್ನು ಇನ್ನೂ ಖಚಿತಪಡಿಸಿಕೊಳ್ಳಬೇಕಾಗಿದೆಯೆಂಬುದಕ್ಕೆ ಇದೊಂದು ನಿದರ್ಶನ.

**ಅಧಿವೇಶನ** ಈ ಶಬ್ದಕ್ಕೆ ಸಭೆ ಕೂಡುವುದು, ಸಮಾವೇಶ, ಸಮ್ಮೇಳನ ಎಂದು ಅರ್ಥ. ಇದು ತುಂಬ ಪ್ರಚಾರದಲ್ಲಿರುವ ಶಬ್ದ.

**ಅಧ್ಯಕ್ಷ, ಅಧ್ಯಕ್ಷೆ, ಅಧ್ಯಕ್ಷಿಣಿ, ಸದಸ್ಯ, ಸದಸ್ಯೆ** ಕನ್ನಡದಲ್ಲಿ ಸಂಸ್ಕೃತ ಶಬ್ದಗಳನ್ನು ಪುಲ್ಲಿಂಗದಿಂದ ಸ್ತ್ರೀಲಿಂಗಕ್ಕೆ ವ್ಯತ್ಯಾಸ ಮಾಡುವ ಪ್ರತ್ಯಯಗಳನ್ನು ಕುರಿತು ಬೇಕಾದ ಹಾಗೆ ಚರ್ಚೆಗಳಾಗಿವೆ. ಸಂಸ್ಕೃತದ ವ್ಯಾಕರಣ ಸೂತ್ರಗಳ ಪ್ರಕಾರವಾಗಿಯೇ ಎಲ್ಲರೂ ಸ್ತ್ರೀಲಿಂಗ ರೂಪಗಳನ್ನು ಸಿದ್ಧಪಡಿಸುವುದಿಲ್ಲ. ಮೊದಲನೆಯದಾಗಿ ಆ ವ್ಯಾಕರಣ ಸೂತ್ರಗಳು ಅವರಿಗೆ ಪರಿಚಯವಾಗಿರುವುದಿಲ್ಲ. ಕನ್ನಡದಲ್ಲಿ ಅಂಥ ರೂಪಗಳನ್ನು ಸಿದ್ಧಪಡಿಸುವ ಬೇರೆಯ ಸೂತ್ರಗಳ ಪರಿಚಯುವಿರುತ್ತದೆ. ಆದುದರಿಂದ ಹೊಸ ರೂಪಗಳನ್ನು ಸೃಷ್ಟಿಸುತ್ತಾರೆ. **ಅಧ್ಯಕ್ಷ - ಅಧ್ಯಕ್ಷಿಣಿ ಉಪಾಧ್ಯಾಯ- ಉಪಾಧ್ಯಾಯಿನಿ**, ಎಂಬಂತೆ ಪ್ರಚುರವಾಗಿರುವ ರೂಪಗಳನ್ನು ಸೃಷ್ಟಿಸಿಕೊಂಡಿಲ್ಲವೆ? **ಅಧ್ಯಕ್ಷೆ, ಉಪಾಧ್ಯಾಯೀ** ಎಂಬ ರೂಪಗಳು ಸರಿಯಾದುವೆಂದು ಯಾರೂ ಅವನ್ನು ಉಪಯೋಗಿಸುತ್ತಿಲ್ಲ. ಇನ್ನೂ ಈಚೆಗೆ 'ಇಗ' ಎಂಬ ಪ್ರತ್ಯಯವನ್ನು ಪುಲ್ಲಿಂಗಕ್ಕೆ ಹಚ್ಚುವಂತೆ 'ಇಣಿ' ಎಂಬ ಪ್ರತ್ಯಯವನ್ನು ಸ್ತ್ರೀಲಿಂಗ ರೂಪಕ್ಕೆ ಹಚ್ಚುವ ಅಭ್ಯಾಸವನ್ನು ಪ್ರಾರಂಭಿಸಿದ್ದಾರೆ. ಇಂಗ್ಲಿಷಿನಿಂದ ಬಂದ ಶಬ್ದಗಳಿಗೂ ಈ ಪ್ರತ್ಯಯಗಳನ್ನು ಹಚ್ಚಿ ಹೊಸ ಶಬ್ದಗಳನ್ನು ಸೃಷ್ಟಿಸುತ್ತಿದ್ದಾರೆ. ಉದಾಹರಣೆಗೆ. ಬೆರಳಚ್ಚು - ಬೆರಳಚ್ಚಿಗ, ಬೆರಳಚ್ಚುಗಾರ್ತಿಗಿಂತ ಟೈಪು, ಟೈಪಿಗ, ಟೈಪಿಣಿ ಎಂಬ ರೂಪಗಳು ಜನಪ್ರಿಯವಾಗತೊಡಗಿವೆ. ಇವು ಉಳಿಯುತ್ತವೆಯೋ ಎಂಬುದನ್ನು ಕಾದು ನೋಡಬೇಕು. ಉಳಿದರೆ ನನಗಂತೂ ಸಂತೋಷವೇ! ವ್ಯಾಕರಣದ ಪ್ರಕಾರ ಅಶುದ್ಧವಾದ ನಾಯಕಿ, ಕಥಾನಾಯಕಿ, ರಂಗನಾಯಕಿ ಮುಂತಾದ ಶಬ್ದಗಳನ್ನು ಯಾರೂ ಕನ್ನಡ ಭಾಷೆಯಿಂದ ಅಳಿಸಿ ಹಾಕುವುದಕ್ಕಾಗುವುದಿಲ್ಲ. ಹೀಗೆ ಹೊಸ ರೂಪಗಳನ್ನು ನಿರ್ಮಾಣ ಮಾಡುವುದು ತಪ್ಪಲ್ಲ. ಕಿವಿಗೆ ಹಿತವಾಗಿ, ಬರಹಕ್ಕೆ ಸಂಗ್ರಹವಾಗಿ, ಉಚ್ಚಾರಣೆಗೆ ಸುಲಭವಾಗಿ ಇದ್ದರೆ ಅವು ಬದುಕಿಬಿಡುತ್ತವೆ. ಅಧ್ಯಕ್ಷ - ಅಧ್ಯಕ್ಷೆ, ಸದಸ್ಯ - ಸದಸ್ಯೆ ಇವು ನಾವು ಉಪಯೋಗಿಸುತ್ತಿರುವ ಶಬ್ದಗಳು. ಮಂತ್ರಿ ಶಬ್ದ ಮಂತ್ರಿಗಳು ಎಂಬ ಗೌರವ

ಬಹುವಚನ ರೂಪವನ್ನು ಪಡೆದು ಪುರುಷ ಮಂತ್ರಿಗಳಿಗೂ ಸ್ತ್ರೀ ಮಂತ್ರಿಗಳಿಗೂ ಅನ್ವಯವಾಗುತ್ತದೆ. ಮಂತ್ರಿ ಎನ್ನುವ ಶಬ್ದ ಹೀಗೆ ಇಬ್ಬರಿಗೂ ಅನ್ವಯವಾಗಬಹುದು. ಸಂಸ್ಕೃತದಲ್ಲೂ ಸಹ ಆ ಶಬ್ದ ಸ್ತ್ರೀ ಪುಂ ನಪುಂಸಕವಾಗಿದೆ. ಆದರೆ ಅಧ್ಯಕ್ಷಿಣಿ, ಮಂತ್ರಿಣಿ ಎಂಬ ರೂಪಗಳು ತಪ್ಪು.

**ಅಧ್ಯಯನ - ಅಧ್ಯಾಯನ.** ಅಧ್ಯಯನ ಎಂಬುದು ಸರಿಯಾದ ಶಬ್ದ. ಅಧ್ಯಯ ಎಂಬ ಶಬ್ದವೂ ಇದೆ. ಈ ಶಬ್ದಗಳಿಗೆ ವಿದ್ಯಾಭ್ಯಾಸ, ಶಿಕ್ಷಣ, ಕಲಿಯುವಿಕೆ ಎಂಬ ಅರ್ಥಗಳಿವೆ. ಅಧ್ಯಾಯಯನ ತಪ್ಪು. ಅಧ್ಯಾಪನ ಎಂಬ ಶಬ್ದಕ್ಕೆ ಶಿಕ್ಷಣ ನೀಡುವುದು, ಕಲಿಸುವುದು ಎಂಬ ಅರ್ಥವಿದೆ. ಅಧ್ಯಯ ಎಂಬ ಶಬ್ದಕ್ಕೆ ಅಧ್ಯಾಯ, ಸರ್ಗ, ಸಂಧಿ ಎಂಬ ಅರ್ಥಗಳೂ ಇವೆ.

**ಅಧ್ಯಾತ್ಮಿಕತೆ, ಆಧ್ಯಾತ್ಮಕತೆ** ಈ ಎರಡರ ಬಗ್ಗೆ ವಿವರ ನೀಡಬೇಕಾಗಿದೆ. ಅಧ್ಯಾತ್ಮ ಎಂದರೆ, *೧. ಆತ್ಮನನ್ನು ಕುರಿತ, ೨. ಆತ್ಮನ ಸಂಬಂಧವಾಗಿ, ೩. ಆತ್ಮಕ್ಕೆ ಸಂಬಂಧಿಸಿದ್ದು* ಎಂಬ ಅರ್ಥಗಳಿವೆ. ಅಧ್ಯಾತ್ಮಕ ಎಂದರೆ ಆತ್ಮಜ್ಞಾನ ಎಂದರ್ಥ. ಅಧ್ಯಾತ್ಮಿಕ ಎಂದರೆ ಆಧ್ಯಾತ್ಮಕ್ಕೆ ಸಂಬಂಧಿಸಿದ ಎಂಬ ಗುಣವಾಚಕದ ಅರ್ಥವಿದೆ. ಆಧ್ಯಾತ್ಮಿಕ ಎಂದರೂ ಅದೇ ಅರ್ಥ. ಈ ಎರಡು ಶಬ್ದಗಳಿಂದ ಆಧ್ಯಾತ್ಮಿಕತೆ, ಅಧ್ಯಾತ್ಮಿಕತೆ ಎಂಬ ಶಬ್ದರೂಪಗಳನ್ನು ಸಾಧಿಸಬಹುದು. ಆ ಎರಡು ಶಬ್ದಕ್ಕೂ ಅಧ್ಯಾತ್ಮ ವಿಷಯಕ್ಕೆ ಸಂಬಂಧಿಸಿರುವುದು ಎಂದು ಅರ್ಥ ಉಂಟಾಗುತ್ತದೆ.

ಕನ್ನಡದಲ್ಲಿ ಈ ಬಗೆಯ ಶಬ್ದಗಳ ಪ್ರಯೋಗ ಹೆಚ್ಚಾಗಿದೆ. ಅಧ್ಯಾತ್ಮ ಎಂಬುದು ಸಂಸ್ಕೃತದಲ್ಲಿ ಒಂದು ಅವ್ಯಯ. ಅಧ್ಯಾತ್ಮ ಜ್ಞಾನ ಎಂಬುದು ಸಾಧಾರಣವಾಗಿ ಉಪಯೋಗಿಸಬೇಕಾದ ಶಬ್ದ. ಆದರೆ ಕನ್ನಡದಲ್ಲಿ ಎಲ್ಲ ಬಗೆಯ ಶಬ್ದಗಳನ್ನು ಹೆಚ್ಚು ಹೆಚ್ಚು ಪ್ರಯೋಗಿಸಬೇಕಾಗಿದೆ ಈಗ. ಈ ಕಾರಣದಿಂದ ಅಧ್ಯಾತ್ಮಿಕತೆ, ಆಧ್ಯಾತ್ಮಿಕತೆ, ಅಧ್ಯಾತ್ಮಕತೆ ಮುಂತಾದ ರೂಪಗಳನ್ನು ಬಳಸುತ್ತಿದ್ದಾರೆ. ವ್ಯಾಕರಣ ಶುದ್ಧತೆಯ ಬಗ್ಗೆ ಆಲೋಚನೆ ಮಾಡದೆ ಪ್ರಚಾರಕ್ಕೆ ತರಲಾಗಿದೆ. ಇವು ಉಳಿದುಬಿಡುತ್ತವೆ.

**ಅಧ್ಯಾಪಕ** ಇದು ಗುರು, ಉಪದೇಶ ಮಾಡುವವನು ಎಂಬರ್ಥದಲ್ಲಿದ್ದು ಉಪಾಧ್ಯಾಯನಿಗೆ ಅನ್ವಯವಾಗುತ್ತದೆ. ಎಂಥವರಿಗೆ ಉಪದೇಶ ಮಾಡಬೇಕು ಎಂಬ ಬಗ್ಗೆ ಶಾಸ್ತ್ರಗಳಲ್ಲಿ ಕೆಲವು ಕಟ್ಟುಪಾಡುಗಳಿವೆ.

**ಅನಂತರ, ಆನಂತರ** ಅನಂತರ ಎಂಬುದು ಸರಿಯಾದ ಶಬ್ದ. ಆನಂತರ ತಪ್ಪು. ಸಂಸ್ಕೃತದಲ್ಲಿ ಆನಂತರ್ಯ, ಆನಂತ್ಯ ಎಂಬ ಶಬ್ದಗಳಿವೆ. ಅನಂತರದ ಭಾವ - ಆನಂತರ್ಯ. ಆನಂತ್ಯಕ್ಕೆ ಕೊನೆಯಿಲ್ಲದಿರುವಿಕೆ, ಅನಂತತೆ ಎಂಬ ಅರ್ಥವಿದೆ. ಆನಂತರ ಎಂಬ ಶಬ್ದ ಸಂಸ್ಕೃತದಲ್ಲಿ ಆಗಲಿ ಕನ್ನಡದಲ್ಲಾಗಲಿ ಇಲ್ಲ. ಇದು ಆ +ನಂತರ (ನೆನಪಿರಲಿ ನಂತರ ಎಂಬುದು ತಪ್ಪು ಶಬ್ದ) ಎಂದು **ಅದಾದ ಮೇಲೆ** ಎನ್ನುವುದಕ್ಕೆ ಕೆಲವರು ಬಳಸುವ ಅಪಶಬ್ದ.

**ಅನಘಡ್** ಇದು ಮರಾಠೀ ಭಾಷೆಯ ಶಬ್ದ. ಸಂಸ್ಕೃತದ ಘಟನಾ ಶಬ್ದಕ್ಕೆ ಸಮೀಪವಾದದ್ದು. ಇದಕ್ಕೆ ಇನ್ನೂ ಸಂಪೂರ್ಣವಾಗಿ ರೂಪುಗೊಳ್ಳದ ಎಂದರ್ಥ. ಗುಣವಾಚಕದ ಅರ್ಥ. ಮರಾಠೀ ಭಾಷೆಯವರು ಇರುವ ಕಡೆ (ಉದಾಹರಣೆ ಬೀದರ್ ಜಿಲ್ಲೆ) ಬಳಕೆಯಲ್ಲಿದೆ.

**ಅನಡ್ಯ** ತಪ್ಪು ಶಬ್ದ. ಅನಡ್ವ =ಎತ್ತು, ಗೂಳಿ. ಅದು ಸಂಸ್ಕೃತ ಶಬ್ದ.

**ಅನಧ್ಯಯನ** ವಿದ್ಯಾ ವ್ಯಾಸಂಗಕ್ಕೆ ನಮ್ಮ ಸಂಪ್ರದಾಯವು ನೀಡಿರುವ ವಿರಾಮ ಕಾಲ ಎಂದು ಈ ಸಂಸ್ಕೃತ ಶಬ್ದದ ಅರ್ಥ. ಅನಧ್ಯಯನ, ಅನಧ್ಯಾಯ ಈ ಎರಡು ಶಬ್ದಗಳಿಗೂ ಒಂದೇ ಅರ್ಥ. ವ್ಯಾಸಂಗಕ್ಕೆ ವಿಶ್ರಾಂತಿ. **ನ ಅಧ್ಯಾಯೇ ಅನಧ್ಯಯನಮ್** ಎಂದು ವಿವರಣೆ. ಅಧ್ಯಯನಕ್ಕೆ ಪಾಡ್ಯ, ಅಷ್ಟಮಿ, ಚತುರ್ದಶಿ, ಪೌರ್ಣಿಮೆ ಮತ್ತು ಅಮಾವಾಸ್ಯೆ ಇವು ಬಿಡುವಿನ ದಿನಗಳು. ಕೆಲವು ವೇಳೆ ನಕ್ಷತ್ರಗಳಿಗೆ ಬರುವ ಪ್ರಾಧಾನ್ಯದಿಂದ ಎರಡು ದಿನ,

ಮೂರು ದಿನ, ನಾಲ್ಕು ದಿನ ಬೇರೆ ಅನಧ್ಯಯನ ಬರಬಹುದು.

**ಅನನುಕೂಲ** 'ಅನುಕೂಲ' ಎಂದರೆ ನದಿ, ತೊರೆ ಮುಂತಾದವುಗಳ ದಡದ ಪರಿಮಿತಿಗೆ ಒಳಪಟ್ಟಿರುವುದು ಎಂದರ್ಥ. ವ್ಯಾಪಕಾರ್ಥದಲ್ಲಿ, ಹೊಂದಿಕೆಯಾಗಿರುವುದು ಎಂದೂ ಸ್ಥಿತಿವಂತನಾಗಿರುವುದು ಎಂದೂ ಅರ್ಥವಾಗಬಹುದು. ಹಾಗಿಲ್ಲದಿರುವುದು 'ನ + ಅನುಕೂಲ'. ಇದು ಸಂಸ್ಕೃತ ವ್ಯಾಕರಣದ ನಿಯಮದ ಪ್ರಕಾರ 'ಅನನುಕೂಲ' ಎಂದಾಗುತ್ತದೆ. 'ಅನುಕೂಲ'ದ ಭಾವ 'ಆನುಕೂಲ್ಯ' 'ಅನನುಕೂಲ'ದ ಭಾವ 'ಅನನುಕೂಲ್ಯ'. ಆದರೆ '**ಅನಾನುಕೂಲ**' ಎನ್ನುವುದು ತಪ್ಪು. ಒಂದು ವೇಳೆ ಮಾತಿನಲ್ಲಿ ಬಂದರೂ ಬರಹದಲ್ಲಿ ಬರದಂತೆ ನೋಡಿಕೊಳ್ಳುವುದು ಒಳ್ಳೆಯದು.

**ಅನನ್ಯ** ನ + ಅನ್ಯ ಎಂಬ ಎರಡು ಸೇರಿ ಅನನ್ಯ ಎಂದಾಗಿದೆ. ಇದು ಸಂಸ್ಕೃತ ಶಬ್ದ. ಸ್ವರದ ಹಿಂದೆ ನ ಸೇರಿದಾಗ ಅದು ಅನ ಎಂದು ಬದಲಾಗುತ್ತದೆ. ಈ ಶಬ್ದಕ್ಕೆ ಬೇರೆಯಿಲ್ಲದ, ಅದ್ವಿತೀಯ, ಎಂಬ ಅರ್ಥ ಬರುತ್ತದೆ. ಅನ್ಯಮನಸ್ಕ = ಮನಸ್ಸನ್ನು ಬೇರೆಯ ಕಡೆಗೆ ಹರಿಸಿರುವವನು. ಅನನ್ಯ ಮನಸ್ಕ =ಬೇರೆ ಕಡೆಗೆ ಮನಸ್ಸನ್ನು ಹರಿಸದೆ ಏಕಾಗ್ರಚಿತ್ತದಿಂದ ಇರುವವನು. ಹೀಗೆ ಅದರ ಅರ್ಥವ್ಯಾಪ್ತಿ.

**ಅನನ್ಯಾ, ಅಮೂಲ್ಯ** ಎಂಬ ಹೆಸರುಗಳು ಚೆನ್ನಾಗಿವೆ. ಅನನ್ಯಾ ಎಂದರೆ ಅಸಮಾನಳು ಎಂದರ್ಥ. ಅಮೂಲ್ಯ ಎಂದರೆ ಬೆಲೆ ಕಟ್ಟಲಾಗದ ರೂಪ, ಗುಣವುಳ್ಳವಳು ಎಂದರ್ಥ. ಈ ಹೆಸರುಗಳನ್ನು ಹೆಣ್ಣುಮಕ್ಕಳಿಗೆ ಇಡಬಹುದು. ಆದರೆ ಕನ್ನಡದಲ್ಲಿ ಅನನ್ಯ ಎಂದು ಬರೆಯಬಾರದು. ಅನನ್ಯೆ ಎಂಬುದು ಸರಿ. ಹೆಸರಾದರೆ ಅನನ್ಯ ಉಳಿದುಬಿಡುತ್ತದೆ.

**ಅನಭಿಶಕ್ತದೊರೆ** ಈ ಶಬ್ದ ಸರಿಯಲ್ಲ. ಅನಭಿಷಿಕ್ತ ಎಂದಿರಬೇಕು. ಅಭಿಷೇಕ ಎಂದರೆ ೧. *ನಿರ್ಮಲವಾದ ಜಲವನ್ನೂ ಹಾಲು ಮುಂತಾದುವನ್ನೂ ಇತರ ಶ್ರೇಷ್ಠ ದ್ರವವಸ್ತುಗಳನ್ನೂ ದೇವರ ವಿಗ್ರಹದ ಮೇಲೆ ಸುರಿಯುವುದು. ೨. ರಾಜನೇ ಮುಂತಾದವರು ಪಟ್ಟಕ್ಕೆ ಬಂದಾಗ ಅವರಿಗೆ ಮಾಡಿಸುವ ಮಂಗಳಸ್ನಾನ, ೩. ಶಾಂತಿ ಮುಂತಾದ ಕರ್ಮಗಳಲ್ಲಿ ಮಾಡುವ ಪ್ರೋಕ್ಷಣೆ.* ಅಭಿಷಿಕ್ತ ಎಂದರೆ ಹಾಗೆ ಅಭಿಷೇಕ ಮಾಡಿದ ಎಂದು ಗುಣವಾಚಕದ ಅರ್ಥ. ಇದು ವಿಶೇಷಣವಾಗಿ ಉಪಯೋಗವಾಗುತ್ತದೆ. ಆ ಶಬ್ದಕ್ಕೆ ನಿಷೇಧಾರ್ಥದ 'ನ' ಎಂಬುದು ಸೇರುತ್ತದೆ. ಆಗ ನ +ಅಭಿಷಿಕ್ತ =ಅನಭಿಷಿಕ್ತ ಎಂದರೆ ಅಭಿಷೇಕವನ್ನು ಹೊಂದದೆ ಇರುವ ಎಂದರ್ಥ. ಅನಭಿಷಿಕ್ತ ದೊರೆ ಎಂದರೆ ಅಭಿಷೇಕವನ್ನು ಹೊಂದದೆಯೇ ದೊರೆಯಾಗಿರತಕ್ಕವನು, ಹಾಗೆ ಅಧಿಕಾರ ಚಲಾಯಿಸುವವನು. **ಅನಭಿಶಕ್ತ** ತಪ್ಪು ರೂಪ.

**ಅನಿಕೇತನ** ಭಗವದ್ಗೀತೆಯ ೧೨ನೆಯ ಅಧ್ಯಾಯದಲ್ಲಿ ೧೯ನೆಯ ಶ್ಲೋಕದಲ್ಲಿ ಈ ಮಾತು ಬರುತ್ತದೆ. ಅನಿಕೇತ, ಅನಿಕೇತನ ಎರಡಕ್ಕೂ ಒಂದೇ ಅರ್ಥ. **ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್ ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ ಮೇ ಪ್ರಿಯೋನರಃ** "ಯಾವನು ನಿಂದೆಯನ್ನೂ ಪ್ರಶಂಸೆಯನ್ನೂ ಏಕರೀತಿಯಿಂದ ಸ್ವೀಕರಿಸುತ್ತಾನೋ, ಯಾವನು ತನಗೆ ದೊರಕಿದಷ್ಟರಲ್ಲಿಯೇ ಸಂತೋಷ ಪಡುತ್ತಾನೋ, ಆತ್ಮನು ಸ್ಥಿರನಾದವನು ಎಂದು ತಿಳಿದ ಭಕ್ತನಾಗಿರುತ್ತಾನೋ ಮನೆ ಮೊದಲಾದವುಗಳಲ್ಲಿ ಪರಮಾತ್ಮನ ಮೇಲಿರುವುದಕ್ಕಿಂತ ಹೆಚ್ಚಾದ ಆಸಕ್ತಿ ಇಲ್ಲದಿರುವನೋ ಅಂಥವನೇ ನನಗೆ ಪ್ರಿಯನು" ಎಂಬುದು ಆ ಶ್ಲೋಕದ ಅರ್ಥ. ಅಂದರೆ ಪರಮಾತ್ಮನೇ ಎಲ್ಲಕ್ಕಿಂತ ಶ್ರೇಷ್ಠ. ಇಹದ ಆಸ್ತಿಪಾಸ್ತಿಗಿಂತ ಪರಮಾತ್ಮನಲ್ಲಿ ಭಕ್ತಿ ಮುಖ್ಯ ಎಂದು ತಿಳಿದವನು ಅನಿಕೇತನ. ಅನಿಕೇತನ ಎಂದರೂ ಒಂದೇ ಸ್ಥಿರಮತಿ ಎಂದರೂ ಒಂದೇ. ಅದು ಮಹಾಭಕ್ತನ ಹೆಸರು. ಮೈಸೂರಿನ ಕುವೆಂಪು ನಗರದಲ್ಲಿ ಒಂದು ಬೀದಿಯ ಎರಡು ಸಾಲುಗಳಲ್ಲಿಯೂ ಹೊಸಮನೆಗಳು ಶೋಭಿಸುತ್ತಿರುವ ರಸ್ತೆಗೆ **ಅನಿಕೇತನ ರಸ್ತೆ** ಎಂದು ಹೆಸರು ಇಟ್ಟಿದ್ದಾರೆ.

ಡಾ॥ ಎಸ್. ರಾಧಾಕೃಷ್ಣನ್ ಅವರ ಇಂಗ್ಲಿಷ್ ಅನುವಾದ ಹೀಗಿದೆ: aniketah: no fixed abode; homeless. Though he fulfils all his social duties he is not tied to any family or home. As these souls exist not for this family or that social group, but live for mankind as a whole, they do not have a settled home. ಡಾ॥ ಡಿ. ವಿ. ಗುಂಡಪ್ಪನವರ ವಿವರಣೆ ಹೀಗಿದೆ: ಅನಿಕೇತಃ — ತನ್ನ ಮನೆ, ತನ್ನ ಜನ ಎಂಬ ಸಂಕುಚಿತ ಭಾವನೆಯೂ, ಸ್ವಾಭಿಮಾನವೂ ಇಲ್ಲದವನು (ಜೀವನ ಧರ್ಮಯೋಗ ಅಥವಾ ಶ್ರೀಮದ್ಭಗವದ್ಗೀತಾ ತಾತ್ಪರ್ಯ ಪು. ೩೯೪, ಸಾಲು ೧೧೦) ಭಗವದ್ಗೀತೆಯಿಂದ ಒಂದು ಶಬ್ದದ ಅರ್ಥವನ್ನು ವಿವರಿಸುವುದರಿಂದ ಕನ್ನಡ ವಿದ್ವಾಂಸರು ಸಂಸ್ಕೃತವೆಂಬ ಗೀರ್ವಾಣವಾಣಿಯ ಪಾವಿತ್ರ್ಯವನ್ನು ಕೆಡಿಸುತ್ತಾರೆಂಬ ಸಂದೇಹ ಬೇಡ. ಭಗವದ್ಗೀತೆಯಿಂದ ಬೇರೆಯಾಗಿಯೂ ನೋಡಬಹುದು. ಸಂಸ್ಕೃತದಲ್ಲಿ ಅ ಎಂದರೆ ವಿಷ್ಣು. ಆದುದರಿಂದ ವಿಷ್ಣುವನ್ನೇ ಮನೆಯಾಗಿ ಗಣಿಸಿರುವವನು ಎಂದರೆ ಸಂಸ್ಕೃತದಲ್ಲಿ ತಪ್ಪೆ?

**ಅನಿಮಿಷ** ಎಂದರೂ **ಅನಿಮೇಷ** ಎಂದರೂ ಒಂದೇ ಅರ್ಥ. ಕಣ್ಣು ಮುಚ್ಚುವುದು ಬಿಡುವುದು ಅಥವಾ ರೆಪ್ಪೆಯ ಚಲನೆ ಇಲ್ಲದಿರುವುದು. ಇದಲ್ಲದೆ ಈ ಎರಡು ಶಬ್ದಗಳಿಗೂ ೧. ವಿಷ್ಣು, ನಾರಾಯಣ, ೨. ಮೀನು ೩. ದೇವತೆ ಎಂಬ ಅರ್ಥಗಳೂ ಇವೆ.

**ಅನಿವಾರ್ಯಕ್ಕೆ ವಿರುದ್ಧ ಶಬ್ದ.** ನಿವಾರ್ಯ x ಅನಿವಾರ್ಯ — ಇವು ವಿರುದ್ಧ ಶಬ್ದಗಳು. ಅರ್ಥ ನಿವಾರಿಸಬಹುದಾದುದು x ನಿವಾರಿಸಲಾಗದುದು.

**ಅನಿಶ-ಅನೀಶ** ಅನಿಶ ಎಂಬ ಸಂಸ್ಕೃತದ ಶಬ್ದಕ್ಕೆ ಎಡೆಬಿಡದ, ಬಿಡುವಿಲ್ಲದ ಎಂದರ್ಥ. ಈ ಶಬ್ದದ ಪ್ರಯೋಗ ಕನ್ನಡದಲ್ಲಿ ಕಡಮೆ. ಸಂಸ್ಕೃತದಲ್ಲಿ ಹೆಚ್ಚು. ಅನೀಶ- ಇದೂ ಸಂಸ್ಕೃತ ಶಬ್ದವೇ. ಇದಕ್ಕೆ ಇತರರಿಗೆ ಅಧೀನನಾಗಿಲ್ಲದವನು, ಸರ್ವಸ್ವತಂತ್ರನಾದವನು ಎಂದರ್ಥ. ಅಂದರೆ ಪರಮಾತ್ಮ, ವಿಷ್ಣು, ಸರ್ವೇಶ್ವರ ಎಂದರ್ಥ. ಕಾಳಿದಾಸನ ರಘುವಂಶದಲ್ಲಿ **ಸರ್ವಪ್ರಭುರನೀಶಸ್ತ್ವಂ** ಎಂಬ ವಾಕ್ಯ ಬರುತ್ತದೆ.

**ಅನಿಷ್ಟ ಕಾಲಕ್ಕೆ ನಾಯಿ ಮೊಟ್ಟೆಯಿಟ್ಟಿತು** ಇದು ಒಂದು ಗಾದೆಯ ಮಾತು. ಆದರೆ ಈ ಗಾದೆಯ ಸರಿಯಾದ ಪಾಠ ಹೀಗಿದೆ - ಕೇಡುಗಾಲಕ್ಕೆ ನಾಯಿಯೂ ಮರಿಹಾಕಿತು. ತನ್ನ ಸಂಸಾರಕ್ಕೆ ಕಷ್ಟಕಾಲ ಬಂದಿರುವಾಗ ಮನೆ ನಾಯಿಯೂ ಮರಿಹಾಕಿದರೆ ಕಷ್ಟ ಹೆಚ್ಚಲ್ಲವೇ? ನಾಯಿ ಕೂಡ ಒಂದೇ ಮರಿಯನ್ನು ಹಾಕುವುದಿಲ್ಲ; ನಾಲ್ಕಾರು ಮರಿಗಳನ್ನು ಹಾಕುತ್ತದೆ. ಆದುದರಿಂದ ಅವುಗಳೆಲ್ಲಕ್ಕೂ ಆಹಾರ ತಂದು ಹಾಕುವ ಅವಸ್ಥೆ ಮನೆಯ ಯಜಮಾನನಿಗೆ ನಿಜವಾಗಿ ಅವ್ಯವಸ್ಥೆ. ಇಂಥ ಸ್ಥಿತಿಯನ್ನು ವರ್ಣಿಸುವ ಗಾದೆ ಇದು. ಇರುವ ತೊಂದರೆಗಳ ಜೊತೆಗೆ ಇತರ ತೊಂದರೆಗಳೂ ಕ್ಲೇಶಗಳೂ ಬಂದಾಗ ಈ ಗಾದೆಯನ್ನು ಉಪಯೋಗಿಸಿ ಮಾತನಾಡುತ್ತಾರೆ.

**ಅನೀಶ** ನೋಡಿ: ಅನಿಶ

**ಅನು-ಅಪ** ಅನು ಎನ್ನುವುದು ಅಪ ಎನ್ನುವುದು ಎರಡೂ ಉಪಸರ್ಗಗಳು. ಅನು ಎಂಬುದು ಹಿಂದೆ, ಜೊತೆಯಲ್ಲಿ, ಅನಂತರ, ಯೋಗ್ಯ ಎಂಬ ಅರ್ಥಗಳಲ್ಲಿ ಶಬ್ದಗಳ ಹಿಂದೆ ಸೇರುತ್ತದೆ. ಅಪ ಎನ್ನುವುದು ವಿರುದ್ಧವಾದ, ಕೆಟ್ಟ, ನೀಚ, ಹೀನ, ದುಷ್ಟ ಎಂಬ ಅರ್ಥಗಳಲ್ಲಿ ಶಬ್ದಗಳ ಹಿಂದೆ ಸೇರುತ್ತದೆ. ಧಾತುವಿನ ಅರ್ಥವನ್ನು ಈ ಉಪಸರ್ಗಗಳು ಎಲ್ಲರ ಗಮನಕ್ಕೆ ಬರುವಷ್ಟು ಬದಲಾಯಿಸುತ್ತವೆ. ಆದರೆ ಈ ಉಪಸರ್ಗಗಳಿಗೆ ಸ್ವತಂತ್ರವಾದ ಪ್ರಯೋಗ ಎಂದೂ ಇಲ್ಲ. ಅಪ ಎಂಬುದು ಆವಶ್ಯಕವಾದ ಎಂದೂ ಅರ್ಥವನ್ನು ನೀಡುತ್ತದೆ.

**ಅನುಕೂಲ ಸಿಂಧು** ಸಂಸ್ಕೃತದಲ್ಲಿ ಧರ್ಮಸಿಂಧು ಎಂಬ ಪ್ರಸಿದ್ಧ ಧರ್ಮ ಗ್ರಂಥವಿದೆ. ಅದರಲ್ಲಿ

ಹಿಂದುಗಳಿಗೆ ಯಾವ ಯಾವ ಸಮಯಕ್ಕೆ ಯಾವ ಯಾವ ಆಚರಣೆ ಸರಿ ಎಂಬುದರ ವಿವರವಾದ ನಿರೂಪಣೆಯಿದೆ. ಆದರೆ ಜನಸಾಮಾನ್ಯರು ಆ ಧರ್ಮಮಾರ್ಗವನ್ನು ಅನುಸರಿಸುವುದು ಕಷ್ಟವಾದಾಗ ತಮಗೆ ಬೇಕಾದಂತೆ ಅದನ್ನು ತಿರುಚುತ್ತಾರೆ. ಅಂಥ ಆಧಾರರಹಿತ ಹೇಳಿಕೆಗಳನ್ನು **ಅನುಕೂಲಸಿಂಧು** ಎಂದು ವಿನೋದವಾಗಿ ಕರೆಯುತ್ತಾರೆ.

**ಅನುನಯ** ಎಂಬ ಶಬ್ದ ಸಾಧಾರಣವಾಗಿ ಪ್ರಯೋಗದಲ್ಲಿರುವ ಶಬ್ದ. ಈ ಶಬ್ದಕ್ಕೆ ೧. *ವಿನಯ, ಸರಳತೆ ೨. ಸಮಾಧಾನ ಮಾಡುವಿಕೆ ೩. ಬೇಡಿಕೊಳ್ಳುವುದು* ಇತ್ಯಾದಿ ಅರ್ಥಗಳಿವೆ. **ಅನುನಯಮಪನಯ** ಎಂಬ ಪ್ರಸಿದ್ಧ ಅಷ್ಟಪದಿಯನ್ನು ಎಲ್ಲರೂ ಕೇಳಿರುತ್ತಾರೆ. ಅನುನಯನ ಎಂಬ ಶಬ್ದವನ್ನು ವ್ಯಾಕರಣ ರೀತಿಯಲ್ಲಿ ಸಾಧಿಸುವುದು ಸಾಧ್ಯವಾದರೂ ಯಾರೂ ಆ ಶಬ್ದವನ್ನು ಉಪಯೋಗಿಸಿರುವಂತೆ ಕಂಡುಬರುವುದಿಲ್ಲ. ಪ್ರಯೋಗವನ್ನು ಕೊಟ್ಟರೆ ಅರ್ಥವನ್ನು ತಿಳಿಸುವುದು ಸಾಧ್ಯ. ಅನು ಒಂದು ಉಪಸರ್ಗ. ಧಾತುಗಳಿಗೆ ಹತ್ತಿಸಲಾಗುತ್ತದೆ. ಕ್ರಿಯಾವಿಶೇಷಣವಾಗಿಯೂ ಉಪಯೋಗವಾಗುತ್ತದೆ. ಆಗ ಅದಕ್ಕೆ, ಆ ಬಳಿಕ, ಅನಂತರ ಎಂಬ ಅರ್ಥಗಳು ಬರುತ್ತವೆ.

**ಅನುಭವಿ - ಅನುಭಾವಿ** ಅನುಭವಗಳು ಹೆಚ್ಚಾಗಿರುವವನು ಅನುಭವಿ. ಒಳ್ಳೆಯ ವ್ಯವಹಾರ ಜ್ಞಾನವುಳ್ಳವನು. ಅನುಭಾವಿ ಅಪರೋಕ್ಷ ಜ್ಞಾನವನ್ನು ಪಡೆದವನು. ಪರಮಾತ್ಮನ ವಿಷಯದಲ್ಲಿ ನೇರವಾದ ಸಂಪರ್ಕ ಪಡೆದ ಅನುಭವವನ್ನು ಹೊಂದಿದವನು. Mystic ಎಂಬ ಶಬ್ದಕ್ಕೆ ಸಮಾನ ಅರ್ಥ. ವಿಶೇಷ ಆಧ್ಯಾತ್ಮಿಕ ಜ್ಞಾನ ಪಡೆದವನು ಎಂದರ್ಥ.

**ಅನುಮಾನ** ಸಂಸ್ಕೃತ ಶಬ್ದ. ಸಂಸ್ಕೃತದಲ್ಲಿ ಅದಕ್ಕೆ *೧. ತರ್ಕ, ಊಹೆ, ೨. ಉಪಾಯ, ಯುಕ್ತಿ ೩. ಸಾದೃಶ್ಯ ೪. ನಿಶ್ಚಿತ ಜ್ಞಾನಕ್ಕೆ ಕಾರಣ ಅಥವಾ ಪ್ರಮಾಣ* ಎಂಬ ಅರ್ಥಗಳಿವೆ. ಕೊನೆಯ ಅರ್ಥವಾದ ಪ್ರಮಾಣದಲ್ಲಿ ನಾಲ್ಕು ಬಗೆಗಳಿವೆ. ಪ್ರತ್ಯಕ್ಷ ಪ್ರಮಾಣ, ಅನುಮಾನ ಪ್ರಮಾಣ, ಆಗಮ ಪ್ರಮಾಣ, ಐತಿಹ್ಯ ಪ್ರಮಾಣ. ಅನುಮಾನ ಪ್ರಮಾಣವೆಂದರೆ ಅಡುಗೆಯ ಮನೆಯಲ್ಲಿ ಹೊಗೆಯನ್ನೂ ಬೆಂಕಿಯನ್ನೂ ಸದಾ ಒಟ್ಟಿಗೆ ನೋಡಿದವನಿಗೆ ಬೆಟ್ಟದ ಮೇಲೆ ಹೊಗೆ ಕಂಡರೆ ಅಲ್ಲಿಯೂ ಬೆಂಕಿಯಿದೆ ಎಂದು ತೀರ್ಮಾನ ಮಾಡುವುದು ಸುಲಭ ಎಂಬ ತರ್ಕ. ಇಂಥ ಅರ್ಥವುಳ್ಳ ಅನುಮಾನ ಎಂಬ ಶಬ್ದಕ್ಕೆ ಶಂಕೆ, ಸಂದೇಹ, ಗುಮಾನಿ ಎಂಬ ಅರ್ಥಗಳೂ ಕನ್ನಡದಲ್ಲಿ ಸೇರಿಕೊಂಡಿವೆ. ಹೀಗೆ ಹೊಸ ಅರ್ಥವನ್ನು ಪಡೆದ ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಅನೇಕವಾಗಿವೆ.

**ಅನುರಾಧ - ಅನೂರಾಧ** ಈ ಎರಡೂ ಸಂಸ್ಕೃತದಲ್ಲಿ ಪ್ರಯೋಗದಲ್ಲಿದ್ದು, ಎರಡೂ ಸರಿಯಾಗಿವೆ. ಇದು ೨೭ ನಕ್ಷತ್ರಗಳಲ್ಲಿ ೧೭ನೆಯದು. ಈ ನಕ್ಷತ್ರದಲ್ಲಿ ಜನಿಸಿದವರು ಶೂರರೂ, ಸುಂದರರೂ, ಸನ್ಮಾರ್ಗಿಗಳೂ ಆಗಿರುತ್ತಾರಂತೆ. ಧನಿಕರಾಗಿ, ಸಂಚಾರ ಮನೋಭಾವವುಳ್ಳವರಾಗಿರುತ್ತಾರಂತೆ. ಹೆಣ್ಣು ಮಕ್ಕಳಿಗೆ ಈ ಹೆಸರಿಡುವುದು ಸಾಮಾನ್ಯ.

**ಅನುವಂಶೀಯ, ಆನುವಂಶಿಕ** ಅನುವಂಶ ಎಂದರೆ ವಂಶಾವಳಿಯ ತಖ್ತೆ, ಪಟ್ಟಿ. ಪರಂಪರೆಯ ದಾಖಲೆ. ಇದನ್ನು ಗುಣವಾಚಕವಾಗಿ ಮಾಡಿದರೆ ಅನುವಂಶೀಯ, ಆನುವಂಶಿಕ ಎಂಬ ರೂಪಗಳಾಗುತ್ತವೆ. ವಂಶಾವಳಿಗೆ ಸಂಬಂಧಿಸಿದ ಎಂದರ್ಥ.

**ಅನುವಾದ, ತರ್ಜುಮೆ, ಭಾಷಾಂತರ** ಅನುವಾದ ಎಂಬುದು ಒಂದು ಮೂಲಗ್ರಂಥವನ್ನು ಅನುಸರಿಸಿ ಮಾಡಿದ ಬರವಣಿಗೆ. ಇದು ಸಂಪೂರ್ಣವಾಗಿ ಆ ಗ್ರಂಥದ ಪ್ರತಿ ಶಬ್ದವನ್ನೂ ಉಪಯೋಗಿಸಿರುವ ಪ್ರತಿಯಾಗಿಲ್ಲದೆ ಇರಬಹುದು. ತರ್ಜುಮೆ ಎಂಬುದು ಅರಬ್ಬಿಯ ತರ್ಜುಮಾ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಇಂಗ್ಲಿಷಿನ Translation ಎಂಬ ಅರ್ಥವಿದೆ. ಭಾಷಾಂತರ ಎಂದರೆ ಬೇರೆ ಭಾಷೆ ಎಂದಷ್ಟೇ ಅರ್ಥ. ಬೇರೆ ಭಾಷೆಯಲ್ಲಿ ಬರೆಯುವುದು ಎನ್ನಬೇಕಾದರೆ ಭಾಷಾಂತರೀಕರಣ ಎನ್ನಬೇಕು. ಆದರೆ ಈಗ ಈ

ಮೂರನ್ನೂ translation ಎಂಬ ಶಬ್ದಕ್ಕೆ ಸಮಾನ ಶಬ್ದವಾಗಿ ಎಲ್ಲರೂ ಉಪಯೋಗಿಸುತ್ತಿದ್ದಾರೆ. ವಿವರಗಳು ಮಾತ್ರ ಸಮನಾಗಿಲ್ಲ. ಕನ್ನಡಕ್ಕೆ ತರ್ಜುಮೆ ಮಾಡುವುದಕ್ಕೆ ಕನ್ನಡಿಸು ಎಂಬ ಸೊಗಸಾದ ಶಬ್ದ ಸೃಷ್ಟಿಯಾಗಿದೆ. ನಮ್ಮ ಪುಣ್ಯ.

**ಅನುಷ್ಠಾನ** ಈ ಶಬ್ದಕ್ಕೆ ಆಚರಣೆ ಮಾಡುವುದು, ಕಾರ್ಯ ನಿರ್ವಹಣೆ, ನೆರವೇರಿಸುವುದು ಮುಂತಾದ ಅರ್ಥಗಳಿವೆ. ಇದನ್ನೇ **ಅನುಷ್ಟಾನ** ಎಂದು ತಪ್ಪಾಗಿ ಬರೆಯಬಾರದು.

**ಅನುಸೂಯಾ** ಅನಸೂಯಾ ಎಂಬುದು ಸರಿಯಾದ ರೂಪ. ಅಸೂಯೆಯಿಲ್ಲದವಳು ಎಂದು ಅದಕ್ಕೆ ಅರ್ಥ. ಅನುಸೂಯ ತಪ್ಪು.

**ಅನುಸ್ವಾರವು (ಂ) ಉಚ್ಚಾರಣೆಯಲ್ಲಿ ಬೇರೆ ಬೇರೆಯಾಗುವುದು ಏತಕ್ಕೆ?**

ಅನುನಾಸಿಕ, ಅನುಸ್ವಾರ ಎಂಬ ಎರಡು ಶಬ್ದಗಳು ವ್ಯಾಕರಣಕ್ಕೆ ಸಂಬಂಧಪಟ್ಟವು. ಅನುನಾಸಿಕ ಎಂದರೆ ಮೂಗಿನ ಮೂಲಕ ಉಚ್ಚರಿಸುವ ವರ್ಣ. ಸಿದ್ಧಾಂತ ಕೌಮುದಿಯಲ್ಲಿ **'ಮುಖ ಸಹಿತ ನಾಸಿಕಯಾ ಉಚ್ಚಾರ್ಯಮಾಣೋ ವರ್ಣಃ'** ಎಂದು ಇದರ ವಿವರಣೆ. ಯ, ವ, ಲ ಮತ್ತು ವರ್ಗ ಪಂಚಮಾಕ್ಷರಗಳು ಇವುಗಳಿಗೆ ಅನುನಾಸಿಕ ಎಂದು ಹೆಸರು. ಅನುಸ್ವಾರವೂ ಮೂಗಿನ ಸಹಾಯದಿಂದಲೇ ಉಚ್ಚಾರವಾಗುವುದಾದರೂ ಇದು ಸ್ವರವರ್ಣದ ಅನಂತರವೇ ಉಚ್ಚರಿಸಲು ಸಾಧ್ಯವಾದುದು. ಇದೇ ಕನ್ನಡದಲ್ಲಿ ಸೊನ್ನೆಯ -ಂ- ಆಕಾರದಲ್ಲಿರುತ್ತದೆ. ಕನ್ನಡದಲ್ಲಿ ಎಲ್ಲ ವರ್ಗೀಯ ಪಂಚಮಾಕ್ಷರಕ್ಕೂ ಅನುಸ್ವಾರವನ್ನೇ ಉಪಯೋಗಿಸುವ ಪದ್ಧತಿ ಇದೆ. ಆದುದರಿಂದ ಆಯಾ ಶಬ್ದದಲ್ಲಿ ಅನುಸ್ವಾರದ ಮುಂದೆ ಇರುವ ವ್ಯಂಜನವು ಸೇರಿದ ವರ್ಗದ ಪಂಚಮಾಕ್ಷರದ ಉಚ್ಚಾರಣೆ ಸ್ವಾಭಾವಿಕವಾಗಿಯೇ ಬರುತ್ತದೆ. ಈಗ ಕುಂಬಾರಗುಂಡಿ ಎಂಬ ಊರಿನ ಹೆಸರನ್ನೇ ತೆಗೆದುಕೊಳ್ಳಿ. ಮೊದಲನೆಯ ಅನುಸ್ವಾರ ಮ್, ಎರಡನೆಯ ಅನುಸ್ವಾರ ಣ್, ಇದಕ್ಕೆ ಅವುಗಳ ಮುಂದೆ ಇರುವ ಬ, ಡ ಎಂಬ ಅಕ್ಷರಗಳು ಕಾರಣ. ಸರಿತಾನೆ. ಇದಲ್ಲದೆ ಕೆಲವು ವೇಳೆ ಒಂದೇ ಬಗೆಯ ಬರಹ ಇದ್ದರೂ ಅರ್ಥವ್ಯತ್ಯಾಸವಾದಾಗಲೂ ಉಚ್ಚಾರಣೆಯಲ್ಲಿ ಸ್ವಲ್ಪ ಭೇದವಿರುತ್ತದೆ. ಈಗ ತಂದೆ = ಅಪ್ಪ. ತಂದೆ = ತೆಗೆದುಕೊಂಡು ಬಂದೆ ಎಂಬ ಎರಡನ್ನೂ ಉಚ್ಚರಿಸಿನೋಡಿ. ವ್ಯತ್ಯಾಸ ತಿಳಿದುಬರುತ್ತದೆ. ಅರ್ಥ ವ್ಯತ್ಯಾಸವನ್ನು ತಿಳಿಸುವುದಕ್ಕೆ ಉಚ್ಚಾರಣೆ ಒಂದು ಸಾಧನ ಎಂದು ಇದರಿಂದ ತಿಳಿಯಬಹುದು.

**ಅನೂಚಾನ** ಇದು ಸಂಸ್ಕೃತ ಶಬ್ದ. ನಿಯಮಬದ್ಧವಾದ ಮಾತಿನಲ್ಲಿ ಈ ಶಬ್ದದ ಅರ್ಥವಿದೆ ಎಂದು ವಿದ್ವಾಂಸರು ನಿರೂಪಿಸುತ್ತಾರೆ. ವೇದಾಧ್ಯಯನವನ್ನು ಸಾಂಗವಾಗಿ ಪೂರೈಸಿ ಆ ವಿದ್ಯೆಯನ್ನು ಕುರಿತು ಮಾತನಾಡುತ್ತಿರುವವನು ಎಂಬ ಅರ್ಥವಿದೆ. ವೇದವಿದ್ಯಾಪಾರಂಗತ ಎಂದರ್ಥ. ಇದು ನಾಮಪದದ ಅರ್ಥ. ಇದನ್ನು ಗುಣವಾಚಕವಾಗಿ ಉಪಯೋಗಿಸುತ್ತಾರೆ. ಕನ್ನಡದಲ್ಲಿ ಅನೂಚಾನವಾಗಿ ಎಂಬಂತೆ. ಆಗ ಆ ಶಬ್ದಕ್ಕೆ ಸಭ್ಯತೆಯಿಂದ ಕೂಡಿದ, ವಿನಯದಿಂದ ಕೂಡಿದ ಎಂದು ಅರ್ಥ. ಹಿಂದಿನಿಂದಲೂ ಹೊಂದಿಕೊಂಡು ಬಂದಿರುವುದು ಎಂಬ ಅರ್ಥವೂ ಇದೆ.

**ಅನೆಯ** ಒಂದನೆಯ, ಎರಡನೆಯ, ನೂರನೆಯ ಮುಂತಾಗಿ ಬರೆಯುವಲ್ಲಿ ಒಂದನೇ, ಎರಡನೇ, ನೂರನೇ ಎಂದು ವಿದ್ವಾಂಸರೂ ಬರೆಯುತ್ತಾರಲ್ಲ! 'ಅನೇ' ಸಾಧುವೇ?

'ಅನೆಯ, ಅನೇ' ಎಂಬ ಎರಡೂ ವಸ್ತುಗಳ ಸ್ಥಾನವನ್ನೂ ಕ್ರಮವನ್ನೂ ತಿಳಿಸಲು ಸಂಖ್ಯಾವಾಚಕಗಳಿಗೂ ಪರಿಮಾಣ ವಾಚಕಗಳಿಗೂ ಹಚ್ಚುವ ಪ್ರತ್ಯಯಗಳು. ಇವುಗಳನ್ನು ವಿದ್ವಾಂಸರು ಸರಿಯಾಗಿಯೇ ಉಪಯೋಗಿಸಿದ್ದಾರೆ. ಇತರ ಕಡೆಗಳಲ್ಲಿಯೂ 'ಯ' ಕಾರವು ಲೋಪವಾಗಿ 'ಏ' ಕಾರವು ಅದಕ್ಕೆ ಬದಲು ಬರುವುದನ್ನು ನಾವು ಕಾಣಬಹುದು. 'ಶಂಕರಯ್ಯ ಗೌಡ' ಜನರ ಬಾಯಿಮಾತಿನಲ್ಲಿ 'ಶಂಕರೇಗೌಡ' ಆಗುತ್ತದೆ. ನೋಡಿ: ಒನ್

**ಅನೇಕ** ನ + ಏಕ = ಅನೇಕ, ನ + ಅಗತ್ಯ = ಅನಗತ್ಯ ಮುಂತಾದುವನ್ನು ನಞ್ ಸಮಾಸ ಎಂದು ಕರೆಯುತ್ತಾರೆ. ಹಾಗೆ ಕರೆಯುವುದು ಸರಿ. ನಞ್ ತತ್ಪುರುಷದ ವ್ಯಾಕರಣ ನಿಯಮಗಳೇ ಇಲ್ಲಿಗೂ ಸರಿಯಾಗಿ ಹೊಂದುತ್ತವೆ. ತಪ್ಪಲ್ಲ. ಅದಕ್ಕೆ ಉದಾಹರಣೆಯಾಗಿ ನಪುಂಸಕ, ನಕ್ರ, ನಾಕ ಮುಂತಾದ ಶಬ್ದಗಳನ್ನು ನೀಡಬಹುದು.

ನ + ಸ್ತ್ರೀ + ನ + ಪುಮಾನ್ = ನಪುಂಸಕಃ
ನ + ಕ್ರಮತಿ ಇತಿ = ನಕ್ರಃ
ನ + ಅಕಮ್ = ನಾಕಂ = ಸ್ವರ್ಗ

ಹೀಗೆ ಅವುಗಳ ವಿಗ್ರಹವಾಕ್ಯ.

**ಅನ್ನು**, ಎನ್ನು ಎಂಬ ಎರಡು ಧಾತುಗಳಿವೆ. ಕನ್ನಡದಲ್ಲಿ ಅನ್ನು - ಅನ್ನಿಸು; ಅನ್ನಿಸು - ಅನಿಸಿಕೆ; ಎನ್ನು - ಎನಿಸು; ಎನಿಸು - ಎನಿಸಿಕೆ ಹೀಗೆ ರೂಪಗಳು ಬೆಳೆಯುತ್ತವೆ. ಅನ್ನಿಸಿಕೆ, ಎನ್ನಿಸಿಕೆ ಎಂಬ ರೂಪಗಳು ಸಾಧ್ಯವಾದರೂ ಅವು ಪ್ರಯೋಗದಲ್ಲಿಲ್ಲ.

**ಅನ್ವೇಷಣೆ** ಎಂದರೆ ಹುಡುಕುವುದು. ಯಾವುದಾದರೂ ವಸ್ತುವನ್ನೋ, ವಿಷಯವನ್ನೋ, ಅಭಿಪ್ರಾಯವನ್ನೋ ಅನುಸರಿಸಿ ಹುಡುಕುವುದು. ಹೊಸ ವಿಷಯಗಳನ್ನು ಅಥವಾ ವಸ್ತುಗಳನ್ನು ಹುಡುಕಿಕೊಂಡು ಮಾಡುವ ಪ್ರಯತ್ನ. ಸಂಶೋಧನೆ ಮಾಡುವಾಗ ಈ ಅನ್ವೇಷಣೆಯ ಕೆಲಸ ಅಧಿಕವಾಗುತ್ತದೆ. ಸಂಸ್ಕೃತದಲ್ಲಿ **ಇಷು ಇಚ್ಛಾಯಾಮ್** ಎಂಬ ಧಾತುವಿದೆ. ಅದಕ್ಕೆ ಅನು ಎಂಬ ಉಪಸರ್ಗವು ಸೇರಿ ಈ ಶಬ್ದ ಸಾಧಿತವಾಗುತ್ತದೆ.

**ಅನ್ಯೋನ್ಯ** ಇದು ಸಂಸ್ಕೃತ ಶಬ್ದ - ಪರಸ್ಪರ ಎಂದು ಅರ್ಥ. ಒಬ್ಬರಿಗೊಬ್ಬರು ಬೇಕಾಗಿರುವಿಕೆ ಎಂದು ವಿವರವಾದ ಅರ್ಥ. ಈ ಶಬ್ದವನ್ನು ಅನ್ಯಸ್ + ಅನ್ಯ = ಅನ್ಯೋನ್ಯ ಎಂದು ಸಂಧಿ ಬಿಡಿಸಬೇಕೆಂಬುದು ವಿದ್ವಾಂಸರ ಮತ. ಪರಸ್ಪರ ಶಬ್ದವನ್ನೇ ಇದರೊಡನೆ ಹೋಲಿಸಿ ನೋಡಿ. ಈ ಶಬ್ದದಲ್ಲಿರುವ ವ್ಯಾಕರಣದ ವೈಚಿತ್ರ್ಯವನ್ನು ಎಲ್ಲ ವಿದ್ವಾಂಸರೂ ಗಮನಿಸಿದ್ದಾರೆ. ಕರ್ಮ ವ್ಯವಹಾರದ ಅಂತರ ವಿನಿಮಯದ ಸೂಚನೆ ಇಲ್ಲಿದೆ.

**ಅಪ** ನೋಡಿ: ಅನು

**ಅಪಘಾತ** ಇದು ಸಂಸ್ಕೃತ ಶಬ್ದ. ಇದಕ್ಕೆ ಹಾನಿ, ತೊಂದರೆ ಎಂಬ ಅರ್ಥದ ಜೊತೆಗೆ ಮರಣವನ್ನು ತರುವ ಆಕಸ್ಮಿಕ ಘಟನೆ ಎಂಬ ಅರ್ಥವೂ ಇದೆ. Fatal Accident.

**ಅಪಭ್ರಂಶ** ಎಂದರೆ ಸಂಸ್ಕೃತ ಭಾಷೆಯಿಂದ ವಿರೂಪ ಹೊಂದಿದ ಭಾಷೆ. ಒಂದು ಪ್ರಾಕೃತ ಭಾಷೆಯ ಹೆಸರು. ಸಂಸ್ಕೃತ ಅಥವಾ ಪ್ರಾಕೃತ ಭಾಷೆಗಳಿಂದ ವಿಕಾರ ಹೊಂದಿ ನಮ್ಮಲ್ಲಿ ಬಳಕೆಗೆ ಬಂದಿರುವ ಶಬ್ದವೂ ಆಗುತ್ತದೆ.

**ಅಪರಾಹ್ಣ** ಮಧ್ಯಾಹ್ನ. ಒಂದು ಹಗಲನ್ನು ಸಾಮಾನ್ಯವಾಗಿ ಐದು ಭಾಗಗಳಾಗಿ ವಿಂಗಡಿಸುತ್ತಾರೆ. ಅವುಗಳ ಹೆಸರು: ಪ್ರಾತಃಕಾಲ, ಸಂಗಮ, ಮಧ್ಯಾಹ್ನ, ಅಪರಾಹ್ಣ, ಸಾಯಾಹ್ನ. ಒಂದೊಂದೂ ಮೂರು ಮುಹೂರ್ತಗಳಷ್ಟು ಹೊತ್ತು ಇರುತ್ತದೆ. ಮೂರನೆಯದು ಮಧ್ಯಾಹ್ನ, ನಾಲ್ಕನೆಯದು ಅಪರಾಹ್ಣ.

**ಅಪರ್ಣಾ** ಈ ಶಬ್ದವು ಪಾರ್ವತೀದೇವಿಯನ್ನು ನಿರ್ದೇಶಿಸುತ್ತದೆ. ಈಶ್ವರನನ್ನು ಪತಿಯಾಗಿ ಪಡೆಯಬೇಕೆಂದು ತಪಸ್ಸು ಮಾಡುತ್ತಿದ್ದ ಕಾಲದಲ್ಲಿ ಆಹಾರಕ್ಕಾಗಿ ಎಲೆಗಳನ್ನೂ ಅಪೇಕ್ಷಿಸಲಿಲ್ಲ ಎಂದು ಅಪರ್ಣಾ ಎಂದು ಹೆಸರು ಬಂದಿದೆ. **ತಪಸಿ ಆಹಾರಾರ್ಥಂ ಪರ್ಣಮಪಿ ನೈಚ್ಛದಿತ್ಯಪರ್ಣಾ** ಎಂದು ಟೀಕೆಗಳಿವೆ. ಪಿತೃಋಣವನ್ನು ತೀರಿಸಿದುದರಿಂದ ಅಪರ್ಣಾ ಎಂದು ಹೆಸರು ಬಂದಿತೆಂದು ಮತ್ತೊಂದು ವಿವರಣೆಯೂ ಇದೆ. ಈ ಶಬ್ದಕ್ಕೆ ಪಾರ್ವತಿ, ದುರ್ಗಿ, ಮೃಡಾನಿ ಎಂದರ್ಥ. ಒಂದೊಂದಕ್ಕೂ ಬೇರೆ ಬೇರೆ ವ್ಯುತ್ಪತ್ತಿ ಇದೆ.

**ಅಪವಾದ** ಈ ಸಂಸ್ಕೃತ ಶಬ್ದಕ್ಕೆ ನಿಂದೆ, ದೋಷಾರೋಪಣೆ ಎಂದರ್ಥ. ಇತರ ಅಪ್ರಸಿದ್ಧವಾದ

ಅರ್ಥಗಳೂ ಇವೆ. ಉದಾಹರಣೆಗೆ ೧. ಅಪ್ಪಣೆ, ೨. ಪ್ರೀತಿ, ೩. ನಂಬಿಕೆ.

**ಅಪಸ್ಮಾರ** ಎಂದರೆ ೧. ಶಕ್ತಿಯು ನಾಶವಾಗುವುದು. ೨. ಇದ್ದಕ್ಕಿದ್ದಂತೆ ಬೀಳುವ ರೋಗ. ಸನ್ನಿಪಾತ— ಎಂದರೆ ವಾತ ಪಿತ್ತ ಕಫ - ಈ ಮೂರರ ಕ್ರಮ ತಪ್ಪಿ ಸೆಳೆವು, ಇತ್ಯಾದಿಗಳಿಂದ ಬೀಳುವ ರೋಗ.

**ಅಪಾಪೋಲಿ** ಎಂಬ ಶಬ್ದದ ವಿವರಣೆ. ಪೋಲಿ ಎಂಬುದು ಕನ್ನಡ ಶಬ್ದ. ತಮಿಳು, ಮಲಯಾಳಂ, ತೆಲುಗು ಭಾಷೆಗಳಲ್ಲಿ ಈ ಶಬ್ದಕ್ಕೆ ಜ್ಞಾತಿ ಶಬ್ದಗಳಿವೆ. ಇದಕ್ಕೆ ವ್ಯರ್ಥಮಾಡುವ, ಸೂರೆ ಮಾಡುವ ವ್ಯಕ್ತಿ, ಕೆಡುಕ, ಲಂಪಟ, ಪೋಕರಿ, ಹೊಣೆಗೇಡಿ ಇತ್ಯಾದಿ ಅರ್ಥಗಳಿವೆ. ತೊಂಡು ದನಗಳಿಗೆ ಪೋಲಿದನ ಎಂದು ಕರೆಯುತ್ತಾರೆ. ಪೋಲು ಎಂಬ ಒಂದು ಶಬ್ದವಿದೆ. ಇದಕ್ಕೆ ನಾಶ, ವ್ಯರ್ಥ, ದುಂದು, ಹಾಳು ಮುಂತಾದ ಅರ್ಥಗಳಿವೆ. ಪೋಲಿ ಎಂಬುದು ಈ ಶಬ್ದದಿಂದ ಬಂದಿರುವಂತೆ ಕಾಣುತ್ತದೆ. ಪೋಲಿ ಎಂಬುದಕ್ಕೆ ವ್ಯಭಿಚಾರಿ, ಹಾದರಿಗ ಎಂಬ ಅರ್ಥ ಆಮೇಲೆ ಬಂದಿರಬೇಕು. ಈ ಶಬ್ದಕ್ಕೆ ಕನ್ನಡದಲ್ಲಿ ಪ್ರಾಚೀನ ಪ್ರಯೋಗಗಳಿಲ್ಲ. ಇದು ಈಚೆಗೆ ಹುಟ್ಟಿಕೊಂಡ ಶಬ್ದ. '**ಪೋಲಿ ಮುಂಡೇದಕ್ಕೆ ತಾಲಿ ಕಟ್ಟಿದರೆ ತಾಲಿ ತಾಲಿ, ಪೋಲಿ ಪೋಲಿ**' ಎಂಬ ಗಾದೆಯೊಂದಿದೆ. ಸಂಸ್ಕೃತದಲ್ಲಿ ಪೋಲೀ ಎಂಬ ಒಂದು ಶಬ್ದವಿದೆ. ಗೋಧಿ ಹಿಟ್ಟಿನಿಂದ ಮಾಡಿದ ಒಂದು ಭಕ್ಷ್ಯ ಎಂದು ಅದಕ್ಕೆ ಅರ್ಥ. ಈ ಎರಡು ಶಬ್ದಗಳಿಗೂ ಸಂಬಂಧವೇ ಇಲ್ಲ. ಇನ್ನು ಅಪಾಪೋಲಿ ಎಂಬ ಶಬ್ದವನ್ನು ಪರಿಶೀಲಿಸೋಣ. ಸಂಸ್ಕೃತದಲ್ಲಿ ಅಪ ಎಂಬ ಒಂದು ಉಪಸರ್ಗವಿದೆ. ಅದಕ್ಕೆ ಕೆಟ್ಟ, ನೀಚ ಮುಂತಾದ ಅರ್ಥಗಳಿವೆ. ಕೆಲವು ವೇಳೆ ಸಂಸ್ಕೃತದ ಉಪಸರ್ಗಗಳನ್ನು ಸಂಸ್ಕೃತ ವಿದ್ವಾಂಸರು ಕನ್ನಡ ಶಬ್ದಕ್ಕೆ ಸೇರಿಸಿ ಸಂತೋಷಪಡುತ್ತಾರೆ. ಅಂಥ ಶಬ್ದಗಳಿಂದ ವ್ಯಂಗ್ಯಾರ್ಥ ಚೆನ್ನಾಗಿ ಹೊರ ಹೊಮ್ಮುತ್ತದೆ. ಉದಾಹರಣೆ ಅಪಕ್ಯಾತಿ =ಅಪಖ್ಯಾತಿ, ಅಪದೂರು, ಅಪದೆಸೆ, ಅಪನಂಬಿಕೆ, ಅಪರಾತ್ರಿ, ಇತ್ಯಾದಿ. ಹೀಗೆ ಪೋಲಿಗೆ ಅಪ ಸೇರಿಸುವಾಗ ಅದನ್ನು ದೀರ್ಘ ಮಾಡಿ ಅಪಾಪೋಲಿ ಎಂಬ ಶಬ್ದ ಬಂದಿದೆ. ಪೋಲಿಯ ಅತ್ಯಂತ ದುಷ್ಟ ಚಿತ್ರವನ್ನು ಇದು ಮೂಡಿಸುತ್ತದೆ. ಪೋಲಿ ಇದಕ್ಕಿಂತ ಮುಂದೆ ಹೋಗಲಾರ. ಎಷ್ಟು ದೂರ ಹೋದರೂ ಈ ಶಬ್ದ ಅವನನ್ನು ಚೆನ್ನಾಗಿಯೇ ಚಿತ್ರಿಸುತ್ತದೆ.

**ಅಪಾಯ** ಶಬ್ದಕ್ಕೆ ೧. ಆಗಲಿಕೆ, ವಿಯೋಗ ೨. ಪಲಾಯನ ೩. ನಾಶ ೪. ಹಾನಿ, ಕೆಡಕು ಎಂಬ ಅರ್ಥಗಳಿವೆ, ಸಂಸ್ಕೃತದಲ್ಲಿ. ಕನ್ನಡದಲ್ಲಿ ಕೊನೆಯ ಎರಡಷ್ಟೆ ಪ್ರಚಾರದಲ್ಲಿವೆ.

**ಅಪೇಕ್ಷೆ** ಅಪ +ಈಕ್ಷಾ =ಅಪೇಕ್ಷಾ ಎಂದಾಗುತ್ತದೆ. ಇದೇ ಸಂಸ್ಕೃತದಿಂದ ಕನ್ನಡಕ್ಕೆ ತದ್ಭವವಾಗಿ ಅಪೇಕ್ಷೆ ಎಂದಾಗುತ್ತದೆ. ಈಕ್ಷಾ ಎಂದರೆ ನೋಡುವುದು. ಆ ಶಬ್ದದಿಂದ ಬೆಳೆದು ಬಂದ ಇತರ ಅರ್ಥಗಳು ಅಪೇಕ್ಷೆಯಲ್ಲಿ ಕೂಡಿಕೊಂಡಿವೆ. ೧. ಇಚ್ಛೆ, ಆಸೆ ೨. ಅಗತ್ಯ ವಾಗಿರುವುದು ೩. ವಾಕ್ಯದಲ್ಲಿ ಶಬ್ದಗಳಿಗೆ ಇರುವ ಸಂಬಂಧ ೪. ಲಕ್ಷ್ಯ, ಗುರಿ ಇತ್ಯಾದಿ.

**ಅಪ್ಪಣ್ಣಿ** ಇದು ತುಳುವಿನಲ್ಲಿ ಜಲಾಧಿ ದೇವತೆಯ ಹೆಸರು. ಸಂಸ್ಕೃತದ ಆಪ ಎಂದರೆ ನೀರು. ಆ ಶಬ್ದದ ಕಡೆಯಿಂದ ಬಂದ ಗ್ರಾಮ್ಯವಾದ ರೂಪ ಇದೆ. ಅಣ್ಣಿ, ಅಣ್ಣ ಎಂಬುದು ಗೌರವ ಸೂಚಕವಾಗಿ ಉಪಯೋಗಿಸುವ ಪ್ರತ್ಯಯಗಳು. ಆ ಪ್ರತ್ಯಯ ಸಹಿತವಾದ ಶಬ್ದ ಅಪ್ಪಣ್ಣಿ.

**ಅಪ್ರಮೇಯ** 'ಮೇಯ' ಎಂದರೆ 'ಅಳೆಯಲು ಸಾಧ್ಯವಾದ', 'ಪ್ರಮೇಯ' - ಚೆನ್ನಾಗಿ ಅಳೆಯಲು ಸಾಧ್ಯವಾದ, 'ಅಪ್ರಮೇಯ' - ಯಾವ ಪ್ರಮಾಣದಿಂದಲೂ ತಿಳಿಯಲು ಆಗದ ಎಂಬ ಅರ್ಥ. ಇದರಿಂದ ಈ ಶಬ್ದಕ್ಕೆ ಬ್ರಹ್ಮ, ಪರಮಾತ್ಮ ಎಂಬ ಅರ್ಥ ಬರುತ್ತದೆ.

**ಅಬಚಿ** ಇದಕ್ಕೆ ಚಿಕ್ಕಮ್ಮ ಎಂದು ಅರ್ಥ. ಇದು ಅಬ್ಬಚ್ಚಿ ಎಂಬುದರ ಸಂಕ್ಷಿಪ್ತ ರೂಪವಿರಬೇಕು. ಅಬ್ಬೆ +ಅಚ್ಚಿ =ಅಬ್ಬಚ್ಚಿ. ದ್ರಾವಿಡ ಭಾಷೆಯಲ್ಲಿ ಅಚ್ಚಿ ಎನ್ನುವುದನ್ನು ಪ್ರೀತಿಯ ಕರೆಯಾಗಿ ಉಪಯೋಗಿಸುತ್ತಾರೆ. ಪುಟ್ಟಚ್ಚಿ, ಅಕ್ಕಚ್ಚಿ ಎಂಬ ಶಬ್ದಗಳನ್ನು ಪರಿಶೀಲಿಸಿ.

**ಅಬಾಧಿತೆ, ಅಬಾಧಿತಾ** ಎಂಬ ಸಂಸ್ಕೃತ ಶಬ್ದದ ಕನ್ನಡ ರೂಪ. ಇದಕ್ಕೆ ಯಾವ ತೊಂದರೆಯೂ, ಬಾಧೆಯೂ ಇಲ್ಲದವಳು ಎಂದರ್ಥ.

**ಅಬಾಲವೃದ್ಧ ಆಬಾಲವೃದ್ಧ** ಇವುಗಳಲ್ಲಿ ಯಾವುದು ಸರಿ? ಆಬಾಲವೃದ್ಧ ಎಂದರೆ ಬಾಲರಿಂದ ಹಿಡಿದು ಮುದುಕರವರೆಗೆ ಎಂದು ಅರ್ಥ. ಆಚಂದ್ರಾರ್ಕ - ಚಂದ್ರ ಸೂರ್ಯರಿರುವವರೆಗೆ, ಆಜೀವ ಸದಸ್ಯ - ಪ್ರಾಣವಿರುವವರೆಗೂ ಸದಸ್ಯನಾಗಿರುವವನು. ಆಜನ್ಮ ಬ್ರಹ್ಮಚಾರಿ - ಜೀವಿಸಿರುವವರೆಗೂ ಬ್ರಹ್ಮಚಾರಿಯಾಗಿ ಇರುವವನು. ಆಜಾನುಬಾಹು - ಮಂಡಿಯವರೆಗೂ ಉದ್ದವಾಗಿರುವ ತೋಳುಗಳುಳ್ಳವನು. ಆಮೂಲ ಚೂಲ - ಕಾಲಿನಿಂದ ತಲೆಯವರೆಗೂ. ಇಂಥ ಶಬ್ದಗಳನ್ನು ಸಮಾನವಾಗಿ ಪರಿಶೀಲಿಸಿ. ಆಬಾಲವೃದ್ಧ ಎಂಬ ಶಬ್ದವನ್ನು ಕನ್ನಡದ ಬಾಲ ಶಬ್ದಕ್ಕೆ ಹೊಂದಿಸುವುದಕ್ಕೆ ಆಗುವುದಿಲ್ಲ. ಅ +ಬಾಲ - ಬಾಲವಿಲ್ಲದ ಮುದುಕ ಎಂದು ಅರ್ಥ ಮಾಡಲಾಗುವುದಿಲ್ಲ. ಬಾಲವಿಲ್ಲದ ಕಪಿ ಎಂಬ ಪ್ರಯೋಗವಿದೆ. ಅದನ್ನೇ ಅಬಾಲಕೋತಿ ಎಂದು ಉಪಯೋಗಿಸಲಾಗುವುದಿಲ್ಲ.

**ಅಬ್ಕಾರಿ** ಅಬ್ಕಾರಿ ಎಂಬುದು ಪರ್ಷಿಯನ್ ಭಾಷೆಯ ಶಬ್ದ. ಮದ್ಯವನ್ನು ಬಟ್ಟಿ ಇಳಿಸುವ ಮತ್ತು ವ್ಯಾಪಾರ ಮಾಡುವ ಕಾರ್ಯಗಳಿಗೆ ಈ ಶಬ್ದವು ಅನ್ವಯವಾಗುತ್ತದೆ. ಆದುದರಿಂದಲೇ ಆ ವೃತ್ತಿಗೆ ಸಲ್ಲುವ ಸುಂಕಕ್ಕೂ ಅದೇ ಹೆಸರು ಬಂದಿದೆ. ಜಿಲ್ಲೆಗಳಲ್ಲಿಯೂ ಮದ್ಯವನ್ನು ಮಾರುವ ಹಕ್ಕನ್ನು ಖಾಸಗಿಯವರಿಗೆ ಹರಾಜು ಮೂಲಕ ಒಪ್ಪಿಸಲಾಗುತ್ತದೆ. ಇದಕ್ಕೆ ಅಬ್ಕಾರಿ ವ್ಯವಸ್ಥೆ ಎಂದು ಹೆಸರು. ಈ ವ್ಯವಸ್ಥೆ ಬಂದ ಮೇಲೆ ಜನರಲ್ಲಿ ಕುಡಿತ ಹೆಚ್ಚಾಯಿತು ಎಂಬುದು ಒಂದು ಅಭಿಪ್ರಾಯ. ಆದರೆ ಮದ್ಯಪಾನ ಮಾಡುವವರ ಅಭಿಪ್ರಾಯದಂತೆ ಕುಡಿತವು ಸೂಳೆಗಾರಿಕೆಯಷ್ಟೇ ಪ್ರಾಚೀನವಾದ ವೃತ್ತಿ, ಪ್ರವೃತ್ತಿ.

**ಅಬ್ಬೆಪಾರಿ** ಅವ್ಯಾಪಾರಿನ್ ಎಂಬ ಸಂಸ್ಕೃತದ ಶಬ್ದ ಅಬ್ಬೆಪಾರಿ ಆಗುತ್ತದೆ. ಇದಕ್ಕೆ 'ವ್ಯವಹಾರವನ್ನು ತಿಳಿಯದವನು, ಉದ್ಯೋಗಶೀಲ ಅಲ್ಲದವನು' ಎಂದು ಅರ್ಥ. ಕೆಲಸಕ್ಕೆ ಬಾರದವನು ಎಂದೂ ಅರ್ಥವಾಗುತ್ತದೆ.

**ಅಭಯ** ಎಂದರೆ *೧. ಹೆದರಿಕೆಯಿಲ್ಲದಿರುವುದು;* ಧೈರ್ಯ, *೨.* ಭಯವನ್ನು ಪರಿಹಾರ ಮಾಡುವ ಮಾತು, ಅಭಯ ವಚನ, *೩.* ತಪಸ್ವಿ, *೪.* ಬ್ರಹ್ಮಜ್ಞಾನ *೫.* ಪರಮಾತ್ಮ ಎಂಬ ಅರ್ಥಗಳಿವೆ.

**ಅಭಿನಂದನೆ** ನಂದನ ಎಂದರೆ ಆನಂದವನ್ನುಂಟು ಮಾಡುವುದು. ತುಂಬ ಪ್ರೀತಿ ವಿಶ್ವಾಸಗಳಿಂದ ಸಂತೋಷವನ್ನುಂಟು ಮಾಡುವುದು ಅಭಿನಂದನೆ. ಈ ಶಬ್ದವನ್ನು ಈಗ ಕನ್ನಡದಲ್ಲಿ ಇಂಗ್ಲಿಷ್ ಭಾಷೆಯ Congratulation ಎಂಬ ಶಬ್ದಕ್ಕೆ ಸಮಾನವಾಗಿರುವಂತೆ ಉಪಯೋಗಿಸುತ್ತಿದ್ದಾರೆ. ಆ ಶಬ್ದಕ್ಕೆ ಇಂಗ್ಲಿಷ್ ಜನರಲ್ಲಿ 'ನಿಮಗೆ ಸಂದಿರುವ ಗೌರವದಿಂದ ನಮಗೂ ಸಂತೋಷವಾಗಿದೆ' ಎಂದು ತಿಳಿಸುವುದು ಎಂದರ್ಥ.

**ಅಭಿನಮನ** ವಿನಯಪೂರ್ವಕವಾಗಿ ತನ್ನ ಹೆಸರನ್ನು ಹೇಳಿ ಮಾಡುವ ನಮಸ್ಕಾರ. ಪ್ರವರವನ್ನು ಹೇಳಿ ನಮಸ್ಕರಿಸುವುದು. ತನ್ನ ವಂಶದ ಪೂರ್ವಿಕರನ್ನು ಪರಿಚಯ ಮಾಡಿ ವಂದಿಸುವುದು.

**ಅಭಿಪ್ರಾಯ** ಅಭಿಪ್ರಾಯ, ಅಭಿಮತ, ಅಭಿಜಾತ ಮುಂತಾದ ಕಡೆಗಳಲ್ಲಿರುವ ಅಭಿ ಎಂದರೇನು? ಅಭಿ ಎಂಬುದು ಒಂದು ಉಪಸರ್ಗ. ಸಂಸ್ಕೃತದಲ್ಲಿ ಉಪಸರ್ಗಗಳು ಸ್ವತಂತ್ರವಾಗಿ ಎಲ್ಲಿಯೂ ಪ್ರಯೋಗವಾಗದಿದ್ದರೂ ಅವು ಸೇರಿದಾಗ ಧಾತುವಿನ ಅರ್ಥವನ್ನೇ ಬದಲಾಯಿಸುತ್ತವೆ. ಇವು ಧಾತುವಿನ ಆದಿಯಲ್ಲಿ ಸೇರುತ್ತವೆ. ನಾಮಪದಗಳಿಗೂ ಸೇರುತ್ತವೆ. ಅಭಿಪ್ರಾಯ - ಗುರಿಯಿಟ್ಟದ್ದು, ಉದ್ದೇಶವಿದ್ದದ್ದು ಎಂದರ್ಥ. ಮನಸ್ಸಿಟ್ಟು ಹೇಳುವುದು. ಅಭಿ ಎನ್ನುವುದು ಒಂದು ಕಡೆಗೆ, ದಿಕ್ಕಿಗೆ ಎಂದು

ಸೂಚನೆ ನೀಡುತ್ತದೆ. **ಅಭಿಪ್ರಯಂತಿ ಪದಾರ್ಥಾ ಅಸ್ಮಿನ್ ಇತಿ ಅಭಿಪ್ರಾಯ:** ಅಭಿಮತ =ಆಶಯ, ಅಭಿಪ್ರಾಯ. ಅಭಿಜಾತ ೧. ಸತ್ಕುಲದಲ್ಲಿ ಹುಟ್ಟಿದವನು, ೨. ಪಂಡಿತ, ಜ್ಞಾನಿ, ವಿದ್ವಾಂಸ, ೩. ಮನೋಹರವಾದ, ಇಂಪಾದ, ಎಂಬ ಗುಣವಾಚಕದ ಅರ್ಥವೂ ಇರುತ್ತದೆ.

**ಅಭಿವ್ಯಕ್ತಿ** ಈ ಶಬ್ದದಲ್ಲಿ ಎರಡು ಭಾಗಗಳಿವೆ. ಅಭಿ + ವ್ಯಕ್ತಿ. ಸಂಸ್ಕೃತದಲ್ಲಿ ಅಭಿ ಒಂದು ಉಪಸರ್ಗ. ವ್ಯಕ್ತಿ ಎಂದರೆ ವಿವೇಚನೆಯಿಂದ ತೋರುವ ಭೇದ. ಅಥವಾ ವಿಮರ್ಶೆಯಿಂದ ಕಾಣಬರುವ ವ್ಯತ್ಯಾಸ. ಅಭಿವ್ಯಕ್ತಿ ಎಂದರೆ ಸ್ಫುಟವಾಗಿ ಕಾಣಬರುವಿಕೆ, ಚೆನ್ನಾಗಿ, ಸ್ಪಷ್ಟವಾಗಿರುವಿಕೆ, ಸಕಲವೂ ಸಂಪೂರ್ಣವಾಗಿರುವಿಕೆ. ಮಾತಿನಲ್ಲಿ, ಬರಹದಲ್ಲಿ, ಚರ್ಚೆಯಲ್ಲಿ, ವಾಗ್ವಾದದಲ್ಲಿ, ಕಾವ್ಯದಲ್ಲಿ, ನಾಟಕದಲ್ಲಿ ಉಪಯೋಗಿಸುವ ಭಾಷೆಯನ್ನು ಕುರಿತು ಈ ಮಾತನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಕವಿಗಳು ತಾವು ಹೇಳಬೇಕೆಂದಿರುವ ವಿಷಯವನ್ನು ಸ್ಪಷ್ಟಪಡಿಸುವುದಕ್ಕೆ ಬೇಕಾದ ವರ್ಣನೆಗಳನ್ನೂ ಛಂದಸ್ಸನ್ನೂ, ಶೈಲಿಯನ್ನೂ ಉಪಯೋಗಿಸುತ್ತಾರೆ. ಕಾವ್ಯ ಮೀಮಾಂಸೆಯಲ್ಲಿ ಈ ವಿಚಾರವನ್ನು ಕುರಿತು ವಿವರವಾದ ನಿರೂಪಣೆಗಳಿವೆ. ಶಬ್ದಮಣಿ ದರ್ಪಣದ ಈ ವಾಕ್ಯವನ್ನು ನೋಡಿ— **'ಶಬ್ದ ಸ್ಪರ್ಶ ರೂಪ ರಸಗಂಧಗಳೊಳ್ವಂ ಶ್ರೋತ್ರೇಂದ್ರಿಯವೊಂದಱಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಳ್ಪ ವಿಮಲಸ್ವರೂಪೆಗೆ..... ನಮಸ್ಕರಿಸುವಾತನಪ್ಪಂ'** (ಸೂತ್ರ ೧ ವೃತ್ತಿ)

**ಅಭಿಷೇಕ** ಎಂಬ ಪದಕ್ಕೆ ಸಿಂಚನ ಮಾಡು, ನೀರನ್ನು ಚಿಮುಕಿಸು ಎಂದರ್ಥ. ಸಾಮಾನ್ಯವಾಗಿ ಮೂರ್ಧಾಭಿಷಿಕ್ತ ಶಬ್ದಕ್ಕೆ ಎಲ್ಲರಿಂದಲೂ ಅಂಗೀಕರಿಸಲ್ಪಟ್ಟ ಅಧಿಕಾರವುಳ್ಳವ ಎಂಬರ್ಥ ಹೊಮ್ಮುತ್ತದೆ. ಪಟ್ಟಾಭಿಷೇಕ ಮಾಡಿಸಿಕೊಂಡ ರಾಜ, ಸೇನಾಪತಿ ಇತ್ಯಾದಿ ಅರ್ಥಗಳಿವೆ.

**ಅಭಿಸಾರಿಕೆ, ಅಭಿಸಾರಿಗೆ** ಎಂದರೆ ತನ್ನ ಪ್ರಿಯನನ್ನು ಕೂಡಲು ಸಂಕೇತದ ಸ್ಥಾನಕ್ಕೆ ಹೋಗುವ ಸ್ತ್ರೀ. **"ಇರುಳೆನ್ನದೆ ಕಟ್ಟಲೆ ಕಡುವಿರಿದೆನ್ನದೆ ದುರ್ಗಮೆನ್ನದೆ ಓತನೊಳೆತ್ತಂ ನೆರೆಯಲ್ಪರಿದೆಯ್ದುವ ಸುಂದರಿ ಅಭಿಸಾರಿಗೆ ಎನಿಪ್ಪ ಪೆಸರಂ ಪಡೆಗುಂ''** ಹೀಗೆ ಶೃಂಗಾರ ರತ್ನಾಕರದಲ್ಲಿ ಕವಿಕಾಮನು ವರ್ಣಿಸಿದ್ದಾನೆ. ಈ ಎರಡೂ ಪರ್ಯಾಯ ರೂಪಗಳು.

**ಅಭ್ಯಸಿಸು - ಅಭ್ಯಾಸಿಸು** ಅಭ್ಯಸನದಿಂದ ಅಭ್ಯಸಿಸು ಶಬ್ದರೂಪುಗೊಳ್ಳುತ್ತದೆ. ಅಭ್ಯಾಸ ಮಾಡು ಎಂದರ್ಥ. ಅದು ವ್ಯಾಕರಣಬದ್ಧ. ಅಭ್ಯಾಸದಿಂದ ಅಭ್ಯಾಸಿಸು ರೂಪುಗೊಳ್ಳುತ್ತದೆ. ಅದೂ ಸರಿಯಾದುದೇ.

**ಅಮಟೆ** ಮಕ್ಕಳು ಕುಂಟುಬಿಲ್ಲೆ ಆಡುವಾಗ ಅಮಟೆ ಎನ್ನುತ್ತಾರೆ. ಮತ್ತೊಬ್ಬರು Right ಎನ್ನುತ್ತಾರೆ. You are right ಎಂಬುದೇ ಅದು. Am I right? ಎಂಬುದರ ತದ್ಭವ ಅಮಟೆ. ಕನ್ನಡದ ಮಕ್ಕಳ ಕೆಲವು ಆಟಗಳಲ್ಲಿ ಇಂಥ ಇಂಗ್ಲಿಷ್ ಶಬ್ದಗಳು ಸೇರಿಕೊಂಡಿವೆ. ನೋಡಿ (ಅಯ್ಸ್ ಪಯ್ಸ್) eye spies, (ಅಪ್ಪಿಟ್) up it. ಇವು ನೇರವಾಗಿ ಇಂಗ್ಲಿಷ್ ಶಬ್ದಗಳು.

**ಅಮಲ್‌ಜಾರಿ, ಅಮಲ್ಜಾರಿ** ಅಮಲ್ ಎಂದರೆ ಆಳುವಿಕೆ, ಆಡಳಿತ, ಅಧಿಕಾರ. ನ್ಯಾಯಾಲಯದಲ್ಲಿ ಆದ ತೀರ್ಮಾನವನ್ನು ಕಾರ್ಯರೂಪಕ್ಕೆ ತರುವುದು ಅಥವಾ ಅಮಲನ್ನು ಜಾರಿಗೆ ತರುವುದು ಅದು ಅಧೀನ ಅಧಿಕಾರಿಯ ವ್ಯವಹಾರಕ್ಕೆ ಸೇರಿದ್ದು.

**ಅಮಲ್ದಾರ್** ಇದು ಅರಬ್ಬೀ ಶಬ್ದ. 'ಅಮಲ್' ಎಂದರೆ ಅರಬ್ಬಿ ಭಾಷೆಯಲ್ಲಿ ಎರಡು ಅರ್ಥಗಳಿವೆ. ೧. ಆಡಳಿತ, ಕರ್ತವ್ಯ ೨. ಮಾದಕತೆ. ಅಮಲ್ ದಾರ್ ಎಂದರೆ ಒಬ್ಬ ಅಧಿಕಾರಿ. ಮರಾಠಿಯಲ್ಲಿ ಈ ಶಬ್ದಕ್ಕೆ ಮೂರು ಅರ್ಥಗಳಿವೆ. ೧. ಸಾವಕಾಶ ೨. ಕಂದಾಯ ವಸೂಲಿ ಅಧಿಕಾರಿ ೩. ಸುಬೇದಾರನ ಅಧೀನದ ಅಧಿಕಾರಿ. ಕನ್ನಡದಲ್ಲಿ ಒಂದು ತಾಲ್ಲೂಕಿನ ರೆವಿನ್ಯೂ ಅಧಿಕಾರಿಗೆ ಹಿಂದೆ ಈ ಹೆಸರಿತ್ತು. ಏಕೀಕರಣವಾದ ಮೇಲೆ ಅಮಲ್‌ದಾರ್ ಹೋಗಿ ತಹಸೀಲ್ದಾರ್ ಆಗಿದೆ ಈ ಹೆಸರು.

**ಅಮಾನುಷ** ಮಾನುಷ ಎಂದರೆ ಮನುಷ್ಯನಿಗೆ ಸಂಬಂಧಿಸಿದುದು. ಅಮಾನುಷ ಮಾನವನ ಗುಣಕ್ಕೆ ಸರಿಹೊಂದದೆ ಇರುವುದು ಎಂದರ್ಥ. ಇದು ಸಂಸ್ಕೃತ ಶಬ್ದ. **ಅಮಾನುಶ** ತಪ್ಪು.

**ಅಮಾಯಕ** ಸಂಸ್ಕೃತದಲ್ಲಿ ಅಮಾಯ ಎಂಬ ಶಬ್ದವಿದೆ. ಆ ಶಬ್ದಕ್ಕೆ ಎರಡು ಅರ್ಥಗಳಿವೆ. ೧. ಪರಬ್ರಹ್ಮ ೨. ಕಪಟವಿಲ್ಲದ, ಪ್ರಾಮಾಣಿಕ. ಮೊದಲನೆಯದು ನಾಮಪದ. ಎರಡನೆಯದು ಗುಣವಾಚಕ. ಈ ಶಬ್ದಕ್ಕೆ ಕ ಎಂಬ ಪ್ರತ್ಯಯವನ್ನು ಹಚ್ಚಿ ಅಮಾಯಕ ಎಂಬ ಶಬ್ದವಾಗಿದೆ. ಬಾಲ — ಬಾಲಕ ಇದ್ದ ಹಾಗೆ. ಅಮಾಯಕ ಎಂದರೆ ಮಾಯೆಯು ಮುಟ್ಟದ, ಅಪ್ರಾಮಾಣಿಕನಲ್ಲದ ವ್ಯಕ್ತಿ ಎಂದರ್ಥ. ಈಗೀಗ ಈ ಶಬ್ದಕ್ಕೆ ಮುಗ್ಧ ಎಂಬ ಅರ್ಥ ಬರುವಂತೆ ಜನರು ಮಾತಿನಲ್ಲಿ, ಬರಹದಲ್ಲಿ ಉಪಯೋಗಿಸುತ್ತಿದ್ದಾರೆ.

**ಅಮೂರ್ತ** ಇದು ಸಂಸ್ಕೃತ ಶಬ್ದ. **ನಮೂರ್ತಃ = ಅಮೂರ್ತ.** ಇದಕ್ಕೆ ನಿರಾಕಾರ ಎಂದರೆ ಪರಮಾತ್ಮ ಎಂದರ್ಥ. ಆಕಾರವಿಲ್ಲದ, ಅವಯವವಿಲ್ಲದ ಎಂಬ ಗುಣವಾಚಕದ ಅರ್ಥವೂ ಇದೆ. ಮೂರ್ತ ಶಬ್ದಕ್ಕೆ ವಿರುದ್ಧವಾದುದು. ಮೂರ್ತ = Concrete ಅಮೂರ್ತ = abstract ಎಂದು ಇಂಗ್ಲಿಷ್ ಭಾಷೆಯ ಸಮಾನ ಪದಗಳನ್ನು ಸೂಚಿಸಬಹುದು. ಸತ್ಯ, ದ್ವೇಷ, ಪ್ರೇಮ ಮುಂತಾದವು ಅಮೂರ್ತ. ಕಲ್ಲು, ಗಿಡ, ಬೆಟ್ಟ ಮುಂತಾದವು ಮೂರ್ತ.

**ಅಮೂಲ್ಯ** ಎಂಬುದು ಸಂಸ್ಕೃತ ಶಬ್ದ. ಅದಕ್ಕೆ ಎರಡು ಅರ್ಥಗಳು ಇವೆ. ೧. ಬೆಲೆಯಿಲ್ಲದ ೨. ಬೆಲೆ ಕಟ್ಟುವುದಕ್ಕಾಗದ. ಸಂಸ್ಕೃತದ ನಿಘಂಟುಗಳು ಕೂಡ ಈ ಎರಡು ಅರ್ಥಗಳನ್ನೂ ಒಟ್ಟಿಗೆ ಸೇರಿಸಿ ಬಹಳ ಬೆಲೆ ಬಾಳುವ ಎಂಬ ಒಂದೇ ಅರ್ಥದಲ್ಲಿ ಪ್ರಯೋಗಿಸುತ್ತವೆ. ಬೆಲೆಯಿಲ್ಲದ ಎಂಬ ಅರ್ಥದಲ್ಲಿ ಯಾರೂ ಪ್ರಯೋಗಿಸಿಯೇ ಇಲ್ಲ. ಆದುದರಿಂದ ಪ್ರಯೋಗಬಲದಿಂದ ಆ ಶಬ್ದಕ್ಕೆ ಒಂದೇ ಅರ್ಥ ಉಳಿದುಬಂದಿದೆ. ಅಮೌಲ್ಯ ಎಂಬ ಸಂಸ್ಕೃತ ಶಬ್ದಕ್ಕೂ ಇದೇ ಬಗೆಯ ಅರ್ಥವಿದೆ. ನಮ್ಮ ಕನ್ನಡ ಕವಿಗಳು ಕೂಡ ಹಿಂದಿನಿಂದಲೂ ಒಂದೇ ಅರ್ಥದಲ್ಲಿ ಪ್ರಯೋಗಿಸುತ್ತಿದ್ದಾರೆ. ಅಗ್ಗಳನ ಚಂದ್ರಪ್ರಭ ಪುರಾಣದಲ್ಲಿರುವ ಈ ಪ್ರಯೋಗವನ್ನು ನೋಡಿ: **ಕಾವ್ಯಮಿದಮೂಲ್ಯತ್ವಕ್ಕೆ ಪಕ್ಕಾಗದೇ?** (೧.೬೫). ಹೀಗೆ ಕೆಲವು ವೇಳೆ ವ್ಯಾಕರಣಶುದ್ಧವಾದರೂ ಶಬ್ದದ ಒಂದೊಂದು ಅರ್ಥ ಪ್ರಯೋಗಕ್ಕೆ ಸಿಕ್ಕದೆ ಹೋಗುವುದುಂಟು.

**ಅಮೃತಪಡಿ** ಪಡಿ ಎಂದರೆ ನಿರ್ದಿಷ್ಟವಾದ ಅಳತೆ. ಅಮೃತಪಡಿ ಎಂದರೆ ದೇವರ ನೈವೇದ್ಯಕ್ಕೆ ಬೇಕಾದ ಸಾಧನ. ಅಕ್ಕಿ, ಬೆಲ್ಲ, ಕಾಯಿ ಇತ್ಯಾದಿ ಪದಾರ್ಥಗಳು ಸೇರಿ ಒಟ್ಟು ನೈವೇದ್ಯವಾಗುತ್ತದೆ. ಈ ನೈವೇದ್ಯಕ್ಕೆ ಅಮೃತಪಡಿ ಎಂದು ಹೆಸರು. ಈ ಶಬ್ದ ಕನ್ನಡದ ದಾನಶಾಸನಗಳಲ್ಲಿ ಅನೇಕ ಸಲ ಲಭ್ಯವಾಗುತ್ತದೆ.

**ಅಮೃತಮಹೋತ್ಸವ** ನೋಡಿ: ರಜತೋತ್ಸವ

**ಅಮೃತ ಹಸ್ತ** ಈ ಶಬ್ದ ಈಗ ಬಹಳವಾಗಿ ಜಾರಿಯಲ್ಲಿದೆ. ಯಾವ ಉದ್ಘಾಟನೆಯಾಗಲಿ ಗ್ರಂಥದ ಬಿಡುಗಡೆಯಾಗಲಿ ಒಬ್ಬರು ಪ್ರಸಿದ್ಧರ ಅಮೃತ ಹಸ್ತದಿಂದ ನೆರವೇರುತ್ತದೆ. ಪ್ರದರ್ಶನಗಳ ಪ್ರಾರಂಭಕ್ಕೂ ನೂತನ ಶಾಲಾಕಾಲೇಜುಗಳ ಪ್ರವೇಶ ಮಹೋತ್ಸವಗಳ ಟೇಪುಗಳನ್ನು ಕತ್ತರಿಸುವುದಕ್ಕೂ ಅಮೃತ ಹಸ್ತವೇ! ಈ ಶಬ್ದಕ್ಕೆ ಅರ್ಥವೇನು? ಹಸ್ತ ಹೇಗೆ ಅಮೃತವಾಯಿತು ಎಂಬುದು ನಿಜವಾಗಿ ಮೋಜಿನ ಪ್ರಶ್ನೆ. ಅಮೃತ ಎಂಬ ಶಬ್ದಕ್ಕೆ ೧. ಸಾವಿಲ್ಲದ, ನಾಶವಿಲ್ಲದ ೨. ಸುಂದರವಾದ, ಎಂದೂ ೩. ಒಂದು ಬಳ್ಳಿ ೪. ಕೆಲವು ವ್ಯಕ್ತಿಗಳ ಹೆಸರು ಎಂದೂ ಅರ್ಥಗಳಿವೆ. ಚಂದ್ರನ ಹದಿನಾರು ಕಲೆಗಳಲ್ಲಿ ಮೊದಲನೆಯ ಕಲೆಗೆ ಅಮೃತ ಎಂದು ಹೆಸರು. ಸಮುದ್ರ ಮಂಥನ ಕಾಲದಲ್ಲಿ ಕೊನೆಯಲ್ಲಿ ದೊರಕಿದ ಸುಧೆಗೂ ಆ ಹೆಸರಿದೆ. ವಿಷಾಪಹಾರಿಯಾದದ್ದು ಈ ಅಮೃತ. ಸಂಸ್ಕೃತ ಸಾಹಿತ್ಯದಲ್ಲಾಗಲಿ, ಕನ್ನಡದ ಪ್ರಾಚೀನ ಸಾಹಿತ್ಯದಲ್ಲಾಗಲೀ ಈ **ಅಮೃತಹಸ್ತವೆಂಬ** ಸಮಾಸ

ಕಾಣಬರುವುದಿಲ್ಲ. ಇದು ಸಂಪೂರ್ಣವಾಗಿ ಆಧುನಿಕ ತೀಕ್ಷ್ಣಮತಿಯಿಂದ ಸೃಷ್ಟಿಯಾದ ಶಬ್ದ. ಹಾಗೆ ಸೃಷ್ಟಿ ಮಾಡಿದಾಗ ಅವರ ಮನಸ್ಸಿನಲ್ಲಿ ಏನಿದ್ದಿರಬಹುದು ಎಂದು ನಾವು ಊಹಿಸಬಹುದು, ಅಷ್ಟೆ! ಅಮೃತವನ್ನು ನೀಡುವ ಹಸ್ತ ಅದು. ಅಮೃತ ವಿಷಾಪಹಾರಿ. ಆದುದರಿಂದ ನಾಶನಿವಾರಕ. ಅಲ್ಲದೆ ಮರಣ ನಿವಾರಕ ಆದ್ದರಿಂದ ಶಾಶ್ವತಗುಣವನ್ನು ನೀಡುವ ಸತ್ವವುಳ್ಳದ್ದು. ಇಂಥ ವಸ್ತು ಕೈಯಲ್ಲಿ ಇದ್ದರೆ ಅಂಥದು ಅಮೃತ ಹಸ್ತ. ಕೆಲವರಿಗೆ ಹಸ್ತಗುಣ ಚೆನ್ನಾಗಿರುತ್ತದೆ. ಕೆಲವು ವೈದ್ಯರ ಹಸ್ತದಲ್ಲಿ ಅಮೃತದ ಸತ್ವ ಇದೆ ಎನ್ನುತ್ತಾರೆ. ಹಾಗೆ ಅಮೃತಹಸ್ತ ಎಂದರೆ ಎಲ್ಲ ನಾಶಕಾರಕ ವಿಷಯಗಳನ್ನು ವಸ್ತುಗಳನ್ನು ದೂರ ಮಾಡಿ ಅಭಿವೃದ್ಧಿಗೆ ಸಹಾಯ ಮಾಡುವ ಸತ್ವವುಳ್ಳದ್ದು ಎಂದು ತಿಳಿದು ಈ ಸಮಾಸವನ್ನು ಸೃಷ್ಟಿ ಮಾಡಿದ್ದಾರೆ. ತಮ್ಮ ಅಮೃತ ಹಸ್ತವನ್ನು ಉಪಯೋಗಿಸಿ ಅನೇಕರು ಸ್ತುತ್ಯಕಾರ್ಯಗಳಿಗೆ ನೆರವು ನೀಡುತ್ತಿದ್ದಾರೆ. ಆದ್ದರಿಂದ ಆ ಶಬ್ದವೂ ನಮ್ಮ ನಡುವೆ ಇರಲಿ ಬಿಡಿ. ಈ ಶಬ್ದವನ್ನು ಹೇಳುವವರ ಬಾಯಿಗೆ ಸಿಹಿ, ಕೇಳುವವರ ಕಿವಿಗೆ ರಸಾಯನ. ಅಲ್ಲವೇ ?

**ಅಮೋಘ** ಸಂಸ್ಕೃತ ಶಬ್ದ. 'ಮೋಘ' ಎಂದರೆ 'ವ್ಯರ್ಥವಾದ, ಪ್ರಯೋಜನವಿಲ್ಲದ'. ಇದಕ್ಕೆ 'ಅ' ಹಿಂದೆ ಸೇರಿದರೆ 'ವ್ಯರ್ಥವಾಗದ, ಪ್ರಯೋಜನಕ್ಕೆ ಬರುವ' ಎಂದರ್ಥ.

**ಅಮ್ಮಾವ್ರಗಂಡ** ಹೆಂಡತಿಗೆ ಹೆದರಿ ನಡೆಯುವ ಗಂಡನನ್ನು ಅಮ್ಮಾವ್ರಗಂಡ ಎಂದು ಕರೆಯುತ್ತಾರೆ. ಗಂಡ ಎಂಬ ಬಿಡಿ ಹೆಸರಿಗೆ ಅವನು ಅನರ್ಹ. ಅಮ್ಮಾವ್ರು ಇದ್ದಾಗ ಮಾತ್ರ ಅವನಿಗೆ ಒಂದು ಸ್ಥಾನ, ಅವರ ಹಿಂದೆ. ಇಂಗ್ಲಿಷಿನಲ್ಲಿ ಹೆನ್‌ಪೆಕ್ಡ್ ಎಂದು ಹೇಳುವ ಶಬ್ದದ ಅರ್ಥ ಇಲ್ಲಿದೆ. ಈ ಶಬ್ದವನ್ನು ಕನ್ನಡಕ್ಕೆ ಅನುವಾದ ಮಾಡಿದ ಕೆಲವರು ಕುಕ್ಕುಟ ಕುಕ್ಕಿತ ಎಂದು ತಮಾಷೆಗೆ ಉಪಯೋಗಿಸುತ್ತಾರೆ. ಆ ಶಬ್ದವೂ ಕೂಡ ಪ್ರಯೋಗಕ್ಕೆ ಬರುತ್ತಿದೆ.

**ಅಯೋಮಯ** ಅಯಸ್ ಎಂದರೆ ಸಂಸ್ಕೃತದಲ್ಲಿ ಕಬ್ಬಿಣ. ಅಯೋಮಯ ಎಂದರೆ ಕಬ್ಬಿಣದಿಂದ ತುಂಬಿದ ಎಂದರ್ಥ. ತೆಲುಗಿನಲ್ಲಿ ಅಯೋಮಯ ಎಂದರೆ ಗೊಂದಲದಿಂದ ತುಂಬಿದ್ದು, ಗಲಿಬಿಲಿ, ಇರುಸುಮುರುಸು ಎಂಬ ಅರ್ಥಗಳು ಇವೆ. ತೆಲುಗು ನಿಘಂಟುಗಳಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಅಯೋಮಯಮುಗಾ ಎಂದರೆ in a chaotic condition ಎಂದರ್ಥ. ಕನ್ನಡದಲ್ಲಿ ಕೂಡ ಸ್ಯಾಂಡರ್ಸನ್ ಎಂಬ ನಿಘಂಟುಕಾರನು ಅಯೋಮಯ ಎಂಬ ಶಬ್ದಕ್ಕೆ ಕ್ಲಿಷ್ಟವಾದ, ಸುಲಭವಾಗಿ ತೀರ್ಮಾನಿಸಲಾಗದ ಎಂಬ ಅರ್ಥಗಳನ್ನು ಕೊಟ್ಟಿದ್ದಾನೆ. ಇದನ್ನು ಆತನು ತೆಲುಗಿನಿಂದಲೇ ಸ್ವೀಕರಿಸಿರಬೇಕು. ಸಂಸ್ಕೃತದಲ್ಲಿ ವೇದಗಳ ಕಾಲದಿಂದ ಪ್ರಸಿದ್ಧವಾಗಿರುವ ಈ ಶಬ್ದಕ್ಕೆ ತೆಲುಗಿನ ಅರ್ಥವಿಲ್ಲ. ಅಲ್ಲಿ ಕಬ್ಬಿಣದಿಂದ ಕೂಡಿದ ಎಂದೇ ಅರ್ಥ. ತೆಲುಗಿನ ಈ ಅರ್ಥ ಆಲಂಕಾರಿಕವಾದುದು. ಸಂಸ್ಕೃತದಲ್ಲಿನ ಶಬ್ದಗಳಿಗೆ ತೆಲುಗಿನವರು ಈ ಅರ್ಥದ ವ್ಯಾಪ್ತಿಯನ್ನೇ ನೀಡಿ ಉಪಯೋಗಿಸುತ್ತಿದ್ದಾರೆ. ನಮ್ಮ ಆಂಧ್ರ ಕನ್ನಡ ಗಡಿನಾಡಿನಲ್ಲಿ ಈ ಅರ್ಥ ಕನ್ನಡಕ್ಕೂ ಬಂದು ಅಲ್ಲಿಂದ ಬೆಂಗಳೂರಿಗೆ ಬಂದಿರುವ ಸಾಧ್ಯತೆಯಿದೆ. ಆದುದರಿಂದ ಈ ಅರ್ಥವನ್ನು ನಾವು ಸ್ವೀಕರಿಸಬೇಕು. ಆದರೆ ನೆನಪಿಡಬೇಕು. ಕನ್ನಡದ ಕಾವ್ಯಗಳಲ್ಲಿ ಎಲ್ಲಿಯೂ ಆ ಶಬ್ದ ಪ್ರಯೋಗವಾಗಿಲ್ಲ.

**ಅರಗುವರ** ಶಬ್ದದ ವಿಗ್ರಹವಾಕ್ಯ ಅರಸು + ಕುವರ = ಅರಗುವರ. ಇದು ಬಹುಪ್ರಸಿದ್ಧವಾದ ಶಬ್ದ ಕನ್ನಡದಲ್ಲಿ, 'ಅರಸುಕುಮಾರ' ಎಂಬಂತೆ. ಕನ್ನಡ ಸಂಸ್ಕೃತಗಳನ್ನು ಸೇರಿಸಿ ಸಮಾಸ ಮಾಡಬಾರದು ಎಂದು ಹಳೆಯ ವ್ಯಾಕರಣದ ನಿಯಮ. ಆದರೆ ಈಚೆಗೆ ಇಂಥ ನಿಯಮವನ್ನು ಉಲ್ಲಂಘಿಸಿ ಅನೇಕ ಅರಿಸಮಾಸಗಳನ್ನು ಮಾಡಿ ಭಾಷೆಯನ್ನು ಬೆಳೆಸುತ್ತಿದ್ದಾರೆ ಲೇಖಕರು. ವ್ಯಾಕರಣವು ಭಾಷೆಯನ್ನು ವಿವರಿಸಬೇಕೇ ಹೊರತು ಅದಕ್ಕೆ ಕಟ್ಟುಹಾಕಿ ಬಂಧಿಸಬಾರದು ಎಂಬುದು ಎಲ್ಲ ಭಾಷಾ ಶಾಸ್ತ್ರಜ್ಞರ ಅಭಿಪ್ರಾಯ. ಕನ್ನಡದ ಹಿರಿಯ ಕವಿಗಳೂ ಇಂಥ ನಿಯಮಗಳನ್ನು ಉಲ್ಲಂಘಿಸಿದ್ದಾರೆ.

**ಅರಣ್ಯರೋದನ** ಅರಣ್ಯ = ಕಾಡು, ರೋದನ = ಅಳುವುದು. ಕಾಡಿನಲ್ಲಿ ಅಳುವುದು. ಊರಿನಲ್ಲಿ ಅತ್ತರೆ ಯಾರಾದರೂ ಕೇಳಿಸಿಕೊಂಡು ಸಹಾಯಕ್ಕೆ ಬರಬಹುದು. ಕಾಡಿನಲ್ಲಿ ಅತ್ತರೆ ಕೇಳುವರಾರು? ವ್ಯರ್ಥವಾದ ಕೆಲಸವಾಗುತ್ತದೆ, ಅದು. ಆದುದರಿಂದ ಅರಣ್ಯರೋದನ ಎಂಬ ಶಬ್ದಕ್ಕೆ ನಿಷ್ಫಲವಾದ ಕೆಲಸ ಮಾಡುವುದು, ವ್ಯರ್ಥವಾಗಿ ಮಾತನಾಡುವುದು ಎಂದು ಅರ್ಥವಾಗಿದೆ.

**ಅರಣ್ಯಾಧಿಕಾರಿ** ಅರಣ್ಯ + ಅಧಿಕಾರಿ ಎಂಬ ಎರಡು ಸಂಸ್ಕೃತ ಶಬ್ದಗಳು ಸಂಧಿಯಾದಾಗ ಸವರ್ಣದೀರ್ಘ ಸಂಧಿ ಎಂದು ಹೆಸರು. ಅ + ಅ = ಆ ಎಂದು ವ್ಯಾಕರಣದ ನಿಯಮ.

**ಅರಣ್ಯೀಕರಣ** ಎಂದರೆ ಹೊಸದಾಗಿ ಅರಣ್ಯವನ್ನು ಬೆಳೆಸುವುದು. ಮರಗಳನ್ನೆಲ್ಲ ಕಡಿದು ಅಡವಿಯನ್ನು ಬಯಲಾಗಿ ಮಾಡಿರುವ ಸ್ಥಾನದಲ್ಲಿ ಹೊಸದಾಗಿ ಕಾಡಿನ ಗಿಡಗಳನ್ನು ಬೆಳೆಯಲು ಪ್ರಯತ್ನ ಪಡುವುದು. ಇದು ಇಂಗ್ಲಿಷಿನ Aforestation ಎಂಬ ಶಬ್ದಕ್ಕೆ ಸಮಾನವೆಂದು ಮಾಡಿಕೊಂಡಿರುವ ಕನ್ನಡ ಶಬ್ದ.

**ಅರಮನೆ** ಎಂದರೆ ಅರಸು ಮನೆ. ಅರಸನು ವಾಸಿಸುವ ಮನೆ. ಅದರಲ್ಲಿ ಅರ್ಧದ ಅರ್ಥವಿಲ್ಲ. ಹಾಗಿದ್ದರೆ ಅರೆಮನೆ ಆಗಿರಬೇಕು. ಅರೆಬರೆ ಎಂಬ ಶಬ್ದವನ್ನು ನೋಡಿ. ಅರೆಕೊರೆ, ಅರೆಚಣ ಮುಂತಾದ ಶಬ್ದಗಳಲ್ಲಿ ಅರ್ಧದ ಅರ್ಥವಿದೆ. ಅರಗಿಳಿ, ಅರಗಿಣಿ ಎಂದರೆ ಅರಸುಗಿಣಿ. ರಾಜಕೀರ ಎಂಬುದರ ಕನ್ನಡ ಅನುವಾದ.

**ಅರಸಿಕ** ರಸಿಕನಲ್ಲದವನು. ರಸಿಕ ಎಂದರೆ ಜೀವನದಲ್ಲಿ ಎಲ್ಲ ಬಗೆಯ ಸೌಂದರ್ಯದ ಕಲ್ಪನೆಯನ್ನು ಬಲ್ಲವನು ಎಂದರ್ಥ. ಕಾವ್ಯ, ನಾಟಕ, ನರ್ತನ, ಚಿತ್ರಕಲೆ, ಶೃಂಗಾರ, ಉಡುಪು, ಭೋಜನ ಮುಂತಾದ ಜೀವನದ ಎಲ್ಲ ಕ್ಷೇತ್ರಗಳ ಬಗ್ಗೆ ಸಾಕಷ್ಟು ಸೊಗಸನ್ನು ಅನುಭವಿಸುವವನು ಎಂದು ಅದರ ವಿವರಣೆ. ಆದರೆ ಅದಕ್ಕೆ ಸಂಕೋಚವಾದ ಒಂದು ಅರ್ಥವೂ ಇದೆ. ಯಾವುದಾದರೂ ಒಂದು ಕ್ಷೇತ್ರದಲ್ಲಿ ಅತಿಯಾಗಿ ಲಂಪಟನಾಗಿರುವವನು ಎಂಬುದೂ ಚಾಲ್ತಿಯಲ್ಲಿರುವ ಅರ್ಥ. ಇದು ವ್ಯಾಪಕವಾಗಿರುವ ವ್ಯಂಗ್ಯಾರ್ಥ. ಕಾಮುಕ ಎಂಬುದೇ ಅದರ ಮುಖ್ಯ ಅರ್ಥ. ಅವನಿಗೆ ವಿರುದ್ಧ ಅರಸಿಕ. ನೋಡಿ: ರಸಿಕ

**ಅರಾಸು** ಇದು ಹಿಂದೀ ಭಾಷೆಯ ಹಿರಾಸ್ ಎಂಬ ಶಬ್ದದಿಂದ ಬಂದದ್ದು. ಅದಕ್ಕೆ ಅಂಜಿಕೆ, ಭೀತಿ, ಭಯ ಎಂದರ್ಥ. ಇನ್ನೊಂದು ಅರಾಸ್ ಎಂಬ ಶಬ್ದವಿದೆ. ಇದು ಮರಾಠಿಯಲ್ಲಿ ಹೆಚ್ಚು ಪ್ರಯೋಗದಲ್ಲಿದೆ. ಅದಕ್ಕೆ ಮೂಲ ಪಾರಸೀ ಭಾಷೆಯ ಆರಾಇಶ್. ಅರ್ಥ, ದೀಪಗಳ ಶೋಭೆ, ಜ್ಯೋತಿಗಳ ಪ್ರದರ್ಶನ.

**ಅರಿವಳಿಕೆ** anaesthesia ಎಂಬ ಅರ್ಥದ ಶಬ್ದಕ್ಕೆ ಅರಿವಳಿಕೆ ಸರಿಯಾದ ಕನ್ನಡ ಪದವೇ? ಎಲ್ಲ ಭಾಷೆಗಳಲ್ಲಿಯೂ ಎಲ್ಲ ಭಾವನೆಗಳಿಗೂ ವಸ್ತುಸ್ಥಿತಿಗಳಿಗೂ ಸರಿಯಾದ ಶಬ್ದವಿರುವುದಿಲ್ಲ. ಜ್ಞಾನಪ್ರಸಾರದ ಕ್ರಮವನ್ನು ಒಂದು ಭಾಷೆಯ ವಿದ್ವಾಂಸರು ಕೈಗೊಂಡಾಗ ಭಾಷೆಯ ಬೆಳವಣಿಗೆಗಾಗಿ ಹೊಸ ಶಬ್ದಗಳನ್ನು ನಿರ್ಮಾಣ ಮಾಡುತ್ತಾರೆ. ಆ ಶಬ್ದವು ತಪ್ಪಾಗಿದ್ದರೂ ಅವು ಅದೇ ಅರ್ಥದಲ್ಲಿ ಉಳಿದುಬಿಡುತ್ತವೆ. ಸೂಕ್ತವಾದ ಮತ್ತೊಂದು ಶಬ್ದ ದೊರೆತಾಗ ಅವು ನಿರುಪಯುಕ್ತವಾಗುತ್ತವೆ. ಅರಿವು (ಅಱಿವು) = ತಿಳಿವಳಿಕೆ, ಎಚ್ಚರ + ಅಳಿ (ೞಿ) = ಕೆಡು + ಕೆ ಭಾವನಾಮ ಪ್ರತ್ಯಯ = ಅರಿವಳಿಕೆ ಎಂಬ ಶಬ್ದವನ್ನು ಮಾಡಿಕೊಂಡಿದ್ದಾರೆ. ವ್ಯಾಕರಣದ ರೀತಿಯಲ್ಲಿ ಇದು ತಪ್ಪು. ಏಕೆಂದರೆ ಅಳಿಕೆ (ಅೞಿಕೆ) ಎಂಬ ಶಬ್ದವೇ ಕನ್ನಡದಲ್ಲಿಲ್ಲ. ಈ ಸ್ಥಿತಿಯಲ್ಲಿ ಈ ನಾಣ್ಯ ಚಲಾವಣೆಯಲ್ಲಿದೆ.

**ಅರುವತ್ತ ನಾಲ್ಕು ವಿದ್ಯೆಗಳು** ಅರುವತ್ತ ನಾಲ್ಕು ವಿದ್ಯೆಗಳ ಹೆಸರು ಹೀಗಿವೆ: (ಚತುಷ್ಷಷ್ಟಿ ಕಲೆ ಎಂದು ಬೇರೆ ಬೇರೆ ರೀತಿಯಾಗಿವೆ. ಇಲ್ಲಿ ಕಾಮ ಸೂತ್ರದ ರೀತಿಯಲ್ಲಿರುವ ೬೪ ವಿದ್ಯೆಗಳನ್ನು ತಿಳಿಸಿದೆ). *೧. ಗೀತ ೨. ವಾದ್ಯ ೩. ನೃತ್ಯ ೪. ಆಲೇಖ್ಯ ೫. ವಿಶೇಷಕಚ್ಛೇದ್ಯ*

೬. ತಂಡುಲ ಕುಸುಮ ಬಲಿ ವಿಕಾರ ೭. ಪುಷ್ಪಾಸ್ತರಣ ೮. ದಶನವಸನಾಂಗರಾಗ ೯. ಮಣಿ ಭೂಮಿಕಾ ಕರ್ಮ ೧೦. ಶಯನ ರಚನ ೧೧. ಉದಕ ವಾದ್ಯ ೧೨. ಉದಕಾಘಾತ ೧೩. ಚಿತ್ರಾಯೋಗ ೧೪. ಮಾಲ್ಯಗ್ರಥನ ವಿಕಲ್ಪ ೧೫. ಶೇಖರಕಾಪೀಡಯೋಜನ ೧೬. ನೇಪಥ್ಯ ಪ್ರಯೋಗ ೧೭. ಕರ್ಣಪತ್ರ ಭಂಗ ೧೮. ಗಂಧಯುಕ್ತಿ ೧೯. ಭೂಷಣ ಯೋಜನ. ೨೦. ಐಂದ್ರಜಾಲಯೋಗ ೨೧. ಕೌಚುಮಾರಯೋಗ ೨೨. ಹಸ್ತಲಾಘವ ೨೩. ವಿಚಿತ್ರ ಶಾಕಯೂಷ - ಭಕ್ಷ್ಯವಿಕಾರ ಕ್ರಿಯಾ ೨೪. ಪಾನಕ ರಸರಾಗಾಸವಯೋಜನ ೨೫. ಸೂಚೀವಾನ ಕರ್ಮ ೨೬. ಸೂತ್ರ ಕ್ರೀಡಾ ೨೭. ವೀಣಾ ಡಮರುಕ ವಾದ್ಯವಾದನ ೨೮. ಪ್ರಹೇಲಿಕಾ ೨೯. ಪ್ರತಿಮಾಲಾ ೩೦. ದುರ್ವಾಚಕ ಯೋಗ ೩೧. ಪುಸ್ತಕವಾಚನ ೩೨. ನಾಟಕಾಖ್ಯಾಯಿಕಾ ದರ್ಶನ ೩೩. ಕಾವ್ಯ ಸಮಸ್ಯಾ ಪೂರಣ ೩೪. ಪಟ್ಟಿಕಾ ನೇತ್ರವಾನ ವಿಕಲ್ಪ ೩೫. ತರ್ಕ್ಷಕರ್ಮ ೩೬. ತಕ್ಷಣ ೩೭. ವಾಸ್ತು ವಿದ್ಯಾ ೩೮. ರೂಪ್ಯ ರತ್ನ ಪರೀಕ್ಷಾ ೩೯. ಧಾತುವಾದ ೪೦. ಮಣಿರಾಗಾಕರಜ್ಞಾನ ೪೧. ವೃಕ್ಷಾಯುರ್ವೇದಯೋಗ ೪೨. ಮೇಷ ಕುಕ್ಕುಟ ಲಾವಕ ಯುದ್ಧವಿಧಿ. ೪೩. ಶುಕಸಾರಿಕಾ ಪ್ರಲಾಪನ ೪೪. ಉತ್ಸಾದನ ಸಂವಾಹನ ೪೫. ಮ್ಲೇಚ್ಛಿತ ವಿಕಲ್ಪ ೪೬. ದೇಶಭಾಷಾ ವಿಜ್ಞಾನ. ೪೭. ಪುಷ್ಪ ಶಕಟಿಕಾ ೪೮. ನಿಮಿತ್ತ ಜ್ಞಾನ ೪೯. ಯಂತ್ರ ಮಾತೃಕಾ ೫೦. ಧಾರಣ ಮಾತೃಕಾ ೫೧. ಸಂಪಾಠ್ಯ ೫೨. ಮಾನಸೀ ೫೩. ಕಾವ್ಯಕ್ರಿಯಾ ೫೪. ಅಭಿಧಾನ ಕೋಶ ೫೫. ಕ್ರಿಯಾಕಲ್ಪ ೫೬. ಛಲಿತಕಯೋಗ ೫೭. ವಸ್ತ್ರಗೋಪನ ೫೮. ದ್ಯೂತವಿಶೇಷ ೫೯. ಆಕರ್ಷಕ್ರೀಡಾ ೬೦ ಬಾಲಕ್ರೀಡಾ ೬೧. ವೈನಯಿಮಿಕೀಯ ವಿದ್ಯಾಜ್ಞಾನ ೬೨. ವೈಜಯಿಕೀಯ ವಿಜ್ಞಾನ ೬೩. ವ್ಯಾಯಾಮಿಕೀಯ ವಿದ್ಯಾಜ್ಞಾನ. ೬೪. ಅಕ್ಷರ ಮುಷ್ಟಿಕಾ ಕಥನ. ಈ ಬಗ್ಗೆ ಕಾಮಸೂತ್ರವನ್ನು ಅಭ್ಯಾಸ ಮಾಡುವವರಿಗೆ ವಿವರಗಳು ತಾವಾಗಿಯೇ ದೊರಕುತ್ತವೆ. ಚತುಷ್ಷಷ್ಟಿಕಲೆಗಳಲ್ಲಿ ಅವರು ಪಾರಂಗತರಾಗಬಹುದು.

**ಅರ್ಜಿ** ಇದು ಒಂದು ಅರಬ್ಬಿಯ ಶಬ್ದ. ಆ ಭಾಷೆಯಲ್ಲಿ ಅರ್ಝ್ ಎಂದಿದೆ. ಹಿಂದೀ ಭಾಷೆಯಲ್ಲಿ ಆರ್ಝ್, ಅರಝೀ ಎಂದು ಎರಡು ರೂಪದಲ್ಲಿ ಉಪಯೋಗಿಸುತ್ತಾರೆ. ಮರಾಠಿಯಲ್ಲಿ ಅರ್ಜ, ಅರ್ಜೀ ಎಂಬ ರೂಪಗಳಿವೆ. ಇದಕ್ಕೆ ಸರಕಾರಕ್ಕೆ ಸಲ್ಲಿಸುವ ಪ್ರಾರ್ಥನಾಪತ್ರ, ನಿವೇದನ ಪತ್ರ ಎಂದು ಅರ್ಥ. ಕನ್ನಡದಲ್ಲಿ ಅರ್ಜಿ ಎಂಬುದೇ ಈ ಎಲ್ಲ ಶಬ್ದಗಳಿಗಿಂತ ಹೆಚ್ಚಾಗಿ ಪ್ರಯೋಗದಲ್ಲಿದೆ. ಅರ್ಜಿ ಹಾಕಬಹುದು; ಆದರೆ ಈಗಿನ ಕಾಲದಲ್ಲಿ ಅದಕ್ಕೆ ಉತ್ತರ ಬರುತ್ತದೆ ಎಂಬ ನಂಬಿಕೆ ಇಲ್ಲ.

**ಅರ್ಥೈಸು** ಈ ಶಬ್ದಕ್ಕೆ ಅರ್ಥವಿಸು ಎಂಬ ಪರ್ಯಾಯ ರೂಪವಿದೆ. ಅರ್ಥ +ಇಸು =ಅರ್ಥಿಸು ಎಂಬ ಶಬ್ದಕ್ಕೆ ಕನ್ನಡದಲ್ಲಿ ಕವಿಗಳು ಬೇಡು, ಯಾಚಿಸು ಎಂಬ ಅರ್ಥ ಬರುವಂತೆ ಕಾವ್ಯ ಗಳಲ್ಲಿ ಪ್ರಯೋಗಿಸಿದ್ದಾರೆ. **'ಇಂದ್ರಕೀಲದೊಳರ್ಥಿಸಲಿ ಶಂಕರನನಖಿಳಸ್ವಾರ್ಥಸಿದ್ಧಿಗೆ'** ಎಂದು ಕುಮಾರವ್ಯಾಸ ಪ್ರಯೋಗವಿದೆ. (ಆದಿ ಪರ್ವ ೫-೧೭). ಸಂಸ್ಕೃತ ಶಬ್ದಕ್ಕೆ ಇಸು ಪ್ರತ್ಯಯವನ್ನು ಹತ್ತಿಸಿ ಲೋಪಸಂಧಿ ಮಾಡಿದ ಈ ಪ್ರಯೋಗ ವಿಶೇಷವಾದುದು. ಅರ್ಥ +ಇಸು =ಅರ್ಥವಿಸು ವಕಾರಾಗಮ ಸಂಧಿ. ಇದೆ ಅರ್ಥೈಸು ಆಗಬೇಕಾದ ಮಾರ್ಗ ಹೀಗೆ: ಅರ್ಥ +ಇಸು =ಅರ್ಥೈಸು. ಇದಕ್ಕೆ ಅರ್ಥ— ಅರ್ಥ ಮಾಡು. ಅರ್ಥವನ್ನು ವಿವರಿಸು.

**ಅರ್ಧಚಂದ್ರ** ಇದು ಸಂಸ್ಕೃತ ಶಬ್ದ. ಇದಕ್ಕೆ ಮೂರು ಮುಖ್ಯ ಅರ್ಥಗಳಿವೆ. ೧. ಚಂದ್ರನ ಅರ್ಧಭಾಗ, ೨. ನವಿಲುಗರಿಯಲ್ಲಿರುವ ಅರ್ಧಚಂದ್ರನ ಗುರುತು ೩. ಯಾರನ್ನಾದರೂ ಕತ್ತು ಹಿಡಿದು ನೂಕಲು ಉಪಯೋಗಿಸುವ ಹಸ್ತದ ಹೆಬ್ಬೆಟ್ಟು ಮತ್ತು ತರ್ಜನಿಗಳ ನಡುವಿನ ಭಾಗ. ಗಳಹಸ್ತ ಎಂದು ಇನ್ನೊಂದು ಅರ್ಥ. ಈ ಅರ್ಥ ಸಂಸ್ಕೃತದಲ್ಲಿಯೇ

ಇದೆ. ಅರ್ಧಚಂದ್ರ ಪ್ರಯೋಗವಾಯಿತು ಎಂದರೆ ಕತ್ತು ಹಿಡಿದು ಆಚೆಗೆ ನೂಕಿದರು ಎಂದರ್ಥ. ಅರ್ಧ ಚಂದ್ರಕ ಎಂಬ ರೂಪವೂ ಉಂಟು. ಕತ್ತಿನ ಮುಂಭಾಗದಲ್ಲಿ ಹಿಡಿದರೂ ಆಗಬಹುದು, ಹಿಂಭಾಗದಲ್ಲಿ ಹಿಡಿದರೂ ಆಗಬಹುದು.

**ಅರ್ಧಾಂಗಿ** ಇದೊಂದು ವಿಚಿತ್ರವಾದ ಶಬ್ದ. ಸಂಸ್ಕೃತದ ಪ್ರಮುಖ ನಿಘಂಟುಗಳು ಈ ಶಬ್ದವನ್ನು ಉಲ್ಲೇಖಿಸುವುದಿಲ್ಲ. ಕನ್ನಡದಲ್ಲಿ ೧೨ನೆಯ ಶತಮಾನದ ತನಕ ಇದರ ಪ್ರಯೋಗವಿಲ್ಲ. ರುದ್ರಭಟ್ಟನ ಜಗನ್ನಾಥ ವಿಜಯದಲ್ಲಿ **ವಸುದೇವನರ್ಧಾಂಗಿ ರೋಹಿಣೀದೇವಿ ಪರಿಪೂರ್ಣ ಗರ್ಭನಿರ್ಭರ ಭಾರವತಿಯಾಗಿರೆ** (೨-೮೭ ರ ವಚನ) ಎಂಬ ಪ್ರಯೋಗವಿದೆ. ಎಂದರೆ ಅರ್ಧಾಂಗಿ ಶಬ್ದಕ್ಕೆ ಹೆಂಡತಿ ಎಂಬ ಅರ್ಥ ಹಿಂದಿನಿಂದಲೂ ಇದ್ದಿತು ಎಂದು ತೀರ್ಮಾನವಾಗುತ್ತದೆ. ಅರ್ಧನಾರೀಶ್ವರ ಎಂಬ ಶಬ್ದ ಹಳೆಯದು. ಎರಡು ಭಾಷೆಗಳಲ್ಲಿಯೂ ಅರ್ಧಾಂಗಿ ಎಂಬ ಶಬ್ದಕ್ಕೆ ಹೆಂಡತಿ ಎಂಬ ಅರ್ಥದಲ್ಲಿ ಇದನ್ನು ಯಾರು ಮೊದಲು ಉಪಯೋಗಿಸಿದರು ಎಂಬುದು ಒಳ್ಳೆಯ ಸಂಶೋಧನ ವಿಷಯವಾಗುತ್ತದೆ. ಅರ್ಧಾಂಗ ಎಂಬುದು ಉಪಯೋಗದಲ್ಲಿಲ್ಲ. ಅರ್ಧನಾರೀಶ್ವರ ಶಬ್ದದ ಅರ್ಥವಿಸ್ತಾರದ ಪರಿಣಾಮವಾಗಿ ಇದೂ ಪ್ರಯೋಗವಾಗಿರಬೇಕು. ಇಂಗ್ಲಿಷಿನಲ್ಲಿ Better half ಎಂಬ ಒಂದು ಪ್ರಯೋಗವಿದೆ. ಅದರಲ್ಲಿ ಹೊಗಳಿಕೆಯ ಅರ್ಥವಿದೆ. ಅರ್ಧಾಂಗಿಯಲ್ಲಿ ಅದೂ ಇಲ್ಲ. ಅದು ಅರ್ಧಹಾಸ್ಯದ ಮಾತು. ಈ ಶಬ್ದದ ಚರಿತ್ರೆಯನ್ನು ವಿಶದವಾಗಿ ಪರಿಶೀಲಿಸಬೇಕು.

**ಅರ್ಧಾಂಗಿನಿ** ಅರ್ಧಾಂಗಿ ಎಂಬ ಶಬ್ದ ಸರಿಯಾದುದು. ಇದು ಸಂಸ್ಕೃತದ ಅರ್ಧಾಂಗೀ ಎಂಬ ಶಬ್ದದ ತದ್ಭವ. ಅರ್ಧಾಂಗಿನಿ ಎಂಬ ಶಬ್ದ ತಪ್ಪು.

**ಅರ್ಹತ** ಇದು ಬುದ್ಧನ ಹೆಸರು. ಸಂಸ್ಕೃತದಲ್ಲಿ ಗೌರವಾದರಗಳಿಗೆ ಅರ್ಹನಾದ ವ್ಯಕ್ತಿ ಎಂದು ಅರ್ಥ. ವಿಶೇಷವಾಗಿ ಜೈನಯತಿಗಳಿಗೂ ಬುದ್ಧನಿಗೂ ಅನ್ವಯವಾಗುತ್ತದೆ. ಅರ್ಹಂತ ಎಂಬ ಹೆಸರು ಬುದ್ಧನಿಗೂ ಅನ್ವಯಿಸುತ್ತದೆ. ಆದರೆ ಹೆಚ್ಚಾಗಿ ಜೈನರ ಇಪ್ಪತ್ತುನಾಲ್ಕು ತೀರ್ಥಂಕರರಿಗೆ ಅನ್ವಯಿಸುತ್ತದೆ. ಅರ್ಹಚ್ಛಾಸನ ಎಂದರೆ ಜೈನಧರ್ಮ.

**ಅಲರ್ವೋಗು** ಎಂಬ ಕನ್ನಡ ಶಬ್ದಕ್ಕೆ ಹೂವು ಬಿಡು ಎಂದರ್ಥ. **'ಅಲರ್ವೋದ ಮಾವಿನಡಿಮಂಚಿಕೆಯೊಳ್'** ಎಂದು ಜನ್ನಕವಿಯ ಪ್ರಯೋಗವಿದೆ. ಅಲರ್ ಎಂದರೆ ಹೂವು. ಅಲರ್ವೋಗು ಎಂದರೆ ಹೂವನ್ನು ಹೊಂದು ಎಂದರ್ಥ. ಗಿಡವು ಹೂವನ್ನು ಹೊಂದಿದೆ ಎಂದರೆ, ಹೂವು ಬಿಟ್ಟಿದೆ ಗಿಡದಲ್ಲಿ ಎಂದು ಅರ್ಥ.

**ಅಲವತ್ತು** ಹಳಗನ್ನಡದಲ್ಲಿ **ಅಲವಱು** ಎಂಬ ಒಂದು ಧಾತುವಿದೆ. ಈ ಶಬ್ದಕ್ಕೆ ೧. ಶ್ರಮಪಡು ೨. ಆಸೆಪಡು ೩. ಸಂಕಟಪಡು ಎಂಬ ಅರ್ಥಗಳಿವೆ. ಈ ಧಾತುವಿನ ಭೂತನ್ಯೂನ ರೂಪ ಅಲವತ್ತು. ಈ ಶುಭಕಾರ್ಯ ಸರಿಯಾಗಲಿಲ್ಲವಲ್ಲ ಎಂದು ಅವರು ಅಲವತ್ತುಕೊಂಡರು ಎಂಬ ವಾಕ್ಯವನ್ನು ಗಮನಿಸಿ. ಇಲ್ಲಿ ಸಂಕಟಪಟ್ಟರು ಎಂದು ಅರ್ಥ. ಹೆಚ್ಚಾಗಿ ಇದೇ ಮುಖ್ಯವಾದ ಅರ್ಥವೆಂದು ಪರಿಗಣಿತವಾಗಿದೆ.

**ಅಲಾಬಿ ಹಬ್ಬ** ಇದು ಈ ಶಬ್ದದ ಸರಿಯಾದ ರೂಪ. ಲಾಬಿ ಹಬ್ಬ ಅಲ್ಲ. ಮಹಮ್ಮದೀಯರ ಮೊಹರಂ ಹಬ್ಬಕ್ಕೆ ಇದು ಇನ್ನೊಂದು ಹೆಸರು. ಅರಾಬಿಕ್ ಭಾಷೆಯಲ್ಲಿ ಇಲಾಹಿ ಎಂದರೆ ದೇವರು. ಇದು ತುಳು ಭಾಷೆಯಲ್ಲಿ ಅಲಾಬಿ ಎಂದಾಗಿದೆ. ಇತರ ಭಾಷೆಗಳಲ್ಲಿಯೂ ಅಲಾಬಿ ಎಂದು ಪರಿಚಯವಾಗಿದೆ. ಈ ಹಬ್ಬದಲ್ಲಿ ಹುಲಿವೇಷವನ್ನು ಹಾಕಿ ಕುಣಿಯುವವನಿಗೆ ಅಲಾಬಿ ಹುಲಿ ಎಂದು ಹೆಸರಿಟ್ಟು ಕರೆಯುತ್ತಾರೆ.

ನಾನು ಹುಡುಗನಾಗಿದ್ದಾಗ ಊರುಗಳಲ್ಲಿ ಮೊಹರಂ ಹಬ್ಬದ ದಿನಗಳಲ್ಲಿ ಈ ರೀತಿ ಹುಲಿವೇಷ ಹಾಕಿಕೊಂಡು 'ಆಲಿ.... ದೂಲ...... ಹಜರತ್....' ಮುಂತಾಗಿ ಹೇಳುತ್ತ

ಕುಣಿದು ಲಾಗ ಹಾಕಿಕೊಂಡು ಬರುತ್ತಿದ್ದ ಹುಲಿವೇಷಧಾರಿಗಳ ಹಿಂದೆ ಬೀದಿಯಿಂದ ಬೀದಿಗೆ ಹಿಂಬಾಲಿಸಿಕೊಂಡು ಹೋಗುತ್ತಿದ್ದುದು ನೆನಪಿದೆ. ಆಗ ಅವರು ಕೈಯಲ್ಲಿ ಗೋಲಕ ಹಿಡಿದು ಚಂದಾವಸೂಲಿ ಮಾಡುತ್ತಿದ್ದುದುದೂ ಊರಜನ ಹುಲಿವೇಷಧಾರಿಯ ಆಟ ನೋಡಿ ಸಂತೋಷದಿಂದ ಗೋಲಕದಲ್ಲಿ ಕಾಸು ಹಾಕುತ್ತಿದ್ದುದೂ.... ಪಟ್ಟಣಕ್ಕೆ ಬಂದ ಮೇಲೆ ಎಲ್ಲಾ ಮಾಯವಾದುವು, ಹಳೆಯ ಪಳಕೆಯ ಮುಖಗಳು. ನಿಮ್ಮ ಕಡೆ ಇದು ಇನ್ನೂ ಇದೆಯೇ ? ಬರೆದು ತಿಳಿಸುತ್ತೀರಾ ?

**ಅಲಿಪ್ತ ರಾಷ್ಟ್ರ** ಪರಸ್ಪರ ವಿರೋಧಿಗಳಾದ ಎರಡೂ ರಾಷ್ಟ್ರಗಳ ಸಂಬಂಧದಲ್ಲಿ ಯಾವ ಕಡೆಗೂ ಸೇರದೆ ತಟಸ್ಥವಾಗಿರುವ ರಾಷ್ಟ್ರಕ್ಕೆ ಅಲಿಪ್ತರಾಷ್ಟ್ರ ಎನ್ನುತ್ತಾರೆ. ಸಂಸ್ಕೃತದಲ್ಲಿ ಲಿಪ್ ಎಂಬ ಧಾತುವಿದೆ. ಇದಕ್ಕೆ ೧. *ಬಳಿ, ಸವರು* ೨. *ಸೇರಿಕೋ, ಹೊಂದಿಕೊಂಡಿರು* ಮುಂತಾಗಿ ಅನೇಕ ಅರ್ಥಗಳಿವೆ. ಲಿಪ್ತ ಎನ್ನುವುದು ಕೃದಂತರೂಪ. ೧. *ಬಳಿದಿರುವ* ೨. *ಸೇರಿಕೊಂಡಿರುವ* ಎಂದರ್ಥ. ಅ ಎಂಬ ನಿಷೇಧಾರ್ಥ ಪ್ರತ್ಯಯ ಸೇರಿದರೆ ಅದು ಅಲಿಪ್ತ ಎಂದಾಗುತ್ತದೆ. ೧. *ಬಳಿಯಲ್ಪಡದ,* ೨. *ಸೇರಿಕೊಂಡಿರದ* ಎಂದು ಅರ್ಥವಾಗುತ್ತದೆ. ಅಂಥ ರಾಷ್ಟ್ರ ಅಲಿಪ್ತ ರಾಷ್ಟ್ರ. ಅಲಿಪ್ತ ರಾಷ್ಟ್ರಗಳೇ ಈಗ ಒಂದು ಗುಂಪಾಗಿವೆ.

**ಅಲಿಬಿ** ಇದು ಲ್ಯಾಟಿನ್ ಭಾಷೆಯ ಶಬ್ದ. ಇದಕ್ಕೆ ಬೇರೆ ಸ್ಥಳ ಎಂದು ಅರ್ಥ. ಕಾನೂನಿನಲ್ಲಿ ಈ ಶಬ್ದ ವ್ಯಾಪಕವಾಗಿ ಬಳಸಲ್ಪಡುತ್ತದೆ. ಒಂದು ಅಪರಾಧ ನಡೆದಾಗ ತಾನು ಆ ಸ್ಥಳದಲ್ಲಿರದೆ ಬೇರೆ ಎಡೆಯಲ್ಲಿ ಇದ್ದೆ ಎಂಬ ವಾದ. ಲ್ಯಾಟಿನ್‌ನಲ್ಲಿ ಆ ಶಬ್ದ alius ibi.

**ಅಲಿಯಾಸ್ - ಉರ್ಫ್** ಇವು ಕನ್ನಡ ಶಬ್ದಗಳಲ್ಲ. ಅಲಿಯಾಸ್ ಎಂಬುದು ಇಂಗ್ಲಿಷ್ ಶಬ್ದ. ಅದು ಇಂಗ್ಲಿಷ್ ಭಾಷೆಗೆ ಲ್ಯಾಟಿನ್ ಭಾಷೆಯಿಂದ ಬಂದಿದೆ. ಲ್ಯಾಟಿನ್ ಭಾಷೆಯಲ್ಲಿ otherwise ಎಂದು ಅರ್ಥ. ಕನ್ನಡದಲ್ಲಿ ಅಲ್ಲದಿದ್ದರೆ ಎಂದರ್ಥ. ಇದು ಹುಸೇನ್ ಅಥವಾ ಬಷೀರ್ ಎನ್ನುವಂತೆ ಸ್ವೀಕರಿಸಿರುವ ಮತ್ತೊಂದು ಹೆಸರನ್ನು ತಿಳಿಸುತ್ತದೆ. ಉರ್ಫ್ ನ್ಯಾಯಾಲಯದ ಭಾಷೆಯಲ್ಲಿ ಪ್ರಯುಕ್ತವಾಗಿದೆ. ಕನ್ನಡ, ತೆಲುಗು ಭಾಷೆಗಳಲ್ಲಿ ವ್ಯಾಪಕವಾಗಿ ಪ್ರಯೋಗವಾಗುತ್ತಿದೆ. ಇದು ಉರ್ದು ಭಾಷೆಯಿಂದ ಬಂದಿರುವಂತಿದೆ. ಉರ್ದುವಿನಲ್ಲಿ ಉರ್ಫ್ ಮತ್ತು ಮರುಫ್ ಬಿಹ್ ಶಬ್ದಗಳನ್ನು ಇದೇ ಅರ್ಥದಲ್ಲಿ ಉಪಯೋಗಿಸುತ್ತಾರೆ. ಆದುದರಿಂದ ಅವೇ ಮೂಲ ಎಂದು ನಾನು ತಿಳಿದಿದ್ದೇನೆ.

**ಅಲ್ಲಿ** ಶಬ್ದಗಳಿಗೆ ಸಪ್ತಮೀ ವಿಭಕ್ತಿ ಪ್ರತ್ಯಯವನ್ನು ಹಚ್ಚುವಾಗ 'ಅಲ್ಲಿ' ಎಂಬ ಪ್ರತ್ಯಯವನ್ನು ಸೇರಿಸುತ್ತಾರೆ. ಮನೆಯಲ್ಲಿ, ಶಾಲೆಯಲ್ಲಿ ಇತ್ಯಾದಿ. ಆದರೆ ಕೆಲವರು ಮನೇನಲ್ಲಿ, ಶಾಲೆನಲ್ಲಿ, ಬೀದಿನಲ್ಲಿ ಎಂದು ಉಪಯೋಗಿಸುತ್ತಾರೆ. ಈ 'ನಲ್ಲಿ' ಎಂಬುದು ಯಾವ ಪ್ರತ್ಯಯ ? ಭಾಷೆಯು ಉಪಯೋಗವಾಗುವ ಕ್ರಮವನ್ನು ಅನುಸರಿಸಿ ವ್ಯಾಕರಣ ಸೂತ್ರಗಳನ್ನು ವಿದ್ವಾಂಸರು ರಚಿಸಿರುತ್ತಾರೆ. ಆದುದರಿಂದ ಆ ಕ್ರಮವನ್ನು ಬಿಟ್ಟರೆ ಭಾಷೆಯಲ್ಲಿ ತಪ್ಪುಗಳು ಉಂಟಾಗುತ್ತವೆ. ಭಾಷೆಯ ವಿದ್ಯಾರ್ಥಿಗಳು ಇದನ್ನು ನೆನಪಿಡಬೇಕು. ಉದಾ: ಅಕಾರಾಂತವಾದ ಮೂರು ಲಿಂಗದ ಶಬ್ದಗಳನ್ನು ನೋಡಿ. ರಾಮ ಎಂಬುದು ಸಪ್ತಮೀ ವಿಭಕ್ತಿಯಲ್ಲಿ ರಾಮನಲ್ಲಿ ಎಂದಾಗುತ್ತದೆ. ಅಕ್ಕ - ಅಕ್ಕನಲ್ಲಿ, ಗಿಡ - ಗಿಡದಲ್ಲಿ, ಇಕಾರಾಂತವನ್ನು ನೋಡಿ. ಹರಿ - ಹರಿಯಲ್ಲಿ, ಗೌರಿ - ಗೌರಿಯಲ್ಲಿ, ಬೀದಿ - ಬೀದಿಯಲ್ಲಿ. ಉಕಾರಾಂತವಾದ ಶಬ್ದಗಳನ್ನು ಗಮನಿಸಿ. ಶಂಭು ಶಂಭುವಿನಲ್ಲಿ, ವಧು - ವಧುವಿನಲ್ಲಿ, ಚೊಂಬು - ಚೊಂಬಿನಲ್ಲಿ, ಹೀಗೆಯೇ 'ಎ' ಕಾರಾಂತ ಶಬ್ದಗಳನ್ನು ನೋಡೋಣ. ಹೆಗ್ಗಡೆ - ಹೆಗ್ಗಡೆಯಲ್ಲಿ, ಸೀತೆ - ಸೀತೆಯಲ್ಲಿ, ಮನೆ - ಮನೆಯಲ್ಲಿ ಈ ಕ್ರಮವನ್ನರಿತು ಸಪ್ತಮೀ ವಿಭಕ್ತಿಯನ್ನು ಸೇರಿಸಬೇಕು. ಆದುದರಿಂದ ಮನೇನಲ್ಲಿ, ಬೀದಿನಲ್ಲಿ, ಶಾಲೆನಲ್ಲಿ ಎಂಬಂಥ ರೂಪಗಳು ಶುದ್ಧ ಅಬದ್ಧಗಳು.

**ಅವಗಾಹನೆ** ಅವ ಎಂಬುದು ಒಂದು ಉಪಸರ್ಗ. ಈ ಉಪಸರ್ಗಕ್ಕೆ ದೂರಕ್ಕೆ, ಆಳಕ್ಕೆ, ಕೆಳಕ್ಕೆ ಎಂಬ ಅರ್ಥಗಳಾಗುತ್ತವೆ. 'ಗಾಹನ' ಎಂದರೆ ನೀರಿನಲ್ಲಿ ಇಳಿದು ಸ್ನಾನ ಮಾಡುವುದು, ಮುಳುಗು ಹಾಕುವುದು ಎಂದು ಅರ್ಥ. 'ಅವಗಾಹನ' ದಿಂದ ಕನ್ನಡದ 'ಅವಗಾಹನೆ' ಶಬ್ದ ಬಂದಿದೆ. ಇದಕ್ಕೂ ನೀರಿನಲ್ಲಿ ಮುಳುಗಿ ಸ್ನಾನ ಮಾಡುವುದು ಎಂದೇ ಅರ್ಥ. ಆದರೆ ಈ ಅರ್ಥದಲ್ಲಿ ಆಧುನಿಕ ಕನ್ನಡದಲ್ಲಿ ಉಪಯೋಗವಾಗುತ್ತಿಲ್ಲ. ಅವಗಾಹನೆ ಎಂಬ ಶಬ್ದಕ್ಕೆ ವ್ಯಾಪಕವಾದ ಮತ್ತೊಂದು ಅರ್ಥವಿದೆ. ಗಮನ, ಪರಿಶೀಲನೆ, ಪರಾಮರ್ಶೆ ಎಂಬುದು ಆ ಅರ್ಥ. ಈ ಪತ್ರವನ್ನು ತಮ್ಮ ಅವಗಾಹನೆಗೆ ಕಳಿಸಿದ್ದೇನೆ, ಎಂದು ಮೊದಲಾಗಿ ಈಚೆಗೆ ಉಪಯೋಗಿಸುತ್ತಾರೆ.

**ಅವಘಡ** ಇದು ಮರಾಠಿ ಶಬ್ದ. ಅವಘಡ್ ಎಂಬುದು ಸರಿಯಾದ ರೂಪ. ಇದಕ್ಕೆ ಬಿಕ್ಕಟ್ಟಾದ, ಇಕ್ಕಟ್ಟಾದ, ಕಠಿಣವಾದ ಎಂಬ ಗುಣವಾಚಕದ ಅರ್ಥವಿದೆ. ಮರಾಠಿ ಭಾಷೆಯನ್ನಾಡುವ ಪ್ರದೇಶದ ಎಲ್ಲೆನಾಡಿನಲ್ಲಿ ಈ ಶಬ್ದ ಹೆಚ್ಚಾಗಿ ಉಪಯೋಗವಾಗುತ್ತದೆ.

**ಅವಜ್ಞತೆ** ಈ ಶಬ್ದಕ್ಕೆ ಅರ್ಥ ಅನಾದರ, ತಿರಸ್ಕಾರ, ಉದಾಸೀನತೆ, ಅನುಮಾನ. ಸಂಸ್ಕೃತದಲ್ಲಿ 'ಅವಜ್ಞಾ' ಎಂದು ಇರುವ ರೂಪವೇ ಕನ್ನಡದಲ್ಲಿ **'ಅವಜ್ಞೆ'** ಎಂದಾಗುತ್ತದೆ. **ಪ್ರಾಮುಖ್ಯತೆ, ಪ್ರಾಧಾನ್ಯತೆ, ಸೌಹಾರ್ದತೆ** ಎಂದು ತಪ್ಪು ರೂಪಗಳನ್ನು ಮಾಡಿಕೊಂಡು ಉಪಯೋಗಿಸುತ್ತಿರುವಂತೆ ಈ ಶಬ್ದವನ್ನೂ ಮಾಡಿದ್ದಾರೆ. ಅವಜ್ಞೆ ಎಂದರೆ ಸಾಕು. ಅದೇ ಶುದ್ಧ.

**ಅವತರಣಿಕೆ** ಗ್ರಂಥಗಳಿಗೆ ಬರೆಯುವ ಪೀಠಿಕೆ, ಪ್ರಸ್ತಾವನೆ, ಹಿನ್ನೆಲೆ ಮುಂತಾದುವುಗಳಿಗೆ ಈ ಹೆಸರಿದೆ. ಇದು ಅವತರಣಿಕಾ ಎಂಬ ಸಂಸ್ಕೃತ ಶಬ್ದದಿಂದ ಮಾಡಿಕೊಂಡಿರುವ ರೂಪ.

**ಅವಧಾನಿ** ಇದು ಸಂಸ್ಕೃತ ಶಬ್ದ. ಅವಧಾನವುಳ್ಳವನು ಅವಧಾನಿ. ಅವಧಾನ ಎಂದರೆ ಗಮನ, ಏಕಾಗ್ರ ಗಮನ. ತದೇಕಚಿತ್ತನಾಗಿರುವುದು ಎಂದರ್ಥ. ಅಷ್ಟಾವಧಾನಿ, ಶತಾವಧಾನಿ ಎಂಬ ಶಬ್ದಗಳೂ ಇವೆ. ಎಂಟು ವಿಷಯಗಳಲ್ಲಿ ಏಕಾಗ್ರ ಗಮನವುಳ್ಳವನು. ನೂರು ವಿಷಯಗಳಲ್ಲಿ ಅವಧಾನವುಳ್ಳವನು ಎಂದು ಆ ಎರಡು ಶಬ್ದಗಳ ಅರ್ಥ. ಒಟ್ಟಿಗೆ ನೂರು ಜನ ನೂರು ವಿಷಯಗಳನ್ನು ಕುರಿತು ಪ್ರಶ್ನೆ ಹಾಕಿದರೂ ನೆನಪಿಟ್ಟುಕೊಂಡು ಉತ್ತರ ಹೇಳುವ ಒಂದು ಅಸಾಧಾರಣ ಸತ್ವವನ್ನು ಆ ಶಬ್ದಗಳು ಸೂಚಿಸುತ್ತವೆ. ಹಿಂದೆ ಇಂಥ ದಕ್ಷರ ಗುಂಪೇ ಇರುತ್ತಿತ್ತು. ಅಂಥ ಕುಟುಂಬದಲ್ಲಿ ಹುಟ್ಟಿದವರು ಈಗಲೂ ಆ ಹೆಸರನ್ನು ಇಟ್ಟುಕೊಂಡಿರುತ್ತಾರೆ. ಅಲ್ಲಲ್ಲಿ ಒಬ್ಬಿಬ್ಬರು ಅಂಥ ವಿದ್ವಾಂಸರೂ ಇದ್ದಾರೆ ಎಂಬುದೇ ನಮಗೆ ಸಮಾಧಾನದ ವಿಷಯ. ಈಗ ಅವಧಾನಿ ಎಂಬುದು ಕೇವಲ ವಂಶದ ಹೆಸರಾಗಿ ಉಳಿದು ಬಂದಿದೆ. ಈಗ ಅವಧಾನಿ ಎಂದರೆ ಅಂಥ ವಂಶಕ್ಕೆ ಸೇರಿದವನು ಎಂದು ಮಾತ್ರ ಅರ್ಥ. ಯಾವ ಅವಧಾನವೂ ಇರಬೇಕಾಗಿಲ್ಲ.

**ಅವಮರ್ಶ** ಇದು ಸಂಸ್ಕೃತ ಶಬ್ದ. ಮೃಶ್ ಎಂಬ ಧಾತುವಿನಿಂದ ಬಂದದ್ದು. ಇದಕ್ಕೆ ಆಲೋಚನೆ ಮಾಡುವುದು, ಚಿಂತಿಸುವುದು ಪರಾಮರ್ಶೆ ಮಾಡುವುದು ಎಂದು ಅರ್ಥ. ಇಂಗ್ಲಿಷಿನ Consideration ಅಥವಾ reflection ಎಂಬುದಕ್ಕೆ ಸಮಾನ.

**ಅವಲೋಕನ** ಅವ ಎಂಬುದು ಒಂದು ಅವ್ಯಯ. ಅದಕ್ಕೂ ಅನೇಕ ಅರ್ಥಗಳು ಬರುತ್ತವೆ. ಇಲ್ಲಿ ಚೆನ್ನಾಗಿ ನೋಡುವುದು ಎಂದು ಈ ಶಬ್ದಕ್ಕೆ ಅರ್ಥ.

**ಅವಸರ** ಅವಸರಕ್ಕೆ ಸಂಸ್ಕೃತದಲ್ಲಿ ಸಮಯ, ಸಂದರ್ಭ ಎಂಬ ಅರ್ಥ. ಕನ್ನಡದಲ್ಲಿ ೧. ಜಲಮಲ ಬಾಧೆಯ ಒತ್ತಡ ೨. ಬೇಗ, ತ್ವರೆ ಎಂಬ ಅರ್ಥಗಳೂ ಸೇರಿವೆ. ವಿಪರೀತ ಎಂದರೆ ಸಂಸ್ಕೃತದಲ್ಲಿ ತಲೆಕೆಳಗು, ವಿರುದ್ಧ ಎಂಬ ಅರ್ಥವಿದ್ದರೆ ಕನ್ನಡದಲ್ಲಿ ತುಂಬ, ಹೆಚ್ಚು ಎಂಬ ಅರ್ಥ ಬಂದಿದೆ. ನಿರ್ವಾಣ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಮೋಕ್ಷ ಎಂಬ ಅರ್ಥವಿದ್ದರೆ ಕನ್ನಡದಲ್ಲಿ ನಗ್ನ, ಬೆತ್ತಲೆ ಎಂಬ ಅರ್ಥ ಬಂದಿದೆ. ಹೀಗೆ ಕನ್ನಡದಲ್ಲಿ ಸಂಸ್ಕೃತ

ಶಬ್ದಗಳಿಗೆ ಅರ್ಥಗಳು ಬದಲಾಗುತ್ತವೆ. ಇದು ಬೆಳವಣಿಗೆಯೇ ಹೊರತು ತಪ್ಪಲ್ಲ.

**ಅವಳಿ ಜವಳಿ** ಸಂಸ್ಕೃತದಲ್ಲಿ ಯಮಲ ಎಂಬ ಶಬ್ದವಿದೆ. ಇದಕ್ಕೆ 'ಒಂದು ಜೊತೆ, ಒಂದೇ ಗರ್ಭದಲ್ಲಿ ಬೆಳೆದು ಜೊತೆಯಾಗಿ ಹುಟ್ಟಿದವರು' ಎಂಬ ಅರ್ಥಗಳಿವೆ. ಈ ಶಬ್ದ ಕನ್ನಡದಲ್ಲಿ ತದ್ಭವವಾದಾಗ 'ಅಮಳ್' ಎಂಬ ರೂಪವನ್ನು ಪಡೆಯುತ್ತದೆ. 'ಜಮಳ' ಎಂಬ ಮತ್ತೊಂದು ರೂಪವೂ ಇದೆ. ಇವೆರಡೂ ಒಂದೇ ಅರ್ಥದವಾದುದರಿಂದ 'ಅಮಳ ಜಮಳ, ಅಮಳು ಜಮಳು' ಎಂಬ ರೂಪಗಳಾಗಿ ಬೆಳೆದು ಬಳಿಕ 'ಅವಳಿಜವಳಿ' ಗಳಾಗಿ ಜೊತೆಯಾಗಿಯೇ ಬಾಳಿಕೊಂಡು ಬಂದಿವೆ. ಈ ಶಬ್ದಗಳನ್ನು ಯಾರೂ ಬೇರೆಯಾಗಿ ಉಪಯೋಗಿಸುವುದೇ ಇಲ್ಲ ಈಗ. ಆದರೆ ಕಾವ್ಯಗಳಲ್ಲಿ ಅಮಳ್ಗಳ್, ಜಮಳ್ ಮುಂತಾಗಿ ಬೇರೆ ಬೇರೆ ಕವಿಗಳು ಹಿಂದೆ ಉಪಯೋಗಿಸಿದ್ದಾರೆ. ಪಂಪ ಭಾರತ (೧೦ನೆಯ ಶತಮಾನ) ದಲ್ಲಿ **'ಬಳೆದವು ತೋಳ್ಗಳೆಕ್ಕೆಯಿನ್ ಅಮಳ್ ಬಳೆವಂತಿರೆ'** ಎಂಬ ಪ್ರಯೋಗವಿದೆ.

**ಅವಾಕ್ಕಾಗು** ಎಂದರೆ ಮಾತನಾಡದಿರುವಂತಾಗು ಎಂದು ಅರ್ಥ. ಅ + ವಾಕ್ ಎಂದರೆ ಮಾತನಾಡಲಾರದ ಮೂಗ ಎಂದು ಸಂಸ್ಕೃತದಲ್ಲಿ ಅರ್ಥ. ಆದುದರಿಂದ ಅವಾಕ್ಕಾಗು ಎಂದರೆ ಮೂಗನಂತಾಗು ಎಂಬುದು ವ್ಯಾಪಕವಾದ ಅರ್ಥ. ಭ್ರಮೆ ಹೊಂದು, ದಿಗ್ಭ್ರಮೆಗೊಳ್ಳು, ಆಶ್ಚರ್ಯಹೊಂದು, ಇವು ಇತರ ಅರ್ಥಗಳು.

**ಅವಾಜು** ಇದು ಪಾರಸೀ ಭಾಷೆಯ ಆವಾಜ್ ಎಂಬ ಶಬ್ದದ ಕನ್ನಡರೂಪ. ಇದಕ್ಕೆ ಸದ್ದು, ಗದ್ದಲ, ಶಬ್ದ, ಗಲಾಟೆ ಎಂದು ಅರ್ಥ. ಇದು ಮರಾಠಿ ಮತ್ತು ಹಿಂದೀ ಭಾಷೆಗಳಲ್ಲಿಯೂ ಆವಾಜ್ ಎಂಬ ರೂಪದಲ್ಲಿಯೇ ಪ್ರಯೋಗವಾಗುತ್ತಿದೆ. **ರಾಜೇಂದ್ರ ನಾಮೆ** ಎಂಬ ಚಾರಿತ್ರಿಕ ಪುಸ್ತಕದಲ್ಲಿ ಈ ಶಬ್ದದ ಪ್ರಯೋಗ ಅಧಿಕವಾಗಿದೆ.

**ಅವಿಚ್ಛಿನ್ನ** ಎಂಬ ಸಂಸ್ಕೃತ ಶಬ್ದಕ್ಕೆ ಎಡೆಬಿಡದ, ಸತತವಾದ ಎಂದರ್ಥ.

**ಅವಿನಾಭಾವ ಸಂಬಂಧ** ಸಕಾರಣವಾಗಿ ಯಾವಾಗಲೂ ಬೇರೆಯಾಗದೆ ಸದಾ ಒಟ್ಟಿಗಿರುವುದು ಎಂದರ್ಥ. ಇದನ್ನು ಅನೇಕ ವಾದ ವಿವಾದಗಳಲ್ಲಿ ತಾರ್ಕಿಕವಾಗಿ ನೋಡುವವರು ಉಪಯೋಗಿಸುತ್ತಾರೆ. ಇದು ಬಹು ಪ್ರಸಿದ್ಧವಾದ ಪದಪುಂಜ.

**ಅಶರೀರವಾಣಿ ಎಂದರೆ ಯಾರು? ಅದು ಹೆಣ್ಣೇ ಅಥವಾ ಗಂಡೇ?** ಅಶರೀರ ಎಂದರೆ ದೇಹವೇ ಇಲ್ಲದೆ ಇರುವ, ವಾಣಿ =ಮಾತು. ಶರೀರವೇ ಇಲ್ಲದಿರುವಾಗ ಅದು ಹೆಣ್ಣಾಗಲಿ ಗಂಡಾಗಲಿ ಆಗುವುದು ಹೇಗೆ? ಹಾಗೆ ಕೇಳುವ ಮಾತಿಗೆ ಲಿಂಗ ಮುಖ್ಯವಲ್ಲ. ಅದು ತಿಳಿಸುವ ಅಭಿಪ್ರಾಯ ಮಾತ್ರ ಮುಖ್ಯ.

**ಅಶ್ರುವಾಯು, ಆಶ್ರುವಾಯು** ಯಾವುದು ಸರಿ? ಅಶ್ರುವಾಯು ಸರಿ. ಅಶ್ರು ಎಂದರೆ ಕಣ್ಣೀರು. ಅದನ್ನು ತರಿಸುವ ಗಾಳಿ, ಅಶ್ರುವಾಯು. ಆಶ್ರು ತಪ್ಪು.

**ಅಶ್ವೇತಾ** ಈ ಶಬ್ದದಲ್ಲಿ ಅ + ಶ್ವೇತಾ ಎಂದು ವಿಭಾಗ ಮಾಡಬೇಕು. ಶ್ವೇತಾ ಶಬ್ದಕ್ಕೆ *೧. ಬಿಳಿಯ ಬದನೆ ೨. ಬಿಳಿಯ ಗರಿಕೆ ೩. ಕಲ್ಲು ಸಕ್ಕರೆ ೪.* ಆತಿಬಜೆ ಎಂಬ ಅರ್ಥಗಳಿವೆ. ಶ್ವೇತ ಎಂದರೆ *೧. ಬಿಳಿಯ ಬಣ್ಣ ೨. ಬಿಳಿಯ* ಮೋಡ *೩.* ಬೆಳ್ಳಿ *೪.* ಒಂದು ಬೆಟ್ಟ ಇಷ್ಟು ಅರ್ಥವಿದೆ. ಅಶ್ವೇತ ಎಂಬ ಶಬ್ದಕ್ಕೆ ಕೃಷ್ಣವರ್ಣ ಎಂದು ಅರ್ಥ ಬರುತ್ತದೆ ಎಂದು ತಿಳಿದು ಕೃಷ್ಣಾ ಎಂದರೆ ದ್ರೌಪದಿಯ ಹೆಸರಾಗುತ್ತದೆ ಎಂದೇನಾದರೂ ಭಾವಿಸಿಕೊಂಡು ಮಗುವಿಗೆ ಈ ಹೆಸರು ಇಟ್ಟಿದ್ದರೂ ಇರಬಹುದು. ಇದೆಲ್ಲ ಭಾಷೆಯಲ್ಲಿ ನಡೆಯುವ ಆಟಗಳು. ಮನಸ್ಸಿಗೆ ವ್ಯಾಯಾಮ.

**ಅಷ್ಟಗಂಧ ಕಳಶ** ಅಷ್ಟಗಂಧ ಎಂದರೆ ಎಂಟು ಬಗೆಯ ಪರಿಮಳಗಳು. ಗಂಧಗಳನ್ನು ಪಟ್ಟಿ ಮಾಡುವುದರಲ್ಲಿ ನಮ್ಮ ಹಿಂದಿನವರು ಬೇರೆ ಬೇರೆ ರೀತಿಗಳಲ್ಲಿ ಪಟ್ಟಿ ಮಾಡಿದ್ದಾರೆ. ಶ್ರೇಷ್ಠವಾದ ಪರಿಮಳಗಳ ಸಂಖ್ಯೆಯಲ್ಲಿ ಕೂಡ ವ್ಯತ್ಯಾಸಗಳಿವೆ. ಸಾಮಾನ್ಯವಾಗಿ ಎಂಟು

ಗಂಧಗಳು ಇವು: ಜಾಯಿಕಾಯಿ, ಜಾಯಿಪತ್ರೆ, ಲವಂಗ, ದಾಲ್ಚಿನ್ನಿ, ಏಲಕ್ಕಿ, ನಾಗಕೇಸರ, ಮೆಣಸು ಮತ್ತು ಕಸ್ತೂರಿ. ನಾಗಕೇಸರ = ಕುಂಕುಮ ಕೇಸರಿ. ಇವು ಭೋಜನದ ದೃಷ್ಟಿಯಿಂದ ಮಾಡಿದ ಪರಿಮಳಗಳ ಪಟ್ಟಿ. ಇನ್ನೊಂದು ಅಂಗ ಭೋಗದ ದೃಷ್ಟಿಯಿಂದ ಮಾಡಿದ ಪಟ್ಟಿ ಹೀಗಿದೆ: ಪುನುಗು, ಜವಾಜಿ, ಅಗರು, ಪನ್ನೀರು, ಅತ್ತರು, ಕರ್ಪೂರ, ಶ್ರೀಗಂಧ ಮತ್ತು ಕಸ್ತೂರಿ. ದೇಹದ ಮೇಲೆ ಲೇಪಿಸಿಕೊಳ್ಳುವ ಈ ಎಂಟು ಪರಿಮಳ ದ್ರವ್ಯಗಳು ತುಂಬಿರುವ ಕಳಶವೇ **ಅಷ್ಟಗಂಧ ಕಳಶ.** ಕೆಲವು ಗ್ರಂಥಗಳಲ್ಲಿ ಜಟಾಮಾಂಸಿ, ದೇವದಾರು, ಲಾವಂಚ, ರಕ್ತಚಂದನ, ಮಲಯಾಗರ ಮುಂತಾದ ಔಷಧ ದ್ರವ್ಯಗಳ ಹೆಸರುಗಳನ್ನೂ ಸೇರಿಸಿರುವುದು ಕಂಡುಬರುತ್ತದೆ.

**ಅಷ್ಟದರಿದ್ರ ವಿನಾಶಕಲಿಂಗಂ** ಎಂಬ ಶಬ್ದಕ್ಕೆ ಏನು ಅರ್ಥ ? ಅಷ್ಟ ದರಿದ್ರಗಳು ಯಾವುವು ? ಇಂಥ ಸಂದರ್ಭಗಳಲ್ಲಿ ನಾವು ಕವಿಯ ಉದ್ದೇಶವನ್ನು ಅರ್ಥ ಮಾಡಿಕೊಳ್ಳಬೇಕು. ಶಿವನನ್ನು ಪ್ರಾರ್ಥನೆ ಮಾಡುವಾಗ ಸಾಮಾನ್ಯರು ಏನನ್ನಾದರೂ ಯಾಚಿಸುತ್ತಾರೆ. ಪ್ರಾರ್ಥನೆ ಮಾಡುವಾಗ ಏನನ್ನೂ ಯಾಚಿಸಬಾರದು ಎಂಬ ದೃಷ್ಟಿ ಜ್ಞಾನಿಗಳಿಗೆ ಮಾತ್ರ. ಸಾಮಾನ್ಯರು ಪ್ರಾರ್ಥನೆ ಮಾಡುವಾಗ ಯಾಚಿಸುವುದೇನು ? ಆರೋಗ್ಯ, ಐಶ್ವರ್ಯ, ಸಂತತಿ, ಸುಖ, ಶಾಂತಿ - ಇಷ್ಟು ತಾನೆ ? ಪರಮಾತ್ಮನು ಐಶ್ವರ್ಯವನ್ನು ಕೊಡುತ್ತಾನೆ ಎಂಬ ನಂಬಿಕೆಯಿಂದ ಪ್ರಾರ್ಥನೆ ಅದು. ಐಶ್ವರ್ಯದಲ್ಲಿ ಎಂಟು ಬಗೆಗಳಿವೆ. ೧. ಸೇವಕರು ೨. ದಾಸಿಯರು ೩. ಪುತ್ರರು ೪. ಬಾಂಧವರು ೫. ವಸ್ತ್ರ ೬. ವಾಹನ ೭. ಧನ ೮. ಧಾನ್ಯ. ಇವುಗಳು ಇಲ್ಲದೆ ಇರುವುದೇ ದಾರಿದ್ರ್ಯ. ಅಂಥ ದಾರಿದ್ರ್ಯವನ್ನು ನಾಶ ಮಾಡುವವನು ಎಂದರೆ ಅಷ್ಟೈಶ್ವರ್ಯಗಳನ್ನು ಕೊಡುವವನು ಎಂದು ಅರ್ಥ. ದಾರಿದ್ರ್ಯ ಇಲ್ಲದಿರುವುದೂ ಒಂದೇ ಐಶ್ವರ್ಯ ಬರುವುದೂ ಒಂದೇ ಅಲ್ಲವೆ ? ಇವೆರಡರ ನಡುವೆಯ ಸ್ಥಿತಿ ಯಾವುದೂ ಇಲ್ಲ. ಪರಿಶೀಲಿಸಿ. ಅಷ್ಟದರಿದ್ರ ಇದು ಸರಿಯಾದ ನಾಮಪದವಾಗಿದ್ದರೆ ಅಷ್ಟದಾರಿದ್ರ್ಯ ಎಂದಿರಬೇಕು. ಐಶ್ವರ್ಯದಲ್ಲಿ ಅಷ್ಟ ಉಂಟು. ಅದು ಅಷ್ಟೈಶ್ವರ್ಯ. ಇದರ ಮಾದರಿಯ ಮೇಲೆ ಬಡತನವನ್ನು ಉತ್ಪ್ರೇಕ್ಷೆ ಮಾಡಿ ಉಪಯೋಗಿಸಿರುವ ಮಾತಿರಬೇಕು. ನಾನು ಈ ಶಬ್ದದ ಪ್ರಯೋಗವನ್ನು ಕೇಳಿಲ್ಲ.

**ಅಷ್ಟಪದಿ** ಈ ಶಬ್ದವು ಜಯದೇವ ಕವಿಯು ಗೀತಗೋವಿಂದದಲ್ಲಿ ಬರುವ ಅನೇಕ ಅಷ್ಟಪದಿಗಳಿಗೆ ಅನ್ವಯಿಸುವ ಶಬ್ದ. ಕನ್ನಡದಲ್ಲಿ ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ ಎಂಬ ಶಬ್ದಗಳಲ್ಲಿ ಪದಿ ಎಂದರೆ ಪಾದವುಳ್ಳದ್ದು ಎಂದು ಅರ್ಥ. ಆದರೆ ಅಷ್ಟಪದಿ ಶಬ್ದಕ್ಕೆ ಹಾಗೆ ಅರ್ಥ ಬರುವುದಿಲ್ಲ. ಅದು ಎಂಟು ಪದ ಎಂದರೆ ಹಾಡಿನಿಂದ ಕೂಡಿದ ರಚನೆ. ಪದ ಎಂದರೆ ತಾಳಬದ್ಧವಾಗಿ ಸಂಗೀತಕ್ಕೆ ಅಳವಡುವ ಗೀತ. ಪದ ಎಂಬುದು ಏನೆಂದು ಭರತ ಮುನಿಯು ತನ್ನ ನಾಟ್ಯಶಾಸ್ತ್ರವೆಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ.

*ನಿಯತಾಕ್ಷರಸಂಬದ್ಧಂ ಛಂದೋಯತಿಸಮನ್ವಿತಂ*
*ನಿಬದ್ಧಂತು ಪದಂ ಜ್ಞೇಯಂ ಸತಾಲಪತನಾತ್ಮಕಂ.*

ಆದುದರಿಂದ ಎಂಟು ಹಾಡುಗಳು ಒಟ್ಟು ಸೇರಿ ಆಗಿರುವ ಹಾಡು. ಜಯದೇವನ ಗ್ರಂಥದಲ್ಲಿ ಇಪ್ಪತ್ತನಾಲ್ಕು ಅಷ್ಟಪದಿಗಳಿವೆ. ಈ ಅಷ್ಟಪದಿಗಳಲ್ಲಿ ಎಂಟಕ್ಕಿಂತ ಹೆಚ್ಚು ಸಂಖ್ಯೆಯ ಪದಗಳಿರುವ ರಚನೆಗಳೂ ಇವೆ. ಈ ಶಬ್ದ ತುಂಬ ಅರ್ಥವುಳ್ಳದ್ದು.

**ಅಷ್ಟಾವಂಕ** ಎಂಬ ಶಬ್ದ ಸಂಸ್ಕೃತದ ಅಷ್ಟಾವಕ್ರ ಎಂಬ ಶಬ್ದದ ತದ್ಭವ. ಆ ಶಬ್ದಕ್ಕೆ ಎಂಟು ಅವಯುವಗಳು ವಕ್ರವಾಗಿರುವವ ಎಂದು ಅರ್ಥ. ಹೀಗಿದ್ದ ಒಬ್ಬ ಮಹಾಋಷಿಯ ಅಷ್ಟಾವಕ್ರಗೀತೆ ಎಂಬುದು ಪ್ರಸಿದ್ಧ ಗ್ರಂಥ. ಅಷ್ಟಾವಕ್ರ ಋಷಿಯ ಕಥೆ ತುಂಬಾ

ಸ್ವಾರಸ್ಯವಾಗಿದೆ. ಕಹೋಳನೆಂಬ ಋಷಿಗೆ ಸುಜಾತೆ ಎಂಬ ಹೆಂಡತಿಯಿದ್ದಳು. ಸುಜಾತೆಯ ಗರ್ಭದಲ್ಲಿ ಈ ಮಗು ಇದ್ದಾಗಲೇ ಒಂದು ದಿನ ಕಹೋಳನು ವೇದಘೋಷದಲ್ಲಿ ತಪ್ಪಿದನು. ಆಗ ಈ ಮಗು ಗಟ್ಟಿಯಾಗಿ ನಕ್ಕಿತು. ಕೋಪಗೊಂಡ ಕಹೋಳನು ಮಗುವಿಗೆ ಅಷ್ಟಾವಕ್ರನಾಗುವಂತೆ ಶಾಪವಿತ್ತನು. ಮಗು ಜನಿಸಿ ದೊಡ್ಡವನಾದ ಮೇಲೆ ತಂದೆಗೆ ಬಂದಿದ್ದ ಜಲಾಧಿವಾಸದ ಶಾಪವನ್ನು ತಪ್ಪಿಸಿದನು. ಬಳಿಕ ಗಂಗಾಸ್ನಾನದಿಂದ ಅಷ್ಟಾವಕ್ರತೆಯನ್ನು ಕಳೆದುಕೊಂಡನು. ಆದರೂ ಹೆಸರು ಉಳಿದುಕೊಂಡಿತು. ಜನ್ನಕವಿಯ ಯಶೋಧರ ಚರಿತೆಯಲ್ಲಿ ಬರುವ ಮಾವುತನನ್ನು ಅಷ್ಟವಂಕಂ ಎಂದು ವರ್ಣಿಸಲಾಗಿದೆ.

**ಅಷ್ಟೋತ್ತರ** ಈ ಶಬ್ದಕ್ಕೆ ಅರ್ಥರೂಪ ಬೇಕಾದರೆ ಅದರ ಪೂರ್ಣ ಸ್ವರೂಪವನ್ನು ಮೊದಲು ತಿಳಿದುಕೊಳ್ಳಬೇಕು. ಅದು ಅಷ್ಟೋತ್ತರ ಶತನಾಮಾವಳಿ. ಅಂದರೆ ನೂರ ಎಂಟು ಹೆಸರುಗಳ ಸಮೂಹ. ದೇವರನ್ನು ಪೂಜಿಸುವಾಗ ಈ ನೂರೆಂಟು ಹೆಸರುಗಳನ್ನು ಹೇಳಿ ಅರ್ಚನೆ ಮಾಡುತ್ತಾರೆ. ಎಲ್ಲ ದೇವತೆಗಳಿಗೂ ಬೇರೆ ಬೇರೆ ಅಷ್ಟೋತ್ತರ ಶತನಾಮಾವಳಿಗಳಿವೆ. ಯಾವುದಾದರೂ ದೇವಾಲಯಕ್ಕೆ ಹೋಗಿ ಒಮ್ಮೆ ಪೂಜೆ ಮಾಡಿಸಿದರೆ ಇದರ ಅರ್ಥ ಸ್ಪಷ್ಟವಾಗುತ್ತದೆ.

**ಅಸಹಾಯಕ - ನಿಸ್ಸಹಾಯಕ** ಈ ಶಬ್ದಗಳ ಬಗ್ಗೆ ಸ್ವಲ್ಪ ವಿವರವಾಗಿ ತಿಳಿದುಕೊಳ್ಳಬೇಕಾದ ಆವಶ್ಯಕತೆ ಇದೆ. ಸಂಸ್ಕೃತದಲ್ಲಿ ಸಾಹಾಯ್ಯ ಎಂದರೆ ೧. ನೆರವು, ಒತ್ತಾಸೆ, ಬೆಂಬಲ ೨. ಸ್ನೇಹ, ಮೈತ್ರಿ. ಸಾಹಾಯಕ ಎಂದರೆ ಮಿತ್ರನು ಮಾಡುವ ಕೆಲಸ, ನೆರವು. ಸಹಾಯ ಎಂಬುದು ಜೊತೆಯಲ್ಲಿದ್ದು ಹಿತವಾದ ಕೆಲಸ ಮಾಡುವವನು ಎಂದರ್ಥವನ್ನು ನೀಡುತ್ತದೆ. ಸಹಾಯಕ ಎಂಬುದೂ ಇದೇ ಅರ್ಥವನ್ನು ನೀಡುತ್ತದೆ. ಸಹಾಯತಾ ಎಂದರೆ ಸಹಾಯ ಮಾಡುವವರ ಸಮೂಹ. ಸಹಾಯತ್ವ ಎಂದರೆ ಸಹಾಯ. ಹೀಗೆ ಬೇರೆ ಬೇರೆ ಸ್ವರೂಪಗಳಲ್ಲಿ ಈ ಶಬ್ದ ವ್ಯಾಪಕವಾಗಿ ಪ್ರಯೋಗದಲ್ಲಿದೆ. ಈ ಶಬ್ದಕ್ಕೆ ನಿಷೇಧಾರ್ಥದಲ್ಲಿ ಅ ಎಂಬುದು ಶಬ್ದದ ಪ್ರಾರಂಭದಲ್ಲಿ ಸೇರಿದಾಗ ಯಾವ ಸಹಾಯ ಮಾಡುವವನೂ ಇಲ್ಲದಿರುವ ವ್ಯಕ್ತಿ ಎಂದರ್ಥ ಕೊಡುತ್ತದೆ. ನಿಸ್ಸಹಾಯಕ ಎಂಬುದಕ್ಕೂ ಅದೇ ಅರ್ಥ. ಆದರೆ ಈ ಶಬ್ದ ಅಸಹಾಯಕ ಸ್ಥಿತಿಯ ಅಂತ್ಯ ಘಟ್ಟವನ್ನು ಅವಧಾರಣೆಯಿಂದ ತಿಳಿಸುತ್ತದೆ.

**ಅಸಹಾಯಕತೆ** ಸಹಾಯ ಎಂಬ ಶಬ್ದ ಸಂಸ್ಕೃತದ ಸಾಹಾಯ್ಯ ಎಂಬುದರ ತದ್ಭವ. ಸಹಾಯ ಎಂದರೆ ಸಹನೆಯನ್ನು ಉಂಟು ಮಾಡುವವನು, ಸ್ನೇಹಿತ. ಇಂಥ ಸಹಾಯನ ಭಾವವೇ ಸಾಹಾಯ್ಯ = ಸಹಾಯ ಕನ್ನಡದಲ್ಲಿ. ಸಹಾಯಕ ಎಂದರೆ ಸಂಸ್ಕೃತದಲ್ಲಿ ಸಹಾಯನ, ಸ್ನೇಹಿತನ ಕಾರ್ಯ. ಕನ್ನಡದಲ್ಲಿ ನಾವು ಇದನ್ನು ಸಹಾಯ ಮಾಡುವವನು ಎಂಬ ಅರ್ಥದಲ್ಲಿ ಉಪಯೋಗಿಸುತ್ತೇವೆ. ಈ ಕನ್ನಡದ ಸಹಾಯಕ ಶಬ್ದಕ್ಕೆ ತೆ ಪ್ರತ್ಯಯವನ್ನು ಸೇರಿಸಿ ಸಹಾಯಕತೆ =ಸಹಾಯ ಮಾಡುವ ಮನಸ್ಸು, ದೃಷ್ಟಿ, ಕಾರ್ಯ ಎಂಬ ಅರ್ಥವನ್ನು ಹೊಂದುವಂತೆ ಉಪಯೋಗಿಸುತ್ತಿದ್ದೇವೆ. ಅದರ ವಿರುದ್ಧ ಪದ ಅಸಹಾಯಕತೆ =ಯಾವ ಸಹಾಯವನ್ನೂ ಮಾಡದೆ ಇರಬೇಕಾದ ಸ್ಥಿತಿ, ಮಾಡಲು ಆಗದ ಸ್ಥಿತಿ ಇದು ಈ ಶಬ್ದದ ಚರಿತ್ರೆ.

**ಅಸುಂಗೊಳ್** ಈ ಶಬ್ದದಲ್ಲಿ ಅಸು =ಪ್ರಾಣ. ಕೊಳ್ =ತೆಗೆ. ಆದ್ದರಿಂದ ಅಸುಂಗೊಳ್ ಎಂದರೆ ಕೊಲ್ಲು ಎಂದರ್ಥ. ಅದೇ ಶಬ್ದಕ್ಕೆ ವ್ಯಾಪಕಾರ್ಥವಾಗಿ ಬೆರಗಾಗು, ಆಶ್ಚರ್ಯಪಡು ಎಂದೂ ಅರ್ಥವಾಗುತ್ತದೆ. ಕೆಲವು ವೇಳೆ ಈ ಬೆರಗು ಹೆದರಿಕೆಯ ಅರ್ಥದಿಂದಲೂ ಮಿಶ್ರವಾಗಿರಬಹುದು. ಅಸುಂಗೊಳ್ =ಪ್ರಾಣಾಪಹರಣೇ ಎಂದು ಶಬ್ದಮಣಿದರ್ಪಣದಲ್ಲಿ ಆಧಾರವಿದೆ. ಆದರೆ ಮುಂದಿನ ಪ್ರಯೋಗವನ್ನು ನೋಡಿ. **'ಉಚ್ಚಂಗಿ ಕೋಟೆಯಂ ಜಗಮಸುಂಗೊಳೆ ಕೊಂಡ ನೆಗಟ್ತೆ'** (೧೦೮೮ನೇ ಇಸವಿಯ ಒಂದು ಶಾಸನ) ಇಲ್ಲಿ

ಸ್ಪಷ್ಟವಾಗಿ ಆಶ್ಚರ್ಯಪಡು ಎಂದೇ ಅರ್ಥ.

**ಅಸುಕೆ** ಇದು ಸಂಸ್ಕೃತದ ಅಶೋಕ ಎಂಬ ವೃಕ್ಷದ ಹೆಸರಿನ ಕನ್ನಡ ತದ್ಭವ ರೂಪ.

**ಅಸುರ - ದಾನವ - ದೈತ್ಯ - ರಾಕ್ಷಸ** ದೇವತೆಗಳಿಗೆ ನೀಡುವ ಹೋಮಭಾಗವನ್ನು ಬೇರೆಡೆ ತಳ್ಳುತ್ತಾರೆಂದು ಅಸುರರು ಎಂಬ ಹೆಸರು ಬಂದಿದೆ ಎಂಬುದು ಒಂದು ವಿವರಣೆ. ಇತರ ವಿವರಣೆಗಳೂ ಇವೆ. ದನು ಎಂಬ ಕಶ್ಯಪನ ಹೆಂಡತಿಯಲ್ಲಿ ಹುಟ್ಟಿದವರಾದುದರಿಂದ ಇವರಿಗೆ ದಾನವರೆಂಬ ಹೆಸರು. ಮತ್ತೊಬ್ಬ ಪತ್ನಿಯಾದ ದಿತಿಯಲ್ಲಿ ಹುಟ್ಟಿದವರು ದೈತ್ಯರು. ಜನನದಲ್ಲಿ ವ್ಯತ್ಯಾಸವೇ ಹೊರತು ಗುಣಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ರಾಕ್ಷಸ ಎನ್ನುವ ಶಬ್ದದ ಅರ್ಥ ಸ್ವಾರಸ್ಯವಾಗಿದೆ. ಯಜ್ಞಗಳನ್ನು ಯಜ್ಞಪಶುಗಳನ್ನು ರಕ್ಷಿಸುತ್ತಾನೆ ಎಂದು ರಾಕ್ಷಸ ಎಂಬ ಹೆಸರು ಎಂದು ಕೆಲವು ಟೀಕೆಗಳು ಹೇಳುತ್ತವೆ. ರಾವಣಾದಿಗಳು ಯಜ್ಞಗಳ ರಕ್ಷಕರಾಗಿದ್ದರು. ಹೀಗಿರುವವರು ರಾಕ್ಷಸರು. ರಾಕ್ಷಸರಿಗೆ ಇನ್ನೂ ಅನೇಕ ಹೆಸರುಗಳಿವೆ. ಈ ಶಬ್ದದ ವಿವರಣೆ ತುಂಬ ಅರ್ಥವತ್ತಾಗಿದೆ.

**ಅಸ್ತಮಾ** ಇದು ಗ್ರೀಕ್ ಭಾಷೆಯಿಂದ ಇಂಗ್ಲೀಷಿಗೆ ಬಂದ ಶಬ್ದ. ಉಸಿರಾಟದಲ್ಲಿ ಆಗುವ ಕಷ್ಟ ಎಂದು ಆ ಭಾಷೆಯ ಅರ್ಥ. ಎಲ್ಲ ಭಾಷೆಯವರೂ ಅದೇ ಅರ್ಥದಲ್ಲಿ, ಅರ್ಥವೆಂದು, ಉಪಯೋಗಿಸುತ್ತಾರೆ. ಉಬ್ಬಸ ಎಂಬ ರೋಗಕ್ಕೆ ಸಂಬಂಧಿಸಿದ ಶಬ್ದ ಇದು.

**ಅಸ್ತು** ಇದು ಸಂಸ್ಕೃತದ ಶಬ್ದ. ಆಗಲಿ ಎಂದು ಅದಕ್ಕೆ ಅರ್ಥ. ತಥಾಸ್ತು =ಹಾಗೆಯೇ ಆಗಲಿ.

**ಅಸ್ಮಿತೆ** ಇದು ಅಸ್ಮಿತಾ ಶಬ್ದದ ತದ್ಭವ. ಇದಕ್ಕೆ ಅಹಂಭಾವ, ನಾನು ಎಂಬ ಹೆಮ್ಮೆ, ಅಹಂಕಾರ ಎಂದರ್ಥ. ಪಾತಂಜಲ ಯೋಗ ಸೂತ್ರದಲ್ಲಿ ಈ ಶಬ್ದವನ್ನು ಐದು ಕ್ಲೇಶಗಳಲ್ಲಿ ಒಂದೆಂದು ಉಲ್ಲೇಖ ಮಾಡಲಾಗಿದೆ. **'ಅವಿದ್ಯಾಸ್ಮಿತರಾಗದ್ವೇಷಾಭಿನಿವೇಶಾಃ ಪಂಚಕ್ಲೇಶಾಃ'** ಎಂದು. ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ ಮತ್ತು ಅಭಿನಿವೇಶ ಎಂದು ಬೇರೆ ಬೇರೆ ಐದು ಕ್ಲೇಶಗಳು. ಕ್ಲೇಶ ಎಂದರೆ ಕಷ್ಟ, ತೊಂದರೆ, *೧. ಅವಿದ್ಯಾ = ಅಜ್ಞಾನ ೨. ಅಸ್ಮಿತೆ = ಅಹಂಕಾರ ೩. ರಾಗ = ಪ್ರೀತಿ ೪. ದ್ವೇಷ = ವೈರ ೫. ಅಭಿನಿವೇಶ = ಆಗ್ರಹ, ಹಠ, ಜರೆ ಮತ್ತು* ಸಾವು ಇವುಗಳ ಬಗ್ಗೆ ಹೆದರಿಕೆ.

**ಅಹಂಕಾರ - ದುರಹಂಕಾರ** 'ಅಹಂಕಾರ' ಎಂದರೆ ನಾನು ಮುಖ್ಯ — ನಾನೇ ಮುಖ್ಯ. ನನ್ನನ್ನು ಬಿಟ್ಟರೆ ಇನ್ನಾರು ? ಇನ್ನಾರೂ ಇಲ್ಲವೇ ಇಲ್ಲ ಮುಂತಾಗಿ ತನ್ನ ಹಿರಿಮೆಯನ್ನು ಪ್ರದರ್ಶಿಸುವ ಸ್ವಭಾವ. ಇದು ಸಾಮಾನ್ಯವಾದುದು. ಇದು ಮುಂದುವರಿದು ಇತರರನ್ನು ತನಗೆ ಸಮಾನರಲ್ಲವೆಂದು ಅವಹೇಳನ ಮಾಡುವುದು — ದುರಹಂಕಾರ. ಅಹಂಕಾರದಲ್ಲಿ ಎಲ್ಲವೂ ದುರ್ — ದುಷ್ಟವಾದದ್ದೇ. 'ಸು' ಇಲ್ಲವೇ ಇಲ್ಲ. ಆದರೆ ಸ್ವಾರಸ್ಯ ಏನೆಂದರೆ ಅಹಂಕಾರ ಪಡುವವರಲ್ಲಿ ಕೆಲವರು ನನಗೆ ಅಹಂಕಾರವೇ ಇಲ್ಲ ಎಂದೂ ಅಹಂಕಾರ ಪಡಬಹುದು. ಇದು ವಿಶಿಷ್ಟವಾದ ಅಹಂಕಾರ. ಜನರಿಗೆ ಅಹಂಕಾರ ಎನ್ನುವುದನ್ನು ಹೇಳುವುದು ಕಷ್ಟವಾಗಿ ಕಂಡು ಅದನ್ನು ಸಂಕ್ಷಿಪ್ತಗೊಳಿಸಿ ಉಪಯೋಗಿಸುತ್ತಾರೆ. ಅದೇ 'ಅಹಂ', ಅದರಲ್ಲಿ 'ದುರಹಂ' ಶಬ್ದವೂ ಸೇರಿಕೊಂಡಿದೆ. ಮಾನವನ ಸ್ವಭಾವವನ್ನು ಜನ ಬೇಗ ಗುರುತಿಸುವುದು ಈ ಮಹಾಗುಣದಿಂದ. ಶಿಶುಪಾಲ, ದುರ್ಯೋಧನ ಮುಂತಾದವರ ಕಥೆಯನ್ನು ನೆನೆಯಿರಿ.

**ಅಹರ್ನಿಶಿ** ಅಹನ್ ಎಂದರೆ ಹಗಲು; ಬೆಳಕಿರುವ ಸಮಯ. ನಿಶಾ ಎಂದರೆ ರಾತ್ರಿ; ಕತ್ತಲೆ ಇರುವ ಸಮಯ. ಅಹಶ್ಚ ನಿಶಾಚ ಎಂದು ಎರಡೂ ಸೇರಿದರೆ ಅಹರ್ನಿಶಂ ಎಂದಾಗುತ್ತದೆ. ಅದು ಅವ್ಯಯ. ಆಹರ್ನಿಶ ಎಂದಾದರೆ ನಾಮಪದ. ನಪುಂಸಕಲಿಂಗ. ಇದೇ ಕನ್ನಡದಲ್ಲಿ ಅಹರ್ನಿಶಿ ಎಂದಾಗಿದೆ. ಇದಕ್ಕೆ ಮೂಲ ಸಂಸ್ಕೃತವೇ. ಹಗಲೂ, ರಾತ್ರಿ ಎಂದರ್ಥ.

**ಅಹವಾಲು** ಇದು ಅರಬ್ಬಿ ಭಾಷೆಯ ಶಬ್ದ. ತಮ್ಮ ತೊಂದರೆಗಳನ್ನು ತಿಳಿಸಿ ಅವುಗಳಿಗೆ

ಪರಿಹಾರವನ್ನು ಬೇಡುವ ಅರ್ಜಿ ಎಂದು ಅರ್ಥ. ಇದು ಮೌಖಿಕವಾಗಬಹುದು, ಬರಹದ ಪ್ರಾರ್ಥನೆಯಾಗಬಹುದು.

**ಅಹೇತುಕ** ಕಾರಣವಿಲ್ಲದ, ನಿಷ್ಕಾರಣವಾದ ಎಂದು ಈ ಸಂಸ್ಕೃತ ಶಬ್ದದ ಅರ್ಥ. ಹೇತು ಎಂದರೆ ಕಾರಣ. ಕನ್ನಡ ಕಾವ್ಯಗಳಲ್ಲೂ ಅತಿಶಯಾಲಂಕಾರ ಎಂಬ ಅಲಂಕಾರವೊಂದಿದೆ. ಅಂಥ ಅಲಂಕಾರದಲ್ಲಿ ಅಹೇತು ಎಂಬುದು ಒಂದು ಭೇದ.

**ಅಳಕ** ಎಂದರೆ ಮುಂಗೂದಲು, ಕುರುಳು.

**ಅಳುಪಲಾಗ** ಇದು ಯಾವ ಲಾಗವೂ ಅಲ್ಲ. ಇದರಲ್ಲಿ ಎರಡು ಶಬ್ದಗಳಿವೆ. ಅಳುಪು ಶಬ್ದದಿಂದ ಅಳುಪಲು + ಆಗ = ಅಳುಪಲಾಗ. ಅಳುಪು ಎಂದರೆ ಬಯಸು, ಅಪೇಕ್ಷಿಸು. ಅಳುಪು ಎಂಬುದು ಕೂಡ ಹಳಗನ್ನಡದ ಅಳಿಪು ಎಂಬ ಶಬ್ದದಿಂದ ಬಂದಿದೆ. ಅಳಿಪು, ಅಳುಪು + ಅಲು + ಆಗ = **ಅಳುಪಲಾಗ**. ಇದು ವ್ಯುತ್ಪತ್ತಿ. ಆಗ = ಆಗದು. ಆದ್ದರಿಂದ ಈ ಶಬ್ದಕ್ಕೆ ಒಟ್ಟು ಅರ್ಥ **ಬಯಸಲಾಗದು** ಎಂದು.

## ಆ

**ಆಂಗಿರಸ** ಅಂಗಿರಸ ಬ್ರಹ್ಮನ ಮಾನಸ ಪುತ್ರ. ಇವನು ವಸುಧೆಯೆಂಬ ಹೆಂಡತಿಯಲ್ಲಿ ಏಳುಜನ ಗಂಡುಮಕ್ಕಳನ್ನೂ ಮತ್ತು ಏಳುಜನ ಹೆಣ್ಣುಮಕ್ಕಳನ್ನೂ ಪಡೆದನು. ಆಗ ಮಿತಸಂತಾನದ ಯೋಜನೆಗಳು ಇರಲಿಲ್ಲ. ಬೃಹಸ್ಪತಿ ಅವನ ಮಕ್ಕಳಲ್ಲಿ ಮುಖ್ಯನಾದವನು. ಅಂಗಿರಸನ ಮಗನಾದ್ದರಿಂದ ಅವನಿಗೆ **ಆಂಗಿರಸ** ಎಂದು ಹೆಸರು. ಹೀಗಿರುವುದರಿಂದ ಅಂಗೀರ, ಅಂಗೀರಸ ಎಂಬ ಎರಡು ರೂಪಗಳೂ ತಪ್ಪು.

**ಆಂದೋಳನ** ಇದು ಸಂಸ್ಕೃತದ ಆಂದೋಲನ ಎಂಬುದರ ತದ್ಭವ. ಇದಕ್ಕೆ ಉಯ್ಯಾಲೆ ತೂಗುಮಣೆ ಎಂದರ್ಥ. ಕನ್ನಡದಲ್ಲಿ ಇದಕ್ಕೆ ಕ್ರಾಂತಿ, ಚಳುವಳಿ ಎಂಬ ಅರ್ಥ ಬೆಳೆದು ಬಂದಿದೆ. ಈ ಅರ್ಥ ನಮಗೆ ಹಿಂದೀ ಭಾಷೆಯ ಮೂಲಕ ಬಂದಿದೆ. ಆ ಭಾಷೆಯಲ್ಲಿ ಈ ಅರ್ಥ ಹೇಗೆ ಬಂತು ಎಂಬುದು ವಿಚಾರಣೀಯ.

**ಆಕರ್ಷಣೆ - ಸೆಳೆತ - ಎಳೆತ,** ಆಕರ್ಷಣೆ ಮಾನಸಿಕವಾಗಿ ಹೆಚ್ಚಾಗಿ, ಶಾರೀರಿಕವಾಗಿ ಕಡಿಮೆಯಾಗಿ ಪ್ರಯೋಗವಾಗುತ್ತದೆ. ಸೆಳೆತ — ಎಳೆತ ಹೆಚ್ಚು ಶಾರೀರಿಕವಾದುದು. ದೇಹಶಕ್ತಿಯನ್ನು ಅವಲಂಬಿಸಿದುದು. ಆದರೆ ಕಾರ್ಯದಲ್ಲಿ ಆಲಂಕಾರಿಕವಾಗಿ ಉಪಯೋಗಿಸುವಾಗ ಈ ಮೂರನ್ನೂ ಎರಡು ರೀತಿಯಲ್ಲಿಯೂ ಉಪಯೋಗಿಸಬಹುದು. ಇದು ಶಬ್ದವನ್ನು ಪ್ರಯೋಗಿಸುವವರ ಧೀಶಕ್ತಿಯನ್ನು ಅನುಸರಿಸುತ್ತದೆ. ಈ ಮೂರು ಶಬ್ದಗಳೂ ಮೂರು ಬೇರೆ ಬೇರೆ ಧಾತುಗಳಿಂದ ಆಗಿರುವ ಭಾವನಾಮಸ್ವರೂಪಗಳು. **ನಾಮಾನಿ ಆಖ್ಯಾತಜಾನಿ** ಎಂಬುದು ಯಾಸ್ಕಾಚಾರ್ಯರ ಹೇಳಿಕೆ. ಸಂಸ್ಕೃತದ ಕೃಷ್ ಧಾತುವಿನಿಂದ ಆಕರ್ಷಣೆ, ಕನ್ನಡದ ಸೆಳೆ ಧಾತುವಿನಿಂದ ಸೆಳೆತ, ಎಳೆ ಧಾತುವಿನಿಂದ ಎಳೆತ.

**ಆಕಾರ** ಇದು ಸಂಸ್ಕೃತ ಶಬ್ದ. ಇದಕ್ಕೆ ೧ ರೂಪ, ಮೂರ್ತಿ ೨. ಮುಖಭಾವ ೩. ಹೊರಗಿನ ರೂಪ ಎಂಬ ಅರ್ಥಗಳಿವೆ. ಸ್ವರೂಪ ಎಂಬುದಕ್ಕೆ ಇರುವ ಅರ್ಥಗಳು ಬೇರೆ: ೧. ಸ್ವಭಾವ, ಪ್ರಕೃತಿ, ೨. ತನ್ನ ನಿಜವಾದ ರೂಪ ೩. ಸ್ವಭಾವದಿಂದ ಬಂದ ಪದವಿ. ಹೀಗಿರುವುದರಿಂದ ಈ ಶಬ್ದಗಳನ್ನು ಉಪಯೋಗಿಸುವಾಗ ಬಹು ಎಚ್ಚರಿಕೆ ಇರಬೇಕು.

**ಆಕಾಶ** ನೋಡಿ: ಅಂಬರ

**ಆಕುಂಚನ** ಎಂದರೆ ಸಂಕೋಚ ಮಾಡಿಕೊಳ್ಳುವಿಕೆ, ಚಿಕ್ಕದಾಗುವಿಕೆ, ಅಡಕವಾಗಿ ಮಾಡಿಕೊಳ್ಳುವಿಕೆ. ಕುಂಚನ ಶಬ್ದಕ್ಕೆ ಬಾಗುವುದು, ಡೊಂಕಾಗುವುದು, ವಕ್ರವಾಗುವುದು ಎಂದರ್ಥ. ಕಡಿಮೆಯಾಗು, ಚಿಕ್ಕದಾಗು ಎಂದೂ ಅರ್ಥವಿದೆ. ಆ ಎಂಬುದು ಉಪಸರ್ಗ. ಅದಕ್ಕೆ ಅಧಿಕವಾಗಿ ಎಂಬ ಅರ್ಥ ಬರುತ್ತದೆ. ಇದು ಸಂಸ್ಕೃತ ಶಬ್ದ.

**ಆಖೈರು** ಇದು ಅರಬ್ಬಿ ಮತ್ತು ಪಾರಸೀ ಭಾಷೆಗಳೆರಡರಲ್ಲೂ ಇರುವ ಶಬ್ದ. ಅದರ ಮೂಲರೂಪ ಆಖಿರ್, ಆಖರೀ. ಮರಾಠಿಯಲ್ಲಿ ಆಖರೀ, ಹಿಂದಿಯಲ್ಲಿಯೂ ಇದು ಪ್ರಯೋಗದಲ್ಲಿದೆ. ಇದಕ್ಕೆ ಕಡೆ, ಕೊನೆ, ತುದಿ ಎಂದರ್ಥ. ಕನ್ನಡದಲ್ಲಿ ಆಖೈರು, ಆಕೈರು ಎಂಬ ಎರಡೂ ರೂಪಗಳಲ್ಲಿ ಪ್ರಯೋಗದಲ್ಲಿದೆ. ಕನ್ನಡದಲ್ಲಿ ಆಖೈರು ಎಂದರೆ ಕಡೆಯ, ಕೊನೆಯ ಎಂದರ್ಥ. **'ನಿನ್ನ ಆಖೈರು ತೀರ್ಮಾನವನ್ನು ಹೇಳು'** ಎಂಬಂಥ ಆಡುಮಾತಿನಲ್ಲಿ ಪ್ರಯೋಗ ಹೆಚ್ಚು. ಚಾರಿತ್ರಿಕ ಕಡತಗಳಲ್ಲೂ, ಬಖೈರುಗಳಲ್ಲೂ ಹೆಚ್ಚು ಬಳಕೆ.

**ಆಗುವದು, ಆಗುವುದು** ಈ ರೂಪಗಳಲ್ಲಿ ಯಾವುದು ಸರಿ ಎಂಬ ಪ್ರಶ್ನೆ ಆಗಿಂದಾಗ ಚರ್ಚೆಗೆ ಬರುತ್ತದೆ. ಈ ಬಗ್ಗೆ ಖಚಿತವಾದ ತಿಳಿವಳಿಕೆ ಇರಬೇಕಾದುದು ಅಗತ್ಯ. ಈ ಎರಡು ರೂಪಗಳು ಭವಿಷ್ಯತ್ಕಾಲದ ರೂಪಗಳು. ಆಗು ಎಂಬುದು ಧಾತು. ಇದಕ್ಕೆ ಪ್ರಥಮ ಪುರುಷ ನಪುಂಸಕ ಲಿಂಗದಲ್ಲಿ ಎರಡು ಪ್ರತ್ಯಯಗಳು ಸೇರುತ್ತವೆ, ಅದು ಮತ್ತು ಉದು. ಆಗ ಆಗುವ ರೂಪಗಳು ಆಗುವದು, ಆಗುವುದು. ಇದು ಏಕವಚನ. ಬಹುವಚನದಲ್ಲಿ ಆಗುವವು, ಆಗುವುವು. ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಒಂದೇ ಪ್ರತ್ಯಯ ಹತ್ತುತ್ತದೆ. ಆಗು ಧಾತುವಿಗೆ ಭವಿಷ್ಯತ್ಕಾಲದಲ್ಲಿ ಪ್ರಥಮ ಪುರುಷದಲ್ಲಿ ಏಕವಚನ ಬಹುವಚನಗಳಲ್ಲಿ ಉಂಟಾಗುವ ರೂಪಗಳನ್ನು ನೋಡಿ - ಕಾಲ ಪ್ರತ್ಯಯ ವ + ಆಖ್ಯಾತ ಪ್ರತ್ಯಯಗಳು ಅನು, ಅಳು, ಅದು, ಉದು, ಅರು, ಉದು, ಉವು.

| ಪ್ರಥಮ ಪುರುಷ | ಏಕವಚನ | | ಬಹುವಚನ |
|---|---|---|---|
| ಅವನು | ಆಗು + ವ + ಅನು | ಅವರು | ಆಗು + ವ + ಅರು |
| ಅವಳು | ಆಗು + ವ + ಅಳು | | |
| ಅದು | ಆಗು + ವ + ಅದು | ಅವು | ಆಗು + ವ + ಅವು |
| | ಆಗು + ವ + ಉದು | | ಆಗು + ವ + ಉವು |

ಹೀಗೆ ಆಗುವದು, ಆಗುವುದು ಎಂಬ ರೂಪಗಳು ಸಾಧಿತವಾಗುತ್ತವೆ. ಈ ಎರಡೂ ರೂಪಗಳು ಪ್ರಯೋಗದಲ್ಲಿವೆ. ಒಂದು ವಾಕ್ಯವನ್ನು ಪರಿಶೀಲಿಸೋಣ. "ಮನುಸ್ಮೃತಿಯು ಓಂಕಾರವು ಪರಬ್ರಹ್ಮವೆಂದು ಹೇಳುವುದು." ಈ ವಾಕ್ಯದಲ್ಲಿರುವ ಕ್ರಿಯಾಪದಕ್ಕೆ ಹೇಳುತ್ತದೆ ಎಂದೇ ಅರ್ಥವಲ್ಲವೆ ? ಹೇಳುವದು ಎಂದು ಬರೆದರೂ ಅದೇ ಅರ್ಥ. ಹೀಗೆ ಕೆಲವು ವೇಳೆ ಭವಿಷ್ಯ ಕಾಲದ ಕ್ರಿಯಾಪದಗಳು ವರ್ತಮಾನಕಾಲದ ಅರ್ಥವನ್ನು ತಿಳಿಸುತ್ತವೆ.

**ಆಘಾತ** ಈ ಸಂಸ್ಕೃತ ಶಬ್ದಕ್ಕೆ *೧. ಹೊಡೆತ,* ಏಟು *೨. ಗಾಯ ೩.* ಕೊಲೆ ಎಂಬ ಅರ್ಥಗಳಿವೆ. ಘಾತ ಮುಖ್ಯ ಶಬ್ದ. ಆ ಎನ್ನುವುದು *ಉಪಸರ್ಗ.*

**ಆಚಂದ್ರಾರ್ಕ** ಇದರಲ್ಲಿ ಮೂರು ಭಾಗಗಳಿವೆ. ಆ +ಚಂದ್ರ +ಅರ್ಕ. ಅರ್ಕ ಎಂದರೆ ಸೂರ್ಯ. ಚಂದ್ರ ಸೂರ್ಯರು ಇರುವವರೆಗೆ ಎಂದು ಒಟ್ಟು ಶಬ್ದಕ್ಕೆ ಅರ್ಥ. ಆ ಎಂಬುದು ಒಂದು ಉಪಸರ್ಗ. ಅದಕ್ಕೆ ಅಲ್ಲಿಯವರೆಗೆ ಎಂಬ ಅರ್ಥ ಬರುತ್ತದೆ. ಆಬಾಲವೃದ್ಧ, ಆಮೂಲಚೂಲ, ಆಜೀವಪರ್ಯಂತ, ಆಮರಣಾಂತ, ಆಜನ್ಮಸಿದ್ಧ ಮುಂತಾದ ಪದಗಳಲ್ಲಿ ವರೆಗೆ ಎಂಬುದರ ಇತರ ಅರ್ಥವ್ಯಾಪ್ತಿ ಕಂಡುಬರುತ್ತದೆ. ಆಚಂದ್ರಾರ್ಕ ಎಂದರೆ

ಶಾಶ್ವತವಾಗಿ, ಸದಾಕಾಲ, ಯಾವಾಗಲೂ ಎಂದು ಅರ್ಥ ಬರುವ ಹಾಗೆ ಅನೇಕ ಶಾಸನಗಳಲ್ಲಿ, ಪ್ರಾಚೀನ ಗ್ರಂಥಗಳ ಕೊನೆಗೆ ಪ್ರಯೋಗಗಳು ಬರುತ್ತವೆ. ಉದಾಹರಣೆ ಚೌಡದಾನಾಪುರದ ಶಾಸನ. ಕಾಲ ೧೨೬೫ ಯಾದವರಾಜರ ಕಾಲ. **ಧಾರವಾಡ ಶ್ರೀ ಶಿವದೇವರಿಗೆ ಸಮಾರಾಧನೆಯ ಮಾಡಿದ ಧರ್ಮ ಆಚಂದ್ರಾರ್ಕ ಪರ್ಯಂತಂ ಸರ್ವಸಮಸ್ಯವಾಗಿ.... ಸಲಿಸುವರು.**

**ಆಚಾರ - ವಿಚಾರ** ನೋಡಿ: ನಡೆನುಡಿ

**ಆಚೆ-ಈಚೆ** ಆಚೆ ಎಂದರೆ ಆ ಕಡೆ, ಈಚೆ ಎಂದರೆ ಈ ಕಡೆ. ಆದುದರಿಂದ **ಆಚೆಗೆ ಈಚೆ** ವಿರುದ್ಧ ಶಬ್ದ. **ಈಚೆಗೆ ಆಚೆ** ವಿರುದ್ಧ ಶಬ್ದ. ಆಚೆ ಎಂಬ ಶಬ್ದಕ್ಕೆ ತುಳು ಮತ್ತು ತೆಲುಗು ಭಾಷೆಗಳಲ್ಲಿ ಜ್ಞಾತಿ ಶಬ್ದಗಳಿವೆ. ಈಚೆ ಶಬ್ದಕ್ಕೆ ಇಲ್ಲ. ಇವಂತೂ ದೇಶ್ಯ ಶಬ್ದಗಳೆಂಬ ಬಗ್ಗೆ ಸಂಶಯವಿಲ್ಲ. **ಆಚೆ** ಎಂದರೆ ಮನೆಯ **ಹೊರಗಡೆ** ಎಂಬ ಬೇರೊಂದು ಅರ್ಥವೂ ಇದೆ. ಉದಾ: **ಆಚೆ ಯಾರೊ ಬಂದಿದಾರೆ, ನೋಡು.**

**ಆಚ್ಛಾದನ** ಛಾದನ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಹೊದಿಕೆ, ಮುಚ್ಚಳ ಎಂದೂ ಹೊದಿಸುವುದು, ಮುಚ್ಚುವುದು ಎಂದೂ ಅರ್ಥಗಳಿವೆ. ಈ ಶಬ್ದಕ್ಕೆ ಆ ಉಪಸರ್ಗ ಸೇರಿ ಆದ ರೂಪ ಇದು. ಚೆನ್ನಾಗಿ ಮುಚ್ಚಿರುವುದು ಎಂದು ಅರ್ಥ.

**ಆಜಾನುಬಾಹು** ಮಂಡಿಯನ್ನು ಮುಟ್ಟುವಷ್ಟು ಉದ್ದವಾದ ತೋಳು ಇರುವ ವ್ಯಕ್ತಿ ಎಂದು ಈ ಶಬ್ದಕ್ಕೆ ಅರ್ಥ. ಅಜಾನುಬಾಹು ಎಂಬ ಶಬ್ದ ತಪ್ಪು. ಹಾಗಿದ್ದರೆ ಆ ಶಬ್ದಕ್ಕೆ ತೋಳೂ ಮಂಡಿಯೂ ಇಲ್ಲದ ವ್ಯಕ್ತಿ ಎಂದು ಅರ್ಥವಾಗುತ್ತದೆ.

**ಆಜೀವ ಸದಸ್ಯ** ಎನ್ನುವ ಶಬ್ದ ಎಲ್ಲ ಸಂಸ್ಥೆಗಳ ಸರ್ವಸದಸ್ಯರ ಸಭೆಗಳಲ್ಲಿಯೂ ಕೇಳಿಬರುವ ಶಬ್ದ. ಸಭೆಯ ಎದುರಿಗೆ ಸಜೀವರಾಗಿ ನಿಂತು ಮಾತನಾಡುವ ಸದಸ್ಯರಲ್ಲಿ ಅನೇಕರು ತಮ್ಮ ಎದೆ ತಟ್ಟಿ ಹೇಳಿಕೊಳ್ಳುತ್ತಾರೆ 'ನಾನೂ ಒಬ್ಬ **ಅಜೀವ ಸದಸ್ಯ**' ಎಂದು. ಸಾಯುವವರೆಗೂ ಸದಸ್ಯನಾಗಿರುವವನಿಗೆ **'ಆಜೀವ ಸದಸ್ಯ'** ಎಂಬ ಶಬ್ದ ಅನ್ವಯಿಸುತ್ತದೆ. ಸಭೆಯಲ್ಲಿ ನಿಂತುಕೊಂಡು ತಮ್ಮನ್ನು **'ಅಜೀವ ಸದಸ್ಯ'** ಎಂದು ಕರೆದುಕೊಳ್ಳುವವರು ಸ್ವಲ್ಪ ತಡೆದು ಆಲೋಚನೆ ಮಾಡಬೇಕು.

**ಆಜ್ಯ** ಈ ಶಬ್ದ ಅಂಜ್ ಎಂಬ ಧಾತುವಿನಿಂದ ಬಂದದ್ದು. ಸಂಸ್ಕೃತದಲ್ಲಿ ಇದನ್ನು ಅಞ್ಜ್ ಎಂದು ಬರೆಯುತ್ತಾರೆ. ಅದಕ್ಕೆ *೧. ಲೇಪವನ್ನು ಬಳಿ ೨. ಸವರು, ೩. ಅಂಗಭೋಗವನ್ನು ನೀಡು* ಮುಂತಾದ ಅರ್ಥಗಳಿವೆ. ಆಜ್ಯ ಎಂದರೆ ತುಪ್ಪ, ಘೃತ. ಅಜ ಶಬ್ದಕ್ಕೂ ಆಜ್ಯ ಎಂಬ ಶಬ್ದಕ್ಕೂ ಯಾವ ಸಂಬಂಧವೂ ಇಲ್ಲ.

**ಆಡಂಬರ** ಎಂಬ ಸಂಸ್ಕೃತ ಶಬ್ದಕ್ಕೆ *೧. ಹರ್ಷ ೨. ಪ್ರದರ್ಶನ ೩. ಸಂಭ್ರಮ ೪. ತುತ್ತೂರಿ, ನಗಾರಿ ಮುಂತಾದುವುಗಳ ಶಬ್ದ. ೫. ಆನೆಯ ಗರ್ಜನೆ* ಇತ್ಯಾದಿ ಅರ್ಥಗಳಿವೆ. ಇದಕ್ಕೆ ವಿರುದ್ಧವಾದುದು ನಿರಾಡಂಬರ ಎಂಬ ಶಬ್ದ.

**ಆಡುಂಬೊಲ** ಎಂಬುದು ಆಟವಾಡುವ +ಹೊಲ (ಪೊಲ) ಅಂದರೆ ಮೈದಾನ. ನಾವು ಸದಾ ಆಟವಾಡುವ ಮೈದಾನದಲ್ಲಿ ಪ್ರತಿಯೊಂದು ಸ್ಥಳವೂ ನಮಗೆ ಚೆನ್ನಾಗಿ ಪರಿಚಿತ ವಾಗಿರುತ್ತದೆ. ಹಾಗೆ ಸರ್ವವಿಧದಲ್ಲಿಯೂ ಪರಿಚಿತವಾಗಿರುವ ಕ್ಷೇತ್ರಕ್ಕೆ ಆಡುಂಬೊಲ ಎಂದು ಹೇಳುತ್ತಾರೆ. ಇದು ಹಳಗನ್ನಡದ ರೂಪವಾದರೂ ಅದರ ಅರ್ಥ ಸ್ವಾರಸ್ಯದಿಂದ ಹೊಸಗನ್ನಡದಲ್ಲಿಯೂ ಆ ರೂಪದಲ್ಲಿಯೇ ಹೆಚ್ಚಾಗಿ ಪ್ರಯೋಗವಾಗುತ್ತಾ ಇದೆ.

**ಆತ್ಮಬಲಿ** ನೋಡಿ: ಆತ್ಮಸಮರ್ಪಣೆ.

**ಆತ್ಮಭೂ** ಎಂದರೆ ತನ್ನ ಮನಸ್ಸಿನಲ್ಲಿ ಹುಟ್ಟಿದವನು, ಮನಸಿಜ, ಎಂದರ್ಥ. ಅವನೇ ಮನ್ಮಥ. **'ಆತ್ಮನೋ ಮನಸೋ ಭವತೀತ್ಯಾತ್ಮಭೂ'** ಎಂಬುದು ಅದರ ಬಗ್ಗೆ ಇರುವ ಸಂಸ್ಕೃತದ

ಟೀಕೆಗಳಲ್ಲಿ ಒಂದು. ಈ ತನ್ನಲ್ಲಿ ಹುಟ್ಟಿದವನು ಎಂಬ ಅರ್ಥದಲ್ಲಿ, ಮಗ ಎಂದು ಅಭಿಪ್ರಾಯ ಬರುವಂತೆ ಉಪಯೋಗಿಸಿರುವ ಒಂದೇ ಒಂದು ಕನ್ನಡ ಶಬ್ದದ ಪ್ರಯೋಗವಿದೆ, ಕುವೆಂಪು ಅವರ ಶ್ರೀ ರಾಮಾಯಣದರ್ಶನಂ ಎಂಬ ಮಹಾಕಾವ್ಯದಲ್ಲಿ. ಭರತನು ದಶರಥನ ಶವವನ್ನು ಸಂಸ್ಕಾರಕ್ಕೆ ಕೊಂಡೊಯ್ಯುವಾಗ ಏನಾಯಿತೆಂಬುದನ್ನು ವರ್ಣಿಸುವಾಗ ಈ ವಾಕ್ಯ ಬರುತ್ತದೆ. **ಕಾಣಲೊಡಮಯ್ಯನೊಡಲಂ ತಬ್ಬಿ ಬಿಗಿದಪ್ಪಿ ಬಾಳ್ಗೆ ಜೇನಂ ಸೂಸುವೊಡಲಿಚಂ, ಬೆಳುಗಣ್, ಪೆಳ್ಪಳಿಸೆ, ಬೆರ್ಚಿ ನಿಂದನ್ ಬರ್ದುಂಕೆ ಬೆಬ್ಬಳಿಸಿ. ಒಡಲಿಚ.** ಮಗ ಎಂಬರ್ಥದಲ್ಲಿ ದೊರಕಿರುವುದು ಇದೊಂದೇ ಪ್ರಯೋಗ ಆಧುನಿಕ ಕನ್ನಡ ಕಾವ್ಯದಲ್ಲಿ.

**ಆತ್ಮಸಮರ್ಪಣೆ, ಆತ್ಮಾಹುತಿ** ಆತ್ಮಸಮರ್ಪಣೆ ಎಂಬುದು ತಮ್ಮ ಸರ್ವಶಕ್ತಿಯನ್ನು ಯಾವುದಾದರೂ ಒಂದು ಸ್ತುತ್ಯಕಾರ್ಯಕ್ಕೆಂದು ಮೀಸಲಾಗಿಡುವುದು. ದೇಶಸೇವೆಗೆಂದು ಅವರು ತಮ್ಮನ್ನು ಸಮರ್ಪಿಸಿಕೊಂಡರು ಎಂಬರ್ಥದಲ್ಲಿ ದೇಶಸೇವೆಗೆ ಅವರು ಆತ್ಮಸಮರ್ಪಣೆ ಮಾಡಿದರು ಎನ್ನಬಹುದು. ಆತ್ಮಾಹುತಿ, ಆತ್ಮಬಲಿ ಈ ಶಬ್ದವನ್ನು ಯಾವುದಾದರೂ ಕಾರ್ಯಕ್ಕೆಂದು ತಮ್ಮ ಜೀವವನ್ನೇ ತೆತ್ತವರ ಬಗ್ಗೆ ಮಾತ್ರ ಉಪಯೋಗಿಸುತ್ತೇವೆ.'

**ಆತ್ಮಹತ್ಯೆ** ಆತ್ಮಕ್ಕೆ ನಾಶವಿಲ್ಲ. ಅದು ಅಮರ. ಈ ಸತ್ಯದ ಅರಿವಿದ್ದೂ ಆತ್ಮಹತ್ಯೆ ಶಬ್ದದ ಪ್ರಯೋಗ ಸಮಂಜಸವೇ? ಆತ್ಮ ಶಬ್ದಕ್ಕೆ ಬ್ರಹ್ಮ ಎಂಬ ಅರ್ಥವಿದೆ. ಈ ಅರ್ಥದಲ್ಲಿ ಆತ್ಮಹತ್ಯೆ ಎಂಬ ಶಬ್ದದ ಪ್ರಯೋಗ ತಪ್ಪಾಗುತ್ತದೆ. ಆದರೆ ಆತ್ಮ ಶಬ್ದಕ್ಕೆ ಬೇರೆ ಬೇರೆ ಅರ್ಥಗಳೂ ಇವೆ. ೧. ವ್ಯಕ್ತಿ ೨. ಶರೀರ, ದೇಹ ಎಂಬ ಅರ್ಥಗಳೂ ಇವೆ. ಕೆಲವು ಸಮಾಸಗಳಲ್ಲಿ ತಾನು, ತನ್ನ ಎಂಬ ಅರ್ಥವು ಆತ್ಮಪದಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಆತ್ಮಕರ್ಮ =ಸ್ವಂತ ಕೆಲಸ, ತನ್ನ ಕರ್ತವ್ಯ. ಆತ್ಮಗತ =ತನ್ನ ಮನಸ್ಸಿನಲ್ಲಿರುವ. ಆತ್ಮಗ್ರಾಹಿ = ಸ್ವಾರ್ಥಪರನಾದವನು. ಆತ್ಮಜ = ತನ್ನಿಂದ ಜನಿಸಿದವನು, ಮಗ. ಆತ್ಮಬುದ್ಧಿ = ಸ್ವಂತಬುದ್ಧಿ. ಹೀಗೆ ಅನೇಕ ಉದಾಹರಣೆಗಳಿವೆ. ಈ ಕ್ರಮದಲ್ಲಿ ಆತ್ಮಹತ್ಯೆ ಶಬ್ದದ ಪ್ರಯೋಗ ಸರಿಯಾಗುತ್ತದೆ. ಆತ್ಮವನ್ನು ಜೀವಾತ್ಮ ಪರಮಾತ್ಮ ಎಂದು ಎರಡು ವಿಧವಾಗಿ ಕಾಣುವವರಿದ್ದಾರೆ. ಚಾರ್ವಾಕರು ದೇಹವನ್ನೇ ಆತ್ಮ ಎಂದು ತಿಳಿದಿದ್ದಾರೆ. ಹೀಗೆ ಇನ್ನೂ ಬೇರೆ ಬೇರೆ ಅರ್ಥಗಳಿರುವುದರಿಂದ ಯಾವುದು ಹೊಂದುತ್ತದೆಯೋ ಆ ಅರ್ಥವನ್ನು ತಿಳಿದು ವ್ಯವಹರಿಸಬೇಕು. ಆತ್ಮ ಶಬ್ದಕ್ಕೆ ಸಮಾನವಾದ ಅರ್ಥವುಳ್ಳ ಅಚ್ಚಕನ್ನಡ ಶಬ್ದವಿಲ್ಲ.

**ಆತ್ಮಾಹುತಿ** ನೋಡಿ: ಆತ್ಮಸಮರ್ಪಣೆ.

**ಆತ್ರೇಯ** ಅತ್ರಿ ಒಬ್ಬ ಬ್ರಹ್ಮರ್ಷಿ. ಆತನು ಬ್ರಹ್ಮನ ಮಾನಸಪುತ್ರ. ಅತ್ರಿಯ ಮಗ ಆತ್ರೇಯ. ಇದು ಚಂದ್ರನಿಗೂ ದುರ್ವಾಸಮುನಿಗೂ ದತ್ತಾತ್ರೇಯನಿಗೂ ಸಮನಾಗಿ ಸಲ್ಲುತ್ತದೆ.

**ಆದ್ದರಿಂದ** ಆದುದರಿಂದ ಎಂಬ ಶಬ್ದಕ್ಕೆ ಆದ್ದರಿಂದ ಆದದ್ದರಿಂದ ಎಂಬ ಎರಡು ರೂಪಗಳು ಆಡುಮಾತಿನಲ್ಲಿ ಪ್ರಯೋಗದಲ್ಲಿವೆ. ಇವೆಲ್ಲ 'ಅದರಿಂದ' ಎಂಬ ಶಬ್ದದ ಬೇರೆ ಬೇರೆ ಪರ್ಯಾಯಗಳು. ಅದು + ಇಂದ = ಅದರಿಂದ. ಆದುದು + ಇಂದ = ಆದುದರಿಂದ. ಆದದ್ದು + ಇಂದ = ಆದದ್ದರಿಂದ. ಆದ್ದರಿಂದ ಇದು ಕೇವಲ ಗ್ರಾಮ್ಯ. ಇದನ್ನು ಬಿಟ್ಟು ಮಿಕ್ಕದ್ದು ಉಪಯೋಗಿಸಬಹುದು.

**ಆಧುನೀಕರಣ** ಈಗ ಆಧುನೀಕರಣ ಎಂಬ ಶಬ್ದ ಇಂಗ್ಲಿಷಿನ 'modernise' ಎಂಬ ಶಬ್ದದ ಸ್ಥಾನದಲ್ಲಿ ಪ್ರಚಾರಕ್ಕೆ ಬರುತ್ತಿದೆ. ಇದು ತಪ್ಪು ಶಬ್ದ. ಆಧುನಿಕೀಕರಣ ಎಂಬುದು ಸರಿ. ಆದರೆ ಇವುಗಳಲ್ಲಿ ಯಾವುದು ಉಳಿಯುತ್ತದೆ ಎಂಬುದನ್ನು ನಾವು ಕಾದು ನೋಡಬೇಕಾಗಿದೆ. ಪ್ರಜಾಸತ್ತೆ ಎಂಬುದು ಶಬ್ದಗಳ ಅಬದ್ಧತೆಯನ್ನೂ ಸಬದ್ಧತೆಯನ್ನಾಗಿ

ಮಾಡಬಲ್ಲದು. 'ಅದ್ಯತನಗೊಳಿಸು' ಎಂಬ ಶುದ್ಧ ಶಬ್ದದಿಂದ ಇದೇ ಅರ್ಥವನ್ನು ಸುಲಭವಾಗಿ ತಿಳಿಸಬಹುದು. 'ಅಧುನಾ' ಎಂಬುದು ಸಂಸ್ಕೃತದಲ್ಲಿ ಅವ್ಯಯ. 'ಅಧುನಾತನ' ಎಂಬ ಶುದ್ಧಶಬ್ದವೂ ಸಂಸ್ಕೃತದಲ್ಲಿದೆ. ಅದನ್ನೇ ಬೇಕಾದರೂ ಉಪಯೋಗಿಸಬಹುದು. 'ಆಧುನಿಕಗೊಳಿಸು' ಅಥವಾ ಆಧುನಿಕೀಕರಿಸು ಎನ್ನಬಹುದು. ತಪ್ಪು ಶಬ್ದವನ್ನೇ ಮತ್ತೆ ಮತ್ತೆ ಉಪಯೋಗಿಸಿ ಅದಕ್ಕೆ ಶುದ್ಧತೆಯನ್ನು ತಂದುಕೊಡುವ ಪ್ರಯತ್ನ ಪರಿಣಾಮದಲ್ಲಿ ಗೊಂದಲವನ್ನುಂಟು ಮಾಡಬಹುದು. ಉಪಾಧ್ಯಾಯರೂ, ವಿದ್ಯಾರ್ಥಿಗಳೂ ಈ ಬಗ್ಗೆ ಆಲೋಚನೆ ಮಾಡಬೇಕು. ಇಷ್ಟರ ಮೇಲೆ ಇಂಥ ವಿಚಾರಗಳಲ್ಲಿ ಸರ್ವಾಧಿಕಾರಿಗಳಾರು? ತಪ್ಪು ನಿಂತೇ ಹೋಗುವುದಾದರೆ ನಾವೂ ನೀವೂ ಅದಕ್ಕೆ ನಡೆಮಡಿ ಹಾಸಿ ಸ್ವಾಗತಿಸಬೇಕು. ಬೇರೆ ಮಾರ್ಗವೇ ಇಲ್ಲ.

**ಆನಂದ** ಇದು ಸಂಸ್ಕೃತ ಶಬ್ದ. ಇದಕ್ಕೆ (೧) *ಸಂತೋಷ, ಹರ್ಷ ಸುಖ* ಎಂಬ ಅರ್ಥಗಳಿವೆ. ಜೊತೆಗೆ (೨) ವಿಷ್ಣು, (೩) ಪರಬ್ರಹ್ಮ (೪) ಮದ್ಯ ಮುಂತಾದ ಅರ್ಥಗಳಿವೆ. ವಿಷ್ಣು ಸಹಸ್ರನಾಮ ಸ್ತೋತ್ರದಲ್ಲಿ **ಆನಂದೋ ನಂದನೋ ನಂದಃ** ಎಂದು ವಿಷ್ಣುವಿನ ಹೆಸರಿನಲ್ಲಿ ಆನಂದ ಎಂಬುದನ್ನು ಸೇರಿಸಿದ್ದಾರೆ.

**ಆನುಷಂಗಿಕ** ಇದು ಅನುಷಂಗ ಎಂಬ ಸಂಸ್ಕೃತ ಶಬ್ದದ ವಿಶೇಷಣ ರೂಪ. ಅನುಷಂಗ ಎಂದರೆ *೧. ಹೊಂದಿಕೊಂಡಿರುವಿಕೆ, ಸೇರಿರುವಿಕೆ, ಒಟ್ಟುಗೂಡುವಿಕೆ, ೨. ಪ್ರಸಂಗ, ಪ್ರಸಕ್ತಿ ೩. ಒಂದು ಕಾರ್ಯ ಮಾಡುವಾಗ ಉಂಟಾಗುವ ಮತ್ತೊಂದು ಕಾರ್ಯಸಿದ್ಧಿ.* ಆದುದರಿಂದ ಯಾವುದಾದರೂ ಕೆಲಸವನ್ನು ಮಾಡುವಾಗ ಉಂಟಾಗುವ ಮತ್ತೊಂದು ಕೆಲಸವನ್ನು ಸೂಚಿಸುವಾಗ ಈ ಆನುಷಂಗಿಕ ಎಂಬ ವಿಶೇಷಣವನ್ನು ಉಪಯೋಗಿಸಬೇಕು. ಇದಕ್ಕೆ ಗೌಣವಾದ, ಅಪ್ರಧಾನವಾದ ಎಂದೇ ಅರ್ಥ.

**ಆನೆಗೆ 'ಕರಿ' ಎಂಬ ಹೆಸರೇಕೆ ಬಂತು?** ಆನೆಯ ಸೊಂಡಿಲಿಗೆ ಕರ ಎಂದು ಹೆಸರು. ಕರವುಳ್ಳದ್ದು ಕರಿ ಆಗಿದೆ. ಅಮರದ ಟೀಕೆಯಲ್ಲಿ **ಕರೋ ಅಸ್ಯಾಸ್ತೀತಿ ಕರೀ** ಎಂದಿದೆ.

**ಆನೆ ನುಂಗಿದ ಬೇಲ** ಬೇಲವು ಒಂದು ಗಿಡದ ಹಣ್ಣು. ಅದಕ್ಕೆ ಸಂಸ್ಕೃತದಲ್ಲಿ ಕಪಿತ್ಥ ಎಂದು ಹೆಸರು. ಆನೆಯು ಇದನ್ನು ನುಂಗಿದರೆ ಇದು ಕರಟಸಹಿತ ಅದರ ಹೊಟ್ಟೆಯೊಳಕ್ಕೆ ಹೋಗುತ್ತದೆ. ಹಾಗೆಯೇ ಹೊರಬರುತ್ತದೆ. ಆದರೆ ಅದರ ಒಳಗೆಲ್ಲ ಟೊಳ್ಳಾಗಿರುತ್ತದೆ ಎಂದು ಕವಿಗಳು ವರ್ಣಿಸುತ್ತಾರೆ. ಅದೇ ವಿಶೇಷ.

**ಆಪೋಶನ** ಊಟ ಮಾಡುವುದಕ್ಕೆ ಮುಂಚೆ ಮತ್ತು ಊಟವಾದ ಬಳಿಕ ಮಂತ್ರ ಪೂರ್ವಕವಾಗಿ ಆಪ ಎಂದರೆ ನೀರನ್ನು ಪ್ರಾಶನ ಮಾಡುವುದು, ಅಂದರೆ ಕುಡಿಯುವುದು. ಊಟಕ್ಕೆ ಮುಂಚೆ ಮಾಡುವುದು ಪೂರ್ವಾಪೋಶನ. ಊಟವಾದ ಮೇಲೆ ಮಾಡುವುದು ಉತ್ತರಾಪೋಶನ. ಸಮುದ್ರವನ್ನೇ ಆಪೋಶನ ಮಾಡಿದ ಅಗಸ್ತ್ಯನ ಕಥೆಯಿಲ್ಲವೇ! ಹರಿಶ್ಚಂದ್ರ ಕಾವ್ಯದಲ್ಲಿ (೮-೪೫) ಬರುವ ಈ ವಾಕ್ಯವನ್ನು ನೆನೆಯಿರಿ: **'ಅಡವಿಯಂ ಮೊಗೆದು ಸುಡುವಗ್ನಿಗಾಪೋಶನದ ಗೊಡವೆಯೇವುದು?'**

**ಆಭಾರಿ** ಆಭಾರಿ ಎಂಬುದು ಆಭಾರಿನ್ ಎಂಬ ಸಂಸ್ಕೃತ ಶಬ್ದದಿಂದ ಬಂದಿದೆ. ಆಭಾರ ಎಂದರೆ ಉಪಕಾರ, ಸಹಾಯ. ಅದನ್ನು ಪಡೆದವನು ಆಭಾರಿ. **ಅಬಾರಿ** ಪ್ರಯೋಗ ತಪ್ಪು.

**ಆಮಂತ್ರಣ - ನಿಮಂತ್ರಣ** ಆಮಂತ್ರಣಕ್ಕೆ ಅನೇಕ ಅರ್ಥಗಳಿವೆ. ಅವುಗಳಲ್ಲಿ ಆಹ್ವಾನ, ಕರೆಯುವುದು ಎಂಬುದೂ ಒಂದು ಅರ್ಥ. ನಿಮಂತ್ರಣ ಶಬ್ದಕ್ಕೆ ಎರಡು ಅರ್ಥಗಳಿವೆ. ೧. ಆಹ್ವಾನ, ಕರೆಯುವುದು. ೨. (ವಿಶೇಷವಾಗಿ) ಶ್ರಾದ್ಧದ ಭೋಜನಕ್ಕಾಗಿ ಕರೆಯುವುದು. ಈ ಎರಡನೆಯ ಅರ್ಥ ಆಮಂತ್ರಣದಲ್ಲಿಲ್ಲ.

**ಆಯಾ (AYAH)** ಈ ಶಬ್ದ ನಮ್ಮ ದೇಶಭಾಷೆ ಯಾವುದಕ್ಕೂ ಸಂಬಂಧ ಪಡದೆ ಇದ್ದರೂ

ನಮ್ಮ ದೇಶದ ಎಲ್ಲ ಭಾಷೆಗಳಲ್ಲಿಯೂ ಪ್ರಚಲಿತವಾಗಿದೆ. ಇದು ನಮ್ಮ ದೇಶಕ್ಕೆ ಪೋರ್ಚುಗೀಸರಿಂದ ಬಂತು. ಪೋರ್ಚುಗೀಸ್ ಭಾಷೆಯಲ್ಲಿ AIA ಎಂದರೆ A Nurse ಅಥವಾ A Governess ಎಂದರ್ಥ. ಗಂಡಸಾದರೆ AIO. ಅದಕ್ಕೆ ಅರ್ಥ ಯುವಕ ಸಿರಿವಂತನ Governor. ಈ ಶಬ್ದಕ್ಕೆ ಅರ್ಥ A Tutor. ಪೋರ್ಚುಗೀಸ್ ಭಾಷೆಯ Aia ಶಬ್ದಕ್ಕೂ ಲ್ಯಾಟಿನ್ ಭಾಷೆಯ Aidus ಶಬ್ದಕ್ಕೂ ಫ್ರೆಂಚ್ ಭಾಷೆಯ Aide = A helper ಶಬ್ದಕ್ಕೂ ಸಂಬಂಧವಿದೆ ಎಂದು ಭಾಷಾ ಶಾಸ್ತ್ರಜ್ಞರು ಹೇಳುತ್ತಾರೆ. ಈಗ ಇದು NURSE ಎಂಬ ಅರ್ಥದಲ್ಲಿ ಕನ್ನಡದಲ್ಲಿ ಉಪಯೋಗವಾಗುತ್ತಿದೆ.

**ಆಯಾಮ** ಇದು ಸಂಸ್ಕೃತ ಶಬ್ದ. ಇದಕ್ಕೆ ಕಾಲ ದೇಶಗಳ ಉದ್ದ, ಅಗಲ, ದೀರ್ಘಗಳನ್ನು ಕುರಿತದ್ದು ಎಂದು ಅರ್ಥವಿದೆ. ಆದರೆ ಈಚೆಗೆ ಈ ಇಪ್ಪತ್ತು ವರ್ಷಗಳಲ್ಲಿ ಆಯಾಮ ಎಂಬ ಶಬ್ದವನ್ನು ಇಂಗ್ಲಿಷಿನ Dimension ಎಂಬ ಶಬ್ದಕ್ಕೆ ಸಮಾನಾರ್ಥವುಳ್ಳದ್ದಾಗಿ ಪ್ರಯೋಗ ಮಾಡಲಾಗುತ್ತಿದೆ. ವ್ಯಾಪಕತೆ ಎಂಬುದು ಆ ಅರ್ಥಕ್ಕೆ ಸರಿ ಹೊಂದುತ್ತದೆ. ಆಧುನಿಕ ಸಾಹಿತ್ಯ ವಿಮರ್ಶೆಯಲ್ಲಿ ಈ ಶಬ್ದವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದಾರೆ.

**ಆಯಾಯ** ಕನ್ನಡದಲ್ಲಿ ಆ ಎಂಬುದು ಒಂದು ನಿರ್ದೇಶಕ ಸರ್ವನಾಮ. ಇಂಗ್ಲಿಷಿನಲ್ಲಿ That ಇದ್ದಂತೆ. ಆದರೆ ಇಂಗ್ಲಿಷಿನಲ್ಲಿ ಅದು ಒಂದು ಬಗೆಯ ಸರ್ವನಾಮ. ಆ + ಆ ಸೇರಿದರೆ ಆಗ ಆಯಾ ಎಂದಾಗುತ್ತದೆ. ಹೀಗೆ ಎರಡು ಆ ಸೇರಿದರೆ ಸಾಕು. ಮೂರು ಆ + ಆ + ಆ ಸೇರಬೇಕಾಗಿಲ್ಲ. ಅದು ಅನಾವಶ್ಯಕ. ಆದುದರಿಂದ ಆಯಾ ಎಂದರೆ ಆಆ ವಿಭಾಗಕ್ಕೆ ಸೇರಿದ ಎಂದು ವಿವರ ಸಿಕ್ಕುತ್ತದೆ. ಹಿಂದೀ ಭಾಷೆಯ ಆಯಾ = ಬಂದೆ ಎಂಬುದಕ್ಕೂ ಇದಕ್ಕೂ ಸಂಬಂಧವಿಲ್ಲ.

**ಆಯಾರಾಂ ಗಯಾರಾಂ** ಕನ್ನಡದಲ್ಲಿ **ಹೋದ ಪುಟ್ಟ ಬಂದ ಪುಟ್ಟ** ಎಂಬ ಗಾದೆ ಇದೆ. ಬಂದ ಹೋದ ಎಂದರೆ ಏನೂ ಪ್ರಯೋಜನವಿಲ್ಲದವನು. ಅದೇ ಅರ್ಥದ ಹಿಂದೀ ಗಾದೆ ಇದು. ಈಗೀಗ ರಾಜಕೀಯದಲ್ಲಿ ಪಕ್ಷಾಂತರ ಮಾಡುವವರಿಗೂ ಹೀಗೆ ಹೇಳಲಾಗುತ್ತದೆ. **ಆಯಾರಾಂ ಗಯಾರಾಂ** ರಾಜಕೀಯದಲ್ಲಿ ತಮ್ಮನ್ನೇ ಮಾರಾಟಕ್ಕಿಟ್ಟುಕೊಂಡು ಪಕ್ಷದಿಂದ ಪಕ್ಷಕ್ಕೆ ಜಿಗಿದು ಆಡಳಿತ ಪಕ್ಷಗಳ ಏಳುಬೀಳುಗಳಿಗೆ ಕಾರಣರಾದ ಪಕ್ಷಾಂತರ ಪರಮೇಶ್ವರ ರಾಜಕಾರಣಿಗಳಿಗೂ 'ಆಯಾರಾಂ ಗಯಾರಾಂ' ಎಂದು ಹೆಸರಿಟ್ಟಿದ್ದರು. ಈ ರೀತಿಯ ಜನರಿಂದಾಗಿ 'ಪಕ್ಷಾಂತರ ವಿರೋಧಿ ಕಾಯಿದೆ'ಯನ್ನು ತರಲಾಯಿತು. ಆದರೆ ಈ ಜನರಿಗೆ ರಂಗೋಲಿಯ ಕೆಳಗೆ ನುಸುಳುವುದು ಗೊತ್ತಿರುವುದರಿಂದ ಮೊದಲು ಒಬ್ಬರೋ ಇಬ್ಬರೋ ಪಕ್ಷಾಂತರ ಮಾಡುತ್ತಿದ್ದವರು ಈಗ ಗುಂಪುಗುಂಪಾಗಿ ಮಾಡುತ್ತಿದ್ದಾರೆ! ಅಷ್ಟೆ.

**ಆಯುಷ್ಕರ್ಮ ಶಾಲೆ** ಆಯುಷ್ಕರ್ಮ ಎಂಬುದಕ್ಕೆ ಆಯುಸ್ಸನ್ನು ವೃದ್ಧಿಪಡಿಸುವ ಕಾರ್ಯ ಎಂದರ್ಥ. ಆಯುಹೋರ್ಮ, ಆಯುಷ್ಯಹೋಮ ಎಂಬ ಶಬ್ದಗಳಿಗೆ ಆಯುಸ್ಸನ್ನು ಹೆಚ್ಚು ಮಾಡಿಕೊಳ್ಳಲು ದೇವತೆಗಳಿಗೆ ಮಾಡುವ ಹೋಮ ಎಂಬುದೇ ಅರ್ಥ. ಕ್ಷೌರ ಮಾಡಿಕೊಳ್ಳಬೇಕಾದರೆ ಹಿಂದಿನ ಕಾಲದ ಜನ ಕೆಲವು ತಿಥಿ ವಾರ ಮುಂತಾದುವುಗಳನ್ನು ನಿಗದಿ ಮಾಡುತ್ತಿದ್ದರು. ಅದಕ್ಕೆ ಕಾರಣವೇನೆಂದರೆ ಅಂಥ ತಿಥಿಗಳಲ್ಲಿ ಕ್ಷೌರ ಮಾಡಿಸಿಕೊಂಡರೆ ಆಯುಸ್ಸು ವೃದ್ಧಿಯಾಗುತ್ತದೆಂಬ ನಂಬಿಕೆ ಇತ್ತು. ಈ ನಂಬಿಕೆಯ ಪರಿಣಾಮವಾಗಿ ಕ್ಷೌರಕ್ಕೆ ಆಯುಷ್ಕರ್ಮ ಎಂಬ ಶಬ್ದ ಸಂಸ್ಕೃತ ಬಲ್ಲವರಿಂದ ಸೃಷ್ಟಿಯಾಯಿತು. ನಾನು ಕ್ಷೌರ ಮಾಡಿಸಿಕೊಳ್ಳಬೇಕು ಎನ್ನುವುದರ ಬದಲು ಆಯುಷ್ಕರ್ಮಕ್ಕಾಗಿ ನಾಪಿತನಿಗೆ ಹೇಳಿ ಕಳುಹಿಸಿದ್ದೇನೆ ಎನ್ನುತ್ತಿದ್ದರು. ಹಿಂದಿನ ಕಾಲದಲ್ಲಿ ಕ್ಷೌರಿಕನು ಮನೆಗೇ ಬರುತ್ತಿದ್ದನು. ಇಲ್ಲದಿದ್ದರೆ ಹಳ್ಳಿಗಳಲ್ಲಿ ಸುತ್ತಮುತ್ತಲಿನ ಯಾವುದಾದರೂ ಮರದ ಕೆಳಗೆ ಕ್ಷೌರ ಮಾಡಿಸಿಕೊಳ್ಳುತ್ತಿದ್ದುದು ಸಾಮಾನ್ಯವಾಗಿತ್ತು.

ನಗರಗಳು ದೊಡ್ಡದಾದ ಮೇಲೆ ನಾಪಿತರು ಸ್ವಂತ ಅಂಗಡಿಗಳನ್ನು ತೆರೆದು ಅವುಗಳಿಗೆ ಆಯುಷ್ಕರ್ಮಶಾಲೆ ಎಂದು ಸಂಸ್ಕೃತದ ಹೆಸರನ್ನೇ ಇಟ್ಟರು. ಎಲ್ಲಿಯೂ ಯಾರೂ ಕ್ಷೌರದ ಅಂಗಡಿ, ಕ್ಷೌರಿಕನ ಅಂಗಡಿ ಎಂದು ಹೆಸರಿಡುವುದಿಲ್ಲ. ಈಚೆಗೆ ಇಂಗ್ಲಿಷ್ ಭಾಷೆಯ ಹೆಸರೇ ಪ್ರಧಾನವಾಗಿದೆ. ಅದೂ ಕೂಡ Shaving Shop ಅಲ್ಲ. ಅದು Shaving Saloon. Saloon ಎಂಬುದು ಫ್ರೆಂಚ್ ಭಾಷೆಯ ಶಬ್ದ. ಫ್ರಾನ್ಸ್ ದೇಶದಲ್ಲಿ ಈ ಶಬ್ದಕ್ಕೆ "A room where hair dressers, dress makers etc receive their clients," ಎಂದರ್ಥ. Saloon ಎನ್ನುವುದು ಬ್ರಿಟನ್ನಿನಲ್ಲಿ ಉಪಯೋಗವಾಗುವ ಶಬ್ದ. ನಮ್ಮ ನಾಪಿತರು ಇಂಗ್ಲಿಷರಿಂದ ಈ ಶಬ್ದವನ್ನು ಆರಿಸಿಕೊಂಡಿದ್ದಾರೆ. ಫ್ರಾನ್ಸಿನಲ್ಲಿ Saloon ಶಬ್ದಕ್ಕೆ ಇನ್ನೂ ವ್ಯಾಪಕವಾಗಿರುವ ಅರ್ಥವಿದೆ. ಶ್ರೀಮಂತ ಫ್ರೆಂಚ್ ಮನೆಗಳಲ್ಲಿ ಹಿಂದೆ ಕತೆಗಾರರ, ಲೇಖಕರ, ಕವಿಗಳ ಮತ್ತು ಇತರ ಬುದ್ಧಿಜೀವಿಗಳಾದ ಸ್ತ್ರೀ ಪುರುಷರ ಸಮ್ಮೇಳನ ಸ್ಥಳವೆಂಬ ಕೀರ್ತಿಯೂ ಆ ಶಬ್ದಕ್ಕೆ ಇದೆ. ಆದರೆ ಇದು ಈಗ ಅಷ್ಟು ಪ್ರಚಾರದಲ್ಲಿಲ್ಲ.

**ಆರಂಭ** ಈ ಶಬ್ದಕ್ಕೆ ಮೊದಲು ಎಂದರ್ಥ. ಪ್ರ ಎಂಬ ಉಪಸರ್ಗ ಸೇರಿದರೆ ಪ್ರ + ಆರಂಭ = ಪ್ರಾರಂಭ ಎಂದಾಗುತ್ತದೆ. ಇದಕ್ಕೆ ಮೊತ್ತಮೊದಲು ಎಂದರ್ಥ.

**ಆರಕ್ಷಕ** ಇದು ರಕ್ಷಕ ಎಂಬ ಪದದ ಅರ್ಥವನ್ನೇ ಹೊಂದಿದೆ. ಆ ಎಂಬುದು ವಿಶೇಷತೆಯನ್ನು ಸೂಚಿಸುತ್ತದೆ ಅಷ್ಟೆ! ಆದರೆ ಪೊಲೀಸ್ ಶಬ್ದಕ್ಕೆ ಇದು ಸರಿಯಾದ ಕನ್ನಡ ಶಬ್ದವಲ್ಲ. ಜನರೆಲ್ಲ ಆ ಶಬ್ದವನ್ನು **ಅರಕ್ಷಕ** ಎಂದು ಉಚ್ಚರಿಸುತ್ತಾರೆ, ಎಂದು ಪೊಲೀಸರು ಹಾಗೇ ಆಗಿಬಿಟ್ಟರೆ ಕಷ್ಟ, ನಮಗೆ, ನಿಮಗೆ.

**ಆರತಿ ಎತ್ತು; ಆರತಿ ಮಾಡು** ಎರಡೂ ಸರಿ. ಆರಾತ್ರಿಕ ಎಂಬ ಸಂಸ್ಕೃತ ಶಬ್ದದಿಂದ ಬಂದಿದೆ. ಮಂಗಳಾರತಿ, ಆರತಿ ತಟ್ಟೆ, ಆರತಿ ದುಡ್ಡು, ಮುಖಕ್ಕೆ ಮಂಗಳಾರತಿ ಮುಂತಾದ ಶಬ್ದಗಳು ಮತ್ತು ನುಡಿಗಟ್ಟುಗಳಲ್ಲಿ ಆರತಿ ಶಬ್ದದ ಪ್ರಭಾವ ಚೆನ್ನಾಗಿ ವ್ಯಕ್ತವಾಗುತ್ತದೆ. ಮುಖಕ್ಕೆ ಮಂಗಳಾರತಿ ಎತ್ತಿದರು ಎಂಬಲ್ಲಿ ಇರುವ ವ್ಯಂಗ್ಯಾರ್ಥ ಎಲ್ಲರಿಗೂ ಬೇಗ ಅರ್ಥವಾಗುತ್ತದೆ.

**ಆರಿಸು** = ಎಂದರೆ ಬಿಸಿಯಿಲ್ಲದಂತೆ ಮಾಡು ಅಥವಾ ಆರಿ ಹೋಗುವಂತೆ ಮಾಡು. **ಆಯು** ಎಂಬರ್ಥದ ಆರಿಸು ಹೇಗೆ ಬಂತೋ ತಿಳಿಯದು.

**ಆರೋಹಣ** ಮೇಲಕ್ಕೆ ಹತ್ತುವುದು. ವೃಕ್ಷಾರೋಹಣ, ಪರ್ವತಾರೋಹಣಗಳಲ್ಲಿರುವಂತೆ.

**ಆರ್ಜವ** ಆರ್ಜವ ಎಂದರೆ ಋಜುತೆಯ ಭಾವ, ಸರಳತೆ, ನೇರವಾಗಿ ವ್ಯವಹಾರ ಮಾಡುವಿಕೆ, ಪ್ರಾಮಾಣಿಕತೆ. **ಋಜುತಾವಕ್ರತಾಂ ಪ್ರಾಪ, ವಕ್ರತಾಚ ತಥಾರ್ಜವಂ** ಎಂಬುದು **ಚಂಪೂರಾಮಾಯಣದ** ಸರಸವೂ, **ಶ್ಲೇಷಾರ್ಥವುಳ್ಳದ್ದೂ** ಆದ ವಾಕ್ಯ. **ಪಂಪರಾಮಾಯಣದಲ್ಲಿ, ಆರ್ಜವರೆ ಮನುಜರೆಲ್ಲಂ** (೧-೬೦) ಎಂಬ ಮಾತು ಬರುತ್ತದೆ. ಇಲ್ಲಿ ಆರ್ಜವ ಸರಳನಾದ ವ್ಯಕ್ತಿ.

**ಆರ್ಯಪುತ್ರ** ಈ ಶಬ್ದಕ್ಕೆ ಮಾವನ ಮಗ ಎಂದರ್ಥ. ಗಂಡ, ಪತಿ. ಗಂಡನನ್ನು ಹೆಂಡತಿ ಕರೆಯಬೇಕಾದರೆ ಈ ಶಬ್ದವನ್ನು ಉಪಯೋಗಿಸುವುದು ಪದ್ಧತಿಯಾಗಿತ್ತು. ಸಂಸ್ಕೃತ ನಾಟಕಗಳಲ್ಲಿಯೂ ಅವುಗಳ ಕನ್ನಡ ಅನುವಾದಗಳಲ್ಲಿಯೂ ರಾಣಿಯು ರಾಜನಿಗೆ ಈ ಶಬ್ದವನ್ನು ಉಪಯೋಗಿಸಿ, ಬಳಿಕ ಮಾತನಾಡುತ್ತಾಳೆ.

**ಆರ್ಷ** ಋಷಿಗಳಿಗೆ ಸಂಬಂಧಿಸಿದ, ಪ್ರಾಚೀನವಾದ, ಪವಿತ್ರವಾದ, ವೇದಕ್ಕೆ ಸಂಬಂಧಿಸಿದ ಎಂದು ಈ ಶಬ್ದಕ್ಕೆ ಅರ್ಥ. ಇದು ನಾಮಪದವಾದರೆ ಎಂಟು ಬಗೆಯ ವಿವಾಹಗಳಲ್ಲಿ ಒಂದು ಎಂದರ್ಥ. ಅಂದರೆ ಕನ್ಯಾಶುಲ್ಕವಾಗಿ ಗೋಮಿಥುನವನ್ನು ತೆಗೆದುಕೊಂಡು ಕನ್ಯಾದಾನ ಮಾಡುವುದು. ಈಗ ನಡೆಯುವ ಆಧುನಿಕ ಮದುವೆ ವರದಕ್ಷಿಣೆ

ತೆಗೆದುಕೊಂಡು ವರನನ್ನು ದಾನ ಮಾಡುವುದಾಗಿದೆ.

**ಆಲಯ - ನಿಲಯ** ಈ ಎರಡಕ್ಕೂ ಮನೆ, ಬೀಡು, ಎಂದು ಅರ್ಥವಿದ್ದರೂ ಬೇರೆ ಬೇರೆ ಅರ್ಥಗಳಲ್ಲಿ ಭಿನ್ನತೆ ಇದೆ. ಆಲಯ ಶಬ್ದಕ್ಕೆ ೧. *ಆಶ್ರಯ*, ೨. *ಸಂಬಂಧ* ಎಂಬ ಬೇರೆ ಅರ್ಥಗಳಿವೆ. ನಿಲಯ ಶಬ್ದಕ್ಕೆ ೧. *ಸ್ಥಾನ*, ೨. *ಹಕ್ಕಿಗಳ ಗೂಡು*, ೩. *ಮರೆಯಾಗುವುದು*, ೪. *ಪ್ರಳಯ* ಎಂಬ ಅರ್ಥಗಳಿವೆ. ಮನೆ ಎಂಬ ಅರ್ಥವನ್ನು ಕೊಡುವ ಇತರ ಶಬ್ದಗಳೂ ಸಂಸ್ಕೃತದಲ್ಲಿ ಇವೆ. ಗೃಹ, ಗೇಹ, ಉದವಸಿತ, ವೇಶ್ಮ, ಸದ್ಮ, ನಿಕೇತನ, ಸದನ, ನಿವಾಸ, ನಿಶಾಂತ, ಆವಸ್ಥ, ಭವನ, ಆಗಾರ, ಮಂದಿರ ಇತ್ಯಾದಿ.

**ಆಲಾಪನೆ** ಆಲಾಪ ಎಂಬ ಶಬ್ದಕ್ಕೆ ಮಾತು ಎಂದರ್ಥ. ಆಲಾಪನ ಎಂದರೆ ಪರಸ್ಪರ ಮಾತನಾಡುವುದು ಎಂದರ್ಥ. ಸಂಗೀತ ಕ್ಷೇತ್ರದಲ್ಲಿ ಈ ಶಬ್ದಕ್ಕೆ ಪಾರಿಭಾಷಿಕವಾದ ಅರ್ಥವಿದೆ. ಯಾವುದಾದರೂ ಒಂದು ರಾಗವನ್ನು ವಿಸ್ತಾರವಾಗಿ ಹಾಡಿ ರಾಗದ ಸಂಪೂರ್ಣ ಸ್ವರೂಪವನ್ನು ಕೇಳುಗರಿಗೆ ರಂಜನೆಯಾಗುವಂತೆ ಮಾಡುವುದು. ತಾಳವಿಲ್ಲದಿದ್ದರೂ ಆಲಾಪನೆಯಲ್ಲಿ ಅಂತರ್ಗತವಾದ ಗತಿ ಕೇಳಬರುತ್ತದೆ. ಆರಂಭ, ಮಧ್ಯ ಮತ್ತು ಮುಕ್ತಾಯದ ಹಂತಗಳನ್ನು ತಲುಪಿದಾಗಲೇ ಆಲಾಪನೆಯ ಸೊಗಸು ವ್ಯಕ್ತವಾಗುವುದು.

**ಆಲಿಕಲ್ಲು** ಆಲಿ ಎಂಬುದು ಒಂದು ದ್ರಾವಿಡ ಮೂಲವಾದ ಶಬ್ದ. ಇದಕ್ಕೆ ಕಲ್ಲಿನಂತೆ ಗಟ್ಟಿಯಾದ ನೀರಿನ ಹನಿ ಎಂದರ್ಥ. ಇದರ ಜೊತೆಗೆ ಕಲ್ಲು ಎಂಬುದನ್ನು ಅನಾವಶ್ಯಕವಾದರೂ ಸೇರಿಸಿ ಆಲಿಕಲ್ಲು ಆಗಿದೆ. ಈಗಂತೂ ಮಳೆಗಾಲದಲ್ಲಿ ಅದನ್ನು ನಮ್ಮ ಜನ **ಆನೆಕಲ್ಲು** ಎಂದೇ ಕರೆಯುತ್ತಾರೆ. ಆಲಿಕಲ್ಲು ಎಂಬುದು ಒಂದು ವಿಧವಾದ ದ್ವಿರುಕ್ತಿ ಎಂದೇ ಕರೆಯಬಹುದು. ಅನೇಕ ದ್ರಾವಿಡಭಾಷೆಗಳಲ್ಲಿ ಇದು ಕಂಡುಬರುತ್ತದೆ. ಆಲಿಮಳೆ, ಆಲಿವರಲು ಎಂಬ ಶಬ್ದಗಳೂ ಹಳೆಯ ಕಾವ್ಯಗಳಲ್ಲಿ ಕಂಡುಬರುತ್ತವೆ. ಕಾರ್ಗಾಲದ ವರ್ಣನೆ ಬರುವ ಕಡೆಗಳಲ್ಲೆಲ್ಲ ಆಲಿ ಶಬ್ದ ಬಂದೇ ಬರುತ್ತದೆ. ಕಣ್ಣಾಲಿ ಎಂಬ ಒಂದು ಶಬ್ದವಿದೆ. ಅಲ್ಲಿ ಕಣ್ಣಿನ ಗುಡ್ಡೆ ಎಂಬ ಅರ್ಥವಿದೆ ಆಲಿ ಎಂಬ ಶಬ್ದಕ್ಕೆ. ಇದೂ ಕೂಡ ಕನ್ನಡದ ಶಬ್ದ. ಸಂಸ್ಕೃತದಲ್ಲಿ ಆಲಿ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. *ಚೇಳು* ೨. *ಭ್ರಮರ* ೩. *ಸಾಲು, ಸಮೂಹ* ೪. *ರೇಖೆ, ಗೆರೆ* ಇತ್ಯಾದಿ. ಇವೆರಡಕ್ಕೂ ಸಂಬಂಧವಿಲ್ಲ.

**ಆಲೋಚನೆ - ವಿವೇಚನೆ** ಈ ಎರಡು ಶಬ್ದಗಳೂ ಸಂಸ್ಕೃತದ ಶಬ್ದಗಳು ಮತ್ತು ಕನ್ನಡಕ್ಕೆ ತದ್ಭವಗಳಾಗಿ ಬಂದಿರುವುವು. ಆ ಮತ್ತು ವಿ ಇವು ಉಪಸರ್ಗಗಳು. ಆದುದರಿಂದ ವಿಶೇಷವಾದ ಅರ್ಥವನ್ನು ನೀಡುತ್ತವೆ. ಲೋಚನ, ಲೋಕನ ಎರಡಕ್ಕೂ ಅರ್ಥ ನೋಡುವುದು, ಚೆನ್ನಾಗಿ ಗಮನಿಸುವುದು, ಪರಿಶೀಲಿಸುವುದು ಮತ್ತು ಅದರ ವಿವರಗಳನ್ನು ತಿಳಿದುಕೊಳ್ಳುವುದು. ವಿವೇಚನೆ ಎಂದರೆ ವಿಶ್ಲೇಷಿಸುವುದು, ವಿಭಾಗ ಮಾಡಿ ನೋಡುವುದು, ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ಕಾರಣಸಹಿತವಾಗಿ ಕಂಡುಹಿಡಿಯುವುದು. ಇದು ಕೇವಲ ಆಲೋಚನೆಗಿಂತ ಹೆಚ್ಚಾದ ಬುದ್ಧಿಶಕ್ತಿಯನ್ನು ನಿರೀಕ್ಷಿಸುತ್ತದೆ. ಮೊದಲನೆಯದು ಕಣ್ಣಿಗೆ ಹೆಚ್ಚು ಪ್ರಾಧಾನ್ಯವನ್ನು ನೀಡಿದರೆ ಎರಡನೆಯದು ಬುದ್ಧಿಗೆ ಹೆಚ್ಚು ಪ್ರಾಧಾನ್ಯವನ್ನು ನೀಡುತ್ತದೆ.

**ಆಲೋಚನೆ, ಖಂಡನೆ** ಎಂಬ ಶಬ್ದಗಳು ಕನ್ನಡದಲ್ಲಿಯೂ ಹಿಂದೀ ಭಾಷೆಯಲ್ಲಿಯೂ ಬೇರೆ ಬೇರೆ ಅರ್ಥಗಳನ್ನು ಹೊಂದಿರುವುದು ಏಕೆ ? ಒಂದು ಭಾಷೆಗೆ ಇತರ ಅನೇಕ ಭಾಷೆಗಳಿಂದ ಶಬ್ದಗಳು ಬಂದು ಸೇರುತ್ತವೆ. ಕೆಲವು ವೇಳೆ ಮೂಲಭಾಷೆಯಲ್ಲಿರುವ ಅರ್ಥದಲ್ಲಿಯೇ ಅವು ಉಪಯೋಗವಾಗಬಹುದು. ಇಲ್ಲದಿದ್ದರೆ ಮೊದಲು ಶಬ್ದಗಳನ್ನು ಆಮದು ಮಾಡಿದವರು ಯಾವ ಅರ್ಥದಲ್ಲಿ ಆ ಶಬ್ದಗಳನ್ನು ಉಪಯೋಗಿಸಿದ್ದಾರೋ ಅದೇ ಮುಖ್ಯವಾಗಬಹುದು. ಆ ಬಳಿಕವೂ ಆ ಶಬ್ದಕ್ಕೆ ಹೊಸ ಅರ್ಥಗಳು ಬಂದು ಸೇರಬಹುದು. ಹಿಂದಿಯಲ್ಲಿ

'ಆಲೋಚನಾ' ಎಂದರೆ ಟೀಕೆ, ವಿಮರ್ಶೆ, ಅಪವಾದ ಹೊರಿಸುವುದು ಇತ್ಯಾದಿ ಅರ್ಥಗಳಿರುವುದು ನಿಜ. 'ಖಂಡನ' ಎಂದರೆ ನಿರಾಕರಣೆ, ನಿಂದೆ, ತ್ಯಜಿಸುವುದು ಎಂಬ ಅರ್ಥವಾಗುವುದು ನಿಜ. ಈ ಅರ್ಥಗಳು ಆ ಭಾಷೆಯನ್ನಾಡುವವರಿಗೆ ಚೆನ್ನಾಗಿ ಹೊಂದಿಕೊಂಡಿವೆ. ಭಾಷೆ ಭಾಷೆಗಳ ನಡುವೆ ಕೊಡುಕೊಳ್ಳುವಿಕೆ ನಡೆದಾಗ ಹೀಗಾಗುವುದು ಅನಿವಾರ್ಯ. ಒಂದು ಶಬ್ದದ ಅರ್ಥವು ಬೇರೆಯಾದಾಗ ಆ ಹೊಸ ಅರ್ಥವೂ ಸಾಮಾನ್ಯವಾಗಿ ಮೊದಲ ಅರ್ಥದ ತರ್ಕಬದ್ಧವಾದ ವಿಸ್ತರಣೆಯೇ ಆಗಿರುತ್ತದೆ. ಆದರೆ ಆಯಾ ಭಾಷೆಯನ್ನಾಡುವ ಸಮಾಜದ ಅಗತ್ಯಗಳನ್ನು ಅನುಸರಿಸಿ ಅರ್ಥಗಳು ಬೆಳೆಯುತ್ತವೆ. ಶಬ್ದದ ಸರಿಯಾದ ಅರ್ಥ ಎನ್ನುವುದು ಆಯಾ ಸಂದರ್ಭಕ್ಕೆ ಯಾವುದು ಉಚಿತವೋ ಅದೇ ಎಂಬುದು ಮಾತ್ರ ನಿರ್ಧಾರವಾದ ವಿಷಯ. ಸಂಸ್ಕೃತದಂಥ ಭಾಷೆಯಿಂದ ನಾವು ಶಬ್ದಗಳನ್ನು ತೆಗೆದುಕೊಂಡಾಗ ಅವಕ್ಕೆ ಕನ್ನಡದಲ್ಲಿ ಬೇರೆಯ ಅರ್ಥಗಳನ್ನು ನೀಡುವುದಿಲ್ಲವೇ ? ಹಾಗೆ.

**ಆವಕ** ಇದು ಮರಾಠಿ ಶಬ್ದ. ಕಚೇರಿಗೆ ಹೊರಗಿನಿಂದ ಬಂದ ಕಾಗದ ಪತ್ರಗಳ ದಾಖಲೆ ಇರುವ ಪುಸ್ತಕ. 'From' register. ಕನ್ನಡದಲ್ಲಿ ಇದನ್ನು ಈಗ **ಇಂದ ರಿಜಿಸ್ಟರ್** ಎಂದು ಉಪಯೋಗಿಸುತ್ತಿದ್ದಾರೆ. ಆವಕ ಎಂಬುದೇ ಇನ್ನೂ ಚೆನ್ನಾಗಿದೆ. ಜಾವಕ ಎಂಬ ಶಬ್ದದೊಡನೆ ಹೋಲಿಸಿ. ನೋಡಿ: ಜಾವಕ.

**ಆವಿಷ್ಕಾರ** ಇದೊಂದು ಸಂಸ್ಕೃತ ಶಬ್ದ. ವಿಶ್ ಧಾತುವಿನಿಂದ ಆದುದು. ಇದಕ್ಕೆ ರೂಪು ತಳೆಯುವುದು, ಸಾಕ್ಷಾತ್ಕರಿಸುವುದು, ಕಣ್ಣಿಗೆ ಕಾಣುವಂತಾಗುವುದು ಎಂದರ್ಥ. ಆವಿಷ್ಕರಣ ಎಂಬ ಶಬ್ದವೂ ಇದೆ, ಇದೇ ಅರ್ಥದಲ್ಲಿ.

**ಆಶಾ** ಈ ಶಬ್ದವು ಸಂಸ್ಕೃತದಲ್ಲಿಯೇ ಎರಡು ಬೇರೆ ಬೇರೆ ರೀತಿಗಳಲ್ಲಿ ವ್ಯುತ್ಪತ್ತಿಯನ್ನು ಪಡೆಯುತ್ತದೆ. ಒಂದಕ್ಕೆ ಅರ್ಥ ಗುರಿ, ದಿಕ್ಕು ಎಂದು. ಇನ್ನೊಂದಕ್ಕೆ ಅರ್ಥ ಅಪೇಕ್ಷೆ, ಅಭಿಲಾಷೆ ಎಂದು. ಎರಡು ಅರ್ಥಗಳಲ್ಲಿಯೂ ಆಶಾ ಎಂಬ ಹೆಸರು ಸ್ತ್ರೀಯರಿಗೆ ಅರ್ಥವತ್ತಾಗಿದೆ. ನೋಡಿ: ಆಸೆ

**ಆಶ್ಚರ್ಯಚಿಹ್ನೆ** ಕುವೆಂಪು ಅವರ 'ಜೈ ಹೇ ಕರ್ನಾಟಕ ಮಾತೆ!' ಎಂಬ ಪದ್ಯದಲ್ಲಿ ಈ ಚಿಹ್ನೆಯನ್ನು ಧಾರಾಳವಾಗಿ ಉಪಯೋಗಿಸಿದ್ದಾರೆ. ಈ ಕವನದ ಮೊದಲ ಸಾಲು ಹೀಗಿದೆ. ಜೈ ಭಾರತ ಜನನಿಯ ತನುಜಾತೆ! ಈ ಕವನದಲ್ಲಿ ಆಶ್ಚರ್ಯಸೂಚಕ ಚಿಹ್ನೆಗಳು ೨೯ ಸಲ ಉಪಯೋಗಗೊಂಡಿವೆ ಎಂಬುದು ನಿಜ. ಕನ್ನಡದಲ್ಲಿ ನಾವು ಆಶ್ಚರ್ಯಸೂಚಕ ಚಿಹ್ನೆ ಎಂಬುದನ್ನು ಇಂಗ್ಲಿಷ್ ಭಾಷೆಯ ವಿರಾಮ ಚಿಹ್ನೆಗಳಿಂದ ಆರಿಸಿಕೊಂಡಿದ್ದೇವೆ. ಇಂಗ್ಲಿಷಿನಲ್ಲಿ ! ಎಂಬ ಚಿಹ್ನೆಯನ್ನು Exclamation Mark, Exclamation point ಎಂದೂ ಕರೆಯುತ್ತಾರೆ. ಈ ಚಿಹ್ನೆಯನ್ನು ಇಂಗ್ಲಿಷಿನಲ್ಲಿ ಕೇವಲ ಆಶ್ಚರ್ಯ ಸೂಚನೆಗೆ ಮಾತ್ರ ಉಪಯೋಗಿಸುವುದಿಲ್ಲ. ಆಳವಾದ ಭಾವನೆಗಳು, ಅದರಲ್ಲೂ ಸಂಬೋಧನೆ, ಅಪ್ಪಣೆ, ಮೆಚ್ಚುಗೆ, ಉದ್ಗಾರ, ಘೋಷಣೆ ಮುಂತಾದುವುಗಳಿಗೆ ಉಪಯೋಗಿಸುತ್ತಾರೆ. ಇಂಗ್ಲಿಷ್‌ನ exclamation ಎಂಬ ಶಬ್ದಕ್ಕೆ ಅಷ್ಟು ಅರ್ಥಗಳಿವೆ. ಆ ಚಿಹ್ನೆಯನ್ನು ಉಪಯೋಗಿಸುವಾಗ ಈ ಎಲ್ಲ ಅರ್ಥಗಳಲ್ಲೂ ಉಪಯೋಗಿಸುತ್ತಿದ್ದೇವೆ ಎಂಬುದನ್ನು ನಾವು ತಿಳಿದಿರಬೇಕು. ಆ ಕವನದಲ್ಲಿ ಈ ಚಿಹ್ನೆಯನ್ನು ಇನ್ನೇತಕ್ಕೆ ಉಪಯೋಗಿಸಿದ್ದಾರೆ ಎಂದು ಪರಿಶೀಲಿಸಿದರೆ ಆಗ ಕವಿಯ ಉದ್ದೇಶ ಅರ್ಥವಾಗುತ್ತದೆ. **ಜೈ** ಎನ್ನುವುದು **ಜಯ್** ಎಂಬುದೂ ಒಂದೇ!

**ಆಷಾಢಭೂತಿ** ಎಂಬ ಹೆಸರಿನ ಪಾತ್ರ ಸಂಸ್ಕೃತದ ಪಂಚತಂತ್ರ ಕಥೆಗಳಲ್ಲಿ ಬರುತ್ತದೆ. ಅವನು ತುಂಬಾ ಬೂಟಾಟಿಕೆಯ ವ್ಯಕ್ತಿ. ಹಿಂದೆ ಪಂಚತಂತ್ರ ಬಹು ಪ್ರಸಿದ್ಧ ಗ್ರಂಥವಾಗಿತ್ತು. ಎಲ್ಲರೂ ಅದರ ಕಥೆಗಳನ್ನು ತಿಳಿದಿರುತ್ತಿದ್ದರು. ಆದ್ದರಿಂದ **ಯದ್ಭವಿಷ್ಯ, ಆಷಾಢಭೂತಿ, ಕರಟಕ, ದಮನಕ** ಮುಂತಾದ ಹೆಸರುಗಳು ಬೇಗ ಒಬ್ಬ ವ್ಯಕ್ತಿಯ ಗುಣಗಳ

ಪರಿಚಯವನ್ನು ಮಾಡಿಕೊಡುತ್ತಿದ್ದುವು. ಈಗ ಆ ಕಥೆಗಳನ್ನು ಹೇಳುವವರೂ ಕೇಳುವವರೂ ಇಲ್ಲದೆ ಈ ಹೆಸರುಗಳು ದೂರವಾಗಿ ಹೋಗಿವೆ. 'ಆಷಾಢಭೂತಿ' ಎಂದರೆ ಬೂಟಾಟಿಕೆಯ ವ್ಯಕ್ತಿ, ನಂಬಬಾರದ ಮನುಷ್ಯ, ಅಪ್ಪಟ ಸುಳ್ಳ, ಬಹಳ ತೋರಿಕೆಯವನು ಎಂದರ್ಥ. ಇದರ ಸ್ಪಷ್ಟ ಚಿತ್ರ ಬೇಕಾದರೆ ಶ್ರೀ ಎ. ಎನ್. ಮೂರ್ತಿರಾಯರು ರಚಿಸಿರುವ ಮೋಲಿಯರ್ ನಾಟಕದ ಅನುವಾದ 'ಆಷಾಢಭೂತಿ' ನಾಟಕವನ್ನು ಓದಿ.

**ಆಸಾಮಿ ಅಸ್ವಾಮಿಗೆ ಸಂಬಂಧಪಟ್ಟದ್ದಲ್ಲವೇ?** ಆಸಾಮಿ ಅಸ್ವಾಮಿನವನೇ ಆಗಬೇಕಾಗಿಲ್ಲ. ಈ ಶಬ್ದ ಅರಬ್ಬಿ ಭಾಷೆಯಿಂದ ಹಿಂದೀ, ಮರಾಠೀ ಭಾಷೆಗಳಿಗೂ ಬಳಿಕ ಕನ್ನಡಕ್ಕೂ ಬಂದಿದೆ. ಈ ಶಬ್ದಕ್ಕೆ ವ್ಯಕ್ತಿ, ಮನುಷ್ಯ ಎಂದರ್ಥ. **ಮಾಲು ಸಹಿತ ಆಸಾಮಿ ಸಿಕ್ಕಿಬಿದ್ದ** ಎಂಬ ವಾಕ್ಯವನ್ನು ಗಮನಿಸಿ.

**ಆಸುಪಾಸು** ಇದು ಮರಾಠಿಯ ಆಸ್‌ಪಾಸ್ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಅಕ್ಕಪಕ್ಕ, ನೆರೆಹೊರೆ, ಆ ಬದಿ, ಈ ಬದಿ ಎಂದರ್ಥ. ತುಂಬ ಉಪಯೋಗದಲ್ಲಿರುವ ಶಬ್ದ. ಆಸುಪಾಸಿನವರೊಂದಿಗೆ ಸ್ನೇಹದಿಂದ ವರ್ತಿಸಬೇಕು.

**ಆಸೆ-ನಿರೀಕ್ಷೆ** ಆಸೆ ಎಂದರೆ ನಮಗೆ ಬೇಕಾದುದನ್ನು ಪಡೆಯಬೇಕೆಂಬ ಬಯಕೆ. ಇದು ಸಂಸ್ಕೃತದ ಆಶಾ ಶಬ್ದದ ತದ್ಭವ. ಆಶಾ ಶಬ್ದಕ್ಕೆ ದಿಕ್ಕು ಎಂಬ ಅರ್ಥವೂ ಇದೆ. ಕನ್ನಡದಲ್ಲಿ ಆಸೆ, ಆಶೆ ಎಂಬ ಎರಡು ರೂಪಗಳನ್ನೂ ಉಪಯೋಗಿಸುತ್ತಾರೆ. ಸಂಸ್ಕೃತದ ಎರಡು ಅರ್ಥಗಳು ಕನ್ನಡದಲ್ಲಿಯೂ ಇವೆ. ನಿರೀಕ್ಷೆ ಶಬ್ದಕ್ಕೆ ನೋಟ, ದೃಷ್ಟಿ ಎಂಬುದು ಮೊದಲನೆಯ ಅರ್ಥ. ಯಾವುದಾದರೂ ಘಟನೆಗೋ ಸಮಾಚಾರಕ್ಕೋ ಎದುರು ನೋಡುತ್ತಿರುವುದು ಎಂದು ಅದಕ್ಕೆ ಅರ್ಥ. ಇದು ಸಂಸ್ಕೃತದ ನಿರೀಕ್ಷಾ ಎಂಬ ಶಬ್ದದ ತದ್ಭವ. ಈ ಎರಡೂ ಶಬ್ದಗಳಿಗೆ ಕಾವ್ಯ ಪ್ರಯೋಗಗಳನ್ನು ನೀಡುತ್ತೇನೆ. ಆಸೆ - **'ಆಸೆಯೇ ಜೀವದಲಿ, ಕುರುಧರಣೀಶ, ಬಿಡು ರಾಜ್ಯವನು'** (ಕುಮಾರವ್ಯಾಸ, ಕರ್ಣಪರ್ವ ೧೫-೧೫) ನಿರೀಕ್ಷೆ - **'ಜಗದ ಕಂಗಳು ವಿಧುರತೆಯನೈದುವುವು ರೂಪಾಂತರ ನಿರೀಕ್ಷೆಯಲಿ.'** (ಭಾಗವತ ೩-೨-೪೫). ಒಂದು ವಿಶೇಷವೇನೆಂದರೆ ಈ ಎರಡು ಶಬ್ದಗಳನ್ನೂ ಎರಡು ಅರ್ಥಗಳಲ್ಲಿಯೂ ಉಪಯೋಗಿಸಿರುವ ಪ್ರಯೋಗಗಳೂ ಇವೆ. ಉದಾ: **"ಆತನಿಗೆ ರೋಗ ಉಲ್ಬಣವಾಗಿದೆ; ಬದುಕುವ ನಿರೀಕ್ಷೆಯಿಲ್ಲ"** = ಆಸೆ. ಪಂಪಭಾರತದ ೪-೧೦೪ ನೆಯ ಪದ್ಯದಲ್ಲಿ **'ನುಡಿಗಳೊಳ್ ಆಸೆಯುಂಟು'** ಎಂಬಲ್ಲಿ ನಿರೀಕ್ಷೆ ಎಂಬ ಅರ್ಥವನ್ನು ಮಾಡಬಹುದು. ಆಸೆ ಎಂಬ ಶಬ್ದಕ್ಕೆ ಕುದುರೆಗೆ ಹಾಕುವ ಜೀನು ಎಂಬ ಅರ್ಥವೂ ಇದೆ.

**ಆಹ್ವಾನ - ಆಮಂತ್ರಣ** ಈ ಎರಡೂ ಶಬ್ದಗಳಿಗೂ ಸಮಾನವಾದ ಅರ್ಥ **ಕರೆಯುವುದು.** ಮನೆಗೆ ಹಬ್ಬ ಹರಿದಿನಗಳಿಗೆ, ವಿವಾಹಾದಿ ಉತ್ಸವಗಳಿಗೆ ಹೇಳಿ ಕಳುಹಿಸುವುದು, ಪತ್ರಗಳ ಮುಖಾಂತರ ಕರೆಯುವುದು. ಉತ್ತರ ಕರ್ನಾಟಕದ ಜನ ಆಹ್ವಾನ ಶಬ್ದವನ್ನು ಇಂಗ್ಲಿಷಿನ challenge ಎಂಬ ಶಬ್ದಕ್ಕೆ ಸಮಾನವಾಗಿರುವಂತೆ ಸವಾಲು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಆಗ ಔತಣಕ್ಕೆ ಆಹ್ವಾನಿಸುವುದು ಕಷ್ಟ!

## ಇ

**ಇ. ಯಿ. ಈ. ಯೀ, ಉ. ವು, ಊ. ವೂ ಹೀಗೆ ಒಂದೇ ಉಚ್ಚಾರಣೆಗೆ ಎರಡೆರಡು ಅಕ್ಷರಗಳೇಕೆ?**

ಇ, ಈ, ಉ, ಊ, ಎಂಬ ಸ್ವರಗಳಿಗೂ ಯಿ, ಯೀ, ವು, ವೂ ಎಂಬ ವ್ಯಂಜನಗಳಿಗೂ

ಒಂದೇ ಬಗೆಯ ಉಚ್ಚಾರಣೆಯಿಲ್ಲ. ಅವರವರ ಅಧ್ಯಾಪಕರನ್ನು ಕೇಳಿ, ಎದುರಿಗೆ ಕುಳಿತು ಇದನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಇ, ಈ ಇವು ತಾಲವ್ಯ ಯಿ, ಯೀ ಇವು ಅಂತಸ್ಥವರ್ಣ ಮತ್ತು ತಾಲವ್ಯ ಉ, ಊ ಇವು ಓಷ್ಠ್ಯ, ವು, ವೂ ಇವು ದಂತ್ಯ. ಇವುಗಳ ಉಚ್ಚಾರಣೆಯೇ ಬೇರೆ ಬೇರೆ. ಆದುದರಿಂದ ಅವು ಇರಬೇಕು. ನೋಡಿ: ಋ

**ಇಂಕ್ರು** ಇಂಕ್ರ - ಇಂಕರ ಎರಡು ಶಬ್ದಗಳಿಗೂ ಸ್ವಲ್ಪ, ಅಲ್ಪ, ಕಡಿಮೆ ಎಂಬ ಅರ್ಥವಿದೆ. ಇದರ ಮೂಲ ತಿಳಿದಿಲ್ಲ. ಇವು ಇಸಿತು ಎಂಬ ಶಬ್ದಕ್ಕೆ ಸಂಬಂಧ ಹೊಂದಿರುವ ಸಾಧ್ಯತೆ ಇದೆ.

**ಇಂಗು1** ಎಂಬ ಕನ್ನಡ ಧಾತುವಿಗೆ ೧. ಒಣಗಿಹೋಗು, ಬತ್ತಿಹೋಗು, ನಿರ್ದ್ರವವಾಗು ೨. ಅಡಗು, ಕಾಣದಾಗು, ನಾಶವಾಗು ಎಂಬ ಅರ್ಥಗಳು ಇವೆ. '**ನೀರನ್ನು ಇಂಗಿಸು, ಹಾಲನ್ನು ಇಂಗಿಸಿ ಖೋವಾ ಮಾಡುತ್ತಾರೆ**' ಮುಂತಾದ ವಾಕ್ಯಗಳನ್ನು ನೋಡಿ. '**ಮಳೆಯ ನೀರು ಮರಳಿನಲ್ಲಿ ಇಂಗಿಹೋಯಿತು.**' '**ರೋಗದಿಂದ ಕಣ್ಣು ಇಂಗಿಹೋಯಿತು**' ಎಂಬ ವಾಕ್ಯಗಳನ್ನು ನೋಡಿ. '**ಎದುರಾಳಿಯ ಆಕಾರವನ್ನು ನೋಡಿ ಪೈಲ್ವಾನನ ಧೈರ್ಯ ಇಂಗಿಹೋಯಿತು**' ಎಂಬ ಆಲಂಕಾರಿಕ ವಾಕ್ಯವನ್ನು ನೋಡಿ. ಹೀಗೆ ಅರ್ಥ ಬೆಳೆಯುತ್ತಾ ಹೋಗುತ್ತದೆ. ಭಾಷೆ ಉಪಯೋಗಿಸುವವರ ಪ್ರತಿಭೆಯನ್ನು ಅನುಸರಿಸುತ್ತದೆ.

**ಇಂಗು2** ಸಂಸ್ಕೃತದ ಹಿಂಗು ಶಬ್ದದ ತದ್ಭವ ರೂಪ. ಇದು ನಾಮಪದ. ಅಡಿಗೆಗೂ ಔಷಧಕ್ಕೂ ಉಪಯೋಗವಾಗುವ, ಒಂದು ಮರದ ಹಾಲಿನಿಂದ ದೊರೆಯುವ ವಸ್ತು. ನೋಡಿ: ಹಿಂಗು

**ಇಂಗ್ಲಿಷಿನ H** ಎಂಬ ಅಕ್ಷರದ ಉಚ್ಚಾರಣೆ ಎಚ್ ಎಂದಾದರೆ hall ಮುಂತಾದ ಶಬ್ದಗಳ ಹಕಾರಕ್ಕೆ ಏನು ಕಾರಣ ? ಅಕ್ಷರದ ಹೆಸರು ಉಚ್ಚಾರಣೆ ಬೇರೆ ಬೇರೆ. ಶಬ್ದಗಳಲ್ಲಿ ಅವುಗಳ ಉಚ್ಚಾರಣೆ ಬೇರೆ. C. Z. W. ಈ ಅಕ್ಷರಗಳನ್ನೂ Cat, Zero, Wood ಎಂಬ ಶಬ್ದಗಳನ್ನೂ ಹೋಲಿಸಿ. ಉಚ್ಚಾರಣೆಗಳಲ್ಲಿರುವ ಬದಲಾವಣೆಗಳನ್ನು ಗಮನಿಸಿ. ಇಂಗ್ಲಿಷಿನ M ಎಂಬುದರ ಉಚ್ಚಾರಣೆಯೂ ಎಂ.

**ಇಂಚರ** ಶಬ್ದದಲ್ಲಿ ಎರಡು ಭಾಗಗಳಿವೆ. ಇನಿದು + ಸರ ಅಂದರೆ ಇಂಪಾದ + ಸ್ವರ ಮಧುರವಾದ ಧ್ವನಿ ಎಂದು ಇದರ ಅರ್ಥ. ಇದಕ್ಕೆ ಕೋಗಿಲೆ ಎಂಬ ಅರ್ಥವೂ ಇದೆ. ಈ ಶಬ್ದವನ್ನು ಉಪಯೋಗಿಸದ ಕವಿಯೇ ಇಲ್ಲ. ಪಂಪನು ಆದಿಪುರಾಣದಲ್ಲಿ (೧೩-೬) **ಜಿನುಗುವ ತುಂಬಿಯಿಂಚರಮೆ** ಎಂದು ಉಪಯೋಗಿಸಿದ್ದಾನೆ. ಈ ಶಬ್ದವನ್ನು ಇನಿದು +ಸರ ಅಂದರೆ ಇಂಪಾದ ಶರ ಅಂದರೆ ಮಧುರವಾದ ಬಾಣವುಳ್ಳವನು =ಮನ್ಮಥ ಎಂದು ಬೇಕಾದರೂ ಅರ್ಥ ಮಾಡಬಹುದು. ಈ ಎರಡು ಅರ್ಥಗಳನ್ನು ಸೇರಿಸಿ ಶಬ್ದಾನುಶಾಸನದಲ್ಲಿ "**ಇಂಚರಂ ಕೋಕಿಲೋ ಮನ್ಮಥೋವಾ**" ಎಂದು ಕನ್ನಡ ವ್ಯಾಕರಣಕಾರನು ವಿವರಿಸಿದ್ದಾನೆ.

**ಇಂಜಿನಿಯರ್** ಈ ಶಬ್ದದ ಉಚ್ಚಾರಣೆ ಎಂಜಿನಿಯರ್ ಎಂಬುದೇ ಸರಿ ಎಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಆದರೆ ಅದು ಇಂಜಿನಿಯರ್ ಎಂದು ಕನ್ನಡ ದೇಶದಲ್ಲಿ ಪ್ರಚಾರದಲ್ಲಿರುವುದಕ್ಕೆ ಇಂಗ್ಲಿಷ್ ಪದಗಳೇ ಕಾರಣ. ನಾವು ಸಾಮಾನ್ಯ ಜನರ ಕಿವಿಗೆ ಎಂಜಿನಿಯರ್ ಶಬ್ದವನ್ನು ಪರಿಚಯ ಮಾಡುವುದಕ್ಕಿಂತ ಹೆಚ್ಚು ಕಾಲ ಅವರ ಕಿವಿಯಲ್ಲಿ England, English, Englishman ಮುಂತಾದ ಶಬ್ದಗಳನ್ನು ಇಂಗ್ಲೆಂಡ್, ಇಂಗ್ಲಿಷ್ ಇಂಗ್ಲಿಷ್‌ಮನ್ ಮುಂತಾಗಿಯೇ ಸರಿಯಾಗಿಯೇ ಉಚ್ಚರಿಸುತ್ತಿದ್ದೆವು. ಇಂಗ್ಲೆಂಡಿನಲ್ಲಿಯೂ ಆ ಶಬ್ದ ಇಂಗ್ಲೆಂಡೇ. ಆ ಪೂರ್ವ ಪರಿಚಯದ ಪ್ರಭಾವ ಈ ಎಂಜಿನಿಯರ್, ಎಂಜಿನ್ ಮುಂತಾದ ಶಬ್ದಗಳ ಮೇಲೂ ಆಗಿದೆ. ಇದು ಪೂರ್ವಾನುಭವದ ಆಕ್ರಮಣ ಎಂದು ನಾನು ತೀರ್ಮಾನಿಸಿಕೊಂಡಿದ್ದೇನೆ.

**ಇಂತಹ - ಇಂಥ** ನೋಡಿ: ಅಂತಹ

**ಇಂತೀ** ಪತ್ರಗಳನ್ನು ಬರೆಯುವಾಗ ಕೊನೆಯಲ್ಲಿ ಇಂತೀ ಬರೆಯುವುದು ನಿಜ. ಸಂಸ್ಕೃತದಲ್ಲಿ ಇತಿ ಎಂದರೆ ಆಯಿತು, ಸರಿ. ಹೀಗೇ ಇಂತೀ ಎಂಬುದೂ ಇತಿಗೆ ಬದಲಾಗಿ ಮಾಡಿಕೊಂಡಿರುವ ರೂಪ. ಅದರ ವಿವರ ಹೀಗೆ ಇದೆ:- ಇಂತು + ಈ = ಇಂತೀ ನಮಸ್ಕಾರಗಳು ಅಥವಾ ಶುಭಾಶಯಗಳು ಎಂದು ಬರೆದು ಕೆಳಗೆ ಹೆಸರು ಬರೆಯಬೇಕು. ಅದು ಗೊತ್ತಿಲ್ಲದೆ ಕೆಲವರು ಇಂತಿ ಎಂದು ನಿಲ್ಲಿಸುತ್ತಾರೆ. ಅದಕ್ಕೆ ಅರ್ಥವಿಲ್ಲ.

**ಇಂದ - ಗೆ** ಇಂಗ್ಲಿಷಿನಲ್ಲಿ from ಮತ್ತು to ಎಂದು ಬರೆಯುವುದರ ಕನ್ನಡ ರೂಪಾಂತರ. ಅದೇ ರೀತಿ 'S/o, D/o, W/o, C/o' ಎಂದು ಅಂಚೆಯ ವಿಳಾಸದಲ್ಲಿ ಬರೆಯುವುದು ರೂಢಿ. ಆದರೆ ಕನ್ನಡದಲ್ಲಿಯೂ ಇವೇ ಸಂಕ್ಷಿಪ್ತ ರೂಪಗಳನ್ನು ಏಕೆ ಉಪಯೋಗಿಸಬೇಕು ? ಆ ನಾಲ್ಕು ಸಂಕ್ಷಿಪ್ತಗಳಿಗೂ ಕನ್ನಡದವರು **ಇ/ಮ** ಎಂಬ ಒಂದೇ ಸಂಕ್ಷಿಪ್ತವನ್ನು ಉಪಯೋಗಿಸಬಹುದು. ಇವರ ಮಗ, ಇವರ ಮಗಳು, ಇವರ ಮಡದಿ, ಇವರ ಮನೆ ಎಂದು ಅರ್ಥಗಳು ತಿಳಿದು ಬರುತ್ತವೆ. ಈ ಸೂಚನೆ ತುಂಬ ಪ್ರಯೋಜನಕಾರಿ. ಇಂದ, ಗೆ ಮುಂತಾದವನ್ನು ಬಳಕೆಗೆ ತಂದಂತೆ ಇದನ್ನೂ ಪ್ರಯೋಗಿಸಿ ಬಳಕೆಗೆ ತರಬಹುದು, ಕನ್ನಡ ಪತ್ರವ್ಯವಹಾರ ಮಾಡುವವರೆಲ್ಲ.

**ಇಂದು, ನಾಳೆ, ನಿನ್ನೆ, ಮೊನ್ನೆ** ಸಂಸ್ಕೃತದ ವ್ಯಾಕರಣವು ಕನ್ನಡಕ್ಕೆ ಎಲ್ಲ ವಿಷಯಗಳಲ್ಲಿಯೂ ಅನ್ವಯಿಸುವುದಿಲ್ಲ. ಈ ಎರಡು ಭಾಷೆಗಳ ವ್ಯಾಕರಣವೂ ಬೇರೆ ಬೇರೆ. ಅವೆರಡು ಭಾಷೆಗಳೂ ಬೇರೆ ಬೇರೆ ಭಾಷಾವರ್ಗಕ್ಕೆ ಸೇರಿವೆ. ಸಂಸ್ಕೃತದಲ್ಲಿ ಅತ್ರ, ತತ್ರ, ಕುತ್ರ ಮುಂತಾದವು ಅವ್ಯಯಗಳು. ಕನ್ನಡದಲ್ಲಿ ಅಲ್ಲಿ, ಇಲ್ಲಿ, ಎಲ್ಲಿ ಎಂಬ ಶಬ್ದಗಳು ನಾಮಪದಗಳು. ಅವುಗಳನ್ನು ಸಾಧಿಸಿರುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ. ಕನ್ನಡದಲ್ಲಿ ಅವು ಪ್ರಯೋಗವಾಗಿರುವ ಅತಿ ಪ್ರಾಚೀನ ಕಾಲದಿಂದಲೂ ಈ ರೂಪದಲ್ಲಿಯೇ ಇವೆ. ಆದ್ದರಿಂದ ಅವುಗಳನ್ನು ಸಾಧಿಸುವುದು ಹೇಗೆ ಎಂಬುದಕ್ಕೆ ಉತ್ತರ ನಮಗೆ ತಿಳಿದಿಲ್ಲ. ಉದಾಹರಣೆಗೆ ಅಲ್ಲಿ — **ವಿತ್ತಿದಲ್ಲಿ ವೆಳೆಯಾದೆ ಕೆಡುಗೆ** ಎಂಬ ಶಾಸನ ಪ್ರಯೋಗದ ಕಾಲ ಕ್ರಿ. ಶ. ೬೮೫. ಅರ್ಥ ಬಿತ್ತವನ್ನು ಹಾಕಿದ ಸ್ಥಳದಲ್ಲಿ ಬೆಳೆಯದೆ ಕೆಟ್ಟುಹೋಗಲಿ. ಹಾಗೆಯೇ ಇಲ್ಲಿ ಎಂಬ ಶಬ್ದಕ್ಕೆ ಕ್ರಿ. ಶ. ೭೦೦ ರ ಪ್ರಯೋಗವೊಂದು ಶಾಸನದಲ್ಲಿದೆ. **ಪುರಾಕೃತಮಿಲ್ಲಿ ಸಂಧಿಕ್ಕು**, ಪೂರ್ವದಲ್ಲಿ ಮಾಡಿದ ಕರ್ಮ ಇಲ್ಲಿ ಬಂದು ಸೇರುತ್ತದೆ, ಪರಿಣಾಮ ಬೀರುತ್ತದೆ ಎಂದರ್ಥ. ಹಾಗೆಯೇ ಇಂದು, ನಾಳೆ, ನಿನ್ನೆ, ಮೊನ್ನೆ ಇವೂ ಕೂಡ ನಾಮಪದಗಳೇ ಸರಿ. ಆದರೆ ಕಾಲವಾಚಕಗಳಾದ ಇವು ಕೆಲವು ವೇಳೆ ಅವ್ಯಯವಾಗಿಯೂ ಪ್ರಯೋಗಗೊಳ್ಳುತ್ತವೆ. ನಾಮಪದಗಳಾಗಿ ಇವಕ್ಕೆ ವಿಭಕ್ತಿ ಪ್ರತ್ಯಯಗಳು ಹತ್ತುವುದನ್ನು ಗಮನಿಸಿ. ನಾಳೆ, ನಿನ್ನೆ ಮುಂತಾದ ಶಬ್ದಗಳು ಷಷ್ಠೀ ಪ್ರತ್ಯಯ ಹತ್ತಿದಾಗ ನಾಳೆಯ, ನಿನ್ನೆಯ, ಮೊನ್ನೆಯ ಎಂದೂ ಇಂದು, ಮುಂದು, ಅಂದು ಮುಂತಾದವು ಇಂದಿನ, ಮುಂದಿನ, ಅಂದಿನ ಎಂದೂ ರೂಪವನ್ನು ತಳೆಯುತ್ತವೆ. ಉ, ಊ, ಋ, ೠ, ಓ, ಔ ಎಂಬ ಸ್ವರಗಳಿಂದ ಕೊನೆಗಾಣುವ ನಾಮಪದಗಳಿಗೆ ತೃತೀಯಾವಿಭಕ್ತಿ ಮೊದಲಾದ ಪ್ರತ್ಯಯಗಳು ಹತ್ತುವಾಗ ಇನಾಗಮ ಬರುತ್ತದೆ ಎಂಬುದು ವ್ಯಾಕರಣದಲ್ಲಿ ಒಂದು ನಿಯಮ. ಅಂದು + ಇಂದ = ಅಂದಿನಿಂದ. ನಾಳಿನ, ನಿನ್ನಿನ, ಮೊನ್ನಿನ ಎಂಬ ರೂಪಗಳನ್ನು ಕೆಲವರು ಉಪಯೋಗಿಸುತ್ತಿದ್ದಾರೆ. ಅದು ತಪ್ಪು. ನಾಳೆ + ಅ = ನಾಳೆಯ, ನಿನ್ನೆ + ಅ = ನಿನ್ನೆಯ, ಮೊನ್ನೆ + ಅ = ಮೊನ್ನೆಯ.

**ಇಂದ್ರಪ್ರಸ್ಥ** ಎಂಬುದು ಮಹಾಭಾರತದ ಹಸ್ತಿನಾವತಿಗೆ ಹತ್ತಿರದಲ್ಲಿದ್ದ ಒಂದು ಪಟ್ಟಣ. ದ್ರೌಪದಿಯ ಸ್ವಯಂವರವಾದ ಮೇಲೆ ಧೃತರಾಷ್ಟ್ರನು ಪಾಂಡವರಿಗೆ ಅರ್ಧರಾಜ್ಯವನ್ನು

ಕೊಟ್ಟು ಇಂದ್ರಪ್ರಸ್ಥವೆಂಬ ಪಟ್ಟಣದಲ್ಲಿ ಅವರು ವಾಸಿಸಲು ಏರ್ಪಾಟು ಮಾಡಿದನು. ಈ ಪಟ್ಟಣವನ್ನು ಶ್ರೀಕೃಷ್ಣನ ಅಪ್ಪಣೆಯ ಮೇರೆಗೆ ವಿಶ್ವಕರ್ಮನೇ ನಿರ್ಮಿಸಿದನು. ಪ್ರಸ್ಥ ಎಂದರೆ ಎತ್ತರವಾದ ಸಮತಟ್ಟಾದ ಸ್ಥಳ. Table Land. ಅಂಥ ಪ್ರದೇಶದಲ್ಲಿ ಕಟ್ಟಿದ ಊರಿಗೆ ಇಟ್ಟ ಹೆಸರು ಇಂದ್ರಪ್ರಸ್ಥ. ಇಂದ್ರ ಶಬ್ದಕ್ಕೆ **ಇದಂ ಸರ್ವಂ ದ್ರಾತಿ, ಸಾಕ್ಷಾತ್ಕರೋತಿ** ಎಂದರ್ಥ. ಬೇಕಾದದ್ದೆಲ್ಲವನ್ನೂ ಸಾಕ್ಷಾತ್ಕಾರ ಮಾಡಿಕೊಳ್ಳುವವನು ಎಂದರ್ಥ. ಈಗ ಇಂದ್ರಪ್ರಸ್ಥ ಎಂಬ ಹೆಸರಿಗೆ ಎಷ್ಟು ಅರ್ಥ ಉಂಟಾಗುತ್ತದೆ ನೋಡಿ.

**ಇಂಪಲಾ, ಕಂಪಲಾ, ತಂಪಲಾ** ಈ ಶಬ್ದಗಳು ಕ್ರಮವಾಗಿ ಇಂಪು, ಕಂಪು, ತಂಪು. ಇವುಗಳಿಗೆ ಅಲಾ =ಅಲ್ಲವೇ ? ಎಂಬ ಅರ್ಥದ ಅವ್ಯಯ ಸೇರಿದೆ. ಆದುದರಿಂದ ಇಂಪಲಾ ಅಂದರೆ ಇಂಪು ಅಲ್ಲವೇ ? ಕಂಪಲಾ =ಕಂಪು ಅಲ್ಲವೇ ? ತಂಪಲಾ =ತಂಪು ಅಲ್ಲವೇ ? ಹೀಗೆ ಅರ್ಥ ಮಾಡಬೇಕು.

**ಇಕ್ಷ್ವಾಕು** ಈತನು ಸೂರ್ಯವಂಶದ ಒಬ್ಬ ದೊರೆ. ಮನು ಚಕ್ರವರ್ತಿಯ ಒಂಬತ್ತು ಜನ ಮಕ್ಕಳಲ್ಲಿ ಮೊದಲನೆಯವನು. ಅಯೋಧ್ಯೆಯಲ್ಲಿ ಆಳಿದ ಚಕ್ರವರ್ತಿಗಳಲ್ಲಿ ಈ ಇಕ್ಷ್ವಾಕುವೇ ಮೊದಲನೆಯವನು. ಆದುದರಿಂದ ಅಲ್ಲಿ ಆಳಿದ ಇತರರೆಲ್ಲ ಇಕ್ಷ್ವಾಕು ವಂಶಸ್ಥರು.

**ಇಚ್ಛೆ** ಇದು ಇಚ್ಛಾ ಎಂಬ ಸಂಸ್ಕೃತದ ಶಬ್ದದಿಂದ ಕನ್ನಡಕ್ಕೆ ಬಂದದ್ದು. ಇಂಥ ಶಬ್ದಗಳಲ್ಲಿ ಸ್ವಲ್ಪವೇ ವ್ಯತ್ಯಾಸವಾಗಿರುವುದರಿಂದ ಅವುಗಳನ್ನು ಕೆಲವರು ವ್ಯಾಕರಣಕಾರರು ಸಮಸಂಸ್ಕೃತ ಎಂದು ಕರೆಯುತ್ತಾರೆ. ಇಚ್ಛೆ ಎಂಬುದು ತದ್ಭವವಾಗುತ್ತದೆ. ಅರ್ಥ ಆಸೆ, ಬಯಕೆ.

**ಇಜ್ಜತ್ತು** ಇದು ಫಾರಸೀ ಭಾಷೆಯ ಇಝ್ಝತ್ ಶಬ್ದದಿಂದ ಬಂದಿದೆ. ಇದಕ್ಕೆ ಗೌರವ, ಮರ್ಯಾದೆ, ದೊಡ್ಡಸ್ತಿಕೆ ಎಂದರ್ಥ. ತುಂಬ ತೂಕವಾದ ಅರ್ಥವುಳ್ಳ ಶಬ್ದ.

**ಇತಿಹಾಸ** ಎಂದರೆ 'ಹಿಂದೆ ಹೀಗೆ ಇತ್ತು' ಎಂದು ಪುರಾತನ ಪುರಾಣ ಕಥೆಗಳನ್ನು ಹೇಳುವ ಗ್ರಂಥ. ರಾಮಾಯಣ ಮತ್ತು ಮಹಾಭಾರತ ನಮ್ಮ ದೇಶದ ಇತಿಹಾಸಗಳು. ಇತಿಹಾಸದಲ್ಲಿ ಪುರಾಣ, ಕಥೆ, ಧರ್ಮ, ಚರಿತ್ರೆ ಮುಂತಾದುವೆಲ್ಲ ಸೇರಿರುತ್ತವೆ.

**ಇತೋಪ್ಯತಿಶಯ** ಇತಃ+ಅಪಿ+ಅತಿಶಯ ಇದರ ವಿವರವಾದ ಸ್ವರೂಪ. ಈಗಿರುವುದ ಕ್ಕಿಂತಲೂ ಹೆಚ್ಚು ಅಧಿಕವಾದುದು ಎಂದರ್ಥ. ಹಿರಿಯರು ಆಶೀರ್ವಾದ ಮಾಡುವಾಗ ಕಿರಿಯರಿಗೆ ಈಗಿರುವುದಕ್ಕಿಂತ ಹೆಚ್ಚಾದ ಸುಖ ಸಂಪತ್ತು ಆರೋಗ್ಯ ಶಾಂತಿ ಇರಲಿ ಎಂದು ಹೇಳುವಾಗ ಬರುವ ಸಂಸ್ಕೃತ ಶಬ್ದ ಇದು.

**ಇನಿಯ** ಇನಿಯ ಅಂದರೆ ಪ್ರಿಯ, ನಲ್ಲ, ಪತಿ. ಈ ಶಬ್ದ ಇನಿದು ಎಂಬುದರಿಂದ ಬಂದುದು. ಅದಕ್ಕೆ ರುಚಿಕರವಾದುದು ಎಂದರ್ಥ.

**ಇಪ್ಪತ್ತೊಂಬತ್ತು** ಕರ್ನಾಟಕದ ಕೆಲವು ಭಾಗಗಳಲ್ಲಿ ಇಪ್ಪತ್ತರ ಒಂಬತ್ತು, ನಲವತ್ತರ ಒಂಬತ್ತು ಎಂದು ಹೇಳುವ ಅಭ್ಯಾಸವಿದೆ. ಮೈಸೂರಿನ ಕಡೆ ಇಪ್ಪತ್ತ ಒಂಬತ್ತು ಎನ್ನುತ್ತಾರೆ. ಇಪ್ಪತ್ತೊಂಬತ್ತು ಎಂದು ಸಂಧಿ ಮಾಡಬಹುದು. ಆದರೆ ಇಪ್ಪತ್ತರ ಒಂಬತ್ತು ಸಂಧಿಯಾದರೆ ಇಪ್ಪತ್ತರೊಂಬತ್ತು ಆಗಬೇಕು. ಇಪ್ಪತ್ತೊಂಬತ್ತು ಆಡುಮಾತಿನ ರೀತಿ.

**ಇಭ** ಇದು ಸಂಸ್ಕೃತದ ಶಬ್ದ. ಆನೆ ಎಂದರ್ಥ. ಈ ಶಬ್ದಕ್ಕೆ ವಿವರಣೆಯನ್ನು ಕೊಡುತ್ತ ಏತಿ **ಮದಂ ಇತಿ ಇಭಃ** =ಇದು ಮದವನ್ನು ಹೊಂದುತ್ತದೆ ಎಂಬುದರಿಂದ ಇದಕ್ಕೆ ಇಭ ಎಂದು ಹೆಸರು ಎಂದು ಒಂದು ಟೀಕೆ ಹೇಳುತ್ತದೆ. ಇಭೀ ಎಂದರೆ ಹೆಣ್ಣಾನೆ. ಇಭನಗರ ಎಂದರೆ ಹಸ್ತಿನಾವತಿ. ಹೀಗೆ ಈ ಶಬ್ದದಿಂದ ಅನೇಕ ಸಮಾಸಗಳನ್ನು ಕವಿಗಳು ನಿರ್ಮಿಸಿದ್ದಾರೆ.

**ಇಭ್ರತಿ** ಇದು ಅರಬ್ಬೀ ಭಾಷೆಯ ಶಬ್ದ. ಅಲ್ಲಿ 'ಇಭ್ರತ್' ಎಂದರೆ ಮರ್ಯಾದೆ, ಪ್ರತಿಷ್ಠೆ, ಸಮಾಜದ ಗೌರವ ಎಂಬ ಅರ್ಥಗಳಿವೆ. ಅದೇ ಕನ್ನಡದಲ್ಲಿ 'ಇಭ್ರತಿ' ಆಗಿದೆ. ಇದೂ ಕೂಡ ಆ ಅರ್ಥದಲ್ಲಿಯೇ ಕನ್ನಡದಲ್ಲಿ ಪ್ರಯೋಗದಲ್ಲಿರುವ ಶಬ್ದ.

**ಇಮೇಜ್** ಇಮೇಜ್ ಎಂದರೆ ಪ್ರತೀಕ, ಬಿಂಬ, ಆಕಾರ, ಸ್ವರೂಪ. ಕಂಡರಿಸಿದ, ಚಿತ್ರಿಸಿದ ರೇಖೆಯಲ್ಲಿ ಮೂಡಿಸಿದ ಸ್ವರೂಪವೂ ಆಗಬಹುದು. ಇನ್ನೊಂದು ವಸ್ತುವಿನ ಪ್ರತಿಬಿಂಬವಾಗಬಹುದು. ತದ್ರೂಪು ಎಂದಾಗಬಹುದು. ಇಂಗ್ಲಿಷ್‌ನಲ್ಲಿ He has no image ಎಂದರೆ ಸಾರ್ವಜನಿಕರು ಗೌರವಿಸಬಹುದಾದ ವ್ಯಕ್ತಿತ್ವವಿಲ್ಲ ಎಂದರ್ಥ. ಕಾವ್ಯದಲ್ಲಿ ಒಂದು ಶಬ್ದದಿಂದ, ನುಡಿಗಟ್ಟಿನಿಂದ, ಅಲಂಕೃತ ವಾಕ್ಯಗಳಿಂದ, ಓದುಗನ ಮನಸ್ಸಿನಲ್ಲಿ ಸೃಷ್ಟಿಸುವ ಸಾಕಾರ ವಸ್ತುಗಳಿಗೆ ಸಮಾನವಾದ ಪ್ರತೀಕಗಳು. ಎಲ್ಲ ಸೃಷ್ಟಿಶೀಲ ಕಾವ್ಯದಲ್ಲಿಯೂ ಈ ಪ್ರತೀಕ ನಿರ್ಮಾಣ ಪ್ರಮುಖವಾದ, ವಿಶಿಷ್ಟವಾದ ಸತ್ವವಾಗಿರುತ್ತದೆ.

**ಇಲಾಖೆ** ಇದು ಅರಬ್ಬೀ ಭಾಷೆಯ ಇಲಾಕಾ, ಇಲಾಖಾ ಎಂಬ ಶಬ್ದಗಳಿಂದ ಬಂದುದು. ಮರಾಠಿಯಲ್ಲಿ ಇಲಾಖಾ ಎಂದೂ ಹಿಂದಿಯಲ್ಲಿ ಇಲಾಕಾ ಎಂದೂ ಪ್ರಯೋಗದಲ್ಲಿದೆ. ಕನ್ನಡದಲ್ಲಿ ಇಲಾಖೆ. ಈಗ ಇದು ಕನ್ನಡ ಶಬ್ದದಷ್ಟೇ ಸ್ವಾಭಾವಿಕವಾಗಿ ಉಪಯೋಗವಾಗುತ್ತಿದೆ. ಆಡಳಿತದ ಒಂದು ಶಾಖೆ ಎಂದರ್ಥ.

**ಇಸ್ತಿಹಾರ್** ಇದು ಅರಬ್ಬಿಯ ಶಬ್ದ. ಅದರ ಮೂಲರೂಪ ಇಶ್ತಿಹಾರ್. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ಇಸ್ತಿಹಾರ್ ಎಂದಾಗಿ ಕನ್ನಡಕ್ಕೆ ಹಾಗೆಯೇ ಬಂದಿದೆ. ಇದಕ್ಕೆ ಬರಹದಲ್ಲಿ ಕಳುಹಿಸಿದ ಪ್ರಕಟನೆ, ನೋಟೀಸು ಎಂದರ್ಥ. ಏಲಂ ಇಸ್ತಿಹಾರ್ ಎಂದರೆ ಹರಾಜು ಮಾಡುತ್ತೇವೆ ಎಂಬ ನೋಟೀಸು ಎಂದು ಅರ್ಥ.

**ಇಸ್ತ್ರಿ** ಇದು ಪೋರ್ಚುಗೀಸ್ ಭಾಷೆಯ ಎಸ್ತಿರರ್ ಎಂಬ ಶಬ್ದದಿಂದ ಬಂದದ್ದು, ಹಿಂದೀ ಭಾಷೆಯ ಮೂಲಕ. ಶಾಖವಾಗಿರುವ ಉಕ್ಕಿನ ಉಜ್ಜುವ ಸಾಧನದಿಂದ ಬಟ್ಟೆಗಳನ್ನು ಅಚ್ಚುಕಟ್ಟಾಗಿ ಗರಿಗರಿ ಮಡಿ ಮಾಡುವುದು. ಇದೇ Iron ಮಾಡುವುದು. ಪಂಜಾಬಿ ಭಾಷೆಯಲ್ಲಿ ಸಂಸ್ಕೃತದ ಸಕಾರಾದಿ ಶಬ್ದಗಳೆಲ್ಲ ಇಕಾರಾದಿಯಾಗುತ್ತವೆ. Slate ಇಸ್ಲೇಟ್ ಆದ ಹಾಗೆ. ಸಂಸ್ಕೃತದ ಸ್ತ್ರೀ ಪಂಜಾಬಿ ಭಾಷೆಯಲ್ಲಿ ಇಸ್ತ್ರಿ ಆಗುತ್ತದೆ. ಹೀಗಾಗಿ ಪ್ರಯೋಗದಲ್ಲಿ ವಿನೋದ ನಡೆಯುವುದುಂಟು.

**ಇಸ್ಪೀಟು** ಈ ಶಬ್ದ ಇಂಗ್ಲಿಷಿನ Spade ಎಂಬ ಶಬ್ದದಿಂದ ಬಂದುದು. ಸಾಮಾನ್ಯವಾಗಿ ಇದು ಬಹುವಚನದಲ್ಲಿಯೇ ಉಪಯೋಗವಾಗುತ್ತದೆ. ಇಂಗ್ಲೀಷಿಗೆ ಸ್ಪಾನಿಷ್ ಭಾಷೆಯ espade ಎಂಬ ಶಬ್ದದ ಮೂಲಕ ಬಂತು. ಸ್ಪಾನಿಷ್ ಭಾಷೆಗೆ ಲ್ಯಾಟಿನ್ ಭಾಷೆಯ spatha ಎಂಬುದರಿಂದ ಬಂತು. ಆ ಭಾಷೆಗಳಲ್ಲಿ ಆ ಶಬ್ದಗಳಿಗೆ ಕತ್ತಿ, ಎರಡು ಅಲಗಿನ ಕತ್ತಿ ಎಂದು ಎರಡು ಅರ್ಥ.

ಈ ಆಟದಲ್ಲಿ ನಾಲ್ಕು ಬೇರೆ ಬೇರೆ ಬಣ್ಣದ ಎಲೆಗಳು (ಕಾರ್ಡುಗಳು) ಇರುತ್ತವೆ. ಅವು ಇಸ್ಪೀಟು, ಆಟೀನು, ಕಳಾವರ್ ಮತ್ತು ಡೈಮಂಡ್. ಹೀಗೆ ಈ ಆಟದ ಎಲೆಗಳ ಹಿಂದೆ ಉದ್ದವಾದ ಕತ್ತಿಯ ಗುರುತು ಇರುತ್ತಿತ್ತು. ಆದುದರಿಂದಲೇ ಇಸ್ಪೀಟು ಎಂಬ ಹೆಸರು ಬಂದಿದೆ. ಇಸ್ಪೀಟಿನ ಎಲೆಗಳಲ್ಲಿ ತಲೆಕೆಳಗಾಗಿರುವ ಹೃದಯದ ಚಿತ್ರದಂತೆ ಕಪ್ಪು ಬಣ್ಣದ ರಚನೆ ಇರುತ್ತದೆ. ಅದೇ ಇಸ್ಪೀಟು. ಕಳಾವರ್ ಎಂಬುದು ಇಂಗ್ಲಿಷಿನ Clover ಎಂಬ ಶಬ್ದದಿಂದ ಬಂದುದು. Clover ಎಂಬುದು ಮೂರು ಎಲೆಗಳನ್ನು ಹೊಂದಿದ ಒಂದು ಬಗೆಯ ಗಿಡ. ಕಳಾವರ್‌ನಲ್ಲಿ ಮೂರು ಕಪ್ಪು ಎಲೆಗಳಿರುತ್ತವೆ ಚಿತ್ತದಲ್ಲಿ. ಆಟೀನ್ ಎಂಬುದು Heart ಎಂಬುದರ ತದ್ಭವ. ಡೈಮಂಡ್ ಎಂಬುದು Adamant ಎಂಬ ಫ್ರೆಂಚ್ ಶಬ್ದವಾದರೂ ಗ್ರೀಕ್ ಭಾಷೆಯ Adamas ಎಂಬ ಶಬ್ದದಿಂದ ಇವೆರಡೂ ಕೆಂಪು ಎಂದಿದೆ.

**ಇಳಿ** ಕನ್ನಡದ ಅಕ್ಷರಗಳ ಕಾಗುಣಿತದಲ್ಲಿ ದೀರ್ಘದ ಗುರುತಿಗೆ ಏನು ಹೆಸರು ? ದ್ ಎಂಬುದು ವ್ಯಂಜನ. ದ್ +ಅ ಎಂಬುದು ದ್ ಕ್ಕೆ ತಲೆಕೊಟ್ಟು =ದ, ದ್ +ಆ ಎಂಬುದಕ್ಕೆ ದ್ ಕ್ಕೆ ತಲೆಕೊಟ್ಟಿನ ದೀರ್ಘ = ದಾ. ಈ ದೀರ್ಘಕ್ಕೆ ಕೆಲವು ಪ್ರದೇಶಗಳಲ್ಲಿ ಇಳಿ ಎಂದು ಹೇಳುತ್ತಾರೆ. ಅದೂ ಸರಿ.

**ಇಳುವರಿ** ಈ ಶಬ್ದದ ಮೂಲ ಇಳಿಪು - ಇಳಿಹು =ಇಳಿಸು ಎಂಬ ಅರ್ಥ. ಕೆಳಕ್ಕೆ ತರು, ಭಾರವನ್ನು ತೆಗೆದು ಕೆಳಗಿಡು ಎಂಬ ಅರ್ಥದ್ದು. ಈ ಶಬ್ದ ನಿಜವಾಗಿ ಕೃಷಿಗೆ ಸಂಬಂಧಿಸಿದ್ದು. ಒಂದು ಫಸಲಿನಿಂದ ಈ ಸಾರಿ ಎಷ್ಟು ಧಾನ್ಯ ಇಳಿಯಿತು ಎಂಬುದು ಅದರ ಅರ್ಥ. ತೆನೆಗಳನ್ನು ಇಳಿಹು =ಇಳಿಸುವುದು ತೆನೆ ಕಟಾವು ಮಾಡುವುದು. ಅದೇ **ಇಳಿವರಿ**. ಈ ಶಬ್ದ **ಇಳುವರಿ** ಎಂಬ ರೂಪದಲ್ಲಿಯೂ ಪ್ರಚಾರದಲ್ಲಿದೆ. ಈ ಶಬ್ದಕ್ಕೆ ವಿರುದ್ಧ ಶಬ್ದವಿಲ್ಲ. ಇನ್ನೊಂದು **ಇಳಿವರಿ** ಎಂಬ ಶಬ್ದವಿದೆ. ಇದು ಇಳಿ =ಕಡಮೆಯಾಗು ಎಂಬ ಅರ್ಥದ್ದು. ಈಗ ತರಕಾರಿಯ ಬೆಲೆ ಇಳಿದಿದೆ ಎಂಬ ವಾಕ್ಯವನ್ನು ನೋಡಿ. ಈ ಎರಡನೆಯ ಇಳಿವರಿಗೆ **ಹೆಚ್ಚುವರಿ** ಎಂಬುದು ವಿರುದ್ಧ ಶಬ್ದ. ಹುಣಸೆಯ ಹಣ್ಣಿಗೆ ನೀರು ಚಿಮುಕಿಸಿದರೆ ತೂಕ ಹೆಚ್ಚುವರಿಯಾಗುತ್ತದೆ. ಹೀಗೆ ಅದರ ಉಪಯೋಗ.

## ಈ

**ಈಡಾಡು** ಎಂದರೆ ಚೆಲ್ಲಾಡು, ಚಲ್ಲಾಪಿಲ್ಲಿಯಾಗಿ ಬೀಸಿಹಾಕು, ತೂರಾಡು ಎಂದರ್ಥ. ಈಡು +ಆಡು ಎಂಬ ಎರಡು ಶಬ್ದಗಳು ಸೇರಿ ಆಗಿದೆ ಇದು. ಈ ಶಬ್ದವನ್ನು ಆವೇಶದಿಂದ ಮಾಡುವ ಕಾರ್ಯಗಳಿಗೆ ಹೆಚ್ಚಾಗಿ ಅನ್ವಯಿಸುತ್ತಾರೆ. ಕೋಪ ಅದರ ಕಾರಣ. ಚೆಲ್ಲಾಡುವಿಕೆ ಉದ್ದೇಶ. **ಇಡು**ವುದರ ಭಾವ ಈಡು, +ಆಡು = ಈಡಾಡು.

**ಈರುಳ್ಳಿ** ಸರಿಯಾದ ಶಬ್ದ. ನ್ಯಾಯವಾಗಿ ಇದು ಉಳ್ಳಿ ಎಂಬ ಶಬ್ದಕ್ಕೆ ಈರ್ ಎಂದರೆ ನೀರ್ ಎಂಬುದು ಸೇರಿ ಆಗಿರುವ ಶಬ್ದ. ನೀರುಳ್ಳಿ ಎಂಬುದು ಪರ್ಯಾಯ ಶಬ್ದವಾಗಬಹುದು.

**ಈಲಿ** ಈಲಿ, ಈಲಿಕಾ ಸಂಸ್ಕೃತ ಶಬ್ದಗಳು. ಇದಕ್ಕೆ ಅರ್ಥ ಕತ್ತರಿಸುವ ಕತ್ತಿ. ಇದರಿಂದಲೇ ಕನ್ನಡದಲ್ಲಿ ತದ್ಭವವಾಗಿ ಈಳಿಗೆ, ಈಳಿಗೆಮಣೆ ಎಂಬ ಶಬ್ದಗಳು ಬಂದಿವೆ.

**ಈವರೆಗೆ** ಇದಕ್ಕೆ ಅರ್ಥ ಇಲ್ಲಿಯವರೆಗೆ. ವರೈ ಎಂಬ ಶಬ್ದ ತಮಿಳಿನ ರೂಪ. ಅದೆ ವರೆ ಎಂದಾಗಿದೆ ಕನ್ನಡದಲ್ಲಿ. ವರೆ +ಗೆ =ವರೆಗೆ. ಈವರಿವಿಗೆ ಎಂಬ ಪ್ರಯೋಗ ತಪ್ಪು.

**ಈ ವಿಚಾರ ಕೇಳಿಪಟ್ಟೆ** ಕನ್ನಡದಲ್ಲಿ ನಿಂತು ಕನ್ನಡದ ಕೆಲಸವನ್ನು ಅತ್ಯುತ್ತಮವಾಗಿ ನೆರವೇರಿಸಿದ ತಮಿಳು ಮಾತೃಭಾಷೆಯ ಕೆಲವರು ಈ ಬಗೆಯ ನುಡಿಗಟ್ಟನ್ನು ಪ್ರಯೋಗಿಸುತ್ತಿದ್ದರು. ಈಗಲೂ ತಮಿಳುನಾಡಿನಿಂದ ಬಂದು ಇಲ್ಲಿ ನೆಲಸಿರುವ ಕೆಲವರು ಈ ಬಗೆಯ ನುಡಿಗಟ್ಟನ್ನು ಉಪಯೋಗಿಸುತ್ತಾರೆ. ಕನ್ನಡದ ಜಾಯಮಾನಕ್ಕೆ ಈ ನುಡಿಗಟ್ಟು ಹೊಸದು. ಇನ್ನೂ ಹೊಸದಾಗಿಯೇ ಉಳಿದಿದೆ. ಅರ್ಥ, ಇನ್ನೊಬ್ಬನಿಂದ ತಿಳಿದೆ ಎಂದು.

**ಈರ್ಷ್ಯೆ** ಇದು ಸಂಸ್ಕೃತದಲ್ಲಿ ಈರ್ಷಾ ಮತ್ತು ಈರ್ಷ್ಯಾ ಎಂಬ ಎರಡೂ ರೂಪಗಳಲ್ಲಿ ದೊರಕುತ್ತದೆ. ಇದಕ್ಕೆ ಕರುಬುವುದು, ಹೊಟ್ಟೆಕಿಚ್ಚುಪಡುವುದು ಎಂದೂ ಅರ್ಥ. ಮತ್ತೊಬ್ಬರ ಅಭಿವೃದ್ಧಿಯನ್ನು ನೋಡಿ ಅಸೂಯೆ ಹೊಂದುವುದು. ಕನ್ನಡದಲ್ಲಿ ಪ್ರಯೋಗ ಕಡಿಮೆ. ಹೊಟ್ಟೆಕಿಚ್ಚು ಕನ್ನಡದಲ್ಲಿ ಹೆಚ್ಚು ಪ್ರಚಾರವುಳ್ಳದು.

# ಉ

**ಉಂಬುದು** ಇದು ಉಣ್ಣು ಧಾತುವಿನಿಂದ ಆಗುವ ರೂಪ. ಉಣ್ಣು + ಉದು = ಉಣ್ಬುದು. ಈ ಶಬ್ದವೇ ಮುಂದೆ ಉಂಬುದು ಎಂದಾಗುತ್ತದೆ. ಇದಕ್ಕೆ ಉಣ್ಣುವುದು, ಊಟ ಮಾಡುವುದು, ಅನುಭವಿಸುವುದು ಎಂದು ಅರ್ಥವಾಗುತ್ತದೆ.

**ಉಕ್ಕೇರು** ಎಂಬ ಶಬ್ದದಲ್ಲಿ ಎರಡು ಶಬ್ದಗಳು ಕೂಡಿವೆ. ಉಕ್ಕು + ಏರು. ಉಕ್ಕು ಎನ್ನುವುದಕ್ಕೆ ಮೂಲ ಉರ್ಕು. ಈ ಶಬ್ದಕ್ಕೆ ಉತ್ಸಾಹ, ಮೇಲಕ್ಕೆ ಹೊಮ್ಮುವಿಕೆ, ಏಳಿಗೆ, ಹಿಗ್ಗುವುದು ಎಂಬ ಅರ್ಥಗಳಿವೆ. ಏರು ಎಂದರೆ ಹೆಚ್ಚುವುದು. ಈ ಶಬ್ದಕ್ಕೆ ಮೂಲ ಏಱು ಎಂಬ ಹಳಗನ್ನಡದ ರೂಪ. ಆದುದರಿಂದ ಉಕ್ಕೇರು ಎಂದರೆ ಉತ್ಸಾಹವು ಹೆಚ್ಚಾಗುವುದು. ಅಭಿವೃದ್ಧಿ ಹೊಂದುವುದು ಎಂದರ್ಥ. ಈ ಶಬ್ದವನ್ನು ಕ್ರಿಯಾಪದವಾಗಿ ಹೆಚ್ಚಾಗಿ ಉಪಯೋಗಿಸುತ್ತಾರೆ. ನಾಮಪದವಾಗಿಯೂ ಉಪಯೋಗಿಸಬಹುದು.

**ಉಘೇ** ಸಾಮಾನ್ಯವಾಗಿ ಇದನ್ನು ಅನುಕರಣ ಶಬ್ದ ಎಂದು ಹೇಳುತ್ತಾರೆ. ಆದರೆ ಇಲ್ಲಿ ಮತ್ತೆ ಮತ್ತೆ ಆ ಶಬ್ದವನ್ನು ಘೋಷಿಸುವ ಚಿತ್ರ ಮೂಡುತ್ತದೆ. ಆದ್ದರಿಂದ ಮರಾಠಿಯ ಉಘಾಳಣೆ = ಮತ್ತೆ ಮತ್ತೆ ಹೇಳು, ಪುನರುಚ್ಚರಿಸು ಎಂಬ ಶಬ್ದದಿಂದ ಬಂದಿದ್ದರೂ ಬಂದಿರಬಹುದು ಎಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕನ್ನಡದಲ್ಲಿ ಜಯವಾಗಲಿ ಎಂದು ಅನೇಕ ಸಲ ಅನೇಕರು ಹೇಳುವ ಸಂದರ್ಭದಲ್ಲಿ ಇದು ಪ್ರಯೋಗವಾಗುತ್ತದೆ.

**ಉಚ್ಚಾರಣೆ** ಸಂಸ್ಕೃತದಲ್ಲಿ 'ಚರ್' ಎಂಬ ಧಾತುವಿನಿಂದ ಈ ಶಬ್ದ ವ್ಯುತ್ಪತ್ತಿ ಪಡೆಯುತ್ತದೆ. ಉತ್ + ಚಾರಣ = ಉಚ್ಚಾರಣ. ಈ ಸಂಸ್ಕೃತ ಶಬ್ದದಿಂದ ಕನ್ನಡದ ಉಚ್ಚಾರಣೆ ಎಂಬ ರೂಪ ಆಗುತ್ತದೆ. ಇಲ್ಲಿ ಕೆಲವರು ಬಳಸುವಂತೆ ಮಹಾಪ್ರಾಣದ ಉಪಯೋಗಕ್ಕೆ ಅವಕಾಶವಿಲ್ಲ. ಉಚ್ಛಾರಣೆ ತಪ್ಪು ಶಬ್ದ. ಉಚ್ಚಾರಣೆ ಎಂದರೆ ಬಾಯಿಯಲ್ಲಿ ಹೇಳುವುದು.

**ಉಚ್ಛಾಟನೆ** ಈ ಶಬ್ದದ ಸರಿಯಾದ ರೂಪ ಉಚ್ಚಾಟನೆ. ಇದಕ್ಕೆ ಸಂಸ್ಕೃತದಲ್ಲಿ ಅನೇಕ ಅರ್ಥಗಳಿವೆ. ೧. ಬುಡಸಹಿತ ಕಿತ್ತು ಹಾಕುವುದು, ೨. ಇರುವ ಜಾಗದಿಂದ ಬೇರೆಯ ಕಡೆಗೆ ಕಳುಹಿಸುವುದು, ಓಡಿಸುವುದು ೩. ಭೂತಗಳನ್ನು ಬಿಡಿಸುವುದು. ಸಂದರ್ಭವನ್ನು ಅನುಸರಿಸಿ ಇದನ್ನು ಉಪಯೋಗಿಸಬೇಕು. ಈ ಶಬ್ದದಲ್ಲಿ ಉದ್ + ಚಟ್ ಎಂಬ ಎರಡು ಭಾಗಗಳಿವೆ. ಮೇಲಕ್ಕೆ ಎಳೆದು ಭೇದಿಸುವುದು ಎಂದು ವಿವರವನ್ನು ತಿಳಿದಿರಬೇಕು.

**ಉಚಿತ** ಇದು ಅನೇಕ ಅರ್ಥಗಳು ಇರುವ ಶಬ್ದ. ೧. ಯೋಗ್ಯವಾದುದು, ತಕ್ಕದ್ದು ೨. ಸುಖವಾದುದು ೩. ಬಹುಮಾನದ ವಸ್ತು ೪. ಸಮಯಕ್ಕೆ ಸರಿಯಾದ ಕಾರ್ಯ. ೫. ಬಿಟ್ಟಿ, ಪುಕ್ಕಟೆ. ಇದು ವ್ಯಾಪಕವಾದ ಪ್ರಯೋಗಗಳುಳ್ಳ ಶಬ್ದ. ಬಿಟ್ಟಿ, ಪುಕ್ಕಟೆ ಎನ್ನುವುದು ಬಹುಮಾನ ಎಂಬ ಅರ್ಥದ ವ್ಯಾಪಕವಾದ ಬೆಳವಣಿಗೆ ಇರಬಹುದು.

**ಉಡಾಳ** ಇದಕ್ಕೆ ಸ್ತ್ರೀಲಿಂಗ ರೂಪ ಏನು? ಉಡಾಳ ಎಂಬುದು ಮರಾಠೀ ಭಾಷೆಯ ಶಬ್ದ. ಅದಕ್ಕೆ ತಿಂಡಿಪೋತ, ಉಂಡಾಡಿ, ಸೋಮಾರಿ ಮುಂತಾದ ಅರ್ಥಗಳಿವೆ. ಅದಕ್ಕೆ ಸ್ತ್ರೀಲಿಂಗ ಉಡಾಳಿ ಎಂದೇ ಉಪಯೋಗಿಸಬಹುದು.

**ಉಡುಗನೋರಂತೆ ತಿಂಬವಂ ಬಾಷ್ಮಳನೆನಿಕ್ಕು (ಭೂಮಿಕಾಂಡ -೧೦)** ಹೀಗೆಂದರೇನು? ಅಭಿನವ ಮಂಗರಾಜನ **ಅಭಿನವಾಭಿಧಾನಂ** ಎಂಬ ಗ್ರಂಥವು ಮುದ್ರಣವಾಗಿ ೪೨ ವರ್ಷಗಳಾಗಿವೆ. ಆ ಗ್ರಂಥದಲ್ಲಿ ಅನೇಕ ಪಾಠಗಳು ತಪ್ಪಾಗಿ ಮುದ್ರಣಗೊಂಡಿವೆ. ಆ

ಗ್ರಂಥವನ್ನು ಮತ್ತೆ ಪರಿಷ್ಕರಿಸಿ ಮುದ್ರಿಸಬೇಕಾದ ಆವಶ್ಯಕತೆಯಿದೆ. ಮೇಲೆ ಸೂಚಿಸಿರುವ ಸಾಲಿನಲ್ಲಿ ಅಂಥ ತಪ್ಪುಗಳಿವೆ. ಇಲ್ಲಿರುವ ಶಬ್ದಗಳಲ್ಲಿ ಉಡುಗು ತಪ್ಪು. ಅದು ಅಡಗು ಎಂದಿರಬೇಕು. ಬಾಷ್ಕಳ ಎಂಬುದು ತಪ್ಪು. ಅದು ಶೌಷ್ಕಳ ಎಂದಿರಬೇಕು. ಆಗ ಆ ಸಾಲಿನ ರೂಪ ಹೀಗಾಗುತ್ತದೆ: **ಅಡಗನೋರಂತೆ ತಿಂಬವಂ ಶೌಷ್ಕಳನೆನಿಕ್ಕು.** ಅಂದರೆ ಮಾಂಸವನ್ನು ತಿನ್ನುವವನು ಶೌಷ್ಕಳ ಎಂಬ ಹೆಸರನ್ನು ಹೊಂದುತ್ತಾನೆ. ಶೌಷ್ಕಳ ಎನ್ನುವ ಶಬ್ದ ಸರಿಯಾಗಿದೆ. ಇದರ ಸಂಸ್ಕೃತ ರೂಪ ಶೌಷ್ಕಲ. ಅಮರದಲ್ಲಿ **ಆಮಿಷಾಶೀತು ಶೌಷ್ಕಲಃ** ಎಂದಿದೆ. ಇದಕ್ಕೆ ಟೀಕೆಯನ್ನು ಬರೆಯುವವರಲ್ಲಿ ಒಬ್ಬ ಹೀಗೆ ಹೇಳಿದ್ದಾನೆ. **ಆಮಿಷಮಶ್ನಾತಿ ಇತಿ ಆಮಿಷಾಶೀ. ಶುಷ್ಕಾಣಾಂ ಮಾಂಸಖಂಡಾನಾಂ ಸಮೂಹಃ ಶೌಷ್ಕಂ. ವಲ್ಲೂರ ಸಂಘಾತ ಇತ್ಯರ್ಥಃ ತಲ್ಲಾತಿ ಆದತ್ತ ಇತಿ ಶೌಷ್ಕಲಃ.** ಇನ್ನೊಬ್ಬನು **ಮಾಂಸಭೋಜೀ ಶೌಷ್ಕಲಃ ಸ್ಯಾತ್.** ವಲ್ಲೂರ ಎಂದರೂ ಮಾಂಸ ಎಂದೇ ಅರ್ಥ. ಆದುದರಿಂದ ಮಾಂಸವನ್ನು ಕೊಡುವವನೂ, ತಿನ್ನುವವನೂ ಶೌಷ್ಕಲ. ಇದೇ ಸರಿಯಾದ ಶಬ್ದ. ಆ ಗ್ರಂಥವನ್ನು ಯಾರಾದರೂ ಪುಣ್ಯಾತ್ಮರು ಪುನಃ ಸಂಪಾದನೆ ಮಾಡಿ ಪ್ರಕಟಿಸಿದರೆ ಕನ್ನಡ ಭಾಷೆಗೆ ತುಂಬ ಪ್ರಯೋಜನವಾಗುತ್ತದೆ.

**ಉಡುಗೆ, ಉಡುಗೊರೆ** ಉಡುಗೆ =ಉಡುವ ಬಟ್ಟೆ, ತೊಡುಗೆ =ತೊಡುವ ಬಟ್ಟೆ ಮತ್ತು ಆಭರಣ. ಉಡುಗೊರೆ =ಮುಯ್ಯಿ ಮಾಡಲು ನೀಡುವ ಬಟ್ಟೆ, ವಸ್ತ್ರ. ಉಡುವ +ಕೊರೆ =ಉಡುಗೊರೆ. ಕೊಱೆ = ಬಟ್ಟೆ. ಈಗೀಗ ಬಟ್ಟೆ ಎಂಬ ಅರ್ಥ ಮಾಸಿಹೋಗಿ ಯಾವ ವಸ್ತುವನ್ನು ನೀಡಿದರೂ ಅದಕ್ಕೆ ಉಡುಗೊರೆ ಎನ್ನುತ್ತಾರೆ.

**ಉತ್ಕಂಠಿತ** ಎಂದರೆ ತಮಗೆ ಇಷ್ಟವಾದ ವಸ್ತುವನ್ನು ಪಡೆಯುವುದಕ್ಕಾಗಿ ತುಂಬ ತವಕ ಪಡುತ್ತಿರುವ ಎಂದು ಗುಣವಾಚಕದ ಅರ್ಥವಿದೆ. ಇದು ಹೆಚ್ಚಾಗಿ ಶೃಂಗಾರ ಸನ್ನಿವೇಶಗಳಲ್ಲಿ ಉಪಯೋಗವಾಗುವ ಶಬ್ದ. ನಾಯಿಕೆಯಿಂದ ವಿರಹ ಹೊಂದಿರುವ ನಾಯಕನ ವರ್ಣನೆಯಲ್ಲಿ ಬರುತ್ತದೆ. ಉತ್ಕಂಠಿತಾ ಎಂಬುದು ಸ್ತ್ರೀಯ ವರ್ಣನೆಯಲ್ಲಿ ಬರುವ ಸ್ತ್ರೀಲಿಂಗ ಶಬ್ದ. **ಸೀತಾ ಮುಖಾವಲೋಕನೋತ್ಕಂಠ ಚಿತ್ತಂ ವಿನಮಿತಮಿರ್ದುದು ಪರ್ದು ಉಪಶಾಂತಚೇತಸಂ** ಎಂಬ ವಾಕ್ಯವನ್ನು ನೋಡಿ.

**ಉತ್ಕರ್ಷ** ಇದು ಸಂಸ್ಕೃತ ಶಬ್ದ. ಇದಕ್ಕೆ ಅಭಿವೃದ್ಧಿ, ಅಧಿಕಗೊಳ್ಳುವಿಕೆ, ಮೇಲ್ಮೈ ಮುಂತಾದ ಅರ್ಥಗಳಿವೆ. ಉತ್ +ಕರ್ಷ =ಉತ್ಕರ್ಷ. ಇದು ವ್ಯುತ್ಪತ್ತಿ.

**ಉತ್ತೀರ್ಣ** ಎಂದರೆ ನದಿಯನ್ನು ದಾಟಿದ ಎಂದರ್ಥ. ಅದಕ್ಕೆ ಕಷ್ಟದಿಂದ ಪಾರಾದ ಎಂಬ ಅರ್ಥವೂ ಇದೆ. ತೀರ್ಣ ಎನ್ನುವುದು ತೃ ಎಂಬ ಧಾತುವಿನಿಂದ ಬಂದದ್ದು. ಅದಕ್ಕೆ ದಾಟು ಎಂದೇ ಅರ್ಥ. ಈ ಅರ್ಥ ವ್ಯಾಪಕವಾಗಿ ಪರೀಕ್ಷೆಯೆಂಬ ಕಷ್ಟದಿಂದ ಪಾರಾದ ಎಂದರೆ ಗೆದ್ದ ಎಂದರ್ಥ.

**ಉತ್ಥಾನ** ಈ ಸಂಸ್ಕೃತ ಶಬ್ದ ಅನೇಕಾರ್ಥಗಳನ್ನುಳ್ಳದ್ದು. ೧. ಉದಯ ೨. ಮೇಲಕ್ಕೇಳುವುದು *೩. ಗಾಢಯತ್ನ ೪. ಪರಾಕ್ರಮ ೫. ಸೈನ್ಯ ೬. ಯುದ್ಧ ೭. ಸಂತೋಷ ೮. ಪುಸ್ತಕ ೯. ಮಲವಿಸರ್ಜನೆ ೧೦. ಸತ್ತು ಮತ್ತೆ ಬದುಕುವುದು. ೧೧. ತಂತ್ರ, ಉಪಾಯ.* ಇದು ಮಾನವನು ಯಾವುದಾದರೂ ಧ್ಯೇಯವುಳ್ಳವನಾಗಿ ಪ್ರಗತಿ ಸಾಧಿಸುವುದನ್ನು ಸ್ಪಷ್ಟವಾಗಿ ತೋರಿಸುವ ಕಾರ್ಯ.

**ಉತ್ಪತ್ತಿ, ನಿಷ್ಪತ್ತಿ, ವ್ಯುತ್ಪತ್ತಿ.** ಉತ್ಪತ್ತಿ ಎಂದರೆ ಹುಟ್ಟುವಿಕೆ, ಇದಲ್ಲದೆ ೧. ಲಾಭ ೨. ಬೆಳೆ ೩. ಮಾಡಿದ ವಸ್ತು ೪. ಮೂಲ ಕಾರಣ ಎಂಬ ಅರ್ಥಗಳೂ ಇವೆ. **ಉತ್ಪದ್ಯತೇ ಅಸ್ಮಾತ್** ಅದರ ವಿವರಣೆ. ಇದರಿಂದ ಹುಟ್ಟುತ್ತದೆ ಎಂದು ಅರ್ಥ. ನಿಷ್ಪತ್ತಿ ಅಥವಾ ವ್ಯುತ್ಪತ್ತಿ ಎರಡು ಶಬ್ದಗಳಿಗೂ ಶಬ್ದಸಿದ್ಧಿ ಎಂಬ ವಿಶೇಷವಾದ ಅರ್ಥವಿದೆ. ಇದರಲ್ಲಿ ಧಾತು ಮತ್ತು

ಪ್ರಾತಿಪದಿಕಗಳಿಗೆ ಪ್ರತ್ಯಯವನ್ನು ಸೇರಿಸಿ ಹೇಳುವ ಪ್ರಕ್ರಿಯೆಯ ಸೂಚನೆಯಿದೆ. ಇದು ಶಬ್ದಶಾಸ್ತ್ರದ ಪರಿಚಯವನ್ನು ನಿರೀಕ್ಷಿಸುತ್ತದೆ. ಅದರಲ್ಲಿಯೂ ಪದದ ಅರ್ಥದ ವಿವರಣೆಯನ್ನು ಹೇಳಬೇಕಾಗುತ್ತದೆ. ನಿಸ್ + ಪದ ಇವುಗಳ ಸೇರುವಿಕೆಯಿಂದ ನಿಷ್ಪತ್ತಿ. ವಿ + ಉತ್ಪತ್ತಿ ಇವುಗಳ ಸೇರುವಿಕೆಯಿಂದ ವ್ಯುತ್ಪತ್ತಿ ಶಬ್ದಗಳಾಗುತ್ತವೆ. ಇದಕ್ಕೆ ವ್ಯಾಕರಣ ಸೂತ್ರಗಳಿವೆ, ಸಂಸ್ಕೃತ ವ್ಯಾಕರಣ ಶಾಸ್ತ್ರದಲ್ಲಿ. ಈ ಎರಡೂ ಶಬ್ದಗಳಿಗೆ ಈಗ ಆಧುನಿಕ ಭಾಷಾ ಶಾಸ್ತ್ರದಲ್ಲಿಯೂ ಪಾರಿಭಾಷಿಕವಾದ ಪ್ರಾಧಾನ್ಯವಿದೆ. ಶಬ್ದಗಳ ಹುಟ್ಟು, ಚರಿತ್ರೆ ಮತ್ತು ಅವುಗಳ ಅರ್ಥಗಳ ವ್ಯಾಪ್ತಿಯಲ್ಲಿ ಉಂಟಾಗುವ ಎಲ್ಲ ಬದಲಾವಣೆಗಳು ಇತರ ಭಾಷೆಗಳಿಂದ ಎರವಲಾಗಿ ಬಂದಿರುವ ಶಬ್ದಗಳು, ಅವುಗಳ ಪರ್ಯಾಯ ರೂಪಗಳು, ಅವುಗಳಿಗೆ ಕಾರಣಗಳು ಇತ್ಯಾದಿಗಳನ್ನು ತಿಳಿಸಿರುವ ವಿವರಣೆಯೇ ವ್ಯುತ್ಪತ್ತಿ. ಶಬ್ದಾರ್ಥ ಶಾಸ್ತ್ರದಲ್ಲಿ ಈ ಶಬ್ದಗಳಿಗೆ ಇನ್ನೂ ವ್ಯಾಪಕವಾದ ವಿವರಣೆಗಳಿವೆ. ಆದರೆ ಇಷ್ಟು ತಿಳಿದರೆ ಮುಂದೆ ಅವುಗಳನ್ನು ಅರ್ಥ ಮಾಡಿಕೊಳ್ಳಬಹುದು.

**ಉದಾಹರಣೆ, ನಿದರ್ಶನ** ಒಂದು ಭಾಷೆಯು ವ್ಯವಹಾರದಲ್ಲಿ ಉಪಯೋಗವಾಗುವ ರೀತಿಯನ್ನು ಕುರಿತ ವಿವರಣೆಗೆ ವ್ಯಾಕರಣ ಎಂದು ಹೇಳುತ್ತಾರೆ. ಶಬ್ದ ಸ್ವರೂಪ, ವಾಕ್ಯ ಸ್ವರೂಪ, ನುಡಿಗಟ್ಟು, ನಾಮಪದಗಳ ವಚನ, ಲಿಂಗ, ಕ್ರಿಯೆಯ ಕಾಲ ಮುಂತಾದ ವಿವರಗಳನ್ನು ತಿಳಿಸುವ ಗ್ರಂಥ ವ್ಯಾಕರಣ. ಇದನ್ನು ಅಭ್ಯಾಸ ಮಾಡದೆ ಭಾಷೆಯನ್ನು ಸರಿಯಾಗಿ ಉಪಯೋಗಿಸಲು ಬರುವುದಿಲ್ಲ. ಕನ್ನಡದ ವ್ಯಾಕರಣ ಎಂದರೆ ಕನ್ನಡ ಭಾಷೆಯ ಸರ್ವತೋಮುಖವಾದ ಪ್ರಯೋಗಗಳನ್ನು ಕುರಿತ ಮೂಲಭೂತವಾದ ವ್ಯಾಸಂಗಕ್ಕೆ ಸಹಾಯಕವಾದ ಗ್ರಂಥ. ಜನರ ಬಾಯಲ್ಲಿ ಕನ್ನಡವು ಆಡುವ ಆಡಿಸುವ ಬಗೆಯ ವಿವರಣೆಯ ಗ್ರಂಥ. ಶಬ್ದ ಸಾಧುತ್ವವನ್ನೂ ಅರ್ಥವತ್ತಾದ ಶಬ್ದಗಳನ್ನೂ ಪ್ರತಿಪಾದಿಸುವುದರಿಂದ ಅದಕ್ಕೆ ವ್ಯಾಕರಣ ಎಂದು ಹೆಸರು. **ವ್ಯಾಕ್ರಿಯಂತೇ ಅರ್ಥಾಯೇನ** ಎಂಬುದೂ ಸಂಸ್ಕೃತದ ವಿವರಣೆ.

ವ್ಯಾಕರಣದ ಸೂತ್ರಗಳು ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ತಿಳಿಸುವುದಕ್ಕೆ ನಿದರ್ಶನಪಡಿಸುವುದಕ್ಕೆ ಉದಾಹರಣೆಗಳನ್ನು ನೀಡುತ್ತಾರೆ. ಅದರಿಂದ ಸೂತ್ರಾರ್ಥ ಚೆನ್ನಾಗಿ ತಿಳಿಯಬರುತ್ತದೆ. ಇದಕ್ಕೆ ದೃಷ್ಟಾಂತ ಎಂಬುದು ಇನ್ನೊಂದು ಹೆಸರು. ಕೊನೆಯಲ್ಲಿ ಯಾವುದು ನಿಶ್ಚಯ ಪಡಿಸುತ್ತದೆಯೋ, ದೃಷ್ಟಿಗೆ ಗೋಚರವಾಗುವಂತೆ ಮಾಡುತ್ತದೆಯೋ ಅದೇ ದೃಷ್ಟಾಂತ. ಅದೇ ನಿದರ್ಶನ.

**ಉದ್ಗಾತೃ** ಇದು ಸಂಸ್ಕೃತ ಶಬ್ದ. ಯಾಗಾದಿಗಳಲ್ಲಿ ಸಾಮವೇದವನ್ನು ಗಾನ ಮಾಡುವವನು.

**ಉದ್ವಿಗ್ನ** ಇದು ಸಂಸ್ಕೃತ ಶಬ್ದ. ಇದು ಉದ್ವೇಗದಿಂದ ಆದ ಶಬ್ದ. ಉದ್ವೇಗ ಎಂದರೆ ಭಯ, ಗಾಬರಿ, ಅಧಿಕವಾದ ವೇಗಗಮನ. ಉದ್ವಿಗ್ನ ಎಂದರೆ ಭಯಗೊಂಡವನು, ತಳಮಳ ಹೊಂದಿದವನು, ದುಃಖಿತನಾದವನು ಎಂದು ಅರ್ಥವಾಗುತ್ತದೆ. ಈ ಶಬ್ದವನ್ನು ಗುಣವಾಚಕವಾಗಿಯೂ ಉಪಯೋಗಿಸಬಹುದು.

**ಉದ್ದೇಶ, ಉದ್ದಿಶ್ಯ** ಉದ್ದೇಶ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ಸ್ಥಳ, ಪ್ರದೇಶ, ಎತ್ತರವಾದ ಸ್ಥಳ, ನದಿಯ ದಡ. ೨. ಉಪದೇಶ ೩. ವಿವರಣೆ ೪. ವಿಷಯ, ಗುರಿ ಇತ್ಯಾದಿ.* ಕನ್ನಡದಲ್ಲಿ ಗುರಿ ಎಂಬ ಅರ್ಥವನ್ನೇ ಮುಖ್ಯವಾಗಿ ಉಪಯೋಗಿಸುವುದು ಹೆಚ್ಚು. ಉದ್ದಿಶ್ಯ ಎಂಬ ಶಬ್ದವನ್ನು ಸಂಸ್ಕೃತದಲ್ಲಿ ಮುಖ್ಯವಾಗಿ ಅಭಿಪ್ರಾಯ, ಗುರಿ ಎಂಬ ಅರ್ಥದಲ್ಲಿ ಪ್ರಯೋಗಿಸುತ್ತಾರೆ. ಕೆಲವು ವೇಳೆ ಅವ್ಯಯವಾಗಿ ಉಪಯೋಗಿಸುವುದೂ ಉಂಟು.

**ಉದ್ರೇಕ, ಉತ್** ಸಂಸ್ಕೃತದಲ್ಲಿ ಇದು ಒಂದು ಅವ್ಯಯ. ಶಬ್ದಗಳ ಹಿಂದೆ ಈ ಉತ್ ಸೇರಿದಾಗ *೧. ಪ್ರಶ್ನೆ ೨. ಸಂದೇಹ ೩. ವಿತರ್ಕ ೪. ಅತಿಶಯ ೫. ಮೇಲುಭಾಗ* ಎಂಬೀ ಅರ್ಥಗಳನ್ನು

ಸೂಚಿಸುವುದು. ಆದುದರಿಂದ ಉದ್ರೇಕ ಎಂದರೆ ೧. ಅತಿಶಯ, ಆಧಿಕ್ಯ ೨. ವೃದ್ಧಿ, ಬೆಳವಣಿಗೆ.

**ಉದ್ವೇಗ** ಎಂದರೆ ಹೆಚ್ಚಾದ ಗಾಬರಿ, ಭಯ, ಹೆದರಿಕೆ. ಇದಲ್ಲದೆ ಈ ಶಬ್ದಕ್ಕೆ ಚಿಂತೆ, ಕಷ್ಟ, ಹೆಚ್ಚಿದ ವೇಗ ಮುಂತಾದ ಅರ್ಥಗಳೂ ಇವೆ.

**ಉನ್ಮಾದ** ಎಂದರೆ ಹೆಚ್ಚಿದ ಮದದಿಂದ ಉಂಟಾದ ಚಿತ್ತಪಲ್ಲಟ, ಹುಚ್ಚು, ಭ್ರಮೆ.

**ಉನ್ಮೇಷ** ಸಂಸ್ಕೃತದ ಈ ಶಬ್ದ ಅರಳುವುದು, ತೆರೆಯುವುದು, ಅಗಲಿಸುವುದು ಎಂಬ ಅರ್ಥದಲ್ಲಿ ಉಪಯೋಗವಾಗುತ್ತದೆ. ಹೆಚ್ಚಾಗಿ ಕಣ್ಣು ತೆರೆಯುವುದಕ್ಕೆ ಅನ್ವಯವಾಗುತ್ತದೆ.

**ಉಪಕಾರ – ಪರೋಪಕಾರ** ಉಪಕಾರ ಎಂಬ ಶಬ್ದಕ್ಕೆ ಸಹಾಯ, ನೆರವು ಎಂದೇ ಅರ್ಥ. ಇದು ಸಾಮಾನ್ಯವಾಗಿ ದೊರಕುವುದು ಇತರರಿಗೇ. ಆದುದರಿಂದ ಪರೋಪಕಾರ ಎಂಬ ಶಬ್ದದಲ್ಲಿ ಪರ ಶಬ್ದ ನಿಜವಾಗಿ ಅನಾವಶ್ಯಕವಾದುದು. ಆದರೂ ಬಹು ಪ್ರಾಚೀನ ಕಾಲದಿಂದಲೂ ಅದು ಜತೆಯಾಗಿರುವಂತೆಯೇ ಆ ಶಬ್ದ ಉಪಯೋಗವಾಗುತ್ತಿದೆ. ಹಾಗೆಯೇ ಪರಪೀಡನ ಎಂಬ ಶಬ್ದದಲ್ಲಿಯೂ ಪರ ಶಬ್ದ ಪ್ರಯೋಗವಿದೆ. **ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ** ಎಂಬ ಪ್ರಸಿದ್ಧ ವಾಕ್ಯ ನೆನಪಿಗೆ ಬರುತ್ತದೆ. ಆದುದರಿಂದ ಉಪಕಾರ ಮಾಡುವ ಸಂದರ್ಭ ಬಂದಾಗಲೆಲ್ಲ ಪರೋಪಕಾರ ಶಬ್ದವನ್ನೂ ಉಪಯೋಗಿಸಬಹುದು. ಆದರೆ ತಾನೇ ಪರರಿಗೆ ಮಾಡಿದ ಉಪಕಾರವನ್ನು ನೆನೆಯಲೂ ಬಾರದು. ನೆನೆದರೂ ಪರ ಎಂಬ ಶಬ್ದವನ್ನು ಆಗ ಉಪಯೋಗಿಸಬಾರದು.

**ಉಪದ್ವ್ಯಾಪಿತನ ೧. ಉಪದ್ವ್ಯಾಪ ೨. ಉಪದ್ವ್ಯಾಪಿ** ಎಂಬ ಶಬ್ದಗಳು ಮರಾಠೀ ಭಾಷೆಯಿಂದ ಬಂದವು. ಇವುಗಳು ನೋಡುವುದಕ್ಕೂ ಉಚ್ಚಾರ ಮಾಡುವುದಕ್ಕೂ ಸಂಸ್ಕೃತ ಶಬ್ದಗಳಂತೆ ಕಾಣುತ್ತವೆ. ಆದರೆ ಸಂಸ್ಕೃತದಲ್ಲಿ ಈ ಶಬ್ದಗಳಿಲ್ಲ. ಈ ಶಬ್ದಗಳಿಗೆ ಮರಾಠಿಯಲ್ಲಿ ೧. ತರಲೆ, ಕುಚೋದ್ಯ, ಪೀಡೆ ೨. ಇನ್ನೊಬ್ಬರ ಕಾರ್ಯದಲ್ಲಿ ತಲೆ ಹಾಕುವವನು, ಫಲವಿಲ್ಲದ ಕೆಲಸ ಮಾಡುವವನು ಎಂದು ಅರ್ಥಗಳು ಬರುತ್ತವೆ. ಈ ಉಪದ್ವ್ಯಾಪಿಯನ್ನು ಆಮದು ಮಾಡಿ ಅದಕ್ಕೆ ಕನ್ನಡದ ತನ ಎಂಬ ಪ್ರತ್ಯಯವನ್ನು ಹಚ್ಚಿದ್ದಾರೆ. ಇದು ಕನ್ನಡದಲ್ಲಿಯೂ ಅದೇ ಅರ್ಥದಲ್ಲಿ ತುಂಬ ಪ್ರಚಾರದಲ್ಲಿರುವ ಶಬ್ದ. ಈಗಂತೂ ಅಂಥ ಜನರೂ ಅಷ್ಟೇ ಪ್ರಚಾರದಲ್ಲಿದ್ದಾರೆ.

**ಉಪನಯನ** ಎಂದರೆ ಹತ್ತಿರಕ್ಕೆ ಕರೆದುಕೊಂಡು ಹೋಗುವುದು. ವೇದಗಳನ್ನು ಕಲಿಯಲು ಬಾಲಕರನ್ನು ಗುರುವಿನ ಬಳಿಗೆ ಕಳಿಸುವುದು. ಇದನ್ನೇ ದ್ವಿಜರು ಮುಂಜಿ ಎನ್ನುತ್ತಾರೆ. ಇದು ಮುಂಜ ಎಂಬ ಹುಲ್ಲಿನಿಂದ ಮಾಡಿದ ಉಡಿದಾರ (ಕಟಿ ಸೂತ್ರವನ್ನು ಕಟ್ಟುವ ಕರ್ಮದಿಂದ ಬಂದ ಹೆಸರು) ದಕ್ಷಿಣ ಕನ್ನಡದಲ್ಲಿ ಇದನ್ನು **ನೂಲು ಮದುವೆ** ಎನ್ನುತ್ತಾರೆ.

**ಉಪನ್ಯಾಸಕ** ಸಂಸ್ಕೃತದಲ್ಲಿ ಉಪನ್ಯಾಸ ಎಂದರೆ ಮಾತನ್ನು ಪ್ರಾರಂಭಿಸುವುದು, ಸೂಚನೆ ನೀಡುವುದು, ಅರ್ಥ ವಿವರಣೆ, ವ್ಯಾಖ್ಯಾನ ಮಾಡುವುದು, ಭಾಷಣ ಮಾಡುವುದು. ಈ ಅರ್ಥವನ್ನು ಅನುಸರಿಸಿ ಕನ್ನಡದಲ್ಲಿ ಉಪನ್ಯಾಸಕ ಎಂಬ ಶಬ್ದವನ್ನು ಸೃಷ್ಟಿಸಿಕೊಂಡಿದ್ದಾರೆ. ನಮ್ಮ ಶಿಕ್ಷಣ ಪದ್ಧತಿ ಪ್ರಾರಂಭದಿಂದಲೂ ಇಂಗ್ಲೆಂಡಿನ ಪದ್ಧತಿಯನ್ನು ಅನುಸರಿಸಿದೆ. ಆದುದರಿಂದ ಇಂಗ್ಲೆಂಡಿನಲ್ಲಿ ಯಾವ ಹೆಸರುಗಳಿದ್ದವೋ ಅವಕ್ಕೆ ಸರಿಯಾದ ಶಬ್ದಗಳನ್ನು ಹುಡುಕುತ್ತಾ ಹೋಗಿದ್ದೇವೆ. Lecturer = ಉಪನ್ಯಾಸಕ. Tutor = ಅಧ್ಯಾಪಕ. ಈಚೆಗೆ Reader ಶಬ್ದ ಬಂತು. ಆಗ ವಾಚಕ ಶಬ್ದ ಹುಟ್ಟಿಕೊಂಡಿತು. Senior Reader ಬಂತು. ಇಲ್ಲಿ ಪ್ರವಾಚಕ ಬಂತು. ಕಾಲೇಜಿನಲ್ಲಿ ಪಾಠ ಮಾಡುವವರನ್ನೆಲ್ಲ ಪ್ರೊಫೆಸರ್ ಎಂದು ಕೆಲವೆಡೆ ಕರೆಯುತ್ತಾರೆ. ಸ್ತ್ರೀಯಾದರೆ ಉಪನ್ಯಾಸಿಕೆ, ಅಧ್ಯಾಪಿಕೆ, ವಾಚಿಕೆ, ಪ್ರವಾಚಿಕೆ. ಇವೆಲ್ಲ ಸಂಸ್ಕೃತದಂತೆ ಕಾಣುವುದರಿಂದ ಅವುಗಳನ್ನು ಕನ್ನಡವನ್ನಾಗಿಸಲು ಉಪನ್ಯಾಸಕಿ,

ಅಧ್ಯಾಪಕಿ, ವಾಚಕಿ, ಪ್ರವಾಚಕಿ ಎಂಬ ರೂಪಗಳೂ ರೂಢಿಗೆ ಬಂದಿವೆ. ಕನ್ನಡ ದೇಶದ ಎಲ್ಲ ವಿಶ್ವವಿದ್ಯಾನಿಲಯಗಳೂ ಸೇರಿ Vice Chancellor ರಿಂದ ಹಿಡಿದು Attender ವರೆಗೆ ಏನು ಹೆಸರಿಡಬೇಕೆಂಬುದನ್ನು ತೀರ್ಮಾನವನ್ನಾಗಿ ಮಾಡುವ ತನಕ ಈ ಗೊಂದಲ ಪರಿಹಾರವಾಗುವುದಿಲ್ಲ. ಈಚೆಗೆ ವಾಚಿಕೆ ಎಂಬ ಶಬ್ದಕ್ಕೆ ಇಂಗ್ಲಿಷಿನ Reader, ಪಠ್ಯಪುಸ್ತಕ ಎಂಬ ಅರ್ಥದಲ್ಲಿಯೂ ಗೌರವವನ್ನು ನೀಡಿ ಉಪಯೋಗಿಸುತ್ತಾರೆ.

**ಉಪನ್ಯಾಸಗೋಷ್ಠಿ** ಯಲ್ಲಿ ವಿದ್ವಾಂಸನಾದ ಒಬ್ಬ ವ್ಯಕ್ತಿಯು ತನ್ನ ವಿಶಿಷ್ಟ ಸಾಧನೆಯ ಕ್ಷೇತ್ರದಲ್ಲಿ ತಾನು ಕಂಡ ಸ್ವಾರಸ್ಯವನ್ನು ಕುರಿತು ದೃಷ್ಟಾಂತ ಪೂರ್ವಕವಾಗಿ ಭಾಷಣ ಮಾಡುತ್ತಾನೆ. ಅವನ ವಿಷಯ ಸಂಗ್ರಹ, ಸೂಕ್ಷ್ಮ ಸಂಶೋಧನೆ, ಆಳವಾದ ವಿದ್ವತ್ತು ಮತ್ತು ವ್ಯಾಪಕವಾದ ಶಾಸ್ತ್ರ ಪರಿಚಯ ಇವುಗಳ ಸಹಾಯದಿಂದ ಎಷ್ಟು ಸ್ವಾರಸ್ಯಕರವಾಗಿ ಭಾಷಣಕಾರನು ಮಾತನಾಡುತ್ತಾನೆ ಎಂಬುದು ಮುಖ್ಯವಾಗುತ್ತದೆ. ಈಗೀಗ ಸಂತೆಯ ಹೊತ್ತಿಗೆ ಮೂರುಮೊಳವನ್ನು ನೇಯುವವರೇ ಹೆಚ್ಚು. ಈ ಎಲ್ಲ ಸಭೆಗಳಿಗೂ ಚತುರರಾದ ವಿದ್ವಾಂಸರನ್ನು ಅಧ್ಯಕ್ಷರನ್ನಾಗಿ ಆರಿಸುವುದೇ ಸಂಪ್ರದಾಯ. ಎಲ್ಲವೂ ಗೋಷ್ಠಿಗಳೇ. ಗೋಷ್ಠಿ ಎಂದರೆ ಸಭೆ, ಕೂಟ, ಸಮ್ಮೇಳನ, ಒಡಗೂಡುವಿಕೆ.

**ಉಪಪತ್ತಿ** ಸಂಸ್ಕೃತದ ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಉಪಾಯ, ಯುಕ್ತಿ ೨. ಹೊಂದಿಕೆ, ೩. ಕಾರಣ ೪. ಲಾಭ ೫. ಸಹಾಯ, ಸಾಧನ. ಸಾಮಾನ್ಯವಾಗಿ ಕನ್ನಡದಲ್ಲಿ ಧನಸಹಾಯ. ಸಾಧನ ಎಂಬ ಅರ್ಥದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ಮನೆಯನ್ನು ಕಟ್ಟಿಸುವುದಕ್ಕೆ ಉಪಪತ್ತಿ ಬೇಕಲ್ಲ! ಎಂಬ ವಾಕ್ಯವನ್ನು ಪರಿಶೀಲಿಸಿ.

**ಉಪಸರ್ಗ** ವಿ. ಪ್ರ. ಸು. ಎಂಬ ಉಪಸರ್ಗಗಳು ಸಂಸ್ಕೃತದಲ್ಲಿ ಧಾತುವಿನ ಅರ್ಥವನ್ನು ಬದಲಾಯಿಸುತ್ತವೆ. ವಿ ಎಂಬ ಉಪಸರ್ಗ ಸೇರಿದರೆ ಒಂದು ಕಡೆ, ಬೇರೆಯಾಗಿ, ವಿರುದ್ಧವಾಗಿ, ವಿಶೇಷವಾಗಿ ಮುಂತಾಗಿ ಅರ್ಥವನ್ನು ಬದಲಾಯಿಸುತ್ತದೆ. ನೋಡಿ, ರಾಗ - ವಿರಾಗ. ಮಾಂಸ - ವಿಮಾಂಸ, ಯೋಗ - ವಿಯೋಗ. ಪ್ರ ಎಂಬ ಉಪಸರ್ಗವು ಸೇರಿದರೆ ಅಧಿಕವಾಗಿ, ಮೊದಲನೆಯದಾಗಿ, ಇತ್ಯಾದಿಯಾಗಿ ಬದಲಾವಣೆಯಾಗುತ್ತದೆ. ಗತಿ, ಗಮನ, ಆರಂಭ, ಉತ್ಪತ್ತಿ, ಸ್ಪಷ್ಟತೆ, ಚೆನ್ನಾಗಿ, ಶಕ್ತಿ ಇತ್ಯಾದಿ ಅರ್ಥಗಳನ್ನೂ ಕೊಡುವುದುಂಟು. ನೋಡಿ, ಪ್ರಕಥನ, ಪ್ರಕಲ್ಪನ, ಪ್ರಕಾಂಡ, ಪ್ರಕಾಶ, ಪ್ರಕೃತಿ, ಪ್ರಾಕೃತಿಕ ಇತ್ಯಾದಿ. ಸು ಎಂಬುದು ಒಳ್ಳೆಯದು, ಚೆನ್ನಾಗಿ ಮುಂತಾಗಿ ಅರ್ಥವನ್ನು ಬದಲಾಯಿಸುತ್ತದೆ. ನೋಡಿ, ಸುಕರ, ಸುಕನ್ಯಾ, ಸುಕೃತ, ಸುಚರಿತ, ಸುಜನ, ಇತ್ಯಾದಿ. ಸಂಸ್ಕೃತದಲ್ಲಿ ಅನೇಕ ಉಪಸರ್ಗಗಳಿವೆ. **ಉಪಸರ್ಗ:** ಸಂಸ್ಕೃತದಲ್ಲಿ ಅವ್ಯಯ (Indeclinables) ಗಳನ್ನು ಐದು ಬಗೆಯಾಗಿ ವಿಂಗಡಿಸುತ್ತಾರೆ.

೧. ಉಪಸರ್ಗ (Preposition)
೨. ಕ್ರಿಯಾವಿಶೇಷಣ (Adverb)
೩. ಸಮುಚ್ಚಯಾರ್ಥಕ ನಿಪಾತ (Conjunction)
೪. ಭಾವಾರ್ಥಕ ನಿಪಾತ (Interjection)
೫. ಪದಪೂರ್ಣಾರ್ಥ (Particles)

೧. ಉಪಸರ್ಗಗಳು ಧಾತುಗಳ ಆದಿಯಲ್ಲಿ ಸೇರುತ್ತವೆ. ಆಗ ಧಾತುವಿನ ಅರ್ಥ ಬದಲಾವಣೆ ಹೊಂದುತ್ತದೆ.
೨. ಕ್ರಿಯೆಯ ಸಮಯ, ಸ್ಥಳ ಮುಂತಾದುವುಗಳನ್ನು ತಿಳಿಸುವ ಅವ್ಯಯುಗಳು ಕ್ರಿಯಾವಿಶೇಷಣಗಳು.
೩. ಸಮುಚ್ಚಯಾರ್ಥಕ ವಾಕ್ಯಗಳನ್ನು ರಚಿಸುವಾಗ ಇವು ಪ್ರಯೋಗವಾಗುತ್ತವೆ.

೪. ವಿವಿಧ ಭಾವಗಳನ್ನು ಬೋಧಿಸುವಾಗ ಈ ಭಾವವಾಚಕ ನಿಪಾತಗಳು ಪ್ರಯೋಗವಾಗುತ್ತವೆ.

೫. ಪದಪೂರ್ಣಾರ್ಥಕ ನಿಪಾತಗಳು: ಖಲು, ಕಿಲ, ಮುಂತಾದ ಅರ್ಥವಿಲ್ಲದ ಶಬ್ದಗಳನ್ನು ಪದಪೂರಣಕ್ಕೂ ವಾಕ್ಯ ಪೂರಣಕ್ಕೂ ಉಪಯೋಗಿಸುತ್ತಾರೆ.

**ಉಪಯೋಗ – ಬಳಕೆ** ಉಪಯೋಗ - ಇದು ಸಂಸ್ಕೃತದ ಶಬ್ದ. ಇದಕ್ಕೆ ಆ ಭಾಷೆಯಲ್ಲಿ ೧) ಉಪಕಾರ, ೨) ಆಚರಣೆ, ೩) ಭೋಜನ, ೪) ಕಾರ್ಯಸಾಧನೆಗೆ ಅನುಕೂಲಕರ ಆಗಿರುವ ಎಂಬ ಅರ್ಥಗಳಿವೆ. ಕನ್ನಡ ಭಾಷೆಯಲ್ಲಿ ಪ್ರಯೋಜನ ಎಂಬ ಅರ್ಥದಲ್ಲಿ ಹೆಚ್ಚಾಗಿ ಪ್ರಯೋಗ ಮಾಡುತ್ತಾರೆ. ಪ್ರಯೋಗ ಮಾಡುವುದಕ್ಕೂ ಉಪಯೋಗ ಎಂದೇ ಹೆಸರು. ನೋಡಿ: ಬಳಕೆ

**ಉಪಹಾರ, ಉಪಾಹಾರ** ಎಂದಾಗಬೇಡವೇ? ಎಂದು ಒಂದು ಪ್ರಶ್ನೆ. ಸಂಸ್ಕೃತದಲ್ಲಿ 'ಉಪಹಾರ' ಎಂದರೆ ಕಾಣಿಕೆ, ಅರ್ಪಣೆ, ನೈವೇದ್ಯ ಎಂಬ ಎಲ್ಲ ಅರ್ಥಗಳಿವೆ. **'ಉಪಹಾರೋ ದೇವತೋದ್ದೇಶೇನ ಪ್ರದೇಯ ಓದನಾದಿ'** (ಅಮರ ೩ - ೧೯೫, ಟೀಕೆ). ಆದುದರಿಂದ ಉಪಹಾರದಲ್ಲಿ 'ಆಹಾರ'ವಿಲ್ಲ ಎಂದು ಅರ್ಥ ಮಾಡಬಾರದು. 'ಆಹಾರ'ವೆಂಬ ಶಬ್ದ ಅಲ್ಲಿ ಇಲ್ಲದಿದ್ದರೂ ಅದರ ಅರ್ಥ ಇದೆ. ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ನೀಡುವ ತಿಂಡಿ ತೀರ್ಥಗಳಿಗೂ ಈ ಶಬ್ದವನ್ನು ಉಪಯೋಗಿಸಬಹುದು. ಕನ್ನಡದಲ್ಲಿ ಹೀಗೆ ಮಾಡುತ್ತಿದ್ದಾರೆ.

**ಉಪಾದೇಯ** ಸ್ವೀಕರಿಸಲು ಯೋಗ್ಯವಾದ, ಗ್ರಾಹ್ಯವಾದ ಎಂಬ ಗುಣವಾಚಕದ ಅರ್ಥವಿದೆ ಈ ಸಂಸ್ಕೃತ ಶಬ್ದಕ್ಕೆ.

**ಉಪಾಧ್ಯಾಯ** ಈ ಶಬ್ದಕ್ಕೆ ಹಿಂದಿನ ಕಾಲದಲ್ಲಿ ವೇದ ವೇದಾಂಗಗಳನ್ನು ಜೀವನೋಪಾಯಕ್ಕಾಗಿ ಕಲಿಸುವವನು ಎಂದು ಅರ್ಥವಿತ್ತು. **ಯೋ ಅಧ್ಯಾಪಯತಿ ವೃತ್ಯರ್ಥಂ** ಎಂದು ಮನು ಹೇಳಿದ್ದಾನೆ. ಉಪಾಧ್ಯಾಯನ ಹೆಂಡತಿಗೆ ಉಪಾಧ್ಯಾಯೀ, ಉಪಾಧ್ಯಾಯಾನೀ ಎಂಬ ಶಬ್ದಗಳು ಸಲ್ಲುತ್ತವೆ. ಉಪಾಧ್ಯಾಯಿನಿ ಎಂಬ ಶಬ್ದ ಸಂಸ್ಕೃತದಲ್ಲಿಲ್ಲ. ಕನ್ನಡದಲ್ಲಿ ಉಪಾಧ್ಯಾಯ = ಶಿಕ್ಷಕ, ಉಪಾಧ್ಯಾಯಿನಿ = ಶಿಕ್ಷಕಿ ಎಂದೇ ಉಪಯೋಗಿಸುತ್ತಾರೆ. ಉಪಾಧ್ಯಾಯಿನಿ ಎಂಬುದು ಉಪಾಧ್ಯಾಯಾನೀ ಎಂಬುದರಿಂದ ಬಂದಿದೆ ಎಂದು ತಿಳಿದುಕೊಳ್ಳಬೇಕು. ಹೋಲಿಕೆಗಾಗಿ ಮೃಡಾನೀ, ಶಿವಾನೀ ಎಂಬ ರೂಪಗಳನ್ನು ನೋಡಿ. ಉಪಾಧ್ಯಾಯಿನಿ ಎಂಬುದು ವ್ಯಾಕರಣ ಶುದ್ಧವಲ್ಲದಿದ್ದರೂ ಪ್ರಯೋಗಶುದ್ಧ. **ಉಪಾಧ್ಯಾಯ** ತನ್ನ ಜೀವನಕ್ಕಾಗಿ ವೇದಗಳನ್ನು ವೇದಾಂಗಗಳನ್ನು ಕಲಿಸುವವನು. ಈ ಅರ್ಥದಿಂದ ಮುಂದೆ ಎಲ್ಲ ವಿಷಯಗಳನ್ನು ಕಲಿಸುವವನಿಗೂ ಈ ಶಬ್ದವೇ ಪ್ರಯೋಗಕ್ಕೆ ಬಂತು, Teacher ಎಂಬ ಅರ್ಥದಲ್ಲಿ.

**ಉಪಾಧಿ** ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ಧರ್ಮ ಚಿಂತನೆ ೨. ಸಂಸಾರದ ರಕ್ಷಣೆಗೆ ಗಮನವನ್ನು ಕೊಡುವ ವೃತ್ತಿ ೩. ತೋರಿಕೆ, ವಂಚನೆ, ಮೋಸ ೪. ಪ್ರಶಸ್ತಿ ೫. ಕಾರಣ ೬. ತೊಂದರೆ, ಅಡ್ಡಿ. ಶಾಸ್ತ್ರಾರ್ಥದಲ್ಲಿ ಈ ಶಬ್ದ ತುಂಬ ವ್ಯಾಪಕವಾದದ್ದು.*

**ಉಪಾಯನ** ಈ ಶಬ್ದಕ್ಕೆ *೧. ಹತ್ತಿರ ಹೋಗುವುದು ಎಂದರ್ಥ ಮುಖ್ಯವಾಗಿ. ವ್ಯಾಪಕವಾಗಿ ೨. ರಾಜನನ್ನು ನೋಡಲು ಹೋಗುವಾಗ ತೆಗೆದುಕೊಂಡು ಹೋಗಬೇಕಾದ ಕಾಣಿಕೆ. ೩. ಗೌರವಾರ್ಹರಿಗೆ ನೀಡುವ ಕಾಣಿಕೆ.* ಮನೆಯಲ್ಲಿ ಪೂಜೆ ವ್ರತಾದಿಗಳು ನಡೆದರೆ ಯಾರನ್ನಾದರೂ ಒಬ್ಬ ಗೌರವಾರ್ಹರನ್ನು ಕರೆದು ಅವರಿಗೆ ಹಣ್ಣು ಹಂಪಲುಗಳನ್ನು, ವಸ್ತ್ರ ದಕ್ಷಿಣಾದಿಗಳನ್ನು ನೀಡುವುದು ಎಂದು ವಿಶೇಷವಾದ ಅರ್ಥ.

**ಉಪೇಕ್ಷೆ** ಉಪ + ಈಕ್ಷಾ = ಉಪೇಕ್ಷಾ. ಇದು ಕನ್ನಡದಲ್ಲಿ ಉಪೇಕ್ಷೆ ಎಂದಾಗುತ್ತದೆ. ಇದಕ್ಕೆ

೧. ಉದಾಸೀನವಾಗಿರುವುದು ೨. ಅನಾದರ ೩. ತಿರಸ್ಕಾರ ೪. ತ್ಯಾಗ ಇತ್ಯಾದಿ ಅರ್ಥಗಳಿವೆ. ಎಲ್ಲವನ್ನೂ ಸಂದರ್ಭ ನೋಡಿ ಉಪಯೋಗಿಸಬೇಕು.

**ಉಪೋದ್ಘಾತ** ಉದ್ಘಾತ ಎಂದರೆ ಪ್ರಾರಂಭ, ಮೊದಲು ಮಾಡುವುದು. ಉಪ +ಉದ್ಘಾತ ಎಂದರೆ ಪೀಠಿಕೆ, ಪ್ರಸ್ತಾವನೆ. ಇತರ ಅರ್ಥಗಳು ಕನ್ನಡದಲ್ಲಿ ಅಷ್ಟು ಪ್ರಚಾರವಾಗಿಲ್ಲ.

**ಉಪ್ಪಿನಕಾಯಿ** ಶಬ್ದ ಅಸಂಬದ್ಧವಾಗಿದೆಯಂತೆ. ಬಾಲ್ಯದಿಂದಲೂ ಉಪ್ಪಿನಕಾಯಿ ರುಚಿಯನ್ನು ಅನುಭವಿಸಿದವರಿಗೆ ಊಟದ ಬಹು ಸ್ವಾರಸ್ಯವಾದ ವ್ಯಂಜನ ಉಪ್ಪಿನಕಾಯಿ. ರುಚಿಕರವಾಗಿರುವ ಅನೇಕ ಕಾಯಿಗಳಾದ ಮಾವು, ನೆಲ್ಲಿ, ನಿಂಬೆ, ದೊಡ್ಡ, ಅಮಟೆ, ಮೆಣಸು, ಮೆಣಸಿನಕಾಯಿ, ಹೆರಳೆ ಇತ್ಯಾದಿಗಳನ್ನು ಉಪ್ಪಿನ ರಕ್ಷಣೆ ಕೊಟ್ಟು ಅನೇಕ ತಿಂಗಳುಗಳವರೆಗೆ ಉಪಯೋಗಿಸುವ ಈ ಆಹಾರ ಪದಾರ್ಥದಲ್ಲಿ ಯಾವ ಅಸಂಬದ್ಧತೆಯೂ ಇಲ್ಲ. ಅದು ಉಪ್ಪಿನ ಗಿಡದಲ್ಲಿ ಬಿಡುವ ಕಾಯಿಯಲ್ಲ. **ಉಪ್ಪಿನ ರಕ್ಷಣೆ ಪಡೆದ ಕಾಯಿ.** ಬೆಟ್ಟದ ನೆಲ್ಲಿ ಸಮುದ್ರದ ಉಪ್ಪು ಎಲ್ಲಿಂದ ಎಲ್ಲಿಗೆ ಸಂಬಂಧ ಎಂದು ಒಬ್ಬ ವಚನಕಾರ ಕೇಳಿದ್ದಾನೆ.

**ಉಪ್ಪಿಟ್ಟು** ಉಪ್ಪಿಟ್ಟು ಶಬ್ದದಲ್ಲಿ ಉಪ್ಪು +ಹಿಟ್ಟು ಎಂಬ ಎರಡು ಶಬ್ದಗಳು ಸೇರಿವೆ. ಹಿಟ್ಟಿಗೆ ಉಪ್ಪು, ಕಾರ, ಒಗ್ಗರಣೆಗಳನ್ನು ಹಾಕಿ ತಯಾರಿಸುವ ಒಂದು ಬಗೆಯ ಉಪಹಾರ. ಹಿಟ್ಟಿನಂತಿರುವ ರವೆಯಿಂದಲೂ ಶ್ಯಾವಿಗೆಯಿಂದಲೂ ಇದನ್ನು ತಯಾರಿಸುತ್ತಾರೆ. ಸ್ವಾರಸ್ಯವೇನೆಂದರೆ ಇಲ್ಲಿ ಹಿಟ್ಟಿಗಿಂತ ಹೆಚ್ಚಾಗಿ ತರಿಯನ್ನೇ ಉಪಯೋಗಿಸುತ್ತಾರೆ. ಆದರೂ ಉಪ್ಪಿಟ್ಟು ಶಬ್ದದಲ್ಲಿ ಹಿಟ್ಟು ಸೇರಿಕೊಂಡಿದೆ. ಹಿಟ್ಟು ಶಬ್ದ ಹಳಗನ್ನಡದ ಪಿಟ್ಟು ಶಬ್ದದಿಂದ ಬಂದದ್ದು. ಉಪ್ಪು +ಪಿಟ್ಟು =ಉಪ್ಪಿಟ್ಟು.

**ಉಭಯತ್ರ** ಎಂಬ ಸಂಸ್ಕೃತ ಶಬ್ದಕ್ಕೆ ಎರಡು ಕಡೆಗಳಲ್ಲಿಯೂ ಎಂದು ಅವ್ಯಯದ ಅರ್ಥವಿದೆ. ಪತ್ರ ಬರೆಯುವವರೂ ಉಭಯತ್ರ ಕ್ಷೇಮ ಎಂದು ಯಾರೂ ಬರೆಯುವುದಿಲ್ಲ. ಉಭಯತ್ರ ಕ್ಷೇಮವಾಗಿರಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ ಎಂಬ ಅರ್ಥ ಬರುವಂತೆ ಬರೆಯಬಹುದು. ಇಲ್ಲದಿದ್ದರೆ ಒಂದು ಕಡೆಯ ಕ್ಷೇಮವನ್ನು ತಿಳಿಸಿ ಮತ್ತೊಂದು ಕಡೆಯ ಕ್ಷೇಮವನ್ನು ಕೇಳಿ ಪತ್ರಗಳನ್ನು ಬರೆಯಬಹುದು.

**ಉರುಫ್** ಇದು ಉರ್ಫ್ ಎಂಬ ಉರ್ದು ಶಬ್ದದಿಂದ ಬಂದಿದೆ. ಕನ್ನಡದಲ್ಲಿ ಇಲ್ಲವಾದರೆ, ಅಥವಾ, ಉಪನಾಮ, ಎರಡನೆಯ ಹೆಸರು ಎಂಬ ಅರ್ಥವನ್ನು ಹೊಂದಿದೆ. ದೂಸರೇ ನಾಮ್ ಎಂದು ಹಿಂದೀ. ಇಂಗ್ಲಿಷಿನಲ್ಲಿ ಇದೇ Alias.

**ಉವಾಚ** ಎನ್ನುವುದು ಸಂಸ್ಕೃತದ ಕ್ರಿಯಾಪದ. ಅದಕ್ಕೆ ಹೇಳಿದನು ಎಂದರ್ಥ. ಮಾತನಾಡಿದನು ಎಂದೂ ಹೇಳಬಹುದು. ವಚ್ (ಬ್ರೂ) ಧಾತುವಿನ ಭೂತಕಾಲದ ಪೂರ್ಣ ರೂಪ. ಈಚೆಗೆ ಹೇಳಿಕೆ ಎಂಬರ್ಥದಲ್ಲಿ ಪ್ರಯೋಗವನ್ನು ಪ್ರಾರಂಭಿಸಿದ್ದಾರೆ ಕೆಲವರು.

**ಉಸುಕು** ಎಂದರೆ ಮರಳು. ಈ ಶಬ್ದಕ್ಕೆ ಉಸುಗು, ಉಸುಬು ಎಂಬ ಪರ್ಯಾಯ ರೂಪಗಳೂ ಇವೆ. ಇದು ಕನ್ನಡದ ಶಬ್ದ.

## ಊ

**ಊಟೋಪಚಾರ** ಇದು ಅಪಶಬ್ದ. ಊಟ +ಉಪಚಾರ ಎಂಬಲ್ಲಿ ಒಂದು ಕನ್ನಡ ಮತ್ತೊಂದು ಸಂಸ್ಕೃತ ಶಬ್ದ. ಹೀಗೆ ಸಂಧಿ ಮಾಡಬಾರದೆಂಬುದು ವ್ಯಾಕರಣಕಾರರ ನಿಯಮ. ಆದರೆ ಅನೇಕ ವೇಳೆ ಶಬ್ದ ಸಾಮ್ಯದ ಮೇಲೆ ಶಬ್ದಗಳು ಸೃಷ್ಟಿಯಾಗುವುದುಂಟು. ಜನ +ಉಪಕಾರ

=ಜನೋಪಕಾರ. ಇಂಥ ಶಬ್ದಗಳ ಸಾಮ್ಯದಿಂದ ಊಟೋಪಚಾರ ಬಂದಿದೆ.

**ಊರೂರು** ಊರು + ಊರು = ಊರೂರು ಇದೂ ಲೋಪಸಂಧಿ. ಉ + ಊ ಹೀಗೆ ಸ್ವರಗಳು ಪರವಾದಾಗ ಪೂರ್ವಸ್ವರ ಲೋಪವಾಗಿದೆ. ಇದು ಸವರ್ಣದೀರ್ಘ ಸಂಧಿಯಲ್ಲ. ಸಂಸ್ಕೃತ ಶಬ್ದಗಳು ಸೇರುವಾಗ ಮಾತ್ರ ಸವರ್ಣದೀರ್ಘಸಂಧಿ ಕಂಡುಬರುತ್ತದೆ. ಉದಾ: ವಿದ್ಯಾ + ಅಭ್ಯಾಸ = ವಿದ್ಯಾಭ್ಯಾಸ. ಗುರು + ಉಪದೇಶ = ಗುರೂಪದೇಶ.

**ಊಷಾ** ಇದು ಉಷಾ ಎಂಬ ಶಬ್ದದ ಮತ್ತೊಂದು ರೂಪ: ಉಷಾ ಎಂಬುದು ಬಾಣಾಸುರನ ಮಗಳ ಹೆಸರು. ಉಷಃಕಾಲ ಎಂದರೆ ಬೆಳಕು ಹರಿಯುವ ಸಮಯ.

**ಊಳಿಗ** ಇದರ ಹಳಗನ್ನಡದ ರೂಪ ಊಟಿಗ. ಇದಕ್ಕೆ ಅರ್ಥ. ೧. ಕೆಲಸ, ಕಾರ್ಯ, ಉಪಜೀವನ. ಉದ್ಯೋಗ ೨. ಸೇವೆ, ಜೀತ. **ಊಟಿಗವಾದೆಡೆಗಳೊಳ್ ಝಾಳೆಯಂಗೊಳುತ್ತು** (ಸುಕುಮಾರ ಚರಿತ್ರೆ ೭.೩೫ ವಚನ) ಎಂಬಲ್ಲಿ ಕೆಲಸ. ಉದ್ಯೋಗ ಎಂದರ್ಥ. **ಸರಸ್ವತಿಯ ಊಳಿಗದಲ್ಲಿ ಮೇಲು ಕೀಳುಗಳಿಲ್ಲ** ಎಂಬಲ್ಲಿ ಸೇವೆ. ಊಳಿಗದವನು ಎಂದರೆ ಜೀತದ ಆಳು. ತಮಿಳು ತೆಲುಗು ಭಾಷೆಗಳಲ್ಲಿ ಈ ಶಬ್ದಕ್ಕೆ ಜ್ಞಾತಿ ಶಬ್ದಗಳಿವೆ.

# ಋ

**'ಋ'** ಎಂಬುದು ಒಂದು ಸ್ವರ. ಕನ್ನಡದಲ್ಲಿ 'ಋ' ಕಾರದ ಉಪಯೋಗವೇ ಇಲ್ಲ. ಆದರೆ ಸಂಸ್ಕೃತದ ಅನೇಕ ಶಬ್ದಗಳನ್ನು ನಾವು ಉಪಯೋಗಿಸುವುದರಿಂದ ಅದರ ಬಗ್ಗೆ ತಿಳಿವಳಿಕೆ ಇದ್ದರೆ ಒಳ್ಳೆಯದು. 'ಋ' ಸ್ವರವಾದುದರಿಂದ ವ್ಯಂಜನಾಕ್ಷರಗಳಿಗೆ ಅದನ್ನು ಸೇರಿಸಿದಾಗ ಅದು 'ಒತ್ತು' ಆಗುವುದಿಲ್ಲ. 'ಕ್' ಕಾರಕ್ಕೆ 'ಉ' ಸೇರಿಸಿದರೆ 'ಕು' ಆಗುತ್ತದೆ. 'ಋ' ಸೇರಿಸಿದರೆ 'ಕೃ' ಆಗುತ್ತದೆ. 'ಅಮೃತ' ಶಬ್ದದಲ್ಲಿ 'ಮೃ' ಒತ್ತಿನಿಂದ ಕೂಡಿದ ಅಕ್ಷರವಲ್ಲ. 'ಋ' ಅಕ್ಷರವು 'ಮೂರ್ಧನ್ಯಾಕ್ಷರ'. ಅಂದರೆ ಅದನ್ನು ಉಚ್ಚರಿಸುವಾಗ ನಾಲಗೆಯನ್ನು ಒಳನೆತ್ತಿಯ ಬಳಿಗೆ ತಗುಲಿಸಿ ಉಚ್ಚರಿಸಬೇಕು. ವ್ಯಂಜನವಾದ 'ರ' ಕಾರವೂ 'ಮೂರ್ಧನ್ಯಾಕ್ಷರ' ಇವೆರಡರ ಉಚ್ಚಾರಣಾಸ್ಥಳದ ಸಾಮೀಪ್ಯದಿಂದ ಸಾಮಾನ್ಯರಿಗೆ ಅವುಗಳ ಉಚ್ಚಾರಣೆಯಲ್ಲಿ ಸ್ಪಷ್ಟವಾದ ವ್ಯತ್ಯಾಸವು ಕಾಣುವುದಿಲ್ಲ. 'ಕೃಷ್ಣ' ಎನ್ನುವುದೇ ಆ ಶಬ್ದದ ಸರಿಯಾದ ರೂಪ. 'ಕ್ರುಷ್ಣ' ಎಂಬಂತೆ ಅದು ಒತ್ತಕ್ಷರದಿಂದ ಕೂಡಿದುದಲ್ಲ. 'ಅಮೃತ' ಎಂಬುದನ್ನು ಉಚ್ಚರಿಸುವಾಗ 'ಅಂ' ಎಂಬ ಉಚ್ಚಾರಣೆ ಸೇರಬಾರದು. ಹಾಗೆಯೇ 'ಗೃಹ', 'ಮಾತೃ', 'ಕೃಷ್ಣ' ಎನ್ನುವಾಗ 'ಗೃ', 'ತೃ', 'ಕೃ' - ಎಂಬ ಅಕ್ಷರಗಳನ್ನು ತೇಲಿಸಿ ಉಚ್ಚರಿಸಬೇಕು.

## ಋಗ್ವೇದ ಮುಂತಾಗಿರುವ ಶಬ್ದಗಳಾವುವು?

೧. **ಋಗ್ವೇದ.** ಈ ವೇದವು ದೇವತೆಗಳ ಸ್ತೋತ್ರರೂಪವಾಗಿದೆ. ಇದರಲ್ಲಿ ಸಂಹಿತೆ, ಬ್ರಾಹ್ಮಣ ಎಂದು ಎರಡು ಭಾಗಗಳಿವೆ. ಹತ್ತು ಋಷಿಗಳು ದ್ರಷ್ಟಾರರಾಗಿ ರಚಿಸಿರುವ ೧೦೨೮ ಸೂಕ್ತಗಳು ಇದರಲ್ಲಿವೆ. ಹಾಗೆಯೆ, ೨. **ಯಜುರ್ವೇದದಲ್ಲಿ** ಯಜ್ಞಮಂತ್ರಗಳೂ, ವಿಧಿವಾಕ್ಯಗಳೂ ಬ್ರಹ್ಮಮೇಧ, ಪಿತೃಮೇಧಗಳೂ, ತತ್ವವಿಚಾರಗಳೂ ಸೇರಿವೆ. ಇದರಲ್ಲಿ ಶುಕ್ಲ, ಕೃಷ್ಣ ಎಂದು ಎರಡು ಭಾಗಗಳಿವೆ. ೩. **ಸಾಮವೇದ.** ವೇದಗಳಲ್ಲಿ ಇದಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಇದರಲ್ಲಿ ಸಾವಿರ ಶಾಖೆಗಳಿದ್ದುವು ಎಂದು ಉಕ್ತಿ ಇದ್ದರೂ ಈಗ ಉಪಲಬ್ಧವಾಗಿರುವವು ಕೇವಲ ೧೩. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು 'ವೇದಗಳಲ್ಲಿ ನಾನು

ಸಾಮವೇದ' ಎಂದು ಹೇಳಿದ್ದಾನೆ. (ವೇದಾನಾಂ ಸಾಮವೇದೋಸ್ಮಿ) ೪. **ಅಥರ್ವವೇದ.** ಇದು ಮಿಕ್ಕ ಮೂರು ವೇದಗಳಿಗಿಂತ ಭಿನ್ನವಾದುದು. ಅನೇಕ ಅಸ್ತ್ರ ಪ್ರಯೋಗಗಳ ವಿಷಯವೂ ಇದರಲ್ಲಿ ನಿರೂಪಣಗೊಂಡಿದೆ. **ಆಯುರ್ವೇದ.** ಇದು ಆರೋಗ್ಯವನ್ನು ರಕ್ಷಿಸಿ ಆಯುಸ್ಸನ್ನು ಹೆಚ್ಚಿಸತಕ್ಕ ವೈದ್ಯ ವಿಷಯಗಳನ್ನು ನಿರೂಪಿಸುತ್ತದೆ. **ಧನುರ್ವೇದ.** ಇದು ಯಜುರ್ವೇದದ ಒಂದು ಭಾಗ. ಇದರಲ್ಲಿ ಧನುರ್ವಿದ್ಯೆಯ ವಿಚಾರಗಳನ್ನು ತಿಳಿಸಲಾಗಿದೆ. **ಗಂಧರ್ವವೇದ.** ಇದು ಸಂಗೀತ ಶಾಸ್ತ್ರವನ್ನು ನಿರೂಪಿಸುತ್ತದೆ. **ಸ್ಥಾಪತ್ಯವೇದ.** ಇದು ಶಿಲ್ಪಶಾಸ್ತ್ರವನ್ನು ಬೋಧಿಸುತ್ತದೆ. ಸಂಸ್ಕೃತದಲ್ಲಿ ಈ ಶಬ್ದವನ್ನು ಹೆಚ್ಚಾಗಿ ಉಪಯೋಗಿಸುವುದಿಲ್ಲ. ಸ್ಥಾಪತ್ಯ ಎಂದರೆ ಶಿಲ್ಪವಿದ್ಯೆ. ಸ್ಥಪತಿ ಎಂದರೆ ಶಿಲ್ಪಿ. ಸ್ಥಪತಿ ಎಂಬ ಶಬ್ದಕ್ಕೆ ರಾಜನ ಅಂತಃಪುರದ ಕಂಚುಕಿ ಎಂಬ ಅರ್ಥವೂ ಇದೆ.

**ಋತುಮತಿ** ಋತು ಎಂದರೆ ಹಿಂದುಗಳ ವರ್ಷದ ಆರನೆಯ ಒಂದು ಭಾಗ. ವರ್ಷದ ಆರು ಋತುಗಳಲ್ಲಿ ಯಾವುದಾದರೂ ಒಂದು. ಇದಲ್ಲದೆ ಈ ಶಬ್ದಕ್ಕೆ ಇನ್ನೂ ಇತರ ಅರ್ಥಗಳಿವೆ. *೧. ಒಂದು ತಿಂಗಳು. ೨. ಸ್ತ್ರೀಯರ ರಜಸ್ಸು, ಮುಟ್ಟು.* ಋತುಮತಿ ಎಂದರೆ ಮೈನೆರೆದ ಸ್ತ್ರೀ.

**ಋಷಿ** ಎಂದರೆ ಜ್ಞಾನದಿಂದ ಸಂಸಾರದ ಕೊನೆಯನ್ನು ಮುಟ್ಟಿದವನು. ತಪಸ್ಸಿನಿಂದ ಸಕಲ ಪಾಪಗಳನ್ನೂ ಕಳೆದುಕೊಂಡಿರುವವನು. ಇವರಲ್ಲಿ ಏಳು ವಿಧಗಳಿವೆ. *೧. ಬ್ರಹ್ಮರ್ಷಿ ೨. ದೇವರ್ಷಿ ೩. ಮಹರ್ಷಿ ೪. ಪರಮರ್ಷಿ ೫. ಕಾಂಡರ್ಷಿ ೬. ಶ್ರುತರ್ಷಿ ೭. ರಾಜರ್ಷಿ.*

# ೠ

**ೠ ಎಂಬ ಅಕ್ಷರವಿರುವ ಒಂದು ಶಬ್ದವನ್ನು ತಿಳಿಸಿ.**

**ಪಿತೄಣ** ಈ ಶಬ್ದದಲ್ಲಿ ಪಿತೃ + ಋಣ ಎಂಬ ಎರಡು ಶಬ್ದಗಳು ಸಂಧಿಯಾಗಿವೆ. ಋ + ಋ ಸೇರಿದರೆ ಎರಡೂ ಸ್ವರಗಳಾದುದರಿಂದ ಅದು ಸವರ್ಣದೀರ್ಘ ಸಂಧಿ. ಶಬ್ದ ಪಿತೄಣ. ಆದರೆ ವ್ಯಾಕರಣಕಾರರು ಈ ಶಬ್ದವನ್ನು ಪಿತೃಋಣ ಎಂದೂ ಬರೆಯಬಹುದೆಂದು ಅವಕಾಶವನ್ನು ನೀಡಿದ್ದಾರೆ.

# ಎ

**ಎಂಡನ್ (Emden)** ಕಳೆದ ಎರಡನೆಯ ಮಹಾಯುದ್ಧದಲ್ಲಿ (೧೯೩೯-೧೯೪೫) ಮದ್ರಾಸಿನ ಸಮೀಪಕ್ಕೆ ಎಂಡನ್ ಎಂಬ ಜರ್ಮನಿಯ ಭಾರಿ ಹಡಗು ಬಂದಿತ್ತು. ಅದು ಒಂದೇ ಒಂದು ಫಿರಂಗಿಯ ಗುಂಡನ್ನು ಸಮುದ್ರ ತೀರಕ್ಕೆ ತಗಲುವಂತೆ ಹೊಡೆದಿತ್ತು. ಆಗ ಮದ್ರಾಸಿನ ಜನರೆಲ್ಲ ತಮ್ಮ ಮನೆ ಮಠಗಳನ್ನು ಅಲ್ಪ ಬೆಲೆಗೆ ಮಾರಿ ಬೆಂಗಳೂರಿಗೆ ಬಂದು ಸೇರಿಕೊಂಡರು. ಎಂಡನ್ ಎಂಬುದು ಆಗ ಭಾರತದಲ್ಲಿ ಎಲ್ಲ ಭಾಷೆಗಳಲ್ಲಿ ಪ್ರಚಾರವಾದ ಶಬ್ದ. ಇದಕ್ಕೆ ಭಯಂಕರವಾದ, ಬಹಳ ಅಪಾಯಕರವಾದ ಎಂದು ಅರ್ಥ. ಈಗ ಈ ಕತೆ ಮರೆತುಹೋಗಿದೆ. ತುಂಬ ದಪ್ಪಗಿರುವವರಿಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಆದರೆ ಈ ಶಬ್ದಕ್ಕೆ ಇನ್ನೂ ಪ್ರಾಚೀನವಾದ ಚರಿತ್ರೆಯಿದೆ. ೧೯೧೪ರಲ್ಲಿ ಮೊದಲನೆಯ

ಮಹಾಯುದ್ಧ ನಡೆಯುತ್ತಿದ್ದಾಗ (೧೯೧೪-೧೯೧೮) ಆಸ್ಟ್ರೇಲಿಯದ ಸಿಡ್ನಿ ಎಂಬ ಹಡಗು ಕೊಕೋಸ್ ದ್ವೀಪದ ಬಳಿ ಜರ್ಮನಿಯ ಎಂಡೆನ್ ಎಂಬ ಹಡಗನ್ನು ಮುಳುಗಿಸಿ ಬಿಟ್ಟಿತು. ಅಂದಿನಿಂದ ಆಸ್ಟ್ರೇಲಿಯ ದೇಶದ ಸೈನಿಕರಲ್ಲಿ ಒಂದು ಹೊಸ ಶಬ್ದಪುಂಜ ಜಾರಿಗೆ ಬಂತು. Didn't you sink the Emden. ಯಾರಾದರೂ ಬಹಳ ಅಹಂಕಾರವನ್ನೋ ಗರ್ವವನ್ನೋ ತೋರಿಸಿದರೆ ಅಂಥವರಿಗೆ ಈ ಪ್ರಶ್ನೆಯನ್ನು ವ್ಯಂಗ್ಯವಾಗಿ ಕೇಳಲಾಗುತ್ತಿತ್ತು. ನೀನು ಮಹಾಪರಾಕ್ರಮಿಯಲ್ಲವೆ ? ಎಂಬುದು ಅದರ ಅರ್ಥ.

**ಎಂತಲೆ** ಈ ಶಬ್ದ ರೂಪದ ಬಗ್ಗೆ ಸ್ವಲ್ಪ ವಿವರಣೆಯನ್ನು ನೀಡಬೇಕು. ಎನ್ನು ಎಂಬ ಧಾತುವಿನಿಂದ ಎನ್ನುತ್ತ ಎಂಬ ರೂಪ ಸಾಧಿತವಾಗುತ್ತದೆ. ಅದಕ್ಕೆ ಅಲು ಪ್ರತ್ಯಯ ಸೇರಿದರೆ ಎನ್ನುತ್ತಲು. ಆ ರೂಪಕ್ಕೆ ಎ ಪ್ರತ್ಯಯ ಸೇರಿದಾಗ ಅದು ಎನ್ನುತ್ತಲೆ ಎಂದಾಗುತ್ತದೆ. ಆ ಶಬ್ದದ ಸಂಕ್ಷಿಪ್ತ ರೂಪ ಎಂತಲೆ. ಇದು ಶಿಷ್ಟರೂಪವಾಗಿ ಪ್ರಯೋಗವಾಗುತ್ತದೆ. ಅನ್ನು ಎಂಬ ಧಾತುವಿನಿಂದ ಹೀಗೆಯೇ ಅಂತಲೆ ಎಂದೂ ಆಗುತ್ತದೆ. ಇಲ್ಲಿಯೂ ಅವಧಾರಣೆಯ ಎ ಪ್ರತ್ಯಯ ಸೇರಿದೆ ಎಂದರ್ಥ. ನೋಡಿ ಅದುವೆ.

**ಎಂದರೆ, ಯೆಂದರೆ** ಈ ಎರಡರಲ್ಲಿ ಯಾವುದು ಸರಿ ?

ಎನ್ನು ಎಂಬುದು ಒಂದು ಧಾತು. ಇದಕ್ಕೆ ಒಂದು ವೇಳೆ ಎಂಬ ಅರ್ಥವನ್ನು ಕೊಡುವ ಅರೆ ಎಂಬ ಪ್ರತ್ಯಯವನ್ನು ಹತ್ತಿಸಿದರೆ, ಎಂದರೆ ಎಂದಾಗುತ್ತದೆ. ಕೆಲವು ವೇಳೆ ಅಡೆ ಎಂಬ ಪ್ರತ್ಯಯ ಸೇರುತ್ತದೆ. ಆಗಲೂ ಅದೇ ಅರ್ಥ ಬರುತ್ತದೆ. ಎಂದಡೆ, ಬಂದಡೆ. ಈ ರೂಪವನ್ನು ನಾವು ಕಾವ್ಯಗಳಲ್ಲಿ ಕಾಣಬಹುದು. ಒಂದು ವಾಕ್ಯದಲ್ಲಿ 'ನೀನು ಏನು ಹೇಳಿದೆಯೆಂದರೆ' ಎಂಬ ಭಾಗವಿದ್ದರೆ ಅಲ್ಲಿ ಹೇಳಿದೆ + ಎಂದರೆ ಎಂಬ ಎರಡು ಶಬ್ದಗಳು ಸೇರಿ ಹೇಳಿದೆಯೆಂದರೆ ಎಂದಾಗುತ್ತದೆ. ಅಲ್ಲಿ ಯಕಾರ ಆಗಮವಾಗಿದೆ ಎಂದು ಅರ್ಥ. **ಯೆಂದರೆ** ಎಂಬುದನ್ನು ಸ್ವತಂತ್ರವಾಗಿ ಉಪಯೋಗಿಸಲು ಆಗುವುದಿಲ್ಲ.

**ಎಕ್ಕ** ಎಂಬುದು ಏಕ ಎಂಬ ಸಂಸ್ಕೃತದ ತದ್ಭವ. ಹಿಂದಿಯಲ್ಲಿ ಎಕ್ಕಾ, ಎಕ್ಕೇ ಎಂಬ ಶಬ್ದಗಳಿವೆ. **ದ್ವಾಕ್ಕೆ** ಸಮಾನವಾದ **ದುಕ್ಕಾ** ಎಂಬುದು ಕನ್ನಡದ **ದುಗ** ಕ್ಕೆ ಸಂಬಂಧಿಸಿದುದು. ಇಂಗ್ಲಿಷಿನಲ್ಲಿ ಇದು ACE ಎಂದಿದೆ. ಇದು ಬಹಳ ಮುಖ್ಯವಾದ ಎಲೆ; ಇಸ್ಪೀಟಾಟದ ಎಲೆ.

**ಎಡಬಿಡಂಗಿ** ಇದು ತುಂಬ ಅರ್ಥವತ್ತಾದ ಶಬ್ದ. ಆದರೆ ಅದರ ವ್ಯುತ್ಪತ್ತಿಯನ್ನು ನಿರ್ಧಾರವಾಗಿ ಹೇಳುವಂತಿಲ್ಲ. ಅರ್ಥ ಮಾತ್ರ ನಿರ್ದಿಷ್ಟ. ಇದು ಒಬ್ಬ ವ್ಯಕ್ತಿ ತಾನಿರುವ ಸ್ಥಿತಿಯನ್ನು ಬದಲಾಯಿಸಲಾರದ ರೀತಿಯಲ್ಲಿರುವುದನ್ನು ಸೂಚಿಸುತ್ತದೆ. ಆ ಕಡೆಗೂ ಇಲ್ಲ; ಈ ಕಡೆಗೂ ಇಲ್ಲ. ಒಂದು ತಟಸ್ಥ ಸ್ಥಿತಿಯಲ್ಲಿರುವವನು ಎಂದರ್ಥ. ಎಡೆ +ಬಿಡು =ಸ್ಥಳವನ್ನು ಬಿಟ್ಟು ದೂರ ಸರಿ ಎಂದು ಅರ್ಥ ಕೊಡಬಹುದು. ಅಂಗಿ ? ಇದು ಏನು ? ಅನುಮಾನವೇ ತೀರ್ಮಾನ. **ಕೋಡಂಗಿ** ಶಬ್ದದ ಹಾಗೆ.

**ಎಡವಟ್ಟು** ಈ ಕನ್ನಡ ಶಬ್ದಕ್ಕೆ 'ಕ್ರಮ ತಪ್ಪಿದ್ದು' ಎಂದರ್ಥ. ಎಡವಟ್ಟಿಗೆ ಬಿದ್ದದ್ದು. ಪಡು = ಬೀಳು, ಮಲಗು. ಬಲಗಡೆಗೆ ಹೋಗಬೇಕಾದದ್ದು ಕ್ರಮ. ಅದು ತಪ್ಪಿದರೆ ಅದು ಎಡವಟ್ಟು. ಎಡ + ಪಡು ಈ ಎರಡೂ ಸೇರಿ ಬಳಿಕ ನಾಮಪದವಾಗಿದೆ.

**ಎಡಪಂಥೀಯ - ಬಲಪಂಥೀಯ** ಈ ಶಬ್ದಗಳು ಇಂಗ್ಲಿಷ್ ಭಾಷೆಯ Leftist, Rightist ಎಂಬ ಶಬ್ದಗಳ ಕನ್ನಡ ಅನುವಾದ. ಇದು ಮುಖ್ಯವಾಗಿ ರಾಜಕೀಯ ಪಂಗಡಗಳಿಗೆ ಅನ್ವಯಿಸುವ ಶಬ್ದಗಳು. ಇಂದು ಎಡಪಂಥೀಯ ಶಬ್ದವನ್ನು ಸಮಾಜವಾದಿಗಳಿಗೂ ಕಮ್ಯೂನಿಸ್ಟರಿಗೂ ಅನ್ವಯಿಸುತ್ತಾರೆ. ಒಂದೊಂದು ಪಕ್ಷಗಳಲ್ಲಿಯೂ ಎಡಪಂಥದವರೂ ಬಲಪಂಥದವರೂ ಇರಬಹುದು. ಆಗ ಯಾರು ಪ್ರಗತಿಪರರಾಗಿರುತ್ತಾರೋ ಅವರನ್ನು

ಎಡಪಂಥೀಯರೆಂದೂ ಇತರರನ್ನು ಬಲಪಂಥೀಯರೆಂದೂ ಕರೆಯುತ್ತಾರೆ. ಎಲ್ಲ ದೇಶಗಳ ವಿಧಾನ ಸಭೆಗಳಲ್ಲಿ ಪ್ರಗತಿಪರರಾದವರು ಸಭಾಧ್ಯಕ್ಷನ ಎಡಗಡೆಯ ಭಾಗದಲ್ಲಿ ಕುಳಿತುಕೊಳ್ಳುತ್ತಾರೆ. ಆದುದರಿಂದ ಈ ಹೆಸರು ಬಂದಿದೆ. ಈ ಪದ್ಧತಿ ಪ್ರಾರಂಭವಾದುದು ೧೭೮೯ರಲ್ಲಿ, ಫ್ರೆಂಚ್ ನ್ಯಾಷನಲ್ ಅಸೆಂಬ್ಲಿಯಲ್ಲಿ. ತೀವ್ರಗಾಮಿಗಳು ಎಡಪಂಥೀಯರು. ಮಂದಗಾಮಿಗಳು ಬಲ ಪಂಥೀಯರು.

**ಎಡರು-ತೊಡರು** ಇದೊಂದು ಕನ್ನಡದ ಜೋಡಿ ಶಬ್ದ. ಎಡರ್, ಎಡರು ಎಂದರೆ ತೊಂದರೆ, ಅಡ್ಡಿ, ಆತಂಕ, ತೊಡಕು. ತೊಡರ್, ತೊಡರು ಎಂದರೆ ಅಡಚಣೆ. ಎರಡು ಶಬ್ದಗಳಿಗೂ ಒಂದೇ ಅರ್ಥವಿರುವುದರಿಂದಲೂ ಪ್ರಾಸಶಬ್ದಗಳಾಗಿರುವುದರಿಂದಲೂ ಜನರು ಹೆಚ್ಚಾಗಿ ಜೋಡಿ ಶಬ್ದವಾಗಿ ಉಪಯೋಗಿಸುತ್ತಾರೆ.

**ಎತ್ತಿದ ಕೈ** ಎತ್ತಿದ ಕೈ ಎಂಬುದು ಒಂದು ನುಡಿಗಟ್ಟು. ಯಾರಾದರೂ ನಾಲ್ಕಾರು ಜನರ ಮುಂದೆ 'ಈ ಕೆಲಸವನ್ನು ಯಾರು ಮಾಡುತ್ತೀರಿ?' ಎಂದು ಪ್ರಶ್ನಿಸಿದರೆ ಯಾರೋ ಕೆಲವರು ಮಾತ್ರ ತಮ್ಮ ಕೈಯನ್ನು ಎತ್ತುತ್ತಾರೆ. ಅವರೇ ಎತ್ತಿದ ಕೈ. ಅಂದರೆ ಯಾವುದಾದರೂ ಕಾರ್ಯದಲ್ಲಿ ಅವರು ಸಮರ್ಥರೂ ದಕ್ಷರೂ ಆದ ವ್ಯಕ್ತಿ ಎಂದರ್ಥ. ಎತ್ತಿದ ಕಾಲು, ಎತ್ತಿದ ತಲೆ ಇತ್ಯಾದಿ ನುಡಿಗಟ್ಟುಗಳಿಲ್ಲ. ಆದುದರಿಂದ, ತಿಳಿವಳಿಕೆಯಿರುವುದರಿಂದ ಸದಾ ಸಿದ್ಧವಾಗಿರುವವರು, ಪ್ರಮುಖರು, ಮುಂದಾಳು ಎಂದು ಅರ್ಥಪೂರ್ಣವಾಗುತ್ತದೆ. ಎತ್ತಿದ ಕೈ ಎಂಬುದಕ್ಕೆ ಮತ್ತೊಂದು ಅರ್ಥವೂ ಇದೆ. ಎತ್ತಿ ಆಡಿಸಿದ ಕೈ, ಮಗುವಾಗಿದ್ದಾಗ ಯಾರನ್ನಾದರೂ ಹೀಗೆ ಪ್ರೀತಿಯಿಂದ ಎತ್ತಿಕೊಂಡು ಆಟವಾಡಿಸಿದ್ದರೆ, ಮುದ್ದು ಮಾಡಿದ್ದರೆ, ಅದೂ ಎತ್ತಿದ ಕೈ ಆಗುತ್ತದೆ. ಹರಿಶ್ಚಂದ್ರ ಕಾವ್ಯದಲ್ಲಿ ರೋಹಿತಾಶ್ವನ ಹೆಣದ ಬಳಿನಿಂತು ಚಂದ್ರಮತಿ **ಎತ್ತಿದ ಕೈಯನು ಕೆತ್ತಿದೆ ಮಗನೆ** ಎಂದು ಅಳುತ್ತಾಳೆ.

**ಎತ್ತು, ಹಸು** ಪುಲ್ಲಿಂಗ ಸ್ತ್ರೀಲಿಂಗಗಳನ್ನೂ ನಪುಂಸಕ ಲಿಂಗವನ್ನೂ ಗುರುತಿಸುವುದು ಹೇಗೆ? ಎಂಬ ಪ್ರಶ್ನೆಗೆ ಸಂಸ್ಕೃತ ಭಾಷೆಯಲ್ಲಿರುವ ಸಿದ್ಧಾಂತ ಕೌಮುದೀ ಗ್ರಂಥಕ್ಕೆ ವಾಸುದೇವ ದೀಕ್ಷಿತನು ರಚಿಸಿರುವ ಬಾಲ ಮನೋರಮಾ ಎಂಬ ಪ್ರಸಿದ್ಧವಾದ ವ್ಯಾಖ್ಯಾನದಲ್ಲಿ ಸ್ಪಷ್ಟ ಉತ್ತರ ದೊರಕುತ್ತದೆ. **ಸ್ತನಕೇಶವತೀ ಸ್ತ್ರೀ ಸ್ಯಾತ್ ಲೋಮಶಃ ಪುರುಷಃ ಸ್ಮೃತಃ ಉಭಯೋರಂತರಾಯಶ್ಚ ತದಭಾವೇ ನಪುಂಸಕಂ.** ಅಂದರೆ ತಲೆಯಲ್ಲಿ ಉದ್ಭವವಾದ ಕೇಶವೂ ಎದೆಯಲ್ಲಿ ಸ್ತನಗಳೂ ಉಳ್ಳ ವ್ಯಕ್ತಿ ಸ್ತ್ರೀ. ಮೀಸೆಯುಳ್ಳವನು ಪುರುಷ. ಇವೆರಡೂ ಇಲ್ಲದ ವ್ಯಕ್ತಿ ನಪುಂಸಕ. ಆದರೆ ಸಂಸ್ಕೃತ ಭಾಷೆಯಲ್ಲಿ ಲಿಂಗವು ಅರ್ಥನಿಷ್ಠವಲ್ಲ. ಅದು ಶಬ್ದನಿಷ್ಠ. ಅರ್ಥವು ಒಂದೇ ಆಗಿರುವ ಶಬ್ದಗಳು ಕೂಡ ಬೇರೆ ಬೇರೆ ಲಿಂಗಗಳಿಗೆ ಸೇರಬಹುದು. ಆದರೆ ಕನ್ನಡದಲ್ಲಿ ಹಾಗಲ್ಲ. ಪುರುಷರನ್ನು ಗುರುತಿಸುವ ಶಬ್ದಗಳೆಲ್ಲವೂ ಪುಲ್ಲಿಂಗ. ಸ್ತ್ರೀಯರನ್ನು ಗುರುತಿಸುವ ಶಬ್ದಗಳು ಸ್ತ್ರೀಲಿಂಗ. ಉಳಿದೆಲ್ಲ ಶಬ್ದಗಳು ನಪುಂಸಕಲಿಂಗಗಳು. ಮರ, ಬೆಟ್ಟ, ಹುಲಿ, ಕರಡಿ, ಹಸು, ಎತ್ತು ಎಂಬ ಎಲ್ಲವೂ ನಪುಂಸಕಲಿಂಗ. ಪ್ರಪಂಚದ ಭಾಷೆಗಳಲ್ಲಿ ಲಿಂಗಗಳನ್ನು ಕುರಿತ ಅಭ್ಯಾಸ ತುಂಬ ಸ್ವಾರಸ್ಯಕರ. ಆಫ್ರಿಕಾ ದೇಶದ ಒಂದು ಭಾಷೆಯಲ್ಲಿ ದಪ್ಪವಾಗಿರುವುದು ಪುಲ್ಲಿಂಗ, ಚಿಕ್ಕದಾಗಿದ್ದರೆ ಸ್ತ್ರೀಲಿಂಗ. ಆನೆಯ ಲದ್ದಿ ಪುಲ್ಲಿಂಗ. ಕುರಿಯ ಹಿಕ್ಕೆ ಸ್ತ್ರೀಲಿಂಗ.

**ಎದೆ** ಇದು ಕನ್ನಡ ಶಬ್ದ. ಮೂಲದಲ್ಲಿ ಎರ್ದೆ. ಅದಕ್ಕೆ ತತ್ಸಮ ರೂಪವಿಲ್ಲ.

**ಎಕ್ಕೊರ್** ಇದು ಹಳಗನ್ನಡದ ಎೞಿ+ಕೊಳ್ ಎಂಬ ಶಬ್ದಗಳು ಸೇರಿ ಆದ ಎೞಿಕೊಳ್ ಎಂಬ ರೂಪದ ಪರ್ಯಾಯ ಶಬ್ದ. ಎೞಿ ಎಂದರೆ ನೀರಿನಂಥ ದ್ರವ ಪದಾರ್ಥಗಳನ್ನು ಸುರಿ. ಹಾಕು ಎಂದರ್ಥ. ಎೞಿಕೋ ಎಂದರೆ ಎಣ್ಣೆ ಸವರಿಕೊಂಡ ಮೈಗೆ ನೀರನ್ನು ಹಾಕಿಕೊಂಡು

ಅಭ್ಯಂಜನ ಸ್ನಾನ ಮಾಡು ಎಂದರ್ಥ. ಆಡು ಮಾತಿನಲ್ಲಿ ಅದು 'ಎರ್ಕೊೞ್' ಎಂದಾಗಿದೆ. ಸೊಸೆ ಯುಗಾದಿಗೊಮ್ಮೆ, ದೀಪಾವಳಿಗೊಮ್ಮೆ ಮಗಳು ಶುಕ್ರವಾರ — ಮಂಗಳವಾರ ಎರಕೊಳ್ಳುತ್ತಿದ್ದ ಕತೆ ಕೇಳಿರಬೇಕಲ್ಲವೆ? ಎರೆದುಕೊಳ್ ಎಂಬ ಶಬ್ದ ಎರಕೊಳ, ಎರ್ಕೊಳ್, ಎರ್ಕೊೞ್ ಎಂಬುದಾಗಿ ಬೆಳೆದುಬಂದಿದೆ.

**ಎಲ್ಲಾ ಜನರು - ಯಾವತ್ತೂ ಜನರು** ಎಲ್ಲ ಜನ, ಎಲ್ಲ ಜನರು ಎಂಬುದು ಸರಿಯಾದ ರೂಪ. ಎಲ್ಲ ಜನ ಎಂಬುದು ಏಕವಚನ. ಜಾತ್ಯೇಕವಚನ. ಅದಕ್ಕೆ ಕ್ರಿಯಾಪದ ಏಕವಚನದಲ್ಲಿರಬೇಕು. ಯಾವತ್ತೂ ಜನ ಎಂಬುದು ಸರಿಯಲ್ಲ. ಯಾವತ್ತು ಎನ್ನುವುದು ಯಾವಪೊತ್ತು-ಹೊತ್ತು ಶಬ್ದದಿಂದ ಬಂದಿದೆ. ಆದರೆ ಹಿಂದಿನ ಕಾಲದ ಕೆಲವರು ಕನ್ನಡದ ಕೆಲವು ಪ್ರದೇಶಗಳಲ್ಲಿ ಇನ್ನೂ ಇದನ್ನು ಉಪಯೋಗಿಸುತ್ತ ಇದ್ದಾರೆ. ಅದು ಪ್ರಯೋಗಶರಣರಿಗೆ ದೃಷ್ಟಾಂತವಾಗಿದೆ. ಮಾತಿನಿಂದ ಇದನ್ನು ತೆಗೆದು ಹಾಕಲಾಗದು.

**ಎಸ್ಟೇಟ್** ಈ ಶಬ್ದ ಇಂಗ್ಲಿಷ್ ಭಾಷೆಯ Real Estate ಎಂಬ ಶಬ್ದಕ್ಕೆ ಅನ್ವಯಿಸುತ್ತದೆ. ಈ ಇಂಗ್ಲಿಷಿನ ಶಬ್ದಕ್ಕೆ ಸ್ಥಿರ ಆಸ್ತಿ ಎಂದು ಅರ್ಥ. ಮನೆ, ತೋಟ, ಭೂಮಿ ಪ್ಲಾಂಟೇಷನ್ ಮುಂತಾದವುಗಳಿಗೆ ಸಂಬಂಧಿಸಿದುದು. ಕೆಲವು ವೇಳೆ Personal Estate ಎಂದರೆ ಚರ ಆಸ್ತಿಗಳಿಗೂ ಅಂದರೆ ಒಡವೆ ವಸ್ತುಗಳಿಗೂ, ಹಣ, ಸಾಮಾನು ಸರಂಜಾಮುಗಳಿಗೂ ಅನ್ವಯವಾಗುತ್ತದೆ. ನ್ಯಾಯಾಲಯದ ಕಾನೂನಿನಂತೆ ಎರಡೂ ಅರ್ಥಗಳಿವೆ.

**ಎಳೆಯ ನಿಂಬೆಕಾಯಿ** ಜನರನ್ನು ಬೈಯುವಾಗ ಅವರಿಗೆ ತಿಳಿಯದಂತೆ ಮಾತುಗಳನ್ನು ಉಪಯೋಗಿಸುವುದು ಸಾಮಾನ್ಯ. ನಿಂಬೆಕಾಯಿ ಬಲಿತರೆ ಅದನ್ನು ಹಿಂಡಿದಾಗ ಬೇಕಾದ ಹಾಗೆ ರಸ ಇಳಿಯುತ್ತದೆ. ಎಳೆಯ ನಿಂಬೆ ಕಾಯಿಯಿಂದ ಒಂದು ತೊಟ್ಟೂ ಬೀಳುವುದಿಲ್ಲ. ಅಂದರೆ ಸ್ವಾರಸ್ಯವಿಲ್ಲ ಎಂದರ್ಥ. ಆದುದರಿಂದ ಅಂಥವನು ಹುಡುಗ, ಬಾಲಿಶ, ಪೆದ್ದ ಎಂಬ ಅರ್ಥದಲ್ಲಿ ಬಳಕೆ ಮೊದಲಾಯಿತು. ಆಮೇಲೆ ವ್ಯಾಪಕವಾಗಿ ಬೆಳೆಯಿತು. ವ್ಯಂಗ್ಯ ಸೇರಿತು. ಆದುದರಿಂದ ಈ ಉಪಮಾನವನ್ನು ಪ್ರಯೋಗಿಸಿ **ನೀರಿಲ್ಲದವನು** ಎಂದು ಹೀಯಾಳಿಸುತ್ತಾರೆ. ನೀರಿಲ್ಲದವನು ಎಂದರೂ ಒಂದೇ ನಪುಂಸಕ, ಷಂಡ ಎಂದರೂ ಒಂದೇ. ಈ ಮಾತು ಅನ್ವಯಿಸದೇ ಇದ್ದವರಿಗೆ ಇದನ್ನು ಹೇಳಿದರೆ ಭಾರಿ ಜಗಳವಾಗುತ್ತದೆ. ಆದುದರಿಂದ ಎಚ್ಚರಿಕೆಯಿಂದ ಉಪಯೋಗಿಸಬೇಕು.

## ಏ

**ಏಕಕಾಲ** ಎಂದರೆ ಒಂದೇ ಸಮಯ. At the same time ಎಂಬುದಕ್ಕೆ ಸರಿಯಾಗಿದೆ. ಹಾಗೆ ಉಪಯೋಗಿಸಬಹುದು.

**ಏಕತೆ,** ಐಕ್ಯ ಒಗ್ಗಟ್ಟು ಎಂಬ ಅರ್ಥದಲ್ಲಿ ಈ ಎರಡು ಶಬ್ದಗಳನ್ನೂ ಉಪಯೋಗಿಸಬಹುದು. ಆದರೆ **ಐಕ್ಯತೆ** ಎಂಬ ಅಪಶಬ್ದವು ಬಹುವ್ಯಾಪಕವಾಗಿ ಪ್ರಯೋಗವಾಗುತ್ತ ಇದೆ. ಪ್ರಾಮುಖ್ಯತೆ, ಪ್ರಾಧಾನ್ಯತೆ, ಪ್ರಾವೀಣ್ಯತೆ, ಸೌಂದರ್ಯತೆ ಮುಂತಾದುವು ಇತರ ಅಪಶಬ್ದಗಳು. ಕೆಲವು ಅಪಶಬ್ದಗಳಿಗೆ ಜನಪ್ರಿಯತೆಯಿಂದ ಬಹುಪ್ರಯೋಗದ ಗೌರವ ದೊರಕಿಬಿಡುತ್ತದೆ. ವ್ಯಾಕರಣಕಾರರು ಆ ಬಳಿಕ ಪ್ರಯೋಗ ಶರಣರಾಗಿ ಅವುಗಳನ್ನು ಒಪ್ಪುತ್ತಾರೆ. ಇವೆಲ್ಲ ಅಂಥ ಶಬ್ದಗಳು.

**ಏಕಪಾತ್ರಾಭಿನಯ** ಏಕಪಾತ್ರ ಎಂದರೆ ನಾಟಕಾದಿಗಳಲ್ಲಿ ಭಾಗವಹಿಸುವ ಒಬ್ಬ ಅಥವಾ ಒಬ್ಬಳು. ಹಾಗೆ ಒಬ್ಬ ವ್ಯಕ್ತಿ ಅಭಿನಯಿಸುವುದೇ ಏಕಪಾತ್ರಾಭಿನಯ. ಇದು mono-acting

ಎಂಬ ಇಂಗ್ಲೀಷ್ ಶಬ್ದದ ಅನುವಾದ. mono ಎಂಬುದಕ್ಕೆ ಒಬ್ಬನೇ. ಏಕಾಂಗಿಯಾಗಿ ಎಂದರ್ಥ. ಆದುದರಿಂದ ನಾಟಕದ ಭಾಗಗಳನ್ನೂ ಅದರಲ್ಲಿ ಬರುವ ಬೇರೆಬೇರೆ ಪಾತ್ರಗಳು ಆಡಬೇಕಾದ ಮಾತುಗಳನ್ನು ಒಬ್ಬನೇ ಆಡಿ, ಅಭಿನಯಿಸಿ ತೋರಿಸುವುದು ಎಂದರ್ಥ. ಎರಡು ಮೂರು ಪಾತ್ರಗಳ ಸಂಭಾಷಣೆಯನ್ನು ಒಬ್ಬನೇ ಅಭಿನಯಿಸಬಹುದು. ಈ ಕಾರ್ಯಕ್ರಮ ಪರಿಣಾಮಕಾರಿಯಾಗಬೇಕಾದರೆ ನಟ ತುಂಬ ಪಳಗಿರಬೇಕು. ಮಾತುಗಳನ್ನು ಅರ್ಥೈಸುವ ಸಾಮರ್ಥ್ಯ, ನಟಿಸುವ ದಕ್ಷತೆ, ಧ್ವನಿಗಳನ್ನು ಬೇರೆಬೇರೆ ಮಾಡುವ ತಂತ್ರ ಇವುಗಳೆಲ್ಲದರಲ್ಲಿ ಶಿಕ್ಷಣ ಪಡೆದಿರಬೇಕು. ಸ್ವಗತ ಭಾಷಣಗಳಾದರೆ ಏಕಪಾತ್ರಾಭಿನಯ ಸ್ವಲ್ಪ ಸುಲಭವಾಗಬಹುದು. ಆದರೂ ಒಂದೇ ಪಾತ್ರದ ಬಾಯಲ್ಲಿ ಬರುವ ವಿಭಿನ್ನ ಭಾವಗಳನ್ನು ಮುಖಭಾವ ಪ್ರದರ್ಶನದಲ್ಲಿ ಬಿಂಬಿಸಬೇಕಾದರೆ ಇನ್ನೂ ಹೆಚ್ಚಿನ ಸಾಮರ್ಥ್ಯ ಬೇಕು. ಇದೊಂದು ದೊಡ್ಡಕಲೆ.

**ಏತನ್ಮಧ್ಯೆ** ಏತತ್ (ದ್) ಎಂಬುದು ಸಂಸ್ಕೃತದಲ್ಲಿ ಒಂದು ಸರ್ವನಾಮಪದ. ಇದಕ್ಕೆ ಇವನು, ಇವಳು, ಇದು ಎಂಬ ಮೂರು ಅರ್ಥಗಳಿವೆ. ಈ ಶಬ್ದಕ್ಕೆ ಮಧ್ಯೆ ಎಂಬ ಶಬ್ದ ಸೇರಿದರೆ ಆಗ ಏತನ್ಮಧ್ಯೆ ಎಂದಾಗುತ್ತದೆ. ಇದು ವ್ಯಾಕರಣದಲ್ಲಿ ಅನುನಾಸಿಕ ಸಂಧಿ ಎಂಬ ಹೆಸರನ್ನು ಪಡೆಯುತ್ತದೆ. ಹಕಾರವನ್ನೂ ಎಲ್ಲ ಅನುನಾಸಿಕಗಳನ್ನೂ ಬಿಟ್ಟು ಮಿಕ್ಕ ವ್ಯಂಜನಾಕ್ಷರಗಳ ಎದುರಿಗೆ ಅನುನಾಸಿಕಗಳು ಬಂದರೆ ಹಿಂದಿನ ಪದದ ಕೊನೆಯ ಅಕ್ಷರ ಯಾವ ವರ್ಗಕ್ಕೆ ಸೇರಿದೆಯೋ ಆ ವರ್ಗದ ಅನುನಾಸಿಕವಾಗಿ ಆ ವ್ಯಂಜನ ಬದಲಾವಣೆಯನ್ನು ಹೊಂದುತ್ತದೆ. ಏತತ್ - ಮಧ್ಯೆ - ಏತನ್ಮಧ್ಯೆ. ಇದಕ್ಕೆ ಅರ್ಥ ಇದರ ಮಧ್ಯದಲ್ಲಿ ಎಂದು. 'ಇಬ್ಬರು ಚಿಕ್ಕ ಹುಡುಗರು ಜಗಳವಾಡುತ್ತಿದ್ದರು. ಏತನ್ಮಧ್ಯೆ ಮಗು ಅಳುವುದಕ್ಕೆ ಪ್ರಾರಂಭಿಸಿತು. ಮನೆಯ ರಂಪವನ್ನು ಕೇಳುವವರೇ ಇಲ್ಲ.' ಎಂಬ ಸನ್ನಿವೇಶವನ್ನು ಚಿತ್ರಿಸಿಕೊಳ್ಳಿ. ಏತನ್ಮಧ್ಯೆ ನೀವು ನಗಬೇಡಿ.

**ಏನೋ, ಏನಯ್ಯಾ, ಏನಪ್ಪಾ, ಏನ್ರೀ, ಏನುಸ್ವಾಮಿ, ಏನುಬುದ್ಧೀ** ಸಂಬೋಧನೆಯ ಶಬ್ದದಲ್ಲಿ ನಿಮ್ಮ ಅಭಿಪ್ರಾಯವನ್ನು ತಿಳಿಯಲಾಗುವುದಿಲ್ಲ. ಆ ಶಬ್ದವನ್ನು ನೀವು ಯಾವ ರೀತಿ ಉಚ್ಚರಿಸುತ್ತೀರಿ ಎಂಬುದರಲ್ಲಿ, ನಿಮ್ಮ ಮಾತಿನ ಕಾಕುವಿನಲ್ಲಿ ಅದು ಗೊತ್ತಾಗುತ್ತದೆ. ವಿಶ್ವಾಸದಿಂದ ಏನೋ ಎಂದು ಹೇಳಬಹುದು. ದ್ವೇಷದಿಂದ ಏನು ಸ್ವಾಮಿ ಎನ್ನಬಹುದು. ಆದ್ದರಿಂದ ಗೌರವ ಅಗೌರವಗಳು ವಯಸ್ಸಿನ ಅಂತರದಲ್ಲಿ, ವಿಶ್ವಾಸದ ಅಂತರದಲ್ಲಿ ವ್ಯಕ್ತವಾಗುತ್ತವೆ. ಮನಸ್ಸಿನ ಭಾವನೆಗಳು ಈ ಕೇವಲ ಮಾತಿನಿಂದ ತಿಳಿಯಬರುವುದಿಲ್ಲ. ನಿಜವಾಗಿ ಪ್ರೀತಿ ಇರುವ ಕಡೆ ಚಿಕ್ಕವರಿಗೆ ಏನೋ, ಏನಯ್ಯಾ, ಏನಪ್ಪಾ ಎಂಬುದನ್ನೂ ದೊಡ್ಡವರಿಗೆ ಏನ್ರೀ, ಏನು ಸ್ವಾಮಿ ಉಪಯೋಗಿಸಿ. ಏನು ಬುದ್ಧೀ ಎಂಬುದನ್ನು ಉಪಯೋಗಿಸದೆ ಬಿಟ್ಟು ಬಿಡಿ. ಅದು ಅರಮನೆಗೆ ಸಂಬಂಧಿಸಿದ್ದು.

**ಏಜೆನ್ಸಿ** agent ಶಬ್ದಕ್ಕೆ ಕಾರ್ಯನಿರ್ವಾಹಕ. agency ಕಾರ್ಯನಿರ್ವಹಣ ಸಂಸ್ಥೆ ಸರಿಯಾಗಬಹುದು. ಈಗ agency ಎಂಬ ಶಬ್ದವೇ ಕನ್ನಡವಾಗಿದೆ. ಅದಕ್ಕೆ ಏಕೆ ಪರದಾಡಬೇಕು ? ಅದನ್ನೇ ಉಪಯೋಗಿಸೋಣ, ಏಜೆನ್ಸಿ ಎಂದು.

**ಏನಕ್ಕೆ** ಏನಕ್ಕೆ ಎಂದರೇನು ? ಕೆಲವರು ಏತಕ್ಕೆ ಎಂಬುದನ್ನು ಏನಕ್ಕೆ ಎಂದು ಉಪಯೋಗಿಸುತ್ತಾರೆ. ಅದು ಸರಿಯಲ್ಲ. ಏನು ಎಂಬ ಶಬ್ದಕ್ಕೆ ಚತುರ್ಥೀ ವಿಭಕ್ತಿಯಲ್ಲಿ ಏಕೆ, ಏತಕ್ಕೆ, ಯಾಕೆ, ಯಾತಕ್ಕೆ ಎಂಬ ರೂಪಗಳೂ ಸರಿಯಾದವು.

ಏನು ಎಂಬ ಶಬ್ದಕ್ಕೆ ಇಂದಿನ ಕನ್ನಡದಲ್ಲಿ ಪಂಚಮಿಯನ್ನು ಬಿಟ್ಟು ಮಿಕ್ಕ ಆರು ವಿಭಕ್ತಿಗಳಲ್ಲಿ ಇರುವ ರೂಪಗಳು ಇವು: ೧. ಏನು ೨. ಏನನ್ನು ೩. ಏತರಿಂದ, ಯಾತರಿಂದ ೪. ಏಕೆ, ಏತಕ್ಕೆ, ಯಾತಕ್ಕೆ ೫. ಏತರ, ಯಾತರ ೬. ಏತರಲ್ಲಿ ಯಾತರಲ್ಲಿ.

ಪಂಚಮೀ ವಿಭಕ್ತಿಯ ರೂಪ ಕಡಿಮೆ. ಸಂಸ್ಕೃತದಲ್ಲಿ ಏಳು ವಿಭಕ್ತಿಗಳಿವೆ. ಪ್ರಥಮಾ ವಿಭಕ್ತಿಯು ಕರ್ತೃವನ್ನು ಸೂಚಿಸುತ್ತದೆ. ಆ ಕರ್ತೃ ಸ್ವಂತವಾಗಿ ಕ್ರಿಯೆಯನ್ನು ಎಸಗಬಲ್ಲದು. ಉದಾ: ಬೆಕ್ಕು ಹಾಲನ್ನು ಕುಡಿಯಿತು. ಇಲ್ಲಿ ಬೆಕ್ಕು ಕರ್ತೃ ಅದು ಪ್ರಥಮಾ ವಿಭಕ್ತಿಯಲ್ಲಿದೆ. ದ್ವಿತೀಯಾ ವಿಭಕ್ತಿ ಕರ್ಮವನ್ನು ಸೂಚಿಸುತ್ತದೆ. ಕ್ರಿಯೆಗೆ ಸಂಬಂಧಿಸಿದ ವಸ್ತು, ವ್ಯಕ್ತಿ ಪ್ರಾಣಿ ಮುಂತಾದುವನ್ನು ಸೂಚಿಸುತ್ತದೆ. ಉದಾ: ನಾನು ಹಾಲು ಕುಡಿಯುತ್ತಿರುವ ಬೆಕ್ಕನ್ನು ಕಂಡೆನು. ಇಲ್ಲಿ ಕುಡಿಯುವ ಕ್ರಿಯೆಗೆ ಸಂಬಂಧಿಸಿದ ಪ್ರಾಣಿಯನ್ನು ಗುರುತಿಸುತ್ತದೆ, ದ್ವಿತೀಯಾ ವಿಭಕ್ತಿ.

ತೃತೀಯಾ ವಿಭಕ್ತಿ ಕ್ರಿಯೆಯ ಸಾಧನವನ್ನು ಸೂಚಿಸುತ್ತದೆ. ಉದಾ: ಅದನ್ನು ನಾನು ಬೆತ್ತದಿಂದ ಹೊಡೆದೆನು. ಇಲ್ಲಿ ಬೆತ್ತವು ಹೊಡೆಯುವ ಸಾಧನ, ತೃತೀಯಾ ವಿಭಕ್ತಿಯಲ್ಲಿದೆ.

ಚತುರ್ಥೀ ವಿಭಕ್ತಿಯು ಸಂಪ್ರದಾನ = ಕೊಡುವುದು ಯಾರಿಗೆ ಎಂಬ ವಸ್ತು, ವ್ಯಕ್ತಿ ಮುಂತಾದುವುಗಳನ್ನು ಸೂಚಿಸುತ್ತದೆ. ಉದಾ: ಬೆಕ್ಕಿಗೆ ಏಟು ಬಿತ್ತು. ನಾನು ಕೊಟ್ಟ ಏಟು ಯಾರಿಗೆ ಎಂಬುದನ್ನು ಅದು ಸೂಚಿಸುತ್ತದೆ.

ಪಂಚಮೀ ವಿಭಕ್ತಿಯು ಅಪಾದಾನಕಾರಕವಾದುದು. ಅಪಾದಾನ ಎಂದರೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಆಗುವ ಚಲನೆ, ತೊಲಗುವಿಕೆ ಅಥವಾ ವಿಶ್ಲೇಷ. ಉದಾ: ಬೆಕ್ಕಿನ ಕಾಲಿನಿಂದ ರಕ್ತ ಸುರಿಯಿತು. ಇಲ್ಲಿ ಕಾಲಿನಿಂದ ಸುರಿದ ರಕ್ತ ಬೇರೆ ಎಡೆಯನ್ನು ಸೇರುತ್ತದೆ. ಅಂದರೆ ನೆಲವನ್ನು ಸೇರುತ್ತದೆ. ಕಾಲಿನಿಂದ ನೆಲಕ್ಕೆ ಸುರಿಯುತ್ತದೆ. ಇದು ಪಂಚಮಿ. ಷಷ್ಠೀ ವಿಭಕ್ತಿಯು ಸಾಮಾನ್ಯವಾಗಿರುವ ಸಂಬಂಧವನ್ನು ಸೂಚಿಸುತ್ತದೆ. ಆ ಬೆಕ್ಕು ನನ್ನ ಗೆಳೆಯನ ಬೆಕ್ಕು. ಗೆಳೆಯನ ಷಷ್ಠೀ ವಿಭಕ್ತಿಯಲ್ಲಿದೆ.

ಸಪ್ತಮೀ ವಿಭಕ್ತಿಯು ಆಶ್ರಯುವನ್ನು ಸೂಚಿಸುತ್ತದೆ. ಉದಾ: ಬೆಕ್ಕು ಅವನ ಮನೆಯಲ್ಲಿ ವಾಸಿಸುತ್ತದೆ. ಇಲ್ಲಿ ಸಪ್ತಮೀ ವಿಭಕ್ತಿಯ ಪ್ರಯೋಜನ ಸ್ಪಷ್ಟ. ಸಂಬೋಧನಾ ವಿಭಕ್ತಿಯು ಪ್ರಥಮೆಯಲ್ಲಿ ಅಂತರ್ಗತವಾಗುತ್ತದೆ. ಉದಾ: "ಬೆಕ್ಕೇ! ನಾನು ನಿನಗೆ ಹೊಡೆಯಬಾರದಾಗಿತ್ತು." ಇದು ಸಂಬೋಧನೆ. ಹೀಗಿರುವುದರಿಂದ ಒಂದೊಂದು ವಿಭಕ್ತಿಗೆ ಒಂದೊಂದು ಅರ್ಥವಿದೆ ಎಂದಂತಾಯಿತು. ಆಯಾ ಅರ್ಥ ಆಯಾ ವಾಕ್ಯದಲ್ಲಿರುವ ಸಂದರ್ಭಕ್ಕೆ ಅನುಗುಣವಾಗಿರುತ್ತದೆ. ಸಂಸ್ಕೃತದಲ್ಲಿ ಈ ಏಳೂ ವಿಭಕ್ತಿಗಳಿಗೂ ಬೇರೆ ಬೇರೆ ವಿಭಕ್ತಿ ಪ್ರತ್ಯಯಗಳಿವೆ. ಅವು ಏಕವಚನ, ದ್ವಿವಚನ, ಬಹುವಚನಗಳಿಗೆ ಬೇರೆಬೇರೆಯಾಗಿವೆ. ಕನ್ನಡದಲ್ಲಿ ಎಲ್ಲ ವಿಭಕ್ತಿಗಳಲ್ಲಿ ಪ್ರತ್ಯಯಗಳಿಲ್ಲ. ಉದಾ: ತೃತೀಯ ವಿಭಕ್ತಿಯ ಇಂ, ಇಂದಂ, ಇಂದೆ ಎಂಬ ಪ್ರತ್ಯಯಗಳೇ ಪಂಚಮಿಯ ಕೆಲಸವನ್ನೂ ಮಾಡುತ್ತವೆ. ಹೊಸಗನ್ನಡದಲ್ಲಿ ಇಂದ ಎಂಬ ಒಂದೇ ಪ್ರತ್ಯಯ ಈ ಕೆಲಸವನ್ನು ಮಾಡುತ್ತದೆ. ಉದಾ: ಹಲ್ಲಿನಿಂದ ಕಚ್ಚಿದನು (ತೃತೀಯ). ಮೋಡದಿಂದ ಮಳೆ ಸುರಿಯಿತು (ಪಂಚಮಿ). ಈ ಎರಡೂ ವಾಕ್ಯಗಳಲ್ಲಿ ನಡೆಯುವ ಎರಡು ಕ್ರಿಯೆಗಳಿಗೂ ಒಂದೇ ವಿಭಕ್ತಿ ಪ್ರತ್ಯಯವು ಉಪಯೋಗವಾಗಿದ್ದರೂ ಎರಡು ವಾಕ್ಯಗಳಲ್ಲಿರುವ ಕ್ರಿಯೆ ಬೇರೆಬೇರೆ. ಒಂದನೆಯದು ಕರಣ. ಎರಡನೆಯದು ಅಪಾದಾನ. ಇದು ಭಾಷೆಯನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಿರುವ ಎಲ್ಲರಿಗೂ ಗೊತ್ತಿರುವ ವಿಷಯ.

ಆದರೆ ಕನ್ನಡದಲ್ಲಿ ಪಂಚಮೀ ವಿಭಕ್ತಿಗೆಂದೇ ಪ್ರಾಚೀನ ವಿದ್ವಾಂಸರೂ ವೈಯಾಕರಣರೂ ಸೃಷ್ಟಿಸಿದ ಪ್ರತ್ಯಯಗಳಿಗೆ ಅಸ್ತಿತ್ವವಿಲ್ಲ. ಅತ್ತಣಿಂ, ಅತ್ತಣಿಂದ, ಅತ್ತಣಿಂದೆ ಎಂಬುವು ಪಂಚಮೀ ವಿಭಕ್ತಿಯ ಪ್ರತ್ಯಯಗಳೆಂದು ಹಳಗನ್ನಡದ ವ್ಯಾಕರಣಗಳಲ್ಲಿ ಹೇಳಿದೆ. ಹೊಸಗನ್ನಡದ ವ್ಯಾಕರಣಗಳಲ್ಲಿ ದೆಸೆಯಿಂದ ಎಂಬ ಪ್ರತ್ಯಯವನ್ನು ಸೂಚಿಸಲಾಗಿದೆ. ಆದರೆ ಭಾಷೆಯನ್ನು ಸ್ವಾಭಾವಿಕವಾಗಿ ಉಪಯೋಗಿಸುವ ಯಾರೂ ಈ ಪ್ರತ್ಯಯವನ್ನು

ಉಪಯೋಗಿಸುವುದಿಲ್ಲ. ಇವು ವ್ಯಾಕರಣ ಗ್ರಂಥಗಳಲ್ಲಿ ಮಾತ್ರ ಅಡಗಿ ಕುಳಿತಿವೆ. ಹಳಗನ್ನಡ ಕಾವ್ಯಗಳಲ್ಲಿ ಕೂಡ ಅತ್ತಣಿಂ ಮುಂತಾದ ಪ್ರತ್ಯಯಗಳ ಪ್ರಯೋಗ ಕಡಿಮೆಯೇ. ಹೀಗಿರುವುದರಿಂದ ಈ ಪ್ರತ್ಯಯವನ್ನು ಕನ್ನಡದ ಮಕ್ಕಳಿಗೆ ಬೋಧಿಸಬೇಕಾದ ಅಗತ್ಯವಿಲ್ಲ.

ಪ್ರಪಂಚದ ಸಾವಿರಾರು ಭಾಷೆಗಳಲ್ಲಿ ಒಂದೊಂದರಲ್ಲಿ ಒಂದೊಂದು ಬಗೆಯ ವಿಶೇಷಾಂಶಗಳು ಇರುತ್ತವೆ. ತೆಲುಗಿನಲ್ಲಿ ಸ್ತ್ರೀ ಪ್ರತ್ಯಯವೇ ಇಲ್ಲವೆಂದರೆ ತೆಲುಗು ಮಾತಾಡುವ ಸ್ತ್ರೀಯರೇ ಇಲ್ಲವೆಂದಲ್ಲ. ಆಫ್ರಿಕದ ಕೆಲವು ಭಾಷೆಗಳಲ್ಲಿ ವಸ್ತು ದೊಡ್ಡದಾಗಿದ್ದರೆ ಅದು ಪುಲ್ಲಿಂಗ ಚಿಕ್ಕದಾಗಿದ್ದರೆ ಅದು ಸ್ತ್ರೀಲಿಂಗ. ಆನೆಯ ಲದ್ದಿ ಪುಲ್ಲಿಂಗ. ಆಡಿನ ಹಿಕ್ಕೆ ಸ್ತ್ರೀಲಿಂಗ. ಹೀಗಿರುವುದು ಆಯಾ ಭಾಷೆಯ ಜಾಯಮಾನಕ್ಕೆ ಸಂಬಂಧಿಸಿದ ವಿಷಯ.

ನನ್ನ ತೀರ್ಮಾನವಿಷ್ಟು. ಅಪಾದಾನವೆಂಬುದು ಒಂದು ಸ್ವಾಭಾವಿಕವಾದ ಕ್ರಿಯೆ. ಇದು ಎಲ್ಲ ಭಾಷೆಗಳಲ್ಲಿಯೂ ಕಂಡುಬರುತ್ತದೆ. ಅದನ್ನು ಗುರುತಿಸುವುದಕ್ಕೆ ಬೇರೆ ಪ್ರತ್ಯಯ ಇಲ್ಲದಿದ್ದರೂ ಆ ಕ್ರಿಯೆಯನ್ನು ಗುರುತಿಸುವುದು ಭಾಷೆಯ ವಿಸ್ತಾರವನ್ನು ಅಭ್ಯಾಸ ಮಾಡುವ ಮಾರ್ಗ. ಪಂಚಮಿ ಸಂಕೀರ್ಣವಾದ ಅರ್ಥವನ್ನು ನೀಡುವ ವಿಭಕ್ತಿ. ಇದನ್ನು ಸಪ್ತಮಿಯಿಂದಲೂ ನಿಷ್ಪನ್ನ ಮಾಡಬಹುದು. ರಾಮನು ಸದ್ವಂಶದಿಂದ ಬಂದವನು ಎಂಬಲ್ಲಿ ಸಪ್ತಮಿಯ ಅರ್ಥ ಸ್ಪಷ್ಟವಾಗಿದೆ. ಆ ವೃತ್ತಿಯಿಂದ ಅವನಿಗೆ ಹೆಚ್ಚು ಹಣ ದೊರಕಿತು. ಇಲ್ಲಿಯೂ ಸಪ್ತಮಿಯ ಅರ್ಥ ಇರಬಹುದು.

ಇಷ್ಟೆಲ್ಲವನ್ನೂ ವಿವರಿಸಿರುವುದರಿಂದ ಕನ್ನಡದಲ್ಲಿ ಪಂಚಮೀ ವಿಭಕ್ತಿ ಪ್ರತ್ಯಯವಿಲ್ಲದಿದ್ದರೂ ಅಪಾದಾನವನ್ನು ದೃಷ್ಟಿಯಲ್ಲಿಟ್ಟರೆ ಪಂಚಮಿಯ ಕಾರ್ಯವನ್ನು ಕನ್ನಡ ಭಾಷೆಯಲ್ಲಿಯೂ ಗುರುತಿಸಬೇಕಾಗುತ್ತದೆ ಎಂಬುದು ನಿರ್ವಿವಾದವಾದುದು.

**ಏನೊಂದ್ರೆ, ಏನೂ ಅಂದರೆ,** ನೋಡಿ ಅಂದರೆ

**ಏಮಾರಿಸು, ಯಾಮಾರಿಸು** ಏಮಾರಿಸು ಎಂಬುದು ದ್ರಾವಿಡ ಶಬ್ದ. ತಮಿಳಿನಲ್ಲಿಯೂ, ತೆಲುಗಿನಲ್ಲಿಯೂ ಈ ಶಬ್ದವನ್ನು ಉಪಯೋಗಿಸುತ್ತಾರೆ. ಏಮಾರು ಎಂದರೆ ಮೋಸಹೋಗು, ಮೋಸಕ್ಕೆ ಸಿಕ್ಕು, ವಂಚನೆಗೊಳ್ಳು ಎಂದು ಅರ್ಥ. ಏಮಾರಿಸು ಎಂದರೆ ಮೋಸಗೊಳಿಸು ಎಂದರ್ಥ. ಈಚೀಚೆಗೆ ಈ ಶಬ್ದವನ್ನು ಯಾಮಾರಿಸು ಎಂದೂ, ಯಾಮಾರಿದೆ ಎಂದೂ ಉಪಯೋಗಿಸುತ್ತಿದ್ದಾರೆ. ಈ ಎರಡು ಶಬ್ದಗಳಿಗೂ ಮೂಲ ಏಮಾರು. ಇದಕ್ಕೆ ಕನ್ನಡದಲ್ಲಿ ಮೋಸಹೋಗು, ಎಚ್ಚರತಪ್ಪು ಎಂದು ಅರ್ಥ. ತಮಿಳಿನ ಏಮಾಱ್ಱು ಎಂಬ ಶಬ್ದಕ್ಕೆ ಮೋಸಗೊಳಿಸು ಎಂಬ ಅರ್ಥವಿದೆ. ಕನ್ನಡದಲ್ಲಿ ಅರ್ಥ ಬದಲಾವಣೆ ಹೊಂದಿದೆ.

**ಏರಿಳಿ** ತುಂಬ ಒಳ್ಳೆಯ ಶಬ್ದ. ಮಹಡಿ ಮನೆಗಳಲ್ಲಿ ಈಗೀಗ ಬಹಳ ಸಾಧಾರಣವಾಗಿರುವ ಈ ಹತ್ತಿ ಇಳಿಯುವ ಸಾಧನಕ್ಕೆ ಏರಿಳಿ ಹೇಳಿಮಾಡಿಸಿದಂತಿದೆ. ಇದನ್ನು ಪ್ರಚಾರಕ್ಕೆ ತರಬಹುದು. ನಾಲ್ಕು ಜನ ಲೇಖಕರು ಒಂದೆರಡು ಕಡೆ ಬಳಸಿದರೆ ಸಾಕು. ಇದು ಪ್ರಚಾರಕ್ಕೆ ಬರುತ್ತದೆ. ಇಂಗ್ಲಿಷಿನ Lift ಮತ್ತು ಅಮೇರಿಕದ elevator ಶಬ್ದಗಳಿಗೆ ಸಮಾನವಾದ ಕನ್ನಡ ಶಬ್ದವಾಗುತ್ತದೆ.

**ಏಲಂ** ಎಂದರೆ ಹರಾಜು. ಇದು ಪೋರ್ಚುಗೀಸ್ ಭಾಷೆಯ ಶಬ್ದ. ಹಿಂದೀ, ಮರಾಠಿ ಭಾಷೆಯ ಮೂಲಕ ಪ್ರಚಾರಕ್ಕೆ ಬಂದಿದೆ. ಪೋರ್ಚುಗೀಸ್ ಭಾಷೆಯಲ್ಲಿ ಇದರ ರೂಪ 'ಲೇ ಇಲಾವ್'.

**ಏಲಕ್ಕಿ-ಯಾಲಕ್ಕಿ** ಏಲ ಎಂಬುದು ಸಂಸ್ಕೃತದ ಶಬ್ದ. ಅದೇ ತಮಿಳಿನಲ್ಲಿ ಎಲಕ್ಕಾಯ್ ಎಂದಾಗಿದೆ. ಅದೇ ಕನ್ನಡದ ಏಲಕ್ಕಿ. ತೆಲುಗಿನ ಏಲಕಿ. ಕಾಲಕ್ರಮದಲ್ಲಿ ಸ್ವರ ಏ ವ್ಯಂಜನ ಯ ಆಗಿ ಮಾರ್ಪಟ್ಟಿದೆ. ಹೋಲಿಸಿ ನೋಡಿ ಏಕೆ-ಯಾಕೆ. ಆದ್ದರಿಂದ ಎರಡೂ ಸರಿಯಾದವೇ.

**ಏಳು-ಹನ್ನೊಂದು** ನೋಡಿ. ಅಕ್ಷೋಹಿಣಿ

**ಏಳೇಳು ಜನ್ಮ** ಈ ಶಬ್ದ ಪುಂಜದ ಬಗ್ಗೆ ನಾನು ಅನೇಕ ದಿನಗಳಿಂದ ಆಲೋಚನೆ ಮಾಡುತ್ತಿದ್ದೇನೆ. ಈ ಸಂಖ್ಯೆಗೆ ಬಂದಿರುವ ಪ್ರಾಧಾನ್ಯವು ಎಲ್ಲಿಂದ ಬಂದಿದೆ ಎಂಬ ಬಗ್ಗೆ ನನಗೆ ಉತ್ತರವು ಸಿಕ್ಕಿಲ್ಲ. ಸಂಸ್ಕೃತದಲ್ಲಿ ಸಪ್ತ ಎಂಬ ಸಂಖ್ಯೆಯೇನೋ ಬಹು ಕಡೆಗಳಲ್ಲಿ ಪ್ರಯೋಗವಾಗುತ್ತದೆ. ಸಪ್ತ ನದಿಗಳು, ಸಪ್ತ ಸಮುದ್ರಗಳು, ಸಪ್ತ ಋಷಿಗಳು, ಸಪ್ತಲೋಕಗಳು, ಸಪ್ತ ಪರ್ವತಗಳು, ಸಪ್ತ ಆದಿತ್ಯರು, ಸಪ್ತದಾನವರು, ಸಪ್ತಾಶ್ವ, ಸಪ್ತಜಿಹ್ವೆ, ಸಪ್ತಪದಿ, ಸಪ್ತ ತಂತು ಇತ್ಯಾದಿ. ಆದರೆ ಅಲ್ಲಿಯೂ ಸಪ್ತ ಜನ್ಮ ಎಂಬ ಶಬ್ದ ಪ್ರಚಾರದಲ್ಲಿಲ್ಲ. ಜಯವಿಜಯರಿಗೆ ಸಂಬಂಧಿಸಿದ ಕಥೆಗಳಲ್ಲಿ ಅವರು ಮೂರು ಜನ್ಮಗಳಲ್ಲಿ ರಾಕ್ಷಸರಾಗಿದ್ದು ಮತ್ತೆ ವಿಷ್ಣುವಿನ ಬಳಿ ಸೇರಿಕೊಂಡರು ಎಂಬ ಕಥೆ ಇದೆ. ಹರಿಕಥೆಯ ದಾಸರುಗಳು ಈ ಕಥೆಯನ್ನು ಉಪಕಥೆಯಾಗಿ ದೊಡ್ಡದು ಮಾಡುತ್ತಿದ್ದರು. ಆ ಸಂದರ್ಭದಲ್ಲಿ ನಾನು ಕೇಳಿದ ಒಂದು ವಿವರ ಹೀಗಿದೆ. ನಾರಾಯಣನನ್ನು ಕಾಣಲು ಬಂದಾಗ ಸನಂದನಾದಿಗಳನ್ನು ದ್ವಾರಪಾಲಕರಾದ ಜಯವಿಜಯರು ತಡೆದರು. ಅವರು ಕೋಪಗೊಂಡು ದ್ವಾರಪಾಲಕರಿಗೆ ರಾಕ್ಷಸರಾಗಿ ಭೂಮಿಯಲ್ಲಿ ಹುಟ್ಟಿರಿ ಎಂದು ಶಾಪಕೊಟ್ಟರು. ಆಗ ಪಶ್ಚಾತ್ತಾಪ ಪಟ್ಟ ಜಯವಿಜಯರನ್ನು ನಾರಾಯಣನು ಸಮಾಧಾನಪಡಿಸಿ "ಎಂದೂ ಋಷಿಗಳ ಶಾಪವು ನಿಷ್ಫಲವಾಗುವುದಿಲ್ಲ. ನೀವು ನನ್ನ ಭಕ್ತರಾಗಿದ್ದು ಏಳು ಜನ್ಮಗಳನ್ನು ಕಳೆದು ನನ್ನ ಬಳಿಗೆ ಹಿಂದಿರುಗುತ್ತೀರೋ ಅಥವಾ ನನ್ನ ಶತ್ರುಗಳಾಗಿದ್ದು ಮೂರು ಜನ್ಮಗಳ ಬಳಿಕ ಹಿಂದಿರುಗುತ್ತೀರೋ ?" ಎಂದು ಕೇಳಿದನಂತೆ. ಅವರು "ನಾವು ಶತ್ರುಗಳಾದರೂ ಚಿಂತೆಯಿಲ್ಲ. ಮೂರು ಜನ್ಮಗಳೇ ಸಾಕು. ಹಿಂದಿರುಗುತ್ತೇವೆ" ಎಂದರಂತೆ — ಹೀಗೆ ಅವರು ಮೂರು ಜನ್ಮಗಳಲ್ಲಿ ರಾಕ್ಷಸರಾಗಿದ್ದು ವಿಷ್ಣು ದ್ವೇಷಿಗಳಾಗಿದ್ದು ಮತ್ತೆ ವೈಕುಂಠವನ್ನು ಸೇರಿದರು ಎಂಬುದು ನಾನು ಕೇಳಿದ ಕಥೆ. ಆದರೆ ಈ ಕಥೆಗೆ ಭಾಗವತದಲ್ಲಿ ಆಧಾರವಿಲ್ಲ. ಇತರ ಕಡೆ ಆಧಾರವಿರುವುದು ನನ್ನ ವಾಚನದಲ್ಲಿ ನನಗೆ ದೊರಕಿಲ್ಲ. ತಿಳಿದವರು ಈ ಏಳೇಳು ಜನ್ಮದ ಕಥೆಯನ್ನು ನನಗೆ ತಿಳಿಸಿದರೆ ನಾನು ಏಳೇಳು ಜನ್ಮ ಅವರಿಗೆ ಕೃತಜ್ಞನಾಗಿರುತ್ತೇನೆ. ಅಲ್ಲಿಯವರೆಗೆ ಏಳು ಎಂಬ ಸಂಖ್ಯೆಗೆ ಇರುವ ಪ್ರಾಧಾನ್ಯ ಹೆಚ್ಚು ಎಂಬುದನ್ನು ಗಮನಿಸಿ ಕನ್ನಡದಲ್ಲಿ ಏಳೇಳು ಎಂದು ಮಾಡಿಕೊಂಡಿರಬಹುದು. ಆದರೂ ಸಂಸ್ಕೃತದಲ್ಲಿ ಸಪ್ತಜನ್ಮ ಪ್ರಯೋಗದಲ್ಲಿಲ್ಲ. **ನೋಡಿ: ಪುಟ ೨೫.**

## ಐ

**ಐಕ್ಯ** ನೋಡಿ: ಏಕತೆ

**ಐತಂದು** ಕನ್ನಡದಲ್ಲಿ ಎಯ್ತುರ್, ಐತರ್ ಎಂಬ ಒಂದು ಧಾತುವಿದೆ. ಇದಕ್ಕೆ ಹತ್ತಿರಕ್ಕೆ ಬರು ಎಂದರ್ಥ. ಎಯ್ದು +ತರ್ ಎಂಬ ಎರಡು ಧಾತುಗಳು ಸೇರಿ ಆಗಿರುವ ಸಂಯುಕ್ತಧಾತು ಇದು. ತರು ಎನ್ನುವುದು ತಂದು ಆದಂತೆ ಐತರ್ ಎಂಬುದು ಐತಂದು ಆಗಿದೆ. **ಭರತನಂ ನೋಡಲೈತಂದರ್ಳೋರ್ವಳ್** ಎಂದು ಆದಿಪುರಾಣದಲ್ಲಿ ಪ್ರಯೋಗವಿದೆ.

**ಐತಿಹಾಸಿಕ** ಇತಿಹಾಸ ಎಂಬುದರ ವಿವರಣೆ ಇತಿ +ಹ +ಆಸ ಎಂಬುದೇ ಸರಿ. ಇತಿಹಾಸ ಎಂಬ ಶಬ್ದದ ಗುಣವಾಚಕ ರೂಪ ಐತಿಹಾಸಿಕ, ಅಷ್ಟೆ!

**ಐನಾತಿ** ಇದು ಪಾರಸೀ ಭಾಷೆಯ ಶಬ್ದ. ಮರಾಠಿಗೆ ಬಂದು ತನ್ಮೂಲಕ ಕನ್ನಡಕ್ಕೆ ಬಂದಿದೆ.

ಇದಕ್ಕೆ ಗುಣವಾಚಕದ ಅರ್ಥವಿದೆ, ಬಹುಮುಖ್ಯವಾದ, ಪ್ರಧಾನವಾದ ಎಂದು. ಕಿಟ್ಟೆಲ್ ಅಯಿನಾತಿ ಎಂಬ ರೂಪವೂ ಇದೆ ಎಂದು ತಿಳಿಸುತ್ತಾನೆ. ಅರಬ್ಬಿಯ ತೈನಾತಿ (ತ ಇನಾತ್) ಶಬ್ದಕ್ಕೂ ಇದಕ್ಕೂ ಸಂಬಂಧವಿಲ್ಲ. ಆ ಶಬ್ದಕ್ಕೆ ೧. ಊಳಿಗ, ಸೇವೆ, ಪರಿಚಾರಿಕೆ ೨. ಸೇವಕ, ಆಳು ಎಂಬ ಅರ್ಥಗಳಿವೆ. ಕನ್ನಡದಲ್ಲಿ ಐನಾತಿ ಶಬ್ದವನ್ನು ವ್ಯಕ್ತಿವಾಚಕವಾಗಿ ಕೆಲವರು ಉಪಯೋಗಿಸುತ್ತಾರೆ. ಅವನು ಐನಾತಿ ಇದ್ದಾನೆ ಎಂದರೆ ವ್ಯಂಗ್ಯವಾಗಿ ಅವನು ಬಹಳ ಬುದ್ಧಿವಂತ ಎಂದರ್ಥ. ಇದು ಸ್ತುತಿಪರವಾದ ಅರ್ಥವಲ್ಲ. ಅವನು ತನ್ನ ಬುದ್ಧಿಯನ್ನು ದುರುಪಯೋಗಪಡಿಸಿಕೊಳ್ಳುತ್ತಾನೆ ಎಂದು ಅರ್ಥ.

**ಐಬು** ಇದು ಅರಬ್ಬಿ ಶಬ್ದ. ಆಯಬ್ ಎಂಬುದು ಆ ಭಾಷೆಯ ರೂಪ. ಆಯಿಬ್ ಎಂಬ ಪರ್ಯಾಯ ರೂಪವೂ ಉಂಟು. ಇದಕ್ಕೆ ಕೊರತೆ, ಕುಂದು, ಲೋಪ, ದೋಷ, ಕಳಂಕ ಎಂಬ ಅರ್ಥಗಳೂ ಇವೆ.

**ಐಷಾರಾಮ** ಇದರಲ್ಲಿ ಎರಡು ಶಬ್ದಗಳಿವೆ. ಐಷ ಎಂಬುದು ಅರಬ್ಬಿ. ಆರಾಮ್ ಎಂಬುದು ಪಾರಸಿ. ಎರಡೂ ಸೇರಿ ಒಂದೇ ಪದವಾಗಿದೆ. ಅರ್ಥ ಸುಖೋಪಭೋಗ, ಸ್ವಸ್ಥವಾಗಿರುವುದು, ನಿರ್ಯೋಚನೆಯಿಂದ ಇರುವುದು. ಒಳ್ಳೆಯ ಪ್ರಭಾವಶಾಲಿಯಾದ ಶಬ್ದ. ಎಲ್ಲರೂ ಹೀಗಿರುವುದಕ್ಕೆ ಆಸೆಪಡುತ್ತಾರೆ. ಕೆಲವರಿಗೆ ಹಾಗಿರುವುದು ಸಾಧ್ಯ.

**ಐಲಿಕಡೆ** ಎಂಬುದು ಮರಾಠಿ ಶಬ್ದ. ಹತ್ತಿರವಾಗಿರುವ ಕಡೆ ಎಂದರ್ಥ. ಮರಾಠಿ ಭಾಷೆಯಲ್ಲಿ ಐಲಿ ಎಂದೂ ಉಪಯೋಗಿಸುತ್ತಾರೆ. ಕನ್ನಡದಲ್ಲಿ ಕಡೆ ಎಂಬ ಶಬ್ದ ಸೇರಿರುವಂತೆ ಇದೆ.

## ಒ

**ಒಂಟಿ ಸಲಗ** ಸಲಗ ಎಂದರೆ ಗಂಡಾನೆ. ಇಂಗ್ಲಿಷಿನ Tusker ಎಂಬ ಶಬ್ದಕ್ಕೂ ಸಂಸ್ಕೃತದ ಯೂಥನಾಥ ಎಂಬ ಶಬ್ದಕ್ಕೂ ಸಮಾನವಾದ ಅರ್ಥವುಳ್ಳ ಕನ್ನಡ ಶಬ್ದ. ಒಂಟಿ ಸಲಗ ಎಂದರೆ ಒಂದೇ ಇರುವ ಗಂಡಾನೆ. ಆನೆಗಳು ಯಾವಾಗಲೂ ಗುಂಪಿನಲ್ಲಿರುತ್ತವೆ. ಆ ಗುಂಪಿನ ಒಂದು ಗಂಡಾನೆ ಮುಂದಾಳಾಗಿರುತ್ತದೆ. ಕೆಲವು ವೇಳೆ ಒಂದು ಹೆಣ್ಣಾನೆಗಾಗಿ ಎರಡು ಬಲಿಷ್ಠವಾದ ಗಂಡಾನೆಗಳು ಕಾದಾಡುವುದುಂಟು. ಹಾಗೆ ಕಾದಾಡಿದಾಗ ಸೋತ ಗಂಡಾನೆ ಆನೆಗಳ ಗುಂಪನ್ನು ಬಿಟ್ಟು ಒಂಟಿಯಾಗಿ ಅಲೆದಾಡುತ್ತಿರುತ್ತದೆ ಎಂದು ಹೇಳುತ್ತಾರೆ. ಅವಮಾನದಿಂದ ಕೂಡಿದ ಅಂಥ ಆನೆಯು ಕಂಡವರನ್ನು ಅಟ್ಟಿಸಿಕೊಂಡು ಬಂದು ತುಳಿದು ಸಾಯಿಸಿದ ಘಟನೆಗಳೂ ಉಂಟು. ಒಂಟಿಸಲಗ ಬಹಳ ಅಪಾಯಕಾರಿಯಾದ ಪ್ರಾಣಿ.

**ಒಂದು**

*ಒಂದರೆಂದೆರಡಹುದನರಿ ಮೂ*
*ರಿಂದವನು ತಿಳಿ ನಾಲ್ಕರಲಿ ಮನ*
*ಸಂದಿಸದಿರೈದರಲಿ ವರ್ಜಿಪುದಾರನೇಳರಲಿ*
*ಒಂದಿಸದಿರೆಂಟನು ವಿಚಾರಿಸಿ*
*ಮುಂದುವರಿಯೊಂಬತ್ತರಲಿ ಮನ*
*ಗುಂದದಿರುವೀರೈದರಲಿ ಭೂಪಾಲ ಕೇಳೆಂದ (ಕುಮಾರವ್ಯಾಸ, ಉದ್ಯೋಗ ಪರ್ವ ೩-೩)*

ಈ ಪದ್ಯದ ಅರ್ಥ ವಿವರಿಸಬೇಕು. ಹಿಂದಿನ ಮೈಸೂರು ಸರಕಾರದ ಸಾಹಿತ್ಯ ಮತ್ತು

ಸಂಸ್ಕೃತಿ ಅಭಿವೃದ್ಧಿ ಇಲಾಖೆಯು ಪ್ರಕಟಪಡಿಸಿರುವ ಪುಸ್ತಕದಲ್ಲಿ ಈ ಪದ್ಯವು ಮೇಲಿನಂತಿಲ್ಲ. ಅದರಲ್ಲಿ ಱಕಾರವನ್ನು ಬಿಡಲಾಗಿದೆ. ಆದರೆ ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ಱಕಾರವನ್ನು ಉಪಯೋಗಿಸಿದ್ದನು ಎಂಬುದು ವಿದ್ವಾಂಸರ ಏಕಾಭಿಪ್ರಾಯವಾಗಿರುವುದರಿಂದ ಈ ಪದ್ಯದ ಸ್ವರೂಪವೇ ಮೇಲಿನಂತಿರಬೇಕು. ಈ ಪದ್ಯಕ್ಕೆ ಮೂಲ ವ್ಯಾಸಮಹಾಭಾರತದಲ್ಲಿಯೇ ಇದೆ. ಆ ಪದ್ಯ ಹೀಗಿದೆ:-

*ಏಕಯಾ ದ್ವೇ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು*
*ಪಂಚ ಜಿತ್ವಾ ವಿದಿತ್ವಾಷಟ್ ಸಪ್ತ ಹಿತ್ವಾ ಸುಖೀಭವ* *(ಉದ್ಯೋಗ ಪರ್ವ ೨೨-೪೪)*

ಉದ್ಯೋಗ ಪರ್ವದಲ್ಲಿ ಹತ್ತು ಉಪಪರ್ವಗಳಿವೆ. ಅವುಗಳಲ್ಲಿ ಮೂರನೆಯದಾದ ಪ್ರಜಾಗರಪರ್ವದಲ್ಲಿ ಈ ಶ್ಲೋಕ ಬರುತ್ತದೆ. ಈ ಪದ್ಯಕ್ಕೆ ಸಾಮಾನ್ಯವಾಗಿ ಅರ್ಥ ಹೇಳುವಾಗ 'ಒಂದು = ಬುದ್ಧಿ, ಎರಡು = ಒಳ್ಳೆಯ ಕಾರ್ಯ, ಕೆಟ್ಟಕಾರ್ಯ, ಮೂರು = ಶತ್ರು, ಮಿತ್ರ, ತಟಸ್ಥ ಎಂಬ ಅನುಬಂಧಿಗಳು. ನಾಲ್ಕು = ಸಾಮ, ದಾನ, ಭೇದ, ದಂಡ ಎಂಬ ಚತುರೋಪಾಯಗಳು. ಐದು = ಪಂಚೇಂದ್ರಿಯಗಳು- ಚರ್ಮ, ಕಣ್ಣು, ಕಿವಿ, ನಾಲಗೆ, ಮೂಗು. ಆರು =ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯ ಎಂಬ ಆರು ರಾಜಗುಣಗಳು. ಏಳು = ಸಪ್ತವ್ಯಸನಗಳು, ಅಂದರೆ ಸ್ತ್ರೀ, ಜೂಜು, ಬೇಟೆ, ಮದ್ಯ, ಪರುಷವಾಕ್ಯ, ಅರ್ಥದೂಷಣ ಮತ್ತು ಕಠಿನ ದಂಡನೆ' ಎಂದು ವಿವರಿಸುತ್ತಾರೆ. ಈ ಏಳಕ್ಕೆ ಸಂಬಂಧವನ್ನು ಹೊಂದಿಸಿ ಹೀಗೆ ಅರ್ಥ ಹೇಳುತ್ತಾರೆ. 'ಬುದ್ಧಿ ಶಕ್ತಿಯಿಂದ ಯಾವುದು ಕೆಟ್ಟಕೆಲಸ, ಯಾವುದು ಒಳ್ಳೆಯ ಕೆಲಸ ಎಂಬುದನ್ನು ನಿರ್ಧಾರ ಮಾಡಿಕೋ. ಒಳ್ಳೆಯ ಕೆಲಸವನ್ನು ಮಾತ್ರ ಮಾಡು. ಸುತ್ತಮುತ್ತ ಓಡಾಡುವವರಲ್ಲಿ ಶತ್ರುಗಳೂ, ಮಿತ್ರರೂ, ಉದಾಸೀನರೂ ಇರುತ್ತಾರೆ. ಈ ಮೂವರನ್ನು ನಾಲ್ಕು ಉಪಾಯಗಳಿಂದ ನಿನ್ನ ವಶಮಾಡಿಕೋ. ಪಂಚೇಂದ್ರಿಯಗಳನ್ನು ಜಯಿಸಿ ಜಿತೇಂದ್ರಿಯನಾಗು. ಆರು ರಾಜಗುಣಗಳನ್ನು ತಿಳಿದುಕೋ. ಸಪ್ತವ್ಯಸನಗಳಿಗೆ ಒಳಗಾಗಬೇಡ' ಸಂಸ್ಕೃತದ ಶ್ಲೋಕಕ್ಕೆ ಈ ಅರ್ಥ ಸರಿಯಾದೀತು. ರಾಜಕಾರ್ಯ ಸಂಬಂಧವಾದ ಮಾತುಗಳೇ ಇಲ್ಲಿ ಹೇಳಿದೆ ಎಂದು ತಿಳಿದರೆ ಅದೇ ಸರಿ. ಆದರೆ ಕುಮಾರವ್ಯಾಸನ ಪದ್ಯದಲ್ಲಿ 'ವರ್ಜಿಪುದಾರನು' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಆರನ್ನೂ ತ್ಯಜಿಸು, ದೂರ ಮಾಡು ಎಂದು ಅದರ ಅರ್ಥ. ಈ ಮಾತು ಸಂಸ್ಕೃತದ ಶ್ಲೋಕದ ಅರ್ಥಕ್ಕಿಂತ ಬೇರೆ ಆಯಿತು. ಅಲ್ಲದೆ ಕುಮಾರವ್ಯಾಸನು ಎಂಟು ಒಂಬತ್ತು ಮತ್ತು ಹತ್ತು ಎಂಬ ಸಂಖ್ಯೆಗಳನ್ನು ಹೇಳಿ ಬೇರೆ ಏನನ್ನೋ ತಿಳಿಸುತ್ತಿದ್ದಾನೆ. ಅದಕ್ಕೂ ನಾವು ಅರ್ಥಮಾಡಬೇಕು. ವರ್ಜಿಪುದಾರನು ಎಂಬುದರಲ್ಲಿ ಏನೋ ಪಾಠದೋಷವಿದೆ ಎಂದೆನಿಸುತ್ತದೆ. ಬಹಳ ಸುಲಭವಾದ ತಿದ್ದುಪಾಟು ಮಾಡಿದರೆ ಅದು 'ವರ್ತಿಪುದು' ಆಗಬಹುದು. ಆದರೆ 'ವರ್ತಿಪುದಾರನು' ಎಂಬುದು ಸರಿಯಾದ ಪದ ಸಂಯೋಜನೆಯಾಗುವುದಿಲ್ಲ. 'ವರ್ತಿಪುದಾರರಲಿ' ಎಂದಿದ್ದರೆ ಸರಿಹೋದೀತು. ಮಿಕ್ಕ ಎಂಟು, ಒಂಬತ್ತು, ಹತ್ತು - ಇವುಗಳ ಮಾತು ಹಾಗೆಯೇ ಉಳಿಯಿತು. ಇದೇ ಸಂದರ್ಭದಲ್ಲಿ ನನಗೆ ಇನ್ನೆರಡು ಪದ್ಯಗಳು ನೆನಪಿಗೆ ಬರುತ್ತವೆ. ಒಂದು ಪಂಪ ಭಾರತದ್ದು. ಇನ್ನೊಂದು ಮುದ್ದಣನ ಶ್ರೀರಾಮ ಪಟ್ಟಾಭಿಷೇಕದ್ದು. ಒಂದು ಭಾರತದಲ್ಲಿ ಇದೇ ಸಂದರ್ಭದಲ್ಲಿ ಬರುವ ಪದ್ಯ:

*ಪರಿಕಿಪುದೊಂದಱಿಂದೆರಡನೋತೊಳಕೊಳ್ವುದು ಮೂಱಱಿಂದೆನಾ*
*ಲ್ಕರಿದರಿದಯ್ದಱಿಂದೆ ನೆಱೆಕಲ್ವುದು ನಿರ್ಣಯಮಾಗಿರಾಱಱೊಳ್*
*ಪರಿಣತನಪ್ಪುದೇೞಱೊಳಮೊಂದದೆ ನಿಲ್ವುದು ದುರ್ವಿಮಂತ್ರಮಂ*
*ಪರೆಪ ಟಮಾಳಮಂ ಪಿರಿದನೋದಿದೊಡಪ್ಪ ಪದಾರ್ಥಮಾವುದೋ (೧೩-೬೬)*

ಇದಕ್ಕೆ ಅರ್ಥವನ್ನು ಬರೆಯುತ್ತಾ ಪ್ರೊ. ಡಿ. ಎಲ್. ನರಸಿಂಹಾಚಾರ್ಯರು 'ಬುದ್ಧಿಯಿಂದ ಕಾರ್ಯಾಕಾರ್ಯಗಳನ್ನು ಅಥವಾ ಪುಣ್ಯಪಾಪಗಳನ್ನು ಪರೀಕ್ಷಿಸುವುದು. ಶತ್ರುಮಿತ್ರ ಬಾಂಧವ ಎಂಬ ಮೂರರಿಂದ ಪ್ರೀತಿಸಿ ಒಳಪಡಿಸಿಕೊಳ್ಳಬೇಕು. ಸಾಮ, ದಾನ, ಭೇದ, ದಂಡ ಎಂಬ ಉಪಾಯಗಳು ಕಷ್ಟವಾದುವು. ಅವುಗಳನ್ನು ತಿಳಿದುಕೊಂಡು ಐದು ಜ್ಞಾನೇಂದ್ರಿಯಗಳಿಂದ ಪೂರ್ಣವಾಗಿ ಕಲಿಯುವುದು. ನಿಶ್ಚಯವಾಗಿರಲು ಸಂಧಿ ವಿಗ್ರಹ ಯಾನ ಆಸನ ಸಂಶ್ರಯ ದ್ವೈಧೀಭಾವ ಎಂಬ ಷಡ್ಗುಣಗಳಲ್ಲಿ ಚೆನ್ನಾಗಿ ತಿಳಿದವನಾಗುವುದು. ಏಳರಲ್ಲಿ ಎಂದರೆ ಸಪ್ತವ್ಯಸನಗಳಲ್ಲಿ ಸೇರದೆ ನಿಲ್ಲುವುದು. ದುಷ್ಟಮಂತ್ರಾಲೋಚನೆಯನ್ನು ವಿಸ್ತರಿಸುವ ವಂಚನೆಯ ಮಾತುಗಳನ್ನು ಹಿರಿದಾಗಿ ಹೇಳಿದರೆ ಆಗುವ ಪ್ರಯೋಜನವೇನೋ!' ಈ ವಿವರಣೆಯು ಕೂಡ ಸಂಪೂರ್ಣವಾಗಿ ಸಮರ್ಪಕವಾಗಿಲ್ಲ. ಶತ್ರುಮಿತ್ರ ಬಾಂಧವ ಎಂಬ ಮೂರರಿಂದ ಪ್ರೀತಿಸಿ ಒಳಪಡಿಸಿಕೊಳ್ಳುವುದು ಎಂದರೇನು ? ವಾಕ್ಯವೇ ಸ್ಪಷ್ಟವಾಗಿಲ್ಲ. ನಾಲ್ಕು ಉಪಾಯಗಳಿಂದ ಶತ್ರು ಮಿತ್ರ ತಟಸ್ಥರೆಂಬುವರನ್ನು ವಶಪಡಿಸಿಕೊಳ್ಳಬೇಕು ಎಂಬುದೇ ಇಲ್ಲಿರುವ ಅರ್ಥಕೂಡ. ಪಂಪನು ಮೂಲದಿಂದ ಬೇರೆ ಹೇಳಿರಲಾರ. ಆದುದರಿಂದ ಈ ಭಾಗವನ್ನು ಬೇರೆ ರೀತಿಯಲ್ಲಿ ಅರ್ಥಮಾಡಬೇಕು. ಹೀಗೆ ಅನ್ವಯಮಾಡಬಹುದೇನೋ: 'ಮೂಱಱಿಂದೆ ನಾಲ್ಕರಿದು. ಆದುದರಿಂದ ಓತು ಅರಿದು ಒಳಕೊಳ್ವುದು. ಎಂದರೆ ಶತ್ರು ಮಿತ್ರ ತಟಸ್ಥರೆಂಬ ಮೂರು ಬಗೆಯ ಜನರು ಬೇರೆಬೇರೆ ಸ್ವಭಾವದವರಾದುದರಿಂದ ಅವರಲ್ಲಿ ನಾಲ್ಕು ಉಪಾಯಗಳನ್ನು ಪ್ರಯೋಗಿಸುವುದು ಕಷ್ಟಸಾಧ್ಯ. ಆದುದರಿಂದ ನೀನೂ ನಾಲ್ಕು ಉಪಾಯಗಳನ್ನು ಪ್ರೀತಿ ವಿಶ್ವಾಸಗಳಿಂದ ಚೆನ್ನಾಗಿ ಕಲಿತು ಆ ಮೂವರನ್ನು ಒಳಗು ಮಾಡಿಕೋ. ಅನ್ವಯದ ಕ್ಲಿಷ್ಟತೆಯಿದ್ದರೂ ಇದೇ ಸರಿಯಾದ ಮೂಲದ ಅರ್ಥವೆಂಬುದು ಸ್ಪಷ್ಟವಾಗಿಯೇ ಇದೆ. ಹಾಗಾದರೆ ಕುಮಾರವ್ಯಾಸನು ಹೇಳುವ 'ಎಂಟು, ಒಂಬತ್ತು, ಹತ್ತು ಏನು ?' ಎಂಬ ಮಾತು ಉಳಿದೇ ಉಳಿಯುತ್ತದೆ. ಇದಕ್ಕೆ ನಾವು ಮೂಲಭಾರತವನ್ನೇ ಮೊರೆ ಹೋಗಬೇಕು. ಮೂಲದಲ್ಲಿ ಏಕಯಾದ್ವೇವಿನಿಶ್ಚಿತ್ಯ ಎಂದು ಹೇಳಿ ಕವಿ ಸುಮ್ಮನೆ ಬಿಟ್ಟುಬಿಡಲಿಲ್ಲ. ಅಲ್ಲಿ ಆ ಸಂಖ್ಯೆಗಳಿಗೆ ಬೇಕಾದಷ್ಟು ವಿವರಣೆ ನೀಡಿದ್ದಾನೆ. ಉದಾಹರಣೆಗೆ ಏಕ ಶಬ್ದದ ಸಂಬಂಧವನ್ನೇ ಕವಿ ೪೪, ೪೫, ೪೬, ೪೭, ೪೮, ೪೯, ೫೦, ೫೧, ೫೨ ಈ ಒಂಬತ್ತು ಪದ್ಯಗಳಲ್ಲಿ ವಿವರಿಸಿದ್ದಾನೆ. ಕವಿಯ ಉದ್ದೇಶವು ಗೊತ್ತಾಗಲೆಂಬ ದೃಷ್ಟಿಯಿಂದ ಆ ಪದ್ಯಗಳ ಅರ್ಥವನ್ನು ಇಲ್ಲಿ ಬರೆದಿದ್ದೇನೆ.

'ಒಂದಾದ ವಿಷವು ಸೇವನೆ ಮಾಡಿದವನನ್ನು ಮಾತ್ರ ಕೊಲ್ಲುತ್ತದೆ. ಒಂದೇ ಶಸ್ತ್ರವು ಒಂದು ಸಲಕ್ಕೆ ಒಬ್ಬನನ್ನೇ ಕೊಲ್ಲುತ್ತದೆ. ಆದರೆ ರಾಜ್ಯದ ರಹಸ್ಯವು ಬಹಿರಂಗವಾದರೆ ರಾಜ, ಪ್ರಜೆ, ರಾಜ್ಯ ಎಲ್ಲ ನಾಶವಾಗಿ ಬಿಡುತ್ತದೆ (೪೫) ದಿವ್ಯವಾದ ಮೃಷ್ಟಾನ್ನವನ್ನು ಒಬ್ಬನೇ ತಿನ್ನಬಾರದು. ರಾಜ್ಯ ವಿಷಯಗಳನ್ನು ಒಬ್ಬನೇ ಚಿಂತಿಸಬಾರದು. ಒಬ್ಬನೇ ತೀರ್ಮಾನಮಾಡಬಾರದು. ಒಬ್ಬನೇ ಆಗಿ ರಾಜನು ಪ್ರಯಾಣ ಮಾಡಬಾರದು. ಎಲ್ಲ ಮಲಗಿದ್ದಾಗ ಒಬ್ಬನೇ ಎಚ್ಚರವಾಗಿರಬಾರದು (೪೬) ಸಾಗರವನ್ನು ದಾಟಲು ನಾವೆ ಬೇಕಾಗಿರುವಂತೆ ಸ್ವರ್ಗಸಾಧನೆಗೆ ಸತ್ಯವ್ರತವೇ ಏಕಮಾತ್ರ ಸಾಧನ (೪೭) ಕ್ಷಮಾಗುಣವುಳ್ಳವರ ಮೇಲೆ ಒಂದೇ ಆಪಾದನೆ, ಅವರು ದುರ್ಬಲರೆಂಬುದು. ಆದರೆ ನಿಜವಾಗಿ ಕ್ಷಮಾಗುಣವು ದೌರ್ಬಲ್ಯವಲ್ಲ (೪೮,೪೯) ಯಾರ ಕೈಯಲ್ಲಿ ಶಾಂತಿ ಎಂಬ ಒಂದು ಖಡ್ಗ ಇರುತ್ತದೆಯೋ ಅವರಿಗೆ ದುರ್ಜನನಾದವನು ಏನು ತಾನೇ ಮಾಡಿಯಾನು ? ಧರ್ಮವೆಂಬುದು ಒಂದೇ ಮಾನವನ ಶ್ರೇಯಸ್ಸಿಗೆ ಕಾರಣ. ಕ್ಷಮಾಗುಣವೊಂದೇ ಶಾಂತಿಯನ್ನು ತರಬಲ್ಲದು. ಹಾಗೆಯೇ ಅಹಿಂಸೆಯೊಂದೇ ಎಲ್ಲರಿಗೂ ಸುಖವನ್ನು ತರಬಲ್ಲದು.

ಈ ಪದ್ಯಗಳಲ್ಲಿ ಒಂದು ಎಂಬುದು ಎಷ್ಟಕ್ಕೆ ಅನ್ವಯವಾಗುತ್ತದೆ ನೋಡಿ. ಹೀಗೆಯೇ

ಎರಡು ಎಂಬುದಕ್ಕೆ ೫೩ ರಿಂದ ೬೧ರವರೆಗೆ, ಮೂರು ಎಂಬುದಕ್ಕೆ ೬೨ ರಿಂದ ೬೮, ನಾಲ್ಕು ಎನ್ನುವುದಕ್ಕೆ ೬೯ ರಿಂದ ೭೩, ಐದು ಎನ್ನುವುದಕ್ಕೆ ೭೪ ರಿಂದ ೭೭, ಆರು ಎನ್ನುವುದಕ್ಕೆ ೭೮ ರಿಂದ ೯೦, ಏಳಕ್ಕೆ ೯೧ ಮತ್ತು ೯೨, ಎಂಟಕ್ಕೆ ೯೩ ರಿಂದ ೯೯, ಒಂಬತ್ತಕ್ಕೆ ೧೦೦, ಹತ್ತಕ್ಕೆ ೧೦೨. ಇಷ್ಟು ವಿವರಣೆಗಳನ್ನು ನೀಡಿ ಆ ಅಧ್ಯಾಯದ ಕೊನೆಯಲ್ಲಿ:

*ಯಃ ಸರ್ವ ಭೂತ ಪ್ರಶಮೇ ನಿವಿಷ್ಟಃ*
*ಸತ್ಯೋಮೃದುರ್ಮಾನಕೃಚ್ಛುದ್ಧಭಾವಃ*
*ಅತೀವ ಸುಜ್ಞಾಯತೇ ಜ್ಞಾತಿಮಧ್ಯೇ*
*ಮಹಾಮಣಿರ್ಜಾತ್ಯ ಇವ ಪ್ರಸನ್ನಃ (೧೨೦)*

ಯಾರು ಎಲ್ಲ ಜೀವಿಗಳಲ್ಲಿ ಶಾಂತಿಯನ್ನೂ ಸುಖವನ್ನೂ ಕಾಣಲು ಆಸಕ್ತನಾಗಿರುತ್ತಾನೋ, ಯಾರು ಸತ್ಯವನ್ನು ವ್ರತದಂತೆ ಆಚರಿಸುತ್ತಾನೋ, ಯಾರು ತನ್ನ ಮೃದು ಸ್ವಭಾವದ ಕಾರಣವಾಗಿ ಇತರರನ್ನು ಗೌರವದಿಂದ ಕಾಣುತ್ತಾನೋ, ಯಾರು ಶುದ್ಧ ಸ್ವಭಾವದವನೋ ಅವನು ಗಣಿಯಿಂದ ತೆಗೆದ ಹೊಳೆಯುವ ರತ್ನದಂತಿರುತ್ತಾನೆ. ಅವನೇ ಪ್ರಸಿದ್ಧನಾಗುತ್ತಾನೆ. ಇದನ್ನೆಲ್ಲ ಅಭ್ಯಾಸ ಮಾಡಿಯೇ ದಿ॥ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ವಚನಭಾರತದಲ್ಲಿ ಈ ಸನ್ನಿವೇಶವನ್ನು ಹೀಗೆ ವಿವರಿಸಿದ್ದಾರೆ.

೧. 'ಸತ್ಯವೊಂದೇ ಸ್ವರ್ಗಕ್ಕೆ ಸೋಪಾನ ೨. ಯುದ್ಧ ಮಾಡದ ರಾಜ, ದೇಶ ಸುತ್ತದ ಬ್ರಾಹ್ಮಣ ಈ ಇಬ್ಬರೂ ಹುತ್ತದೊಳಗಿನ ಹಾವಿನಂತೆ ಅಡಗಿ ಹೋಗುವರು. ೩. ಮನುಷ್ಯರಲ್ಲಿ ಉತ್ತಮರು, ಮಧ್ಯಮರು, ಅಧಮರು ಎಂದು ಮೂರುವಿಧ. ಅವರನ್ನೇ ಆ ಮೂರುವಿಧವಾದ ಕಾರ್ಯದಲ್ಲಿ ತೊಡಗಿಸಬೇಕು. ೪. ದೈವಸಂಕಲ್ಪ, ಬುದ್ಧಿವಂತರೊಡನೆ ಆಲೋಚನ, ವಿದ್ಯೆ, ವಿನಯ ಈ ನಾಲ್ಕೂ ಕೂಡಲೇ ಫಲ ಕಾಣತಕ್ಕವುಗಳು. ೫. ದೇವತೆಗಳು, ಪಿತೃಗಳು, ಮನುಷ್ಯರು, ಭಿಕ್ಷುಗಳು, ಅತಿಥಿಗಳು ಈ ಐವರನ್ನು ಪೂಜಿಸುವುದರಿಂದ ಶ್ರೇಯಸ್ಸುಂಟಾಗುತ್ತದೆ. ೬. ಮನುಷ್ಯನಾದವನು ಸತ್ಯ, ದಾನ, ಚಟುವಟಿಕೆ, ಸಹನೆ, ತಾಳ್ಮೆ ಧೈರ್ಯ - ಈ ಆರೂ ಗುಣಗಳನ್ನು ಯಾವಾಗಲೂ ಬಿಡಬಾರದು. ೭. ಹೆಂಗಸು, ಜೂಜು, ಬೇಟೆ, ಕುಡಿತ, ದುರ್ಭಾಷೆ, ಕಠಿನ ಶಿಕ್ಷೆ, ದುಂದು ಇವುಗಳು ರಾಜರು ಬಿಡಬೇಕಾದ ವ್ಯಸನಗಳು, ೮. ಗೆಳೆಯರೊಡನೆ ಕೂಟ, ಯಥೇಷ್ಟವಾದ ಧನ, ಮಗನ ಆಲಿಂಗನ, ರತಿ, ಸಕಾಲದಲ್ಲಿ ಪ್ರಿಯವಾದ ಮಾತು, ಸ್ವಜನದ ಮೇಲ್ಮೆ ಇಷ್ಟಪಟ್ಟ ವಸ್ತುವಿನ ಪ್ರಾಪ್ತಿ, ಜನ ಸಮುದಾಯದಲ್ಲಿ ಗೌರವ ಇವು ಎಂಟೂ ಸಂತೋಷದಲ್ಲಿ ತೇಲುವ ಬೆಣ್ಣೆಯ ಹಾಗೆ. ೯. ಒಂಬತ್ತು ಬಾಗಿಲು, ಮೂರು ಕಂಬ, ಐದು ಕಿಟಕಿ ಇರುವ ಮನೆಯನ್ನೂ ಅದರ ಯಜಮಾನನನ್ನೂ ತಿಳಿದವನೇ ದೊಡ್ಡ ವಿದ್ವಾಂಸ. (ಇಲ್ಲಿ ಒಟ್ಟು ಒಂಬತ್ತು ಎಂದು ಹೀಗೆ ತಿಳಿಯಬೇಕು: ಬಾಗಿಲುಗಳು ಎಲ್ಲ ಸೇರಿ - ೧. ಕಂಬಗಳು - ೩ ಕಿಟಕಿಗಳು - ೫, ಒಟ್ಟು - ೯ ಎಂದರ್ಥ. ಇದು ಮಾನವ ದೇಹಕ್ಕೆ ಸಂಕೇತ) ೧೦. ಮತ್ತ, ಪ್ರಮತ್ತ, ಉನ್ಮತ್ತ ಬಳಲಿದವನು, ಕೋಪ ಬಂದವನು, ಹಸಿದವನು, ಆತುರಗಾರ, ಹೇಡಿ, ಜಿಪುಣ, ಕಾಮಾತುರ - ಈ ಹತ್ತು ಜನರೂ ಧರ್ಮವನ್ನು ತಿಳಿಯಲಾರರು.

ಇಂಥ ಪ್ರಹೇಳಿಕೆಗಳಿಗೆ ಹೀಗೆಯೇ ಅರ್ಥ ಹೇಳಬೇಕೆಂಬ ನಿಯಮವೇನೂ ಇಲ್ಲ. ಆದುದರಿಂದಲೇ ಬೇರೆ ಬೇರೆ ವಿವರಣೆಗಳು ಹುಟ್ಟಿಕೊಳ್ಳುತ್ತವೆ. ಒಟ್ಟು ಸಂದರ್ಭಕ್ಕೆ ಹೊಂದುವ ಯಾವ ಅರ್ಥವಾದರೂ ಸರಿಯೇ. ಈ ದೃಷ್ಟಿಯಿಂದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ ಅರ್ಥ ವಿವರಣೆ ವ್ಯಾಸನ ಮೂಲಕ್ಕೂ ಕುಮಾರವ್ಯಾಸನ ಪದ್ಯಕ್ಕೂ ಹೊಂದಿಕೊಳ್ಳುತ್ತದೆ. ಸಂಖ್ಯೆಗಳನ್ನು ಗೂಢಾರ್ಥಗಳಿಗಾಗಿ ಉಪಯೋಗಿಸುವುದು ಕಾವ್ಯದಲ್ಲಿ ಒಂದು ಪದ್ಧತಿ. ಇದು ಹಳೆಯದು.

ದಾಸರ ಪದಗಳಲ್ಲಿ, ಕೆಲವು ಸಾಂಗತ್ಯ ಗ್ರಂಥಗಳಲ್ಲಿ ಇಂಥ ಅನೇಕ ಒಗಟುಗಳಿವೆ. ಕನ್ನಡದಲ್ಲಿ ಈ ಸಂದರ್ಭದಲ್ಲಿ ಮುದ್ದಣನ ಶ್ರೀರಾಮ ಪಟ್ಟಾಭಿಷೇಕದಲ್ಲಿ (೫-೬೪) ಬರುವ ಒಂದು ಪದ್ಯವನ್ನೂ ಆಸಕ್ತರು ಪರಿಶೀಲಿಸುವುದರಿಂದ ಈ ಬಗೆಯ ರಚನೆಗಳು ಹೇಗೆ ಹತ್ತನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ಅವ್ಯಾಹತವಾಗಿ ಬೆಳೆದು ಬಂದಿವೆ ಎಂಬುದು ತಿಳಿಯಬರುತ್ತದೆ.

ಈ ಭಾಗಕ್ಕೆ ಮಹಾಭಾರತದಲ್ಲಿ **ವಿದುರನೀತಿ** ಎಂಬ ಹೆಸರಿದೆ. ಪ್ರಜಾಗರ ಪರ್ವದಲ್ಲಿ ಬರುವ ಇದು ಬಹಳ ಪ್ರಸಿದ್ಧವಾದ ಪ್ರಸಂಗ. ಧೃತರಾಷ್ಟ್ರನಿಗೆ ವಿದುರನು ಹೇಳಿದ ನೀತಿಪಾಠ ಇದರಲ್ಲಿದೆ. ಪ್ರಜಾಗರ ಎಂದರೆ ಜಾಗರಣೆ ಎಂದೇ ಅರ್ಥ. ಸಂಜಯನು ಪಾಂಡವರಿಂದ ತಂದ ವರ್ತಮಾನವನ್ನು ಕೇಳಿ ಧೃತರಾಷ್ಟ್ರನು ಹೆದರಿಕೊಂಡು ವಿದುರನಿಗೆ ರಾತ್ರಿಯೇ ಹೇಳಿಕಳುಹಿಸುತ್ತಾನೆ. ವಿದುರ ಆ ರಾತ್ರಿಯೇ ಈ ಎಲ್ಲಾ ರಾಜನೀತಿಯನ್ನೂ ತಿಳಿಸುತ್ತಾನೆ. ಆದರೆ ಧೃತರಾಷ್ಟ್ರನು ಏನನ್ನೂ ಕಲಿಯಲಿಲ್ಲ ಎಂಬುದು ಇಂದಿನ ರಾಜಕಾರಣಕ್ಕೂ ದೃಷ್ಟಾಂತವಾಗಿದೆ.

**ಒಂಬತ್ತು, ಒಂಭತ್ತು ಇವುಗಳಲ್ಲಿ ಯಾವುದು ಸರಿ?** ಒಂದು ಕಡಮೆ ಹತ್ತು =ಒಂಬತ್ತು ಇದು ಸರಿಯಾದ ರೂಪ. ಆದರೆ ಪ್ರಾಚೀನ ಶಾಸನಗಳಲ್ಲಿ ಭ ಎಂಬ ಮಹಾಪ್ರಾಣದ ಪ್ರಯೋಗಗಳಿವೆ. ನಾವು ಈಗ ಅದನ್ನು ಅನುಸರಿಸಬೇಕಾಗಿಲ್ಲ.

**ಒಕ್ಕಲಿಗ** ಒಕ್ಕಲು ಕನ್ನಡಶಬ್ದ. ಇದರ ಮೂಲ ರೂಪ ಒಕ್ಕಲ್. ಇದಕ್ಕೆ ೧. ಮನೆ, ವಾಸದ ಜಾಗ ೨. ಮನೆತನ, ಸಂಸಾರ ೩. ಬೇಸಾಯಗಾರ, ರೈತ ಎಂಬ ಅರ್ಥಗಳಿವೆ. ಜಮೀನನ್ನು ಗುತ್ತಿಗೆ ಪಡೆದು ಅನುಭವಿಸುವವನಿಗೂ ಒಕ್ಕಲು ಎಂಬ ಅರ್ಥವಿದೆ. ಇಗ ಎಂಬುದು ಒಂದು ಪ್ರತ್ಯಯ. ಈ ಕೆಲಸ ಮಾಡುವವನು ಎಂಬ ಅರ್ಥದ ತದ್ಧಿತ ಪ್ರತ್ಯಯ ಒಕ್ಕಲ್ + ಇಗ = ಒಕ್ಕಲಿಗ = ರೈತ. ಪ್ರಾರಂಭದ ಅಕ್ಷರ ಒ, ವ ಅಲ್ಲ. ಈಚೆಗೆ ವ ಕಾರವನ್ನೇ ಹೆಚ್ಚಾಗಿ ಉಪಯೋಗಿಸುತ್ತಿದ್ದಾರೆ. ಇದು ತಪ್ಪು.

**ಒಗಟು** ಇದು ಒಗಂಟು ಎಂಬ ಕನ್ನಡ ಶಬ್ದದ ಆಧುನಿಕ ರೂಪ. ಇದು ಸುಲಭವಾಗಿ ತಿಳಿಯಲು ಅಥವಾ ಅರ್ಥ ಹೇಳಲು ಆಗದಿರುವ ಗೂಢವಾಕ್ಯ. ಒಗಟೆ ಎಂಬ ಶಬ್ದವೂ ಕನ್ನಡದಲ್ಲಿ ಪ್ರಯೋಗದಲ್ಲಿದೆ. ಇದು ನಿಜವಾಗಿ ಒಂದು ಸಮಸ್ಯೆ. ಅದನ್ನು ಬಿಡಿಸಬೇಕು.

**ಒಡಪು** ಈ ಶಬ್ದ ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಪ್ರಯೋಗದಲ್ಲಿದೆ. ಇದಕ್ಕೆ ಒಗಟು ಎಂಬ ಅರ್ಥವೂ ಇದೆ. ಆದರೆ ಸಾಮಾನ್ಯವಾಗಿ ವಿವಾಹ ಸಂದರ್ಭದಲ್ಲಿ ವಧುವು ಗಂಡನ ಹೆಸರನ್ನು ಹೇಳುವಾಗ ಒಡಪಿನ ರೂಪದಲ್ಲಿ ಹೇಳುವ ಪದ್ಧತಿಯಿದೆ. ಇದಕ್ಕೆ ಒಡಪು ಹಾಕುವುದು ಎಂದೇ ಹೆಸರಿದೆ.

**ಒಡಲಿಚ** ಈ ಶಬ್ದಕ್ಕೆ ಮನ್ಮಥ ಎಂದರ್ಥ. ಈ ಶಬ್ದದಲ್ಲಿ ಒಡಲು + ಇಚ ಎಂಬ ಎರಡು ಭಾಗಗಳಿವೆ. ಇಚ ಎಂಬುದು ಅಲ್ಲಿ ಹುಟ್ಟಿದವನು. ಅಲ್ಲಿ ಬೆಳೆದವನು, ಅಲ್ಲಿ ಇರುವವನು ಎಂಬ ಅರ್ಥಗಳಲ್ಲಿ ಪ್ರಯೋಗವಾಗುತ್ತದೆ. ಅಲರಿಚ ಎಂಬ ಶಬ್ದವನ್ನು ನೋಡಿ. ಅಲರ್ = ಹೂವು, ಕಮಲದ ಹೂವು + ಇಚ — ಅದರಲ್ಲಿ ಹುಟ್ಟಿದವನು. ಅಂದರೆ ಬ್ರಹ್ಮ ಪದ್ಮಜ. ಆತ್ಮಭೂ ನೋಡಿ.

**ಒಡೆಮುರಿಚು** ಇದು ಕನ್ನಡ ಶಬ್ದ. ಇದಕ್ಕೆ ಒಡೆದುಹೋಗುವಂತೆ ಬಾಗಿಸು, ತಿರುಗಿಸು ಎಂದರ್ಥ. ಮುರಿ = ಬಾಗು, ಮುರಿಚು = ಬಾಗಿಸು, ಬಗ್ಗಿಸು.

**ಒಣಗಿಸು** =ಹಸಿ ಇಲ್ಲದಂತೆ ಮಾಡು ಒದ್ದೆಯಾಗಿರುವುದು ಹೋಗಿ ನಿರ್ದ್ರವವಾಗುವುದು.

**ಒದೆ, ಹೊಡೆ** ಒದೆಯುವುದು ಕಾಲಿನಿಂದ. ಹೊಡೆಯುವುದು ಕೈಯಿಂದ ಅಥವಾ ದೊಣ್ಣೆಯಿಂದ. ಕೊಂಬಿನಿಂದ ಒದೆಯುವುದಕ್ಕೆ ಹಸುವಿಗೆ ಸಾಧ್ಯವೇ? ಕುದುರೆ

ಒದೆಯಿತು ಎಂದರೆ ಅರ್ಥವೇನು? ನೋಡಿ. ಇದು ಮನುಷ್ಯರ ಅಂಗಾಂಗಗಳಿಗೆಲ್ಲ ಒಂದೊಂದು ಕೆಲಸವಿರುವುದು ಎಂಬುದನ್ನು ತಿಳಿಸುತ್ತದೆ.

**ಒನ್ (one)** One millionth, croreth ಎಂಬ ಶಬ್ದಗಳ ಹಾಗೆ ಕನ್ನಡದಲ್ಲಿ ಯಾವ ರೂಪವಿದೆ? ಇಂಗ್ಲಿಷಿನಲ್ಲಿ million ಶಬ್ದವನ್ನು ಉಪಯೋಗಿಸಿದರೂ crore ಎಂಬ ಶಬ್ದವನ್ನು ಉಪಯೋಗಿಸುವುದಿಲ್ಲ. ಇಂಗ್ಲಿಷ್ ನಿಘಂಟುಗಳಲ್ಲಿಯೂ ಕೂಡ An Anglo Indian Word ಎಂದು ಸೂಚಿಸಿ ಸುಮ್ಮನಾಗುತ್ತಾರೆ. ಆದ್ದರಿಂದ Croreth ನಿಮಗೆ ಸಿಕ್ಕುವುದಿಲ್ಲ. Millionth ಇದೆ. ಕನ್ನಡದಲ್ಲಿ ಒಂದರಿಂದ ಹಿಡಿದು ೯೯೯ ರ ತನಕ ಲೆಖ್ಖಕ್ಕೆ ಸಿಗುವ ಶಬ್ದಗಳಿವೆ. ಸಾವಿರ ಎಂಬ ಶಬ್ದಕೂಡ ಸಹಸ್ರದ ತದ್ಭವ. ಹೀಗಾಗಿ ಒಂಬೈನೂರ ತೊಂಬತ್ತೊಂಬತ್ತನೆಯ ಎಂದು ಹೇಳುವತನಕ ಶಬ್ದಗಳಿವೆ. ಮುಂದೆ – ಅನೆಯ ಸೇರುವುದಿಲ್ಲ. ಸಾವಿರದ ಅಷ್ಟೆ! ಸಾವಿರದನೆಯ ಇಲ್ಲ. ಆದರೆ ಸಾವಿರದ ನೂರನೆಯ, ಸಾವಿರದ ಒಂದನೆಯ ಮುಂತಾದುವು ಇವೆ. ಇವು ಭಾಷೆಗಳ ಚರಿತ್ರೆಯ ಪ್ರಮುಖಾಂಶಗಳು.

**ಒಪ್ಪಿತ** ಕನ್ನಡದಲ್ಲಿ ಈ ಶಬ್ದ ಬಹಳ ಕಾಲದಿಂದಲೂ ಒಪ್ಪಿತವಾಗಿದೆ. ಒಪ್ಪಿತ ೧. ಸಮ್ಮತಿ, ಅನುಮತಿ ೨. ಹಸ್ತಾಕ್ಷರದ ಸಹಿ. ಇದಕ್ಕೆ ಮೂಲ ಒಪ್ಪು ಎಂಬ ಧಾತು. ಒಪ್ಪ ಎಂಬ ಶಬ್ದಕ್ಕೆ ಸಹಿ ಎಂಬ ಅರ್ಥವೂ ಇದೆ. ಹೀಗೆ ಕೃದಂತವಾಗುವುದು ಸಂಸ್ಕೃತ ವ್ಯಾಕರಣ ಪದ್ಧತಿ. 'ಕ್ತ' ಪ್ರತ್ಯಯವನ್ನು ಸೇರಿಸುವ ಕ್ರಮ. ಆದರೆ ಕೆಲವು ಅಪೂರ್ವ ಕನ್ನಡದ ರೂಪಗಳಲ್ಲಿ ಕವಿಗಳು ಇದನ್ನು ಒಪ್ಪಿದ್ದಾರೆ. ತಪ್ಪಿತ ಎಂಬುದು ಮತ್ತೊಂದು ಉದಾಹರಣೆ. ಅಲ್ಲಿಂದ ಮುಂದೆ ಹೋಗಿ ತಪ್ಪಿತಸ್ಥ ಎಂಬ ರೂಪವನ್ನು ಉಪಯೋಗಿಸಿದ್ದಾರೆ. ಇಂಥ ಶಬ್ದಗಳನ್ನು ಜನ ಒಪ್ಪಿರುವುದರಿಂದ ಅವುಗಳನ್ನು ತಪ್ಪು ಎನ್ನುವುದು ತಪ್ಪು. ಕಂಡಿತ ಎಂಬ ರೂಪಕ್ಕೂ ಇದಕ್ಕೂ ಸಾಮ್ಯವಿಲ್ಲ. ಕಾಣು ಶಬ್ದ ಕಂಡ ಎಂದೇ ಆಗುತ್ತದೆ.

**ಒಲಿಸು** ಒಲಿಸು ಎಂಬುದು ಒಲ್, ಒಲಿ ಎಂಬುದರಿಂದ ಬಂದುದು. ಒಲಿ ಎಂದರೆ *೧. ಒಪ್ಪಿಕೊ ೨. ಆಸೆಪಡು ೩. ಮೆಚ್ಚು ೪. ಮೋಹಗೊಳ್ಳು* ಇಷ್ಟು ಅರ್ಥಗಳಿವೆ. ಇದಕ್ಕೆ ಇಸು ಎಂಬ ಪ್ರತ್ಯಯವನ್ನು ಸೇರಿಸಿದರೆ ಒಪ್ಪಿಸು, ಆಸೆಪಡಿಸು, ಮೆಚ್ಚಿಸು, ಮೋಹಗೊಳಿಸು ಎಂಬ ಅರ್ಥಗಳು ಬರುತ್ತವೆ. ಇವೆಲ್ಲ ಅರ್ಥಗಳಿಗೂ ಕಾವ್ಯಪ್ರಯೋಗಗಳು ದೊರಕುತ್ತವೆ.

**ಒಸಗೆ** ಇದು ಕನ್ನಡ ಶಬ್ದ. ಇದಕ್ಕೆ *೧. ಶುಭಕಾರ್ಯ, ಮಂಗಳಕಾರ್ಯ ೨. ಉತ್ಸವ ೩. ಉಡುಗೊರೆ ೪. ಮಂಗಳಕರವಾದ ಸಮಾಚಾರ, ವರ್ತಮಾನ* ಎಂಬ ಅರ್ಥಗಳಿವೆ. ಇದಕ್ಕೆ ತೆಲುಗಿನಲ್ಲಿ ಒಸಗು ಎಂಬ ಜ್ಞಾತಿ ಶಬ್ದವಿದೆ. ಒಸವು ಎಂದೂ ಹೇಳುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಈ ಶಬ್ದವನ್ನು ಇತರ ಶಬ್ದಗಳೊಡನೆ ಸೇರಿಸಿ ಅನೇಕ ಸಮಾಸಗಳನ್ನು ಮಾಡಿ ಕವಿಗಳು ಉಪಯೋಗಿಸಿದ್ದಾರೆ. ಇದು ಕವಿಗಳಿಗೆ ಪ್ರಿಯವಾದ ಶಬ್ದ. ಈ ಸಮಾಸಗಳನ್ನು ಗಮನಿಸಿ. ಒಸಗೆದಮ್ಮಟೆ; ಒಸಗೆದೇರು; ಒಸಗೆನೀರ್; ಒಸಗೆನುಡಿ; ಒಸಗೆಯೋಕುಳಿ; ಒಸಗೆವಾಡು; ಒಸಗೆವಾತು; ಒಸಗೆಯೋಲೆ. ಡಿ.ವಿ.ಜಿ. ಅವರ ಉಮರನ ಒಸಗೆ ನೆನಪಿಗೆ ಬರುತ್ತದೆ.

## ಓ

**ಓಕೆ, O.K.** ಎಂದರೇನು ಎಂಬ ಪ್ರಶ್ನೆಗೆ ಸ್ವಲ್ಪ ದೀರ್ಘವಾಗಿ ಉತ್ತರಿಸಬೇಕು. ಈ ಶಬ್ದವನ್ನು

ಇಂಗ್ಲಿಷ್ ನಿಘಂಟುಕಾರರು 'An Ever Green of the Correspondence Column' ಎಂದು ಕರೆಯುತ್ತಾರೆ. ನಿಘಂಟುಗಳಲ್ಲಿ ಈ ಶಬ್ದವನ್ನು O.K., Oke, Okay ಎಂದು ಮೂರು ಬಗೆಯಾಗಿ ಗುರುತಿಸುತ್ತಾರೆ. ಇದರ ಮೂಲದ ವಿಚಾರವಾಗಿ ಅನೇಕ ಸಿದ್ಧಾಂತಗಳು ಘೋಷಿತವಾಗಿವೆ. ಆದರೆ ಯಾವುದಕ್ಕೂ ಭಾಷಾಶಾಸ್ತ್ರದ ಒಪ್ಪಿಗೆ ದೊರೆತಿಲ್ಲ. ಚರ್ಚೆಯ ಆಸ್ತಿಯಾಗಿ ಉಳಿದಿದೆ. ಅಮೆರಿಕದ ಆಡುಮಾತಿನಲ್ಲಿ ಈ ಶಬ್ದ ರೂಪಗೊಂಡಿತು. ಕ್ರಿ. ಶ. ೧೮೪೦ರ ವೇಳೆಗೆ ಇದು ಅಸ್ತಿತ್ವಕ್ಕೆ ಬಂದಿತ್ತು ಎನ್ನುತ್ತಾರೆ. ೧೯೩೫ ರ ಫೆಬ್ರವರಿ ೧೫ರ ಸ್ಪೆಕ್ಟೇಟರ್ ಪತ್ರಿಕೆಯಲ್ಲಿ Richard Church ಎನ್ನುವ ಲೇಖಕ ಹೀಗೆ ಬರೆದಿದ್ದಾನೆ: A child replied 'oke' to what I said. After a shudder of dismay, I reflected that this telescoped version of o.k., now used to mean "Right you are" or "I agree", or any other form of assent, will ultimately appear in the text book as a legitimate word, with an example quoted from a poet who is at present mute and inglorious. ಇದರಿಂದ ಈ ಶಬ್ದದ ಬಗ್ಗೆ ಇಂಗ್ಲೆಂಡಿನ ಜನರಿಗೆ ಎಷ್ಟು ಗೌರವವಿದ್ದಿತೆಂದು ನಾವು ಭಾವಿಸಬಹುದು. ಆದರೆ Masons 'O.K' Sauce ಎಂಬ ರುಚಿಕರವಾದ, ಆಹಾರದ ಜೊತೆಗೆ ಉಪಯೋಗಿಸುವ, ಗೊಜ್ಜಿನ ಮಾರಾಟದ ಜನಪ್ರಿಯತೆಯಿಂದ ಬೇಗ ಜನತೆಗೆ ಪರಿಚಯವಾಯಿತು.

ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಪ್ರಸಿದ್ಧ ನಿಘಂಟಿನಲ್ಲಿ ಇದಕ್ಕೆ All right, correct, safe, suitable ಇತ್ಯಾದಿ ಅರ್ಥಗಳನ್ನು ಕೊಡಲಾಗಿದೆ. ಆದರೆ ಈ ಶಬ್ದದ ಮೂಲವನ್ನು ಕುರಿತ ಎಲ್ಲ ಸಿದ್ಧಾಂತಗಳನ್ನೂ ಬಿಟ್ಟು ಬೇರೊಂದು ಟಿಪ್ಪಣಿಯನ್ನು ಪ್ರಸಿದ್ಧ ನಿಘಂಟುಕಾರನಾದ Robert Burchfield ಸೇರಿಸಿದ್ದಾನೆ. ಈ ಶತಮಾನದ ೭ನೆಯ ದಶಕದಲ್ಲಿ, Glanville Vance ಎಂಬ ಪ್ರಸಿದ್ಧ ಸಂಗೀತಗಾರನು ಹಾಡುತ್ತಿದ್ದ ಒಂದು ಗೀತದಲ್ಲಿ ಈ O.K: Thing to do ಮತ್ತು The O.K. thing on Sunday is the walking in the Zoo ಎಂಬ ಸಾಲುಗಳು ಅದರಲ್ಲಿವೆ. ಈ ಲೇಖನ ಭಾಗದಲ್ಲಿ O.K. ಎಂಬುದನ್ನು ೧೮೪೦ನೆಯ ಇಸವಿಗೆ ಹಿಂದಕ್ಕೆ ಒಯ್ಯಲಾಗಿದೆ. ಇದರ ಮೂಲದ ಬಗ್ಗೆ ಇರುವ ಭಾಗವನ್ನು ಓದುಗರ ಪರಿಚಯಕ್ಕೆಂದು ಪೂರ್ತಿಯಾಗಿ ಇಲ್ಲಿ ಕೊಡುತ್ತೇನೆ. Dr. Allen Walker Read. The evidence on "O.K." Saturday review of literature: 19th July 1941. Has conclusively dated it back to 1840 and to a Semi-Secret political society known as "The Democratic O.K." Wherein the letters O.K. are used as a cabalistic symbol, perhaps for old kinderhook the nickname of Maptin Van Buren. ಈ ಶಬ್ದದ ಚರಿತ್ರೆ ಸದ್ಯಕ್ಕೆ ಇಲ್ಲಿಗೆ ನಿಂತಿದೆ.

ನಾನು ಅಮೆರಿಕ ಮತ್ತು ಕೆನಡ ದೇಶಗಳಲ್ಲಿ ಪ್ರವಾಸ ಮಾಡಿದಾಗ ಇಳಿದುಕೊಂಡಿದ್ದ ಎಲ್ಲ ಭಾರತೀಯರ ಮನೆಗಳಲ್ಲಿಯೂ O.K. ತುಂಬ ಪ್ರಚಾರದಲ್ಲಿತ್ತು. 'ಸರಿಯೇ'? ಎಂಬ ಪ್ರಶ್ನೆಗೆ ಸಾಮಾನ್ಯವಾಗಿ O.K. ಎಂದೂ 'ಸರಿ' ಎಂಬ ಉತ್ತರಕ್ಕೆ ಸಾಮಾನ್ಯವಾಗಿ O.K. ಎಂದೂ ಪ್ರಯೋಗಿಸಲಾಗುತ್ತಿತ್ತು. ಈ ಬಗೆಯ ಸಂವಾದ ನಡೆಯುತ್ತಿದ್ದುದು ತಾಯಿ ಮಕ್ಕಳ ನಡುವೆ ಹೆಚ್ಚಾಗಿ ಎಂದು ನನ್ನ ಗಮನಕ್ಕೆ ಬಂತು. ಶಾಲೆಗೆ ಮಕ್ಕಳು ಹೊರಟಾಗ ಎಲ್ಲ ಸಿದ್ಧತೆಗಳಿಗೆ ಸಂಬಂಧಿಸಿದಂತೆ ಈ ಮಾತುಕತೆ ನಡೆಯುತ್ತಿತ್ತು. ಕನ್ನಡದಲ್ಲಿ ಹೀಗೆಯೇ ಪ್ರಭಾವಶಾಲಿಯಾಗಿ ಬೆಳೆದ ಮತ್ತೊಂದು ಶಬ್ದದ ನೆನಪನ್ನು ಹಂಚಿಕೊಳ್ಳುವುದಕ್ಕೆ ಇದು ಸರಿಯಾದ ಸಂದರ್ಭ. ಈ ಶತಮಾನದ ಪ್ರಾರಂಭದಲ್ಲಿದ್ದ ಕನ್ನಡದ ಬರವಣಿಗೆಯಲ್ಲಿ 'ಮತ್ತು' ಎಂಬ ಶಬ್ದ ಎಲ್ಲಿಯೂ ಪ್ರಯೋಗವಾದದ್ದು

ಕಂಡುಬರುವುದಿಲ್ಲ. ಮೊಲವೂ ಆಮೆಯೂ ಎಂಬಂತೆ 'ಊ' ಎಂಬ ಸಮುಚ್ಚಯ ಪ್ರತ್ಯಯ 'ಮತ್ತು' ಎಂಬ ಶಬ್ದದ ಕೆಲಸವನ್ನು ಚೆನ್ನಾಗಿಯೇ ಮಾಡುತ್ತಿತ್ತು. ಇಂಗ್ಲಿಷಿನ ANDಎಂಬ ಶಬ್ದಕ್ಕೆ 'ಮತ್ತು' ಎಂಬುದು ಸಮಾನ ಎಂದು ಪ್ರಯೋಗವು ಪ್ರಾರಂಭವಾದ ಮೇಲೆ ಮೊಲ ಮತ್ತು ಆಮೆ ಆಯಿತು. ಹೀಗೆ ಕನ್ನಡ ಬರವಣಿಗೆಯಲ್ಲಿ **ಮತ್ತು** ಎಂಬುದು ಎಲ್ಲೆಲ್ಲೂ ತಾಂಡವವಾಡುತ್ತಿದೆ.

**ಓಜ** ಎನ್ನುವ ಶಬ್ದ ಸಂಸ್ಕೃತದ ಉಪಾಧ್ಯಾಯ ಎಂಬುದರಿಂದ ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದುದು. ಪ್ರಾಕೃತದಲ್ಲಿ ಅದು ಉವಜ್ಝಯ ಎಂದಾಗುತ್ತದೆ. ಕನ್ನಡದಲ್ಲಿ ಒವಜ್ಝ, ಓಜ್ಝ, ಓಜ, ಒವಜ್ಜ ಇತ್ಯಾದಿ ಅನೇಕ ರೂಪಗಳನ್ನು ಪಡೆಯುತ್ತದೆ. ಕನ್ನಡದಲ್ಲಿ ೯ನೆಯ ಶತಮಾನದಿಂದ ಶಾಸನಗಳಲ್ಲಿ ಮತ್ತೆ ಸಾಹಿತ್ಯದಲ್ಲಿ ಈ ಶಬ್ದ ಪ್ರಯೋಗದಲ್ಲಿದೆ. ಯಾವುದೋ ಸಂದರ್ಭದಲ್ಲಿ ಇದು ವಾಜ ಎಂಬ ರೂಪವನ್ನು ಪಡೆಯಿತು. ಅದಕ್ಕೆ ಕನ್ನಡದಲ್ಲಿ ಅಕ್ಕಸಾಲೆ ಎಂಬ ಅರ್ಥ ಬಂದಿದೆ.

**ಓಜಸ್ಸು** ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ ಪ್ರಕಾಶ, ಕಾಂತಿ, ಬೆಳಕು ಎಂದು ಅರ್ಥ. ಶರೀರದ ಬಲ, ಚೈತನ್ಯ ಎಂದೂ ಅರ್ಥವುಂಟು. ಆದರೆ ಈ ಶಬ್ದವನ್ನು ಹೆಚ್ಚಾಗಿ ಕಾವ್ಯಗುಣಗಳಲ್ಲಿ ಒಂದು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ದೊಡ್ಡ ಸಮಾಸ ಶಬ್ದಗಳಿಂದ ಕೂಡಿರುವ ಜಟಿಲವಾದ ರಚನೆಯಲ್ಲಿ ಓದುಗನಿಗೆ ಈ ಓಜಸ್ ಎಂಬ ಗುಣ ಕಾಣುತ್ತದೆ ಎಂದು ಆಲಂಕಾರಿಕರು ತಿಳಿಸುತ್ತಾರೆ. ವೀರ, ಅದ್ಭುತ ಮತ್ತು ರೌದ್ರ ರಸಗಳ ನಿರೂಪಣೆಗೆ ಈ ಗುಣ ಬಹಳ ಸಹಾಯಕ ಎಂಬುದೆ ಕೆಲವರು ಆಲಂಕಾರಿಕರ ಅಭಿಪ್ರಾಯ.

**ಓಣಿ ಕೇರಿ, ಗಲ್ಲಿ, ರಸ್ತೆ, ಬೀದಿ** ಮೊದಲೆರಡು ಕನ್ನಡ ಶಬ್ದಗಳು. *೧. ಸಾಲು, ೨. ಸಣ್ಣದಾರಿ ೩. ಹಳ್ಳ ೪. ಒಂದು ಗುಂಪಿನ ಜನರ ಕೇರಿ* ಎಂಬ ಅರ್ಥಗಳಿವೆ. **ಕೇರಿ** ಎಂಬುದೂ ಕನ್ನಡ ಶಬ್ದವೇ. ಈ ಶಬ್ದಕ್ಕೆ *೧. ಸಾಲು, ೨. ಪಗಡೆಯ ಹಾಸಿನ ಮನೆಗಳ ಸಾಲು ೩. ವಾಸಿಸುವ ಜನರ ಮನೆಗಳ ಎರಡು ಸಾಲುಗಳ ನಡುವಿನ ಹಾದಿ* ಎಂಬ ಅರ್ಥಗಳಿವೆ. **ಗಲ್ಲಿ** — ಹಿಂದೀ, ಮರಾಠೀ ಭಾಷೆಗಳಲ್ಲಿ ಈ ಶಬ್ದದ ರೂಪ ಗಲ್ಲೀ. ಇದಕ್ಕೆ ಓಣಿ ಎಂಬುದೇ ಅರ್ಥ. ಬೀದಿ ಇದು ಸಂಸ್ಕೃತದ ವೀಥೀ ಎಂಬುದರಿಂದ ಬಂದ ತದ್ಭವ ಶಬ್ದ. ಇದಕ್ಕೆ ಹಾದಿ, ದಾರಿ, ಮಾರ್ಗ ಎಂದೇ ಅರ್ಥ. ವಿಧಾನ ವೀದಿ ತಪ್ಪು. ವಿಧಾನ ವೀಥೀ ಅಥವಾ ವಿಧಾನ ಬೀದಿ ಸರಿ. ಆದರೆ ಈ ಬೀದಿ ಶಬ್ದಕ್ಕೆ ಹೊಂದಿಕೊಂಡಿರುವ ಕನ್ನಡ ನುಡಿಗಟ್ಟುಗಳು ಹೆಚ್ಚಾಗಿವೆ. ಬೀದಿಮಾತು, ಬೀದಿಗೆ ಬರು, ಬೀದಿಗೆ ಎಳೆ, ಬೀದಿ ಪಾಲು ಮಾಡು, ಬೀದಿ ಜಗಳ, ಬೀದಿ ದೀಪ, ಬೀದಿ ಬಸವ, ಬೀದಿ ಕಾಮಣ್ಣ, ಬೀದಿ ಸುದ್ದಿ, ಬೀದಿ ಜನ ಮುಂತಾಗಿ ಅನೇಕ ಪದ ಪುಂಜಗಳು ಪ್ರಚಾರದಲ್ಲಿವೆ. ಇವುಗಳ ಅರ್ಥ ಸ್ವಯಂ ಸ್ಪಷ್ಟ. ರಸ್ತೆ ಇದು ಪಾರಸೀ ಭಾಷೆಯ ರಾಸ್ತಾಹ್ ಎಂಬ ಶಬ್ದ. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ರಾಸ್ತಾ ಎಂದಾಗಿ ಕನ್ನಡದಲ್ಲಿ ರಸ್ತೆ ಆಗಿದೆ. ಇದಕ್ಕೆ ಬೀದಿ, ದಾರಿ, ಮಾರ್ಗ ಎಂಬುದಾಗಿ ಅರ್ಥ.

**ಓದುಗದ ಸ್ತ್ರೀಲಿಂಗ ರೂಪ** ಓದುಗಿತಿ, ಓದುಗಿತ್ತಿ ಎಂದೂ ಓದುಗಾರ್ತಿ ಎಂದೂ ಶಬ್ದಗಳನ್ನು ಉಪಯೋಗಿಸಬಹುದು. 'ಓದುಗಿ' ಆಗುವುದಿಲ್ಲ.

**ಓದುವುದು ಶಾಸ್ತ್ರ ಇಕ್ಕುವುದು ಗಾಳ** ಇದು ಅರ್ಥ ತುಂಬಿರುವ ಗಾದೆ. ಸಮಾಜದಲ್ಲಿ ಜನರನ್ನು ವಂಚಿಸುವವರು ಅನೇಕರಿದ್ದಾರೆ. ಅವರೆಲ್ಲ ಸ್ವಾರ್ಥಿಗಳು. ಸ್ವಾರ್ಥ ಲಾಭಕ್ಕಾಗಿ ಅವರು ಏನೇನು ಮಾಡಲೂ ಸಿದ್ಧರು. ಈ ಕಾರ್ಯಕ್ಕಾಗಿ ಅವರು ಯಾವ ಶಾಸ್ತ್ರದ ಆಧಾರವನ್ನು ಬೇಕಾದರೂ ಹೇಳಬಲ್ಲರು. ಅಂಥ ಶಕ್ತಿ ಅವರಲ್ಲಿದೆ. ನೋಡುವುದಕ್ಕೆ ತಿಳಿದವರ ಹಾಗೆ ತೋರಿಸಿ ಪ್ರಾಚೀನ ಗ್ರಂಥಗಳ ಆಧಾರವನ್ನು ಹೇಳಬಲ್ಲರು. ಆದರೆ ಆ

ಎಲ್ಲ ತೋರಿಕೆಯ ಹಿಂದೆ ಇರುವುದು ಮೀನನ್ನು ಹಿಡಿಯುವ ಗಾಳವನ್ನು ಎಸೆಯುವ ಬುದ್ಧಿ. ಅಂಥವರ ಬಗ್ಗೆ ಎಚ್ಚರ.

**ಓಬೀರಾಯನ ಕಾಲ** ಓಬೀರಾಯ, ಓಬೀರಾಯನ ಕಾಲ ಎಂಬ ಎರಡೂ ರೂಪಗಳ ಮೂಲವನ್ನು ಹುಡುಕುವುದರಲ್ಲಿ ನಾವು ಯಾರೂ ಸಫಲರಾಗಿಲ್ಲ. ಯಾವುದೋ ಪ್ರಾಚೀನ ಕಾಲದಲ್ಲಿದ್ದ ಒಬ್ಬ ರಾಜ ಎಂದೂ, ಆತನಿದ್ದ ಕಾಲ ಎಂದೂ ಅವುಗಳಿಗೆ ಕ್ರಮವಾಗಿ ಅರ್ಥ. ಅಷ್ಟೇ! ಆಲಂಕಾರಿಕವಾಗಿ ತುಂಬ ಹಳೆಯದು ಎಂಬ ಅರ್ಥದಲ್ಲಿಯೂ ಬಳಕೆ.

**ಓಸುಗ, ಓಸ್ಕರ** ಇದೊಂದು ಅವ್ಯಯ. ಈ ಅವ್ಯಯಕ್ಕೆ ನಾಲ್ಕು ಪರ್ಯಾಯ ರೂಪಗಳಿವೆ. ಓಸ್ಕರ, ಓಸುಕರ, ಓಸುಗ, ಓಸುಗರ. ಈ ಪ್ರತ್ಯಯವು ಯಾವುದಾದರೂ ಪ್ರಯೋಜನವನ್ನು ಸೂಚಿಸುವ ಸಲುವಾಗಿ ಎಂಬರ್ಥದಲ್ಲಿ ಚತುರ್ಥೀ ವಿಭಕ್ತಿಯ ಮೇಲೆ ಹತ್ತುತ್ತದೆ. ಈ ಎಲ್ಲ ರೂಪಗಳೂ ಸರಿಯಾದುವು.

**ಓರ್‌ಆಯಿಲ್** ಇದು ತಪ್ಪು ಶಬ್ದ-ತಪ್ಪು ಉಚ್ಚಾರಣೆ. ಸರಿಯಾದ ಇಂಗ್ಲಿಷ್ ಶಬ್ದ ಹೀಗಿದೆ: Overhaul ಓವರ್‌ಹಾಲ್. ಈ ಶಬ್ದಕ್ಕೆ ಅರ್ಥ ಚೆನ್ನಾಗಿ ಪರೀಕ್ಷೆಮಾಡಿ ಆಗಬೇಕಾದ ಎಲ್ಲ ರಿಪೇರಿಗಳನ್ನು ಮಾಡುವುದು ಎಂದರ್ಥ. ಇಲ್ಲಿ ಯಾವ ಆಯಿಲ್ಲೂ ಇಲ್ಲ.

**ಓಲೈಸು** ಎಂಬುದು ಓಲಗಿಸು ಎಂಬ ಶಬ್ದದ ಪರ್ಯಾಯ ರೂಪ. ಈ ಶಬ್ದಕ್ಕೂ ಅನೇಕ ಅರ್ಥಗಳಿವೆ. ೧. ಓಲಗವನ್ನು ನಡೆಸು, ದರ್ಬಾರು ನಡೆಸು, ದೊಡ್ಡ ಸಭೆಯಲ್ಲಿ ಪ್ರಧಾನ ಪಾತ್ರವಹಿಸು ೨. ಸೇವೆ ಮಾಡು ೩. ಕಾಣಿಕೆಯನ್ನು ಅರ್ಪಿಸು ೪. ಅಧೀನನಾಗಿ ಕೆಲಸವನ್ನು ನಿರ್ವಹಿಸು.

## ಔ

**ಔಜ್ವಲ್ಯ** ಉಜ್ವಲ ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ ಚೆನ್ನಾಗಿ ಹೊಳೆಯುತ್ತಿರುವುದು, ಪ್ರಕಾಶಮಾನವಾದುದು **ಉಚ್ಚೈರ್ಜ್ವಲತಿ** ಎಂದರ್ಥ. ಇದರ ಭಾವನಾಮ ಔಜ್ವಲ್ಯ. ಉಜ್ವಲ ಸ್ವಭಾವಃ ಎಂದು ಸಂಸ್ಕೃತದ ವಿವರಣೆ. ಇದಕ್ಕೆ ಅಧಿಕವಾದ ಕಾಂತಿ, ಮಹಾಪ್ರಕಾಶ ಎಂದು ಅರ್ಥ. ಶೃಂಗಾರ ರಸ ಎಂದೂ ಅರ್ಥವಿದೆ.

**ಔತಣ** ಸಂಸ್ಕೃತದ ಓದನ, ಔದನ ಎಂಬ ಶಬ್ದಗಳು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದಿರುವುದು ನಿಜ. ಪ್ರಾಕೃತದಲ್ಲಿ ಔದಣ ಎಂಬ ರೂಪವಿದೆ. ಇದಕ್ಕೆ ಅನ್ನ ಎಂದು ಮೂಲದಲ್ಲಿ ಅರ್ಥ. **ದಧ್ಯೋದನ** ಎಂಬ ಶಬ್ದವನ್ನು ನೋಡಿ. ಕನ್ನಡದಲ್ಲಿ ಔತಣ ಎಂದರೆ ಸತ್ಕಾರದಲ್ಲಿ ನೀಡುವ ಭೋಜನ ಎಂಬ ಅರ್ಥವಿದೆ. ಅವುತಣ ಎಂಬುದೂ ಅವ್ತಣ ಎಂಬುದೂ ಇತರ ಪರ್ಯಾಯ ರೂಪಗಳು. ಔತಣ ಎಂಬುದೇ ತುಂಬ ಜನಪ್ರಿಯ ರೂಪ.

**ಔತ್ತಮ್ಯ** ಉತ್ತಮ ಎಂಬುದು ಗುಣವಾಚಕ ಶಬ್ದ. ಸಂಸ್ಕೃತದಲ್ಲಿ ಅದು ನಾಮಪದವಾದಾಗ ಔತ್ತಮ್ಯ ಆಗುತ್ತದೆ.

**ಔರಸಪುತ್ರ - ಮಾನಸಪುತ್ರ** ಉರಸ್ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಎದೆ ಎಂದರ್ಥ. ಸಂಸ್ಕೃತ ಭಾಷೆಯಲ್ಲಿ ಔರಸ ಎಂದರೆ ಎದೆಗೆ ಸಂಬಂಧಿಸಿದ, ಹೃದಯಕ್ಕೆ ಸಂಬಂಧಿಸಿದ ಎಂದರ್ಥ. ಎಂದರೆ ಶರೀರಕ್ಕೆ ಸಂಬಂಧಿಸಿದ ಎಂಬುದು ತಾತ್ಪರ್ಯಾರ್ಥ. ಹೊಟ್ಟೆಯಲ್ಲಿ ಹುಟ್ಟಿದ ಮಗ, ಮದುವೆಯಾದ ಹೆಂಗಸಿನಲ್ಲಿ ಹುಟ್ಟಿದ ಮಗ ಎಂದು ಅದರ ಅರ್ಥ.

ಮನುಧರ್ಮಶಾಸ್ತ್ರದಲ್ಲಿ ಹನ್ನೆರಡು ಬಗೆಯ ಮಕ್ಕಳನ್ನು ಗುರುತಿಸಲಾಗಿದೆ.

೧. **ಔರಸ** =ಮದುವೆಯಾದ ಹೆಂಗಸಿನಲ್ಲಿ ಗಂಡನ ಕೂಟದಿಂದ ಜನಿಸಿದವನು.

೨. **ಕ್ಷೇತ್ರಜ** =ಮದುವೆಯಾದ ಹೆಂಡತಿಯಲ್ಲಿ ಹಿರಿಯರ ಅನುಗ್ರಹದಿಂದ ಜನಿಸಿದವನು.

೩. **ದತ್ತ** =ದುಡ್ಡನ್ನು ಸ್ವೀಕರಿಸದೆ ಮತ್ತೊಬ್ಬರಿಂದ ಕೊಡಲ್ಪಟ್ಟವನು.

೪. **ಕೃತ್ರಿಮ** =ಮಗನ ಹಾಗೆಯೇ ನಡೆದುಕೊಳ್ಳುವವನು.

೫. **ಗೂಢೋತ್ಪನ್ನ** =ತಂದೆ ಯಾರೆಂದು ತಿಳಿಯದೆ ಇರುವವನು.

೬. **ಅಪವಿದ್ಧ** =ತಾಯಿ ತಂದೆಗಳಿಂದ ತೊರೆಯಲ್ಪಟ್ಟು ದೊರೆತವನು.

೭. **ಕಾನೀನ** =ಮದುವೆಯಾಗುವುದಕ್ಕೆ ಮುಂಚೆಯೇ ಪರನ ಸಹವಾಸದಿಂದ ಕನ್ಯೆಯಲ್ಲಿ ಜನಿಸಿದವನು.

೮. **ಸಹೋಢ** =ಮದುವೆಯಾಗುವಾಗಲೇ ಬಸುರಿಯಾಗಿದ್ದ ಹೆಂಗಸಿನಲ್ಲಿ ಹುಟ್ಟಿದಮಗ.

೯. **ಕ್ರೀತ** =ಹೆತ್ತವರಿಗೆ ಹಣಕೊಟ್ಟು ಕೊಂಡವನು.

೧೦. **ಪೌನರ್ಭವ** =ಮದುವೆಯಾಗಿದ್ದ ಹೆಂಗಸನ್ನು ಅಪಹರಿಸಿ ಮತ್ತೆ ಮದುವೆಯಾದಾಗ ಅವಳಲ್ಲಿ ಹುಟ್ಟಿದ ಮಗ.

೧೧. **ಸ್ವಯಂದತ್ತ** = ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಂಡು ಬಂದು ಪೋಷಣೆಗೆ ಒಳಗಾದವನು.

೧೨. **ಪುತ್ರಿಕಾಪುತ್ರ** = ಗಂಡುಮಕ್ಕಳಿಲ್ಲದ ತಂದೆ ತಾಯಿಯರು ತಮ್ಮ ಹೆಣ್ಣುಮಕ್ಕಳ ಮೊದಲನೆಯ ಮಗನನ್ನು ಮಗನೆಂದು ಸ್ವೀಕರಿಸಿದವನು.

ಹೀಗೆ ಪುತ್ರರೆನ್ನಿಸಿಕೊಂಡವರಲ್ಲಿ ವೈವಿಧ್ಯವಿದೆ. ಇಲ್ಲಿ ಜೀವನದ ಎಷ್ಟು ಪದರುಗಳು ಬಿಚ್ಚಿಕೊಂಡಿವೆ ನೋಡಿ.

ಈ ಹನ್ನೆರಡೂ ಬಗೆಗೂ ಒಳಗಾಗದವನು ಮಾನಸ ಪುತ್ರ. ಅಂದರೆ ಶಾರೀರಿಕವಲ್ಲದೆ ಮಗನಾದವನು. ಯಾರ ದೈಹಿಕ ಸಂಬಂಧವೂ ಇಲ್ಲದೆ ಪುತ್ರ ನಿರ್ಮಾಣ ದೇವತೆಗಳಿಗೆ ಸಾಧ್ಯವೆಂದು ಪುರಾಣಗಳು ವರ್ಣಿಸುತ್ತವೆ. ಮನ್ಮಥನು ಹೀಗೆ ಬ್ರಹ್ಮನ ಮಾನಸಪುತ್ರ. ಬ್ರಹ್ಮನಿಂದ ಜಗತ್ತನ್ನು ಮೋಹಗೊಳಿಸುವ ಸಾಮರ್ಥ್ಯವನ್ನು ಮನ್ಮಥನು ಪಡೆದ. ಆಮೇಲೆ ಆ ಶಕ್ತಿಯನ್ನು ಬ್ರಹ್ಮನ ಮೇಲೇ ಪ್ರಯೋಗಿಸಿದ. ಆಗ ಬ್ರಹ್ಮನು ತನ್ನ ಮಗಳಾದ ಸಂಧ್ಯೆಯನ್ನೇ ಮೋಹಿಸಿದ. ಶಿವ ಬಂದು ಬ್ರಹ್ಮನಿಗೆ ಬುದ್ಧಿವಾದ ಹೇಳಿದ. ಈ ಕಥೆ ಶಿವ ಮಹಾಪುರಾಣದಲ್ಲಿದೆ. ಮನ್ಮಥನಿಗೆ ಮನಸಿಜ ಎಂದೇ ಹೆಸರು. **ಮನಸಿ ಜಾಯತೇ ಇತಿ** ಎಂಬುದು ಅದರ ವ್ಯುತ್ಪತ್ತಿ. ಅವನಿಗೆ ಆತ್ಮಭೂ ಎಂದೂ ಹೆಸರು. **ಆತ್ಮನೋ ಮನಸೋ ಭವತಿ** ಎಂದು ಅದರ ವ್ಯುತ್ಪತ್ತಿ. ಈಚೀಚೆಗೆ ಯಾರಾದರೂ ಗುರುಗಳ ಬೋಧನೆಯಿಂದ ಪ್ರಭಾವಿತರಾದವರು ಆಲಂಕಾರಿಕವಾಗಿ ತಾವು ಅಂಥ ಗುರುಗಳ ಮಾನಸಪುತ್ರರು ಎಂದು ಹೇಳಿಕೊಳ್ಳುವ ಅಭ್ಯಾಸವಿದೆ.

**ಔಷ್ಟ್ರಕ** ಇದು ಉಷ್ಟ್ರ =ಒಂಟೆ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಎರಡು ಅರ್ಥಗಳಿವೆ *೧. ಒಂಟೆಗೆ ಸಂಬಂಧಪಟ್ಟ, ೨. ಒಂಟೆಗಳ ಸಮೂಹ, ಕ್ಯಾರವಾನ್.*

## ಕ

**ಕಂಕಾಲ** ಮೂಳೆಯ ಗೂಡು, ಅಸ್ಥಿಪಂಜರ. Skeleton. ಚರ್ಮ, ಮಾಂಸ ಮುಂತಾದುವು ಯಾವುದೂ ಮುಚ್ಚದೆ ಇರುವ ಎಲುಬಿನ ಗೂಡು. **ಕಂ** ಎಂದರೆ **ಸುಖವನ್ನು ಕಾಲಯತಿ** ಎಂದರೆ ನಾಶ **ಮಾಡುತ್ತದೆ** ಎಂದು ಈ ಶಬ್ದದ ವಿವರಣೆಯಂತೆ.

**ಕಂಗಾಲು** ಸಂಸ್ಕೃತದ ಕಂಕಾಲ =ಅಸ್ಥಿ ಪಂಜರ ಎಂಬ ಶಬ್ದದ ತದ್ಭವ ಕಂಗಾಲ. ಮರಾಠಿಯಲ್ಲಿ ಇದಕ್ಕೆ ಬಡತನದ, ದರಿದ್ರದ ಎಂದು ವಿಶೇಷಣದ ಅರ್ಥವಿದೆ. ಅದರಿಂದ ಬಂದಿರುವ ನಾಮರೂಪ ಕಂಗಾಲು. ಇದಕ್ಕೆ ಬಡತನ, ದಾರಿದ್ರ್ಯ ಎಂದು ಅರ್ಥ. ವ್ಯಾಪಕವಾಗಿ ಈ ಶಬ್ದಕ್ಕೆ ತುಂಬ ದುಸ್ಥಿತಿ, ಅಸಹಾಯಕತೆ, ನಿರ್ಗತಿಕ ಸ್ಥಿತಿ ಎಂದು ಅರ್ಥ ಬರುತ್ತದೆ. ಈ ಶಬ್ದ ಪಾರಸೀ ಭಾಷೆಯಲ್ಲಿಯೂ ಹಿಂದೀ ಭಾಷೆಯಲ್ಲಿಯೂ ಪ್ರಯೋಗದಲ್ಲಿದೆ.

**ಕಂಟ-ಕರಟ** ಈ ಎರಡೂ ಸರಿಯಾದ ಶಬ್ದಗಳು. ಅರ್ಥ ಒಂದೇ, ತೆಂಗಿನ ಚಿಪ್ಪು ಇತ್ಯಾದಿ. ಒಂದು ಶಬ್ದ ಇನ್ನೊಂದರ ಪರ್ಯಾಯ ರೂಪ ಅಷ್ಟೇ! ಕಂಟ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಪ್ರಯೋಗವಾಗುತ್ತದೆ. ಇದು ಶಿಷ್ಟರೂಪವಲ್ಲ. ಗ್ರಂಥದ ಭಾಷೆಗೆ ಅದು ಹೊಂದುವುದಿಲ್ಲ.

**ಕಂತುಪಿತ** ಕಂತು ಎಂದರೆ ಸಂಸ್ಕೃತದಲ್ಲಿ ಮನ್ಮಥ. **ಕಮ್ ಕಾಂತೌ** ಎಂಬ ಸೂತ್ರದಂತೆ ಈ ಶಬ್ದವು ವ್ಯಕ್ತಿಯ ರೂಪಶೋಭೆಯನ್ನು ತಿಳಿಸುತ್ತದೆ. ಮನ್ಮಥನಿಗೆ ಮನಸಿಜ, ಮದನ, ಮಾರ, ಪ್ರದ್ಯುಮ್ನ ಇತ್ಯಾದಿ ಅನೇಕ ಹೆಸರುಗಳಿವೆ. ಮನ್ಮಥನು ಬ್ರಹ್ಮನ ಮಾನಸ ಪುತ್ರ ಎಂದು ಶಿವಪುರಾಣದಲ್ಲಿ ಹೇಳಿದೆ. ಪ್ರದ್ಯುಮ್ನನು ಕೃಷ್ಣ ರುಕ್ಮಿಣಿಯರ ಮಗ, ಅವನು ಮನ್ಮಥನ ಅವತಾರ. ಕೃಷ್ಣನು ವಿಷ್ಣುವಿನ ಅವತಾರ. ಹೀಗಿರುವುದರಿಂದ ಕಂತುಪಿತ ಎಂಬುದಕ್ಕೆ ವಿಷ್ಣು ಎಂಬ ಅರ್ಥ ಬರುತ್ತದೆ. ಇದು ಕವಿಗಳ ಶಬ್ದ ನಿರ್ಮಾಣದ ಸ್ವಾತಂತ್ರ್ಯಕ್ಕೆ ಸೇರಿದ ವಿಷಯ.

**ಕಂತ್ರಿ** ಕನ್ನಡದಲ್ಲಿ ನಾವು ಉಪಯೋಗಿಸುವ ಕಂತ್ರಿ ಎಂಬ ಶಬ್ದ ಇಂಗ್ಲಿಷಿನ Country ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ಗ್ರಾಮೀಣ ಎಂಬ ಅರ್ಥ ಇಂಗ್ಲಿಷಿನಲ್ಲಿಯೇ ಇದೆ. ಕನ್ನಡದಲ್ಲಿ ಈ ಅರ್ಥದ ಜೊತೆಗೆ ಮತ್ತೆ ಕೆಲವು ಅರ್ಥಗಳು ಪ್ರಯೋಗಬಲದಿಂದ ಸೇರಿಕೊಂಡಿವೆ. ೧. ಒರಟು, ನಯರಹಿತ, ಅಷ್ಟು ಉತ್ತಮವಲ್ಲದ. ೨. ನಾಟಿ, ಸಂಸ್ಕೃತಿ ಇಲ್ಲದ. ೩. ತುಚ್ಛ. ಕಂತ್ರಿ ಪದಾರ್ಥಗಳು, ಕಂತ್ರಿಜನ, ಕಂತ್ರಿ ಬುದ್ಧಿ, ಕಂತ್ರಿ ನಾಯಿ ಇತ್ಯಾದಿ ಪ್ರಯೋಗಗಳನ್ನು ನೋಡಿ.

**ಕಂದೀಲು** ಇದು ಅರಬ್ಬೀ ಭಾಷೆಯ ಪದ. ಅಲ್ಲಿಂದಲೇ ಪೋರ್ಚುಗೀಸ್ ಭಾಷೆಯ ಮೂಲಕ ಬಂದು ಇಂಗ್ಲಿಷ್ ಭಾಷೆಯಲ್ಲೂ Candle ಎಂದಾಗಿದೆ. ೧. ಮೋಂಬತ್ತಿ. ೨. ಲಾಂದ್ರ ಎಂಬ ಎರಡು ಅರ್ಥಗಳೂ ಇವೆ. ಲಾಂದ್ರ Lantern ಶಬ್ದದಿಂದ ಬಂದಿದೆ.

**ಕಂಪನಿ** ಈ ಶಬ್ದ ಹಳೆಯ ಫ್ರೆಂಚ್ ಭಾಷೆಯ Compaignie ಎಂಬ ಶಬ್ದದಿಂದ ಬಂದದ್ದು. ಇದಕ್ಕೆ *೧. ಮತ್ತೊಬ್ಬರ ಸಹವಾಸ ೨. ಸಹವಾಸಕ್ಕೆ ಸಿಕ್ಕುವ ಜನಸಮುದಾಯ ೩. ಯಾವುದಾದರೂ ಕೈಗಾರಿಕೆ, ಉದ್ಯಮ ಸಂಸ್ಥೆ ಮುಂತಾದುವುಗಳಲ್ಲಿ ಒಟ್ಟಿಗೆ ಸೇರಿ ಪಾಲುದಾರರಾಗಿ ಕೆಲಸ ಮಾಡುತ್ತಿರುವವರು ೪. ಒಂದು ಸಂಸ್ಥೆಯಲ್ಲಿ ಅಧಿಕಾರ ಹೊಂದಿದ್ದರೂ ಅವರ ಹೆಸರನ್ನು ಹೇಳದಿರುವಾಗ ಅಂಥವರು ೫. ಪದಾತಿ ಸೈನ್ಯದಲ್ಲಿ ಒಂದು ವರ್ಗ* — ಇಷ್ಟು ಅರ್ಥಗಳು ಇವೆ. ಇದನ್ನು Cultural Key Word ಎಂದು ಬೇಕಾದರೆ ಕರೆಯಬಹುದು. ಕುಂಪಣಿ ಸರ್ಕಾರ ಎಂಬ ಹೆಸರು ಈಸ್ಟ್ ಇಂಡಿಯಾ ಕಂಪೆನಿಗೆ ಇದ್ದುದು ಗೊತ್ತಿರಬೇಕು.

**ಕಂಪ್ಯೂಟರ್** **Computer, hardware, software** ಈಗತಾನೇ ಪ್ರಚಾರವಾಗುತ್ತಿರುವ ಈ ಇಂಗ್ಲಿಷ್ ಶಬ್ದಗಳನ್ನು ಕನ್ನಡದ ಜಾಯಮಾನಕ್ಕೆ ತಕ್ಕಂತೆ ಬದಲಾಯಿಸಿ ಅವುಗಳನ್ನೇ ಉಪಯೋಗಿಸುವುದು ತುಂಬ ಉತ್ತಮವಾದ ಮಾರ್ಗ. ಕಂಪ್ಯೂಟರು, ಸಾಫ್ಟ್‌ವೇರು, ಹಾರ್ಡ್‌ವೇರು. Calculatorಗೆ ಏನೋ ಗಣಕಯಂತ್ರ ಎಂದು ಮಾಡಿದ್ದಾರೆ. ಅದೂ ಆಗಬಹುದು. ಈ ಸಾಧನಗಳ ವಿವರದ ಪರಿಚಯ ಹೆಚ್ಚಾದ ಹಾಗೆ ಕನ್ನಡದ ಶಬ್ದಗಳು

ಹುಟ್ಟಿಕೊಳ್ಳುತ್ತವೆ.

**ಕಕ್ಕಡ** ಕಕ್ಕಡ ಎಂದರೆ ಎಣ್ಣೆಯಲ್ಲಿ ಅದ್ದಿದ ಬಟ್ಟೆಯ ಪಂಜು. ಹಗಲು ದೀವಟಿಗೆಗೆ ಇದನ್ನು ಉಪಯೋಗಿಸುತ್ತಾರೆ. ಕೆಲವು ದೇವಸ್ಥಾನಗಳಲ್ಲಿ ಕಕ್ಕಡಾರತಿ ಎಂದೂ ಒಂದು ಸೇವೆಯನ್ನು ದೇವರಿಗೆ ಸಲ್ಲಿಸುತ್ತಾರೆ.

**ಕಕ್ಕಾಬಿಕ್ಕಿ** ಈ ಶಬ್ದಕ್ಕೆ ದಿಕ್ಕು ತೋಚದಿರುವುದು, ದಿಗ್ಭ್ರಮೆಯಾಗುವುದು ಎಂದರ್ಥ. ಈ ಶಬ್ದದ ವ್ಯುತ್ಪತ್ತಿ ಸಂದೇಹಾಸ್ಪದವಾಗಿದೆ. ಕೆಲವರು ಸಂಸ್ಕೃತ ವಿದ್ವಾಂಸರು ಇವು ಕಾಕಪಿಕ ಎಂಬ ಶಬ್ದದಿಂದ ಬಂದಿದೆ ಎನ್ನುತ್ತಾರೆ. **ಕಾಕಪಿಕ ಭ್ರಾಂತಿ.** ಇದು ಕಾಗೆಯೋ ಕೋಗಿಲೆಯೋ ಎಂದು ಗೊತ್ತಾಗದಿರುವುದು. **ವಸಂತಕಾಲೇ ಸಂಪ್ರಾಪ್ತೇ ಕಾಕಃ ಕಾಕಃ ಪಿಕಃ ಪಿಕಃ** ಎಂಬ ಸುಭಾಷಿತವೇ ಇದಕ್ಕೆ ಆಧಾರ. ಬಹುಶಃ ಇದು ಸರಿಯಾದ ವ್ಯುತ್ಪತ್ತಿಯಲ್ಲ. ಇನ್ನೂ ಪರಿಶೀಲನೆ ನಡೆಯಬೇಕು. ತೆಲುಗು, ತುಳು ಭಾಷೆಗಳಲ್ಲಿಯೂ ಈ ಶಬ್ದ ಪ್ರಯೋಗವುಂಟು. ಕಕ್ಕಾವಿಕ್ಕಿ, ಕಕ್ಕಾಬಿಕಿ ಎಂಬ ರೂಪಗಳೂ ಉಂಟು. ಇದು ದೇಶ್ಯ ಶಬ್ದವೇ ಇರಬಹುದು.

**ಕಕ್ಕುಲತೆ** ಈ ಕನ್ನಡ ಶಬ್ದಕ್ಕೆ ಮುಖ್ಯವಾಗಿ *೧. ಪ್ರೀತಿ, ಮೋಹ, ಮಮತೆ* ಎಂದರ್ಥ. ಇದರಿಂದ ಅರ್ಥವು ಬೆಳೆದು *೨. ಕನಿಕರ, ದಯೆ, ಕರುಣೆ* ಎಂದು *೩. ಚಿಂತೆ, ಕಳವಳ, ಆತಂಕ* ಎಂದು ಅರ್ಥವಾಗುತ್ತದೆ.

**ಕಕ್ಕುಲಾತಿ** ಈ ಶಬ್ದವು ಕನ್ನಡ ಸಾಹಿತ್ಯದಲ್ಲಿ ವಚನಕಾರರ ಕಾಲದಲ್ಲಿ ಹೆಚ್ಚು ಪ್ರಚಾರಕ್ಕೆ ಬಂತು. ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ಇದಕ್ಕೆ ಜ್ಞಾತಿ ಶಬ್ದಗಳಿವೆ. ತಮಿಳು - ಕಕ್ಕು ರೀತಿ. ತೆಲುಗು - ಕಕುಜೆತಿ, ಕಕೂಜೆತಿ. ಇದಕ್ಕೆ ಕನ್ನಡದಲ್ಲಿ ಅನೇಕ ಪರ್ಯಾಯ ರೂಪಗಳಿವೆ. **ಕಕ್ಕುಲತೆ, ಕಕುಲತೆ, ಕಕುಲಾತಿ, ಕಕುಲಾತೆ, ಕಕುಳತೆ, ಕಕ್ಕಲಾತಿ, ಕಕ್ಕುಲಾತೆ, ಕಕ್ಕುಲಿತೆ, ಕಾಕುಲತೆ, ಕಾಕುಲಾತಿ.** ಕನ್ನಡ ಸಾಹಿತ್ಯದಲ್ಲಿ ಈ ಎಲ್ಲ ರೂಪಗಳಲ್ಲಿ ಪ್ರಯೋಗವಾಗಿದೆ. ಈ ಶಬ್ದಕ್ಕೆ ಸಂದರ್ಭಾನುಸಾರ ಈ ಮುಂದೆ ಸೂಚಿಸಿರುವ ಅರ್ಥಗಳು ಬರುತ್ತವೆ. *೧. ಪ್ರೀತಿ, ೨. ಚಿಂತೆ, ೩. ದಯೆ, ೪. ಬಯಕೆ, ೫. ಸಂದೇಹ,* ಈ ಎಲ್ಲ ಅರ್ಥಗಳೂ ಬೆಳೆದು ಬಂದಿವೆ.

**ಕಗ್ಗೊಲೆ** ಇದಕ್ಕೆ ಭಯಂಕರವಾದ ಕೊಲೆ ಎಂದರ್ಥ. ಕಡಿದು +ಕೊಲೆ ಈ ಎರಡು ಶಬ್ದಗಳು ಸೇರಿ ಕಗ್ಗೊಲೆ ಆಗಿದೆ. ಕಡಿದು ಶಬ್ದಕ್ಕೆ ಅನೇಕ ಅರ್ಥಗಳಿವೆ. ತೀಕ್ಷ್ಣ, ಉಗ್ರ, ಭಯಂಕರ ಎಂಬುದು ಒಂದು ಮುಖ್ಯವಾದ ಅರ್ಥ. ಅದರಿಂದ ಬಂದುದು ಈ ಅರ್ಥ.

**ಕಚಗುಳಿ** ಜಕ್ಕುಲಿಸು =ನರ್ಮಕರಣೇ ಎಂಬ ವಿವರಣೆಗೆ ಸಂಬಂಧಿಸಿರಬಹುದೆಂದೂ ಜಕ್ ಎಂಬ ಶಬ್ದದ ಅನುಕರಣದಿಂದ ಕಚಗುಳಿ ಆಗಿರಬಹುದೆಂದೂ ಸೂಚಿಸುವವರಿದ್ದಾರೆ. ಈ ಸೂಚನೆಯನ್ನು ಗಮನಿಸಿ ನಾನು ಮತ್ತಷ್ಟು ಪರಿಶೀಲಿಸಿದಾಗ ನನಗೆ ಈ ಕಚಗುಳಿ ಶಬ್ದದ ಮೂಲದ ಬಗ್ಗೆ ಸ್ಪಷ್ಟ ಚಿತ್ರ ಮೂಡಿದೆ. ಕನ್ನಡದಲ್ಲಿ ಜಕ್ಕುಲಿ ಎಂಬ ಶಬ್ದವೊಂದಿದೆ. ಜಕ್ಕುಲಿಕೆ ಎಂಬ ಶಬ್ದಕ್ಕೆ ಸುಖ, ಸಂತೋಷ ಎಂಬ ಅರ್ಥದಲ್ಲಿ ಪ್ರಯೋಗವಿದೆ. ಮಲೆಯಾಳದಲ್ಲಿ ಅಕ್ಕುಳ, ತೆಲುಗಿನ ಚಕ್ಕಲಿ ಎಂಬ ಶಬ್ದಗಳಿಗೆ ಕಂಕುಳು, ಕಕ್ಷ ಎಂಬ ಅರ್ಥವಿದೆ. ಕನ್ನಡದ ಜಕ್ಕುಲಿ ಈ ಜ್ಞಾತಿ ಶಬ್ದಗಳ ಸಂಗಾತಿ. ಇದಕ್ಕೆ ಕಂಕುಳು ಎಂದೇ ಅರ್ಥ. ಜಕ್ಕುಲಿ(ಳಿ)ಸು ಎಂದರೆ ಕಂಕುಳನ್ನು ಬೆರಳುಗಳಿಂದ ಮುಟ್ಟಿ ನಗು ಬರಿಸು. ನರ್ಮಕರಣೇ ಎಂಬ ಕೇಶಿರಾಜನ ವಿವರಣೆಗೆ ಇದೇ ಅರ್ಥ. ಕಂಕುಳನ್ನು ಬೆರಳಿನಿಂದ ಮುಟ್ಟಿ ನಗಿಸುವುದು. ಇದೇ ಕಟ್ಬಾಡಿಸು ಎಂಬ ಉತ್ತರ ಕನ್ನಡ ಪ್ರಯೋಗದ ಶಬ್ದದ ಅರ್ಥ. ಮರಾಠೀ ಭಾಷೆಯಲ್ಲಿ ಈ ಕಚಗುಳಿ, ಜಕ್ಕುಳಿ ಶಬ್ದವು ಗುರಕುಲಿ ಎಂದಾಗಿದೆ. ಗಿಕ್ಕಳಿಕೆ ಎಂಬ ಪ್ರಯೋಗವಿದೆ ಎಂದೂ ಕಂಡುಬಂದಿದೆ.

**ಕಚೇರಿ, ಕಛೇರಿ** ಹಿಂದೀ ಭಾಷೆಯಿಂದ ಬಂದ ಶಬ್ದ ಇದು. ಆ ಭಾಷೆಯಲ್ಲಿ ಇದು ಕಚಹರೀ ಎಂದಿದೆ. ಮರಾಠಿಯಲ್ಲಿ ಕಚೇರಿ ಆಗಿದೆ. ಕನ್ನಡದಲ್ಲಿಯೂ ಕಚೇರಿಯೇ ಸರಿಯಾದ ರೂಪ. ಆದರೆ ಪ್ರಸಿದ್ಧರಾದ ಕೆಲವು ಲೇಖಕರೂ ಕಛೇರಿ ಎಂಬ ರೂಪವನ್ನು ಪ್ರಯೋಗಿಸಿದ್ದಾರೆ. ಹೀಗಿರುವುದರಿಂದ ಕನ್ನಡದಲ್ಲಿ ನಾವು ಈ ಎರಡನ್ನೂ ಪರ್ಯಾಯ ಶಬ್ದಗಳಾಗಿ ಒಪ್ಪುವುದೂ ಉತ್ತಮ. ಅರ್ಥ, ಆಡಳಿತದ ಕಾರ್ಯಾಲಯ.

**ಕಟ್ಟಪ್ಪಣೆ** ಕಡಿದಾದ +ಅಪ್ಪಣೆ = ಕಟ್ಟಪ್ಪಣೆ. ಮೀರಲಾರದ, ಮೀರಬಾರದ ಆಜ್ಞೆಗೆ ಈ ಮಾತು ಅನ್ವಯಿಸುತ್ತದೆ. ಕನ್ನಡದಲ್ಲಿ ಪ್ರಯೋಗದಲ್ಲಿದೆ.

**ಕಟ್ಬಾಯಿ** ಇದರ ಸರಿಯಾದ ರೂಪ ಕಟವಾಯ್, ಕಟವಾಯಿ, ಕಟಬಾಯಿ. ಈ ಶಬ್ದಕ್ಕೆ 'ಬಾಯಿಯ ಕೊನೆ' ಎಂದರ್ಥ. 'ಅವರ ಕಟವಾಯಿಯಲ್ಲಿ ಸದಾ ಜೊಲ್ಲು ಸುರಿಯುತ್ತಿತ್ತು' ಎಂಬ ವಾಕ್ಯವನ್ನು ನೋಡಿ. 'ಕಟ' ಎನ್ನುವುದು 'ಕಡೆ' ಎಂಬ ಶಬ್ದಕ್ಕೆ ಬರುವ ಆದೇಶ ರೂಪ. 'ಬಾಯಿಯ ಕಡೆ - ಕಟವಾಯಿ' ಎಂಬುದು ವಿಗ್ರಹವಾಕ್ಯ. 'ಕಡೆಯ ಭಾಗದ ಬಾಯಿ' ಎಂದರ್ಥ.

**ಕಟ್ಟುನಿಟ್ಟು** ಎಂಬ ಕನ್ನಡದ ಶಬ್ದ ದೃಢವಾದ ಒಂದು ಕಟ್ಟಳೆಯನ್ನು ಅಥವಾ ನಿಯಮವನ್ನು ತಿಳಿಸುತ್ತದೆ. ಅವರ ಮನೆಯಲ್ಲಿ ಕಟ್ಟುನಿಟ್ಟು ಹೆಚ್ಚು, ಎಂದರೆ ಸಾಂಸಾರಿಕವಾದ ನಿಯಮಗಳು ಅವರ ಮನೆಯಲ್ಲಿ ಅನುಸರಿಸಲ್ಪಡುತ್ತವೆ ಎಂದರ್ಥ. 'ಕಟ್ಟು' ಎಂಬ ಶಬ್ದಕ್ಕೆ ಬಂಧನ, ನಿಯಮ, ನಿರ್ಬಂಧ ಎಂಬ ಅರ್ಥಗಳಿವೆ. 'ನಿಟ್ಟು' ಎಂದರೆ ಒಂದು ದಿಕ್ಕು, ಗುರಿ, ಎಂಬ ಅರ್ಥಗಳಿವೆ. ಎಲ್ಲಿ ನಿರ್ಬಂಧವೇ ಗುರಿಯಾಗಿದೆಯೋ ಅದೇ ಕಟ್ಟುನಿಟ್ಟು. ಕೆಲವರು ಕಟ್ಟು ಶಬ್ದದ ಜೊತೆಗೆ ನಿಟ್ಟು ಎನ್ನುವುದು ಪ್ರತಿಧ್ವನಿ ಶಬ್ದವಾಗಿ ಬಂದಿದೆ, ಅದಕ್ಕೆ ಏನೂ ಅರ್ಥವಿಲ್ಲ ಎನ್ನುತ್ತಾರೆ. ಅದೂ ಸಾಧ್ಯವಾದ ವಿಚಾರವೇ. ಹಾಗಾದರೆ ನಿಟ್ಟು ಎಂಬ ಶಬ್ದಕ್ಕೆ ಕಟ್ಟಳೆ, ನಿರ್ಬಂಧ ಎಂಬ ಅರ್ಥವನ್ನೇ ಕೊಡಬೇಕಾಗುತ್ತದೆ.

**ಕಟ್ಟುಪಾಡು** ಈ ಶಬ್ದದಲ್ಲಿ ಎರಡು ಭಾಗಗಳಿವೆ; ಕಟ್ಟು +ಪಾಡು. ಒಟ್ಟು ಕಟ್ಟುಪಾಡು ಎಂಬ ಶಬ್ದಕ್ಕೆ ನಿಯಮ, ಕ್ರಮ, ಕಟ್ಟಳೆ, ವ್ಯವಸ್ಥೆ ಎಂದರ್ಥ. ಇದು ಕನ್ನಡ ಶಬ್ದ. ತಮಿಳಿನಲ್ಲಿ ಕಟ್ಟುಪ್ಪಾಡು ಎಂಬುದೂ ತೆಲುಗಿನಲ್ಲಿ ಕಟ್ಟುಪಾಟು ಎಂಬುದೂ ಜ್ಞಾತಿ ಶಬ್ದಗಳು. ಆ ಭಾಷೆಗಳಲ್ಲಿಯೂ ಇದೇ ಅರ್ಥ.

**ಕಡತೂಸು** ಇದು ಕಾಡತೂಸು ಎಂಬುದರ ಪರ್ಯಾಯ ರೂಪ. ಈ ಶಬ್ದ ಇಂಗ್ಲಿಷಿನ Cartridgeಎಂಬ ಶಬ್ದದ ಅಪಭ್ರಂಶ. ಇದು ಬಂದೂಕಿಗೆ ಹಾಕುವ ಹುಸಿ ತೋಟಾ. ಈಗ ಈ ಶಬ್ದದ ಪ್ರಯೋಗ ಇಲ್ಲ. ಮರಾಠಿಯಲ್ಲಿ ಕಾಡತೂಸ್, ಹಿಂದಿಯಲ್ಲಿ ಕಾರತೂಸ್.

**ಕಡಮೆ** ಈ ಶಬ್ದ ಕನ್ನಡದ್ದು. ಇದಕ್ಕೆ ೧. ಕೊರತೆ, ನ್ಯೂನತೆ ೨. ಉಳಿದದ್ದು ೩. ಕೆಳದರ್ಜೆ ಎಂಬ ಅರ್ಥಗಳಿವೆ. ಇದಕ್ಕೆ ತಮಿಳಿನಲ್ಲಿ ಕುರೈವು, ತೆಲುಗಿನಲ್ಲಿ ಕಡಮ ಎಂಬ ಜ್ಞಾತಿ ಶಬ್ದಗಳಿವೆ. ಕೆಲವರು ಈ ಶಬ್ದವನ್ನು ಕಡಿ =ಕತ್ತರಿಸು ಎಂಬ ಧಾತುವಿನಿಂದ ವ್ಯುತ್ಪತ್ತಿ ಮಾಡುತ್ತಾರೆ. ಅದು ಕಡಿಮೆ ಎಂದಾಗುತ್ತದೆ. ಈ ಎರಡು ರೂಪಗಳೂ - ಕಡಮೆ, ಕಡಿಮೆ ಪ್ರಯೋಗದಲ್ಲಿವೆ.

**ಕಡಿತ, ಖಟಾವು** ಕಡಿ ಶಬ್ದಕ್ಕೆ ೧. ಕತ್ತರಿಸು ೨. ಹಲ್ಲಿನಿಂದ ಕಚ್ಚು ಎಂಬ ಅರ್ಥಗಳು ಮುಖ್ಯವಾದುವು ೩. ನವೆಯಾಗು ಎಂಬುದೂ ಒಂದು ಅರ್ಥ. ಇದರಿಂದ ಬಂದ ನಾಮಪದ ಕಡಿತ, ಕಡಿಮೆ, ಕತ್ತರಿಸುವುದು, ಹೊಡೆತ, ಸಾಯಿಸುವುದು ಇತ್ಯಾದಿ ಅರ್ಥಗಳಿವೆ. ಈ ಅರ್ಥಗಳೆಲ್ಲ ಸರಿ. ಖಟಾವು ತಪ್ಪು, ಕಟಾವು ಎಂಬುದು ಹಿಂದಿಯ ಶಬ್ದ. ಅದನ್ನು ಕಡಿತ, ಖೋತ ಎಂಬ ಅರ್ಥದಲ್ಲಿ ಉಪಯೋಗಿಸಬಹುದು. ಖೋತ ಶಬ್ದಕ್ಕಿಂತ ಕೋತ ಹೆಚ್ಚು ಶುದ್ಧವಾದುದು.

**ಕಡುಬು** ಇದು ಹಳಗನ್ನಡದ ಕಡುಂಬು ಎಂಬ ಶಬ್ದದ ಹೊಸಗನ್ನಡ ರೂಪ. ಕಣಕದ ಹಾಳೆಯಲ್ಲಿ ಹೂರಣವನ್ನಿಟ್ಟು ಹಬೆಯಲ್ಲಿ ಬೇಯಿಸಿದ ಅಥವಾ ಎಣ್ಣೆ ತುಪ್ಪಗಳಲ್ಲಿ ಕರಿದ ಕಾರದ ಅಥವಾ ಸಿಹಿಯ ತಿಂಡಿ, ಭಕ್ಷ್ಯ. ಇದರಲ್ಲಿ ಅನೇಕ ಬಗೆಗಳಿವೆ. ಉದ್ದಿನ ಕಡುಬು, ಹೊಯ್ಗಡುಬು, ಕರಿಗಡುಬು, ಲಕೋಟಿಯ ಹೋಳಿಗೆ, ಸೀಗಡುಬು ಇತ್ಯಾದಿ. ವ್ಯಂಗ್ಯವಾಗಿ ಕಡುಬು ಎಂದರೆ ಪೆಟ್ಟಿನಿಂದ ಮೈ ಊದಿರುವುದು ಎಂದೂ ಅರ್ಥವಿದೆ

**ಕಡೆಗಟ್ಲು** ಈ ಶಬ್ದದ ಮೂಲ ಕಡೆಯಕಟ್ಟಳೆ. ಯಾವುದಾದರೂ ಕಾರ್ಯದ ಕೊನೆಯಲ್ಲಿ ಆಗಲೇಬೇಕಾದ ಕೆಲಸ, ನಿಯಮ. ಮಲೆನಾಡಿನ ಅನೇಕ ಕಡೆ ಅಡಕೆಯ ಕೊಯ್ಲು ಆದಾಗ, ಅದು ಪೂರೈಸಿದಂದು ಕೆಲಸ ಮಾಡಿದವರಿಗೆಲ್ಲ ಭಾರಿಯ ಭೋಜನ ಮಾಡಿಸುವುದುಂಟು. ಈ ಔತಣಕ್ಕೆ ಕಡೆಯ ದಿನದ ನಿಯಮದ ಪ್ರಕಾರ ನಡೆಯುವ ಊಟ ಎಂದರ್ಥ. ಕಟ್ಟಲೆ - ಕಟ್ಟಳೆ ಎಂಬುದು ಯಾವುದೋ ಕಟ್ಟು = ನಿಯಮಕ್ಕೆ ಸೇರಿದುದು.

**ಕಣಸು** ಎಂಬುದು ಕಾಣ್ ಎಂಬ ಧಾತುವಿನಿಂದ ಆದುದು. ಇದಕ್ಕೆ ನೋಟ ಎಂದರ್ಥ. ಜೊತೆಗೆ ಅತಿಮಾನುಷವಾದ ಯಾವುದಾದರೂ ದೃಶ್ಯಕ್ಕೆ-ದರ್ಶನಕ್ಕೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಬೇಂದ್ರೆಯವರ ಸೂರ್ಯಪಾನ ಎಂಬ ಕವನ ಸಂಕಲನದಲ್ಲಿ (೭-೧೧) **ಕನಸೋ ಕಣಸೋ** ನನಸೋ ಎಂಬ ಪ್ರಯೋಗವನ್ನು ಬಳಸಿದ್ದಾರೆ. ಇದರಿಂದ ಕನಸಿಗೂ ಕಣಸಿಗೂ ವ್ಯತ್ಯಾಸವಿರುವುದು ಸ್ಪಷ್ಟ. ಕನವರಿಸು ಎಂದರೆ ಬೇರೆ. ಅದಕ್ಕೆ ಕನಸಿನಲ್ಲಿ ಮಾತನಾಡು ಎಂದರ್ಥ. ನೋಡಿ: ಕನಸು

**ಕಣ್ಣಿಗೆ ಎಣ್ಣೆ ಬಿಟ್ಟು, ಜುಟ್ಟಿಗೆ ದಾರ ಕಟ್ಟಿಕೊಂಡು** ಎಂಬ ಮಾತಿಗೆ ನಿದ್ದೆ ಬರದಂತೆ ಮಾಡಿಕೊಂಡು ಎಂದರ್ಥ. ಕಣ್ಣಿಗೆ ಎಣ್ಣೆ ಬಿದ್ದರೆ, ಹರಳೆಣ್ಣೆಯಂಥ ಎಣ್ಣೆ ಬಿಟ್ಟಾಗ, ರೆಪ್ಪೆಗಳು ಬೇಗ ಕೂಡಿಕೊಳ್ಳುವುದಿಲ್ಲ. ಜುಟ್ಟಿಗೆ ದಾರವನ್ನು ಕಟ್ಟಿ ಆ ದಾರವನ್ನು ಒಂದು ಗೋಡೆಯ ಗೂಟಕ್ಕೆ ಕಟ್ಟಿದ್ದರೆ ತೂಕಡಿಕೆ ಬಂದಾಗ ದಾರ ಎಳೆಯುತ್ತದೆ. ಆಗ ಎಚ್ಚರವಾಗುತ್ತದೆ. ಹೀಗೆ ಓದುವ ಒಬ್ಬನ ಚಿತ್ರವನ್ನು ತೆಲುಗಿನ ಒಂದು ನಾಟಕದಲ್ಲಿ ಓದಿದ ನೆನಪು ನನಗೆ.

**ಕಥೆ** ಎಂಬುದರಿಂದ 'ಕತೆ' ಬಂದಿದೆಯೆ ? ಇದು ಶಬ್ದದ ಬದಲಾವಣೆಯ ಎರಡನೆಯ ಹಂತ ಎಂಬ ವಾದವಿದೆ. ಸಂಸ್ಕೃತದ 'ಕಥಾ' ಶಬ್ದ ಈ ಎರಡು ರೂಪಗಳಿಗೂ ಮೂಲ. ಸಂಸ್ಕೃತದ ಶಬ್ದಗಳನ್ನು ಕನ್ನಡಕ್ಕೆ ತರುವಾಗ ಮಹಾಪ್ರಾಣದ ಸ್ಥಳದಲ್ಲಿ ಅಲ್ಪಪ್ರಾಣವನ್ನು ಬಳಸುವುದು ಸಾಮಾನ್ಯ. ಆದರೆ ಕೆಲವು ಸಂದರ್ಭಗಳಲ್ಲಿ ಅಲ್ಪ ವ್ಯತ್ಯಾಸದೊಡನೆ ಸಂಸ್ಕೃತ ರೂಪವನ್ನೇ ಉಪಯೋಗಿಸುವುದೂ ಉಂಟು. ಕನ್ನಡದ ವ್ಯಾಕರಣಕಾರರು ಇಂಥ ಶಬ್ದಗಳನ್ನು ತತ್ಸಮಗಳೆಂದು ಕರೆಯುತ್ತಾರೆ. ಕಥೆ-ಕತೆ, ಈ ಎರಡು ರೂಪಗಳೂ ಸರಿಯಾದುವೇ. 'ಕಥೆ'ಯಿಂದ 'ಕತೆ' ಬಂದಿರಬಹುದು ಎಂಬ ಅನುಮಾನ ಬೇಕಿಲ್ಲ. ಏಕೆಂದರೆ ಈ ಎರಡೂ ರೂಪಗಳು ಅತಿ ಪ್ರಾಚೀನ ಕಾಲದಿಂದ ಕನ್ನಡ ಕಾವ್ಯಗಳಲ್ಲಿ ಪ್ರಯೋಗದಲ್ಲಿವೆ. 'ವಡ್ಡಾರಾಧನೆ' ಎಂಬ ಗ್ರಂಥದಲ್ಲಿ (ಕಾಲ: ೧೦ನೇ ಶತಮಾನ) **ಮಹಾಪುರುಷರ್ಕಳ ಕಥೆಗಳಂ ಪೇೞ್ವಲ್ಲಿ** (೧-೧೧) ಎಂಬ ಪ್ರಯೋಗವಿದೆ. ಗದಾಯುದ್ಧವೆಂಬ ಕಾವ್ಯದಲ್ಲಿ (ಕಾಲ: ೯೮೩) **ಭಾರತದೊಳಗಣ ಕಥೆಯೆಲ್ಲಂ** (೧-೩೫) ಎಂಬ ಪ್ರಯೋಗವಿದೆ. ಕುಮಾರವ್ಯಾಸನಲ್ಲಿ (ಕಾಲ: ೧೪೫೦) **ಮುನಿ ವಿಸ್ತರಿಸಿದನು ಕಥೆಯ** (ಅರಣ್ಯ ಪರ್ವ ೨-೧೦), ಎಂದಿದೆ. ಕತೆ ಎಂಬ ರೂಪ ಪಂಪಭಾರತ (ಕಾಲ: ೯೪೧)ದಲ್ಲಿಯೇ ಬರುತ್ತದೆ. **ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ** (೧-೧೧) ಎಂದಿದೆ. ಪೊನ್ನನ ಶಾಂತಿ ಪುರಾಣದಲ್ಲಿ (ಕಾಲ ೯೫೦). **ಆ ವಿದ್ಯಾಧರ ರಾಜಸುತೆಯ ಕತೆಯಂ ಕೇಳಿಂ** (೯-೧೨) ಎಂದಿದೆ. ಹೀಗೆ ಪ್ರಾಚೀನ ಪ್ರಯೋಗಗಳಲ್ಲಿ ಅಸ್ತಿತ್ವ ಪಡೆದಿರುವ ಎರಡು ರೂಪಗಳಲ್ಲಿ

ಒಂದರಿಂದ ಒಂದು ಬಂದಿತು ಎಂದು ಹೇಳುವುದು ಸರಿಯಲ್ಲ. ಇದು ತದ್ಭವದ ಕತೆ.

**ಕದ** ಇದು ಬಾಗಿಲನ್ನು ಮುಚ್ಚಲು ಹಾಕುವ ಮರದ ಹಲಗೆ, ಬಾಗಿಲ ಪಡಿ. ಇದು ಕನ್ನಡ ಶಬ್ದ. ಬಾಗಿಲು ಮನೆಯನ್ನು ಪ್ರವೇಶಿಸುವ ಸಲುವಾಗಿ ಇಟ್ಟಿರುವ ದ್ವಾರ, ದಾರಿ. ಅದು Doorway ಎಂಬುದಕ್ಕೆ ಸಮಾನ. ಕದ = Shutter. ಆದರೆ ಜನರ ಮಾತಿನಲ್ಲಿ ಬಾಗಿಲು, ಕದ ಎಂಬ ಎರಡನ್ನೂ ಒಂದೇ ಅರ್ಥದಲ್ಲಿ ಉಪಯೋಗಿಸುವುದನ್ನು ನಾವು ಕಾಣಬಹುದು, ಬಾಗಿಲು ತೆಗೆ, ಕದ ತೆಗೆ. ನಿಜವಾಗಿ ಬಾಗಿಲು ತೆಗೆ ಎಂದರೆ ಬಾಗಿಲವಾಡವನ್ನು ಕೀಳು ಎಂದೇ ಅರ್ಥವಾಗಬೇಕು. ಇದು ಆಡುಮಾತು ಬೆಳೆಯುವ ವಿಚಿತ್ರವಾದ ರೀತಿ. ಕಿಟಕಿ ತೆಗೆ, ಬೀರು ತೆಗೆ ಎಂಬ ಶಬ್ದಗಳನ್ನು ಗಮನಿಸಿ. ಕನ್ನಡದಲ್ಲಿ ಕದವು ಎಂಬ ರೂಪವೂ ಇದೆ. ತಮಿಳಿನಲ್ಲಿ ಕದವು ಎಂಬುದು ಜ್ಞಾತಿ ಶಬ್ದ.

**ಕದಂಬ** ಕನ್ನಡ ಕಾವ್ಯಗಳಲ್ಲಿಯೂ ಸಂಸ್ಕೃತ ಕಾವ್ಯಗಳಲ್ಲಿಯೂ ಈ ಶಬ್ದ ಅನೇಕ ಸಲ ಕಾಣಿಸಿಕೊಳ್ಳುತ್ತದೆ. ಆದರೆ ಇದರ ಅರ್ಥದ ಬಗ್ಗೆ ನಿರ್ಣಯವಾಗಿ ಹೇಳುವುದು ಕಷ್ಟ. ಕಡಹ, ನೀಪ ಎಂಬ ಬೇರೆಯ ಹೆಸರುಗಳುಳ್ಳ ಮರಕ್ಕೆ ಕದಂಬ ವೃಕ್ಷ ಎಂದು ಹೆಸರು ಎಂದು ನಿಘಂಟುಗಳು ಹೇಳುತ್ತವೆ. ಕನ್ನಡದ ಪ್ರಾಚೀನ ರಾಜವಂಶವಾದ ಕದಂಬರ ವಂಶಕ್ಕೆ ಇದು ಪೂಜಾವೃಕ್ಷವಾಗಿತ್ತೆನ್ನುತ್ತಾರೆ. ತಾಳೆ, ಈಚಲು ಈ ಮರಗಳಿಗೆ ಈ ಹೆಸರಿದೆ ಎನ್ನುತ್ತಾರೆ. ಈ ಮರದ ಹೂವಿನಿಂದ ಸುವಾಸನೆ ಹರಡುತ್ತದೆ ಎಂದು ವರ್ಣನೆ ಬರುತ್ತದೆ. ಕಾದಂಬರಿ ಎಂದರೆ ಮತ್ತು ಬರಿಸುವ ಒಂದು ಮದ್ಯ. ಈ ಕದಂಬ ವೃಕ್ಷದಿಂದ ಈ ಮದ್ಯವನ್ನು ತೆಗೆಯುತ್ತಾರೆ. ದೇವತೆಗಳು ಕಾದಂಬರೀ ಮದ್ಯಪ್ರಿಯರು, ಇತ್ಯಾದಿ ಕತೆಗಳಿವೆ. ಖಂಡಿತವಾಗಿ ಹೇಳುವುದಕ್ಕೆ ಇನ್ನೂ ವಿಷಯ ಸಂಗ್ರಹ ಸಾಲದು.

**ಕದಾಚನ** ಈ ಸಂಸ್ಕೃತ ಶಬ್ದಕ್ಕೆ ಯಾವಾಗಲೂ, ಎಂಥ ಸಮಯದಲ್ಲೂ ಎಂದರ್ಥ. ಕದಾ ಎಂದರೆ ಯಾವಕಾಲದಲ್ಲಿ? ಎಂದರ್ಥ. ಈ ಶಬ್ದಕ್ಕೆ ಚನ ಎಂಬುದು ಸೇರಿ ಈ ಅರ್ಥ ಬರುತ್ತದೆ. ಚಿತ್ ಎಂಬುದು ಸೇರಿ ಕದಾಚಿತ್ ಎಂದಾದರೆ ಅದಕ್ಕೆ ಯಾವುದೋ ಸಂದರ್ಭದಲ್ಲಿ, ಯಾವಾಗಲೋ ಎಂದು ಅರ್ಥ ಬರುತ್ತದೆ. ಸಂಸ್ಕೃತದಲ್ಲಿ ಈ ಎರಡೂ ಅನೇಕ ವೇಳೆ ಪ್ರಯೋಗವಾಗುವ ಶಬ್ದಗಳು.

**ಕದಾಪಿ** ಎಂಬ ಸಂಸ್ಕೃತ ಶಬ್ದಕ್ಕೆ ಯಾವಾಗಲಾದರೂ ಎಂದರ್ಥ. ಆಗಾಗ ಎಂದೂ ಅರ್ಥವಾಗುತ್ತದೆ. ಇಂಗ್ಲಿಷಿನ Often ಎಂಬುದಕ್ಕೆ ಸಮಾನ ಶಬ್ದ. ಇದು ಅವ್ಯಯ.

**ಕದ್ದಾಲಿಕೆ** ಇದು ತಪ್ಪು ಶಬ್ದ. ಇದು ಒಂದು ಶಬ್ದವಾಗುವುದೇ ಇಲ್ಲ. ಕದ್ದು + ಆಲಿಕೆ = ಕದ್ದಾಲಿಕೆ. ಈ ಶಬ್ದದಲ್ಲಿ ಎರಡು ತಪ್ಪುಗಳಿವೆ.. ಮೊದಲನೆಯದು ಅದು ಏಕ ಶಬ್ದವಾಗುವುದಿಲ್ಲ. ಎರಡನೆಯದು ಆಲಿಕೆ ಎಂಬ ಶಬ್ದಕ್ಕೆ ಅಸ್ತಿತ್ವವೇ ಇಲ್ಲ. ಆಲಿಸು ಶಬ್ದದಿಂದ ಆಲಿಸುವಿಕೆ ಎಂದಾಗಬೇಕು. ಆಲ್ ಎಂಬ ಹಳೆಗನ್ನಡದ ಶಬ್ದವಿದೆ. ಅದಕ್ಕೆ ಕಿರಿಚು ಕೂಗು ಎಂದರ್ಥ. ಆಲ್ + ಇಕೆ = ಆಲಿಕೆ ಎಂದಾದರೆ ಕಿರಿಚುವಿಕೆ, ಕೂಗುವಿಕೆ ಎಂದರ್ಥವಾಗುತ್ತದೆ. ಆದರೆ ಅಂಥ ಶಬ್ದ ಪ್ರಯೋಗದಲ್ಲಿಲ್ಲ. ದೂರವಾಣಿಯ ಸಂಭಾಷಣೆಯನ್ನು ಕದ್ದು ಕೇಳುವುದು ಎಂಬ ಅರ್ಥದಲ್ಲಿ ಇದು ಉಪಯೋಗವಾಗುತ್ತಿದೆ. ಅದು ಕದ್ದು ಆಲಿಸು, ಕದ್ದು ಆಲಿಸುವಿಕೆ ಎಂದು ಇರಬೇಕು. ಹಳಗನ್ನಡದಲ್ಲಿ ಆಲ್ = ಕಿವಿಗೊಟ್ಟು ಕೇಳು ಎಂಬ ಒಂದು ಧಾತು ಇದ್ದಿರಬೇಕು. ಇದರಿಂದ ಆಲಿಸು ಬಂದಿರಬೇಕು.

**ಕನಸು-ಕಣಸು** ಕನಸು = ಸ್ವಪ್ನ. Dream. ಈ ಶಬ್ದಕ್ಕೆ ಮೂಲ ಕನ ಇದಕ್ಕೆ ಸು ಸೇರಿ ಕನಸು ಆಗಿದೆ. ದಿ. ಗೋವಿಂದ ಪೈ ಅವರು **"ಕೆಟ್ಟ ಕನ ಕಂಡವಂ ನಿಟ್ಟಸುವೊಲಟ್ಟವಂ ನಿದ್ದೆ ನೆಮ್ಮದಿಯರಿಯೆ."** ಎಂದು ಅವರ 'ಹೆಬ್ಬೆರಳು' ನಾಟಕದಲ್ಲಿ ಉಪಯೋಗಿಸಿದ್ದಾರೆ. (ಹೆಬ್ಬೆರಳು ೨೧-೫). ತಮಿಳಿನಲ್ಲಿ ಕನ ಎಂಬ ರೂಪವೇ ಇದೆ. ಕನಸು ಎಂಬುದಕ್ಕೆ ಕಣಸು

ಎಂಬ ಒಂದು ಅಪೂರ್ವವಾದ ಪರ್ಯಾಯ ರೂಪವೂ ಇದೆ. **'ತಿರಿವ ತಿರುಕರ ಕಣಸೆ, ನಿನಗೆ ನೆಲೆ ಇಲ್ಲೆ'** ಎಂಬುದು ಪು. ತಿ. ನ. ಅವರ ಪ್ರಯೋಗ (ಮಲೆದೇಗುಲ ೫-೬). ಇದು ಒಂದು ವಿಶಿಷ್ಟ ಪ್ರಯೋಗ. ಈ ಶಬ್ದಕ್ಕೆ ದರ್ಶನ, ಕನಸು ಎಂಬ ಎರಡು ಅರ್ಥ ಬರುವಂತೆ ಅವರು ಉಪಯೋಗಿಸಿದ್ದಾರೆ. ನೋಡಿ: ಕಣಸು

**ಕನಿಷ್ಠ-ಗರಿಷ್ಠ** ಇವು ಪರಸ್ಪರ ವಿರುದ್ಧಾರ್ಥದ ಸಂಸ್ಕೃತ ಶಬ್ದಗಳು. ಈ ಎರಡೂ ರೂಪಗಳೂ ಸರಿ. ಕನಿಷ್ಠ ಎಂಬುದು ಭೂಯಿಷ್ಠ ಎಂಬುದಕ್ಕೂ ಜ್ಯೇಷ್ಠ ಎಂಬುದಕ್ಕೂ ವಿರುದ್ಧವಾದ ಶಬ್ದ. ಗರಿಷ್ಠ ಎಂಬುದೂ ಹಾಗೆಯೇ. **ಗುರೋಃ ಗರ್ ಆದೇಶಃ** ಎಂಬ ವ್ಯಾಕರಣ ಸೂತ್ರದ ಪ್ರಕಾರ ಸಿದ್ಧವಾಗುತ್ತದೆ. ಅದು ಶುದ್ಧರೂಪ ಅದಕ್ಕೆ ಎರಡು ಅರ್ಥಗಳಿವೆ. *೧. ಹೆಚ್ಚು ತೂಕವುಳ್ಳ ೨. ತುಂಬ ಗಾತ್ರವಾದ, ಘನತೆಯುಳ್ಳ* ಎಂದು ತಿಳಿಯಬೇಕು.

**ಕನ್ನಡ ಅಕ್ಷರಗಳ ಸ್ವರೂಪ** ಬರಹದ ಅಕ್ಷರಗಳಿಗೂ ಮುದ್ರಣದ ಅಕ್ಷರಗಳಿಗೂ ತುಂಬ ವ್ಯತ್ಯಾಸವಿರುವುದು ನಿಜ. ಒಂದೊಂದು ಫೌಂಡ್ರಿ (ಅಚ್ಚಿನ ಮೊಳೆಯನ್ನು ತಯಾರಿಸುವ ಸ್ಥಳ)ಯಲ್ಲಿ ಒಂದೊಂದು ಬಗೆಯ ಆಕಾರವನ್ನು ನೀಡುತ್ತಾರೆ. ಅದು ಅವರು ಅಕ್ಷರಗಳಿಗೆ ಸೌಂದರ್ಯವನ್ನು ನೀಡುವ ಬಗೆ. ಇದರಿಂದ ಬರಹದಲ್ಲಿಯೂ ತುಂಬ ವ್ಯತ್ಯಾಸವಾಗುತ್ತದೆ. ಇದು ಮುದ್ರಣದ ವರವಲ್ಲ, ಶಾಪ. ಈ ಬಗ್ಗೆ ಕೂಲಂಕಷವಾಗಿ ಚರ್ಚಿಸಿ ಶಿಕ್ಷಣ ಇಲಾಖೆಯವರು ಪಠ್ಯಪುಸ್ತಕಗಳಿಗಾದರೂ ಒಂದೇ ಬಗೆಯ ಮುದ್ರಣದ ಮೊಳೆಗಳನ್ನು ಉಪಯೋಗಿಸುವುದನ್ನು ಖಾತರಿ ಮಾಡಿಕೊಳ್ಳಬೇಕು. ಇದರಿಂದ ಕನ್ನಡ ಅಕ್ಷರಗಳನ್ನು ಬಾಲಕ ಬಾಲಕಿಯರಿಗೆ ಕಲಿಸುವಾಗ ಸುಲಭವಾಗುತ್ತದೆ. ಅಲ್ಲದೆ ಕರ್ನಾಟಕದ ಎಲ್ಲ ಕಡೆ ಒಂದೇ ಬಗೆಯ ಅಕ್ಷರ ಸ್ವರೂಪವನ್ನು ಕಲಿಸಬಹುದು. ಕನ್ನಡ ಶಬ್ದ ರಚನೆಯನ್ನು ಯಾರು ಕಂಡುಹಿಡಿದರು ? ಇದು ಯಾವಾಗಿನಿಂದ ಆಡು ಭಾಷೆಯಾಗಿದೆ ? ಒಂದು ಭಾಷೆಯ ಮೂಲವನ್ನು ಹುಡುಕುವುದು ಯಾವಾಗಲೂ ಕಷ್ಟದ ಕೆಲಸ. ನಮಗೆ ಸಿಕ್ಕಿರುವ ಶಿಲಾಶಾಸನದಲ್ಲಿ ಕನ್ನಡದ ಲಿಪಿಯೂ ಭಾಷೆಯೂ ಕಾಣಬರುವುದು ಕ್ರಿ. ಶ. ೪೫೦ರ ವೇಳೆಗೆ. ಹಲ್ಮಿಡಿ ಶಾಸನವೇ ನಮ್ಮ ಅತಿ ಪ್ರಾಚೀನ ಶಾಸನ. ಆದುದರಿಂದ ನಮ್ಮ ಭಾಷೆಯೂ ಅದರ ಲಿಪಿಯೂ ಆ ಶಾಸನಕ್ಕಿಂತ ಒಂದೆರಡು ಶತಮಾನಗಳಷ್ಟು ಹಿಂದೆಯೇ ಸ್ಪಷ್ಟವಾದ ರೂಪವನ್ನು ತಳೆದಿರಬಹುದು ಎಂದು ಸೂಚಿಸಬಹುದು ಅಷ್ಟೆ!

**ಕನ್ನಡಾಭಿಮಾನ** ಎಂಬುದು ಸವರ್ಣದೀರ್ಘಸಂಧಿಯಾದರೆ ಊರೂರು ಏಕೆ ಸವರ್ಣದೀರ್ಘಸಂಧಿಯಲ್ಲ ? ಕನ್ನಡ ಎಂಬುದು ಒಂದು ಅಂಕಿತನಾಮ. ಇದು ಯಾವ ಭಾಷೆಯಲ್ಲಿ ಪ್ರಯೋಗವಾದರೂ ಆ ಭಾಷೆಯ ವ್ಯಾಕರಣಕ್ಕೆ ಹೊಂದಬಹುದು. ಕನ್ನಡ + ಅಭಿಮಾನ = ಕನ್ನಡಾಭಿಮಾನ ಎಂದು ವ್ಯಾಕರಣಕ್ರಿಯೆ. ಹೀಗಿದ್ದರೂ ಕನ್ನಡದ ಅಭಿಮಾನ ಎಂದು ಉಪಯೋಗಿಸುವುದೇ ಸರ್ವಶ್ರೇಷ್ಠ. ಊರೂರು ಎರಡು ಕನ್ನಡ ಶಬ್ದಗಳಿಂದ ಆದ ಸಂಧಿ. ಊರು + ಊರು. ಕನ್ನಡದಲ್ಲಿ ಸ್ವರಕ್ಕೆ ಸ್ವರ ಪರವಾದರೆ ಪೂರ್ವಸ್ವರ ಲೋಪವಾಗುತ್ತದೆ. ಆದ್ದರಿಂದ ಅದು ಲೋಪಸಂಧಿ. ಎರಡೂ ಕನ್ನಡ ಪದಗಳು ಸೇರಿದಾಗ ಸವರ್ಣದೀರ್ಘಸಂಧಿಯಾಗುವುದಿಲ್ಲ ಅಷ್ಟೇ. ಸಂಸ್ಕೃತ ಶಬ್ದಗಳು ಸೇರಿದಾಗ ಮಾತ್ರ ಸವರ್ಣದೀರ್ಘಸಂಧಿಯಾಗುತ್ತದೆ.

**ಕನ್ನಡಿಗ** ಈ ಶಬ್ದಕ್ಕೆ ಕನ್ನಡಿತಿ ವಿರುದ್ಧ ಶಬ್ದವಲ್ಲವೆ ? ಎಂದು ಕೆಲವರು ಕೇಳುತ್ತಾರೆ. ಶಾಲೆಗಳಲ್ಲಿ ವಿರುದ್ಧ ಶಬ್ದಗಳನ್ನು ಕಲಿಸುವಾಗ ಕೆಲವರು ಉಪಾಧ್ಯಾಯರು ಬೇರೆಯ ಲಿಂಗವನ್ನು ಸೂಚಿಸಿದರೆ ಶಬ್ದವು ವಿರುದ್ಧವಾಯಿತೆಂದು ನಂಬಿರುವಂತಿದೆ. ಇದು ತಪ್ಪು. ಕನ್ನಡಿತಿ ಎಂಬುದು ಸ್ತ್ರೀಲಿಂಗ. ಕನ್ನಡಿಗ ಎಂಬ ಶಬ್ದಕ್ಕೆ ವಿರುದ್ಧ ಶಬ್ದವಿಲ್ಲ. ಕನ್ನಡಿಗನಲ್ಲದ ವ್ಯಕ್ತಿ ಎಂಬುದು ಆ ಅರ್ಥವನ್ನು ಸೂಚಿಸುವ ಪದ.

**ಕನ್ನಡಿಯೊಳಗಿನ ಗಂಟು** ಎಂಬ ನುಡಿಗಟ್ಟು ಒಂದು ಹಳೆಯ ಕಥೆಗೆ ಸಂಬಂಧಪಟ್ಟದ್ದು. ಅತ್ತರಿನ ಸುವಾಸನೆಯನ್ನು ಮೆಚ್ಚಿದ ರಾಜನು ಅದನ್ನು ಕೊಳ್ಳಲಿಲ್ಲ. ಆಗ ವರ್ತಕನು ಆ ವಾಸನೆಯನ್ನು ಅನುಭವಿಸಿದ್ದಕ್ಕೆ ಹಣ ತೆರಬೇಕೆಂದನಂತೆ. ಆಗ ರಾಜನು ಒಂದು ಕನ್ನಡಿಯನ್ನು ತರಿಸಿ ಅದರಲ್ಲಿ ಹಣದ ಪ್ರತಿಬಿಂಬವನ್ನು ತೋರಿಸಿ, ತೆಗೆದುಕೊಂಡು ಹೋಗು ಎಂದನಂತೆ. ಹಿಂದೆ Solomon the wise ಎಂಬಾತನ ಕಥೆಯನ್ನು ಹೇಳುವಾಗ ನಮ್ಮ ಉಪಾಧ್ಯಾಯರು ಇಂಥ ಅನೇಕ ಕಥೆಗಳನ್ನು ಹೇಳಿದ್ದು ನೆನಪಿದೆ. ಇದಕ್ಕೆ ಕಾಣುವುದು, ಆದರೆ ಕೈಗೆ ಸಿಕ್ಕದ್ದು ಎಂದು ಅರ್ಥ.

**ಕನ್ನೆನೆಲ** ಎಂಬ ಶಬ್ದ ಇಂಗ್ಲಿಷಿನ Virgin Soil ಎಂಬ ಶಬ್ದದ ಕನ್ನಡ ಅನುವಾದ. ಈ ಇಂಗ್ಲಿಷ್ ಶಬ್ದಕ್ಕೆ ನೇಗಿಲಿನಿಂದ ಉಳದೇ ಇರುವ ನೆಲ ಎಂದರ್ಥ. ಅಂದರೆ ಆ ಕ್ಷೇತ್ರದಲ್ಲಿ ಬೆಳೆ ತೆಗೆಯಲು ಯಾರೂ ಏನನ್ನೂ ಮಾಡಿರಲಿಲ್ಲ; ಯಾರು ಬೇಕಾದರೂ ಅವರಿಗೆ ಇಷ್ಟ ಬಂದ ಸೂಕ್ತವಾದ ಬೇಸಾಯವನ್ನು ಮಾಡಿ, ಫಲ ಪಡೆಯಬಹುದಾದ ನೆಲ ಅದು ಎಂದರ್ಥ. ಇದು ಒಂದು ರೂಪಕ. ಈ ಮಾತು ವ್ಯವಸಾಯದ ಕ್ಷೇತ್ರಕ್ಕೆ ಮಾತ್ರ ಸಂಬಂಧಿಸಿದ್ದು ಅಲ್ಲ. ಅದು ಯಾವ ಕ್ಷೇತ್ರವಾದರೂ ಆಗಬಹುದು. ಸಂಶೋಧನೆಯಲ್ಲಿ ಇಂಥ ಕ್ಷೇತ್ರಗಳು ಬೇಕಾದ ಹಾಗಿವೆ. ತಮಿಳಿನಲ್ಲಿ ಕನ್ನಿನೆಲಂ ಎಂಬ ಶಬ್ದ ಪ್ರಚಾರದಲ್ಲಿದೆ.

**ಕಪ** ಇದು ಸಂಸ್ಕೃತದ ಕಫ ಎಂಬ ಶಬ್ದದ ತದ್ಭವ. ಇದಕ್ಕೆ ಶ್ಲೇಷ್ಮ ಎಂದರ್ಥ. ಕಫ ಜ್ವರ, ಕಫ ಪ್ರಕೃತಿ ಎಂಬ ಶಬ್ದಗಳು ಆಯುರ್ವೇದದಲ್ಲಿ ಆಗಾಗ ಪ್ರಯೋಗವಾಗುವ ಶಬ್ದಗಳು.

**ಕಪರ್ದಿ-ಮೃಡ-ಭರ್ಗ** ಭರ್ಗ ಎನ್ನುವುದು ಭ್ರಜ್ ಧಾತುವಿನಿಂದ ಬಂದಿದೆ. ಕಾಂತಿಯಿಂದ ಕೂಡಿರುವವನು, ಹೊಳಪುಳ್ಳವನು ಎಂದರ್ಥ. ಸಕಲಂ **ಬಿಭರ್ತೀತಿವಾ** ಎಂದು ಟೀಕೆ ವಿವರಿಸುತ್ತದೆ. ಕಪರ್ದ ಉಳ್ಳವನು ಕಪರ್ದಿ. ಕಪರ್ದ ಎಂದರೆ ಕೂದಲು. ವ್ಯೋಮಕೇಶ ಎಂಬ ಶಬ್ದವನ್ನು ನೋಡಿ. ಶಿವನ ಜಟಾಜೂಟ. ಅದಕ್ಕೆ ಕಪರ್ದ ಎಂಬುದು ಇನ್ನೊಂದು ಹೆಸರು. **ಕಂ ಶಿರಃ ಪಿಪರ್ತಿ ಪೂರಯತಿ ಇತಿ ಕಪರ್ದಃ** ಎಂದು ಒಂದು ಟೀಕೆಯ ವಿವರಣೆ. ಕಪರ್ದ ಎಂದರೆ ಕವಡೆ ಎಂಬ ಬೇರೆಯ ಅರ್ಥವೂ ಇದೆ. **ಮೃಡ ಮೃಡತೀತಿ ಮೃಡಃ** ಎಂಬುದು ಟೀಕೆ. ಮೃಡ್ ಧಾತುವಿಗೆ ಕರುಣೆ ತೋರಿಸು, ಕ್ಷಮಿಸು, ಸುಖಪಡಿಸು, ಸಂತೋಷವನ್ನುಂಟುಮಾಡು ಮುಂತಾದ ಅರ್ಥಗಳಿವೆ. ಈ ಎಲ್ಲ ಶಬ್ದಗಳಿಗೂ ಶಿವ, ಈಶ್ವರ, ಶಂಕರ ಎಂದೇ ಅರ್ಥ.

**ಕಪಿಮುಷ್ಟಿ** ಕಪಿಯ ಹಿಡಿತ ಬಲು ಬಿಗಿಯಾದುದು ಎಂಬ ನಂಬಿಕೆಯಿದೆ. ಅದು ಹಾವುಗಳನ್ನು ಹಿಡಿದರೆ ಹಾವು ಸಾಯುವತನಕ ಹಿಡಿತವನ್ನು ಬಿಡುವುದಿಲ್ಲವೆಂಬುದು ಜನರು ಆಡುವ ಮಾತಿನಲ್ಲಿ ಪ್ರಚಾರದಲ್ಲಿದೆ. ಬಿಗಿತವೇ ಇಲ್ಲಿ ಪ್ರಧಾನವಾದ ಅರ್ಥ. ಇದರ ವ್ಯಾಪಕವಾದ ಅರ್ಥ ಮತ್ತೊಂದಿದೆ. ಹಣದ ಉಪಯೋಗದಲ್ಲಿ ತುಂಬ ಜಿಪುಣನಾಗಿರುವವನು ಎಂಬುದೊಂದು ಅರ್ಥ ಪ್ರಚಾರದಲ್ಲಿದೆ. ಹಿಡಿದ ಕೆಲಸವನ್ನು ಬಿಡದೆ ಮಾಡುವವನು ಎಂಬುದೂ ಒಂದು ಅರ್ಥ. ಇವೆಲ್ಲ ಅರ್ಥವ್ಯಾಪ್ತಿಗೆ ಸಂಬಂಧಪಟ್ಟ ವಿಚಾರ.

**ಕಬಜೆ** ಇದು ಪಾರಸಿ ಶಬ್ದ ಕಬೂಜ್. ಅದೇ ಅರಬ್ಬಿಯಲ್ಲಿ ಕಬ್ಜಾ. ಕನ್ನಡದಲ್ಲಿ ಕಬಜೆ ಆಗಿದೆ. ಕಬಜಾ ಎಂದು ಪ್ರಯೋಗಿಸುವುದುಂಟು. ಇದಕ್ಕೆ ಸ್ವಾಧೀನ, ಸ್ವಂತವಶದಲ್ಲಿರುವುದು ಎಂದು ನಾಮಪದದ ಅರ್ಥ. ಜಮೀನನ್ನು ಕಬಜೆ ಪಡೆಯಬೇಕು ಎಂಬ ವಾಕ್ಯವನ್ನು ನೋಡಿ. ಕನ್ನಡ ದೇಶದಲ್ಲಿ ಕೆಲವರು ಕಬ್ಜಾ, ಕಬ್ಜೆ ಎಂದೂ ಉಚ್ಚರಿಸುತ್ತಾರೆ.

**ಕಮತ** ಇದು ಅಚ್ಚ ಕನ್ನಡ ಶಬ್ದ. ಇದಕ್ಕೆ ತಮಿಳು ತೆಲುಗು ಭಾಷೆಗಳಲ್ಲೂ ಪ್ರಯೋಗವಿದೆ. ಇದಕ್ಕೆ ೧. ಸ್ವಂತ ಬೇಸಾಯ, ೨. ಸ್ವಂತ ಬೇಸಾಯದ ಭೂಮಿ ಎಂದು ಅರ್ಥ. ಶಾಸನಗಳಲ್ಲಿ ಇದಕ್ಕೆ ೧೧ನೇ ಶತಮಾನದ ಆದಿಯಿಂದಲೂ ಪ್ರಯೋಗಗಳು ಸಿಗುತ್ತವೆ.

ಕ್ರಿ.ಶ ೧೦೭೨ರಲ್ಲಿ **ಗುಡಿಗೆಜೆಯ ಕಮ್ಮತ್ತವಳಗಾಗಿ** ಎಂಬ ಪ್ರಯೋಗವಿದೆ.

**ಕಮಿಟ್‌ಮೆಂಟ್** ಸಾಹಿತ್ಯ ವಿಮರ್ಶೆಯಲ್ಲಿ ಇದನ್ನು ವಿಶೇಷವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. ನಮ್ಮಲ್ಲಿ ರಾಜಕೀಯವೂ, ಸಾಮಾಜಿಕವೂ, ನೈತಿಕವೂ, ಮತೀಯವೂ ಆದ ಅನೇಕ ಸಿದ್ಧಾಂತಗಳಿವೆ. ಸಾಹಿತ್ಯವನ್ನು ರಚಿಸುವವರು ಇಂಥ ಯಾವುದಾದರೂ ಸಿದ್ಧಾಂತಕ್ಕೆ ಬದ್ಧರಾಗಿ ಆ ದೃಷ್ಟಿಯಿಂದಲೇ ಗ್ರಂಥ ರಚನೆ ಮಾಡಿದರೆ ಆ ನಿಲುವನ್ನು ಕಮಿಟ್‌ಮೆಂಟ್ ಎಂದು ಕರೆಯುತ್ತಾರೆ. ಸಿದ್ಧಾಂತಗಳಿಗೆ ಗಂಟು ಬಿದ್ದಿರುವುದೇ ಕಮಿಟ್‌ಮೆಂಟ್. ರಾಜಕೀಯ, ಸಾಮಾಜಿಕ, ಮತೀಯ ಮುಂತಾದ ತತ್ವಗಳಿಗೆ ಅಂಟಿಕೊಂಡಿರುವ ಕಲೆಗಾರರ, ಸಾಹಿತಿಗಳ ಬೌದ್ಧಿಕ ಮತ್ತು ಭಾವನಾತ್ಮಕ ನಿರ್ಧಾರ ಇದು. ಕೆಲವರು ಲೇಖಕರಲ್ಲಿ ಈ ನಿರ್ಧಾರ ಸ್ಪಷ್ಟವಾಗಿ ಗೋಚರಿಸುತ್ತದೆ.

**ಕಮ್ಮಟ** ಕಮ್ಮಟ ಎಂಬುದು **ಕರ್ಮಸ್ಥಾನದ** ತದ್ಭವ. ಹೀಗೆಯೇ ತಮಿಳಿನಲ್ಲಿ **ಕಮ್ಮಟ್ಟ** ಎಂದೂ ಮಲೆಯಾಳದಲ್ಲಿ **ಕಮ್ಮಟ್ಟ** ಎಂದೂ ಶಬ್ದಗಳಿವೆ. ಈ ಶಬ್ದಕ್ಕೆ ೧. ಕುಲುಮೆಯಿರುವ ಜಾಗ ೨. ನಾಣ್ಯವನ್ನು ಟಂಕಿಸುವ ಸ್ಥಳ ಎಂದೂ ಅರ್ಥ. ಇದು ಇಂಗ್ಲಿಷಿನ Work Shop ಎಂಬ ಶಬ್ದಕ್ಕೆ ಸಮಾನವಾಗಿರುವುದನ್ನು ಕಂಡು ಈಚೆಗೆ ಯಾವುದಾದರೂ ಒಂದು ವಿಷಯದಲ್ಲಿ ಯುವಕರಿಗೆ ತಿಳಿವಳಿಕೆ ನೀಡಿ ಆ ವಿಷಯದಲ್ಲಿ ಪರಿಣತರನ್ನಾಗಿ ಮಾಡುವ ಏರ್ಪಾಟನ್ನು **ಕಮ್ಮಟ** ಎಂದೇ ಸರಿಯಾಗಿ ಕರೆಯುತ್ತಾರೆ.

**ಕರಗಲು** ಎಂಬ ಶಬ್ದ ತುಂಬ ಹಣ್ಣಾಗಿ ರುಚಿ ಕಳೆದುಕೊಂಡಿರುವ ಫಲಗಳನ್ನು ಸೂಚಿಸುತ್ತದೆ. ಕರಗಲ ಎಂದರೆ ದಿನದಿನಕ್ಕೆ ಕ್ಷೀಣವಾಗುತ್ತಿರುವ ಎಂದು ಗುಣವಾಚಕದ ಅರ್ಥವೂ ಇದೆ.

**ಕರಗಸ-ಗರಗಸ** ಸಂಸ್ಕೃತದಲ್ಲಿ 'ಕ್ರಕಚ' ಎಂಬ ಶಬ್ದವಿದೆ. ಮರ ಮುಂತಾದುವನ್ನು ಕೊಯ್ಯುವ ಹಲ್ಲುಗಳುಳ್ಳ ಕಬ್ಬಿಣದ ಆಯುಧಕ್ಕೆ ಈ ಹೆಸರಿದೆ. ಇದು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದಿದೆ. ಪ್ರಾಕೃತದಲ್ಲಿ ಈ ಸಂಸ್ಕೃತ ಶಬ್ದವು ಕರಕಯ, ಕರಗಯ ಎಂಬ ಎರಡು ರೂಪಗಳನ್ನು ಹೊಂದಿದೆ. ಇವೇ ಕನ್ನಡದಲ್ಲಿ ಕರಗಸ, ಗರಗಸ ಎಂಬ ಎರಡು ರೂಪಗಳನ್ನು ಪಡೆದಿದೆ. ಈ ಎರಡೂ ಸರಿಯಾದ ರೂಪಗಳೆ. ಆದರೆ ಗರಗಸ ಎಂಬುದು ಹೆಚ್ಚು ಪ್ರಚಾರದಲ್ಲಿರುವ ರೂಪ.

**ಕರಾಬು** ಇದು ಅರಬ್ಬಿಯ ಖರಾಬ್ ಎಂಬ ಶಬ್ದದಿಂದ ಬಂದದ್ದು. ಅದಕ್ಕೆ ಕೆಟ್ಟದಾದ, ದೋಷದಿಂದ ಕೂಡಿದ, ಬಂಜರಾದ ಎಂದು ಬೇರೆ ಬೇರೆ ಅರ್ಥಗಳಿವೆ. ಕನ್ನಡದಲ್ಲಿ ಈ ಶಬ್ದವನ್ನು ಕೃಷಿಗೆ ಯೋಗ್ಯವಲ್ಲದ ಭೂಮಿಯ ವಿಚಾರದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ಹಿಂದಿಯಲ್ಲಿಯೂ ಪಾರಸೀ ಭಾಷೆಯಲ್ಲಿಯೂ ಇದರ ಪ್ರಯೋಗವಿದೆ.

**ಕರಾರುವಾಕ್** ಇದು ಪಾರಸೀ ಭಾಷೆಯ ಶಬ್ದ. ಕರಾರ್ ಎಂದರೆ ಒಪ್ಪಂದ. ಒಪ್ಪಿಗೆ, ಅಂಥ ಒಪ್ಪಂದಕ್ಕೆ ಸರಿಯಾದ, ಕಟ್ಟುನಿಟ್ಟಾದ, ನಿಖರವಾದ ಎಂದು ಈ ಶಬ್ದದ ಅರ್ಥ. ಅದೇ ಅರ್ಥದಲ್ಲಿ ಮರಾಠಿಯಲ್ಲೂ ಕನ್ನಡದಲ್ಲೂ ಪ್ರಯೋಗವಾಗುತ್ತ ಇದೆ. ಇದು ನಮಗೆ ಮರಾಠಿಯಿಂದ ಬಂದ ಶಬ್ದ. ಪಾರಸಿಯಲ್ಲಿ ಈ ಶಬ್ದದ ರೂಪ **ಕರಾರುವಾಕಿಈ.**

**ಕರಿಷ್ಮ** ಇದು ಗ್ರೀಕ್ ಭಾಷೆಯ ಶಬ್ದ. ಆ ಭಾಷೆಯಲ್ಲಿ ಇದಕ್ಕೆ ಉಡುಗೊರೆ, ಕಾಣಿಕೆ, ಕೃಪೆ ಎಂದು ಅರ್ಥ. ಇತರ ಭಾಷೆಗಳಿಗೆ ಬಂದ ಮೇಲೆ ಇದರ ಅರ್ಥ ಬೆಳೆದಿದೆ. ಕ್ರೈಸ್ತರ ಚರ್ಚುಗಳ ಪರಿಸರದಲ್ಲಿ ಯಾವನಾದರೂ ಒಬ್ಬನಿಗೆ ದೈವವು (Holy Spirit)ಅನುಗ್ರಹಿಸುವ ಆಧ್ಯಾತ್ಮಿಕವಾದ ಚೈತನ್ಯಕ್ಕೆ ಈ ಶಬ್ದವು ಉಪಯೋಗವಾಗುತ್ತದೆ. ಇತರ ಕಡೆಗಳಲ್ಲಿ ಇದು ಒಬ್ಬ ವ್ಯಕ್ತಿಯಲ್ಲಿರುವ ಅತಿ ಅಸಾಧಾರಣವಾದ ಸತ್ವದಿಂದ ಸಾರ್ವಜನಿಕರ ಆತ್ಮೀಯ ಅಭಿಮಾನವನ್ನು ಸಂಪಾದಿಸಿ ಆತನು ಜನಪ್ರಿಯತೆ ಪಡೆಯುವ ವಿಶೇಷ ಶಕ್ತಿಗೆ

ಅನ್ವಯಿಸುವ ಶಬ್ದ. ಕನ್ನಡದಲ್ಲಿಯೂ ಕೆಲವರು ಈ ಶಬ್ದವನ್ನು ಉಪಯೋಗಿಸುತ್ತಾರೆ. Charisma ಎಂಬುದು ಇಂಗ್ಲಿಷ್ ಕಾಗುಣಿತ. ಅನೇಕರು **ಚಾರಿಸ್ಮ** ಎಂದು ತಪ್ಪಾಗಿ ಉಚ್ಚರಿಸುತ್ತಾರೆ.

**ಕರುಣೆ, ಅನುಕಂಪ, ಕನಿಕರ, ಮರುಕ, ದಯೆ** ಈ ಶಬ್ದಗಳಲ್ಲಿ ಕರುಣೆ, ಅನುಕಂಪ, ದಯೆ - ಈ ಮೂರು ಸಂಸ್ಕೃತದಿಂದ ಬಂದ ಶಬ್ದಗಳು. ಕನಿಕರ, ಮರುಕ ಎಂಬ ಎರಡು ಶಬ್ದಗಳು ಕನ್ನಡ ಶಬ್ದಗಳು. ಒಂದು ಭಾಷೆಯಲ್ಲಿ ಒಂದೇ ಅರ್ಥದ ಎರಡು ಶಬ್ದಗಳಿರುವುದಿಲ್ಲ. ಅವುಗಳು ಸಮಾನಾರ್ಥವುಳ್ಳವುಗಳಂತೆ ಕಂಡರೂ ಏನಾದರೂ ಸ್ವಲ್ಪ ವ್ಯತ್ಯಾಸವಿದ್ದೇ ಇರುತ್ತದೆ. ಇದು ನಿಘಂಟುಕಾರನ ದೃಷ್ಟಿ. ಆದರೆ ಎಷ್ಟೋ ವೇಳೆ ಮೂಲಾರ್ಥಗಳು ಮಾಯವಾಗಿ ಶಬ್ದಗಳನ್ನು ಒಂದೇ ಅರ್ಥದಲ್ಲಿ ಬಳಸುವ ಪರಿಪಾಠ ಬೆಳೆದುಬರುತ್ತದೆ. ಇದು ಸಮಾಜದಲ್ಲಿ ಜನರು ಆಡುಮಾತಿಗೆ ನೀಡುವ ಪ್ರಾಧಾನ್ಯದ ಪರಿಣಾಮ. ಎಲ್ಲ ನಿಘಂಟುಗಳಲ್ಲಿಯೂ ಮೇಲೆ ಹೇಳಿರುವ ಶಬ್ದಗಳನ್ನು ಸಮಾನಾರ್ಥಗಳೆಂದು ಪರಿಗಣಿಸಿ ಹಾಗೆಯೇ ಪರಸ್ಪರವಾಗಿ ಶಬ್ದಗಳಿಗೆ ಅರ್ಥಗಳನ್ನು ನೀಡಿರುತ್ತಾರೆ. ಹಾಗಾದರೆ ವ್ಯತ್ಯಾಸವೇನು ಎಂಬುದನ್ನು ಪರಿಶೀಲಿಸೋಣ. ಕರುಣೆ ಎಂಬುದರ ಮೂಲ ದುಃಖಪಡುವ ಸ್ವಭಾವದಲ್ಲಿದೆ. ಇದು ಸ್ವಾಭಾವಿಕವಾದ ಗುಣ. ಇತರರ ಕಷ್ಟದಲ್ಲಿ ಮಾನಸಿಕವಾಗಿ ಭಾಗಿಯಾಗುವ ಈ ಗುಣ ಮನುಷ್ಯನಿಂದ ಅನೇಕ ಉತ್ತಮವಾದ ಪರೋಪಕಾರಗಳನ್ನು ಮಾಡಿಸಿದೆ. ಸಾಹಿತ್ಯದಲ್ಲಿರುವ ನವರಸಗಳಲ್ಲಿ ಇದೊಂದು ರಸ. ಇದೊಂದೇ ಮುಖ್ಯವಾದ ರಸವೆಂದು ಮಹಾಕವಿ ಭವಭೂತಿ ಹೇಳುತ್ತಾನೆ. '**ಏಕೋ ರಸಃ ಕರುಣ ಏವ**' (ಉತ್ತರ ರಾಮಚರಿತ. ೩-೪೮) ಈ ಕರುಣ ರಸಕ್ಕೆ ಶೋಕ = ದುಃಖಪಡುವುದು - ಇದೇ ಸ್ಥಾಯಿ. ಇದು ಕೇವಲರೂಪದಲ್ಲಿ ಶೋಕವನ್ನು ಅನುಭವಿಸುವ ಹೃದಯಸಂವಾದವೆಂಬ ಕ್ರಿಯೆ. ಲೌಕಿಕವಾಗಿ ನಾವು ತೋರಿಸುವ ಕರುಣೆಗೂ ಇದಕ್ಕೂ ತುಂಬ ವ್ಯತ್ಯಾಸವಿದೆ. ಇನ್ನೊಬ್ಬರ ಶೋಕದಲ್ಲಿ ನಾವು ತೋರಿಸುವ ಮರುಕವೆಂಬುದು ಬೇರೆ. ದಯೆ ಎಂಬುದು ಇನ್ನೊಬ್ಬರ ದುಃಖದಲ್ಲಿ ಭಾಗಿಯಾಗಿ ಅವರಿಗೆ ಸಹಾಯ ಮಾಡುವ ಅಪೇಕ್ಷೆ. '**ಪ್ರಾಣಿಗಳೊಳು ದಯೆಯಿಡು ನೋಯಿಸಿದರೆ ನೋವಾಗುವುದವಕೆ**' ಎಂಬ ಒಂದು ಪದ್ಯಭಾಗವನ್ನು ನನ್ನ ಪ್ರೈಮರಿ ಶಾಲೆಯ ಪಠ್ಯಪುಸ್ತಕದಿಂದ ನಾನಿನ್ನೂ ನೆನಪಿಟ್ಟಿದ್ದೇನೆ. '**ದಯವಿಲ್ಲದ ಧರ್ಮ ಯಾವುದಯ್ಯಾ!**' ಎಂಬ ವಚನವನ್ನು ನೆನಪಿಸಿಕೊಳ್ಳಿ. ಸಹಾಯ ಮಾಡುವ ಅಪೇಕ್ಷೆ ಇಲ್ಲಿ ಮುಖ್ಯ. ಅನುಕಂಪ ಎನ್ನುವುದು ಇನ್ನೊಬ್ಬರು ಪಡುತ್ತಿರುವ ದುಃಖವನ್ನು ನೋಡಿ ಅವರನ್ನು ಅನುಸರಿಸಿ ದುಃಖಪಡುವುದು, ಪರಿತಪಿಸುವುದು, ಇಲ್ಲಿ ಅನುಸರಣೆ ಮುಖ್ಯ. ಹೀಗೆ ಕರುಣೆ, ದಯೆ, ಅನುಕಂಪ. ಈ ಮೂರರಲ್ಲೂ ದುಃಖದ ಬುನಾದಿಯ ಮೇಲೆ ಬೆಳೆದ ಅಲ್ಪ ವ್ಯತ್ಯಾಸದ ಭಾವನೆಗಳು ಗೋಚರವಾಗುತ್ತವೆ. ಕನ್ನಡದ ಕನಿಕರ ಅನುಕಂಪಕ್ಕೆ ಸಮಾನವಾದುದು. ಮರುಕ ಎಂಬ ಶಬ್ದ ಮಱುಗು ಎಂಬ ಧಾತುವಿನಿಂದ ಬಂದ ಭಾವನಾಮ. ಮರುಗು ಎಂದರೆ ಕುದಿ; ನೀರು ಕುದಿಯುವಂತೆ ಕುದಿ ಎಂದು ಅರ್ಥ. ಕವಿರಾಜಮಾರ್ಗದಲ್ಲಿ '**ಮಱುಗುವ ಪಾಲ್ಗೆ ಅಳಿಯ ಪನಿಗಳಂ ಬೆರೆಸಿದ ವೋಲ್**' (೧-೫೮) ಎಂಬ ಮಾತು ಬರುತ್ತದೆ. ಕುದಿಯುವ ಹಾಲಿಗೆ ಮಜ್ಜಿಗೆಯ ಹನಿಗಳನ್ನು ಹಾಕಿದ ಹಾಗೆ, ಕನ್ನಡವನ್ನೂ ಸಂಸ್ಕೃತವನ್ನೂ ಸೇರಿಸಿ ಸಮಾಸ ಮಾಡಬಾರದು ಎಂಬುದು ಆ ಪದ್ಯದ ತಾತ್ಪರ್ಯ. ನೀರು ಮರುಗಿದಂತೆ ಮನಸ್ಸು ಮರುಗುವುದು = ಪರಿತಪಿಸುವುದು, ಮರುಕದ ಆಳವಾದ ಅರ್ಥ. ಹೊಸಗನ್ನಡದಲ್ಲಿ ಮಱುಗು ಎಂಬುದು ಮರುಗು ಎಂದಾಗಿ ಹಳೆಯ ಅರ್ಥವನ್ನು ಕಳೆದುಕೊಂಡಿದೆ. ಹೊಸಗನ್ನಡದಲ್ಲಿ ಪರಿತಪಿಸು

ಎಂದು ಒಂದೇ ಅರ್ಥ.

**ಕರ್ಕಶ** ಈ ಸಂಸ್ಕೃತ ಶಬ್ದಕ್ಕೆ ಕಠಿಣ ಎಂದರ್ಥ. ಆ ಅರ್ಥ ಮುಖ್ಯವಾದರೂ ಈ ಶಬ್ದಕ್ಕೆ ಇನ್ನೂ ಹತ್ತು ಹನ್ನೆರೆಡು ಅರ್ಥಗಳಿವೆ. ೧. ಕತ್ತಿ ೨ ಸಾಹಸಗಾರ ೩. ಕ್ರೂರ ೪. ಗಟ್ಟಿಯಾದ, ಕಠೋರವಾದ ೫. ಜಿಪುಣನಾದ ೬. ಕಷ್ಟಕರವಾದ ೭. ಹೆಚ್ಚಾದ, ಅತಿಯಾದ ೮. ಒರಟು ಇತ್ಯಾದಿ.

**ಕರ್ಣಧಾರತ್ವ** ಎಂದರೆ ನಾಯಿಕನಾಗಿರುವಿಕೆ. ಕರ್ಣ ಶಬ್ದಕ್ಕೆ ಹಡಗಿನ ಚುಕ್ಕಾಣಿ ಎಂಬ ಅರ್ಥವಿದೆ. ಅದನ್ನು ಹಿಡಿದಿರುವವನು ಕರ್ಣಧಾರ. ಅವನಾಗುವ ಸ್ಥಿತಿ. ಅದೇ ಕರ್ಣಧಾರತ್ವ — ಆ ಅಧಿಕಾರ. ಯಾವುದಾದರೂ ಧ್ಯೇಯವನ್ನು ಹೊಂದಿ ಅದರ ಸಾಧನೆಗಾಗಿ ಮುಂದಾಳಾಗಿ ನಿಲ್ಲುವವನಿಗೂ ಈ ಶಬ್ದವನ್ನು ಅನ್ವಯಿಸುತ್ತಾರೆ.

**ಕರ್ಣಪಟುತ್ವ** ಇದು ಶ್ರವಣ ಶಕ್ತಿಯು ಸ್ವಲ್ಪವೂ ಕುಂದಿಲ್ಲದಿರುವ ಸ್ಥಿತಿ. ಕೇಳುವ ಶಕ್ತಿ, ಶ್ರವಣ ಶಕ್ತಿ ಚೆನ್ನಾಗಿರುವುದು. ಇದು ಸಂಸ್ಕೃತ ಶಬ್ದ.

**ಕರ್ಣರಸಾಯನ** ಇದು ಒಂದು ರೂಪಕ. ನಾಲಗೆಗೆ ರಸಾಯನವು ಹೇಗೆ ರುಚಿಯಾಗಿರುತ್ತದೆಯೋ ಹಾಗೆ ಕಿವಿಯಲ್ಲಿ ಕೇಳುವುದಕ್ಕೆ ಆಪ್ಯಾಯಮಾನವಾಗಿರುವುದು ಎಂದರ್ಥ. ಇದು ಕಾವ್ಯವಾಗಬಹುದು. ಸಂಗೀತವಾಗಬಹುದು. ಗಮಕವಾಗಬಹುದು. ಕರ್ಣನ ಚರಿತ್ರೆಯ ಕಥನವಾಗಬಹುದು. ಪ್ರೇಯಸಿ, ಪ್ರೇಮಿ ಇವರ ಪರಸ್ಪರ ಮಧುರ ಸಂಭಾಷಣೆಯಾಗಬಹುದು.

**ಕರ್ನಲ್** ಇದು ಇಂಗ್ಲಿಷ್ ಶಬ್ದ. ಇಂಗ್ಲಿಷಿನಲ್ಲಿ ಎರಡು ಕರ್ನಲ್ ಎಂದು ಉಚ್ಚಾರವಾಗುವ ಶಬ್ದಗಳಿವೆ. ೧. Kernel ೨. Colonel ಇಂಗ್ಲಿಷಿನಲ್ಲಿ ಇವೆರಡಕ್ಕೂ ಉಚ್ಚಾರಣೆಯಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಕನ್ನಡದಲ್ಲಿ ಇವುಗಳನ್ನು ಹೆಚ್ಚು ಕಡಮೆ ಒಂದೇ ರೀತಿಯಲ್ಲಿ ಉಚ್ಚರಿಸುತ್ತೇವೆ. ಮೊದಲನೆಯದಕ್ಕೆ ಹಣ್ಣಿನಲ್ಲಿ ನಾವು ತಿನ್ನುವ ಭಾಗ ಅಥವಾ ಬೀಜದಲ್ಲಿರುವ ಮೊಳಕೆಯಾಗುವ ಭಾಗ ಎಂದರ್ಥ. ಎರಡನೆಯದಕ್ಕೆ ಸೈನ್ಯದಲ್ಲಿ ಆಯ್ಕೆಯಾದ ಅಧಿಕಾರಿ ಎಂದು ಅರ್ಥ. ಇವನು Commissioned officer, Brigadier General ಗಿಂತ ಕಡಮೆಯ ಅಧಿಕಾರವುಳ್ಳವನು.

**ಕರ್ನಾಟಕ** ಇದು ಕನ್ನಡವನ್ನು ಮಾತನಾಡುವ ಜನರು ವಾಸಿಸುವ ಪ್ರದೇಶಕ್ಕೆ ಈಗ ಇರುವ ಹೆಸರು. ಈ ಹೆಸರು ಹೇಗೆ ಬಂತು ಎಂಬ ಬಗ್ಗೆ ಅನೇಕರು ಅನೇಕ ಬಗೆಯಾಗಿ ಸೂಚನೆಗಳನ್ನು ನೀಡಿದ್ದಾರೆ. ಕರ್ನಾಟಕ ಪ್ರದೇಶವನ್ನು ಕುಂತಳ ಎಂದೂ, ಮಹಿಷಕ ಎಂದೂ ಬನವಸೆ ಎಂದೂ ಕರೆದ ದೃಷ್ಟಾಂತಗಳಿವೆ. ಸಂಸ್ಕೃತದ ಭಾಷಾ ಮರ್ಯಾದೆಯಂತೆ ಇದು ಹಿಂದೆ ಕರ್ಣಾಟಕ ಎಂದೇ ಬರೆಯಲ್ಪಡುತ್ತಿತ್ತು. ಇದಕ್ಕೆ ವಿದ್ವಾಂಸರು **ಕರ್ಣೇ ಅಟತಿ ಇತಿ ಕರ್ಣಾಟಕಃ** ಎಂದು ವಿವರಣೆ ನೀಡಿ, ಎಲ್ಲರ ಕಿವಿಗಳಲ್ಲಿಯೂ ಈ ಮಾತು ಆಗಿಂದಾಗ ಬೀಳುತ್ತಿರುವುದರಿಂದ ಇದು ಕರ್ಣಾಟಕ ಎಂದು ಹೇಳಿ ಅನೇಕರು ಅದನ್ನೇ ನಂಬಿದ್ದರು. ಆದರೆ ಭಾಷಾ ಶಾಸ್ತ್ರದ ಆಧಾರದ ಮೇಲೆ ಈಗ ಈ ಶಬ್ದಕ್ಕೆ ಬೇರೆಯ ವ್ಯುತ್ಪತ್ತಿಯನ್ನು ಹೇಳುತ್ತಾರೆ. ಅವುಗಳಲ್ಲಿ ಮುಖ್ಯವಾದುದು ಎರಡು. ಒಂದು ಕರ್ + ನಾಡು ಎಂದರೆ ಕರಿಯ ಬಣ್ಣದ ನೆಲ ಎಂದು ಇದರ ಮೂಲವಿರಬೇಕು ಎಂಬುದು. ಕನ್ನಡ ದೇಶದ ಉತ್ತರದಲ್ಲಿ ಬಹುಭಾಗವು ಹೀಗೆ ಕಪ್ಪು ಮಣ್ಣಿನ ಪ್ರದೇಶವಾಗಿರುವುದರಿಂದ ಈ ಹೆಸರು ಬಂದಿರಬಹುದೆಂಬ ಊಹೆಯಲ್ಲಿ ಸ್ವಲ್ಪ ಸತ್ಯಾಂಶವಿರುವಂತೆ ಕಂಡುಬರುತ್ತದೆ. ಎರಡನೆಯದಾಗಿ ತಮಿಳಿನ ಪ್ರಾಚೀನ ಗ್ರಂಥದಲ್ಲಿ ಈ ಪ್ರದೇಶವನ್ನು ಕರುನಾಟ್ ಎಂದರೆ ಎತ್ತರದ ನಾಡು - ಪ್ರಸ್ಥಭೂಮಿ ಎಂದು ಕರೆಯಲಾಗಿದೆ. ಸಂಸ್ಕೃತ ಮಹಾಭಾರತದ ಕೆಲವು ಪಾಠಗಳಲ್ಲಿ ಈ ಪ್ರದೇಶವನ್ನು ಉನ್ನತಕ

ಎಂದು ಕರೆದಿರುವುದರಿಂದಲೂ ಇದು ಪೂರ್ವಘಟ್ಟದ ಮೇಲಿನ ಪ್ರದೇಶವನ್ನು ನಿರ್ದೇಶಿಸುವುದರಿಂದಲೂ ಇದೇ ಸರಿಯಾದ ವ್ಯುತ್ಪತ್ತಿ ಎನ್ನುವುದನ್ನು ಬಹುಜನ ವಿದ್ವಾಂಸರು ಒಪ್ಪಿದ್ದಾರೆ.

**ಕರ್ಫ್ಯೂ (Curfew)** ಇದು ಆಂಗ್ಲೋ ಫ್ರೆಂಚ್ ಶಬ್ದ. ಇದಕ್ಕೆ ಅರ್ಥ Cover fire=ಬೆಂಕಿಯನ್ನು ಮುಚ್ಚು, ದೀಪವನ್ನು ಆರಿಸು. ಇದು ಯುದ್ಧಕಾಲದ ಒಂದು ಸೂಚನೆ. ಒಂದು ದೊಡ್ಡ ಗಂಟೆಯ ಶಬ್ದ ಬಂದೊಡನೆಯೇ ಆಯಾ ಊರಿನ ಜನರು ಮನೆಯ ಬೆಂಕಿ ಹೊರಕ್ಕೆ ಕಾಣದಂತೆ ಮುಚ್ಚಿರಬೇಕು. ಮನೆ ಬಿಟ್ಟು ಹೊರಗೆ ಬರಬಾರದು. ಇದು ಇಂಗ್ಲಿಷಿನವರಿಗೆ ತುಂಬ ಹಳೆಯ ಶಬ್ದ. ಅಲ್ಲಿಂದ ನಮಗೆ ಬಂದಿದೆ. ನಗರ ಪ್ರದೇಶದಲ್ಲಿ ಗಲಭೆಗಳಾದಾಗ ಈ ಕರ್ಫ್ಯೂ ವಿಧಿಸುತ್ತಾರೆ. ಆಗ ಮನೆಯ ಹೊರಗೆ ಓಡಾಡಬಾರದು ಎಂದರ್ಥ. ಈಗ ಬೆಂಕಿಗೂ ಈ ಶಬ್ದಕ್ಕೂ ಸಂಬಂಧವಿಲ್ಲ. Gray ಎಂಬ ಪ್ರಸಿದ್ಧ ಇಂಗ್ಲಿಷ್ ಕವಿ ತನ್ನ ಒಂದು ಕವನದ ಮೊದಲ ಸಾಲಿನಲ್ಲಿಯೇ ಈ ಶಬ್ದವನ್ನು ಉಪಯೋಗಿಸಿದ್ದಾನೆ. The Curfew tolls the knell of parting day.

**ಕರ್ಮ** ಎಂಬ ಸಂಸ್ಕೃತ ಶಬ್ದಕ್ಕೆ *೧. ಕೆಲಸ, ಉದ್ಯೋಗ ೨. ದೇವರ ಪೂಜೆ ೩. ಪೂರ್ವ ಜನ್ಮದ ಕೃತ್ಯ,* ಎಂಬುವು ಮುಖ್ಯವಾದ ಅರ್ಥಗಳು. ಇದು ನನ್ನ ಕರ್ಮ ಎಂದು ಬೇಸರದಿಂದ ನುಡಿಯುವ ಮಾತಿನಲ್ಲಿ ಇರುವ ಅರ್ಥ ಮೂರನೆಯದು. ನನ್ನ ಪೂರ್ವಜನ್ಮದಲ್ಲಿ ನಾನು ಏನು ಪಾಪ ಮಾಡಿದ್ದೆನೋ ಅದರ ಫಲವನ್ನು ಈಗ ಅನುಭವಿಸುತ್ತಿದ್ದೇನೆ ಎಂದು ಹೇಳುವುದು ಅದರ ಉದ್ದೇಶ.

**ಕಲಗಚ್ಚು** ಎಂಬ ಶಬ್ದದಲ್ಲಿ ಕಲೆ ಎಂದರೆ ಕೂಡಿಸು, ಸೇರಿಸು ಎಂದರ್ಥ. ಕಲಗಚ್ಚಿನಲ್ಲಿ ಅಕ್ಕಚ್ಚಿನ ಜೊತೆಗೆ ಇತರ ಮುಸುರೆಯ ಪಾತ್ರೆಗಳನ್ನು ತೊಳೆದು ಒಂದು ಮಡಕೆಯ ಬಾನಿಯಲ್ಲಿ ದನಗಳಿಗಾಗಿ ಸುರಿದಿರುತ್ತಾರೆ. ಹಾಗೆ ಸೇರಿಸಿರುವುದೇ ಕಲಗಚ್ಚು =ಸೇರಿಸಿರುವ ತೊಳೆದ ನೀರು. ಕಲಬೆರಕೆ ಎಂಬ ಶಬ್ದವನ್ನೂ ಪರಿಶೀಲಿಸಿ.

**ಕಲಲ** ಇದು ಗರ್ಭದಲ್ಲಿ ಶಿಶುವಾಗುವ ದ್ರವ್ಯವು ಪಡೆಯುವ ಮೊದಲ ರೂಪ. ಈ ಬಗ್ಗೆ ಸಂಸ್ಕೃತ ಭಾಗವತದಲ್ಲಿ ಮೂರನೆಯ ಸ್ಕಂಧದ ಮೂವತ್ತೊಂದನೆಯ ಅಧ್ಯಾಯ ಪೂರ್ತಿ ಗರ್ಭೋತ್ಪತ್ತಿಯ ವಿಚಾರವನ್ನು ನಿರೂಪಿಸಿದ್ದಾರೆ. ಅಲ್ಲಿ ಕಲಲ, ಬುದ್ಬುದ, ಕರ್ಕಂಧು ಮುಂತಾದ ಶಬ್ದಗಳ ದೀರ್ಘವಾದ ವಿವರಣೆಯಿದೆ. ಈಗ ಭಾಗವತದ ಕನ್ನಡ ಅನುವಾದ ಸಿದ್ಧವಾಗಿ ಮಾರಾಟವಾಗುತ್ತ ಇದೆ.

**ಕಲಶಗಿತ್ತಿ** ಎಂಬ ಹೆಸರು ಅನ್ವಯಿಸುವುದು ವಿವಾಹ ಸಮಯದಲ್ಲಿ. ಈ ಹುಡುಗಿ ವಿವಾಹವಾದಾಕೆ ಇರಬಹುದು, ಕನ್ಯೆಯೇ ಆಗಿರಬಹುದು. ಹೆಣ್ಣಿನ ಕಡೆಯವರನ್ನು ಸ್ವಾಗತಿಸಲು ಅಥವಾ ಅವರ ಸ್ವಾಗತವನ್ನು ಸ್ವೀಕರಿಸುವಾಗ ವರನ ಕಡೆ ಎಲ್ಲರಿಗೂ ಮುಂದೆ ಕಲಶ ಹಿಡಿದು ಈ ಕಲಶಗಿತ್ತಿ ಪ್ರವೇಶಿಸುತ್ತಾಳೆ. ಮದುವೆಯಾಗುವ ಕನ್ಯೆಗೆ ವರನ ಮನೆಯಲ್ಲಿ ಅತ್ತಿಗೆ ನಾದಿನಿಯರಿಂದ ಸಂಭ್ರಮದ ಸ್ವಾಗತವಿದೆ ಎಂದು ಅದಕ್ಕೆ ಅರ್ಥ.

ಇದೊಂದು ಸಮಯಾಚಾರ. ಹಾಗೆ ಕಲಶಗಿತ್ತಿಯಾಗುವವಳು ಕನ್ಯೆಯೇ ಆಗಿದ್ದರೆ ಅವಳಿಗೂ ಬೇಗ ವಿವಾಹವಾಗುತ್ತದೆ ಎಂಬುದು ನಂಬಿಕೆ. ವರನ ಕಡೆ ಅಷ್ಟೊಂದು ಯುವಕರು ಸೇರಿರುವಾಗ ಕಲಶಗಿತ್ತಿಯ ರೂಪಲಾವಣ್ಯವನ್ನು ಕಂಡು ಆಕೆಯನ್ನು ಆಸೆಪಟ್ಟು ತಂದುಕೊಳ್ಳುವ ಪುಣ್ಯವೂ ಇರುತ್ತದೆಂದು ಜನರು ನಂಬಿದ್ದಾರೆ. ನೋಡಿ: ಕಳಶ.

**ಕಲಿಸು-ಕಲಿಯಿಸು** ಇಲ್ಲಿ ಕಲಿ ಎಂಬ ಶಬ್ದಕ್ಕೆ ಇಸು ಎಂಬ ಪ್ರತ್ಯಯ ಸೇರಿದೆ. ಕಲಿ +ಇಸು. ಇಲ್ಲಿ ಲೋಪಸಂಧಿ ಆದರೆ ಕಲಿಸು. ಯಕಾರಾಗಮ ಸಂಧಿ ಆದರೆ ಕಲಿಯಿಸು. ಅರ್ಥದಲ್ಲಿ

ಯಾವ ವ್ಯತ್ಯಾಸವೂ ಇಲ್ಲ. ಅನೇಕ ಸಲ ಇಕಾರಾಂತ, ಏಕಾರಾಂತ ಧಾತುಗಳಲ್ಲಿ ಹೀಗೆ ಎರಡು ಸಂಧಿಗಳಾಗುವ ಸಂದರ್ಭವಿರುತ್ತದೆ. ಅರ್ಥ—ಹೇಳಿಕೊಡು ಎಂದು.

**ಕಲ್ಲು-ಗಿಲ್ಲು, ಕತೆ-ಗಿತೆ, ಥಳಕು-ಬಳಕು, ಸಮಯ-ಸಂದರ್ಭ** ಭಾಷೆಯಲ್ಲಿ ಕೆಲವು ಶಬ್ದಗಳು ಜೊತೆ ಜೊತೆಯಾಗಿ ಬರುತ್ತವೆ. ಒಂದು ಬಗೆಯ ಶಬ್ದಗಳು - ಕಲ್ಲು-ಗಿಲ್ಲು, ಕತೆ-ಗಿತೆ, ತಿಂಡಿ-ಗಿಂಡಿ, ನೀರು-ಗೀರು, ಪುಸ್ತಕ-ಗಿಸ್ತಕ. ಹೀಗೆ ಜೊತೆಯಾಗಿ ಬರುವ ಶಬ್ದಗಳನ್ನು ಇಂಗ್ಲಿಷಿನಲ್ಲಿ Echo-words ಎಂದು ಕರೆಯುತ್ತಾರೆ. ಈ ಶಬ್ದಗಳಲ್ಲಿರುವ ಎರಡನೆಯ ಭಾಗಕ್ಕೆ ಅರ್ಥವಿಲ್ಲ. ಅದೊಂದು ಭಾಷಾ ವ್ಯವಹಾರದ ಕ್ರಮ. ಅದನ್ನು ಹಾಗೇ ಮುಂದುವರಿಸಬೇಕು. ಯಾಕೆಂದರೆ ಅದರಲ್ಲಿ ಒಂದು ಸೊಗಸಿದೆ. ಇಲ್ಲಿ ಎರಡನೆಯ ಶಬ್ದವು ಮೊದಲನೆಯ ಶಬ್ದವನ್ನು ಅಣಕಿಸುವ ರೀತಿಯಲ್ಲಿ ಜೊತೆಗೂಡುತ್ತದೆ. ಇಂಥ ಶಬ್ದಗಳನ್ನು ಇಂಗ್ಲಿಷಿನಲ್ಲಿ imitative word ಎಂದೂ mimetic word ಎಂದೂ ಕರೆಯುತ್ತಾರೆ. ಈ ಬಗೆಯ ಶಬ್ದಗಳಿಗೆ ಮತ್ತೊಂದು ದೃಷ್ಟಾಂತ ಅಂತೆ-ಕಂತೆ. ಇನ್ನೊಂದು ಬಗೆಯ ಜೋಡಿ ಶಬ್ದಗಳಿವೆ. ಚಿಂತನ-ಮಂಥನ, ಅಂದ-ಚೆಂದ, ಥಳಕು-ಬಳಕು, ಸಮಯ-ಸಂದರ್ಭ ಇಂಥ ಶಬ್ದಗಳ ಜೋಡಿಯಲ್ಲಿ ಒಂದೇ ಅರ್ಥದ ಪೋಷಕವಾದ ಬೇರೆಯ ಛಾಯೆಯಿದೆ. ಚಿಂತಿಸುವುದು ಮತ್ತು ಮಥನ ಮಾಡುವುದು ಅಂದರೆ ಚರ್ಚಿಸುವುದು, ವಿವೇಚನೆ ಮಾಡುವುದು, ಇವೆರಡೂ ಪರಸ್ಪರ ಪೂರಕವಾದ ಕಾರ್ಯಗಳು. ಅಂದ-ಚೆಂದ ಒಂದೇ ಅರ್ಥದ ಪ್ರಾಸಬದ್ಧ ಶಬ್ದಗಳು. ಥಳಕು-ದೇಹಕಾಂತಿಗೂ - ಬಳಕು ಅಂಗಾಂಗ ಚಲನೆಗೂ ಸಂಬಂಧಪಟ್ಟಿವೆ. ಸಮಯ ಸಂದರ್ಭ ಎಂಬ ಜೊತೆಯನ್ನು ನೋಡಿ. ಸಮಯ ಎಂದರೆ ಕಾಲ. ಸಂದರ್ಭ ಎಂದರೆ ಅವಕಾಶ. ಒಟ್ಟುಗೂಡುವಿಕೆ, ಜೋಡಿಸುವಿಕೆ. ಹೀಗೆಯೇ ಕಂತೆ-ಬೊಂತೆ ಎಂಬುದೂ ಜೊತೆಯಾದ ಶಬ್ದಗಳು. ಕಂತೆ ಎಂದರೆ ಸಂನ್ಯಾಸಿಗಳು ಹೊದೆಯುವ ಬಟ್ಟೆ, ಅನೇಕ ಬಟ್ಟೆಗಳನ್ನೂ ಹೊಲಿದು ಮಾಡಿದ ದಪ್ಪ ಹೊದಿಕೆ. ಬೊಂತೆ ಎಂದರೆ ಚಿಂದಿ ಬಟ್ಟೆಗಳನ್ನು ಹೊಲಿದು ಮಾಡಿದ ಹಚ್ಚಡ ಕವುದಿ. ಕಂತೆಗೆ ತಕ್ಕ ಬೊಂತೆ ಎಂಬುದು ಗಾದೆ. ಹೀಗೆ ಜೊತೆಯಾಗಿ ಬರುವ ಶಬ್ದಗಳೂ ಜೋಡಿ ಶಬ್ದಗಳು. ಇಂಗ್ಲಿಷಿನಲ್ಲಿ ಇವುಗಳನ್ನು Doublet ಎನ್ನುತ್ತಾರೆ. ಒಂದೇ ಮೂಲವುಳ್ಳ ಅಥವಾ ಅರ್ಥವುಳ್ಳ ಶಬ್ದಗಳು ಎಂದರ್ಥ.

ಇಂಥ ಜೊತೆ ಶಬ್ದಗಳಲ್ಲಿ ಅರ್ಥ ಸೌಂದರ್ಯವು ಶಬ್ದ ಸೌಂದರ್ಯದ ಜೊತೆಗೂಡುತ್ತದೆ. ಭಾಷೆಯ ಪ್ರಯೋಗ ಈ ಸೊಗಸನ್ನೂ ರಕ್ಷಿಸಬೇಕು.

**ಕಲ್ಮಷ-ಕಶ್ಮಲ** ಸಂಸ್ಕೃತದಲ್ಲಿ 'ಕಲ್ಮಷ-ಕಶ್ಮಲ' ಎಂಬ ಎರಡು ಶಬ್ದಗಳಿವೆ. ಕಲ್ಮಷ ಎನ್ನುವ ಶಬ್ದಕ್ಕೆ ಪಾಪ ಎಂಬುದು ಮುಖ್ಯವಾದ ಅರ್ಥ. ಇದು ಕರ್ಮ ಶಬ್ದಕ್ಕೆ ಸಂಬಂಧಪಟ್ಟದ್ದು ಎಂದೂ ಹೇಳುತ್ತಾರೆ. ಎರಡನೆಯದಾಗಿ ಕೊಳೆ, ಕಸ ಎಂಬ ಅರ್ಥವೂ ಇದೆ. ಕಶ್ಮಲ ಶಬ್ದಕ್ಕೆ ಕೊಳೆ ಎಂಬುದು ಮುಖ್ಯಾರ್ಥ. ಬುದ್ಧಿಭ್ರಂಶ ಎಂಬ ಅರ್ಥವೂ ಇದೆ. ಆ ಬಳಿಕ ಪಾಪ ಎಂಬ ಅರ್ಥವೂ ಬರುತ್ತದೆ. ಈ ಎರಡೂ ರೂಪಗಳನ್ನು ಉಪಯೋಗಿಸಬಹುದು.

**ಕಲ್ಯಾಣ** ಈ ಶಬ್ದಕ್ಕೆ ಮಂಗಳ, ಶುಭ ಎಂದರ್ಥ. ಇದಲ್ಲದೆ ಚಿನ್ನ, ಹಬ್ಬ, ಸ್ವರ್ಗ, ಅದೃಷ್ಟ ಮುಂತಾದ ಅರ್ಥಗಳಿವೆ. ಈ ಶಬ್ದಕ್ಕೆ ಮದುವೆ ಎಂಬ ಅರ್ಥವೇ ಇಲ್ಲ. ಆದರೆ ದೇವಸ್ಥಾನಗಳಲ್ಲಿ ಸೀತಾಕಲ್ಯಾಣ ಮುಂತಾದ ಹೆಸರಿನ ಉತ್ಸವಗಳಲ್ಲಿ, ತಿರುಪತಿಯ ಕಲ್ಯಾಣ ಮಹೋತ್ಸವ ಮುಂತಾದ ವಿಶಿಷ್ಟ ಸೇವೆಗಳಲ್ಲಿ ಮದುವೆ ಎಂಬ ಅರ್ಥ ಪ್ರಚಾರಕ್ಕೆ ಬಂದಿದೆ. ತಮಿಳು ಮಾತನಾಡುವ ಜನರು ಕಲ್ಯಾಣ ಎಂಬುದನ್ನು ಮದುವೆ ಎಂಬ ಅರ್ಥದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. **'ಕಲ್ಯಂ ನೀರುಜತ್ವಂ ಅಣತಿ ಕಲ್ಯಾಣಂ'** ಎಂದು ಈ ಶಬ್ದದ ವರ್ಣನೆ. ರೋಗವಿಲ್ಲದಿರುವಿಕೆ. ಈ ಶಬ್ದ ಹೀಗೆ ವ್ಯಾಪಕವಾದ

ಅರ್ಥವನ್ನು ಪಡೆದು ತಮಿಳಿನಲ್ಲಿ ಮದುವೆ ಎಂಬ ವಿಶೇಷಾರ್ಥವನ್ನು ಹೊಂದಿದೆ. ವೀರಶೈವ ಸಾಹಿತ್ಯದಲ್ಲಿ ಬಹುಶಃ ತಮಿಳಿನ ಪ್ರಭಾವದಿಂದ ಕಲ್ಯಾಣ ಎಂಬ ಶಬ್ದಕ್ಕೆ ಕನ್ನಡದಲ್ಲಿಯೂ ಮದುವೆ ಎಂಬ ಅರ್ಥ ಬಂದಿರುವುದುಂಟು. **ಉಮೆಯ ಕಲ್ಯಾಣದಿಂದ ಮುನ್ನ, ಗಿರಿಸುತೆಯ ಕಲ್ಯಾಣದೇಳ್ಗೆ** ಮುಂತಾದ ಪ್ರಯೋಗಗಳು ದೊರೆಯುತ್ತವೆ. **ಗಿರಿಜಾಕಲ್ಯಾಣ** ಎಂಬ ಕಾವ್ಯದ ಹೆಸರನ್ನು ಪರಿಶೀಲಿಸಿ.

**ಕವಡೆಕಾಸು** ಒಂದಾನೊಂದು ಕಾಲದಲ್ಲಿ ಕವಡೆಯನ್ನು ನಾಣ್ಯವಾಗಿ ಉಪಯೋಗಿಸುತ್ತಿದ್ದರು. ಅದು ಅತ್ಯಂತ ಕಡಿಮೆಯ ಬೆಲೆಯ ನಾಣ್ಯವಾಗಿತ್ತು. ಕಾಸು ಕೂಡ ಹಾಗೆಯೇ ಅತ್ಯಂತ ಕಡಮೆ ಬೆಲೆಯ ನಾಣ್ಯ, ಈಗಲೂ, ಆದುದರಿಂದ ನಿನ್ನ ಮಾತಿಗೆ ಕವಡೆ ಕಾಸಿನ ಬೆಲೆಯಿಲ್ಲ ಎಂದರೆ ಬೆಲೆಯೇ ಇಲ್ಲ ಎಂದರ್ಥ. ಇಲ್ಲಿ ಒಂದೇ ಅರ್ಥದ ಎರಡು ಶಬ್ದಗಳು ಒಟ್ಟಿಗೆ ಪ್ರಯೋಗವಾಗಿವೆ.

**ಕವನ** ಕವಿಯು ರಚಿಸಿರುವ ಕೃತಿ. ಕವಿತೆ ಎಂದರೂ ಇದೇ ಅರ್ಥ. ಕವಿತೆ ಎಂಬುದನ್ನು ಕಾವ್ಯಕ್ಕೂ ಅನ್ವಯಿಸುತ್ತಾರೆ. ಅದರೆ ಸಾಮಾನ್ಯವಾಗಿ ಆಧುನಿಕ ಕನ್ನಡದ ಕವಿಗಳು ಬರೆದ ಕೃತಿಗಳನ್ನು ಕವನ ಎಂದು ಕರೆಯುತ್ತಾರೆ. ಅವು ಬೇರೆಬೇರೆಯ ಪ್ರಕಾರಗಳಲ್ಲಿದ್ದರೆ, ಮಹಾಕಾವ್ಯ, ಕಥನ ಕವನ, ಪ್ರಗಾಥ, ಸಾನೆಟ್ಟು, ತ್ರಿಪದಿ ಇತ್ಯಾದಿಯಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಒಟ್ಟಿನಲ್ಲಿ ಕವಿಯ ಕೃತಿ ಅದು.

**ಕವಯಿತ್ರಿ** Poet ಎಂಬ ಶಬ್ದಕ್ಕೆ ಕಾವ್ಯವನ್ನು ಬರೆಯುವವನು(ಳು) ಎಂದು ಆಗಬಹುದು. ಆದರೆ Poetess ಎಂಬುದು ಸ್ತ್ರೀಗೆ ಮಾತ್ರ ಅನ್ವಯಿಸುತ್ತದೆ. ಹಾಗೆಯೇ ಕವಯಿತ್ರಿ ಶಬ್ದ ಸ್ತ್ರೀಗೆ ಅನ್ವಯಿಸುತ್ತದೆ.

**ಕವಳ** ಇದು ಸಂಸ್ಕೃತ ಶಬ್ದವಾದ ಕವಲದ ತದ್ಭವ. ಇದಕ್ಕೆ ತುತ್ತು, ಬಾಯಿ ತುಂಬುವಷ್ಟು ಆಹಾರ ಎಂದರ್ಥ. ಊಟ, ಹೊಟ್ಟೆಗೆ ಆಹಾರ ಎಂಬ ಅರ್ಥವೂ ಇದೆ. **ಕವಳವನ್ನು ಕತ್ತರಿಸು** ಎಂಬ ಪದಪುಂಜವನ್ನು ನೋಡಿ. ಈ ಶಬ್ದಕ್ಕೆ ತಾಂಬೂಲ ಎಂಬ ವಿಶೇಷವಾದ ಅರ್ಥವೂ ಇದೆ. ಪ್ರಿಯ ಪ್ರೇಯಸಿಯರು ಪರಸ್ಪರ ವಿನಿಮಯ ಮಾಡಿಕೊಳ್ಳುವ ವೇಳೆಯಾದರೆ ವೀಳೆಯದೆಲೆ – ಅಡಕೆಗೂ ಈ ಶಬ್ದವನ್ನು ಉಪಯೋಗಿಸುತ್ತಾರೆ. ಇದು ಈಗಿನ ಬೀಡ. ಕವಳಂಗೊಳ್ ಎಂದರೆ ಆಹಾರವನ್ನು ಸ್ವೀಕರಿಸು ಅಥವಾ ತಾಂಬೂಲವನ್ನು ತೆಗೆದುಕೊ ಎಂದರ್ಥ. ಬೀದಿಯಲ್ಲಿ ಭಿಕ್ಷುಕರು 'ಕವಳಾ ತಾಯೀ' ಕೂಗುತ್ತಾ ಹೋಗುವಾಗ ತಿನ್ನಲು ಏನಾದರೂ ಆಹಾರ ಕೊಡಿ ಎಂದರ್ಥ.

**ಕವಾಡ** ಇದು ಕಬಾಡ ಎಂಬ ಶಬ್ದದ ಪರ್ಯಾಯ ರೂಪ. ಇದು ದೇಶ್ಯ ಶಬ್ದ. ಇದಕ್ಕೆ ಎತ್ತುಗಳ ಮೇಲೆ ಹಾಕುವ ಹೊರೆ ಎಂದರ್ಥ. ಸಂಸ್ಕೃತದ 'ಗವೋಢ' ಎಂಬ ಶಬ್ದದ ತದ್ಭವ ಎಂದೂ ಹೇಳುತ್ತಾರೆ. '**ಘೌಜು ಎತ್ತಿ ಬಂದರು ಕಬಾಡದ ನೆವದೊಳು**' ಎಂದು ಸೌಂದರ ಕಾವ್ಯದಲ್ಲಿ ಪ್ರಯೋಗವಿದೆ. (೭-೩೧).

**ಕವಿ** ಎಂಬ ಶಬ್ದ ಕ್ರಿಯಾಪದವಾಗಿ, ನಾಮಪದವಾಗಿ ಉಪಯೋಗವಾಗುತ್ತದೆ. ಕವಿ ಎಂದರೆ ಮುಚ್ಚು, ತುಂಬು, ಕೊಡು, ಧರಿಸು ಎಂದೆಲ್ಲ ಅರ್ಥವಾಗುತ್ತದೆ. ಕತ್ತಲೆ ಕವಿಯಿತು ಎಂಬ ವಾಕ್ಯವನ್ನೇ ನೋಡಿ. **ಮಣಿಮಯಮಕುಟಮಂ ಕವಿದು** ಎಂದು ಪಂಪಭಾರತದಲ್ಲಿ ಬರುತ್ತದೆ. (೧೨-೧೦೮) ಅರ್ಥ, ಧರಿಸಿ ಎಂದು. ಕುದುರೆಯ ಕಣ್ಣಿಗೆ ಹಾಕುವ ಚರ್ಮದ ತಡೆಗೆ ಕವಿ ಎನ್ನುತ್ತಾರೆ. ಸಂಸ್ಕೃತದಲ್ಲಿ ಕವಿ ಎಂಬ ಶಬ್ದಕ್ಕೆ ಜಾಣ, ಬುದ್ಧಿವಂತ, ಕಾವ್ಯ ಬರೆಯುವವನು, ಬೃಹಸ್ಪತಿ, ನೀರು, ಸೂರ್ಯ, ಕುದುರೆಗೆ ಹಾಕುವ ಕಡಿವಾಣ ಎಂಬ ಅರ್ಥಗಳಿವೆ. ಕನ್ನಡ ಕಾವ್ಯಗಳಲ್ಲೂ ಇವುಗಳಿಗೆ ಚಮತ್ಕಾರಯುತವಾದ ಅನೇಕ ಪ್ರಯೋಗಗಳಿವೆ. ಈ ಒಂದು ಶಬ್ದವನ್ನು ಕುರಿತು ದೊಡ್ಡ ಲೇಖನವನ್ನೇ ಬರೆಯಬಹುದು.

**ಕಸಬಾ** ಒಂದು ತಾಲ್ಲೂಕಿನ ಅಥವಾ ಅದರ ಭಾಗದ ಮುಖ್ಯಸ್ಥಳ, ಪ್ರಧಾನವಾದ ಊರು. ಇದು ಅರಬ್ಬಿ ಭಾಷೆಯ **ಕಶಬ್** ಎಂಬ ಶಬ್ದದಿಂದ ಬಂದಿದೆ. ಮರಾಠೀ ಮತ್ತು ಹಿಂದೀ ಭಾಷೆಗಳಲ್ಲಿ 'ಕಸಬಾ' ಎಂದೇ ಉಪಯೋಗವಾಗುತ್ತಾ ಇದೆ.

**ಕಸಿನ್** Cousin, nephew, niece ಈ ಶಬ್ದಗಳನ್ನು ಯಾರಿಗೆ ಅನ್ವಯಿಸಬೇಕು ? ನೆಂಟತನವನ್ನು ಸೂಚಿಸುವ ಶಬ್ದಗಳು ಭಾಷೆಯಿಂದ ಭಾಷೆಗೆ ಬೇರೆಯಾಗಿವೆ. ಒಂದೇ ಗುಂಪಿಗೆ ಸೇರಿದ ಭಾಷೆಗಳಲ್ಲಿ ಸಹಿತ ತುಂಬ ವ್ಯತ್ಯಾಸಗಳು ಕಾಣಬರುತ್ತವೆ. ದ್ರಾವಿಡ ಭಾಷೆಗಳಾದ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಭಾಷೆಗಳಲ್ಲಿ ನೆಂಟತನವನ್ನು ಸೂಚಿಸುವ ಶಬ್ದಗಳು ಒಂದೇ ಬಗೆಯ ಶಬ್ದಗಳಲ್ಲ. ಇಂಥ ಶಬ್ದಗಳನ್ನು ಕುರಿತ ಅಭ್ಯಾಸವೇ ಒಂದು ಮುಖ್ಯವಾದ ಭಾಷಾಶಾಸ್ತ್ರದ ಅಂಗವಾಗಿದೆ. ಭಾಷಾಶಾಸ್ತ್ರದಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಮೇಲೆ ಹೇಳಿರುವ ಶಬ್ದಗಳನ್ನು ಉಪಯೋಗಿಸುತ್ತಿರುವುದು ಹೇಗೆ ಎಂಬುದನ್ನು ಮಾತ್ರ ಇಲ್ಲಿ ತಿಳಿಸುತ್ತೇನೆ. ತಂದೆ ಅಥವಾ ತಾಯಿಯ ಸೋದರಸೋದರಿಯರ ಮಕ್ಕಳಿಗೆಲ್ಲ Cousin ಎಂಬುದು ಅನ್ವಯವಾಗುತ್ತದೆ. Uncle ಎಂದರೆ ಒಬ್ಬನ ತಂದೆಯ ಅಥವಾ ತಾಯಿಯ ಸಹೋದರರು. Aunt ಎಂದರೆ ಒಬ್ಬನ ತಾಯಿಯ ಅಥವಾ ತಂದೆಯ ಸಹೋದರಿಯರು. ಇವರ ಜೊತೆಗೆ ಗೌರವದಿಂದ ಎಲ್ಲ Uncle ಗಳ ಹೆಂಡತಿಯರೂ Auntಗಳಾಗುತ್ತಾರೆ. ಹಾಗೆಯೇ ಎಲ್ಲ Aunt ಗಳ ಗಂಡಂದಿರೂ Uncle ಗಳಾಗುತ್ತಾರೆ. ಕನ್ನಡದಲ್ಲಿ ಈ ಬಗೆಯ ವಿವರಣೆ ತಪ್ಪಾಗುತ್ತದೆ. Nephew ಎಂದರೆ ಒಬ್ಬರ ಸಹೋದರನ ಅಥವಾ ಸಹೋದರಿಯ ಮಗ. Niece ಎಂದರೆ ಒಬ್ಬನ ಸಹೋದರನ ಅಥವಾ ಸಹೋದರಿಯ ಮಗಳು. Cousinಗಳಲ್ಲಿ first cousin, second cousin ಎಂದೆಲ್ಲಾ ಉಂಟು. ಒಂದು ತಲೆಮಾರು ದೂರವಾದರೆ second cousin. ಕನ್ನಡದಲ್ಲಿ ಈ ಬಗೆಯ ಶಬ್ದಗಳಿಲ್ಲ. ಕನ್ನಡದ ನೆಂಟಿನ ಶಬ್ದಗಳ ಅಭ್ಯಾಸವೇ ಒಂದು ಗ್ರಂಥದಷ್ಟು ವಿಸ್ತಾರವಾದ ವಿವರಗಳನ್ನು ಹೊಂದಿದೆ. ದ್ರಾವಿಡ ಭಾಷೆಯಲ್ಲಿ ನೆಂಟಸ್ತಿಕೆಯ ಶಬ್ದಗಳನ್ನು ಕುರಿತು ಕೆಲವು ಲೇಖನಗಳು ಪ್ರಕಟವಾಗಿವೆ. ಈ ಸಂದರ್ಭದಲ್ಲಿ ನೆಂಟು, ನೆಂಟ, ನೆಂಟತನ, ನೆಂಟಸ್ತನ, ನೆಂಟಸ್ತಿಕೆ ಎಂಬ ಎಲ್ಲ ಶಬ್ದಗಳೂ ಪ್ರಯೋಗ ಶುದ್ಧವಾದವು ಎಂದು ತಿಳಿದಿರಬೇಕು.

**ಕಳವೆಗೆ ಬತ್ತ** ಎಂಬ ಅರ್ಥವಿದೆಯೇ ? ಹೌದು ಕಳವೆ =ಬತ್ತ. ಇದುಸರಿ. ಸಂಸ್ಕೃತದ **ಕಲಮ** ಎಂಬ ಶಬ್ದ ಕನ್ನಡದಲ್ಲಿ ಕಳವೆ ಎಂಬ ರೂಪವನ್ನು ಪಡೆಯುತ್ತದೆ, ತದ್ಭವವಾದಾಗ. ತೊರವೆಯ ರಾಮಾಯಣದಲ್ಲಿ '**ಕಳವೆಯ ಮಯವಾನೆಲನು ಕಬ್ಬಿನ ಹಳುಮಯವಾ ಹೊಲನು** (೬-೬-೧೯) ಎಂಬ ಪ್ರಯೋಗವಿದೆ. ಕಳವೆ, ಶಾಲಿ (ಅದೇ ಅರ್ಥದ ಇನ್ನೊಂದು ಶಬ್ದ) ಇವುಗಳ ವನಗಳನ್ನು ವರ್ಣನೆ ಮಾಡದ ಕವಿಗಳೇ ಇಲ್ಲ, ಕನ್ನಡದಲ್ಲಿ.

**ಕಳಶ ಕಳಸ ಸರಿಯೋ ?** ಕಲಶ ಎಂಬುದು ಸಂಸ್ಕೃತದ ಶಬ್ದ. ಸಂಸ್ಕೃತದಲ್ಲಿ ಲ ಇದ್ದಕಡೆ ಕನ್ನಡದಲ್ಲಿ ಳ ಉಪಯೋಗವಾಗುವುದು ಸಾಮಾನ್ಯ. ಆದ್ದರಿಂದ ಕಳಶ ಎಂಬ ರೂಪವೂ ಸರಿ. ಈ ಶಬ್ದ ಕನ್ನಡಕ್ಕೆ ತದ್ಭವವಾದರೆ ಕಳಸ ಎಂದಾಗುತ್ತದೆ. ಈ ಎಲ್ಲ ರೂಪಗಳೂ ಸರಿ. ದೇವಸ್ಥಾನಗಳ ಗೋಪುರದ ಮೇಲಿರುವ ಕಳಶವನ್ನು ನೋಡಿದ್ದೀರಿ ತಾನೆ ? ವ್ರತಾಚರಣೆಗೆ ಮನೆಗಳಲ್ಲಿ ಲೋಹದ ಚೊಂಬುಗಳನ್ನು ಮಂಗಳದ್ರವ್ಯಗಳಿಂದ ಅಲಂಕರಿಸಿ ಮೇಲೆ ತೆಂಗಿನಕಾಯನ್ನು ಕೂರಿಸಿರುತ್ತಾರೆ. ಅದಕ್ಕೂ ಕಳಸ ಎಂದೇ ಹೆಸರು. ಇದಕ್ಕೆ ೧. ಬಿಂದಿಗೆ, ಕೊಡ ಎಂದರ್ಥ. ಕನ್ನಡದಲ್ಲಿ ಇದು ಕಳಶ, ಕಳಸ ಎಂಬ ರೂಪಗಳನ್ನು ಪಡೆಯುತ್ತದೆ. ಸಾಮಾನ್ಯವಾಗಿ ಬಿಂದಿಗೆ ಎಂಬ ಅರ್ಥವಿದ್ದರೂ ವ್ಯಾಪಕವಾಗಿ ಈ ಶಬ್ದಕ್ಕೆ ಬೇರೆ ಅರ್ಥಗಳೂ ಉಂಟು. *೨. ಪೂಜೆ ಮಾಡುವಾಗ ನೀರು ತುಂಬಿ ಇಡುವ ಚೊಂಬು. ೩. ದೇವಾಲಯಗಳಿಗೆ ಗೋಪುರದ ಮೇಲೆ ಹಾಕುವ ಹಿತ್ತಾಳೆಯ ಅಥವಾ ಕಂಚಿನ ಅಲಂಕಾರದ ಶಿಖರ. ೪. ಆರತಿ*

ಮಾಡುವಾಗ ಆರತಿಯ ತಟ್ಟೆಯಲ್ಲಿಡುವ ಗಿಂಡಿ. ಹೀಗೆ ಅರ್ಥಗಳು ಬೆಳೆಯುತ್ತವೆ.

**ಕಳುಹಿಸು** ಶಬ್ದಕ್ಕೆ ಕಟುಪು ಎಂಬುದು ಮೂಲರೂಪ. ಅದು ಕಳುಹು ಎಂಬ ಆಧುನಿಕ ರೂಪವನ್ನು ಪಡೆಯುತ್ತದೆ. ಕಳುಹು +ಇಸು =ಕಳುಹಿಸು. ಈ ಶಬ್ದಕ್ಕೆ ಕ್ರಮವಾಗಿ ಕಳಿಸು ಎಂಬ ಪರ್ಯಾಯ ರೂಪ ಪ್ರಚಲಿತವಾಗಿದೆ. ಎರಡೂ ಸರಿಯಾದ ರೂಪಗಳೇ. ಉಪಯೋಗಿಸುವುದರಲ್ಲಿ ತಪ್ಪಿಲ್ಲ.

**ಕಳೂಟ** ನೋಡಿ: ಮಸೂಟ.

**ಕಳ್ಳಿ** ಕಳ್ಳ-ಕಳ್ಳಿ ಸುಳ್ಳ-ಸುಳ್ಳಿ, ಸರಿಯಾಗಿದೆ. ಕಳ್ಳಿ ಎಂಬ ಗಿಡವಿದೆ. ಅದೇ ಬೇರೆ ಶಬ್ದ. ಹಾಲುಗಳ್ಳಿ, ಪಾಪಾಸುಗಳ್ಳಿ ಇತ್ಯಾದಿ. ಈ ಎರಡು ಕಳ್ಳಿಗಳಿಗೆ ಸಂಬಂಧವಿಲ್ಲ. ಕೆಲವು ಕಡೆಗಳಲ್ಲಿ ಮೊದಲನೆಯ ಶಬ್ದವನ್ನು ಕಳ್ಳೆ ಎಂದೂ ಉಪಯೋಗಿಸುತ್ತಾರೆ.

**ಕಾಂಚನ ಮೃಗ** ಇದು ರಾಮಾಯಣದಲ್ಲಿ ಬರುವ ಚಿನ್ನದ ಜಿಂಕೆ, ಸ್ವರ್ಣ ಮೃಗ, ಹೊಮ್ಮರ್ರೆ, ಇದೇ ಮಾಯಾಮೃಗ. ರಾವಣನ ಅಪೇಕ್ಷೆಯಂತೆ ಮಾರೀಚನೆಂಬ ರಾಕ್ಷಸನು ಮಾಯಾಮೃಗವಾದ ಕಥೆ ಪ್ರಸಿದ್ಧ.

**ಕಾಕತಾಳೀಯ** ಒಂದು ಲೌಕಿಕ ನ್ಯಾಯ. ಉಪಯೋಗದಲ್ಲಿರುವ ನ್ಯಾಯ. ಕಾಗೆ ಹಾರಿಬರುವ ವೇಳೆಗೆ ಸರಿಯಾಗಿ ತಾಳೆಯ ಹಣ್ಣು ಅದರ ಮೇಲೆ ಬಿದ್ದು ಅದನ್ನು ಸಾಯಿಸಿದ ಒಂದು ಕಥೆ ಹಿತೋಪದೇಶದಲ್ಲಿ ಬರುತ್ತದೆ. ಇದಕ್ಕೂ ಅನಿರೀಕ್ಷಿತ ಎಂದೇ ಅರ್ಥ.

**ಕಾಕಾಪುಡಿ** ಎಂದರೇನು ? ಈ ಶಬ್ದ ಹಿಂದೆ 'ಕಾಕಾಹಿಡಿ' ಎಂದು ಉಪಯೋಗವಾಗುತ್ತಿತ್ತು. 'ಕಾಕಾ' ಎಂದರೆ ವಿಶ್ವಾಸ, ಮೆಚ್ಚಿಗೆ, ಆತ್ಮೀಯತೆ ಮುಂತಾದ ಅರ್ಥಗಳನ್ನು ಸಾಂದರ್ಭಿಕವಾಗಿ ಪಡೆಯುತ್ತಿದ್ದ ಶಬ್ದ. ದೂರದವರನ್ನೂ ನಮ್ಮ ಹತ್ತಿರದವರಂತೆ ಮಾಡಿಕೊಳ್ಳಲು ಕಾಕಾ ಶಬ್ದವನ್ನು ಉಪಯೋಗಿಸುವುದು ಒಂದು ಸಾಮಾನ್ಯ ನಡವಳಿಕೆ. ಇದೇ ಕಾಕಾ ಹಿಡಿಯುವುದು. ಒಂದು ವಿಧವಾದ ಹೊಗಳಿಕೆಯಿಂದ ಆತ್ಮೀಯತೆಯನ್ನು ಸಂಪಾದಿಸಿ ತಮ್ಮ ಕೆಲಸವನ್ನು ಸಾಧಿಸುವ ಮಾರ್ಗ ಇದು. ಹೀಗೆ ಮಾಡುವ ವಿದ್ಯೆಯನ್ನು ಮಂಕುಬೂದಿಗೆ ಹೋಲಿಸಿ ಯಾರೋ 'ಕಾಕಾಪುಡಿ' ಎಂಬ ಶಬ್ದವನ್ನು ಟಂಕಿಸಿರುವ ಸಾಧ್ಯತೆ ಇದೆ. ಅದು ಕೇವಲ ಕಲ್ಪನೆಗೆ ಸೇರಿದ ಪ್ರಪಂಚ. ಬೇರೆಯಾಗಿ ಭಾಷಾಶಾಸ್ತ್ರಕ್ಕೆ ಹೊಂದಿಸಿದಂತೆ ಮೂಲವನ್ನು ಶೋಧಿಸಿದವರಿದ್ದರೆ ಅದನ್ನು ತಿಳಿಸಬೇಕು ಅಷ್ಟೇ.

**ಕಾಕು** **'ಸಾಕಿದಾತನು ನಂದಗೋಪನು ಕಾಕ ಬಳಸಲು ಸಲ್ಲದೆ ನಿಮಗೇಕೆ ರಾಯರ ನೀತಿ'** (ಕುಮಾರವ್ಯಾಸ ಉದ್ಯೋಗಪರ್ವ - ೯-೬೫). ಇದು ಸಂಸ್ಕೃತ ಶಬ್ದ, ಕಾಕು. ಈ ಶಬ್ದದ ದ್ವಿತೀಯಾ ವಿಭಕ್ತಿಯ ರೂಪ ಕಾಕನ್ನು. ಅದೇ ಭಾಷೆಯಲ್ಲಿ ಕಾಕ ಎಂಬ ರೂಪದಲ್ಲಿಯೂ ಬಳಕೆಯಲ್ಲಿದೆ. ಕಾಕು ಎಂಬ ಸಂಸ್ಕೃತ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಧ್ವನಿಯ ವ್ಯತ್ಯಾಸ ೨. ವ್ಯಂಗ್ಯ ೩. ಕೀಳಾದುದು, ನೀಚವಾದುದು, ೪. ಕೇಡು, ಹಾಳು, ೫, ಸುಳ್ಳು ಇತ್ಯಾದಿ. **ಕಾಕಬಳಸು** ಎಂಬುದು ಕುಮಾರವ್ಯಾಸನ ನುಡಿಗಟ್ಟು. ಇದನ್ನು ಮುಂದಿನ ಕವಿಗಳು ಅವನಿಂದ ಕಲಿತು ಬಳಸಿದ್ದಾರೆ. ಅದರ ಅರ್ಥ ಕೆಟ್ಟ ಮಾತನ್ನಾಡು, ವ್ಯರ್ಥವಾಗಿ ನುಡಿ, ವ್ಯಂಗ್ಯವಾಗಿ ಮಾತನ್ನಾಡು ಎಂದು ಆಗುತ್ತದೆ. ಕುಮಾರವ್ಯಾಸನಲ್ಲಿ ಈ ಶಬ್ದ ಅನೇಕ ಕಡೆ ಬರುತ್ತದೆ. ದ್ರೋಣಪರ್ವದ ೧೮ನೇ ಅಧ್ಯಾಯದ ೫೬ನೇ ಪದ್ಯವನ್ನು ನೋಡಿ.

**ಕಾಗದ** ಎಂಬ ಕನ್ನಡ ಶಬ್ದ ಪಾರಸಿಯ **ಕಾಗದ್** ಮತ್ತು ಅರಬ್ಬಿಯ **ಕಾಘಝ್** ಎಂಬ ಶಬ್ದಗಳಿಂದ ಬಂದುದು. ಹಿಂದೀ, ಮರಾಠೀ ಭಾಷೆಗಳಲ್ಲಿಯೂ ಕಾಗಜ್ ರೂಪವಿದೆ. ಇದಕ್ಕೆ ಇಂಗ್ಲಿಷಿನ Paper ಎಂಬುದು ಸಮಾನಪದ. ಕನ್ನಡದಲ್ಲಿ ಕೆಲವರು ಕಾಗಜ ಎಂದೂ ಬರೆಯುತ್ತಾರೆ. ಕಾದಗ ಎಂಬ ಗ್ರಾಮ್ಯರೂಪವೂ ಇದೆ.

**ಕಾಗಾರ = ಕಾಯ್‌ಗಾರ- ಕಾಯ್ಗಾರ** ಎಂದು ಇದರ ರೂಪನಿಷ್ಪತ್ತಿಯೆಂದೂ ಕಾಗಾರನು

ಕಾಯುವ ದನಗಳು ಕಾಗಾರದನಗಳೆಂದೂ ಕಾಯದೆ ಬಿಟ್ಟ ದನಗಳು **ಬಿಡದಿ** ದನಗಳೆಂದೂ ಪ್ರಯೋಗದಲ್ಲಿಯೂ ವ್ಯವಸ್ಥೆಯಲ್ಲಿಯೂ ಉತ್ತರ ಕರ್ನಾಟಕದಲ್ಲಿ ಹಿಂದಿನಿಂದಲೂ ಇದೆ ಎಂದು ಕೆಲವರು ತಿಳಿಸಿದ್ದಾರೆ. ಮತ್ತೆ ಕೆಲವರು ಕಾವಲುಗಾರ + ದನ ಎಂಬುದೇ ಕಾಗಾರದನ ಎಂದೂ ಇಡೀ ಊರ ದನಗಳನ್ನು ಕಾಯಲು ಒಪ್ಪಿಸುವ ಪದ್ಧತಿ ಈಗಲೂ ಇದೆಯೆಂದೂ ಇದಕ್ಕೆ ವಿರುದ್ಧವಾಗಿ ಕಾಯದೆ ಬಿಡುವ ದನಗಳನ್ನು **ಹುರುಪಲಿ ದನ ಅಥವಾ ಬಿಡಾಡಿ ದನ** ಎಂದು ಕರೆಯುತ್ತಾರೆಂದೂ ತಿಳಿಸಿದ್ದಾರೆ. ಕಾ +ಕರ=ಕರು ಎಂಬುದು ಅಷ್ಟು ಸಮಂಜಸ ಅಲ್ಲವೆಂದೂ ವಿವರಿಸಿದ್ದಾರೆ. ಕಾ ಎಂಬುದಕ್ಕೆ ಕಾಡು ಎಂದಾಗುತ್ತದೆಯೇ ಹೊರತು ಕಾವಲು ಎಂದಾಗುವುದಿಲ್ಲ ಎಂದು ಅವರ ವಿವರಣೆ. ಕಾಗುದುರೆ ಎಂದರೆ ಕಾಡುಕುದುರೆ ತಾನೆ ಎಂಬ ಪ್ರಶ್ನೆಯೂ ಇದೆ. ಚೆನ್ನಾಗಿ ಪರಿಶೀಲಿಸಿದರೆ ಕಾಯಬೇಕಾದ ದನ ಕಾವಲಿರಬೇಕಾದ ದನ ಎಂಬುದೇ ಕಾಗಾರದನ ಎಂಬ ಶಬ್ದದ ಅರ್ಥವೆಂಬ ಬಗ್ಗೆ ಅನುಮಾನ ಬರುವುದಿಲ್ಲ. ಕನ್ನಡದಲ್ಲಿ ಕಾ ಎಂಬ ಧಾತುವಿಗೆ ಕಾಯ್, ಕಾಯಿ, ಕಾಯು ಎಂಬ ಪರ್ಯಾಯ ರೂಪಗಳಿವೆ. ಈ ಶಬ್ದ ಕ್ರಿ. ಶ. ೭೦೦ರಿಂದ ಕನ್ನಡದಲ್ಲಿ ಪ್ರಯೋಗವಾಗುತ್ತಾ ಇದೆ. ಕೊಪ್ಪದ ಒಂದು ಶಾಸನದಲ್ಲಿ **"ಧರ್ಮಮಾನ್ ಕಾದೋರಾ ಕುಲಂ ಪೆರ್ಬುಗೆ"** ಎಂದಿದೆ. ಪಂಪಭಾರತದಲ್ಲಿ **''ಕಾವೆನ್ ಎನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ (೧೨-೧೯೮)''** ಎಂದು ಕರ್ಣನು ಹೇಳುವ ಮಾತಿದೆ. ಕಾಗಾರದನ ಎಂಬಲ್ಲಿ ಕಾಡು ಎಂಬ ಅರ್ಥವಿಲ್ಲ. ಹುರುಪಲು ಎಂದರೆ ಒಣಗಿ ಕರುಕಾದ ಹೊಲ, ಗದ್ದೆ, ಕೊಯ್ಲಾದ ಮೇಲೆ ಕೂಳೆ ನಿಂತಿರುವ ಜಮೀನು. ಇಂಥ ಜಮೀನಿನಲ್ಲಿ ಮೇಯುವ ದನ ಹುರುಪಲಿದನ ಎಂಬುದು ಸರಿಯಾಗಿ ಕಾಣುತ್ತದೆ. ಹುರುಪಲು ಎಂಬುದು ಮರಾಠಿಯಿಂದ ಬಂದ ಶಬ್ದ. ಕನ್ನಡದಲ್ಲಿ ಕಾವಲ್, ಕಾವಲಿನವ, ಕಾವಲಿಗ, ಕಾವಲುಗಾರ ಎಂಬ ಇಷ್ಟು ಶಬ್ದಗಳು ಇವೆ. ಕಾಯ್ಗಾರ ಎಂಬ ಶಬ್ದಕ್ಕೆ ಪ್ರಯೋಗವಿಲ್ಲ. ಆದುದರಿಂದ ಈ ಶಬ್ದ ಕಾವಲುಗಾರ - ಕಾಗಾರ ಎಂದಾಗಿ **ಕಾಗಾರದನ** ನಿಷ್ಪನ್ನವಾಗಿದೆ.

**ಕಾಗುಣಿತವನ್ನು ಬರೆಯಬೇಕಾದರೆ ಹೇಗೆ?** ಕ್ ಇದು ವ್ಯಂಜನಾಕ್ಷರ. ಇದಕ್ಕೆ ಬೇರೆ ಬೇರೆ ಸ್ವರಗಳು ಸೇರಿದಾಗ ಆ ಅಕ್ಷರದ ಉಚ್ಚಾರಣೆ ಬೇರೆ ಬೇರೆ ಆಗುತ್ತದೆ. ಅಷ್ಟೇ! ಕ್ +ಅ =ಕ, ಕ್ +ಆ =ಕಾ, ಕ್ +ಇ =ಕಿ, ಕ್ +ಈ =ಕೀ, ಹೀಗೆ ಹುಡುಗರಿಗೆಂದು ಶಾಲೆಯಲ್ಲಿ ಬೋರ್ಡಿನ ಮೇಲೆ ಬರೆದು ಜೊತೆಗೆ ಬಾಯಿಯಲ್ಲಿ ಉಚ್ಚರಿಸಿ ತಿಳಿಸಿಕೊಡಬೇಕು.

**ಕಾಟು** ಕಾಟು ಎಂಬುದು ತಪ್ಪನ್ನು ತೋರಿಸಲು ಹಾಕುವ ಗುರುತು X. ಈ ಗುರುತಿಗೆ ಕನ್ನಡದಲ್ಲಿ ಕಾಟು ಹಾಕುವುದು ಎಂದು ಹೇಳುತ್ತಾರೆ. ಇದು ಕಡಿ ಎಂಬ ಕ್ರಿಯಾಪದದಿಂದ ಬಂದಿತೆಂದು ಕೆಲವರು ಹೇಳುತ್ತಾರೆ. ಈಚೀಚೆಗೆ ಕನ್ನಡದಲ್ಲಿ ಇಂಗ್ಲಿಷಿನ Cot = ಮಂಚ ಎಂಬುದೂ ಕಾಟು ಎಂದೇ ಉಪಯೋಗವಾಗುತ್ತಿದೆ. ಈ ಎರಡಕ್ಕೂ ಸಂಬಂಧವಿಲ್ಲ.

**ಕಾಡು** ಎಂಬ ಶಬ್ದ ಕ್ರಿಯಾಪದವಾಗಿ ನಾಮಪದವಾಗಿ ಗುಣವಾಚಕವಾಗಿ ಪ್ರಯೋಗಗೊಳ್ಳುತ್ತದೆ. ಅವನನ್ನು ರೋಗ ಕಾಡುತ್ತಿದೆ, ಎಂದರೆ ಪೀಡಿಸುತ್ತಿದೆ ಎಂದರ್ಥ. ಕಾಡು ನಾಮಪದವಾದರೆ ಅಡವಿ, ಅರಣ್ಯ ಎಂದರ್ಥ. ಮಲೆನಾಡಿನಲ್ಲಿ ಕಾಡು ರುದ್ರರಮ್ಯವಾಗಿರುತ್ತದೆ ಎಂಬ ವಾಕ್ಯದ ಅರ್ಥವನ್ನು ಪರಿಭಾವಿಸಿ. ಕಾಡು ಎಂದರೆ ಅನಾಗರಿಕ ಎಂದೂ ಅರ್ಥವಿದೆ. ಕಾಡು ಮನುಷ್ಯ ಎಂಬ ಶಬ್ದವನ್ನು ನೋಡಿ. ಕಾಡ ಎಂದರೂ ಅದೇ ಅರ್ಥ. ಅನೇಕ ಪ್ರಾಣಿ ಮತ್ತು ಸಸ್ಯಗಳ ಹಿಂದೆ ಕಾಡು ಶಬ್ದ ಸೇರಿರುತ್ತದೆ. ಕಾಡೆಮ್ಮೆ, ಕಾಡುತುಳಸಿ, ಕಾಡರಿಸಿನ ಇತ್ಯಾದಿ. ಬೆಳೆ ಬೆಳೆಯದ ಭೂಮಿಯೂ ಕಾಡು.

**ಕಾಡ್ಗಿಚ್ಚು** ಇದು ತಪ್ಪು ಶಬ್ದ. ಇದು 'ಕಾಳ್ಗಿಚ್ಚು ಎಂದಾಗಬೇಕು. ಕಾಡುಕಿಚ್ಚು ಎಂದು ಸಮಾಸ ಮಾಡದೇ ಉಪಯೋಗಿಸಬಹುದು. ಆದರೆ ಸಮಾಸ ಮಾಡಿದರೆ ಅದು ಕಾಳ್ಗಿಚ್ಚು ಎಂದೇ

ಆಗಬೇಕು. ಕಾಳ್ಕರಡಿ ಅಥವಾ ಕಾಡುಕರಡಿ, ಕಾಳ್ಕೋಣ ಅಥವಾ ಕಾಡುಕೋಣ, ಕಾಳ್ಪಂದಿ ಅಥವಾ ಕಾಡುಹಂದಿ ಹೀಗೆ ಇಂಥ ಶಬ್ದಗಳ ರೂಪಗಳು ಇರುತ್ತವೆ. ಬೇಕಾದರೆ ಕಾಳ್ಬೆಕ್ಕು, ಕಾಳ್ಮರ್ರೆ, ಕಾಳ್ಮಂದಿ ಮುಂತಾದ ಪದಗಳನ್ನು ಪರಿಶೀಲಿಸಿ. 'ಕಾಡ್ಮನ್ಸ' ಮುಂತಾದ ರೂಪಗಳು ಇನ್ನೂ ಗ್ರಾಮ್ಯ ರೂಪಗಳೆಂದೇ ತಿಳಿಯಬೇಕು.

**ಕಾಣಿಕೆ** ಇದು ಹಿರಿಯರಾದ ರಾಜರು, ಸ್ವಾಮಿಗಳು, ವಿದ್ವಾಂಸರು ಮುಂತಾದವರಿಗೆ ಕಿರಿಯರು ಗೌರವದಿಂದ ನೀಡುತ್ತಿದ್ದ ನೆನಪಿನ ವಸ್ತು. ಈಗ ಕೊಡುಗೆ ಮಾಯವಾಗಿ ಕಾಣಿಕೆ ಮಾತ್ರ ಪ್ರಯೋಗದಲ್ಲಿದೆ. ಕೊಡುವ +ಕಾಣಿಕೆ ಎಂಬುದು ಕೊಡುಕಾಣಿಕೆ ಆಗಿದೆ ಅಲ್ಲಲ್ಲಿ.

**ಕಾದಂಬರೀ** ಕದಂಬ ಎಂಬುದು ಒಂದು ಮರ. ಆ ಮರದ ಹೂವುಗಳಿಂದ ತೆಗೆದ ಮದ್ಯಕ್ಕೆ ಕಾದಂಬರ ಎಂದು ಹೆಸರು. ಕದಂಬ ಮರದ ಹೂವುಗಳಲ್ಲಿ ಜೇನು - ಮಕರಂದ ತುಂಬಿರುತ್ತದೆಂದು ನಂಬಿಕೆಯಿದೆ. ಮದಿಸಿದ ಆನೆಯ ತಲೆಯಿಂದ ಸುರಿಯುವ ದಾನ ಜಲಕ್ಕೂ (Rut) ಈ ಹೆಸರಿದೆ. ಕಾದಂಬರೀ ಬೀಜದಿಂದ ಮಾಡಿದ ಮದ್ಯವನ್ನು ಒಂದು ಹುದುಗಿಗೆ ತಂದು ರುಚಿಕಟ್ಟು ಮಾಡುತ್ತಾರಂತೆ. ಈ ಮರಕ್ಕೂ ಕಾದಂಬರೀ ಕಥೆಗೂ ಸಂಬಂಧವಿದ್ದಂತೆ ಕಾಣುವುದಿಲ್ಲ. ಕದಂಬವೆಂದರೆ ಈಚಲು ಮರವೆ, ಬೇರೆ ಅಲ್ಲ. ಕಾದಂಬರ ಶಬ್ದಕ್ಕೆ ಮೊಸರಿನ ಕೆನೆ ಎಂದೂ, ಬೆಲ್ಲ ಎಂದೂ, ಮದ್ಯ ಎಂದೂ ಅರ್ಥಗಳಿವೆ. ಬಾಣಕವಿಯ ಕಾದಂಬರಿಗೆ ಆ ಹೆಸರು ಬಂದಿರುವುದು ಕಥಾನಾಯಿಕೆಯ ದೆಸೆಯಿಂದ. ಅದು ರಮ್ಯವಾದ ಕಥಾನಕವಾದುದರಿಂದ ಕನ್ನಡದ ಆಧುನಿಕ ದೀರ್ಘಕತೆಗಳಿಗೂ ಈ ಹೆಸರು ಬಂದಿದೆ. ಈ ಹೆಸರನ್ನು ಕನ್ನಡದಲ್ಲಿ ಇಂಥ ಕಥೆಗಳಿಗೆಂದು ಉಪಯೋಗಿಸಿದ ಕೀರ್ತಿ **ಲಕ್ಷ್ಮಣ ಭೀಮರಾವ್ ಗದಗಕರನಿಗೆ** ಸೇರಬೇಕು. ಅವನು ತನ್ನ **ಸೂರ್ಯಕಾಂತ** ಎಂಬ ಪುಸ್ತಕವನ್ನು ಕನ್ನಡ ಹೊಸ ಕಾದಂಬರಿ ಎಂದು ಕರೆದಿದ್ದಾನೆ. ಇದು ಬಾಣನ ಕಾದಂಬರಿಯ ಅನುವಾದವೆಂದು ಕೆಲವರು ತಪ್ಪಾಗಿ ತಿಳಿದಿದ್ದರು.

**ಕಾನೀನ** ಮದುವೆಯಾಗದ ಕನ್ಯೆಯಲ್ಲಿ ಜನಿಸಿದವನು. ಈ ಶಬ್ದವನ್ನು ಕರ್ಣನಿಗೆ ಅನ್ವಯಿಸಿದಂತೆ ಬಹುವಾಗಿ ಕವಿಗಳು ಉಪಯೋಗಿಸಿದ್ದಾರೆ. ನೋಡಿ: ಔರಸ.

**ಕಾನೇಷುಮಾರಿ** ಇದರ ಸರಿಯಾದ ರೂಪ ಖಾನೇಶುಮಾರಿ. ಪ್ರತಿ ಊರಿನಲ್ಲಿಯೂ ಪ್ರತಿ ಮನೆಯಲ್ಲಿಯೂ ಇರುವ ಜನ, ದನಕರು ಮೊದಲಾದವುಗಳನ್ನು ಕ್ರಮವಾಗಿ ಲೆಕ್ಕ ಮಾಡುವುದು, ಜನಗಣತಿ ಎಂದರ್ಥ. ಇದು ಪಾರಸೀ ಭಾಷೆಯ ಶಬ್ದ. ಮರಾಠಿ ಮೂಲಕ ಕನ್ನಡಕ್ಕೆ ಬಂದಿದೆ. ಇದಕ್ಕೆ ಖಾನೇಸುಮಾರಿ, ಖಾನೇಷುಮಾರಿ ಖನೇಸುಮಾರಿ ಎಂಬ ಪರ್ಯಾಯ ರೂಪಗಳೂ ಇವೆ. ಕಾನೇಷುಮಾರಿ ಎಂಬ ರೂಪ ಅಪೂರ್ವ.

**ಕಾನ್ವೆಂಟ್** ಕ್ರಿಶ್ಚಿಯನ್ ಸಂನ್ಯಾಸಿನಿಯರ ಮಠಕ್ಕೆ ಈ ಹೆಸರು ಸಲ್ಲುತ್ತದೆ - ಇಂಗ್ಲಿಷಿನಲ್ಲಿ. ಅಂಥ ಮಠದವರು ನಡೆಸುವ ಶಾಲೆಗಳಿಗೆ Convent School ಎನ್ನುತ್ತಾರೆ. ಮಾತಿನ ಪ್ರಯೋಗದಲ್ಲಿ ಸ್ಕೂಲು ಮಾಯವಾಗಿ ಕಾನ್‌ವೆಂಟ್ ಮಾತ್ರ ಉಳಿದಿರುತ್ತದೆ ಅಷ್ಟೆ. ಎಲ್ಲ ಕ್ರೈಸ್ತ ಶಾಲೆಗಳೂ Convent ಶಾಲೆಗಳಲ್ಲ. ಸಂನ್ಯಾಸಿನಿಯರು ಕೆಲಸ ಮಾಡುವ ಶಾಲೆಗೇ ಇದು ವಿಶೇಷವಾಗಿ ಅನ್ವಯಿಸುತ್ತದೆ. ಸುಮ್ಮನೆ 'ಕಾನ್ವೆಂಟಿಗೆ ಸೇರಿಸು' ಎಂದರೆ ಕ್ರೈಸ್ತ ಸಂನ್ಯಾಸಿನಿಯನ್ನಾಗಿ ಮಾಡು ಎಂದರ್ಥ.

**ಕಾಪಿ ಹೊಡೆಯುವುದು, ಭಾಷಣ ಬಿಗಿಯುವುದು ಮುಂತಾದ ಶಬ್ದಗಳಿಗೆ ಅರ್ಥವೇನು ?**

ಹೊಡೆ, ಬಿಗಿ ಎಂಬ ಶಬ್ದಗಳು ಬೇರೆಯಾಗಿಯೇ ಇವೆ ತಾನೆ. ಅವುಗಳಿಗೆ ಬೇರೆ ಬೇರೆ ಅರ್ಥಗಳೂ ಇವೆ. ಹೊಡೆ ಶಬ್ದಕ್ಕೆ ಬಡಿ, ಆಸ್ಫಾಲನ ಮಾಡು, ಚಚ್ಚು ಎಂಬ ಈ ಕ್ರಿಯಾರ್ಥದ ಪ್ರಯೋಗಗಳಿವೆ. ಊಟ ಹೊಡೆ, ತಿಂಡಿ ಹೊಡೆ, ಮಾತು ಹೊಡೆ, ಹರಟೆ

ಹೊಡೆ, ಕಾಪಿ ಹೊಡೆ, ಲಾಟರಿ ಹೊಡೆ, ಬಹುಮಾನ ಹೊಡೆ ಇತ್ಯಾದಿ ಪ್ರಯೋಗಗಳನ್ನು ಕೇಳಿರಬೇಕು. ಇಂಥ ಕಡೆಗಳಲ್ಲಿ ಹೊಡೆ ಎಂಬುದು ಆಯಾ ನಾಮಪದಗಳಿಗೆ ಸೂಕ್ತವಾದ ಅರ್ಥವನ್ನು ಪಡೆಯುತ್ತದೆ. ಬಿಗಿ ಎಂಬುದೂ ಹೀಗೆಯೇ. ಆದರೆ ಅಂಥ ಪ್ರಯೋಗಗಳಲ್ಲಿ ವ್ಯಂಗ್ಯದ ಪ್ರಯೋಗವಿರುತ್ತದೆ. ಏನೋ ತಪ್ಪು ಮಾಡುತ್ತಿದ್ದಾರೆ - ಅಲ್ಲಿ ಏನೋ ಸರಿಯಿಲ್ಲ ಎಂಬ ಅರ್ಥ ಬರುವಂತೆ ವಾಕ್ಯಗಳಲ್ಲಿ ಪ್ರಯೋಗ ಮಾಡುತ್ತಾರೆ. ಕಾಪಿ (copy) ಹೊಡೆಯುವುದು ಎಂದರೆ ಇನ್ನೊಬ್ಬರು ಬರೆದಿರುವುದನ್ನು ಅವರ ಒಪ್ಪಿಗೆಯಿಲ್ಲದೆ ಸ್ವಂತ ಪ್ರಯೋಜನಕ್ಕೆ ಉಪಯೋಗಿಸಿಕೊಳ್ಳುವುದು ಎಂದು ಅರ್ಥ. ಇದು ಪರೀಕ್ಷೆಯಲ್ಲಿ ಮಾಡುವ ಕಾಪಿಯಾಗಬಹುದು. ಪುಸ್ತಕಗಳಲ್ಲಿ ಇನ್ನೊಬ್ಬರು ಬರೆದಿರುವುದನ್ನು ಸ್ವಂತಕ್ಕೆಂದು ಉಪಯೋಗಿಸಿದುದು ಆಗಬಹುದು. ಭಾಷಣ ಬಿಗಿಯುವುದು ಎಂದರೆ ಕೇಳುವವರಿಗೆ ಬೇಕಾಗಲಿ, ಬಿಡಲಿ ಮಾತಿನಲ್ಲಿ ಒಂದು ದರ್ಪವಿರುವಂತೆ ಮಾತನಾಡುವುದು, ಕೇಳುವಂತೆ ಪ್ರಭಾವವನ್ನುಂಟು ಮಾಡುವುದು ಎಂದರ್ಥ. ಇದರಲ್ಲಿ ಮೆಚ್ಚಿಗೆಯ ಅಂಶವಿಲ್ಲ. ಇದನ್ನು ನೆನಪಿಟ್ಟು ಆ ಬಗೆಯ ಕ್ರಿಯಾಸಮಾಸಗಳನ್ನು ಉಪಯೋಗಿಸಬೇಕು. ಇದೂ ಕೂಡ ಎಲ್ಲ ಭಾಷೆಗಳಲ್ಲಿಯೂ ಕಂಡುಬರುವ ವಿಶೇಷ.

**ಕಾಫರ** ಇದು ಪಾರಸೀ ಭಾಷೆಯ ಶಬ್ದ. ಇಸ್ಲಾಂ ಧರ್ಮವನ್ನು ನಂಬದವನಿಗೆ ಈ ಶಬ್ದವನ್ನು ಅನ್ವಯಿಸುತ್ತಾರೆ. ಅದಕ್ಕೆ ನಾಸ್ತಿಕ ಎಂದರ್ಥ.

**ಕಾಮಗಾರಿ** ಕಾಮ ಎನ್ನುವುದು ಕರ್ಮದ ತದ್ಭವ. ಕೆಲಸ ಎಂದರ್ಥ. ಕಾಮಗಾರ = ಕೆಲಸ ಮಾಡುವವನು. ಕಾಂಗಾರೀ = ಕೆಲಸ, ಕಾರ್ಮಿಕರು ಮಾಡುವ ಕೆಲಸ. ಈಗ ಇದು ಹೆಚ್ಚಾಗಿ ಕಟ್ಟಡ ಕಟ್ಟುವ ಮಣ್ಣಿನ ಕೆಲಸ ಮುಂತಾದುವಕ್ಕೆ ಅನ್ವಯವಾಗುತ್ತಿದೆ.

**ಕಾಯಾ ವಾಚಾ ಮನಸಾ** ಎಂಬ ಪದಪುಂಜವು ವ್ಯಾಕರಣಬದ್ಧವಲ್ಲ. ಅದು ಕಾಯೇನ ವಾಚಾ ಮನಸಾ ಎಂದಿರಬೇಕು. ಕಾಯೇನ = ದೇಹದಿಂದ; ವಾಚಾ = ಮಾತಿನಿಂದ; ಮನಸಾ = ಮನಸ್ಸಿನಿಂದ ಎಂದು ಮೊದಲಾಗುವ ವಾಕ್ಯ. ಆದರೂ ಈ ತಪ್ಪು ಪದಪುಂಜವೇ ತುಂಬ ಪ್ರಭಾವಯುತವಾಗಿ ಅನೇಕರ ಮಾತಿನಲ್ಲಿ ಕಂಡುಬರುತ್ತದೆ.

**ಕಾಯಿಲೆ** ಈ ಶಬ್ದ ಅರಬ್ಬಿ ಭಾಷೆಯ ಕಾಹಿಲಿ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಸೋಮಾರಿತನ, ಜಡತ್ವ, ಚಂಚಲತೆ ಎಂಬ ಅರ್ಥಗಳಿವೆ. ಪಾರಸೀ ಭಾಷೆಯಲ್ಲಿ ಕಹಾಲ್ ಎಂಬ ಮತ್ತೊಂದು ಶಬ್ದವಿದೆ. ಇದಕ್ಕೆ ಕಾತರ ಎಂದರ್ಥ. ಈ ಶಬ್ದದ ಪ್ರಭಾವವೂ ಕನ್ನಡದ ಕಾಯಿಲೆಯಲ್ಲಿ ಸೇರಿದೆ. ಎರಡೂ ಸೇರಿ ರೋಗ, ರುಜಿನ ಎಂಬ ಅರ್ಥವಿದೆ. ಕನ್ನಡದಲ್ಲಿ ಕಾಹಿಲೆ ಎಂದೂ ಖಾಯಿಲೆ ಎಂದೂ ಪರ್ಯಾಯ ರೂಪಗಳಿವೆ.

**ಕಾರ್‌ಸೇವೆ - ಕರಸೇವೆ** ಪಂಜಾಬಿನ ಸ್ವರ್ಣಮಂದಿರದಲ್ಲಿ ನಡೆದ ಜನರಾಶಿಯ ಶ್ರಮದಾನದ ಕಾರಣ ಪ್ರಚಾರಕ್ಕೆ ಬಂದ ಕಾರ್‌ಸೇವೆ, ಅಲ್ಲಿ ಹೇಗಾದರೂ ಇರಲಿ. ಕನ್ನಡದಲ್ಲಿ ಕರಸೇವೆ ಅಥವಾ ಕಾರ್ಯಸೇವೆ ಎಂದು ಉಪಯೋಗಕ್ಕೆ ಬರಬೇಕು. ಯಾವುದೋ ಕಾರಣಕ್ಕಾಗಿ ಮಾಡುವ, ಸ್ವಂತ ಕೈಯಲ್ಲಿ ಶ್ರಮಸಹಿತ ಮಾಡುವ ಸೇವೆ, ಅಥವಾ ಯಾವುದೇ ಕಾರ್ಯವನ್ನು ಪೂರೈಸಲು ನೀಡುವ ಸೇವೆ.

**ಕಾರಭಾರ** ಇದು ಪಾರಸೀ ಭಾಷೆಯ ಕಾರೋಬಾರ್ ಎಂಬ ಶಬ್ದದಿಂದ ಬಂದದು. ಅದು ಮರಾಠಿಯಲ್ಲಿ ಕಾರಭಾರ ಎಂದಾಗಿದೆ. ಇದಕ್ಕೆ ಅನೇಕ ಪರ್ಯಾಯ ಶಬ್ದಗಳಿವೆ. ಕಾರಾಬಾರ, ಕಾರಬಾರು, ಕಾರಭಾರು, ಕಾರುಬಾರು, ಕಾರುಭಾರು. ಈ ಶಬ್ದಗಳಿಗೆಲ್ಲ ಒಂದೇ ಅರ್ಥ ಆಡಳಿತ, ಅಧಿಕಾರದ ವ್ಯವಹಾರ. ಈ ಎಲ್ಲ ರೂಪಗಳಿಗೂ ಪಾರಸೀ ಭಾಷೆಯ ರೂಪಕ್ಕೂ ಸಂಸ್ಕೃತದ ಕಾರ್ಯಭಾರ ಎಂಬುದರ ಸಂಬಂಧವಿರುವಂತೆ ಕಾಣಬರುತ್ತದೆ.

**ಕಾರವಾಯಿ** ಇದು ಮರಾಠೀ ಶಬ್ದ. ಅಲ್ಲದೆ ಪಾರಸೀ ಭಾಷೆಯಿಂದ ಬಂದಿದೆ. ಪಾರಸಿ ಭಾಷೆಯಲ್ಲಿ ಕಾರ್ +ವಾಈ ಎಂಬ ರೂಪವಿದೆ. ಇದಕ್ಕೆ ಕುಶಲ ವ್ಯವಸ್ಥೆ, ಚತುರ ವ್ಯವಹಾರ ಎಂದರ್ಥ. 'ಕಾನೂನು ಕಾರವಾಯಿ' ಎಂದರೆ 'ಕಾನೂನನ್ನು ಅನುಸರಿಸಿದ ಕಾರ್ಯ'.

**ಕಾರ್ಕೋಟಕ** ಕರ್ಕೋಟಕ ಎಂದರೆ ಒಂದು ಪ್ರಮುಖವಾದ ಸರ್ಪ. ಕಾರ್ಕೋಟಕ ಎಂದರೆ ಆ ಸರ್ಪಕ್ಕೆ ಸಂಬಂಧಿಸಿದುದು. ಅದರ ವಿಷ. ಸಾಮಾನ್ಯವಾಗಿ ಕಾರ್ಕೋಟಕ ವಿಷ ಎಂದು ಉಪಯೋಗಿಸುತ್ತೇವೆ. ಇದು ಒಂದೇ ಅರ್ಥದ ಎರಡು ಶಬ್ದಗಳ ಜೊತೆ.

**ಕಾರ್ತಿಕ** ಕೃತ್ತಿಕಾ ಎಂಬ ನಕ್ಷತ್ರಗಳ ಹೆಸರಿನಿಂದ ಇದು ಉತ್ಪನ್ನವಾಗಿದೆ. ಶಬ್ದ ಕಾರ್ತಿಕ, ಇದಕ್ಕೆ ಕಾರ್ತಿಕ ಮಾಸ, ಕೃತ್ತಿಕಾ ನಕ್ಷತ್ರಗಳು ಶೋಭಿಸುತ್ತಿರುವ ಹುಣ್ಣಿಮೆಯುಳ್ಳ ಪಕ್ಷ, ತಿಂಗಳು ಎಂದರ್ಥ. ಕಾರ್ತಿಕೀ ಎಂದರೆ ಕಾರ್ತಿಕ ಮಾಸದ ಹುಣ್ಣಿಮೆ. ಕಾರ್ತಿಕೇಯ ಎಂದರೆ ಷಣ್ಮುಖ. ಅವನು ಕೃತ್ತಿಕಾ ನಕ್ಷತ್ರಗಳಿಂದ ಪೋಷಿಸಲ್ಪಟ್ಟವನು. ಕೃತ್ತಿಕಾ ಒಂದು ನಕ್ಷತ್ರವಲ್ಲ. ಅದು ಒಂದು ನಕ್ಷತ್ರ ಪುಂಜ. **ಕಾರ್ತೀಕ** ಎಂಬ ಶಬ್ದ ತಪ್ಪು.

**ಕಾರ್ಯಕಲಾಪ** ಈ ಸಂಸ್ಕೃತ ಶಬ್ದದಲ್ಲಿ ಎರಡು ಶಬ್ದಗಳಿವೆ. ಸಮಾನವಾಗಿ ಕಾರ್ಯ = ಕೆಲಸ, ಕಲಾಪ = ಸಮೂಹ, ಗುಂಪು, ರಾಶಿ. ಯಾವಾಗಲಾದರೂ ಹೆಚ್ಚು ಕೆಲಸಗಳು ನಡೆಯಬೇಕಾದಾಗ ಈ ಶಬ್ದವನ್ನು ಉಪಯೋಗಿಸುತ್ತಾರೆ. ಅಂದು ಅಂಥ ಕಾರ್ಯಗಳ ಪ್ರಾಧಾನ್ಯ ಕೇಳುವವರಿಗೆ ಗೊತ್ತಾಗುತ್ತದೆ.

**'ಕಾರ್ಯವಾಸಿ ಕತ್ತೆ ಕಾಲುಕಟ್ಟು' ಎಂದರೇನು?** ಕತ್ತೆ ಒದೆಯುವ ಸ್ವಭಾವದ ಪ್ರಾಣಿ. ಅದರ ಸ್ವಭಾವವನ್ನು ತಿಳಿದೂ ಅದರಿಂದ ನಿಮ್ಮ ಕೆಲಸವಾಗಬೇಕಾದರೆ ಅದು ನಿಮ್ಮನ್ನು ಒದೆಯದಂತೆ ಎಚ್ಚರಿಕೆ ವಹಿಸಬೇಕು. ಅದರ ಹಿಂಗಾಲನ್ನು ಕಟ್ಟಿದರೆ ಅದು ಒದೆಯಲಾರದೆ ಕುಂಟುತ್ತ ನಿಮ್ಮ ವಸ್ತುಗಳ ಭಾರವನ್ನು ಹೊರುವ ಕೆಲಸ ಮಾಡುತ್ತದೆ. ಇದು ಈ ಗಾದೆಯ ನೇರವಾದ ಅರ್ಥ. ಗಾದೆಗಳಿಗೆ ನೇರವಾದ ಅರ್ಥಕ್ಕಿಂತ ಹೆಚ್ಚಾಗಿ ಅದರ ವ್ಯಾಪಕವಾದ ಆಲಂಕಾರಿಕವಾದ ಅರ್ಥವೇ ಪ್ರಧಾನವಾಗಿರುತ್ತದೆ. ಕತ್ತೆ ದಡ್ಡ ಪ್ರಾಣಿ. ಆದುದರಿಂದಲೇ ಮನುಷ್ಯರೂ ದಡ್ಡರಾಗಿ ವರ್ತಿಸಿದಾಗ ಅವರನ್ನು ಕತ್ತೆ ಎಂದು ವರ್ಣಿಸುವುದು ಸ್ವಾಭಾವಿಕವಾದ ಮಾತು. ನಿಮ್ಮ ಪರವಾಗಿ ಯಾವುದೋ ಕೆಲಸ ಆಗಬೇಕಾಗಿರುತ್ತದೆ. ಆ ಕೆಲಸವನ್ನು ಮಾಡುವ ಅವಕಾಶ ಒಬ್ಬ ದಡ್ಡನ ಕೈಲಿ ಸಿಕ್ಕಿಹಾಕಿಕೊಂಡಿರುತ್ತದೆ. ಅಂಥ ಸಂದರ್ಭದಲ್ಲಿ ನೀವು ಆ ದಡ್ಡನ ಕಾಲಿಗೆ ಬಿದ್ದು, ಪಾದಗಳನ್ನು ಕೈಯಿಂದ ಬಿಗಿಹಿಡಿದು 'ನೀವೇ ಗತಿ' ಎಂದರೆ ಆ ಕತ್ತೆಯಂಥ ದಡ್ಡ ವ್ಯಕ್ತಿಗೆ ನಿಮ್ಮಂಥ ಜಾಣರ ಕಡೆಯಿಂದ ಗೌರವದ ಪೂಜೆ ಸಂದಿತಲ್ಲ ಎಂಬ ತೃಪ್ತಿ ಉಂಟಾಗಿ, ನಿಮ್ಮ ಕೆಲಸವನ್ನು ಮಾಡಿಕೊಡುತ್ತಾನೆ. ಆಗ ಇಬ್ಬರಿಗೂ ತೃಪ್ತಿ. ನಿಮಗೆ ನಿಮ್ಮ ಕೆಲಸ ಆಯಿತು. ದಡ್ಡನೊಬ್ಬನಿಗೆ ತಾನು ಜಾಣ, ಗೌರವಸ್ಥ ಎಂಬ ನಂಬಿಕೆ ಬಂತು. ನೋಡಿ, ಗಾದೆ ಏನು ಮಾಡಬಲ್ಲದು!

**ಕಾಲಕ್ರಮೇಣ** ಕಾಲಕ್ರಮೇಣ ಎನ್ನುವುದು ಕಾಲಕ್ರಮ ಶಬ್ದದ ತೃತೀಯಾ ವಿಭಕ್ತಿಯ ರೂಪ. ಅಂದರೆ ಕಾಲಕ್ರಮದಿಂದ ಎಂದರ್ಥ. ಕಾಲಕ್ರಮ ಎಂದರೆ ಕಾಲವು ಕಳೆದುಹೋಗುವುದು ಎಂದರ್ಥ. ಕೆಲವರು **ಕಾಲಕ್ರಮೇಣವಾಗಿ ಕಾಲಕ್ರಮದಿಂದ** ಎಂಬ ರೂಪಗಳನ್ನು ಉಪಯೋಗಿಸುತ್ತಾರೆ. ಅದು ತಪ್ಪು. ಕಾಲ ಎಂಬ ಶಬ್ದದ ಸಂಬಂಧವಿಲ್ಲದೆಯೇ ಕ್ರಮೇಣ ಎಂಬ ಸಂಸ್ಕೃತ ರೂಪವೇ ಪ್ರಚಾರದಲ್ಲಿದೆ. ಇದಕ್ಕೆ ಕ್ರಮವಾಗಿ ಎಂದರ್ಥ. **ಕ್ರಮೇಣವಾಗಿ** ಎಂಬ ರೂಪ ತಪ್ಪು.

**ಕಾಲಕ್ಕೆ ತಕ್ಕಂತೆ ಕೋಲ ಕಟ್ಟು** ಕೋಲ ಇದು ಕನ್ನಡನಾಡಿನ ಕರಾವಳಿಯ ಪ್ರದೇಶದಲ್ಲಿ ಭೂತಗಳಿಗೆ ಸಲ್ಲಿಸುವ ಒಂದು ಉತ್ಸವ. ಈ ಸಮಯದಲ್ಲಿ ಭೂತದ ವೇಷ ಕಟ್ಟುವವನು

ತಕ್ಕ ರೀತಿಯಲ್ಲಿ ಕುಣಿತ ಅಥವಾ ನರ್ತನ ಮಾಡುತ್ತಾನೆ. ಇದು ಸಾಮಾನ್ಯ ಅರ್ಥ. ಆದರೆ ಜನಸಾಮಾನ್ಯರಲ್ಲಿ ಉಪಯೋಗವಾದಾಗ ಸಮಯಕ್ಕೆ ತಕ್ಕಂತೆ ನಟಿಸು, ಕುಣಿ ಎಂದರ್ಥ.

**ಕಾಲಿ** ಸಂಸ್ಕೃತದಲ್ಲಿ ಕಾಲಿ ಶಬ್ದ ಕನ್ನಡದಲ್ಲಿ ತದ್ಭವವಾಗಿ ಕಾಳಿ ಎಂದಾಗುತ್ತದೆ. ಅದನ್ನು ತಪ್ಪು ಎಂದು ಹೇಳಲಾಗುವುದಿಲ್ಲ. ಲ ಕಾರದ ಬದಲು ಳ ಕಾರ ಸಾಮಾನ್ಯ. ಈ ಶಬ್ದಕ್ಕೆ ೧. ದುರ್ಗೆ, ಪಾರ್ವತಿ, ೨. ಕಪ್ಪು ಬಣ್ಣದ ಹವಳ, ೩. ರಣಮಾರಿ ಎಂಬ ಅರ್ಥಗಳಿವೆ.

**ಕಾಲುಚೀಲ** ಎಂದರೆ Socks.ಕೈಚೀಲ ಎಂದರೆ ಏಕೆ Glovesಅಲ್ಲ ? ನಮ್ಮಲ್ಲಿ Socks ,Gloves ಎರಡೂ ಉಪಯೋಗದಲ್ಲಿ ಇಲ್ಲದ ಕಾಲದಲ್ಲಿ ಈ ಇಂಗ್ಲಿಷ್ ಶಬ್ದಗಳಿಗೆ ಕೆಲವರು ಪತ್ರಕರ್ತರು, ಸಾಹಿತಿಗಳು ಇಂಥ ಶಬ್ದಗಳಿಗೆ ಹೊಸ ಶಬ್ದಗಳನ್ನು ಸೃಷ್ಟಿಸಿದರು. ಅವುಗಳಲ್ಲಿ ಕೆಲವು ಪ್ರಚಾರಕ್ಕೆ ಬಂದು ಉಳಿದಿವೆ. ಮತ್ತೆ ಕೆಲವು ಮರೆತು ಹೋಗಿವೆ. ಕಾಲುಚೀಲ ಹಾಗೆ ಪ್ರಚಾರಕ್ಕೆ ಬಂದಿದೆ. ಕೈಚೀಲ ಎಂಬುದೂ ಉಣ್ಣೆದಾರದಿಂದ ಮಕ್ಕಳಿಗೆ ಉಡುಪನ್ನು ಹೆಣೆಯುವವರಲ್ಲಿ ಪ್ರಚಾರದಲ್ಲಿದೆ. 'ಅವಳು ತನ್ನ ಮಗುವಿಗೆ ಕೈಚೀಲ, ಕಾಲುಚೀಲ, ಕುಲಾವಿಗಳನ್ನು ಹಾಕುತ್ತಿದ್ದಾಳೆ' ಎನ್ನುತ್ತಾರೆ. ಆದರೆ Neck Tie ಎಂಬ ಶಬ್ದಕ್ಕೆ ಸಮಾನವೆಂದು ಸೃಷ್ಟಿಸಿದ **ಕಂಠಕೌಪೀನ** ಎಂಬ ಶಬ್ದವೂ Shoe lace ಎಂಬ ಶಬ್ದಕ್ಕೆಂದು ಸೃಷ್ಟಿಸಿದ **ಮೂಗುದಾರ** ಎಂಬುದೂ ಬದುಕಲಿಲ್ಲ, ಸತ್ತುಹೋದವು.

**ಕಾಲ್ನಡೆ** ಕಾಲ್ನಡೆ ಶಬ್ದಕ್ಕೆ **ಕಾಲಿನ ನಡಗೆ** ಎಂದೂ ದನ ಎಂದೂ ಅರ್ಥಗಳಿವೆ.

**ಕಾವ್ಯನಾಮ** ಕವಿಗಳಾಗಲಿ ಲೇಖಕರಾಗಲಿ ತಮ್ಮ ಬರಹಕ್ಕಾಗಿಯೇ ಬಳಸುವ ಗುಪ್ತ ನಾಮ. ಗುಟ್ಟಾದ ಹೆಸರು. ಇದಕ್ಕೆ ಇಂಗ್ಲಿಷಿನಲ್ಲಿ Literary Pseudonym ಅಥವಾ ಫ್ರೆಂಚ್‌ನಲ್ಲಿ Penname, Nom deplume. ನಿಜವಾದ ವಿಮರ್ಶೆ ಬರಲಿ, ವ್ಯಕ್ತಿ ಪರಿಚಯದಿಂದ ಆಗುವ ಅನುಕೂಲ — ಅನನುಕೂಲ ಎರಡೂ ಇಲ್ಲದೆ ಇರಲಿ ಎಂದು ಲೇಖಕರು ಹೀಗೆ ಮಾಡುತ್ತಾರೆ. ಪ್ರಸಿದ್ಧರಾದ ಮೇಲೆ ಅದೇ ಹೆಸರು ಅಂಟಿಕೊಂಡು ಬಿಡುತ್ತದೆ.

**ಕಾವಿ** ಇದು ದ್ರಾವಿಡ ಭಾಷೆಯ ಶಬ್ದ. ಇದಕ್ಕೆ ಅರ್ಥ ಕಂದು ಬಣ್ಣ, ಮಾಸಲು ಕೆಂಪು. ಕಾಷಾಯ ಇದು ಸಂಸ್ಕೃತ ಶಬ್ದ. ಅದಕ್ಕೂ ಕಾವಿ ಎಂದೇ ಅರ್ಥ. ಇದು ಸನ್ಯಾಸಿಗಳು ಧರಿಸುವ ಬಟ್ಟೆಯ ಬಣ್ಣ. ಹೀಗಾಗಿ ಕಾವಿ ಎಂದರೆ ವೈರಾಗ್ಯದ ಪ್ರತಿನಿಧಿ ಆಗಿದೆ. **ಖಾಕಿ, ಕಾವಿ, ಖಾದಿ** —ಒಟ್ಟಿಗೆ ಜನರು ಈಗ ಉಪಯೋಗಿಸುವುದು ವ್ಯಂಗ್ಯಾರ್ಥದಲ್ಲಿ. ಖಾಕಿ ಧರಿಸುವ ಪೋಲೀಸರು ಶಿಸ್ತಿನ ಸಿಪಾಯಿಗಳಾಗಿ ನ್ಯಾಯ, ಧರ್ಮ, ಶಾಂತಿಗಳನ್ನು ಪಾಲಿಸಬೇಕು. ಖಾದಿ ಧರಿಸುವ ದೇಶಭಕ್ತರು ಸ್ವಾರ್ಥತ್ಯಾಗ ಮಾಡಿ ದೇಶದ ಜನರ ಉದ್ಧಾರಕ್ಕೆ ಸದಾ ದುಡಿಯಬೇಕು. ಕಾವಿ ಧರಿಸಿದ ಸನ್ಯಾಸಿಗಳು ಧರ್ಮಪ್ರಚಾರದಲ್ಲಿ ನಿರತರಾಗಿ ಜನತೆಯ ನೈತಿಕವಾದ ಉನ್ನತಿಯ ಸಾಧನೆಗೆ ದುಡಿಯಬೇಕು. ಆದರೆ ಜನಜೀವನದಲ್ಲಿ ಇದಕ್ಕೆ ವಿರುದ್ಧವಾದ ಸ್ಥಿತಿಗತಿ ಉಂಟಾಗುತ್ತಿದೆಯೇನೋ ಎಂಬ ಹೆದರಿಕೆಯಿಂದ ವ್ಯಂಗ್ಯವಾಗಿ ಈ ಮಾತುಗಳನ್ನು ಉಪಯೋಗಿಸುತ್ತಾರೆ. ನಿಜವಾಗಿ ಈ ಮೂರು ಪವಿತ್ರ ಕ್ಷೇತ್ರಗಳಲ್ಲಿ ಅವುಗಳಿಗೆ ಸಂಬಂಧಪಟ್ಟ ಧ್ಯೇಯಗಳು ಸಾಧಿತವಾದರೆ ನಮ್ಮ ದೇಶದ ಉನ್ನತಿ ಬಹುಬೇಗ ಸಾಧ್ಯವಾಗುತ್ತದೆ ಎಂಬುದು ಹಾಗೆ ಮಾತನಾಡುವವರ ಉದ್ದೇಶ. ಆದರೆ ಈ ಮೂರೂ ಕ್ಷೇತ್ರಗಳಲ್ಲಿರುವ ಮಹನೀಯರು ಆ ತತ್ವಗಳಿಗೆ ವಿರುದ್ಧವಾಗಿ ನಡೆಯುತ್ತಿದ್ದಾರೆ. ಸಮಾಜ ಅವನತಿ ಹೊಂದುತ್ತಾ ಇದೆ ಎಂಬುದು ಈ ಮಾತುಗಳ ಮಥಿತಾರ್ಥ.

**ಕಾವು** ನೋಡಿ: ಬಿಸಿ

**ಕಾಶಪುಷ್ಪ** ಎಂದರೆ ಜೊಂಡುಹುಲ್ಲಿನಲ್ಲಿ ಬಿಡುವ ಹೂವು.

**ಕಿಂಕರ** ಎಂಬುದು ಸಂಸ್ಕೃತದ ಶಬ್ದ. ಸೇವಕ ಎಂದರ್ಥ. ಎಂಥ ಕುತ್ಸಿತವಾದ ಕೆಲಸವನ್ನಾದರೂ

ಮಾಡಲು ಸಿದ್ಧ ಎಂದು ಇದರ ವಿವರಣೆ. **ಕಿಂಚಿತ್ ಕುತ್ಸಿತಂ ವಾ ಕರೋತಿ** ಎಂದು ಸಂಸ್ಕೃತದ ಟೀಕೆ. ಕಿಂಕರಾ ಎಂದರೆ ಹೆಣ್ಣಾಳು. ಇದು ಕನ್ನಡದಲ್ಲಿ ಕಿಂಕರೆ ಆಗುತ್ತದೆ. ಆದರೆ ಇದರ ಪ್ರಯೋಗ ಕಡಿಮೆ. ಕಿಂಕರೀ ಎಂದರೆ ಸೇವಕನ ಹೆಂಡತಿ.

**ಕಿಂಕರ್ತವ್ಯತಾ ಮೂಢ** ಈ ಸಂಸ್ಕೃತ ಶಬ್ದಕ್ಕೆ ಏನು ಮಾಡಬೇಕೆಂಬುದು ತಿಳಿಯದವನು ಎಂದರ್ಥ. ದಿಗ್ಭ್ರಮೆಗೊಂಡವನು, ದಿಕ್ಕುತೋಚದವನು, ಮುಂದಿನ ದಾರಿ ಕಾಣದವನು. ಅಂಥ ಮನಸ್ಸಿನ ಸ್ಥಿತಿಗೆ **ಕಿಂಕರ್ತವ್ಯತಾ ಮೌಢ್ಯ** ಎಂದು ಶಬ್ದವಿದೆ. ಇದು ವಿದ್ವಾಂಸರು ಹೆಚ್ಚಾಗಿ ಉಪಯೋಗಿಸುವ ಶಬ್ದ.

**ಕಿಂಪುರುಷ** ಇವರು ದೇವತೆಗಳಲ್ಲಿ ಒಂದು ಪಂಗಡದವರು, ಕುದುರೆಯ ಮುಖ. ಮನುಷ್ಯ ಶರೀರ - ಈ ಬಗೆಯ ರೂಪವಿರುವುದರಿಂದ ಈ ಹೆಸರು ಬಂದಿದೆ. 'ಇವನೆಂಥ ಪುರುಷ ?' ಎಂದು 'ಕಿಂ ಪುರುಷ', 'ಕಿಂಚಿತ್ ಪುರುಷಃ ಕಿಂಪುರುಷಃ' ಎಂದು ಸಂಸ್ಕೃತದ ವಿವರಣೆ. 'ಕಿಂ ನರ' ಎಂಬ ಶಬ್ದಕ್ಕೂ ಇದೇ ಅರ್ಥ. ಅದೇ ಕನ್ನಡದ ಕಿನ್ನರ.

**ಕಿಕ್ಕಿರಿ** ಕಿಱೆ ಎಂಬ ಕನ್ನಡದ ಧಾತುವಿಗೆ ತುಂಬು, ಗಿಡಿ ಎಂಬ ಅರ್ಥಗಳಿವೆ. ಈ ಶಬ್ದ ದ್ವಿತ್ವವಾದಾಗ ಕಿಱೆಕಿಱೆ =ಕಿಕ್ಕಿಱೆ ಎಂದಾಗುತ್ತದೆ. ಅದಕ್ಕೆ ಹೆಚ್ಚಾಗಿ ದಟ್ಟೈಸು ಎಂದರ್ಥ. ಅದೇ ಹೊಸಕನ್ನಡದಲ್ಲಿ ಕಿಕ್ಕಿರಿ ಎಂದಾಗಿದೆ. ಅರ್ಥವೂ ಅದೇ. ಆ ಸಭೆಯಲ್ಲಿ ಜನರು ಕಿಕ್ಕಿರಿದಿದ್ದರು. ಪೇಟೆಯಲ್ಲಿ ತರಕಾರಿ ಕಿಕ್ಕಿರಿದಿದೆ ಎಂಬ ವಾಕ್ಯಗಳನ್ನು ನೋಡಿ.

**ಕಿಗ್ಗಳನಾಮ ಸಂವತ್ಸರ** ಕಿಗ್ಗುಳ, ಕಿಗ್ಗಳ ಎರಡೂ ಪರ್ಯಾಯ ಶಬ್ದಗಳು. ಈ ಶಬ್ದಕ್ಕೆ ೧. ತಗ್ಗು ಪ್ರದೇಶ, ಕೆಳಮಟ್ಟದ ಸ್ಥಳ ೨. ಹೀನತನ, ತುಚ್ಛ ಸ್ವಭಾವ ಮತ್ತು ಗುಣವಾಚಕವಾಗಿ ೩. ಹೀನತನದ, ನೀಚವಾದ ಎಂಬ ಅರ್ಥಗಳಿವೆ. ಸಂವತ್ಸರಗಳು ೬೦. ಆ ಅರುವತ್ತು ಹೆಸರುಗಳಲ್ಲಿ **ಕಿಗ್ಗಳ** ಇಲ್ಲ. ಆದುದರಿಂದ ಅನಾಮಧೇಯವಾದ ಯಾವುದೋ ಕಾಲ ಓಬಿರಾಯನ ಕಾಲ ಎಂದು ತಿಳಿಸಲು ಈ ಶಬ್ದವನ್ನು ಹೀಗೆ ಉಪಯೋಗಿಸುತ್ತಿದ್ದರು. ಈಗ ಇದು ಮರೆತುಹೋಗಿದೆ. ಈಗಲೂ ಹಳಬರು ಮಾತ್ರ ಅಪೂರ್ವವಾಗಿ ಉಪಯೋಗಿಸುವುದನ್ನು ಕೇಳಬಹುದು.

**ಕಿಚಾಯಿಸು** ಇದು ಮರಾಠೀ ಭಾಷೆಯ ಕಿಚವಣೇ ಎಂಬ ಶಬ್ದದಿಂದ ಬಂದದ್ದು. ಆ ಶಬ್ದಕ್ಕೆ ಕೀಟಲೆ ಮಾಡು, ಚುಡಾಯಿಸು ಎಂದು ಅರ್ಥ. ಪ್ರಾಕೃತದಲ್ಲಿ ಕಿಚ್ಚನಾ ಎಂದಿದೆ.

**ಕಿಡಿಗೇಡಿ** ಎಂಬ ಶಬ್ದದಲ್ಲಿ ಕಿಡಿ +ಕೇಡಿ ಎಂಬ ಎರಡು ಶಬ್ದಗಳಿವೆ. ಕೇಡಿ ಎಂದರೆ ಕೇಡು ಮಾಡುವವನು ಎಂದರ್ಥ. ಕೆಲವು ಸಮಾಸಗಳಲ್ಲಿ ಕೆಟ್ಟು ಹೋಗಿರುವವನು ಎಂದು ಅರ್ಥವಾಗುತ್ತದೆ. ಅದರ ಸಮಾಸದ ವಿಗ್ರಹ ವಾಕ್ಯದಲ್ಲಿ ಸ್ಪಷ್ಟಪಡಿಸಬೇಕು. ಬುದ್ಧಿಗೇಡಿ. ಬುದ್ಧಿಯನ್ನು ಕಳೆದುಕೊಂಡವನು. ಕಿಡಿಗೇಡಿ - ಕೆಂಡವನ್ನು ಹಚ್ಚಿ ಬೆಂಕಿಯಿಟ್ಟು ಕೆಡಕು ಮಾಡುವವನು ಎಂದು ಅರ್ಥ. ಹೀಗೆಯೇ ತಿಳಿಗೇಡಿ, ಹೊಣೆಗೇಡಿ, ಕೊಲೆಗೇಡಿ ಎಂಬಂಥ ಶಬ್ದಗಳಿಗೂ ಅರ್ಥ ಮಾಡಬೇಕು.

**ಕಿತಾಪತಿ** ಎಂಬ ಕನ್ನಡದ ಶಬ್ದಕ್ಕೆ ಮೂಲ ಮರಾಠೀ ಭಾಷೆಯ **ಕಿತಬತೀ**. ಈ ಶಬ್ದವು ಪೇಶ್ವೆಕಾಲದ ಮರಾಠೀ ಶಬ್ದ. ಅರ್ವಾಚೀನ ಮರಾಠೀ ಭಾಷೆಯಲ್ಲಿ ಕಿತಾಬತೀ ಎಂದಿದೆ. ಇದಕ್ಕೆ ಬರಹ, ಒಂದು ದಾಖಲೆ ಎಂದರ್ಥ. ಹಿಶೇಬ್ ಕಿತೇಬ್ ಎಂದರೆ ಜಮಾ ಖರ್ಚು. ಇದು ಶಿವಾಜೀ ಕಾಲದ ಮರಾಠೀ ಶಬ್ದ. ಜಮಾ ಖರ್ಚಿನ ಲೆಕ್ಕಗಳಲ್ಲಿ ಆಗಬಹುದಾದ ಚಮತ್ಕಾರಗಳ ವ್ಯಂಗ್ಯ ಸ್ವರೂಪದ ಶಬ್ದವಾಗಿ ಕನ್ನಡದಲ್ಲಿ ಈ ಶಬ್ದ ಪ್ರಯೋಗಕ್ಕೆ ಬಂದಿರಬಹುದು. ಕನ್ನಡದಲ್ಲಿ ಈ ಶಬ್ದಕ್ಕೆ ಇಲ್ಲದ, ಸಲ್ಲದ ತಕರಾರು ಎಂದು ಅರ್ಥ. ವ್ಯಂಗ್ಯವಾಗಿಯೇ ಇದನ್ನು ಉಪಯೋಗಿಸುತ್ತಾರೆ.

**ಕಿನಾರೆ** ಇದು ಪಾರಸಿಯಲ್ಲಿ ಕಿನಾರ್ ಎಂದಿದೆ. ನದೀ ತೀರ, ಸಮುದ್ರ ತೀರಕ್ಕೆ ಈ ಹೆಸರು.

ಮರಾಠೀ ಹಿಂದಿಯಲ್ಲೂ, ಕಿನಾರಾ ಎಂದಿದೆ. ಕನ್ನಡದಲ್ಲಿ ಕಿನಾರೆ ರೂಪ ಪಡೆದಿದೆ.

**ಕಿನ್ನರಿ** ಕಿನ್ನರ-ಕಿನ್ನರಿಯರು ಕುದುರೆಯ ತಲೆಯನ್ನೂ ಮಾನವನ ದೇಹವನ್ನೂ ಹೊಂದಿರುವ ಪೌರಾಣಿಕ ಪ್ರಾಣಿಗಳು. ಕಿಂ ನರ =ಇವನೆಂತಹ ನರ? ಎಂಬ ಪ್ರಶ್ನೆಯೂ ಆ ಹೆಸರಿನಲ್ಲಿ ಅಡಗಿದೆ. ಹಿಮಾಲಯದ ಉತ್ತರಕ್ಕಿರುವ ಒಂದು ಪ್ರದೇಶಕ್ಕೆ ಕಿನ್ನರ ವರ್ಷ ಎಂಬ ಹೆಸರೇ ಇದೆ. ಅಲ್ಲಿ ಇಂಥ ವ್ಯಕ್ತಿಗಳು ಯಾರೂ ಇಲ್ಲ. ಇಂಥ ರೂಪ ಕೇವಲ ಕಾಲ್ಪನಿಕವಾದುದು. ಇದು ಕಲ್ಪನಾ ವಿಲಾಸ. ಕಿನ್ನರ ಎಂಬುದರ ಸ್ತ್ರೀಲಿಂಗ ರೂಪ ಕಿನ್ನರಿ. ಕಿಂದರಿ ಎಂಬ ಪದಕ್ಕೂ ಇದಕ್ಕೂ ಸಂಬಂಧವಿಲ್ಲ.

**ಕಿಬ್ಬದಿಯ ಕೀಲು ಮುರಿದಂತೆ** ಈ ಸಾಲು ಸರ್ವಜ್ಞನ ತ್ರಿಪದಿಗಳಲ್ಲಿ ಒಂದು ತ್ರಿಪದಿಯ ಕೊನೆಯ ಸಾಲು. ಕಿಬ್ಬದಿ ಎಂಬುದು ಕಿಬ್ಬರಿ ಶಬ್ದದಿಂದ ಬಂದುದು. ಇದಕ್ಕೆ ದೇಹದ ಪಕ್ಕೆ ಎಂದರ್ಥ. ಕಿಬ್ಬದಿಯ ಕೀಲು ಎಂದರೆ ದೇಹದ ಪಕ್ಕೆಯ ಕೆಳಭಾಗದ ಸಂದು ಎಂದರ್ಥ. ಅದು ಮುರಿದರೆ ಹೇಗೆ ಮಿಸುಕಾಡಲಾರರೋ ಹಾಗೆಯೇ ಸಾಲಗಾರರು ಬಂದು ಸಾಲವನ್ನು ಕೇಳುತ್ತಾ ಕುಳಿತರೆ ನಮಗೆ ನಮ್ಮ ನಡುವಿನ ಕೊನೆಯ ಮೂಳೆಯು ಮುರಿದಂತೆ ಆಗಿ ದುರ್ಬಲರಾಗಿ ಸಂಕಟಪಡುತ್ತೇವೆ ಎಂದರ್ಥ.

**ಕಿಮ್ಮತ್ತು** ಇದು ಅರಬ್ಬಿಯ ಕಿಮತ್ ಶಬ್ದದಿಂದ ಬಂದಿದೆ. ಇದಕ್ಕೆ ಬೆಲೆ, ಮೌಲ್ಯ, ಯೋಗ್ಯತೆ, ಅರ್ಹತೆ ಎಂಬ ಅರ್ಥಗಳಿವೆ. ಹಿಂದೀ ಮರಾಠಿಗಳ ಮೂಲಕ ಬಂದ ಈ ಶಬ್ದ ಅದರ ಎಲ್ಲ ಅರ್ಥಗಳಲ್ಲಿ ಕನ್ನಡದಲ್ಲಿ ಪ್ರಯೋಗವಾಗುತ್ತ ಇದೆ. ಶಿಷ್ಟ ಜನರಿಗೆ ಇದು ಅರ್ಥವಾದರೂ ಬರಹದಲ್ಲಿ ಅಷ್ಟು ಹೆಚ್ಚಾಗಿ ಪ್ರಚಾರದಲ್ಲಿಲ್ಲ. ಆಡುಮಾತಿನಲ್ಲಿ ಸರ್ವವ್ಯಾಪಿಯಾಗಿದೆ. ಅವನು ಕಿಮ್ಮತ್ತಿನ ಮನುಷ್ಯ ಎಂದರೆ, ತುಂಬ ಯೋಗ್ಯ ಎನ್ನುವುದಕ್ಕಿಂತ ಹೆಚ್ಚು ಅವಧಾರಣೆ ಇದ್ದಂತೆ ಆಡುಮಾತಿನಲ್ಲಿ ಭಾವನೆ ಬರುತ್ತದೆ.

**ಕಿರಾಣಿ** ಇದು ಹಿಂದಿಯ ಕಿರಾನಾ ಎಂಬ ಶಬ್ದ. ಮರಾಠಿಯಲ್ಲಿ ಕಿರಾಣ ಆಗಿ ಕನ್ನಡದಲ್ಲಿ ಕಿರಾಣಿ ಆಗಿದೆ. ಇದಕ್ಕೆ ಸಂಸ್ಕೃತದ ಕ್ರೀ ಎಂಬುದೇ ಮೂಲವಿರಬಹುದೆಂದು ಕೆಲವರು ಊಹಿಸುತ್ತಾರೆ. ಇದಕ್ಕೆ ಸಕ್ಕರೆ, ಬೆಲ್ಲ, ಮೆಣಸಿನಕಾಯಿ, ಲವಂಗ, ಕೊತ್ತಂಬರಿ, ರಾಗಿ, ಅಕ್ಕಿ, ಗೋಧಿ ಮುಂತಾದ ದಿನಸಿ, ಧಾನ್ಯಕ್ಕೆ ಸಂಬಂಧಿಸಿದ ಸಾಮಾನುಗಳು ಎಂದರ್ಥ. ದಿನಸಿ ಅಂಗಡಿ ಎಂಬ ಶಬ್ದವನ್ನು ನೋಡಿ. ಅಲ್ಲಿ ಸಿಕ್ಕುವ ಪದಾರ್ಥಗಳೆಲ್ಲ ಕಿರಾಣಿ.

**ಕಿರಿಕ್** - ಎನ್ನುವುದು ಕಿರಿಕಿರಿ ಎಂಬುದರ ಸಂಕ್ಷಿಪ್ತರೂಪ. ಇದರ ಪ್ರಯೋಗಕ್ಕೆ ನಮ್ಮ ಮನೆಗೆ ತರಕಾರಿ ತರುವವನಿಗೆ ನಾನು ಋಣಿ. 'ಎಷ್ಟಯ್ಯ ಬಟಾಣಿ' ಎಂದು ನಾನು ಕೇಳಿದೆ. ಅವನು 'ಸ್ವಾಮಿ, ಇದೇ ಬೋಣಿ. ೧೬ ರೂಪಾಯಿ ಕೆ.ಜಿ.ಗೆ ಸ್ವಾಮಿ, ಸುಮ್ಮನೆ ನಿಮಗ್ಯಾಕೆ ಕಿರಿಕ್' ಎಂದ. ಕಿರಿಕ್‌ಗೆ ನನಗೆ ಬೇಕಾಗಿದ್ದ ಮೂಲ ಸಿಕ್ಕಿಹೋಯಿತು. ಇದು ಸಿನಿಮಾದವರು ಉಪಯೋಗಿಸುತ್ತಿರುವ ಶಬ್ದ.

**ಕಿರಿಕಿರಿ** ಇದು ಅಚ್ಚಗನ್ನಡ ಶಬ್ದ. ಮೂಲಸ್ವರೂಪ ಕಿಱಿಕಿಱಿ =ಕಿರಿಕಿರಿ ಎಂಬ ಶಬ್ದ. ಈ ಶಬ್ದಕ್ಕೆ ಕಿರುಕುಳ, ಕಾಟ, ಹಿಂಸೆ, ಪೀಡೆ ಎಂಬ ಅರ್ಥವೂ ಇದೆ. ಕಿರಿಕಿರಿ ಮಾಡುವುದು ಒಂದು ನುಡಿಗಟ್ಟು. ಮಗು ಅತ್ತು ಅತ್ತು ಕಿರಿಕಿರಿ ಮಾಡುತ್ತಿದೆ. ಸಾಲಗಾರನು ಪ್ರತಿದಿನ ಕಿರಿಕಿರಿ ಮಾಡುತ್ತಿದ್ದಾನೆ ಎಂಬ ವಾಕ್ಯಗಳನ್ನು ಗಮನಿಸಿ. ನೋಡಿ: ಕಿಕ್ಕಿರಿ

**ಕಿರುಕುಳ** ಹಿಂದಿನ ಕಾಲದ ಕನ್ನಡ ಶಾಸನಗಳಲ್ಲಿ **ಕಿಱುಕುಳ** ಎಂಬ ಒಂದು ತೆರಿಗೆಯ ಹೆಸರು ಉಲ್ಲೇಖವಾಗಿದೆ. ಸಣ್ಣ ವ್ಯಾಪಾರದಲ್ಲಿ ನಿರತರಾದವರು ಸ್ವಲ್ಪ ಲಾಭಕ್ಕೆ ಮಾರಾಟ ಮಾಡುತ್ತಿದ್ದರು. ಅವರು ತೆರಬೇಕಾಗಿದ್ದ ತೆರಿಗೆ ಇದು. ಈ ಶಬ್ದವನ್ನು ಜಾರಿಗೆ ತಂದರೆ ಮರೆತುಹೋಗಿದ್ದ ಒಂದು ಶಬ್ದಕ್ಕೆ ಜೀವಕೊಟ್ಟಂತಾಗುತ್ತದೆ. ಅದು ಸರಿಯಾಗಿದೆ. ಈ ಶಬ್ದಕ್ಕೆ ಹಿಂಸೆ, ಕಾಟ, ತೊಂದರೆ ಎಂಬರ್ಥಗಳು ಹೊಸಗನ್ನಡದಲ್ಲಿ ವ್ಯಾಪಕವಾಗಿದೆ. ಇದೂ ಕೂಡ

ಕಿಜುಕುಳ ಎಂಬ ತೆರಿಗೆಯನ್ನು ವಸೂಲು ಮಾಡುತ್ತಿದ್ದ ಪದ್ಧತಿಯಿಂದಲೇ ಬೆಳೆದುಬಂದಿದೆ.

**ಕಿರುಪ್ರಬಂಧ** ನೋಡಿ: ಬಸವಣ್ಣನವರು.

**ಕಿರ್ದಿ** ಪಾರಸೀ ಭಾಷೆಯಲ್ಲಿ 'ಕರ್ದ್' ಎಂದರೆ ಕೆಲಸ, ಕಾರ್ಯ, ಉದ್ಯೋಗ ಎಂದರ್ಥ. ಇದು ಜಮಾಖರ್ಚಿನ ಯಾದಿ. ಪ್ರತಿಸಿತ್ಯದ ಲೆಕ್ಕವನ್ನು ಬರೆಯುವ ಪುಸ್ತಕಕ್ಕೆ 'ಕಿರ್ದಿ ಪುಸ್ತಕ' ಎಂದು ಹೆಸರು. ಕನ್ನಡದಲ್ಲಿ ಖಿರ್ದಿ, ಖಿರದಿ ಎಂಬ ರೂಪಗಳೂ ಇವೆ. 'ಖಾತೆಗೆ ಖಿರ್ದಿಗೆ ಜಮಾ ಬಂದಿಲ್ಲ' ಎಂಬುದು **ನವರತ್ನ ರಾಮರಾಯರ 'ಕೆಲವು ನೆನಪುಗಳು'** ಎಂಬ ಪುಸ್ತಕದ ಮಾತು (ಪುಟ ೧೬೪).

**ಕಿಲಾಡಿ** ಕಿಲಾಡಿ ಎಂಬುದು ಹಿಂದೀ ಭಾಷೆಯ ಖಿಲಾಡಿ ಎಂಬುದರಿಂದ ಬಂದುದು. ಇದಕ್ಕೆ ಅರ್ಥ ಆಟವಾಡುವವನು. ಆಟಗಾರ ಎಂದು. ಕನ್ನಡದಲ್ಲಿ ಈ ಕಿಲಾಡಿ ಆ ಅರ್ಥವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ. ಇಲ್ಲಿ ಅದಕ್ಕೆ ತುಂಬ ಬುದ್ಧಿವಂತ, ಚಾಲಾಕುಳ್ಳವನು, ಬೇಗ ಇಕ್ಕಟ್ಟಿನಿಂದ ಜಾರಿಕೊಳ್ಳುವ ಚಮತ್ಕಾರವುಳ್ಳವನು ಎಂಬುದು ಅರ್ಥ. ನಿಜವಾಗಿ ಕಿಲಾಡಿ ಎಂಬುದು ವ್ಯಕ್ತಿಯ ಬಗ್ಗೆ ಗೌರವ ತರುವ ಶಕ್ತಿಯನ್ನು ಈಗ ಹೊಂದಿಲ್ಲ. ಇಂಗ್ಲೀಷಿನ Clever ಗೆ ಸಮಾನವಾಗಿ ವ್ಯಂಗ್ಯವಾಗಿ ಮಾತ್ರ ಉಪಯೋಗವಾಗುತ್ತಿದೆ.

**ಕಿಲ್ಲೇದಾರ** ಇದಕ್ಕೆ ಖಿಲ್ಲೆದಾರ ಎಂಬ ಮಹಾಪ್ರಾಣ ಸಹಿತವಾದ ರೂಪವೂ ಇದೆ. ಇದಕ್ಕೆ ಮೂಲ ಅರಬ್ಬಿಯ ಕಿಲಾ. ಕಿಲಾ ಎಂದರೆ ಕೋಟೆ, ದುರ್ಗ. ಕೋಟೆಯನ್ನು ರಕ್ಷಿಸುವ ಸೈನ್ಯದ ಮುಖ್ಯನಾದ ಅಧಿಕಾರಿ ಕಿಲ್ಲೆದಾರ್, ಕಿಲ್ಲೆದಾರ. ಖಿಲ್ಲೆದಾರ ಎನ್ನುವುದು ಆಡುಮಾತಿನ ಪ್ರಭಾವ. ಈ ಶಬ್ದವು ದುರ್ಗಗಳ ಪ್ರಾಧಾನ್ಯ ತಪ್ಪಿದ ಮೇಲೆ ಪ್ರಮುಖ ಪೊಲೀಸ್ ಠಾಣೆಗಳಿರುವ ಕಡೆ ಪೊಲೀಸ್ ಅಧಿಕಾರಿಗಳಿಗೆ ಅನ್ವಯವಾಗುತ್ತಾ ಇದೆ.

**'ಕಿಷ್ಕಿಂಧಾ ಕಾಂಡ'** ಎಂಬುದು ರಾಮಾಯಣದ ಒಂದು ಭಾಗ. 'ಕಿಷ್ಕಿಂಧಾ' ಎಂಬುದು ವಾಲಿಯು ರಾಜನಾಗಿ ಆಳುತ್ತಿದ್ದಾಗ ಅವನು ವಾಸಿಸುತ್ತಿದ್ದ ಪಟ್ಟಣ. ಆತನ ದೇಶದಲ್ಲಿಯ ಒಂದು ಪರ್ವತಕ್ಕೂ ಆ ಹೆಸರಿತ್ತು. ವಾಲಿ ಸುಗ್ರೀವರ ಕಥೆಯನ್ನು ಹೇಳುವ ನಾಲ್ಕನೆಯ ಕಾಂಡ. ಋಷ್ಯಮೂಕ ಪರ್ವತದಲ್ಲಿದ್ದ ಒಂದು ಗವಿಗೂ ಕಿಷ್ಕಿಂಧಾ ಎಂಬ ಹೆಸರಿತ್ತಂತೆ. ಒಟ್ಟಿನಲ್ಲಿ ಅದೊಂದು ಚಿಕ್ಕ ರಾಜ್ಯ. ಅನೇಕ ಕಪಿಗಳಿದ್ದ ಚಿಕ್ಕ ರಾಜ್ಯ. ಎಲ್ಲರಿಗೂ ವಿಶಾಲವಾದ ಸ್ಥಳವಿಲ್ಲದಿರುವಷ್ಟು ಚಿಕ್ಕ ರಾಜ್ಯ ಎಂಬುದು ಆ ಬಳಿಕ ಬೆಳೆದ ಅರ್ಥ. ಆದುದರಿಂದಲೇ ಕನ್ನಡದಲ್ಲಿ ಕಿಷ್ಕಿಂಧೆ ಎಂಬ ಶಬ್ದಕ್ಕೆ ಇಕ್ಕಟ್ಟಾದ ಸ್ಥಳ ಎಂಬ ಅರ್ಥ ಬೆಳೆದಿದೆ. ಚಿಕ್ಕ ಮನೆಗೆ ಕಿಷ್ಕಿಂಧ ಎನ್ನುತ್ತಾರೆ. ಈ ಶಬ್ದ ಸಂಸ್ಕೃತದ ಕಿಷ್ಕು =ಒಂದು ಮೊಳ, ಎರಡು ಗೇಣು ಎಂಬುದರಿಂದ ಬಂದಿರಬಹುದು.

**ಕೀರ್ತನೆ** ಇದು ಸಂಗೀತಕ್ಕೆಂದು ರಚಿತವಾದ ದೇವರ ಹೊಗಳಿಕೆಯಿಂದ ಕೂಡಿರುವ ಹಾಡು. ಪ್ರಸಿದ್ಧ ವಾಗ್ಗೇಯಕಾರರು ಅನೇಕರು ಇಂಥ ಕೃತಿಗಳನ್ನು ರಚಿಸಿದ್ದಾರೆ. ಇದೇ ದೇವರ ನಾಮ. ಕೀರ್ತನಕಾರರು ಎಂದರೆ ಹಾಡುಗಳನ್ನು ಹೇಳುತ್ತಾ ಸ್ವಾರಸ್ಯವಾಗಿ ಪುರಾಣ ಕಥೆಗಳನ್ನು ಹೇಳಿ ದೈವಭಕ್ತಿಯನ್ನು ಉದ್ದೀಪನಗೊಳಿಸುತ್ತಿದ್ದವರು. ಈಗ ಈ ಬಗೆಯ ಕೀರ್ತನ ಪ್ರಸಂಗಗಳನ್ನು ಹೇಳುವವರೂ ಕೇಳುವವರೂ ಇಲ್ಲವಾಗುತ್ತಿದ್ದಾರೆ.

**ಕೀರ್ತಿಶೇಷ** ಎಂದರೆ ಕೀರ್ತಿಯನ್ನು ಮಾತ್ರ ಬಿಟ್ಟುಹೋಗಿರುವವನು ಎಂದರ್ಥ. ಆತ ಬದುಕಿಲ್ಲ ಎಂದರ್ಥ. ಈ ಅರ್ಥ ತಿಳಿಯದೆ ಇದನ್ನು ಕೀರ್ತಿವಂತ ಎಂಬರ್ಥದಲ್ಲಿ ಅನೇಕರು ಉಪಯೋಗಿಸುತ್ತಾರೆ. ಒಮ್ಮೆ ಒಂದು ದೊಡ್ಡ ಊರಿನ ಪ್ರಮುಖ ಕಾಲೇಜಿನಲ್ಲಿ ಒಂದು ಒಳ್ಳೆಯ ಸಮಾರಂಭಕ್ಕೆ ನನ್ನನ್ನು ಆಹ್ವಾನಿಸಿದ್ದರು. ನನ್ನನ್ನು ಸಭೆಗೆ ಪರಿಚಯ ಮಾಡಿಕೊಟ್ಟ ನನ್ನ ಸ್ನೇಹಿತರು ಹೀಗೆ ಹೇಳಿದರು — "ಇವರು ಕನ್ನಡ ನಾಡಿನಲ್ಲಿ ಬಹುದಿನಗಳಿಂದ ಕೀರ್ತಿಶೇಷರಾಗಿದ್ದಾರೆ." ಸಭೆ ಚಪ್ಪಾಳೆ ತಟ್ಟಿ ಸಂತೋಷ ವ್ಯಕ್ತಪಡಿಸಿತು.

**ಕೀಸುಳಿ** ಇದು ಕನ್ನಡದ ಶಬ್ದ. ಕೀಸುವ + ಉಳಿ = ಕೀಸುಳಿ. ಮರವನ್ನು ಹತ್ತರಿ ಹಿಡಿಯುವ ಆಯುಧ. ಹತ್ತರಿ, ತೋಪಡ, ಉಜ್ಜುಗೊರಡು ಎಂಬ ಎಲ್ಲ ಶಬ್ದಗಳೂ ಬಡಗಿ ಉಪಯೋಗಿಸುವ ಒಂದೇ ಉಪಕರಣವನ್ನು - ತೋಪಡಾವನ್ನು ನಿರ್ದೇಶಿಸುತ್ತವೆ. ಕೀಸು-ಹೆರೆ, ಕೃಶವಾಗಿಸು ಎಂಬ ಶಬ್ದಕ್ಕೆ ಪ್ರಾಚೀನವಾದ ಪ್ರಯೋಗಗಳು ದೊರಕಿದರೂ **ಕೀಸುಳಿ** ಇತ್ತೀಚಿನ ಪ್ರಯೋಗಗಳಲ್ಲಿ ಮಾತ್ರ ಕಾಣಸಿಗುತ್ತದೆ.

**ಕುಂಕುಮವನ್ನು ಗಂಧ ಎಂದು ಕರೆಯಬಹುದೇ?** ಕುಂಕುಮ ಎಂಬ ಶಬ್ದಕ್ಕೆ ಮುಖ್ಯವಾದ ಅರ್ಥ ಕಾಶ್ಮೀರದಲ್ಲಿ ಬೆಳೆಯುವ ಕೇಸರಿ. ಇದೇ ಶ್ರೇಷ್ಠವಾದದ್ದು. ಬಾಹ್ಲೀಕದಲ್ಲಿಯೂ ಪಾರಸೀಕ ದೇಶದಲ್ಲಿಯೂ ಬೆಳೆಯುವ ಕೇಸರಿಯು ಮಧ್ಯಮ ವರ್ಗದ್ದು ಎಂದು ಭಾವ ಪ್ರಕಾಶವೆಂಬ ಗ್ರಂಥದಲ್ಲಿ ಹೇಳಿದೆ. ಅಲ್ಲದೆ ಎಂಟು ಬಗೆಯ ಗಂಧಗಳು ಎಂಬ ಪಟ್ಟಿಗಳಲ್ಲಿ ಕುಂಕುಮವನ್ನು ಒಂದು ಗಂಧ ಎಂದು ಕರೆದಿದೆ.

**ಕುಂಟಣಿ** ಈ ಶಬ್ದ ಸಂಸ್ಕೃತದ ಕುಟ್ಟನೀ ಎಂಬುದರ ತದ್ಭವ ರೂಪ. ಕನ್ನಡದಲ್ಲಿ ಈ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ಕುಂಟಣಿ, ಕುಂಟಲಿ, ಕುಂಟಲಿಗ, ಕುಂಟಲಗಿತ್ತಿ, ಕುಂಟಣಗಿತ್ತಿ ಇತ್ಯಾದಿ. ಕುಟ್ಟನೀ ಎಂಬ ಶಬ್ದಕ್ಕೆ ಗಂಡು ಹೆಣ್ಣುಗಳ ರಹಸ್ಯ ಸಂಭೋಗಕ್ಕೆ ಏರ್ಪಾಟು ಮಾಡುವ ಸ್ತ್ರೀ ಅಥವಾ ಪುರುಷ ಎಂದರ್ಥ. ಕುಟ್ಟನೀ ಅಥವಾ ಕುಟ್ಟಿನೀ ಎಂಬ ಸಂಸ್ಕೃತ ಶಬ್ದಕ್ಕೆ ಅಮರದ ಟೀಕೆ ಸ್ವಾರಸ್ಯವಾಗಿದೆ. ವಿಟಸ್ಯ **ಕುಟುಂಬಂ ಅರ್ಥಹರಣೇನ ಕುಟ್ಟಯತಿ** = ಧನವನ್ನು ಅಪಹರಿಸುವುದರಿಂದ ವಿಟನ ಕುಟುಂಬವನ್ನು ನಾಶ ಮಾಡುವವಳು ಎಂದು ಆ ಶಬ್ದಕ್ಕೆ ಅರ್ಥ.

**ಕುಂದಗನ್ನಡ** ಕುಂದಾಪುರದ ಕಡೆ ಮಾತನಾಡುವ ಕನ್ನಡಕ್ಕೆ ಕುಂದಗನ್ನಡ ಎಂದು ಹೆಸರಿದೆ. ದಕ್ಷಿಣ ಕನ್ನಡದ ಕೋಟಾ, ಶಿವಳ್ಳಿ, ಕುಂದಾಪುರ ಈ ಪ್ರಮುಖ ಸ್ಥಳಗಳಲ್ಲಿ ಮಾತನಾಡುವ ರೀತಿಯಲ್ಲಿ ಶಬ್ದ ಪ್ರಯೋಗದಲ್ಲಿ ಸ್ವಲ್ಪ ವ್ಯತ್ಯಾಸಗಳಿವೆ. ಇದನ್ನು ಭಾಷಾಶಾಸ್ತ್ರಜ್ಞರು ಈಚೀಚೆಗೆ ಗುರುತಿಸಿ ಗ್ರಂಥಗಳಲ್ಲಿ ವಿವರಿಸುತ್ತಿದ್ದಾರೆ. ಈ ಬಗ್ಗೆ ಮೊದಲ ಲೇಖನವನ್ನು ರಚಿಸಿದವರು ದಿ. ಬಿ. ಎಚ್. ಶ್ರೀಧರ ಅವರು.

**ಕುಂಭೀಪಾಕ** ಇದು ಒಂದು ನರಕದ ಹೆಸರು. ಇಲ್ಲಿಗೆ ಹೋಗಲೇಬೇಕಾದರೆ ತುಂಬ ಪಾಪಗಳನ್ನು ಮಾಡಬೇಕು. ಅಲ್ಲಿಗೆ ಹೋದವರನ್ನು ಆವಗೆಯ ಒಳಗೆ ಮಡಕೆಗಳನ್ನು ಬೇಯಿಸುವಂತೆ ಬೆಂಕಿಯಲ್ಲಿ ಬೇಯಿಸುತ್ತಾರಂತೆ. ಗರುಡ ಪುರಾಣದಲ್ಲಿ ಈ ಬಗೆಯ ಇಪ್ಪತ್ತೊಂದು ನರಕಗಳ ವರ್ಣನೆಯಿದೆ. ಅಲ್ಲಿಗೆ ಹೋಗಬೇಕಾದರೆ ಎಂಥ ಪಾಪ ಮಾಡಬೇಕು ಎಂಬುದನ್ನು ಆಸಕ್ತಿಯುಳ್ಳವರು ಓದಿ ತಿಳಿದುಕೊಳ್ಳಬಹುದು. ಎಲ್ಲ ಪ್ರಾಚೀನ ಆಕರಗಳಲ್ಲಿಯೂ ಈ ನರಕಗಳ ಸಂಖ್ಯೆಯ ಬಗ್ಗೆಯಾಗಲಿ ಅವುಗಳ ವಿವರಣೆಯ ಬಗ್ಗೆ ಆಗಲಿ ಒಮ್ಮತವಿಲ್ಲ. ನಿಜಗುಣ ಶಿವಯೋಗಿಯು ರಚಿಸಿರುವ ವಿವೇಕಚಿಂತಾಮಣಿ ಎಂಬ ಗ್ರಂಥದಲ್ಲಿ ಅನೇಕ ಬಗೆಯ ನರಕಗಳ ಹೆಸರಿವೆ. ವಿವರಣೆಗಳು ಇಲ್ಲ. ಈ ಗ್ರಂಥ ಈಗ ಮತ್ತೆ ಅಚ್ಚಾಗಿದೆ.

**ಕುಕ್ಕರಬಡಿ** ಕನ್ನಡದಲ್ಲಿ ಕುಕ್ಕರ ಎಂಬ ಒಂದು ಶಬ್ದವಿದೆ. ಇದಕ್ಕೆ ತುದಿಗಾಲ ಮೇಲೆ ಕುಳಿತಿರುವುದು. ಕುಕ್ಕರಗಾಲು ಎಂಬುದು ಇದನ್ನು ಸ್ಪಷ್ಟಪಡಿಸುತ್ತದೆ. ಬಡಿ ಎಂದು ಒತ್ತಾಯವನ್ನು ಸೂಚಿಸುವ ಶಬ್ದ. ಬಾಯಿಬಡಿ =ಬಾಯಿಮುಚ್ಚಿಸು. ಕುಕ್ಕರಬಡಿ ಶಬ್ದಕ್ಕೆ ಬಲವಂತದಿಂದ ಕುಕ್ಕರಗಾಲಲ್ಲಿ ಕುಳಿತುಕೊಳ್ಳುವಂತೆ ಮಾಡುವುದು. ಆದರೆ ಇದು ಕರ್ತ್ರರ್ಥವಾಗಿಯೂ ಕರ್ಮಾರ್ಥವಾಗಿಯೂ ಉಪಯೋಗವಾಗುತ್ತದೆ. ಕುಕ್ಕರಬಡಿಸು ಪ್ರಯೋಗದಲ್ಲಿಲ್ಲ. ಅಪ್ಪಣೆ ಮಾಡುವಾಗಲೂ ಸುಮ್ಮನೆ ಕುಕ್ಕರಬಡಿ ಎಂದೇ ಹೇಳುತ್ತಾರೆ.

**ಕುಕ್ಷಿ** ಸಂಸ್ಕೃತದ ಈ ಶಬ್ದಕ್ಕೆ ಹೊಟ್ಟೆ ಎಂದರ್ಥ. ಕುಕ್ಷಿ ಎಂಬ ಶಬ್ದಕ್ಕೆ ಅಮರದ ಟೀಕಾಕಾರರು

ಮಲವನ್ನು ಹೊರಕ್ಕೆ ಕಳುಹಿಸುತ್ತದೆ ಎಂದು ಆ ಹೆಸರು ಎಂದು ವಿವರಿಸುತ್ತಾರೆ. **ಕುಷ್ಯತೇ ಬಹಿಷ್ಕ್ರಿಯತೇ ಮಲಂ ಅಸ್ಮಾದಿತಿ ಕುಕ್ಷಿಃ** ಎಂದು ಸಂಸ್ಕೃತದ ವಿವರ. ನಿರಕ್ಷರಕುಕ್ಷಿ, ಎದೆ ಸೀಳಿದರೂ ಎರಡಕ್ಷರ ಇಲ್ಲ ಎಂಬ ಮಾತುಗಳನ್ನು ಎಲ್ಲರೂ ಕೇಳಿರುತ್ತಾರೆ, ಉಪಯೋಗಿಸುತ್ತಾರೆ.

**ಕುಟುಂಬ** ಒಂದು ಮನೆಗೆ ಸೇರಿದ ತಾಯಿ, ತಂದೆ, ಮಕ್ಕಳು ಮುಂತಾದವರ ಸಮೂಹಕ್ಕೆ ಕುಟುಂಬ ಎಂದು ಹೆಸರು. ಇದರಲ್ಲಿ ಬಂಧುಬಾಂಧವರೆಲ್ಲ ಸೇರಬಹುದು. ಉದಾರಚರಿತರಿಗೆ ವಸುಧೆಯೇ ಕುಟುಂಬ ಎಂಬ ಹಿತೋಪದೇಶದ ಮಾತೊಂದಿದೆ. **'ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಂ ಉದಾರಚರಿತಾನಾಂತು ವಸುಧೈವ ಕುಟುಂಬಕಮ್.'** ಕನ್ನಡದ ಕುಟುಂಬ ಶಬ್ದಕ್ಕೆ ಸಂಕುಚಿತವಾದ ಅರ್ಥವೂ ಬಂದಿದೆ. ಅದು ಪತ್ನಿ ಎಂದು. 'ಎಲ್ಲಿ ನಿಮ್ಮ ಕುಟುಂಬ ಬರಲಿಲ್ಲವೆ ?' ಎಂಬ ವಾಕ್ಯವನ್ನು ನೋಡಿ.

**ಕುಡತೆ** ಈ ರೂಪ ಗ್ರಾಮ್ಯ ರೂಪ. ಅದು ಸರಿಯಾಗಿ ಕುಡಿತೆ, ಕುಡಿ ಎಂಬ ಧಾತುವಿನಿಂದ ಬಂದದ್ದು. ಕುಡುತೆ ರೂಪಾಂತರ. ಒಂದು ಬೊಗಸೆ, ಸೆರೆ ಎಂದು ಅರ್ಥ. ಬೆರಳುಗಳನ್ನು ಮೇಲಕ್ಕೆ ಬಾಗಿಸಿರುವ ಅಂಗೈ. ಇದಕ್ಕೆ ಸಂಸ್ಕೃತದಲ್ಲಿ ಪ್ರಸೃತಿ ಎಂದು ಹೆಸರು. ಕುಮಾರವ್ಯಾಸನಲ್ಲಿ: **ಕುಡಿತೆಯೆರಡರೊಳರ್ಘ್ಯ ಜಲವನು ಹಿಡಿದು ಹಾಯ್ಕುವ ಸಮಯದಲಿ** ೧೪-೪೩ ಎಂದು ಶಬ್ದ ಪ್ರಯೋಗವಾಗಿದೆ (ದ್ರೋಣ ಪರ್ವ).

**ಕುತ್ಸಿತ** ಸಂಸ್ಕೃತದಲ್ಲಿ ಕುತ್ಸಾ ಎಂಬ ಶಬ್ದವಿದೆ. ಇದಕ್ಕೆ ನಿಂದೆ, ಬೈಗಳು, ಆಕ್ಷೇಪಣೆ ಇತ್ಯಾದಿ ಅರ್ಥಗಳಿವೆ. ಕುತ್ಸಿತ ಎಂಬ ಶಬ್ದಕ್ಕೆ ನಿಂದೆಗೊಳಗಾದ, ಬೈಗಳನ್ನು ಪಡೆದ ಎಂದೂ ನಿಂದೆ, ಬೈಗಳೂ ಎಂದೂ ಗುಣವಾಚಕದ ಮತ್ತು ನಾಮಪದದ ಎರಡು ಅರ್ಥಗಳೂ ಇವೆ.

**ಕುಬ್ಜ** ಕುಬ್ಜ ಎಂಬ ಸಂಸ್ಕೃತ ಶಬ್ದಕ್ಕೆ ಗೂನುಬೆನ್ನುಳ್ಳವನು ಎಂದರ್ಥ. ವಾಮನ ಎಂದರೆ ಕುಳ್ಳಾಗಿರುವವನು ಎಂದರ್ಥ. ಅದೂ ಸಂಸ್ಕೃತ. ಗೂನು ಬೆನ್ನಿನವನು ಸ್ವಾಭಾವಿಕವಾಗಿಯೆ ಕುಳ್ಳನಾಗಿರಬೇಕಾಗಿರುವುದರಿಂದ ಕುಬ್ಜ ಎಂಬ ಶಬ್ದಕ್ಕೂ ಕುಳ್ಳ ಎಂಬ ಅರ್ಥವೂ ವ್ಯಾಪಕವಾಗಿ ಬಂದಿದೆ. ಆದರೆ ವಾಮನ ಎಂಬ ಶಬ್ದಕ್ಕೆ ಗೂನುಬೆನ್ನಿನವ ಎಂಬ ಅರ್ಥವಿಲ್ಲ.

**ಕುಮರೆ** ಇದು ಕುಮ್ಮರಿ, ಕುಮರಿ ಎಂಬ ಪರ್ಯಾಯಗಳನ್ನು ಹೊಂದಿರುವ ಕನ್ನಡ ಶಬ್ದ. ಕುಮ್ಮರಿ ಎಂಬುದು ಮೂಲ ರೂಪ. ಅದರಿಂದ ಇತರ ರೂಪಗಳು ಬೆಳೆದಿವೆ. ಕಾಡಿನ ಗಿಡಮರಗಳನ್ನು ಕಡಿದು, ಸುಟ್ಟು, ಸಾಗುವಳಿಗೆ ಸಿದ್ಧ ಮಾಡಿದ ಭೂ ಪ್ರದೇಶ ಎಂದು ಆ ಶಬ್ದದ ಅರ್ಥ. ಹತ್ತನೆಯ ಶತಮಾನದಿಂದಲೂ ಇದು ಪ್ರಯೋಗದಲ್ಲಿದೆ. ವಡ್ಡಾರಾಧನೆಯಲ್ಲಿ **ಕುಮ್ಮರಿಯು ಸುಡಲೆಂದು ಕಡಿದೊಟ್ಟಂ ಮರಂಗಳ ಮೇಗೆ** (೧೪೭-೨೦)ಎಂಬ ಪ್ರಯೋಗವಿದೆ.

**ಕುಮಾರಿ ಎಂಬುದನ್ನು ಒಬ್ಬ ಹೆಂಗಸಿಗೆ ಎಲ್ಲಿಯವರೆಗೆ ಅನ್ವಯಿಸಬಹುದು ?** ಕನ್ಯೆಗೆ ಪುಷ್ಪದರ್ಶನವಾಗುವವರೆಗೆ ಅಂದರೆ ಆಕೆ ಮುಟ್ಟಾಗುವವರೆಗೆ ಕುಮಾರಿ ಎಂದು ಕರೆಯುವುದು ಮೊದಲ ಪದ್ಧತಿ. ಎರಡನೆಯದಾಗಿ ಮದುವೆಯಾಗುವವರೆಗೆ ಕುಮಾರಿ ಎನ್ನುವುದು ಮತ್ತೊಂದು ಪದ್ಧತಿ. ಈಚೆಗೆ ಇಂಗ್ಲೀಷಿನ Miss ಶಬ್ದ ನಮ್ಮ ಸ್ತ್ರೀಯರ ಹೆಸರಿನೊಡನೆ ಸೇರುವುದಕ್ಕೆ ಮೊದಲಾದ ಮೇಲೆ ತುಂಬ ಗೊಂದಲವಾಗಿದೆ. ಇಂಗ್ಲಿಷಿನಲ್ಲಿ Miss ಗೆ ಏನೇನು ಅರ್ಥ ಇದೆಯೋ ಅವೆಲ್ಲವೂ ಕನ್ನಡಕ್ಕೂ ಆಮದಾಗಿವೆ. ಈಚೆಗೆ Ms ಎಂಬುದನ್ನು ಇಂಗ್ಲಿಷಿನಲ್ಲಿ Miss ಮತ್ತು Mrs ಎಂಬ ಎರಡು ಅರ್ಥಗಳಲ್ಲಿಯೂ ಉಪಯೋಗಿಸುತ್ತಾರೆ. Ms ಗೆ ನಿಘಂಟಿನ ವಿವರಣೆ ಹೀಗಿದೆ: a title prefixed to a woman's name or position regardless of her marital status or when such status is unknown. ನೋಡಿ: ಶ್ರೀಮತಿ.

**ಕುಮ್ಚಿ** ಇದು ಕನ್ನಡ ಶಬ್ದ. ಇದಕ್ಕೆ ಸಣ್ಣ ಅಗ್ಗಿಷ್ಟಿಕೆ ಎಂದರ್ಥ. ಕನ್ನಡ ದೇಶದ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಈ ಶಬ್ದ ಪ್ರಯೋಗವಾಗುತ್ತ ಇದೆ. ಕುಂಪಟಿ, ಕುಪ್ಪಟೆ, ಕುಪ್ಪಡಿ, ಕುಮಟಿ, ಕುಮುಟಿ, ಕುಮ್ಮಟ ಇತ್ಯಾದಿ ಎಲ್ಲಕ್ಕೂ ಇದೇ ಅರ್ಥ.

**ಕುರಿತು** 'ಕುರಿತು' ಶಬ್ದವನ್ನು ಉಪಯೋಗಿಸುವುದರ ರೀತಿ ಏನು ? 'ಅದರ ಕುರಿತು' 'ಅದನ್ನು ಕುರಿತು' ಈ ಎರಡರಲ್ಲಿ ಯಾವುದು ಸರಿ ? 'ಕುರಿ' ಎಂಬ ಧಾತುವಿಗೆ ಗಮನಿಸು, ಲಕ್ಷ್ಯವಿಡು, ಉದ್ದೇಶಿಸು ಎಂದರ್ಥ. 'ಕುರಿತು' ಎಂದರೆ 'ಗಮನಿಸಿ' ಎಂದರ್ಥ. ಆದುದರಿಂದ 'ಅದನ್ನು ಕುರಿತು' ಎಂಬ ಪ್ರಯೋಗ ಸರಿ. ಆದರೆ 'ಅದರ ಕುರಿತು' ಎಂಬ ರೀತಿಯ ಪ್ರಯೋಗ ವ್ಯಾಪಕವಾಗಿ ಕೆಲವು ಪ್ರದೇಶಗಳಲ್ಲಿ ಮಾತ್ರ ಕಂಡುಬರುತ್ತದೆ. ಹೀಗೆ ಪ್ರಯೋಗವಾದಾಗ ನಾವು ಆ ಶಬ್ದಪುಂಜಕ್ಕೆ 'ಅದರ ಪ್ರಾಧಾನ್ಯವನ್ನು ಕುರಿತು' ಎಂದು ಅರ್ಥಮಾಡಿಕೊಳ್ಳಬೇಕು. ಅಲ್ಲಿ 'ಪ್ರಾಧಾನ್ಯ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಈ ಬಗೆಯ ಪ್ರಯೋಗಕ್ಕೆ ಜನಪ್ರಿಯತೆಯಿಂದ ಸಾಧುತ್ವ ಬಂದಿದೆ.

**ಕುರ್ಚಿ** ಕುಳಿತುಕೊಳ್ಳುವ ಎತ್ತರವಾದ ಪೀಠ. ಇದು ಅರಬ್ಬೀ ಭಾಷೆಯ ಕುರ್ಸೀ ಶಬ್ದದಿಂದ ಬಂದುದು. ಇಂಥ ಶಬ್ದಗಳಿಗೆ ಇಸು ಪ್ರತ್ಯಯವನ್ನು ಸೇರಿಸಿ ಕ್ರಿಯಾಪದವಾಗಿ ಮಾಡಬಹುದು ಎಂದು ಕೆಲವರು ಹಿರಿಯ ವಿದ್ವಾಂಸರು ಸೂಚನೆ ಕೊಡುತ್ತ ಬಂದಿದ್ದಾರೆ. ಕುರ್ಚಿಸು ಎಂದರೆ ಪೀಠದಲ್ಲಿ ಕುಳಿತುಕೋ ಎಂದರ್ಥ. ದಾಖಲಿಸು ಮುಂತಾದ ಶಬ್ದಗಳು ಹೀಗೆ ಪ್ರಯೋಗವಾಗಿವೆ.

**ಕುರ್ಜು** ಇದರ ಸರಿಯಾದ ರೂಪ ಕುರುಜು. ಇದಕ್ಕೆ ಗುರುಜೆ, ಕುರುಜೆ, ಮುಂತಾದ ಪರ್ಯಾಯ ರೂಪಗಳಿವೆ. ಕೋಟೆಗಳ ಒಂದೊಂದು ಕಡೆ ಕಟ್ಟುವ ಗೋಪುರ ಎಂದು ಇದಕ್ಕೆ ಅರ್ಥ. ಇದು ಕನ್ನಡ ಶಬ್ದ. ಬುರುಜು ಎಂಬ ಅರಬ್ಬಿ ಶಬ್ದವೂ ಇದೇ ಅರ್ಥದ್ದು.

**ಕುಲಕ** ಇದು ಸಂಸ್ಕೃತ ಶಬ್ದ. ಇದಕ್ಕೆ ಎರಡು ಅರ್ಥಗಳಿವೆ. ೧. ಪಡುವಲದ ಗಿಡ ಮತ್ತು ಅದರ ಕಾಯಿ. ೨. ಒಂದೇ ಕರ್ತೃಪದ ಮತ್ತು ಒಂದೇ ಕ್ರಿಯಾಪದವುಳ್ಳ ನಾಲ್ಕು ಅಥವಾ ಅದಕ್ಕಿಂತ ಹೆಚ್ಚಾದ ಪದ್ಯಗಳ ಸಮುದಾಯ.

**ಕುಲಕರಣಿ, ಕುಲಕರ್ಣಿ** ಈ ಶಬ್ದವು ಕುಲ + ಕರಣಿ ಎಂಬ ಎರಡು ಶಬ್ದಗಳಿಂದ ಆಗಿದೆ. ವಂಶಪರಂಪರೆಯಿಂದ ಗ್ರಾಮದ ಎಲ್ಲ ಲೆಕ್ಕವನ್ನೂ ಬರೆಯುವವನು. ಸಂಸ್ಕೃತದ ಕುಲಕರಣಿನ್ ಎಂಬುದರಿಂದ ಬಂದದ್ದು.

**ಕುಲಾವಿ** ತಲೆಗೆ ಹಾಕಿಕೊಳ್ಳುವ ಒಂದು ಬಗೆಯ ಟೋಪಿ. ಇದು ಅರಬ್ಬೀ ಭಾಷೆಯಿಂದ ಬಂದ ಶಬ್ದ. ಅರಬ್ಬಿಯಲ್ಲಿ ಕುಲ್ಲಾದ್, ಹಿಂದಿಯಲ್ಲಿ ಕುಲಾಹ್, ಕನ್ನಡದಲ್ಲಿ ಕುಲಾಯ, ಕುಲಾಯಿ, ಕುಳ್ಳಾವಿ ಎಂಬ ಪರ್ಯಾಯ ರೂಪಗಳಿವೆ.

**ಕುಷ್ಕಿ** ಎಂಬ ಶಬ್ದ ಪಾರಸೀ ಭಾಷೆಯ ಖುಷ್ಕಿ ಎಂಬ ಶಬ್ದದಿಂದ ಬಂದುದು. ಇದು ಮಳೆಯ ನೀರಿನಿಂದ ಬೆಳೆಯನ್ನು ಬೆಳೆಯುವ ಭೂಮಿಗೆ ಇರುವ ಹೆಸರು. ಕನ್ನಡದ ತರಿ ಎಂದರೆ ನೀರಾವರಿಯುಳ್ಳ ಭೂಮಿ, ಗದ್ದೆ. ಕನ್ನಡದಲ್ಲಿ ಕುಷ್ಕಿ, ಖುಷ್ಕಿ ಎರಡು ರೂಪಗಳೂ ಸರಿ.

**ಕುಳಿರ್ಗಾಳಿ** ಕುಳಿರ್ ಎಂದರೆ ಚಳಿ, ತಂಪು, ಶೀತವಾದುದು. ಅಂಥ ಗಾಳಿ ಕುಳಿರ್ಗಾಳಿ = ತಂಗಾಳಿ.

**ಕೂಚುಭಟ್ಟ** ಈ ಶಬ್ದ ನಿಜವಾಗಿ ಕೂಸು ಭಟ್ಟ. ಕೆಲವು ಕಡೆ ಕೂಸಂಭಟ್ಟ ಎಂಬ ರೂಪವೂ ಪ್ರಯೋಗದಲ್ಲಿದೆ. ಅದೇ ಕೂಚಭಟ್ಟ ಆಗಿದೆ. ಸದಾ ಪುಸ್ತಕದಲ್ಲಿ ಮುಳುಗಿ ವಿದ್ಯಾಭ್ಯಾಸದಲ್ಲಿ ಅಥವಾ ಪಾಂಡಿತ್ಯ ಸಂಪಾದನೆಯಲ್ಲಿ ನಿರತನಾಗಿರುವ ವ್ಯಕ್ತಿ. ಲೋಕ ವ್ಯವಹಾರದಲ್ಲಿ ಜಾಣನಾಗಿರುವುದಿಲ್ಲ ಎಂಬುದನ್ನು ಸೂಚಿಸುವ ಗಾದೆ ಇದು. ಪಾಂಡಿತ್ಯ ಒಂದರಿಂದ ಏನೂ ಪ್ರಯೋಜನವಿಲ್ಲ. ಜೊತೆಗೆ ವಿವೇಚನಾ ಶಕ್ತಿ ಬೇಕು ಎಂಬುದು ಈ

ಗಾದೆಯ ಅಭಿಪ್ರಾಯ. **ಕೂಚಂಭಟ್ಟ ಓದಿ ಓದಿ ಮರುಳಾದ.**

**ಕೂಡ್ರು, ಕುಂದ್ರು, ಕುಂಡ್ರು** ಈ ಮೂರು ಶಬ್ದಗಳ ಮೂಲ ರೂಪ ಕುಳಿತಿರು. ಕುಳ್ಳಿರು ಎಂಬುದು ಅದರ ಸಂಕ್ಷಿಪ್ತ ಸ್ವರೂಪ. ಮೇಲೆ ಸೂಚಿಸಿರುವ ಎಲ್ಲ ಮೂರು ರೂಪಗಳೂ ಗ್ರಾಮ್ಯ. ಬಾಯಿ ಮಾತಿನಲ್ಲಿ ಅವು ಹೆಚ್ಚು ಪ್ರಚಾರದಲ್ಲಿವೆ.

**ಕೂಲಂಕುಷ, ಕೂಲಂಕುಶ** ಈ ಎರಡು ರೂಪಗಳೂ ತಪ್ಪು. ಆದರೆ ಜನ ಉಪಯೋಗಿಸುತ್ತಾರೆ. ಹುಟ್ಟಿನ ದೃಷ್ಟಿಯಿಂದ ಇದೂ 'ಅನುಕೂಲ' ಎಂಬ ಶಬ್ದಕ್ಕೆ ಸಂಬಂಧಪಟ್ಟ ಶಬ್ದವೇ. ಈ ಶಬ್ದದ ಚರಿತ್ರೆ ವಿಚಿತ್ರವಾದುದು. ಇದರಲ್ಲಿ 'ಅಂಕುಶ' ಎಂಬ ಶಬ್ದ ಅಡಗಿದೆ ಎಂಬ ಭ್ರಮೆಯೇ ಎಲ್ಲ ತಪ್ಪುಗಳ ಮೂಲ ಕಾರಣ. ಅಂಕುಶ - ಆನೆಯನ್ನು ಹತೋಟಿಯಲ್ಲಿ ಇಡುವ ಆಯುಧ. ಆ ಶಬ್ದಕ್ಕೂ ನಾವು ಚರ್ಚಿಸುತ್ತಿರುವ ಶಬ್ದಕ್ಕೂ ಯಾವ ಸಂಬಂಧವೂ ಇಲ್ಲ. ಈ ಶಬ್ದದ ಸರಿಯಾದ ರೂಪ **'ಕೂಲಂಕಷ'** = ನದಿ, ಕೆರೆ, ಹೊಳೆ, ಸಮುದ್ರ ಮುಂತಾದುವುಗಳ ದಡವನ್ನು ಉಜ್ಜಿ, ತಿಕ್ಕಿ, ಕೊರೆದುಬಿಡುವಂಥದು ಎಂದರ್ಥ. ಇಲ್ಲಿರುವುದು 'ಕಷ್' ಧಾತು. ಈ ಶಬ್ದಕ್ಕೆ ವ್ಯಾಪಕಾರ್ಥದಲ್ಲಿ ಭರ್ತಿಯಾಗಿರುವುದು, ಪೂರ್ಣವಾಗಿರುವುದು, ತುಂಬಿರುವುದು, ಸರ್ವತೋಮುಖ ವಾದುದು ಎಂಬ ಅರ್ಥಗಳು ಬರುತ್ತವೆ. ಈ ಶಬ್ದಕ್ಕೆ ಹೆಚ್ಚು ಪ್ರಯೋಗಗಳಿವೆ:- 'ಕೂಲಂಕಷ'ವಾಗಿ ಚರ್ಚೆ ಮಾಡಬೇಕು. ಈ ತೀರ್ಮಾನವನ್ನು ಒಪ್ಪುವ ಮುಂಚೆ ಕೂಲಂಕಷವಾದ ಸಂಶೋಧನೆ ನಡೆಯಬೇಕು — ಎಂದು ಹೇಳುವುದು ಅದರ ಸರಿಯಾದ ಪ್ರಯೋಗ. ಅಂದರೆ ಯಾವ ಅಂಶವನ್ನೂ ಬಿಡದೆ, ಯಾವ ಭಾಗವನ್ನೂ ಉಪೇಕ್ಷಿಸದೆ ಎಂಬ ಅರ್ಥ ಬರುತ್ತದೆ. ಈ ಶಬ್ದ ಬಹಳ ಪ್ರಭಾವಯುತವಾದುದು. ಇದರ ಪ್ರಯೋಗವೂ ಅಷ್ಟೇ ಪರಿಣಾಮಕಾರಿಯಾದುದು. ಆದುದರಿಂದ ಈ ಶಬ್ದವನ್ನು 'ಕೂಲಂಕುಶ' ಎಂದು ಉಚ್ಚರಿಸುವುದಾಗಲೀ, ಬರಹದಲ್ಲಿ ಉಪಯೋಗಿಸುವುದಾಗಲಿ ಅಕ್ಷಮ್ಯವಾಗುತ್ತದೆ.

**ಕೂಲಿ** ಕೂಲಿ ಎಂಬುದು ದೇಶ್ಯ ಶಬ್ದ. ತಮಿಳು ತೆಲುಗು ಭಾಷೆಗಳಲ್ಲಿಯೂ ಪ್ರಯೋಗದಲ್ಲಿದೆ. ಕನ್ನಡದಲ್ಲಿ ೧೩ನೆಯ ಶತಮಾನದಲ್ಲಿಯೇ ಕಾವ್ಯಗಳಲ್ಲಿ ಪ್ರಯೋಗವಾಗಿದೆ. ಈ ಶಬ್ದಕ್ಕೆ *೧. ದುಡಿಮೆಗಾಗಿ ನೀಡುವ ಪ್ರತಿಫಲ, ಹಣ ಅಥವಾ ಧಾನ್ಯ, ಮಜೂರಿ ೨. ಗಳಿಕೆ, ಸಂಪಾದನೆ ೩. ಕೂಲಿಗಾಗಿ ದುಡಿಯುವ ವ್ಯಕ್ತಿ ೪. ಹಣಕ್ಕಾಗಿ ಮಾಡುವ ಕೆಲಸಕ್ಕೂ ಕೂಲಿ* ಎಂದೇ ಕರೆಯುತ್ತಾರೆ. ಕೂಲಿ ಕುಂಬಳಿ, ಕೂಲಿನಾಲಿ ಎಂಬ ಜೊತೆ ಶಬ್ದಗಳೂ ಇವೆ.

**ಕೂಳು** ಎಂಬುದು ಪ್ರಾಚೀನ ಕನ್ನಡದ ಕೂೞು ಎಂಬುದರ ಈಚಿನ ರೂಪ. ಈ ಶಬ್ದಕ್ಕೆ ಅನ್ನ ಎಂದೇ ಅರ್ಥ. ಕ್ರಿ.ಶ. ೭೨೫ರ ಒಂದು ಶಾಸನದಲ್ಲಿ ಈ ಶಬ್ದ ಮೊದಲು ಸಿಕ್ಕುತ್ತದೆ. **'ಏಡಿಲ್ಲಾದುದು ಕೂೞಿಲ್ಲಾದುದು'** ಎಂದು ಪ್ರಯೋಗವಿದೆ. ಮನೆಯಿಲ್ಲದೆ ಹೋಯಿತು, ಅನ್ನವಿಲ್ಲದೆ ಹೋಯಿತು ಎಂದು ಅದರ ಅರ್ಥ. ಅನ್ನ ಎಂಬ ಅರ್ಥದ ಜೊತೆಗೆ ಹೀನಾರ್ಥದಲ್ಲಿ ತಿನ್ನುವ ಯಾವುದಾದರೂ ಪದಾರ್ಥ ಎಂಬುದೂ ಪ್ರಯೋಗದಲ್ಲಿದೆ. **'ನಮ್ಮ ಮನೆ ಕೂಳು ತಿಂದು ಕೊಬ್ಬಿದ್ದಾನೆ'** ಎಂಬ ಬೈಗುಳದಲ್ಲಿ ಈ ಅರ್ಥವಿದೆ. 'ತಂಗಳು' ಎನ್ನುವ ಶಬ್ದದಲ್ಲಿ ತಣ್ಣಗಿರುವ ಕೂಳು ಎಂಬ ಅರ್ಥವಿದೆ. ಅಡುಗೂಳಜ್ಜಿ ಎನ್ನುವ ಶಬ್ದದಲ್ಲಿ ಅಡು = ಅನ್ನಮಾಡಿ ಬಡಿಸುವ, ಕೂಳ = ಅನ್ನದ, ಅಜ್ಜಿ = ಮುದುಕಿ ಎಂಬ ವಿವರಣೆ ಅಡಗಿದೆ. ಕೂಳ್ಬಡಿಕ ಎಂದರೆ ತಿಂಡಿಪೋತ, ಹೊಟ್ಟೆಬಾಕ ಎಂಬ ಅರ್ಥಗಳಿವೆ. ಹೀಗೆ ಇನ್ನೂ ವಿವರವಾಗಿದೆ ಕೂಳು ಶಬ್ದದ ವ್ಯಾಪ್ತಿ.

**ಕೃಕವಾಕು** ಈ ಸಂಸ್ಕೃತ ಶಬ್ದಕ್ಕೆ ಹುಂಜ ಎಂದರ್ಥ. ಸಂಸ್ಕೃತದ ಒಂದು ಟೀಕೆಯಲ್ಲಿ ಈ ವಿವರಣೆಯಿದೆ. **ಕೃಕೇಣ ಶಿರೋಗ್ರೇಣ ವಕ್ತಿ ಕೃಕವಾಕುಃ** ಅಂದರೆ ನೆತ್ತಿಯಿಂದ

ಕೂಗುತ್ತದೆ ಎಂದು ಅದಕ್ಕೆ **ಕೃಕವಾಕು** ಎಂಬ ಹೆಸರು ಬಂದಿದೆ. ಹುಂಜಕ್ಕೆ ತಾಮ್ರಚೂಡ, ಕುಕ್ಕುಟ, ಚರಣಾಯಧ ಎಂಬ ಹೆಸರುಗಳೂ ಇವೆ. ಅಪೂರ್ವವಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಯೋಗವಾಗಿವೆ.

**ಕೃಂತನ** ಇದು ಸಂಸ್ಕೃತದ ಶಬ್ದ. ಇದಕ್ಕೆ ಮೂರು ಅರ್ಥಗಳಿವೆ. ೧. ಕತ್ತರಿಸುವುದು, ತುಂಡು ಮಾಡುವುದು ೨. ಕತ್ತರಿಸುವವನು ೩. ಕತ್ತರಿಸುವ ಸಾಧನ ಕುಡುಗೋಲು ಮುಂತಾದವು. ಕೃಂತನೀ ಎಂಬುದು ಸ್ತ್ರೀಲಿಂಗದ ರೂಪ. ಅದೇ ಅರ್ಥ.

**ಕೃಪೆ, ಕೃಪಾ** ಎಂದರೆ ಇನ್ನೊಬ್ಬರು ವ್ಯಥೆಪಡುತ್ತಿದ್ದಾಗ ಅವರ ಬಗ್ಗೆ ಸಹದುಃಖವನ್ನು ಅನುಭವಿಸುವ ಗುಣ ಎಂದರ್ಥ. ಸಾಮಾನ್ಯವಾಗಿ ಕೃಪೆ, ದಯೆ, ಅನುಕಂಪ ಎಂಬ ಶಬ್ದಗಳನ್ನು ಜನರು ಒಂದೇ ಅರ್ಥದಲ್ಲಿ ಉಪಯೋಗಿಸುತ್ತಾರೆ.

**ಕೃಷ್ಣ, ಕ್ರಿಸ್ತ** ಕೃಷ್ಣ ಸಂಸ್ಕೃತದ ಶಬ್ದ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಕಲಿಯುಗ, ೨. ಕೃಷ್ಣಪಕ್ಷ, ೩. ಕೆಟ್ಟ, ದುಷ್ಟ ೪. ಕೋಗಿಲೆ, ೫. ಕಪ್ಪು ಬಣ್ಣ ೬. ಕೃಷ್ಣಾವತಾರ. ಈ ಶಬ್ದವನ್ನು ಕನ್ನಡದಲ್ಲಿ ಬರೆಯುವಾಗ ಕ್ರಿಷ್ಣ ಎಂದಾಗಲಿ ಕ್ರುಷ್ಣ ಎಂದಾಗಲೀ ಬರೆಯಬಾರದು. ಕ್ರಿಸ್ತ ಎಂಬ ಶಬ್ದವು ಗ್ರೀಕ್ ಭಾಷೆಯಿಂದ ಬಂದ ಶಬ್ದ. Christos ಎಂಬುದು ಅದರ ಮೂಲ. ಅದಕ್ಕೆ ದೇವರೇ ತನ್ನ ಪ್ರತಿನಿಧಿಯೆಂದು ಅಂಗಭೋಗವಿಧಿಯನ್ನು ನೆರವೇರಿಸಿ ಭೂಮಿಗೆ ಕಳುಹಿಸಿದನು ಎಂದರ್ಥ. ಎರಡು ಬೇರೆ ಬೇರೆ ಭಾಷೆಯ ಬೇರೆ ಮೂಲಗಳ ಶಬ್ದಗಳಿಗೆ ಒಂದೇ ರೀತಿಯ ಕಾಗುಣಿತವನ್ನು ಬರೆಯಲು ಪ್ರಯತ್ನ ಪಡುವುದು ತಪ್ಪು.

**ಕೃಷ್ಣ ಸುಂದರಿ** ಈ ಶಬ್ದದ ಪ್ರಯೋಗವನ್ನು ನಾನು ಎಲ್ಲೂ ಕಂಡಿಲ್ಲ. ಕೃಷ್ಣಾ ಎಂಬುದು ದ್ರೌಪದಿಯ ಹೆಸರು. ಅವಳು ಕಪ್ಪು ಬಣ್ಣಕ್ಕೆ ಸೇರಿದವಳು ಮತ್ತು ಅತ್ಯಂತ ಸುಂದರ ಸ್ವರೂಪಳು ಎಂದು ಪ್ರಸಿದ್ಧಳಾಗಿದ್ದಳು. ಕೃಷ್ಣಸುಂದರ ಎಂಬ ಒಬ್ಬ ವ್ಯಕ್ತಿಯ ಹೆಸರೂ ಅವನ ವಂಶದವರ ಹೆಸರೂ ಕೆಲವು ಆಧಾರ ಗ್ರಂಥಗಳಲ್ಲಿ ಕಾಣಬರುತ್ತವೆ. ಯಾರಾದರೂ ದ್ರೌಪದಿಗೆ ಅನ್ವಯಿಸಿದ ಹಾಗೆ ಈ ಶಬ್ದವನ್ನು ಉಪಯೋಗಿಸಿರಬಹುದು. ನನಗೆ ತಿಳಿಯದು. ಕಪ್ಪು ಬಣ್ಣದ ಸುಂದರಿ ಎಂಬ ಅರ್ಥದಲ್ಲಿ ಉಪಯೋಗಿಸಿದರೆ ತಪ್ಪಲ್ಲ. Black Beauty ಎಂಬುದರ ಕನ್ನಡ ಅನುವಾದ ಕೃಷ್ಣಸುಂದರಿ ಆಗಬಹುದು.

**ಕೆಂಡಗಣ್ಣು-ಕೆಂಗಣ್ಣು** ಈ ಎರಡೂ ಸರಿ. ಕೆಂಡದಂತಿರುವ ಕಣ್ಣು ಕೆಂಡಗಣ್ಣು. ಕೆಂಪಾಗಿರುವ ಕಣ್ಣು ಕೆಂಗಣ್ಣು. ಈ ಎರಡೂ ಅಂಥ ಕಣ್ಣಿರುವವನ ಅಂತರಂಗದ ಕೋಪವನ್ನು ಸೂಚಿಸುತ್ತವೆ. ಯಾವ ಕೋಪವೂ ಇಲ್ಲದೆ ಕಣ್ಣಿನ ರೋಗವಾದ ಕೆಂಗಣ್ಣಾಗಿರಲೂ ಸಾಕು. ಕೆಂಗಣ್ಣ ಎಂದರೆ ಕೆಂಪಾದ ಕಣ್ಣುಳ್ಳವನು, ಅಗ್ನಿನೇತ್ರ, ಈಶ್ವರ. ಕೆಂಡಗಣ್ಣಸ್ವಾಮಿ ಎಂಬ ಹೆಸರನ್ನು ಈಶ್ವರ ಎಂಬ ಅರ್ಥದಲ್ಲಿ ವ್ಯಕ್ತಿಗಳಿಗೆ ಇಡುವ ಪರಿಪಾಠವಿದೆ.

**'ಕೆಂಪಗಿನ' ಹುಡುಗ 'ಕಪ್ಪಗಿನ' ಹುಡುಗಿ, 'ತೆಳ್ಳಗಿನ' ದೇಹ, 'ಕುಳ್ಳಗಿನ' ಮೈಕಟ್ಟು, 'ಬೆಳ್ಳಗಿನ' ರೂಪ. ಮುಂತಾದ ಪ್ರಯೋಗಗಳು. ಇವು ಸರಿಯೇ?**

ಈ ರೂಪಗಳು ಈಚೀಚೆಗೆ ಹೆಚ್ಚಾಗುತ್ತಿವೆಯಲ್ಲವೆ? ಈ ರೂಪಗಳನ್ನು ಕೆಲವರು ಮಾತ್ರ ಹೆಚ್ಚಾಗಿ ಪ್ರಯೋಗಿಸುತ್ತಿರುವುದು ನಿಜ. ಆದರೆ ಈ ರೂಪ ಅಶುದ್ಧವಾದುದು. ವ್ಯಾಕರಣ ಸೂತ್ರಗಳಿಗೆ ಒಪ್ಪಿಗೆಯಾಗದ ರೂಪ. ಸ್ವಾಭಾವಿಕವಾಗಿ ಮಾತಿನಲ್ಲಿಯೂ ಕಾಣಿಸಿಕೊಳ್ಳದ ರೂಪ. ಕೆಂಪನೆಯ, ಕಪ್ಪನೆಯ, ಬೆಳ್ಳನೆಯ, ತೆಳ್ಳನೆಯ ಎಂಬಂಥ ಗುಣವಾಚಕಗಳು ಎಲ್ಲರ ಬಾಯಿಮಾತಿನಲ್ಲಿರುವಾಗ ಈ ಅಶುದ್ಧ ರೂಪಕ್ಕೆ ಆಸ್ಪದ ಕೊಡದಿರುವುದು ಉತ್ತಮ. ಗ್ರಾಮ್ಯದಲ್ಲಿಯೂ ಕಪ್ಪನ್ನ, ಕೆಂಪನ್ನ ಮುಂತಾದ ರೂಪಗಳು ಪ್ರಚಾರದಲ್ಲಿವೆ. ಕೆಲವು ಕಾವ್ಯ ಪ್ರಯೋಗಗಳಲ್ಲಿಯೂ ಇವು ಇಣುಕಿರುವುದುಂಟು.

ಹೀಗಿದ್ದೂ ಈ ಹೊಸ ರೂಪವು ಹೇಗೆ ಪ್ರಯೋಗಕ್ಕೆ ಬಂದಿರಬಹುದು ಎಂಬುದು ಊಹೆಯ ವಿಚಾರ. ಕೆಳಗಿನ, ಒಳಗಿನ, ಬೆಳಗಿನ ಎಂಬಂಥ ಶುದ್ಧರೂಪಗಳ ಸಾಮ್ಯದಿಂದ ಬಂದಿರಬಹುದು ಎಂದು ಕೆಲವರು ವಾದಿಸುತ್ತಾರೆ.

**ಕೆಫೆ** ನೀವು ಯಾರ ಕೃಪೆಯೂ ಇಲ್ಲದೆ ನುಗ್ಗುವ ಹೋಟೆಲು. ಇದು ಬಹಳ ಸ್ವಾರಸ್ಯವಾದ ಶಬ್ದ. ಇದು ಫ್ರೆಂಚ್ ಭಾಷೆಯ ಶಬ್ದ. ಇದಕ್ಕೆ ಕಾಫಿ ಮತ್ತು ಕಾಫಿಯನ್ನು ಮಾರುವ ಮನೆ ಎಂದು ಅರ್ಥ. ಇದರಲ್ಲಿ ಕಾಫಿಯ ಜೊತೆಗೆ ಅಲ್ಪೋಪಹಾರವನ್ನು ಕೊಡಬಲ್ಲರು. ಭಾರಿ ಹೋಟೆಲುಗಳಿಗಿಂತ ಅಗ್ಗವಾದುದಲ್ಲದೆ, ಇಂಥ ತಿಂಡಿಯ ಮನೆಗಳಲ್ಲಿ ಮದ್ಯವನ್ನು ಮಾರುವ ಹಾಗಿಲ್ಲ. ಇಂಗ್ಲಿಷಿನಲ್ಲಿ ಇದಕ್ಕೆ A Cheap Restaurant ಎಂದು ಅರ್ಥವಿದೆ. ಇದು Cafeteria ಎಂಬ ಸ್ಪೈನ್ ದೇಶದ ಭಾಷೆಯ ಶಬ್ದದಿಂದಲೂ ಬಂದಿರಬಹುದು. ಆ ಶಬ್ದಕ್ಕೆ A self serving restaurant ಎಂದು ಅರ್ಥ. ಈಗಿನ ದರ್ಶಿನಿಗೆ ಸಮನಾದುದು.

**ಕೆರಕ** ಎಂದರೆ ಬಲಿಪಾಡ್ಯಮಿಯಲ್ಲಿ ದೇವರ ಪೂಜೆ ಮಾಡುವಾಗ ಮನೆಗಳ ಹೊಸಿಲುಗಳಲ್ಲಿ ಎರಡು ಕಡೆಗೂ ಸಗಣಿಯ ಬೆನಕನನ್ನು ಮಾಡಿ ಹೂ ಮುಡಿಸಿ ಇಡುವ ವಿಗ್ರಹದ ಪ್ರತೀಕ. ಇದು ಕಿರುಗ ಎಂಬುದರ ಅಪಭ್ರಂಶ. ವಾಮನ ಎಂದು ಅದರ ಅರ್ಥ. ಅವನು ವಿಷ್ಣುವಿನ ಒಂದು ಅವತಾರ ತಾನೆ! 'ಗ' ಎಂಬುದು ಪುರುಷವಾಚಕ ಶಬ್ದಗಳಿಗೆ ಹತ್ತುವ, ಗೌರವ ಸೂಚಕ ಪ್ರತ್ಯಯ. ಅರಿಗ, ಜೆಟ್ಟಿಗ ಎಂಬ ಹೆಸರುಗಳನ್ನು ನೋಡಿ.

**ಕೆರೆಯಮುಂದೆ ಅರವಟ್ಟಿಗೆ ಇಟ್ಟ ಹಾಗೆ** ಎಂಬ ಗಾದೆಗೆ 'ವ್ಯರ್ಥವಾದ ಕೆಲಸವನ್ನು ಮಾಡಬಾರದು' ಎಂದರ್ಥ. ಅರವಟ್ಟಿಗೆ ಎಂದರೆ ಪ್ರಯಾಣದಲ್ಲಿ ಬಾಯಾರಿಕೆಯಾದವರಿಗೆ, ಪಾನೀಯಗಳನ್ನು ಧರ್ಮಾರ್ಥವಾಗಿ ಒದಗಿಸುವ ಸ್ಥಾನ ಎಂದರ್ಥ. ದೂರ ಪ್ರಯಾಣ ಮಾಡುವಾಗ ನೀರು ಸಿಗದ ಪ್ರದೇಶದಲ್ಲಿ ಹಿಂದೆ ಧಾರ್ಮಿಕ ಬುದ್ಧಿಯುಳ್ಳ ಸಿರಿವಂತರು ಅರವಟ್ಟಿಗೆಗಳನ್ನು ಇಡಿಸುತ್ತಿದ್ದರು. ಬಾಯಾರಿದ ಪ್ರಯಾಣಿಕರು ಅದರಿಂದ ತುಂಬ ಉಪಕೃತರಾಗಿ ಹಾಗೆ ಸಹಾಯ ಮಾಡಿದವರನ್ನು ನೆನೆಯುತ್ತಿದ್ದರು. ಬಾಯಾರಿಕೆಯಾದವರಿಗೆ ಮುಂದೆ ಕೆರೆಯೇ ಇರುವ ಕಡೆ ಅರವಟ್ಟಿಗೆ ಇಟ್ಟು ಏನು ಪ್ರಯೋಜನ? ಪ್ರಯಾಣಿಕರು ಕೆರೆಯ ಬಳಿ ಹೋಗಿ ಕೈಕಾಲು ಮುಖಗಳನ್ನು ತೊಳೆದುಕೊಂಡು, ಬೇಕಾದರೆ ಸ್ನಾನಮಾಡಿ, ಸಾಕಾದಷ್ಟು ನೀರು ಕುಡಿದು ಪ್ರಯಾಣ ಮಾಡುತ್ತಾರೆ. ಅರವಟ್ಟಿಗೆಯಲ್ಲಿ ಅಷ್ಟೊಂದು ನೀರನ್ನು ಕೊಡುವುದಕ್ಕೆ ಆಗುತ್ತದೆಯೇ? ಇಂಥ ವ್ಯರ್ಥವಾದ ಕೆಲಸವನ್ನು ಮಾಡುವವರಿಗೆ ಇದು ಸಾರ್ಥಕವಾದ ಬುದ್ಧಿಯ ಮಾತು. ಹಳಗನ್ನಡದಲ್ಲಿ ಈ ಶಬ್ದ ಅಱ +ವಟ್ಟಿಗೆ. ಅಂದರೆ ಅಱ = ಧರ್ಮ. ಅಱವಟ್ಟಿಗೆ. ವಟ್ಟಿಗೆ ಎಂಬ ಶಬ್ದ ಸಂಸ್ಕೃತದ ವಾಟಿಕಾ =ಮನೆ, ಉದ್ಯಾನ.

**ಕೇಕಯ** ಇದು ಒಂದು ಪ್ರಸಿದ್ಧ ಸೂರ್ಯವಂಶದ ಮತ್ತು ಆ ವಂಶದ ರಾಜನ ಹೆಸರು. ಕೈಕೇಯಿ ಈತನ ಮಗಳು. ಕೇಕಯ ಎಂಬುದು ಒಂದು ದೇಶದ ಹೆಸರೂ ಆಗಿತ್ತು.

**ಕೇಡಿ** ಕೇಡಿ ಎಂದರೆ ಕೆಡಿಸುವವನು. ಕಿಡಿಗೇಡಿ ಎಂದರೆ ಬೆಂಕಿ ಹತ್ತಿಸಿ ಸುತ್ತ ಕೇಡನ್ನು ಹರಡುವವನು. ಕುಲಗೇಡಿ ಎಂದರೆ (ಕುಲಕ್ಕೆ) ಮನೆತನಕ್ಕೆ ಕೆಟ್ಟ ಹೆಸರನ್ನು ತರುವವನು. ಅಲ್ಲದೆ ಇಂಗ್ಲಿಷಿನ K.D. ಎಂಬ ಸಂಕ್ಷಿಪ್ತ ಶಬ್ದವಿದೆ. ಇದು ಪೊಲೀಸ್ ಶಾಖೆಯಲ್ಲಿ ಹೆಸರು ಮಾಡಿರುವವನಿಗೆ ಸಲ್ಲುತ್ತದೆ. K = known, D = Delinquent. ಈ ಎರಡಕ್ಕೂ ಯಾವ ಸಂಬಂಧವೂ ಇಲ್ಲ.

**ಕೇಮೆ** ಗೆಯ್ಮೆ ಎಂಬ ಕನ್ನಡ ಶಬ್ದಕ್ಕೆ ಕೆಲಸ ಎಂದರ್ಥ. ಈ ಶಬ್ದವೇ ಆಡುಮಾತಿನಲ್ಲಿ ಕೇಮೆ ಆಗಿದೆ. ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಪ್ರಯೋಗ. ಗೇಮೆ ರೂಪವೂ ಉಂಟು.

**ಕೇರಿ** ನೋಡಿ: ಓಣಿ

**ಕೇಶಿಸೂದನ** ಕಂಸನ ಪರಿವಾರದಲ್ಲಿದ್ದ ಒಬ್ಬ ರಾಕ್ಷಸನ ಹೆಸರು ಕೇಶಿ. ಇವನು ಕುದುರೆಯ ರೂಪವನ್ನು ತಾಳಿ ಗೋಕುಲದಲ್ಲಿ ಕೃಷ್ಣ ಬಲರಾಮರನ್ನು ಪೀಡಿಸಲು ಬಂದಾಗ ಕೃಷ್ಣನು ಅವನನ್ನು ಕೊಂದನು. ಆದುದರಿಂದ ಕೃಷ್ಣನು ಕೇಶಿಸೂದನನಾದನು. ಸೂದನ ಎಂದರೆ ನಾಶಮಾಡು ಎಂದರ್ಥ. **ಕೇಶಿಸೂಧನ** ಎಂಬ ರೂಪ ತಪ್ಪು.

**ಕೇಳು** ಕನ್ನಡದಲ್ಲಿ ಕೇಳ್ ಎಂಬುದು ಈ ಶಬ್ದದ ಪೂರ್ವ ರೂಪ. ಕೇಳ್ ಅಥವಾ ಕೇಳು ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಭಾಷೆಯ ಪ್ರಯೋಗಗಳ ಕಡೆಗೆ ಗಮನಪಿಟ್ಟರೆ ಈ ಅರ್ಥಗಳೆಲ್ಲ ಕಣ್ಣಿಗೆ ಬೀಳುತ್ತವೆ. ನಾನು ಕೊಡುವ ಪ್ರಯೋಗಗಳನ್ನು ಗಮನಿಸಿ. ಆಗ **ಕೇಳಿ** ಎಂಬುದು ಕೃದಂತರೂಪ ಎಂದು ಸ್ಪಷ್ಟವಾಗುತ್ತದೆ. ೧. ಕಿವಿಯಿಂದ ಕೇಳು, ಆಲಿಸು: ಉದಾ: **ಸುರಸಿಂಧು ಪ್ರಿಯಪುತ್ರ ಕೇಳ್. ಕಳಶಜಾ ನೀಂ ಕೇಳ್.** ಪಂಪಭಾರತ (೭-೧೫). ೨. ಹೇಳಿದಂತೆ ಮಾಡು. ಉದಾ: ಗುರುಗಳ ಬುದ್ಧಿಮಾತುಗಳನ್ನು ಕೇಳಬೇಕು. ೩. ಪ್ರಶ್ನೆ ಮಾಡು ಉದಾ: ನಿನಗೆ ಅರ್ಥವಾಗದಿದ್ದರೆ ಪ್ರಶ್ನೆಗಳನ್ನು ಕೇಳು. ೪. ಸಾಲ ಕೇಳು, ದುಡ್ಡು ಕೇಳು. ಉದಾ: ಅಳಿಯ ೨೫ ಸಾವಿರ ವರದಕ್ಷಿಣೆಯನ್ನು ಕೇಳಿದನು. ೫. ಕಿವಿಯ ಶ್ರವಣ ಶಕ್ತಿಯನ್ನು ಹೊಂದಿರು. ಉದಾ: ಈಗ ನನಗೆ ಕಿವಿ ಕೇಳುತ್ತಿಲ್ಲ. ಇದಲ್ಲದೆ ಕೇಳಿಕೊಳ್ಳು, ಕೇಳಿಬರು, ಕೇಳ್ಮೆ ಮುಂತಾದ ಶಬ್ದಗಳಲ್ಲಿರುವ ಅರ್ಥವಿಸ್ತಾರವನ್ನು ಗಮನಿಸಿ. ಇದಕ್ಕೂ ಸಂಸ್ಕೃತದ ಕೇಳಿ =ಆಟ, ಕ್ರೀಡೆ ಎಂಬ ಶಬ್ದಕ್ಕೂ ಯಾವ ಸಂಬಂಧವೂ ಇಲ್ಲ.

**ಕೊತ್ತಿ** ಇದು ಕನ್ನಡದ ಶಬ್ದ. ಇದಕ್ಕೆ ಬೆಕ್ಕು ಎಂದರ್ಥ. **ಅತ್ತೆಯ ಮೇಲಿನ ಕೋಪ ಕೊತ್ತಿಯ ಮೇಲೆ** ಎಂಬ ಗಾದೆ ಪ್ರಸಿದ್ಧ. ಮಲೆಯಾಳದಲ್ಲಿಯೂ ತುಳು ಭಾಷೆಯಲ್ಲಿಯೂ ಈ ಶಬ್ದಕ್ಕೆ ಜ್ಞಾತಿ ಶಬ್ದಗಳಿವೆ. ಮಲೆಯಾಳದಲ್ಲಿ ಕೊಱುಱಿ ಎಂದೂ ತುಳುವಿನಲ್ಲಿ ಕುತ್ತರಿ, ಕುತ್ತಿರಿ ಎಂದೂ ಪ್ರಯೋಗದಲ್ಲಿ ಇವೆ. ಆದರೆ ತುಳುವಿನಲ್ಲಿ ಆ ಶಬ್ದಕ್ಕೆ ಪುನುಗು ಬೆಕ್ಕು ಎಂದು ಅರ್ಥ. **ಬೆಕ್ಕು ಕಣ್ಮುಚ್ಚಿ ಹಾಲು ಕುಡಿಯುವುದನ್ನು ಬಲ್ಲುದಲ್ಲದೆ ಬೆನ್ನ ಮೇಲೆ ಬಂದು ಆಡಿಸುವ ಬಡಿಗೆಯಂ ಕಾಣದು** ಎಂಬ ಮತ್ತೊಂದು ಗಾದೆಯನ್ನು ಧರ್ಮಾಮೃತದ ನಯಸೇನನು ಉಪಯೋಗಿಸಿದ್ದಾನೆ. ಅರ್ಥವುಳ್ಳ ಗಾದೆ ಅದು.

**ಕೊನರು** ಎಂಬ ಕನ್ನಡ ಶಬ್ದಕ್ಕೆ ಕ್ರಿಯಾಪದವಾದರೆ ಚಿಗುರು ಬಿಡು, ಪಲ್ಲವಿಸು, ಮೊಳಕೆಯೊಡೆ ಎಂದರ್ಥ. ನಾಮಪದವಾದರೆ ಚಿಗುರು, ಕುಡಿ ಎಂದರ್ಥ. ಕೊನರು ಎಂಬ ರೂಪ ಹೊಸಗನ್ನಡದ್ದು. ಹಳಗನ್ನಡವಲ್ಲ. ಈ ಶಬ್ದ ವ್ಯಂಜನಾಂತವಾಗಿತ್ತು ಕೊನರ್ ಎಂದು. ಪಂಪಭಾರತದಲ್ಲಿ, **ಬೇಟದ ಕೊನರ್ ತಲೆದೋರ್ಪವೊಲಾಗ** (೪.೩೭) ಎಂದು ಬರುತ್ತದೆ. ಪರಿಶೀಲಿಸಿ. **'ಕೊರಡು ಕೊನರುವುದಯ್ಯ'** ಎಂಬ ರಚನೆಯನ್ನು ಗಮನಿಸಿ.

**ಕ್ರೋಡೀಕರಿಸು** ಇದು ಸಂಸ್ಕೃತದ ಕ್ರೋಡೀಕರಣ ಎಂಬ ಶಬ್ದದಿಂದ ಮಾಡಿಕೊಂಡಿರುವ ರೂಪ. ಕ್ರೋಡೀಕರಣ + ಇಸು = **ಕ್ರೋಡೀಕರಿಸು.** ಇದಕ್ಕೆ ಒಟ್ಟು ಸೇರಿಸು, ಸಂಗ್ರಹಗೊಳಿಸು, ವ್ಯವಸ್ಥೆಗೊಳಿಸು ಎಂದು ಅರ್ಥ. ಕ್ರೋಢೀಕರಿಸು ಎಂಬ ರೂಪ ತಪ್ಪು.

**ಕೈಂಕರ್ಯ** ಎಂಬುದು ಸಂಸ್ಕೃತದ ಶಬ್ದ. ಸಂಸ್ಕೃತದಲ್ಲಿ ಕಿಂಕರ ಎಂದರೆ ಸೇವಕ. ಕೈಂಕರ್ಯ ಎಂಬುದು ಸೇವಕನ ಭಾವ - ಸೇವಕನಾಗಿರುವುದು. ಸೇವೆಯನ್ನು ಮಾಡುವುದು.

**ಕೈ ಇಲ್ಲದೆ ಹೋದವನನ್ನು ಏನೆನ್ನುತ್ತಾರೆ?** ಕೈ ಇಲ್ಲದವನನ್ನು ವರ್ಣಿಸುವಾಗ 'ಅವನ ಕೈಕುಂಟು' ಎಂದು ಹೇಳುತ್ತಾರೆ. ಕನ್ನಡ ಭಾಷೆಯಲ್ಲಿ ಈ ವಿವರಣೆಗೆ ಬೇರೆ ಶಬ್ದವಿಲ್ಲ. ಸಂಸ್ಕೃತದಲ್ಲಿ ಕೂಡ ಪಂಗು ಎಂದರೆ ಕಾಲಿಲ್ಲದವನು. ಇಂಗ್ಲಿಷಿನಲ್ಲಿ ಕೂಡ Limp ಎಂಬ ಶಬ್ದಕ್ಕೆ ಕಾಲು ಊನವಾಗಿ ವಕ್ರವಾಗಿ ನಡೆ ಎಂದೇ ಅರ್ಥ. ಕೈಗೆ ಸಂಬಂಧಪಟ್ಟಂತೆ ಊನ ಎಂಬ ಶಬ್ದವನ್ನು ಹೆಚ್ಚಾಗಿ ಪ್ರಯೋಗಿಸುತ್ತಾರೆ. **ಚೊತ್ತ** ಎಂದರೆ ಕೈ ಸೊಟ್ಟಗೆ ಇರುವವನು. ಕೈ ಇಲ್ಲದೆ ಹೋದವನನ್ನು ಸಂಸ್ಕೃತದಲ್ಲಿ **ಕುಕರ, ಕುಣಿ** ಎಂದು ಕರೆಯುತ್ತಾರೆ.

ಅಮರದ ವಾಕ್ಯ ಹೀಗಿದೆ:-

*ಊರ್ಧ್ವಜ್ಞುರೂರ್ಧ್ವಜಾನುಃಸ್ಯಾತ್ ಸಂಜ್ಞುಸ್ಸಂಹತಜಾನುಕೇ*

*ಸ್ಯಾದೇಡೇ ಬಧಿರಃ ಕುಬ್ಜೇ ಗಡುಲಃ ಕುಕರೇ ಕುಣಿಃ॥*

ಕನ್ನಡದಲ್ಲಿ ಕುಣಿ ಎಂಬ ಶಬ್ದವನ್ನು ಉಪಯೋಗಿಸಬಹುದು.

**ಕೈದಿ-ಖೈದಿ** ಇದು ಅರಬ್ಬಿ ಶಬ್ದ. ಕೈದಿ ಎಂಬುದು ಮೂಲರೂಪ. ಕನ್ನಡದಲ್ಲಿ ಕೈದಿ ಸರಿ. ಆದರೆ ಕೆಲವು ವೇಳೆ ಇಂಥ ಶಬ್ದಗಳಿಗೆ ಕನ್ನಡದಲ್ಲಿ ಮಹಾಪ್ರಾಣಗಳನ್ನು ಸೇರಿಸಿ ಖೈದಿ, ಖಾಯಂ, ತಾರೀಖು ಮುಂತಾಗಿ ಬರೆಯುತ್ತಾರೆ. ಎಲ್ಲಕಡೆ ಅಲ್ಪಪ್ರಾಣವೇ ಸರಿ.

**ಕೈ ಬೆರಳುಗಳಿಗೆ ಏನು ಹೆಸರು?** ಹೆಬ್ಬೆರಳಿಗೆ - **ಅಂಗುಷ್ಠ,** ತೋರು ಬೆರಳಿಗೆ - **ತರ್ಜನೀ,** ಮೂರನೆಯ ಬೆರಳಿಗೆ - **ಮಧ್ಯಮಾ,** ನಾಲ್ಕನೆಯದಕ್ಕೆ - **ಅನಾಮಿಕಾ,** ಕಿರುಬೆರಳಿಗೆ - **ಕನಿಷ್ಠಿಕಾ,** ಹೀಗೆ ಹೆಸರುಗಳಿವೆ. ಅನಾಮಿಕ ಎಂಬ ಶಬ್ದಕ್ಕೆ ಶ್ಲೇಷಾರ್ಥವನ್ನು ಮಾಡಿ ಕಾಳಿದಾಸನ ಹಿರಿಮೆಯನ್ನು ವರ್ಣಿಸಿರುವ ಶ್ಲೋಕ ನಿಮಗೆ ನೆನಪಿರಬೇಕು. "**ಪುರಾ ಕವೀನಾಂ ಗಣನಾ ಪ್ರಸಂಗೇ ಕನಿಷ್ಠಿಕಾಧಿಷ್ಠಿತ ಕಾಳಿದಾಸಾ ಅದ್ಯಾಪಿ ತತ್ತುಲ್ಯ ಕವೇರಭಾವಾತ್ ಅನಾಮಿಕಾ ಸಾರ್ಥವತೀ ಬಭೂವ.**" ಹಿಂದೆ ಶ್ರೇಷ್ಠರಾದ ಕವಿಗಳನ್ನು ಎಣಿಸಲು ಮೊದಲು ಮಾಡಿ ಕಿರುಬೆರಳನ್ನು ಮಡಿಚಿ ಕಾಳಿದಾಸ ಎಂದು ಹೇಳಲಾಯಿತು. ಮುಂದಿನದಾಗಿ ಅಷ್ಟೇ ಶ್ರೇಷ್ಠ ಕವಿಯನ್ನು ಹೆಸರಿಸುವುದಕ್ಕೆ ಯಾರೂ ಸಿಗಲಿಲ್ಲ. ಆದುದರಿಂದ ಕಿರುಬೆರಳಿನ ಪಕ್ಕದ ಬೆರಳಿಗೆ ಅನಾಮಿಕಾ - ಹೆಸರಿಲ್ಲದ್ದು ಎಂಬ ಹೆಸರು ಉಚಿತವಾಯಿತು ಎಂಬರ್ಥದ ಶ್ಲೋಕ ಎಲ್ಲರಿಗೂ ನೆನಪಿನಲ್ಲಿದೆ.

**ಕೈಯ್ಯನ್ನು ಕೈಯನ್ನು** ಕೈ ಎಂಬ ನಾಮಪದಕ್ಕೆ ಅನ್ನು ಎಂಬ ದ್ವಿತೀಯಾ ವಿಭಕ್ತಿಯ ಪ್ರತ್ಯಯವನ್ನು ಸೇರಿಸಬೇಕಾದ ಸಂದರ್ಭ ಇದು. ಕೈ + ಅನ್ನು = ಕೈಯನ್ನು. ಇದು ಸರಿಯಾದ ಶಬ್ದ. ವಿದ್ಯಾರ್ಥಿಗೆ ಉಚ್ಚಾರಣೆ ಮಾಡುವಾಗ ಐತ್ವ ಮತ್ತು ಯ ಎರಡೂ ಒಟ್ಟಿಗೆ ಬರುವುದರಿಂದ ಯಕ್ಕೆ ಒತ್ತು ಕೊಡಬೇಕೆಂಬಂತೆ ಭಾಸವಾಗುತ್ತದೆ. ಆದರೆ ಅಲ್ಲಿ ಅನ್ನು ಎನ್ನುವ ಭಾಗದಲ್ಲಿರುವ ಅ ಕಾರಕ್ಕೆ ಯ ಆಗಮವಾಗಿದೆ. ಕೈ + (ಅ) ಯನ್ನು = ಕೈಯನ್ನು. ಹೀಗಿರುವಾಗ ಬೇರೊಂದು '್ಯ' ಎಲ್ಲಿಂದ ಬರುತ್ತದೆ? ಇದು ಅನಾವಶ್ಯಕವಲ್ಲವೇ? ಬೇರೊಂದು ಉದಾಹರಣೆಯನ್ನು ನೋಡಿ ತಲೆ + ಅನ್ನು = ತಲೆಯನ್ನು. ಇಲ್ಲಿ ಯ ಕಾರಕ್ಕೆ '್ಯ' ಒತ್ತನ್ನು ಕೊಡಬೇಕೆ?

**ಕೈವಾಡ** ಶಬ್ದಕ್ಕೆ ೧. ಕೈಚಳಕ, ಕುಶಲ ಕೈಗಾರಿಕೆ, ಚಾಕಚಕ್ಯ ಎಂಬ ಅರ್ಥಗಳಿವೆ. ೨. ಹಸ್ತಕ್ಷೇಪ interference ಎಂಬ ಅರ್ಥವೂ ಇದೆ. ಈ ಶಬ್ದ ಹೇಗೆ ಬಂತು ಎಂದು ಹೇಳುವುದು ಕಷ್ಟ. ಕೈ +ಓಟ =ಕೈವೋಟ, ಕೈವಾಟ, ಕೈವಾಡ ಎಂದು ಆಗಿರಬಹುದು ಎಂದು ಒಂದು ಊಹೆ.

**ಕೈಸಾಲೆ** ಕೈಸಾಲೆ ಎಂದರೆ ಮನೆಯ ಮುಂದಿನ ಜಗಲಿ. ಇದನ್ನು ಕೈಸಾರೆ ಎಂದೂ ಕೆಲವು ಪ್ರದೇಶಗಳಲ್ಲಿ ಕರೆಯುತ್ತಾರೆ. ಹಳೆಯ ದೇವಸ್ಥಾನದ ಸುತ್ತಲೂ ಇರುವ ಕೈಸಾಲೆಗೆ ಮೇಲೆ ಇಳಿಜಾರಾದ ಚಾವಣಿ ಇರುತ್ತಿತ್ತು ಎಂಬ ವಾಕ್ಯವನ್ನು ಮನನ ಮಾಡಿ. ಕೈ - ಕೆಯ್ ಎಂಬ ಎರಡು ರೂಪಗಳಿಗೂ ಹಸ್ತ ಎಂಬ ಅರ್ಥವಿದೆ. ಕೆಯ್ +ಸಾಲೆ =ಕೈಸಾಲೆ ಆಗಿದೆ. ಅದಕ್ಕೆ ಮನೆಯ ಮುಂದಿನ ಆದರೆ ಮನೆಗೆ ಸೇರಿದ ವಾಸದ ಸ್ಥಳ ಎಂದರ್ಥ. ಇಂಗ್ಲಿಷಿನ Veranda.

**ಕೊಗ್ಗಿ** ಇದು ದೇಶ್ಯ ಶಬ್ದ. ಕಿವಿಯೊಳಗಿನ ಮೇಣದಂತಹ ಕಿಟ್ಟ, ಗುಗ್ಗೆ ಎಂದರ್ಥ.

**ಕೊಟ್ಟೋನು ಕೋಡಂಗಿ ಇಸ್ಕೊಂಡೋನು ವೀರಭದ್ರ** ಈ ಗಾದೆ ಸಮಾಜದ ಜನರಲ್ಲಿ ಎರಡು ಗುಂಪುಗಳಿಗೆ ಸೇರಿದ ವ್ಯಕ್ತಿಗಳನ್ನು ಪ್ರತಿನಿಧಿಸುತ್ತದೆ. ತಿಳಿವಳಿಕೆಯಿಲ್ಲದವರನ್ನು ಚಾಣಾಕ್ಷರು ಯಾವಾಗಲೂ ಶೋಷಣೆ ಮಾಡುತ್ತಲೇ ಇರುತ್ತಾರೆ. ಹೀಗಿರುವುದರಿಂದ ಈ

ಎರಡು ಗುಂಪಿಗೆ ಸೇರುವ ವ್ಯಕ್ತಿಗಳ ನಡುವೆ ವ್ಯತ್ಯಾಸ ಹೆಚ್ಚುತ್ತಲೇ ಹೋಗುತ್ತದೆ. ಶೋಷಣೆಗೆ ಒಳಗಾದವನು ತನ್ನದಾದದ್ದನ್ನು ಕಳೆದುಕೊಳ್ಳುತ್ತಾನೆ. ಹಾಗೆ ಕಳೆದುಕೊಂಡಾಗ ಇತರರಿಗೆ ಅವನು ಕೋಡಂಗಿಯಾಗಿ ಕಾಣುತ್ತಾನೆ. ಅಂದರೆ ಶುದ್ಧಮೂರ್ಖನಂತೆ ಕಾಣುತ್ತಾನೆ. ಏನಾದರೂ ಮಾಡಿ ಈ ಮೂರ್ಖನು ಕಳೆದುಕೊಂಡದ್ದನ್ನು ಅವನ ವಶಕ್ಕೆ ಹಿಂದೆಬರುವಂತೆ ಮಾಡೋಣವೆಂದರೆ ತೆಗೆದುಕೊಂಡವನು ವೀರಭದ್ರ. ವೀರಭದ್ರ ದಕ್ಷನ ಯಜ್ಞವನ್ನು ನಾಶಮಾಡಲು ಅವತರಿಸಿದ ಶಿವಗಣಕ್ಕೆ ಸೇರಿದ ಪ್ರಮಥ. ಏನಾದರೂ ಅವನ ರೌದ್ರ ಸ್ವರೂಪವನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಇಂಥ ಪರಿಸ್ಥಿತಿ ಆಗಿಂದಾಗ ಉಂಟಾಗುತ್ತದೆ ಸಮಾಜದಲ್ಲಿ. ಅದನ್ನು ಸ್ಪಷ್ಟವಾಗಿ ಚಿತ್ರಿಸುವ ಗಾದೆ ಇದು. ಜನಸಾಮಾನ್ಯರಲ್ಲಿ ಆಗಿಂದಾಗ ಪ್ರಯೋಗವಾಗುವ ಜನಪ್ರಿಯ ಗಾದೆ. ಗ್ರಾಮ್ಯ ಭಾಷೆಯಲ್ಲಿ ಇದೇ ಗಾದೆ, **ಕೊಟ್ಟೋನು ಕೋಡಂಗಿ ಇಸ್ಕೊಂಡೋನು ಈರಬದ್ರ** ಎಂದಾಗಿದೆ.

**ಕೊಡುಗೆ** ಹಿಂದೆ ರಾಜರು, ಪಾಳೆಯಗಾರರು ತಮಗೆ ಮೆಚ್ಚಿಗೆ ಬಂದ ಪರಾಕ್ರಮಿಗಳು, ವಿದ್ವಾಂಸರು, ಸಂಗೀತಗಾರರು ಮುಂತಾದವರಿಗೆ ಬಹುಮಾನವಾಗಿ ಕೊಡುತ್ತಿದ್ದ ಗ್ರಾಮ, ಜಮೀನು ಮುಂತಾದುವು. ಈ ಶಬ್ದ ಕೊಡಿಗೆ ಎಂಬ ರೂಪದಲ್ಲಿಯೂ ಪ್ರಯೋಗದಲ್ಲಿದೆ.

**ಕೊತ್ವಾಲ** ಈ ಶಬ್ದಕ್ಕೆ ಪಾರಸಿ ಭಾಷೆಯ ಕೋತವಾಲ ಮೂಲ. ತುರ್ಕಿ ಭಾಷೆಯಲ್ಲಿ ಕೋತಾಯಿಲ್ ಎಂಬ ಶಬ್ದವಿದೆ. ಸಂಸ್ಕೃತದಲ್ಲಿ ಕೋಷ್ಠಪಾಲ ಎಂದೂ ಪ್ರಾಕೃತದಲ್ಲಿ ಕೋಟ್ಟವಾಲ ಎಂದೂ ಪ್ರಯೋಗಗಳಿವೆ. ಹಿಂದೆ ಇದೂ ಕೂಡ ದುರ್ಗದ ಸೇನಾಧಿಕಾರಿಗೆ ಉಪಯೋಗವಾಗುತ್ತಿದ್ದ ಶಬ್ದ. ಈಗ ಪೊಲೀಸ್ ಅಧಿಕಾರಿಗೆ ಅನ್ವಯವಾಗುತ್ತ ಇದೆ. ಕೆಲವು ಕಡೆಗಳಲ್ಲಿ ಮುಸಾಫಿರ್ ಬಂಗಲೆಗಳನ್ನು ನೋಡಿಕೊಳ್ಳುವ ಅಧಿಕಾರಿಗೂ ಅನ್ವಯವಾಗುತ್ತ ಇದೆ. ಈಚೆಗೆ ಇದರ ಪ್ರಯೋಗ ಕಡಿಮೆಯಾಗುತ್ತಾ ಬಂದಿದೆ.

**ಕೊರತೆ** ಕೊರತೆ ಶಬ್ದಕ್ಕೆ ೧. ಕಡಮೆ, ೨. ಕುಂದು, ಕಳಂಕ ಎಂಬ ಅರ್ಥಗಳಿವೆ. **ಸುಣ್ಣದ ಕೊಱತೆಗೆ ಬೆಣ್ಣೆಯಂ ಬಳಸುವಂತೆ** ಎಂಬ ಹರಿಹರನ ಮಾತಿದೆ. **ಪುಳಿವಿಳಿದು ರಸವನೆ ಕೆಡಿಸಿದೊಡೆ ಕರೆದ ಸುರಭಿಗಪ್ಪುದೆ ಕೊಱತೆ** ಎಂದು ಜೈಮಿನಿ ಭಾರತದಲ್ಲಿದೆ. ಈ ಶಬ್ದದ ಮೂಲರೂಪ **ಕೊಱತೆ**. ಹಳಗನ್ನಡದಲ್ಲಿ. ಇದು ದೇಶ್ಯ ಶಬ್ದ. ಮಲಯಾಳದಲ್ಲಿ ಕುಱುತು, ಕುಱೆಯತು, ತುಳುವಿನಲ್ಲಿ ಕೊರತಿ, ಕೊರತೆ ಎಂಬ ಜ್ಞಾತಿ ಶಬ್ದಗಳಿವೆ.

**ಕೊರಳು** ಕನ್ನಡದ ಕೊರಳು ಎಂಬ ಶಬ್ದದ ಮೂಲರೂಪ ಕೊರಲ್. ಮುಂದೆ ಅದೇ ಕೊರಲು, ಕೊರಳು ಆಗಿದೆ. ಇದಕ್ಕೆ ಕತ್ತು ಎಂದು ಅರ್ಥ. ಕೊರಳು ಪಟ್ಟಿ ಎಂಬ ಶಬ್ದವನ್ನು ನೋಡಿ. ಸಂಗೀತಕ್ಕೆ ಆಕೆಯ ಕೊರಳು ಹೇಳಿ ಮಾಡಿಸಿದಂತಿದೆ ಎಂಬ ವಾಕ್ಯದಲ್ಲಿ ಕೊರಳು ಎಂದರೆ ಶಾರೀರ, ಕಂಠದ ಸಾಮರ್ಥ್ಯ ಎಂದು ಅರ್ಥ. ಕೊರಲ್ ಶಬ್ದಕ್ಕೆ ಗಂಟಲಿನಿಂದ ಹೊರಹೊಮ್ಮುವ ಮಾತು ಎಂಬ ಅರ್ಥದಲ್ಲಿಯೂ ಕವಿಗಳು ಉಪಯೋಗಿಸಿದ್ದಾರೆ. **ಇರಿವ ಬೆಡಂಗನ ಕೊರಲೊಳ್ ಕೊಂಕುಂಟೆ?** (ರನ್ನನ ಗದಾಯುದ್ಧ ೨-೬).

**ಕೊಲ್ಡು** ಇದು ಕೊರಡು ಎಂಬ ಶಬ್ದದ ಗ್ರಾಮ್ಯ ರೂಪ. ಒಣಗಿದ ಮರದ ಗಟ್ಟಿಯಾದ ಕೊಂಬೆಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಯಾವ ಭಾವನೆಗಳಿಗೂ ಸ್ಪಂದಿಸದ ಮಾನವನನ್ನು ಕೊರಡು, ಒಣ ಕೊರಡು ಎಂದು ಕರೆಯುವುದು ಉಂಟು.

**ಕೊಸರು** ಇದು ಕನ್ನಡದ ಶಬ್ದ. ಇದು ಕ್ರಿಯಾಪದವಾದಾಗ 'ಬಿಗಿಯಾದ ಹಿಡಿತದಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡುವುದು' ಎಂದರ್ಥ. ತೆಲುಗಿನಲ್ಲಿಯೂ ಇದಕ್ಕೆ ಜ್ಞಾತಿ ಶಬ್ದವಿದೆ. 'ವ್ಯಾಪಾರ ಮಾಡುವಾಗ ಸ್ವಲ್ಪ ಹೆಚ್ಚಾಗಿ ಬೇಕೆಂದು ಬಯಸುವ ಪ್ರಮಾಣ' - ಇದು ನಾಮಪದದ ಅರ್ಥ. 'ಸ್ವಲ್ಪ ಕೊಸರು ಹಾಕು' ಎಂಬ ವಾಕ್ಯವನ್ನು ನೋಡಿ. ಈ ಎರಡೂ ಒಂದೇ ಮೂಲದಿಂದ ಬಂದ ಅರ್ಥಗಳು.

**ಕೊಳಲು** ಶಬ್ದಕ್ಕೆ ಮೂಲ, ಹಳಗನ್ನಡದ ಕೊಟಿಲ್. ಇದಕ್ಕೆ ಇರುವುದು ಒಂದೇ ಅರ್ಥ. ಬಿದಿರುಕೊಳವೆಯಿಂದ ಮಾಡಿದ, ಊದಿ ಉಸಿರಿನಿಂದ ಧ್ವನಿ ಹೊರಡಿಸಲು ಅನುಕೂಲವಾದ ಸಂಗೀತದ ವಾದ್ಯ, ವೇಣು, ಗೋಪಾಲ ಕೃಷ್ಣನ ಮೆಚ್ಚಿನ ವಾದ್ಯ. 'ನಿಲ್ಲಿಸದಿರು **ವನಮಾಲೀ ಕೊಳಲಗಾನವ'** ಎಂದು ಗೋಪಿಕೆಯರ ಕೊರಳಿನಲ್ಲಿ ಹಾಡಿಸಿದ್ದಾರೆ ಪು. ತಿ. ನರಸಿಂಹಾಚಾರ್ಯರು, ಗೋಕುಲ ನಿರ್ಗಮನ ಗೀತರೂಪಕದಲ್ಲಿ.

**ಕೋಂ** ಕೋಂ ಎಂಬುದು ಅರಬ್ಬೀ ಭಾಷೆಯ ಶಬ್ದ. ಇದಕ್ಕೆ ಇಂಥವನ ಹೆಂಡತಿ ಅಥವಾ ವಿಧವೆ ಎಂದು ಅರ್ಥ. ಇದನ್ನು ಭೂಮಿ, ಆಸ್ತಿ ಇತ್ಯಾದಿ ವ್ಯವಹಾರಗಳಲ್ಲಿ ಹಿಂದೆ ಬಳಸುತ್ತಿದ್ದರು. ಈಗ ಈ ಬಗೆಯ ಉಪಯೋಗ ನಿಂತಿದೆ.

**ಕೋಮಲೆ** ಇದು ಸಂಸ್ಕೃತದ ಶಬ್ದ. ಇದಕ್ಕೆ ಎಳಸಾದ, ಮೃದುವಾದ, ಹಿತವಾದ, ಆಕರ್ಷಕವಾದ, ಒಪ್ಪಿಗೆಯಾಗುವ, ಬೇಗ ಬಾಡುವ ಸ್ವಭಾವವುಳ್ಳ ಹೆಂಗಸು ಎಂದರ್ಥ. ಕೋಮಲ ವ್ಯಕ್ತಿಗೆ ಸರಿಯಾದ ಹೆಣ್ಣು.

**ಕೋರಂ** ಇದನ್ನು ನಾವು ಇಂಗ್ಲಿಷ್ ಭಾಷೆಯ Quorum ಎಂಬ ಶಬ್ದದಂತೆಯೇ ಉಪಯೋಗಿಸುತ್ತೇವೆ. ಇದು ಪಾರಿಭಾಷಿಕ ಪದ. ಇಂಗ್ಲಿಷಿಗೆ ಇದು ಲ್ಯಾಟಿನ್ ಭಾಷೆಯಿಂದ ಬಂದಿದೆ. ನಮ್ಮಲ್ಲಿ ಹೇಗೆ ಆಡಳಿತದಲ್ಲಿ ಮೊಗಲರ ಕಾಲದಿಂದ ಹಿಡಿದು ಉರ್ದು, ಪಾರಸಿ ಮತ್ತು ಅರಬ್ಬೀ ಶಬ್ದಗಳು ಹೆಚ್ಚಾಗಿ ಪ್ರಯೋಗಕ್ಕೆ ಬಂದುವೋ ಹಾಗೇ ಇಂಗ್ಲೆಂಡಿನಲ್ಲಿ ಅಂಥ ಎಲ್ಲ ಶಬ್ದಗಳೂ ಲ್ಯಾಟಿನ್ ಭಾಷೆಯಿಂದಲೇ ಆಮದಾದುವು. ಕೋರಂ ಅಂದರೆ ಚಾರಿತ್ರಿಕವಾಗಿ ಒಂದು ನ್ಯಾಯಾಲಯದಲ್ಲಿ ಒಂದು ಮೊಕದ್ದಮೆಯಲ್ಲಿ ತೀರ್ಪು ನೀಡಬೇಕಾದರೆ ಯಾವುದೋ ಒಂದು ಸಂಖ್ಯೆಗಿಂತ ಕಡಿಮೆಯಲ್ಲದ ನ್ಯಾಯಮೂರ್ತಿಗಳು ಇರಲೇಬೇಕೆಂಬ ನಿಯಮವಿತ್ತು. ಆ ಸಂಖ್ಯೆಗೆ ಕೋರಂ ಎಂದು ಹೆಸರು. ಈಚೆಗೆ ಎಲ್ಲ ಶಾಸನ ಸಭೆಗಳಲ್ಲಿಯೂ ಒಂದು ನಿರ್ದಿಷ್ಟ ಸಂಖ್ಯೆಯಷ್ಟು ಸದಸ್ಯರು ಇಲ್ಲದಿದ್ದರೆ ಆ ಸಭೆಯು ಕಾರ್ಯಕಲಾಪಗಳನ್ನು ಮುಂದುವರಿಸುವಂತಿಲ್ಲ. ಹಾಗೆ ಮಾಡಿದರೆ ಅದು ಅಸಿಂಧುವಾಗುತ್ತದೆ. ಶಾಸನ ಸಭೆಗಳಷ್ಟೇ ಅಲ್ಲ. ಈಗ ಯಾವ ಸಂಸ್ಥೆಯ ಸಭೆಗಳಲ್ಲಿಯೂ ಇಂಥ ಕೋರಂನ ಅಗತ್ಯ ಇದ್ದೇ ಇದೆ. ಇದು ನ್ಯಾಯವಾಗಿ ಕಾರ್ಯವನ್ನು ನಿರ್ವಹಿಸಲು ಬೇಕಾದ ಒಂದು ಮಾರ್ಗ. ಅದನ್ನು ಕಾಪಾಡಬೇಕು.

**ಕೋಳಿ** ಕೋಳಿ ಶಬ್ದಕ್ಕೆ ಹುಂಜ ಎನ್ನುವ ಅರ್ಥವೂ ಇದೆ. ಅದು ಜಾತಿವಾಚಕ. ಅದು ಒಂದು ಪಕ್ಷಿ ಜಾತಿ. ಹೆಣ್ಣು ಕೋಳಿ ಗಂಡು ಕೋಳಿ ಎಂಬ ಪ್ರಯೋಗಗಳನ್ನು ನೋಡಿ. ಕುಕ್ಕುಕೂ ಎಂದು ಕೋಳಿ ಕೂಗಿದುದಾಗಳ್ ಎಂದು (ಕಾವ್ಯಾವಲೋಕನ ೧೧) ಕವಿ ಪ್ರಯೋಗವೇ ಇದೆ. ಕೋಳಿ ಅಂಕ ಎನ್ನುವುದು ಹುಂಜಗಳ ಕಾಳಗಕ್ಕೆ ಇರುವ ಹೆಸರು. ಅದು ಸರಿಯಾದ ಪ್ರಯೋಗವೇ ಆಗಿದೆ.

**ಕೌತುಕ, ಕುತುಕ, ಕುತೂಹಲ** ಈ ಮೂರು ಶಬ್ದಗಳಿಗೂ ಒಂದೇ ಅರ್ಥ. ಅದು ತಿಳಿದುಕೊಳ್ಳಬೇಕೆಂಬ ಅಪೇಕ್ಷೆ. Curiosity ಎಂಬ ಇಂಗ್ಲಿಷ್ ಶಬ್ದಕ್ಕೆ ಸಮಾನ. ಇದು ಸ್ತ್ರೀಯರ ಸ್ವಭಾವಜನ್ಯವಾದ ವಿಲಾಸವೆಂದು ಕಾವ್ಯ ಮೀಮಾಂಸೆಯಲ್ಲಿ ವರ್ಣನೆಗಳಿವೆ.

**ಕೌದಿ** ಎಂಬುದು ಕವುಂದಿ ಎಂಬುದರ ಪರ್ಯಾಯ. ಈ ಶಬ್ದಕ್ಕೆ ಅನೇಕ ಇತರ ಪರ್ಯಾಯರೂಪಗಳಿವೆ. ಕವದಿ, ಕವುದಿ, ಕೌಂದಿ, ಇತ್ಯಾದಿ. ಇದಕ್ಕೆ ತುಂಡುತುಂಡಾದ ಬಟ್ಟೆಗಳನ್ನು ಹೊಲಿದುಮಾಡಿದ ಕಂಥೆ ಎಂದರ್ಥ. ಇದನ್ನು ಹಚ್ಚಡವಾಗಿ ಉಪಯೋಗಿಸುತ್ತಾರೆ. ಹಸು ಮತ್ತು ಎತ್ತುಗಳಿಗೆ ಮೈಮೇಲೆ ಹೊದಿಸುವುದಕ್ಕೂ ಉಪಯೋಗಿಸುತ್ತಾರೆ. **ಎತ್ತು ಹಾರುವುದಕ್ಕಿಂತ ಮುಂಚೆ ಕವುದಿ ಹಾರಿತು** ಎಂದು ಒಂದು ಗಾದೆಯೇ ಇದೆ. ಇದಕ್ಕೆ ಸಾಮಾಜಿಕವಾಗಿ ಆಲಂಕಾರಿಕ ಅರ್ಥವೂ ಇದೆ. ಒಬ್ಬ

ದಣಿ. ಅವನಿಗೊಬ್ಬ ತೈನಾತಿ. ದಣಿ ಇತರರ ಮೇಲೆ ಕೋಪಿಸಿಕೊಳ್ಳುವುದಕ್ಕೆ ಮುಂಚೆಯೇ ತೈನಾತಿ ದರ್ಪ ತೋರಿಸಿದಾಗ ಈ ಗಾದೆಯನ್ನು ಅನ್ವಯಿಸುತ್ತಾರೆ.

**ಕೌನ್ಸಿಲ್ - ಬೋರ್ಡು - ಕಮಿಟಿ** Council = ಪರಿಷತ್ತು. ಈ ಶಬ್ದ ಸರಿಯಾದ ಮಾರ್ಗವನ್ನು ಸೂಚಿಸಲೆಂದು ನೇಮಿಸಲಾದ ಕೆಲವು ಸದಸ್ಯರ ಗುಂಪು. ಇದನ್ನು ಸಲಹೆಗಾರರ ಸಮಿತಿ ಎಂದು ಕರೆಯಬಹುದು. ಆದರೆ ಮಂಡಳಿ ಎಂದು ಈಗ ಚಲಾವಣೆಯಲ್ಲಿದೆ. Board ಎಂಬುದು ಯಾವುದಾದರೂ ಕಾರ್ಯದ ಮೇಲ್ವಿಚಾರಣೆ ನಡೆಸುವ ಅಧಿಕಾರಿಗಳ ಗುಂಪು. Committee ಎಂಬುದು ಯಾವುದಾದರೂ ನಿರ್ದಿಷ್ಟ ಕಾರ್ಯವನ್ನು ನೆರವೇರಿಸಲು ಆರಿಸುವ ಸದಸ್ಯರ ಗುಂಪು. ಇದು ಇಂಗ್ಲಿಷ್ ಭಾಷೆಯಲ್ಲಿ ಈ ಶಬ್ದಗಳನ್ನು ಉಪಯೋಗಿಸುವ ಕ್ರಮ. ಕನ್ನಡದಲ್ಲಿ ಈ ಎಲ್ಲ ಕಾರ್ಯಗಳನ್ನು ನಡೆಸುವ ಗುಂಪುಗಳಿಗೆ ಹೆಚ್ಚುಕಡಿಮೆಯಿಲ್ಲದೆ ಸಮಿತಿ, ಮಂಡಳಿ ಎಂಬ ಶಬ್ದಗಳನ್ನು ಉಪಯೋಗಿಸಲಾಗುತ್ತಿದೆ. Board ಎಂಬುದಕ್ಕೆ ಮಂಡಳಿ ಎಂದೂ Committee ಗೆ ಸಮಿತಿ ಎಂದೂ ಕರೆಯಬಹುದು. ಈ ಬಗೆಯ ನಿರ್ಧಾರಗಳನ್ನು ಆಡಳಿತ ಕೈಪಿಡಿಗಳಲ್ಲಿ ಸೇರಿಸಿದ್ದಾರೆ. ಸರ್ಕಾರದ ಅಧಿಕಾರಿಗಳು ಹಾಗೆಯೇ ಉಪಯೋಗಿಸಬೇಕೆಂಬ ನಿರ್ಧಾರ ಕೈಗೊಳ್ಳಬೇಕು. ಅಲ್ಲಿಯ ತನಕ ಈ ಗೊಂದಲ ಮುಂದವರಿಯುತ್ತಲೇ ಇರುತ್ತದೆ.

**ಕೌರವರು-ಪಾಂಡವರು** ಕುರು ವಂಶಕ್ಕೆ ಮೂಲ ಪುರುಷನು ವಿಷ್ಣು. ಹೀಗೆ ಪ್ರಾರಂಭವಾದ ವಂಶದಲ್ಲಿ ಕುರು ಎಂಬ ಹೆಸರಿನ ಮಹಾ ಪ್ರಸಿದ್ಧನಾದ ಒಬ್ಬ ಚಕ್ರವರ್ತಿ ಇದ್ದನು. ಅವನಿಂದ ಈ ವಂಶಕ್ಕೆ ಕುರುವಂಶ ಎಂದು ಹೆಸರು ಬಂತು. ಕುರು ಆದ ಮೇಲೆ ೧೨ ಜನ ಚಕ್ರವರ್ತಿಗಳು ರಾಜ್ಯವಾಳಿದರು. ಆ ಬಳಿಕ ಬಂದವನು ಶಂತನು. ಅವನಿಗೆ ಇಬ್ಬರು ಪತ್ನಿಯರು ಗಂಗಾ ಮತ್ತು ಸತ್ಯವತಿ. ಗಂಗೆಯ ಮಗ ಭೀಷ್ಮ ಸತ್ಯವತಿಗೆ ಶಂತನುವಿನ ಜತೆ ಮದುವೆಯಾಗುವುದಕ್ಕೆ ಮುಂಚೆಯೇ ಪರಾಶರನಿಂದ ವ್ಯಾಸನೆಂಬ ಮಗನು ಹುಟ್ಟಿದನು. ಸತ್ಯವತಿಯಲ್ಲಿ ಶಂತನುವಿನ ಕಡೆಯಿಂದ ಚಿತ್ರಾಂಗದ ಮತ್ತು ವಿಚಿತ್ರವೀರ್ಯ ಎಂಬಿಬ್ಬರು ಮಕ್ಕಳಾದರು. ಚಿತ್ರಾಂಗದನು ಯುದ್ಧವೊಂದರಲ್ಲಿ ಮಡಿದನು. ವಿಚಿತ್ರವೀರ್ಯನಿಗೆ ಭೀಷ್ಮನು ಅಂಬಿಕೆ ಅಂಬಾಲಿಕೆ ಎಂಬ ಇಬ್ಬರು ಕಾಶೀರಾಜನ ಕನ್ಯೆಯರನ್ನು ತಂದು ಮದುವೆ ಮಾಡಿದನು. ವಿಚಿತ್ರವೀರ್ಯನೂ ಸ್ವಲ್ಪ ಸಮಯದಲ್ಲಿಯೇ ಮರಣ ಹೊಂದಿದನು. ಭೀಷ್ಮನು ಬ್ರಹ್ಮಚಾರಿಯಾಗಿರುವೆನೆಂದು ಪ್ರತಿಜ್ಞೆ ಮಾಡಿದ್ದುದರಿಂದ ಕುರುವಂಶಕ್ಕೆ ಮುಂದೆ ಬೆಳೆಯಲು ಅವಕಾಶವಿಲ್ಲದಂತಾಯಿತು. ಆಗ ಸತ್ಯವತಿಯು ವ್ಯಾಸನಿಗೆ ಅಂಬಿಕೆ ಅಂಬಾಲಿಕೆಯರಲ್ಲಿ ಮಕ್ಕಳನ್ನು ಪಡೆಯಬೇಕೆಂದು ಆಜ್ಞಾಪಿಸಿದಳು.

ಹಾಗೆ ಅಂಬಿಕೆಯಲ್ಲಿ ಹುಟ್ಟಿದವನು ಧೃತರಾಷ್ಟ್ರ, ಅಂಬಾಲಿಕೆಯಲ್ಲಿ ಹುಟ್ಟಿದವನು ಪಾಂಡು. ವ್ಯಾಸನೊಡನೆ ಸಂಭೋಗಿಸಬೇಕಾದಾಗ ಅಸಹ್ಯದಿಂದ ಅಂಬಿಕೆಯು ಕಣ್ಣು ಮುಚ್ಚಿದ್ದರಿಂದ ಧೃತರಾಷ್ಟ್ರನು ಕುರುಡಾಗಿ ಹುಟ್ಟಿದನು. ಅಂಥದೇ ಸಮಯದಲ್ಲಿ ಅಂಬಾಲಿಕೆಯು ವ್ಯಾಸನ ಕುರೂಪವನ್ನು ಕಂಡು ಬಿಳಿಚಿಕೊಂಡಳು. ಆದರಿಂದ ಪಾಂಡು ಶ್ವೇತವರ್ಣನಾದನು. ಇಲ್ಲಿಯವರೆಗೆ ಇವರೆಲ್ಲರೂ ಕುರುವಂಶದವರಾದುದರಿಂದ ಕೌರವರೇ ಆದರು. ಇಲ್ಲಿಂದ ಮುಂದೆ ಧೃತರಾಷ್ಟ್ರನ ಮಕ್ಕಳಿಗೆ ಕೌರವರೆಂದೇ ಹೆಸರಾಯಿತು. ಆದರೆ ಪಾಂಡುವು ತನ್ನ ಪತ್ನಿಯರೊಡನೆ ಲೈಂಗಿಕ ಸಂಬಂಧವನ್ನು ಪಡೆದರೆ ಸಾಯುವುದಾಗಿ ಶಾಪವಿತ್ತು. ಆದ್ದರಿಂದ ಕುಂತಿಯೂ ಮಾದ್ರಿಯೂ ಪಾಂಡುವಿನ ಸೂಚನೆಯಂತೆ ದೇವತೆಗಳನ್ನು ಪ್ರಾರ್ಥಿಸಿ ಮಕ್ಕಳನ್ನು ಪಡೆದರು. ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವ ಇವರು ಹೀಗೆ ಕೌರವರಿಂದ ಬೇರೆಯಾಗಿ ಪಾಂಡವರಾದರು.

ಧೃತರಾಷ್ಟನಿಗೆ ಗಾಂಧಾರಿಯಲ್ಲಿ ೧೦೧ ಜನ ಮಕ್ಕಳು ಹುಟ್ಟಿದರು. ಗಾಂಧಾರಿ ತನಗಿಂತ ಮುಂಚೆ ಕುಂತಿಯು ತಾಯಿಯಾದಳೆಂದು ತನ್ನ ಗರ್ಭವನ್ನು ಕಿವುಚಿ ಹೊರತಂದಳು. ಆಗ ವ್ಯಾಸನು ಬಂದು ಹೊರಬಂದ ಮಾಂಸದ ಪಿಂಡವನ್ನು ನೂರೊಂದು ಭಾಗ ಮಾಡಿ ಮಡಕೆಯಲ್ಲಿ ಗುಪ್ತವಾಗಿ ರಕ್ಷಣೆ ಮಾಡುವಂತೆ ಹೇಳಿ ಹೊರಟುಹೋದನು. ಹೀಗೆ ಆ ೧೦೧ ಮಕ್ಕಳು ಮಡಕೆಯನ್ನು ಒಡೆದುಕೊಂಡು ಹೊರಬಂದು ಬೆಳೆದರು. ಹುಟ್ಟಿನಲ್ಲಿಯೇ ಹೊಟ್ಟೆಕಿಚ್ಚಿನಿಂದ ಬೆಳೆದವರು ಇವರು.

ಆ ನೂರೊಂದು ಜನರಲ್ಲಿ ನೂರು ಜನರು ಗಂಡಸರು ಒಬ್ಬಳು ಹೆಣ್ಣು. ಅವರ ಹೆಸರುಗಳು ಹೀಗಿವೆ. ದುರ್ಯೋಧನ, ದುಶ್ಶಾಸನ, ದುಸ್ಸಹ, ದುಶ್ಶಲ, ಜಲಗಂಧ, ಶಮ, ಸಹ, ವಿಂದ, ಅನುವಿಂದ, ದುರ್ಧರ್ಶ, ಸುಬಾಹು, ದುಷ್ಪ್ರದರ್ಶಣ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ಕರ್ಣ, ವಿಕರ್ಣ, ಶಲ, ಸತ್ವ, ಸುಲೋಚನ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಶರಾಸನ, ದುರ್ಮದ, ದುರ್ವಿಗಾಹ, ವಿವಿತ್ಸು, ವಿಕಟಾನನ, ಊರ್ಣನಾಭ, ಸುನಾಭ, ನಂದ, ಉಪನಂದ, ಚಿತ್ರಬಾಣ, ಚಿತ್ರವರ್ಮಾ, ಸುವರ್ಮ ದುರ್ವಿಮೋಚ, ಅಯೋಬಾಹು, ಮಹಾಬಾಹು, ಚಿತ್ರಾಂಗ, ಚಿತ್ರಕುಂಡಲ, ಭೀಮವೇಗ, ಭೀಮಬಲ, ವಾಲಕಿ, ಬಲವರ್ಧನ, ಉಗ್ರಾಯುಧ, ಸುಸೇನ, ಕುಂಡಧಾರ, ಮಹೋದರ, ಚಿತ್ರಾಯುಧ, ನಿಷಂಗಿ, ಪಾಶಿ, ವೃಂದಾರಕ, ದೃಢವರ್ಮ, ದೃಢಕ್ಷತ್ರ, ಸೋಮಕೀರ್ತಿ, ಅನೂದರ, ದೃಢಸಂಧ, ಜರಾಸಂಧ, ಸತ್ಯಸಂಧ, ಸದಾಸುವಾಕ್, ಉಗ್ರಶ್ರವಸ್, ಉಗ್ರಸೇನ ಸೇನಾನಿ, ದುಷ್ಪರಾಜಯ, ಅಪರಾಜಿತ, ಕುಂಡಶಾಯೀ, ವಿಶಾಲಾಕ್ಷ, ದುರಾಧಾರ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ್, ಆದಿತ್ಯಕೇತು, ಬಹ್ವಾಶೀ, ನಾಗದತ್ತ, ಉಗ್ರಶಾಯೀ, ಕವಚೀ, ಕ್ರಥನ, ಕುಂಡಿ, ಭೀಮವಿಕ್ರಮ, ಧನುರ್ಧರ, ವೀರಬಾಹು, ಆಲೋಲುಪ, ಅಭಯ, ದೃಢಕರ್ಮನ್, ದೃಢರಥಾಶ್ರಯ, ಅನಾದೃಶ್ಯ, ಕುಂಡಭೇದಿ, ವಿರಾವೀ, ಚಿತ್ರಕುಂಡಲ, ಪ್ರಮಥ, ಅಪ್ರಮಾಥಿನ್, ದೀರ್ಘರೋಮನ್, ಸವೀರ್ಯವಾನ್ ದೀರ್ಘಬಾಹು, ಸುವರ್ಮ, ಕಾಂಚನ ಧ್ವಜ, ಕುಂಡಾಶಿನ್, ವಿರಜಸ್ ಮತ್ತು ಯುಯುತ್ಸು. ದುಶ್ಶಲಾ ಎಂಬವಳು ಮಗಳು.

ಇವರಲ್ಲದೆ ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಜನಿಸಿದ ಯುಯುತ್ಸು ಎಂಬ ಮತ್ತೊಬ್ಬ ಮಗನೂ ಇದ್ದನು. ಇವನಿಗೆ ಕರ್ಣ ಎಂಬ ಇನ್ನೊಂದು ಹೆಸರು ಇದ್ದಿತೆಂದು ಮಹಾಭಾರತದಲ್ಲಿ ಹೇಳಿದೆ. ಇವನೇ ದುರ್ಯೋಧನನು ಭೀಮಸೇನನಿಗೆ ವಿಷವನ್ನು ತಿನ್ನಿಸಿದ್ದನೆಂದು ಹೇಳಿದವನು. ಭಾರತ ಯುದ್ಧದಲ್ಲಿ ಪಾಂಡವರ ಕಡೆಗೆ ಸೇರಿಕೊಂಡವನೂ ಇವನೇ. ಮಹಾಪರಾಕ್ರಮಿಯೂ ಪ್ರಾಮಾಣಿಕನೂ ಆದ ಇವನಿಗೆ ಪರೀಕ್ಷಿತನನ್ನೂ ರಕ್ಷಿಸುವಂತೆ ಅಧಿಕಾರವನ್ನು ವಹಿಸಿ ಪಾಂಡವರು ಮಹಾಪ್ರಸ್ಥಾನಕ್ಕೆ ಹೊರಡುತ್ತಾರೆ.

**ಕೌಶಲ** ಇದು ಸಂಸ್ಕೃತದ 'ಕುಶಲ' ಶಬ್ದದ ಭಾವ ನಾಮರೂಪ. ಕೌಶಲ, ಕುಶಲತೆ, ಕೌಶಲ್ಯ ಎಂಬ ಮೂರು ರೂಪಗಳನ್ನು ಉಪಯೋಗಿಸುತ್ತಾರೆ. ಆದರೆ 'ಕೌಶಲ್ಯ' ವ್ಯಾಕರಣದ ದೃಷ್ಟಿಯಿಂದ ತಪ್ಪು. ಅದಕ್ಕೆ ಎರಡು ವ್ಯಾಕರಣ ಪ್ರಕ್ರಿಯೆಗಳು ಸೇರಿವೆ. ಇದಕ್ಕೆ ಇಂಗ್ಲಿಷಿನ Skill ಎಂಬ ಶಬ್ದದ ಅರ್ಥವಿದೆ. ಚಾತುರ್ಯ, ಜಾಣತನ ಎಂದರ್ಥ.

**ಕೌಶಲ್ಯತೆ, ವೈಶಿಷ್ಟ್ಯತೆ** ಕೌಶಲ್ಯತೆ - ವೈಶಿಷ್ಟ್ಯತೆ ಎರಡೂ ತಪ್ಪು. ಅವುಗಳನ್ನು ಉಪಯೋಗಿಸಬಾರದು. ಕುಶಲತೆ, ವಿಶಿಷ್ಟತೆ ಎರಡೂ ಸರಿ. ಕುಶಲ ಎಂಬ ಶಬ್ದಕ್ಕೆ ಕೆಟ್ಟದ್ದನ್ನು ನಿವಾರಿಸುವುದು ಎಂದು ಅರ್ಥ. ಅದಕ್ಕೆ ಶುಭ, ಮಂಗಳ, ಆರೋಗ್ಯ, ಜಾಣತನ, ಸಾಮರ್ಥ್ಯ ಮುಂತಾದ ಅರ್ಥಗಳೂ ಇವೆ. ಕುಶಲ - ಈ ಶಬ್ದದ ಭಾವ ಕುಶಲತಾ. ಈ ಕುಶಲತಾ ಎಂಬುದರ ತದ್ಭವ ಕುಶಲತೆ. ಇದೇ ಅರ್ಥದ ಕೌಶಲ ಶಬ್ದವೂ ಇದೆ.

ವಿಶೇಷವಾದುದು ವಿಶಿಷ್ಟ. ವಿಶಿಷ್ಟವಾದುದರ ಭಾವ ವೈಶಿಷ್ಟ್ಯ. ಈ ಅರ್ಥಗಳನ್ನು ತಿಳಿದು ಈ ಶಬ್ದಗಳನ್ನು ಉಪಯೋಗಿಸಬೇಕು.

**ಕ್ರಕಚ** ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ ಗರಗಸ ಎಂದು ಅರ್ಥ. ಈ ಶಬ್ದಕ್ಕೆ ಸಂಸ್ಕೃತದಲ್ಲಿ ಅರ್ಥವಿವರವನ್ನು ಬರೆಯುತ್ತ **ಕ್ರ ಇತಿ ಶಬ್ದಂ ಕರೋತಿ ಇತಿ ಕ್ರಕಚಃ;** ಕ್ರ ಎಂದು ಶಬ್ದ ಮಾಡುವುದರಿಂದ ಆ ಹೆಸರು ಎಂದು ಟೀಕಾಕಾರರು ತಿಳಿಸುತ್ತಾರೆ.

**ಕ್ರಾಂತಿ** ಕ್ರಾಂತಿ ಶಬ್ದವೂ ಸಂಸ್ಕೃತದ್ದು. ಅದಕ್ಕೆ ನಡೆಯುವುದು, ಹೆಜ್ಜೆಯಿಡುವುದು ಕ್ರಮಿಸುವುದು ಎಂಬ ಅರ್ಥಗಳಿವೆ. ದಾಟು, ಮೀರು, ಅತಿಕ್ರಮಿಸು ಎಂಬ ಚಳವಳಿಯ ಅರ್ಥವೂ ಸಂಸ್ಕೃತದಲ್ಲಿದೆ. ಯಾವುದಾದರೂ ನಿಯಮವನ್ನು ಉಲ್ಲಂಘಿಸುವುದಕ್ಕೆ ಕ್ರಾಂತಿ ಎಂದು ಹೇಳುತ್ತಾರೆ. ಈಚೆಗೆ ಇಂಗ್ಲೀಷಿನ Revolution ಎಂಬ ಶಬ್ದಕ್ಕೆ ಸಮಾನವಾಗಿ ಈ ಶಬ್ದ ಪ್ರಯೋಗವಾಗುತ್ತ ಇದೆ. Green revolution ಹಸಿರು ಕ್ರಾಂತಿ ಎಂಬುದು ಉದಾಹರಣೆ. ಕೈಗಾರಿಕಾ ಕ್ರಾಂತಿ ಎಂಬ ಶಬ್ದ ತುಂಬ ಹಳೆಯದಾಗಿದೆ. ಆಮೂಲಾಗ್ರ ಬದಲಾವಣೆ/ಪರಿವರ್ತನೆ ಆಗಬೇಕು. ಆಗಲೇ ಇತರ ಕ್ರಾಂತಿಗಳೂ ಬರಬಹುದು.

**ಕ್ರಿಕೆಟ್** ಹಳೆಯ ಫ್ರೆಂಚ್ ಭಾಷೆಯಲ್ಲಿ Criquet ಎಂಬ ಶಬ್ದವಿದೆ. ಅದಕ್ಕೆ ಚೆಂಡಿನಿಂದ ಗುರಿಯಿಟ್ಟು ಹೊಡೆಯುವ ಕೋಲು, (A stick) ಎಂಬ ಅರ್ಥವಿದೆ. ಚೆಂಡಿನಾಟದಲ್ಲಿ ಉಪಯೋಗಿಸುವ ದಾಂಡು ಎಂಬ ಅರ್ಥವೂ ಇದೆಯಂತೆ. ಅದರಿಂದ ಈ ಶಬ್ದ ಬಂದಿದೆ ಎನ್ನುತ್ತಾರೆ. It is not cricket ಎಂಬ ಗಾದೆ ಮಾತಿದೆ. ಹಾಗೆಂದರೆ ಇದು ನೇರವಾದ ವ್ಯವಹಾರವಲ್ಲ ಎಂದರ್ಥ. ಇದು ಇಂಗ್ಲೆಂಡಿನಲ್ಲಿ ಪ್ರಚಾರದಲ್ಲಿರುವ ನಾಡುನುಡಿ.

**ಕ್ರಿ.ಪೂ. ಕ್ರಿ.ಶ.** ಕ್ರಿಸ್ತನು ಕ್ರೈಸ್ತಮತಸ್ಥರೆಲ್ಲರ ಆರಾಧ್ಯದೈವ. ಆತನು ಹುಟ್ಟಿದ ದಿನದಿಂದ ಕ್ರಿಸ್ತಶಕೆ ಪ್ರಾರಂಭವಾಗುತ್ತದೆ. ಇಂಗ್ಲಿಷಿನಲ್ಲಿ A.D. ಲ್ಯಾಟಿನ್ ಭಾಷೆ Anno Domini ಎಂಬುದರ ಸಂಕ್ಷಿಪ್ತ ರೂಪ. ಅದಕ್ಕೆ ನಮ್ಮ ದೇವರ ವರ್ಷದಲ್ಲಿ (in the year of our lord) ಎಂದರ್ಥ. ಇದೇ ಕ್ರಿಸ್ತಶಕ = ಕ್ರಿ.ಶ. ಕ್ರಿಸ್ತಪೂರ್ವ ಎಂದರೆ (Before Christ) ಕ್ರಿಸ್ತನು ಹುಟ್ಟುವುದಕ್ಕೆ ಪೂರ್ವದಲ್ಲಿ ಎಂದರ್ಥ. ಕ್ರಿಸ್ತಶಕ ಗಣನೆ ಮುಂದಕ್ಕೆ ೧, ೨, ೩.... ಎಂದೂ ಕ್ರಿ.ಪೂ. ಗಣನೆ ಹಿಂದಕ್ಕೆ ಒಂದು ವರ್ಷ, ಎರಡು ವರ್ಷ, ಮೂರು ವರ್ಷ.....ಹಿಂದೆ ಎಂಬಂತೆ ಲೆಕ್ಕಾಚಾರ ಮಾಡಬೇಕು.

**ಕ್ರೀಡಾಂಗಣ** ಎಂಬುದೇ ಸರಿಯಾದ ಶಬ್ದ. ಕ್ರೀಡಾ ರಂಗಣ ತಪ್ಪು. ಆ ಹೆಸರು ಹಾಕಿರುವವರು ಯಾರು ಎಂದು ನಿರ್ಧಾರವಾಗಿ ತಿಳಿದರೆ ಅವರ ಎದುರಿಗೆ ನೀವು ರಿಂಗಣ ಕುಣಿಯಬಹುದು! ಕ್ರೀಡಾಂಗಣ = ಆಟದ ಬಯಲು.

**"ಕ್ರೂರಿ, ಉದಾರಿ, ನಿರ್ದಯಿ"** ಎಂಬ ಶಬ್ದಗಳು ಸರಿಯೇ? ಸಂಸ್ಕೃತದಲ್ಲಿ ಕ್ರೂರ, ಉದಾರ, ನಿರ್ದಯ ಎಂಬ ಶಬ್ದಗಳಿಗೆ ಕ್ರಮವಾಗಿ ಕ್ರೂರವಾದ ಗುಣವುಳ್ಳವನು, ಉದಾರ ಗುಣವುಳ್ಳವನು, ದಯಾರಹಿತನಾದವನು ಎಂಬ ಅರ್ಥಗಳಿವೆ. ಅಲ್ಲಿ ಅದು ವ್ಯಕ್ತಿವಾಚಕ. ಕನ್ನಡದಲ್ಲಿಯೂ ಕೆಲವರು ಹಾಗೆಯೇ ಉಪಯೋಗಿಸುತ್ತಾರೆ. ಮತ್ತೆ ಕೆಲವರು ಸಂಸ್ಕೃತದಲ್ಲಿಯೇ ಕಾಣುವ ದಾನಿನ್ ಗುಣಿನ್ ಎಂಬ ಶಬ್ದಗಳು ಕನ್ನಡದಲ್ಲಿ ದಾನಿ, ಗುಣಿ ಎಂದು ವ್ಯತ್ಯಾಸಗೊಂಡು ಉಪಯೋಗವಾಗುವುದನ್ನು ಗಮನಿಸಿದ್ದಾರೆ. ಇವು ತದ್ಭವಗಳೆಂದು ಕನ್ನಡ ಒಪ್ಪಿಕೊಳ್ಳುತ್ತದೆ. ಈ ಶಬ್ದಗಳ ಸಾಮ್ಯದಿಂದ ಕ್ರೂರಿ, ಉದಾರಿ ಎಂಬ ಶಬ್ದಗಳು ಪ್ರಚಾರಕ್ಕೆ ಬಂದಿವೆ. ಅನೇಕ ಕವಿಗಳೂ ಲೇಖಕರೂ ಈ ರೂಪಗಳನ್ನು ಉಪಯೋಗಿಸಿದ್ದಾರೆ. ಆದರೆ ಸಂಸ್ಕೃತವನ್ನು ಚೆನ್ನಾಗಿ ಬಲ್ಲ ಕವಿಗಳು ಸಂಸ್ಕೃತದ ರೂಪವನ್ನೇ ಉಪಯೋಗಿಸಿದ್ದಾರೆ. ಈಚೀಚೆಗೆ ಕ್ರೂರಿ, ಉದಾರಿ ಶಬ್ದಗಳು ಬಹುವಾಗಿ ಪ್ರಯೋಗವಾಗುತ್ತಿವೆ. ಆದರೆ 'ನಿರ್ದಯಿ' ಎನ್ನುವ ಶಬ್ದ ಕನ್ನಡದಲ್ಲಿ ಅಷ್ಟು

ಪ್ರಚಾರದಲ್ಲಿಲ್ಲ. ಕನ್ನಡದಲ್ಲಿ 'ಇ' ಎಂದು ಒಂದು ಪ್ರತ್ಯಯವನ್ನು ಹತ್ತಿಸಿ ಬಹುವ್ರೀಹಿ ಸಮಾಸವನ್ನು ಮಾಡಬಹುದೆಂಬ ವ್ಯಾಕರಣದ ಅವಕಾಶವಿದೆ. 'ಕಡುಚಾಗ' ಉಳ್ಳವನು 'ಕಡುಚಾಗಿ' 'ನಿಡುಮೂಗು' ಉಳ್ಳವನು 'ನಿಡುಮೂಗಿ'. ಈ ಬಗೆಯ ಸಮಾಸಗಳ ರೂಪವೂ ಕೂಡ ಕ್ರೂರಿ, ಉದಾರಿ ಎಂಬ ಶಬ್ದಗಳ ಸ್ವರೂಪಕ್ಕೆ ಕಾರಣವಾಗಿರಬಹುದು. ಇಂಥ ಶಬ್ದಗಳು ಬಹುವಾಗಿ ಪ್ರಚಾರದಲ್ಲಿ ಇರುವುದರಿಂದ ಅವುಗಳನ್ನು ಕನ್ನಡದ ಶುದ್ಧ ರೂಪಗಳೆಂದೇ ಬಳಸುವುದು ಸರಿ. ಆದರೆ ಈ ವಿವರಗಳು ತಿಳಿದಿದ್ದರೆ ಬಳಸುವವರು ಎಚ್ಚರಿಕೆಯಿಂದ ಇರುತ್ತಾರೆ.

**ಕ್ಲಿಕ್ಕಿಸು** ಇದು ಇಂಗ್ಲಿಷಿನ Click ಶಬ್ದದಿಂದ ಮಾಡಿದ ರೂಪ. ಈ ಶಬ್ದಕ್ಕೆ ಇಂಗ್ಲಿಷಿನಲ್ಲಿ ಲಘುವಾದ ಆದರೆ ಸೂಕ್ಷ್ಮವಾದ ಶಬ್ದ ಎಂದರ್ಥ. ಕ್ಯಾಮೆರಗಳಲ್ಲಿ ಭಾವಚಿತ್ರಗಳನ್ನು ತೆಗೆಯುವಾಗ ಆಗುವ ಶಬ್ದ. ಈ ಅರ್ಥದಿಂದ Photo ತೆಗೆ ಎಂಬ ಅರ್ಥ ಬಂದಿದೆ. ಈಗೀಗ ತುಂಬ ಪ್ರಚಾರಕ್ಕೆ ಬಂದಿದೆ. ನಿಂತು ಮುಖ್ಯವಾಗಿಬಿಡುವಂತೆ ಕಾಣುತ್ತದೆ.

**ಕ್ಲಿನಿಕ್** ಇಂಗ್ಲಿಷಿನ ಈ ಶಬ್ದಕ್ಕೆ ಬೇರೆ ಬೇರೆ ಅರ್ಥಗಳಿವೆ. Nursing Home ಎಂಬ ಅರ್ಥವನ್ನು ಅದು ಕೊಡಬಲ್ಲದು. ಆದರೆ ಸಾಮಾನ್ಯವಾಗಿ Clinic ನಲ್ಲಿ ರೋಗಿಗಳನ್ನು ಪರೀಕ್ಷಿಸಿ ಅವರಿಗೆ ಔಷಧ ಕೊಟ್ಟು ಮನೆಗೆ ಕಳುಹಿಸುವುದೇ ಹೆಚ್ಚು. ಆದುದರಿಂದ ಔಷಧಾಲಯ ಸರಿಯಾದ ಅರ್ಥ. ರೋಗಿಗಳು ಅಲ್ಲಿಯೇ ನಿಲ್ಲುವುದಾದರೆ ಅದು ಚಿಕಿತ್ಸಾಲಯ.

**ಕ್ಲೀಷೆ** ಇದು ಇಂಗ್ಲಿಷ್ ಭಾಷೆಯ Cliche ಶಬ್ದ. ಇಂಗ್ಲಿಷಿಗೆ ಇದು ಫ್ರೆಂಚ್ ಭಾಷೆಯಿಂದ ಬಂದ ಶಬ್ದ. ಇದನ್ನು ಕನ್ನಡದಲ್ಲಿ ಸವಕಲು ಶಬ್ದ ಎಂದು ಕರೆಯುತ್ತಾರೆ. ತುಂಬ ಪ್ರಯೋಗವಾಗಿ ಸವಕಲು ನಾಣ್ಯದ ಹಾಗೆ ಅರ್ಹತೆಯನ್ನು ಕಳೆದುಕೊಂಡಿರುವ ಶಬ್ದಗಳಿಗೆ ಅಥವಾ ಭಾವನೆಗಳಿಗೆ ಈ ಶಬ್ದ ಉಪಯೋಗಿಸುತ್ತಾರೆ. ಉದಾ: ಜನಸೇವೆಯೇ ಜನಾರ್ದನ ಸೇವೆ.

**ಕ್ಲೈಬ್ಯ** ಇದು ಸಂಸ್ಕೃತದ ಕ್ಲೀಬ ಎಂಬ ಶಬ್ದದ ಭಾವನಾಮ ರೂಪ. ಕ್ಲೀಬ ಎಂದರೆ ನಪುಂಸಕ, ಷಂಡ, ಗಂಡಸುತನವಿಲ್ಲದವನು. ಗಂಡಸೂ ಹೆಂಗಸೂ ಅಲ್ಲದ ವ್ಯಕ್ತಿಗೂ ಈ ಹೆಸರು ಸಲ್ಲುತ್ತದೆ. ಕ್ಲೈಬ್ಯ ಎಂದರೆ ೧. ನಪುಂಸಕತನ, ೨. ಧೈರ್ಯವಿಲ್ಲದಿರುವುದು, ೩. ಪೌರುಷವಿಲ್ಲದಿರುವುದು, ಪರಾಕ್ರಮವಿಲ್ಲದಿರುವುದು ಎಂಬ ಅರ್ಥಗಳು ಬರುತ್ತವೆ. ಶ್ರೀಕೃಷ್ಣನು ಅರ್ಜುನನಿಗೆ ಯುದ್ಧ ಮಾಡಬೇಕೆಂದು ಉಪದೇಶ ಮಾಡುವಾಗ, ಭಗವದ್ಗೀತೆಯಲ್ಲಿ ಈ ಮಾತು ಬರುತ್ತದೆ. **'ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ'** ಎಲೈ ಅರ್ಜುನನೆ, ಅಧೈರ್ಯವನ್ನು ಹೊಂದಬೇಡ. ನಿನಗೆ ಅದು ಸರಿಹೊಂದುವುದಿಲ್ಲ ಎಂದು ಅದರ ಅರ್ಥ.

**ಕ್ಷ, ತ್ರ, ಜ್ಞ** ಕೆಲವು ಕನ್ನಡ ವರ್ಣಮಾಲೆಯ ಪಟಗಳಲ್ಲಿ ಹೀಗೆ ಕ್ಷ, ತ್ರ, ಜ್ಞ ಎಂಬ ಅಕ್ಷರಗಳನ್ನು ವಿಶೇಷವಾಗಿ ಸೇರಿಸುತ್ತಾರೆ. ಮುದ್ರಕರು ತಮ್ಮ ಮುದ್ರಣದ ಅನುಕೂಲಕ್ಕಾಗಿ ಈ ಮೂರು ಬೇರೆ ಬೇರೆ ಮೊಳೆಗಳನ್ನು (types) ಮಾಡಿಸಿಕೊಂಡಿರುತ್ತಾರೆ. ಆ ಮೂರು ಬೇರೆ ಅಕ್ಷರಗಳಲ್ಲ. ಸಂಯುಕ್ತಾಕ್ಷರಗಳು. ವರ್ಣಮಾಲೆಯಲ್ಲಿ ಅವಕ್ಕೆ ಸ್ಥಳ ಕೂಡದು.

## ಖ

**ಖಂಬ** ಕನ್ನಡದಲ್ಲಿ ಕಂಬ ಸರಿ, ಕಂಭ ಎಂಬ ಶಬ್ದವು ಶಾಸನಗಳಲ್ಲಿ ಸಿಗಬಹುದು.

**ಖಂಡತುಂಡ** ಇದರ ಸರಿಯಾದ ರೂಪ ಖಂಡತುಂಡು. ಕತ್ತರಿಸಿರುವ ಚೂರು. ಇದು ಬೇರೆಯ ಸಂಬಂಧವನ್ನು ಕಡಿದುಕೊಂಡು ತಾನೇ ಬೇರೆಯಾಗಿರುವ ಸ್ಥಿತಿಯನ್ನು ಮುಟ್ಟಿದೆ. ಇದಕ್ಕೆ ಆಲಂಕಾರಿಕವಾಗಿ ಸಿರ್ಧಾರವಾದುದು, ನಿಸ್ಸಂದಿಗ್ಧವಾದುದು, ಖಂಡಿತವಾದುದು ಎಂದು ಅರ್ಥ ಬಂದಿದೆ. ಆದುದರಿಂದ ಖಂಡತುಂಡು ಎನ್ನುವುದಕ್ಕೆ ಸಿರ್ಧಾರವಾದ ಎಂಬ ಗುಣವಾಚಕದ ಅರ್ಥವನ್ನು ನೀಡಬಹುದು. ಖಂಡ ಸಂಸ್ಕೃತ ತುಂಡು ಕನ್ನಡ.

**ಖಜಾಂಚಿ** ಈ ಶಬ್ದ ಪಾರಸೀ ಮತ್ತು ಅರಬ್ಬಿ ಭಾಷೆಗಳಲ್ಲಿ ಖಜಾನ್‌ಚೀ ಎಂದಾಗಿ ಹಿಂದೀ ಮತ್ತು ಮರಾಠೀ ಭಾಷೆಗಳಿಗೆ ಬಂದು ಅಲ್ಲಿಂದ ಕನ್ನಡಕ್ಕೆ ಬಂದಿದೆ. ಇದಕ್ಕೆ ಖಜಾನೆಯ ಅಧಿಕಾರಿ, ಭಂಡಾರಿ ಎಂದರ್ಥ. ಖಜಾನೆ ಎಂಬ ಶಬ್ದವೂ ಪಾರಸೀ ಮತ್ತು ಅರಬ್ಬಿ ಭಾಷೆಗಳಿಂದಲೇ ಬಂದದ್ದು. ಪಾರಸಿಯಲ್ಲಿ ಅದು ಖಜಾನ್ಹ್ ಎಂದೂ ಅರಬ್ಬಿಯಲ್ಲಿ ಖಜಾನ, ಖಜಾನಾ ಎಂದೂ ಪ್ರಯೋಗದಲ್ಲಿದೆ. ಸಂಸ್ಕೃತದಲ್ಲಿ ಇದು ಕೋಶಾಧ್ಯಕ್ಷ.

**ಖದೀಮ** ಇದು ಅರಬ್ಬಿಯ ಕದೀಮ ಎಂಬ ಶಬ್ದದಿಂದ ಬಂದಿದೆ. ಆ ಭಾಷೆಯಲ್ಲಿ ಇದಕ್ಕೆ ಪ್ರಾಚೀನ, ಬಹುಕಾಲದ ಎಂದರ್ಥ. ಕನ್ನಡದಲ್ಲಿ ಅರ್ಥವು ವ್ಯಾಪಕವಾಗಿ ಸಮರ್ಥ, ತಿಳಿವಳಿಕೆಯುಳ್ಳವನು, ಚಮತ್ಕಾರ ಬಲ್ಲವನು, ನುಣುಚಿಕೊಂಡು ಹೋಗುವ ಸ್ವಭಾವದವನು ಎಂಬ ಅನೇಕ ಅರ್ಥಗಳು ಬೆಳೆದು ಬಂದಿವೆ. ಮುಖ್ಯವಾಗಿ ಪ್ರಚಂಡ ಎಂಬುದನ್ನು ತಿಳಿಸುವ ಉದ್ದೇಶವುಳ್ಳದ್ದು.

**ಖನಿ-ಗಣಿ** ಖನಿ ಸಂಸ್ಕೃತ ಶಬ್ದ. ಗಣಿ ಆ ಶಬ್ದದ ತದ್ಭವ. ಅರ್ಥ ಎರಡಕ್ಕೂ ಒಂದೆ. ಚಿನ್ನದ ಗಣಿ. ವಜ್ರದ ಗಣಿ ಇದ್ದ ಹಾಗೆ. ಒಂದು ವಸ್ತು ಅಧಿಕವಾಗಿ ದೊರೆಯುವ ಸ್ಥಳ ಎಂದರ್ಥ.

**ಖರೇವಂದ್ರು** ಎಂಬುದರಲ್ಲಿ ಖರೇವು +ಅಂದರೂ ಎಂಬ ಎರಡು ಶಬ್ದಗಳು ಸೇರಿವೆ. ಅದು ನಿಶ್ಚಯವಾದರೂ ಅದು ಸರಿಯಾದರೂ ಎಂಬ ಅವ್ಯಯದ ರೂಪದಲ್ಲಿ ಈ ನುಡಿಗಟ್ಟನ್ನು ಉಪಯೋಗಿಸುತ್ತಾರೆ. ಇದು ಮರಾಠಿಯಲ್ಲಿ ತುಂಬ ಪ್ರಚಾರದಲ್ಲಿರುವ ಖರೆ ಎಂಬ ಶಬ್ದದಿಂದ ಬಂದದ್ದು.

**ಖಾಕಿ** ಇದು ಸರಿಯಾದ ರೂಪದ ಶಬ್ದ. ಕಾಕಿ ಅಲ್ಲ. ಖಾಕಿ ಎಂಬುದು ಪಾರಸೀ ಶಬ್ದ. ಖಾಕ್ - ಇದಕ್ಕೆ ಮಾಸಲು ಬಣ್ಣ ಎಂದು ಅರ್ಥ. ಅಲ್ಲಿಂದ ಬ್ರಿಟಿಷರ ಕಾಲದಲ್ಲಿ ಸೈನ್ಯದ ಜನರಿಗೆ ಉಪಯೋಗಿಸುವ ಮಾಸಲು ಬಣ್ಣದ ಬಟ್ಟೆಗೆ ಅದು ಅನ್ವಯವಾಯಿತು. ಈಗೀಗ ಪೋಲೀಸು ಇಲಾಖೆಯ ಉಡುಪಾಗಿದೆ.

**ಖಾತೆ, ಖಾತ** ಇದು ಹಿಂದಿ ಮತ್ತು ಮರಾಠಿ ಭಾಷೆಗಳಲ್ಲಿ ಹೆಚ್ಚು ಪ್ರಯೋಗದಲ್ಲಿರುವ ಶಬ್ದ. ಇದಕ್ಕೆ ಕಿರ್ದಿ ಪುಸ್ತಕದಲ್ಲಿ ನಮೂದಾಗಿರುವ ಜಮಾ ಖರ್ಚಿನ ಭಾಗ ಎಂದರ್ಥ. ಕಿರ್ದಿ ಎಂದರೆ ದಿನವಹಿಯ ಲೆಕ್ಕದ ಪುಸ್ತಕ. ಆಯವ್ಯಯ ಪುಸ್ತಕ. ಒಂದೊಂದು ಖಾತೆಯಲ್ಲಿ ಒಬ್ಬೊಬ್ಬ ವ್ಯಕ್ತಿಯ ಅಥವಾ ಸಂಸ್ಥೆಯ ಲೆಕ್ಕಪತ್ರದ ದಾಖಲೆ ಸಿಗುತ್ತದೆ.

**ಖಾದಿ** ಇದು ಪಾರಸೀ ಭಾಷೆಯಿಂದ ಹಿಂದೀ, ಮರಾಠೀ ಭಾಷೆಗಳಿಗೆ ಬಂದಿರಬಹುದು. ಪಾರಸೀ ಭಾಷೆಯಲ್ಲಿ ಖಾರಾ ಎಂದರೆ ಒರಟು ಬಟ್ಟೆ. ಅದೇ Khaddar. ಮಹಾತ್ಮ ಗಾಂಧಿಯವರು ಗ್ರಾಮೀಣ ಜನರಿಗೆ ವರ್ಷವಿಡೀ ಕೆಲಸವನ್ನೊದಗಿಸಲು ಹುಡುಕಿದ ಉಪಾಯ ಖಾದೀ ಅಭಿವೃದ್ಧಿ. ಅದಕ್ಕೆ ಅವರು ಪವಿತ್ರತೆಯನ್ನು ತಂದುಕೊಡಲು ಪ್ರಯತ್ನಪಟ್ಟರು. ಆದುದರಿಂದ ಕಾಂಗ್ರೆಸ್ ಸಂಸ್ಥೆಯ ಸದಸ್ಯರೆಲ್ಲರೂ ಖಾದಿ ಧರಿಸಲು ಮೊದಲು ಮಾಡಿದರು. ಈಚೆಗೆ ಅಷ್ಟು ವ್ಯಾಪಕವಾಗಿಲ್ಲ. ಹಿಂದಿಯಲ್ಲಿ ಖದ್ದರ್, ಖದ್ದಾರ್ ಎಂಬ ಶಬ್ದಗಳಿವೆ. ಕನ್ನಡಕ್ಕೆ ಅಲ್ಲಿಂದ ಬಂದಿರಬೇಕು. ಖಾದಿ = ಕೈಯಿಂದ ತಯಾರಿಸಿದ ಬಟ್ಟೆ.

**ಖಾನಾವಳಿ** ನಮಗೆ ಮರಾಠೀ ಭಾಷೆಯ ಮೂಲಕ ಬಂದದ್ದು. ಖಾನಾ ಎಂಬುದು ಪಾರಸೀ

ಶಬ್ದ. ಖಾನಾವಳಿ ಎಂಬುದು ಮರಾಠೀ ಶಬ್ದ. ಇದಕ್ಕೆ ಹಣವನ್ನು ಕೊಟ್ಟು ಊಟವನ್ನು ಪಡೆಯುವ ಸ್ಥಳ, ಹೋಟಲು ಎಂದರ್ಥ.

**ಖಾನೇಶುಮಾರಿ** ಇದು ಪಾರಸಿ ಭಾಷೆಯಲ್ಲಿ ಖಾನೇಶುಮಾರೀ ಎಂಬ ರೂಪದಲ್ಲಿದೆ. ಅಲ್ಲಿಂದ ನಮಗೆ ಮರಾಠೀ ಭಾಷೆಯ ಮೂಲಕ ಬಂದಿದೆ. ಇದಕ್ಕೆ ಎಲ್ಲ ಊರುಗಳಲ್ಲಿಯೂ ಒಂದೊಂದು ಮನೆಯಲ್ಲಿ ಇರುವ ಜನ, ದನ ಮೊದಲಾದುವನ್ನು ಎಣಿಕೆ ಮಾಡುವುದು. ಜನಗಣತಿ. ಈ ಶಬ್ದಕ್ಕೆ ಖಾನೇಸುಮಾರಿ ಎಂಬ ಪರ್ಯಾಯ ರೂಪವೂ ಇದೆ.

**ಖಾಯಿಷ್** ಇದು ಹಿಂದೀ ಭಾಷೆಯ ಖಾಹಿಷ್ ಎಂಬುದರಿಂದ ಬಂದದ್ದು. ಇದಕ್ಕೆ ಆಸೆ, ಇಚ್ಛೆ, ಬಯಕೆ, ಅಭಿಲಾಷೆ ಎಂದು ಅರ್ಥ. ಈ ಶಬ್ದ ಹಿಂದೀ ಭಾಷೆಗೂ ಬೇರೆ ಕಡೆಯಿಂದ ಬಂದದ್ದೆ. ಪಾರಸೀ ಭಾಷೆಯಲ್ಲಿ ಖಾಹಿಶ್ ಎಂಬ ಶಬ್ದದಿಂದ ಮರಾಠಿ ಮತ್ತು ಹಿಂದೀಗೂ ಬಂದು ಸೇರಿಕೊಂಡಿದೆ. ತುಂಬ ಜನಪ್ರಿಯವಾದ ಶಬ್ದ. ಅದು ಬಟ್ಟೆಯನ್ನು ಆರಿಸುವುದರಲ್ಲಿ ಸೀರೆಗಳನ್ನು ತೆಗೆಯುವುದರಲ್ಲಿ ಗಂಡು ಹೆಣ್ಣುಗಳನ್ನು ಹುಡುಕುವುದರಲ್ಲಿ ತುಂಬ ಪ್ರಯೋಗದಲ್ಲಿರುವ ಶಬ್ದ.

**ಖಾವಂದ್** ಪ್ರಭು, ಯಜಮಾನ, ಒಡೆಯ, ದೊರೆ. ಈ ಶಬ್ದ ಪಾರಸೀ ಭಾಷೆಯಿಂದ ಬಂದಿದೆ.

**ಖಿಲಾರಿ** ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ಉಪಯೋಗಿಸುವ ಖಿಲಾರೀ (ಡಿ) ಶಬ್ದಕ್ಕೆ ಆಟಗಾರ ಎಂದರ್ಥ. ಕನ್ನಡದಲ್ಲಿ ಈ ಶಬ್ದ ಕಿಲಾಡಿ, ಖಿಲಾಡಿ ಎಂಬ ಎರಡು ರೂಪಗಳನ್ನು ಹೊಂದಿದೆ. ಅರ್ಥದಲ್ಲಿಯೂ ತುಂಬ ವ್ಯತ್ಯಾಸವಾಗಿದೆ. ೧. ತುಂಟ, ಚೇಷ್ಟೆಯಲ್ಲಿ ಆಸಕ್ತನಾದವನು, ವಿನೋದಪರ ಎಂಬ ಅರ್ಥವಿದೆ. ಜೊತೆಗೆ ೨. ಜಾಣ, ಚತುರ, ಬುದ್ಧಿವಂತ, ಉಪಾಯಗಾರ ಎಂಬ ಅರ್ಥಗಳೂ ಬಂದಿವೆ. ಖಿಲಾರ ಎಂಬುದಕ್ಕೆ ಹಸುಗಳ ಸಮೂಹ ಎಂಬ ಅರ್ಥವಿದೆ ಮರಾಠಿಯಲ್ಲಿ. ಒಂದು ಹೊಸತಳಿಯ ಎತ್ತಿಗೆ ಖಿಲಾರಿ ಎಂಬ ಹೆಸರಿದೆ. ಬೆಂಗಳೂರಿನ ಮೆಜಸ್ಟಿಕ್ ಬಳಿ ಇರುವ ಕಿಲಾರಿ ರಸ್ತೆ ಈ ಬಗೆಯ ಹಸುಗಳನ್ನು ಸಾಕುತ್ತಿದ್ದ ಕವಾಡಿಗಳು ವಾಸಿಸುತ್ತಿದ್ದ ಸ್ಥಳ ಎಂದು ಜನರು ತಿಳಿಸಿರುತ್ತಾರೆ.

**ಖುಲಾಸೆ** ಇದು ಅರಬ್ಬಿ ಭಾಷೆಯ ಖುಲಾಸಾ ಎಂಬುದರಿಂದ ಬಂದಿದೆ. ಇದಕ್ಕೆ ನ್ಯಾಯಾಲಯದಲ್ಲಿ ಅಪರಾಧ ವಿಮುಕ್ತಿ ದೊರೆಯುವುದು ಎಂದರ್ಥ. ಆರೋಪದಿಂದ ಬಿಡುಗಡೆಯಾಗುವುದು. ಈ ಶಬ್ದ ನಮಗೆ ಹಿಂದೀ ಮತ್ತು ಮರಾಠೀ ಭಾಷೆಗಳ ಮೂಲಕ ಬಂದಿದೆ. ಇಂಗ್ಲಿಷಿನ Close ಎಂಬ ಶಬ್ದಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ.

**ಖುಷಿ** ಎಂಬುದು ಪಾರಸೀ ಭಾಷೆಯ ಶಬ್ದ. ಅದಕ್ಕೆ ಆನಂದ, ಹಿಗ್ಗು, ಸಂತೋಷ ಎಂದರ್ಥ. ಕನ್ನಡದಲ್ಲಿ ಆಡುಮಾತಿನಲ್ಲಿ ತುಂಬ ಪ್ರಚಾರದಲ್ಲಿ ಬಂದಿದೆ. ವಿಶೇಷ ಆನಂದ ಎನ್ನಬೇಕಾದರೆ ಖುಷಿಯೋ ಖುಷಿ ಎಂಬ ನುಡಿಗಟ್ಟನ್ನು ನೀವು ಕೇಳಬಹುದು.

**ಖುಷ್ಕಿ** ಇದು ಪಾರಸೀ ಭಾಷೆಯ ಶಬ್ದ. ಆ ಭಾಷೆಯಲ್ಲಿ ಖುಷ್ಕಿ ಎಂಬುದು ರೂಪ. ಮುಖ್ಯವಾಗಿ ಬೆಳೆ ಬೆಳೆಯುವ ಭೂಮಿ. ಮಳೆಯ ನೀರಿನಿಂದ ಬೆಳೆಯುವ ಭೂಮಿ. ಇದಕ್ಕೆ ಕಾಡಾರಂಬ ಎಂಬ ಹೆಸರೂ ಇದೆ. ಕನ್ನಡದಲ್ಲಿ ಕುಷ್ಕಿ ಎಂಬ ರೂಪವೂ ಇದೆ.

**ಖೆಡ್ಡಾ** ಈ ಶಬ್ದದ ಮೂಲ ಮಲಯಾ ಭಾಷೆಯ ಕೆಡ್ಡಾ. ಅದನ್ನು Keddah ಎಂದು ಇಂಗ್ಲಿಷ್ ಲಿಪಿಯಲ್ಲಿ ಬರೆಯಲಾಗುತ್ತದೆ. ಮಲಯಾ ಭಾಷೆಗೂ ಅರಬ್ಬಿಯ ಖಡ (Qada) ಎಂಬ ಶಬ್ದದಿಂದ ಬಂದಿದೆ ಎಂದು ಕೆಲವು ನಿಘಂಟುಗಳು ಹೇಳುತ್ತವೆ. ಮರಾಠಿ, ಹಿಂದೀ ಮತ್ತು ಉರ್ದು ಭಾಷೆಗಳಲ್ಲಿಯೂ ಈ ಶಬ್ದ ಪ್ರಯೋಗದಲ್ಲಿದೆ. ಅರಬ್ಬಿಯ ಶಬ್ದಕ್ಕೆ ಕಾಡಾನೆಗಳನ್ನು ಹಿಡಿಯಲು ತೋಡುವ ಹಳ್ಳ, ಕುಳಿ ಎಂದೇ ಅರ್ಥವಿದೆ. ಹಳಗನ್ನಡದಲ್ಲಿ ಇಳೆಸಿಲ್ ಮತ್ತು ಕಪ್ಪು, ಕರ್ಪು ಎಂಬ ಶಬ್ದಗಳಿವೆ. ಅವಕ್ಕೂ ಮೃಗಮಂ ಕೆಡಪುವ ಕುಟಿ ಎಂದೆ ಹಳಗನ್ನಡ ನಿಘಂಟುಗಳು ಹೇಳುತ್ತವೆ. ಮೈಸೂರಿನಲ್ಲಿ ಕಾಡಿನ ಆನೆಗಳನ್ನು ಹಿಡಿಯಲು ನಡೆಯುವ

ಕಾರ್ಯ ವಿಶ್ವಖ್ಯಾತವಾಗಿತ್ತು.

**ಖೇಚರ** ಎಂದರೆ ಆಕಾಶದಲ್ಲಿ ಚರಿಸುವವನು ಅಥವಾ ಚರಿಸುವವು. ಕೆಲವು ವರ್ಗದ ದೇವತೆಗಳು. ಸೂರ್ಯ, ಪಕ್ಷಿ ಇತ್ಯಾದಿ. ಈಗಿನ ವಿಮಾನಕ್ಕೆ ನೀವು ಖೇಚರ ಎಂದು ಕರೆದರೆ ತಪ್ಪಾಗುವುದಿಲ್ಲ.

**ಖೋಜಾ** ಇದು ತುರ್ಕಿ ಭಾಷೆಯಲ್ಲಿ ಖೋಜಾಹ್ ಎಂದೂ ಪಾರಸೀ ಭಾಷೆಯಲ್ಲಿ ಖ್ವಾಜಾ ಎಂದೂ ಪ್ರಚಾರದಲ್ಲಿರುವ ಶಬ್ದ. ಹಿಂದಿಯಲ್ಲಿ ಖೋಜಾ ಆಗಿದೆ. ಇದಕ್ಕೆ ಎರಡು ಅರ್ಥಗಳಿವೆ. ೧. ಗೌರವಾರ್ಹನಾದ ಮಹಮ್ಮದೀಯ ವ್ಯಕ್ತಿ. ೨. ನಪುಂಸಕ. ಜನಾನಖಾನದಲ್ಲಿರುವ ಕಂಚುಕಿ, ರಾಜನ ಅಂತಃಪುರದ ಸೇವಕ. ಇಂಗ್ಲಿಷಿನಲ್ಲಿ eunuch.

**ಖೋತಾ** ಇದು ಪಾರಸಿ ಭಾಷೆಯ ಶಬ್ದ ಕೋತಾಹ್. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ಇದು ಪ್ರಯೋಗದಲ್ಲಿದೆ. ಇದಕ್ಕೆ ಕನ್ನಡದಲ್ಲಿ ಕೋತ, ಕೋತಾ ಎಂಬ ಎರಡು ಪರ್ಯಾಯ ರೂಪಗಳಿವೆ. ಈ ಶಬ್ದಕ್ಕೆ ಕಡಿಮೆ ಮಾಡುವುದು ಎಂದು ಅರ್ಥ. ಈ ಸಲದ ಬಜೆಟ್‌ನಲ್ಲಿ ೧೭೪ ಕೋಟಿ ಖೋತಾ ಸೂಚಿತವಾಗಿದೆ ಎಂಬಂಥ ಪ್ರಯೋಗಗಳನ್ನು ಗಮನಿಸಿ.

**ಖ್ಯಾತ, ವಿಖ್ಯಾತ, ಪ್ರಖ್ಯಾತ** ಖ್ಯಾ ಅಂದರೆ ಹೇಳು. ಇದು ಒಂದು ಸಂಸ್ಕೃತಧಾತು. ಖ್ಯಾತ ಎನ್ನುವುದು ಅದರಿಂದ ಬಂದ ಭಾವನಾಮ. ಅಂದರೆ ಹೇಳುವುದು, ಪ್ರಕಾಶಪಡಿಸುವುದು. ಹಾಗೆಯೇ ಪ್ರಸಿದ್ಧ ವ್ಯಕ್ತಿ. ವಿಷಯ ಎಂಬ ಅರ್ಥವೂ ಬರುತ್ತದೆ.

ವಿ, ಪ್ರ, ಎಂಬುವು ಉಪಸರ್ಗಗಳು. ಅವು ಖ್ಯಾತ ಎಂಬ ಶಬ್ದದ ಹಿಂದೆ ಸೇರಿ ಹೆಚ್ಚಾಗಿ, ಅಧಿಕವಾಗಿ, ಅತಿಶಯವಾಗಿ, ವಿಶೇಷವಾಗಿ ಎಂಬ ಅರ್ಥಗಳನ್ನು ಕೊಡುತ್ತವೆ. ಈಚೆಗೆ ಕುಖ್ಯಾತ ಎಂಬ ಶಬ್ದವನ್ನೂ ಉಪಯೋಗ ಮಾಡುತ್ತಾರೆ. ಅಪಕೀರ್ತಿಗೆ ಕಾರಣನಾದ ವ್ಯಕ್ತಿ, ಕಳ್ಳ, ದರೋಡೆಕೋರ, ಮಹಾಮೋಸಗಾರ, ಗುಳುಂ ಮಾಡುವ ವ್ಯಕ್ತಿ, ಕಪ್ಪು ಹಣದ ಕುಬೇರ ಎಂಬ ಎಲ್ಲ ಅರ್ಥಗಳೂ ಇವೆ. ವಿಖ್ಯಾತ, ಪ್ರಖ್ಯಾತ ಎಂಬುದು ಸಾಲದೆ ಹೋದರೆ ಸುವಿಖ್ಯಾತ, ಸುಪ್ರಖ್ಯಾತ ಎಂದು ಮತ್ತೊಂದು ಸು ಎಂಬ ಉಪಸರ್ಗವನ್ನೂ ಸೇರಿಸುತ್ತಾರೆ. ಕುಖ್ಯಾತನಿಗೆ ಸುಕುಖ್ಯಾತ ಎಂದು ಹೇಳುವುದಕ್ಕೆ ಆಗುವುದಿಲ್ಲ. ಪಾಪ!

# ಗ

**ಗಂಡ** ಎಂಬುದು ಕನ್ನಡ ಶಬ್ದ. ಇದು ದ್ರಾವಿಡ ಭಾಷೆಗಳಲ್ಲೆಲ್ಲ ಪ್ರಚಾರದಲ್ಲಿದೆ. ಇದಕ್ಕೆ ಮೊದಲ ಅರ್ಥ ೧. ಪರಾಕ್ರಮಿ, ಶೂರ, ವೀರ, ಗಂಡುತನವುಳ್ಳವನು. ಆ ಬಳಿಕ ೨. ಪತಿ, ಯಜಮಾನ ೩. ಪುರುಷ. ಗಂಡಸು ಶಬ್ದ ಬಂದಿರುವುದು ಗಂಡು + ಕೂಸು = ಗಂಡುಸು, ಗಂಡಸು. ಗಂಡ ಎಂದರೆ ಸಂಸ್ಕೃತದಲ್ಲಿ ಗ್ರಹಗಳ ಪ್ರಭಾವದಿಂದ ಉಂಟಾಗುವ ಆಪತ್ತು, ಅಪಾಯ ಎಂಬ ಒಂದು ಅರ್ಥವಿದೆ. ಇತರ ಅರ್ಥಗಳ ಜೊತೆಗೆ 'ಗಂಡಾಂತರ' ಎಂದರೆ ಹೆಚ್ಚಿನ ಆಪತ್ತು. ಮಹಾ ಅಪಾಯ ಎಂದರ್ಥ. ಈ ಗಂಡಾಂತರ ಹೆಣ್ಣಿಗೂ ಆಗಬಹುದು ಗಂಡಿಗೂ ಆಗಬಹುದು. ಗಂಡ ಕುಡಿದು ಮನೆಗೆ ಬಂದರೆ ಹೆಂಡತಿಗೆ ಗಂಡಾಂತರ. ಹೆಂಡತಿ ಲಟ್ಟಣಿಗೆ ಹಿಡಿದು ನಿಂತರೆ ಗಂಡನಿಗೆ ಗಂಡಾಂತರ. ಕೇವಲ ವಿನೋದದಿಂದ ಗಂಡಾಂತರದಿಂದ ಪಾರಾಗಲು ಸಾಧ್ಯವಿಲ್ಲ.

**ಗಂಡಕೀಶಿಲೆ** ಗಂಡಕೀ ಎಂಬುದು ಒಂದು ನದಿ. ಉತ್ತರ ಭಾರತದಲ್ಲಿಯೂ,

ನೇಪಾಳದಲ್ಲಿಯೂ ಹರಿಯುತ್ತದೆ. ಆ ನದಿಯ ಅಧಿಷ್ಠಾತೃವಾದ ದೇವತೆಯ ಹೆಸರು. ಈ ನದಿಯಲ್ಲಿ ಸಿಗುವ ಶಿಲೆಗಳೇ ಸಾಲಿಗ್ರಾಮಗಳು. **ಗಂಡಕ್ಯಾಶ್ಚೈಕದೇಶೇಚ ಸಾಲಿಗ್ರಾಮ ಸ್ಥಲಂ ಸ್ಮೃತಂ**, ಎಂಬುದು ಸ್ಮೃತಿವಾಕ್ಯ.

**ಗಂಡನಿಗಿಂತ ಹೆಂಡತಿ ಮಂಡೋದರಿ** ಮಂಡೋದರಿ ರಾವಣನಿಗೆ ಸರಿಯಾದ ಹೆಂಡತಿ. ರಾವಣನೋ ರಾಕ್ಷಸ. ಅಂಥವನನ್ನು ತನ್ನ ವಶವರ್ತಿಯಾಗಿ ಮಾಡಿಕೊಂಡಿದ್ದಳು. ಅಂದರೆ ರಾವಣನಿಗೆ ದೈಹಿಕವಾಗಿ, ಮಾನಸಿಕವಾಗಿ ಸರಿಸಮನಾಗಿರುವುದಕ್ಕಿಂತ ಹೆಚ್ಚಾಗಿದ್ದಳು ಎಂಬ ವರ್ಣನೆ ರಾಮಾಯಣದಲ್ಲೇ ಬರುತ್ತದೆ. ರಾವಣ ಅವಳ ಮಾತನ್ನು ಮೀರಿದ್ದು ಒಂದೇ ಕಡೆ, ಸೀತೆಯನ್ನು ಸೆರೆಹಿಡಿದುತಂದಾಗ. ಅಂಥ ಹೆಂಗಸಿನ ನೆನಪಿನಲ್ಲಿ ಮಾಡಿದ ಗಾದೆ ಇದು. ಸಾಮಾನ್ಯವಾಗಿ ಗಂಡನಿಗಿಂತ ಎತ್ತರದಲ್ಲಿಯೂ ಗಾತ್ರದಲ್ಲಿಯೂ ದೊಡ್ಡವಳಾಗಿ ಕಾಣುವ ಹೆಂಗಸಿನ ಬಗ್ಗೆ ಈ ಗಾದೆಯನ್ನು ಈಗ ಉಪಯೋಗಿಸುತ್ತಾರೆ. ಮತ್ತೆ ಕೆಲವು ವೇಳೆ ಕೋಳಿಕುಕ್ಕರಾದ ಗಂಡಂದಿರನ್ನು ಹಾಸ್ಯ ಮಾಡುವಾಗಲೂ ಈ ಮಾತು ಉಪಯೋಗಕ್ಕೆ ಬರುತ್ತದೆ. ಕೋಳಿಕುಕ್ಕ =Henpecked.ಈ ಗಾದೆಯಲ್ಲಿ ಪ್ರಾಸವೇ ಮುಖ್ಯ.

**ಗಂಡಭೇರುಂಡ** ಗಂಡ =ಪರಾಕ್ರಮಿಯಾದ. ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಅಲ್ಲಿಯ ಪುರಾಣಗಳಲ್ಲಿ ಪಕ್ಷಿಗಳ ಕಥೆಗಳು ಬರುತ್ತವೆ. ಪುರಾಣವೆಂದರೆ ಹಳೆಯದು ಎಂದರ್ಥ. **ಪುರಾಪಿ ನವಃ** ಅಂದರೆ ಹಳೆಯದಾದರೂ ಹೊಸದಾಗಿರುವುದು ಎಂದು ಇನ್ನೊಂದು ಅರ್ಥ. ನಮ್ಮ ನೆನಪಿಗೆ ಬಾರದಷ್ಟು ಹಿಂದಿನ ಕಾಲದಿಂದಲೂ ಈ ಕಥೆಗಳು ಜನರಲ್ಲಿ ಬೇರೂರಿರುತ್ತವೆ. ಈ ಕಥೆಗಳಿಗೆ ಕಾಲಕಾಲಕ್ಕೆ ಬೇರೆ ಬೇರೆ ಅರ್ಥಗಳನ್ನು ಸಂಶೋಧನೆ ಮಾಡಿದ ವಿದ್ವಾಂಸರು ವಿವರಿಸುತ್ತಾರೆ. ಈ ಎಲ್ಲ ಕಥೆಗಳೂ ಕಲ್ಪನೆಗಳಿಂದ ಕೂಡಿದ ಸುಳ್ಳುಗಳ ಸರಮಾಲೆ ಎನ್ನುವವರೂ ಇದ್ದಾರೆ. ಈ ಕಥೆಗಳಲ್ಲಿ ಗೂಢವಾದ ಅರ್ಥಗಳಿವೆ. ಇವುಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಆದರೆ ಪ್ರಯತ್ನ ಮಾಡಬಹುದು ಎಂದು ಹೇಳಿ ಈ ಕಥೆಗಳಿಗೆ ಅರ್ಥವನ್ನು ಊಹಿಸಿದವರೂ ಇದ್ದಾರೆ. ಈಜಿಪ್ಟ್‌ನಲ್ಲಿ ಆಕಾಶದ ದೇವತೆಯಾದ ಹೋರಸ್‌ನ ಜೊತೆಯಲ್ಲಿರುವ ಒಂದು ಪಕ್ಷಿಯ ಕಥೆಯಿದೆ. ಆ ಪಕ್ಷಿಯು ಆಕಾಶದಲ್ಲಿ ಹಾರಾಡುತ್ತಾ ನೆಲದ ಮೇಲೆ ಓಡಾಡುತ್ತಿದ್ದ ಪ್ರಾಣಿಗಳಲ್ಲಿ ತನಗೆ ಬೇಕಾದುದನ್ನು ಗುರುತಿಸಿ ಅದರ ಮೇಲೆ ಬಿದ್ದು ತಿನ್ನುತ್ತಿದ್ದಿತಂತೆ. ಮೆಸಪೆಟೋಮಿಯಾದ ಪುರಾಣಗಳಲ್ಲಿ ಬರುವ, ಸಿಂಹದ ಮುಖವುಳ್ಳ ಇಂಡುಗುಡ್ ಎಂಬ ಪಕ್ಷಿಯು ತನ್ನ ರೆಕ್ಕೆಗಳ ನೆರಳಿನಲ್ಲಿ ಎರಡು ಜಿಂಕೆಗಳನ್ನು ರಕ್ಷಿಸುತ್ತಿರುವ ಶಿಲ್ಪವಿದೆ. ಗ್ರೀಕ್ ಪುರಾಣಗಳಲ್ಲಿ ಹಾಲ್ಕಿಯಾನ್ ಎಂಬ ಪಕ್ಷಿಯ ಕಥೆ ಬರುತ್ತದೆ. ಅದು ಹಿಮಗಾಲದಲ್ಲಿ ಮಾತ್ರ ಮೊಟ್ಟೆಗಳನ್ನಿಟ್ಟು ಅವುಗಳನ್ನು ಮರಿಗಳಾಗಿ ಮಾಡುತ್ತಿದ್ದಿತಂತೆ. ಈ ಕಾರ್ಯ ಸಮುದ್ರ ಮಧ್ಯದಲ್ಲಿ ನಡೆಯುತ್ತಿತ್ತು. ಆದುದರಿಂದ ಆ ಕಾಲದಲ್ಲಿ ಸಮುದ್ರವು ಸ್ವಲ್ಪವೂ ಅಲುಗಾಡದೆ ಸ್ತಿಮಿತವಾಗಿ ಇರುತ್ತಿತ್ತಂತೆ. ರೋಮನ್ನರ ದೇವತೆಯಾದ ಜ್ಯೂಪಿಟರನು ಗ್ಯಾನಿಮೀಡ್ ಎಂಬ ಸ್ತ್ರೀಯನ್ನು ಹಾರಿಸಿಕೊಂಡು ಹೋಗಲು ಒಂದು ಹದ್ದಿನ ಆಕಾರ ಪಡೆದ ಕಥೆಯಿದೆ. ವೀನಸ್ ದೇವತೆಗೆ ಪಾರಿವಾಳಗಳು ತುಂಬ ಪ್ರಿಯವಾಗಿದ್ದುವಂತೆ.

ಸ್ಲಾವಾನಿಕ್ ಪುರಾಣಗಳಲ್ಲಿ ವೋಕ್ ಎಂಬ ದೇವತೆಯು ಗಿಡುಗನ ಆಕಾರದಲ್ಲಿ ಆಕಾಶದಲ್ಲಿ ಹಾರಾಡುತ್ತಾ ಇದ್ದು ಬೇಕಾದಾಗ ತೋಳ ಅಥವಾ ಇರುವೆಯಂತೆ ಆಕಾರಗಳನ್ನು ಪಡೆಯುತ್ತಿದ್ದನಂತೆ.

ಟರ್ಕಿ ದೇಶದಲ್ಲಿ ಪುರಾಣಗಳು ಹುಂಜಕ್ಕೆ ಪ್ರಾಧಾನ್ಯವನ್ನು ನೀಡುತ್ತವೆ. ಹುಂಜದ ಕೂಗು ಪಿಶಾಚಿಗಳನ್ನು ಓಡಿಸುತ್ತದೆ ಎಂಬುದು ಅವರ ನಂಬಿಕೆ. ಕೊಕ್ಕರೆಗಳು ನೃತ್ಯ ಮಾಡುವ ಕಥೆಗಳಿವೆ. ಕೊಕ್ಕರೆ ಒಂದೇ ಕಾಲಿನ ಮೇಲೆ ನಿಂತು ನಿದ್ದೆ ಮಾಡುತ್ತದಂತೆ.

ಇಂಗ್ಲೆಂಡಿನ ಟವರ್ ಆಫ್ ಲಂಡನ್ನಿನಲ್ಲಿ ಸಾವಿರಾರು ಕಾಗೆಗಳಿವೆ. ಆ ಕಾಗೆಗಳಿಗೆ ಹಾನಿಯಾದರೆ ಒಟ್ಟು ಬ್ರಿಟನ್ನಿಗೇ ಏನೋ ಅಪಘಾತ ಕಾದಿದೆ ಎಂದು ಇಂಗ್ಲೆಂಡಿನ ಜನ ನಂಬುತ್ತಾರೆ.

ಪಾರಿವಾಳಗಳು ನಿಜವಾಗಿ ಮಾತನಾಡುತ್ತವೆ ಎಂಬ ಕಥೆಗಳಿವೆ. ರೋಮನ್ ಕವಿಗಳು ಪ್ರೇಮದ ದೇವತೆಯಾದ ವೀನಸ್ ಎಂಬುವಳನ್ನು ಪಾರಿವಾಳಗಳು ಎಳೆಯುತ್ತಿದ್ದ ರಥದಲ್ಲಿ ಕುಳಿತಿರುವಂತೆ ವರ್ಣಿಸುತ್ತಾರೆ. ಓವಿಡ್ ಕವಿಯ ಕವನಗಳಲ್ಲಿ ಇದನ್ನು ಕಾಣಬಹುದು. ಹೀಗೆಯೇ ಉಷ್ಟ್ರಪಕ್ಷಿಯು ತನ್ನ ಮೊಟ್ಟೆಗಳನ್ನು ಕಣ್ಣ ನೋಟದಿಂದಲೇ ಒಡೆದು ಮರಿಗಳನ್ನು ಹೊರತರಬಲ್ಲದು ಎಂದು ವರ್ಣನೆಗಳಿವೆ. ನೈಟಿಂಗೇಲ್ ಪಕ್ಷಿಯ ಹಾಡುಗಳ ಸೊಗಸಿನ ವರ್ಣನೆಗೆ ಎಲ್ಲೆಯೇ ಇಲ್ಲ.

ನಮ್ಮ ದೇಶದಲ್ಲಿ ವಿಷ್ಣುವಿನ ವಾಹನವಾದ ಗರುಡ, ರಾಮಾಯಣದ ಜಟಾಯು, ಸಂಪಾತಿ, ಬ್ರಹ್ಮನ ಹಂಸ ಇತ್ಯಾದಿ ಕಥೆಗಳನ್ನು ನಾವೂ ಕೇಳಿದ್ದೇವೆ. ಆದರೆ ಗಂಡಭೇರುಂಡದ ಕಥೆಯೇ ಬೇರೆ. ನಮ್ಮಲ್ಲಿಯೂ ಇದು ಒಂದು ಪೌರಾಣಿಕ ಪಕ್ಷಿ. ಆದರೆ ಇದು ನಮ್ಮ ದೇಶಕ್ಕೆ ಸೀಮಿತವಾದುದಲ್ಲ. ಕ್ರಿಸ್ತಪೂರ್ವಕ್ಕೆ ಮೊದಲೇ ಇದು ಜರ್ಮನಿಯ ಶಿಲ್ಪಗಳಲ್ಲಿ ಕಾಣಸಿಗುತ್ತದೆ ಎಂದು ಹೇಳುತ್ತಾರೆ. ಈ ಪಕ್ಷಿ ಬಂಜೆತನವನ್ನು ನಿವಾರಿಸುವ ಗುಣವುಳ್ಳದ್ದು ಎಂಬ ನಂಬಿಕೆಯಿದೆ.

ಭಾರತದಲ್ಲಿಯೂ ಕ್ರಿಸ್ತಪೂರ್ವದಲ್ಲಿ ಕಲ್ಲಿನಲ್ಲಿ ಕೆತ್ತಿರುವ ಗಂಡಭೇರುಂಡದ ಶಿಲ್ಪವಿದೆ. ಋಗ್ವೇದದ ದ್ವಾಸುಪರ್ಣಾ ಎಂದು ವರ್ಣಿತವಾಗಿರುವ ಎರಡು ಹಕ್ಕಿಗಳ ಮತ್ತು ವಿಷ್ಣುವಿನ ಗರುಡನ ಶಕ್ತಿಗಳ ಮಿಶ್ರಣದಿಂದ ಈ ಕಲ್ಪನೆ ಬೆಳೆದಿರಬೇಕು ಎಂದು ಕೆಲವು ವಿದ್ವಾಂಸರ ವಾದ.

ನರಸಿಂಹಾವತಾರವನ್ನು ತಳೆದ ವಿಷ್ಣು ಹಿರಣ್ಯಕಶಿಪುವನ್ನು ಕೊಂದಮೇಲೆ ಅವನಿಗೆ ಇನ್ನೂ ಕೋಪ ಶಮನವಾಗಿರಲಿಲ್ಲ. ಅವನಿಂದ ಲೋಕಕ್ಕೆ ಏನು ಕಂಟಕವಾಗಬಹುದೋ ಎಂಬ ಹೆದರಿಕೆಯಿಂದ ಸಿಂಹಸ್ವರೂಪವನ್ನು ಹತೋಟಿಗೆ ತರಲು ಶಿವನು ಶರಭಾವತಾರವನ್ನು ತಳೆದನಂತೆ. ಆಗ ವಿಷ್ಣು ಗಂಡಭೇರುಂಡದ ಸ್ವರೂಪವನ್ನು ತಳೆದನೆಂಬ ಪುರಾಣ ಕಥೆಯಿದೆ.

ಉತ್ತರ ಕರ್ನಾಟಕದ ಬೆಳಗಾವಿಯಲ್ಲಿ ಒಂದು ಶಿಲ್ಪವಿದೆ. ಒಂದು ಗಂಡಭೇರುಂಡವು ಒಬ್ಬ ರಾಕ್ಷಸನನ್ನು ತಿನ್ನುತ್ತಿರುವಂತೆ ಕಾಣುವ ಕೆತ್ತನೆಯಿದೆ. ಇದನ್ನು ಭೇರುಂಡೇಶ್ವರ ಎಂದು ಕರೆಯುತ್ತಾರೆ. ಚಾವುಂಡರಾಯನು ಇದನ್ನು ೧೦೧೭ರಲ್ಲಿ ಕೆತ್ತಿಸಿದನೆಂಬ ಉಲ್ಲೇಖವನ್ನು ಒಂದು ಶಾಸನದಲ್ಲಿ ಕಾಣಬಹುದು. ಕೋರಮಂಗಲದ ಬೂಚೇಶ್ವರ ದೇವಾಲಯದಲ್ಲಿ ತುಂಬ ಸೊಗಸಾದ ಶಿಲ್ಪವಿದೆ. ಅಲ್ಲಿ ಒಂದು ಜಿಂಕೆಯನ್ನು ಒಂದು ಹೆಬ್ಬಾವು ತಿನ್ನಲು ಪ್ರಯತ್ನಪಡುತ್ತಿದೆ. ಆ ಹೆಬ್ಬಾವಿನ ಹಿಂದೆ ಒಂದು ಆನೆ ತನ್ನ ಸೊಂಡಿಲಿನಿಂದ ಹಾವನ್ನು ಎಳೆಯುತ್ತಿದೆ. ಆ ಆನೆಯನ್ನು ಒಂದು ಸಿಂಹವು ಸೀಳಲು ಮುಂದಾಗಿದೆ. ಆ ಸಿಂಹವನ್ನು ತಿನ್ನಲು ಶರಭವು ಮುನ್ನುಗ್ಗಿದೆ. ಆ ಶರಭವನ್ನು ಕೊಲ್ಲಲು ಗಂಡಭೇರುಂಡವು ಸಿದ್ಧವಾಗಿದೆ. ಬೇಲೂರಿನ ಕೇಶವ ದೇವಾಲಯದಲ್ಲಿಯೂ ಇಂಥದೇ ಇನ್ನೊಂದು ಶಿಲ್ಪವಿದೆ. ಇದರಿಂದ ಎಲ್ಲಾ ಪ್ರಾಣಿಗಳಿಗಿಂತಲೂ ಗಂಡಭೇರುಂಡವು ಬಲಶಾಲಿಯಾದುದು ಎಂಬ ಅಂಶ ಸ್ಪಷ್ಟವಾಗುತ್ತದೆ. ಈ ಅಂಶವನ್ನು ಅತ್ಯಂತ ಸ್ಪಷ್ಟವಾಗಿ ಚಿತ್ರಿಸುವ ಮತ್ತೊಂದು ಶಿಲ್ಪವು ಕೆಳದಿಯ ಭೈರವೇಶ್ವರ ದೇವಾಲಯದ ಒಂದು ಕಂಭದ ಮೇಲಿದೆ. ಅಲ್ಲಿ ಒಂದು ಗಂಡಭೇರುಂಡವು ತನ್ನ ಎರಡು ಕೊಕ್ಕುಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಆನೆಯನ್ನು ಕಚ್ಚಿಕೊಂಡು ಎರಡು ಕಾಲಿನ

ಪಂಜಗಳಲ್ಲಿ ಒಂದೊಂದರಲ್ಲಿ ಒಂದೊಂದು ಆನೆಯನ್ನು ಹಿಡಿದು ಆಕಾಶದಲ್ಲಿ ಹಾರಾಡುತ್ತಿರುವ ಶಿಲ್ಪವಿದೆ.

ಹೀಗೆ ಗಂಡಭೇರುಂಡದ ಕಥೆ ದೊಡ್ಡದು. ಇದರ ಪ್ರಾಧಾನ್ಯವು ಕರ್ನಾಟಕದಲ್ಲಿ ರಾಜಕೀಯವಾಗಿ ೧೧ನೇ ಶತಮಾನದಲ್ಲಿ ಮೂಡಿರಬೇಕು. ಕ್ರಿ.ಶ. ೧೦೪೭ರ ಒಂದು ಶಾಸನದಲ್ಲಿ ಇದು ರಾಜನ ಬಿರುದಿನಲ್ಲಿ ಸೇರಿರುವುದು ಕಂಡುಬಂದಿದೆ. ವಿಜಯನಗರದ ಅಚ್ಚುತರಾಯನ ಕಾಲದ ನಾಣ್ಯಗಳಲ್ಲಿ ಗಂಡಭೇರುಂಡದ ಇಂಥ ಒಂದು ಮುದ್ರೆಯಿದೆ. ಮೈಸೂರ ಅರಸರು ವಿಜಯನಗರದಿಂದ ಸ್ವತಂತ್ರರಾಗಿ ಶಕ್ತರಾದ ಮೇಲೆ ಗಂಡಭೇರುಂಡ ಲಾಂಛನವನ್ನು ಅವರು ಆರಿಸಿಕೊಂಡಿರಬೇಕು. ಇದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಸುಮಾರು ೧೫೯೯-೧೭೭೬ರ ವೇಳೆಗೆ ಇದು ಇಂದಿನ ಸ್ವರೂಪವನ್ನು ಪಡೆದಿರಬೇಕು. ರಾಜವೊಡೆಯರ ಕಾಲದಲ್ಲಿ ಇದು ನಿಶ್ಚಿತವಾಗಿರುವುದಂತೂ ಸ್ಪಷ್ಟ.

ಈಗಿನ ಕರ್ನಾಟಕದ ಲಾಂಛನದಲ್ಲಿಯೂ ಗಂಡಭೇರುಂಡವು ಕಂಗೊಳಿಸುತ್ತಿದೆ. ಎರಡುತಲೆಗಳ ಇಂಥ ಬಲಶಾಲಿಯಾದ ಪಕ್ಷಿಯ ಕಲ್ಪನೆ ಆಕರ್ಷಕವಾಗಿರುವುದರಲ್ಲಿ ಆಶ್ಚರ್ಯವಿಲ್ಲ.

**ಗಂಡಸು** ಈ ಕನ್ನಡ ಶಬ್ದದ ರೂಪ ಉಂಟಾಗಿರುವುದು ಹೀಗೆ: ಗಂಡು +ಕೂಸು =ಗಂಡುಸು. ಇದೇ ಮುಂದೆ ಗಂಡಸು ಎಂದಾಗಿದೆ. ಹೆಣ್ಣು + ಕೂಸು = ಹೆಂಗುಸು. ಇದೇ ಮುಂದೆ ಹೆಂಗಸು ಆಗಿದೆ. ಗಂಡಸು ಎನ್ನಿಸಿಕೊಳ್ಳಬೇಕಾದರೆ ಅವನು ಪುರುಷನ ಎಲ್ಲ ಲಕ್ಷಣಗಳನ್ನೂ ಹೊಂದಿರಬೇಕು. ಶೌರ್ಯ ಮುಖ್ಯವಾದುದು. ಉದ್ಯೋಗಂ ಪುರುಷಲಕ್ಷಣಂ, ಅದೂ ಸರಿಯೆ. ಹಾಗೆಯೇ ಸ್ತ್ರೀಯಲ್ಲಿ ಗರ್ಭಾಧಾನ ಮಾಡುವ ಶಕ್ತಿಯುಳ್ಳವನಾಗಿರಬೇಕು. **ಗಡ್ಡಮೀಸೆಯಿಲ್ಲದ ಗಂಡುಗೂಸುಮಂ ತೂಬರನೆಂಬುದು** ಎಂದು ಹಲಾಯುಧ ನಿಘಂಟಿನಲ್ಲಿ ಹೇಳಿದೆ. ತೂಬರ ಎಂದರೆ ಷಂಡ, ನಪುಂಸಕ.

**ಗಗನ** ನೋಡು: ಅಂಬರ

**ಗಗನ ಕುಸುಮ** ಶಬ್ದಕ್ಕೆ 'ಆಕಾಶದ ಹೂವು' ಎಂದು ಅರ್ಥ. ಆದರೆ ಆ ಅರ್ಥದಲ್ಲಿಯೇ ಆ ಎರಡು ಪದಗಳ ಪೂರ್ಣಾರ್ಥ ಹೊಳೆಯುವುದಿಲ್ಲ. ಇನ್ನೂ ಸ್ವಲ್ಪ ಚೆನ್ನಾಗಿ ಪರಿಶೀಲಿಸಿದರೆ ಆಕಾಶದಲ್ಲಿ ಯಾವ ಹೂವುಗಳೂ ಇಲ್ಲ ಎಂಬುದು ಹೊಳೆದು ಆ ಮಾತು ಸುಳ್ಳು ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ಯಾವುದು ಅಸಂಭವವಾದದ್ದೋ ಅದನ್ನು ಸೂಚಿಸಲು **ಗಗನ ಕುಸುಮ, ಬಂಜೆಯ ಹಿರಿಯಮಗ, ಮೊಲದ ಕೊಂಬು** ಮುಂತಾದ ಶಬ್ದಗಳನ್ನು ಆಲಂಕಾರಿಕವಾಗಿ ಉಪಯೋಗಿಸುತ್ತಾರೆ.

**ಗಚ್ಚಿನ ಮನೆ** ಗಚ್ ಎನ್ನುವುದು ಪಾರಸೀ ಭಾಷೆಯ ಶಬ್ದ. ಇದು ಮರಾಠಿಯಲ್ಲಿ ಗಚ್ಚೀ ಎಂದಾಗಿದೆ. ಗಚ್ಚಿ ಎಂದರೆ ಸುಣ್ಣ ಬೆರೆಸಿದ ಮರಳು-ಗಾರೆ. ಗಚ್ಚಿನ ಮನೆ ಎಂದರೆ ಗಾರೆಯಿಂದ ಕಟ್ಟಿದ ಮನೆ. ಗಚ್ಚಿನ ನೆಲ ಎಂದರೆ ಗಾರೆ ಹಾಕಿ ನುಣುಪು ಮಾಡಿದ ನೆಲ.

**ಗಜಚರ್ಮಾಂಬರನೇ ಎಂದರೇನು?** ಗಜಚರ್ಮ ಎಂದರೆ ಆನೆಯ ಚರ್ಮ. ಅಂಬರ ಎಂದರೆ ಬಟ್ಟೆ. ಆನೆಯ ಚರ್ಮವನ್ನು ಬಟ್ಟೆಯಾಗಿ ಉಪಯೋಗಿಸುವವನೆ ಗಜಚರ್ಮಾಂಬರ. ಅಂದರೆ ಈಶ್ವರ. ಗಜಾಸುರ ಮಹಿಷಾಸುರನ ಮಗ. ಶಿವನಿಂದ ವರವನ್ನು ಪಡೆದು ಈ ರಾಕ್ಷಸನು ದೇವತೆಗಳನ್ನು ಹಿಂಸಿಸುತ್ತಿದ್ದನು. ಕೊನೆಗೆ ಶಿವನೇ ಇವನನ್ನು ಕೊಲ್ಲಬೇಕಾಯಿತು. ಆಗ ಗಜಾಸುರನು ತನ್ನನ್ನು ಕೊಂದು ತನ್ನ ಚರ್ಮವನ್ನು ಶಿವನು ಧರಿಸಬೇಕೆಂದು ಕೇಳಿಕೊಂಡನು. ಅದರಂತೆಯೇ ಮಾಡಿ ಶಿವನು ಗಜಚರ್ಮಾಂಬರಧಾರಿಯಾದನು. ಶಿವನನ್ನು ಗಜಚರ್ಮಾಂಬರನೇ ಎಂದು ಕರೆಯಬಹುದು.

**ಗಟಾರ, ಗಟಾರು** ಇದು ಇಂಗ್ಲಿಷ್ ಶಬ್ದ. Gutter ಅದು ಇಂಗ್ಲಿಷಿಗೆ ಹಳೆಯ ಫ್ರೆಂಚ್ ಭಾಷೆಯ Gutiere ಎಂಬ ಶಬ್ದದಿಂದ ಬಂದಿದೆ. ಆ ಭಾಷೆಗಳಲ್ಲಿ ಮಳೆಯ ನೀರನ್ನು ಒಯ್ಯಲು ಮಾಡಿರುವ ಸಣ್ಣ ಕಾಲುವೆಗಳು ಎಂದು ಅರ್ಥ. ಇದು ಕೊಳವೆಗಳೂ ಆಗಬಹುದು. ಇದಕ್ಕೆ ಕೊಳಚೆ ಪ್ರದೇಶ Slum ಎಂಬ ಅರ್ಥವೂ ಇದೆ. ಕನ್ನಡದಲ್ಲಿ ಇರುವುದು ಒಂದೇ ಅರ್ಥ. ಗ್ರಾಮಸಾರವು ಹರಿಯುವ ಕೊಳಕು ಮೋರಿ; ಚರಂಡಿ.

**ಗಡಣ** ಈ ಶಬ್ದ ಸಂಸ್ಕೃತದ ಘಟನ ಎಂಬ ಶಬ್ದದ ತದ್ಭವ. ಇದಕ್ಕೆ ೧. ಸಮೂಹ, ಗುಂಪು ೨. ಸಹವಾಸ ೩. ಗದ್ದಲ ಮುಂತಾದ ಅರ್ಥಗಳಿವೆ. ಗಡಣೆ ಶಬ್ದಕ್ಕೆ ಮೇಳ, ಗಾಯನ ಎಂಬ ಅರ್ಥವೂ ಇದೆ. ನಟ್ಟುವರು, **ಮದ್ದಳಿಗರು, ಗಡಣೆಯ ತಾಳಧಾರಿಗಳು** ಎಂದು ಕನಕದಾಸರ ವರ್ಣನೆಯಿದೆ, ಮೋಹನ ತರಂಗಿಣಿಯಲ್ಲಿ (೨೦-೩೧) ಗಡಣಿಸು ಎಂದರೆ ಗುಂಪಾಗು, ಒಟ್ಟುಗೂಡು ಎಂಬರ್ಥದಲ್ಲಿಯೂ ಉಪಯೋಗಿಸಬಹುದು.

**ಗಡದ್ದು.** ಇದು ಮರಾಠೀ ಭಾಷೆಯ ಶಬ್ದ. ಇದಕ್ಕೆ ತುಂಬ, ಹೆಚ್ಚು, ಭರ್ಜರಿ ಎಂಬ ಅರ್ಥಗಳಿವೆ.

**ಗಡಿಗೆ** ನೀರು ಎಂಬುದು ಸಂಸ್ಕೃತದ ಪೂರ್ಣ ಕುಂಭ ಎಂಬ ಶಬ್ದಕ್ಕೆ ಸಮೀಪವಾಗಿದೆ. ಪೂರ್ಣಕುಂಭ ಎಂಬುದು ಗೌರವಾರ್ಹ ವ್ಯಕ್ತಿಗಳನ್ನು ಒಂದು ಪ್ರದೇಶಕ್ಕೆ ಸ್ವಾಗತಿಸುವಾಗ ಸ್ವಾಗತಿಸುವವರ ಮುಖ್ಯನು ಹಿಡಿದುಬರುವ ನೀರು ತುಂಬಿದ ಕುಂಭವನ್ನು ಸೂಚಿಸುತ್ತದೆ. ಗಡಿಗೆ ನೀರು ಈ ಬಗೆಯ ವಿಧಿಯಲ್ಲ.

**ಗಣಪತಿಗೆ ಹೇರಂಬ ಎನ್ನುವುದರ ಅರ್ಥವೇನು?** ಮುದ್ಗಲ ಪುರಾಣದಲ್ಲಿ ಗಣೇಶನ ಮೂವತ್ತೆರಡು ಸ್ವರೂಪಗಳನ್ನು ವರ್ಣಿಸಲಾಗಿದೆ. ಐದು ಆನೆಯ ಮುಖಗಳುಳ್ಳ, ಹತ್ತು ಕೈಗಳುಳ್ಳ, ಬಹು ಬಿಳಿಯ ಬಣ್ಣದ, ಸಿಂಹವಾಹನನಾದ, ಅಭಯವರದ, ಪಾಶ, ದಂತ, ಅಕ್ಷಮಾಲೆ, ಅಂಕುಶ, ಪರಶು, ಮುದ್ಗರ ಮತ್ತು ಮೋದಕ ಹಸ್ತನಾದವನು ಹೇರಂಬ. ಈ ವಿವರಗಳನ್ನು ಪ್ರೊ॥ ಎಸ್.ಕೆ. ರಾಮಚಂದ್ರರಾಯರು ರಚಿಸಿರುವ ಪ್ರತಿಮಾ ಕೋಶದಲ್ಲಿ ಕಾಣಬಹುದು. ಪುಟ ೨೪೦. ಇದಲ್ಲದೆ ಬ್ರಹ್ಮಾಂಡ ಪುರಾಣದಲ್ಲಿ ಒಂದು ವಿಚಿತ್ರವಾದ ಕಥೆ ಬರುತ್ತದೆ. ಗಣಪತಿಯೂ ಕುಮಾರನೂ ಬಾಲಕರಾಗಿದ್ದಾಗ ಆಟವಾಡುತ್ತ ಆಡುತ್ತ ಅವರಿಬ್ಬರಿಗೂ ಜಗಳ ಬಂತು. ಗಣಪತಿಯು ಕುಮಾರಸ್ವಾಮಿಯ ಆರುತಲೆಗಳಲ್ಲಿ ಒಂದರ ಕೂದಲನ್ನು ಹಿಡಿದು ಎಳೆದುಕೊಂಡು ಹೋಗಿ ಶಿವನ ಆಸನಕ್ಕೆ ಕಟ್ಟಿಬಿಟ್ಟನಂತೆ. ಕುಮಾರಸ್ವಾಮಿಯು ತನ್ನನ್ನು ಮಂಚಕ್ಕೆ ನೇತುಹಾಕಿರುವ ಸ್ಥಿತಿಯನ್ನು ಶಿವನಿಗೆ ಹೇಳಿಕೊಂಡು ಕಿರಿಚಾಡಿದನು. ಆಗ ಗಣಪತಿಗೆ ಹೇರಂಬ ಎಂಬ ಹೆಸರು ಬಂತಂತೆ. ಇವೆಲ್ಲ ಸ್ವಾರಸ್ಯವಾದ ವಿಚಾರಗಳು ಆ ಪುರಾಣದಲ್ಲಿ ದೊರೆಯುತ್ತದೆ.

**ಗಣಪೆಕಾಯಿ** ಸಾಗರದ ಸುತ್ತಮುತ್ತ ಇದು ಒಂದು ಬಳ್ಳಿಯಲ್ಲಿ ಬಿಡುವಕಾಯಿ. ಇದನ್ನು ಔಷಧಕ್ಕೆ ಉಪಯೋಗಿಸುತ್ತಾರೆ. ಅವರೆಕಾಯಿಯ ಆಕಾರದ ದೊಡ್ಡಕಾಯಿ ಬಿಡುತ್ತದೆ. ಮರದ ಮೇಲೆ ಹಬ್ಬುತ್ತದೆ. ಇದರ ಬೀಜವು ಮಾನವನ ಮಂಡಿ ಚಿಪ್ಪಿನ ಆಕಾರದಲ್ಲಿರುತ್ತದೆ. ಇದು ತುಂಬ ನುಣುಪಾದ ಮೇಲ್ಮೈಯನ್ನು ಹೊಂದಿರುವುದರಿಂದ ಅದನ್ನು ಗಾರೆ ನೆಲವನ್ನು ಉಜ್ಜಿ ನುಣುಪು ಮಾಡಲು ಉಪಯೋಗಿಸುತ್ತಾರೆ ಎಂದು ನನ್ನ ಸಾಗರದ ಮಿತ್ರರು ತಿಳಿಸಿದ್ದಾರೆ.

**ಗಣರಾಜ್ಯೋತ್ಸವ** ಗಣರಾಜ್ಯ ಎಂದರೆ ರಾಜನಿಲ್ಲದ ಮತ್ತು ದೇಶದ ಪ್ರಜೆಗಳು ಚುನಾಯಿಸಿದ ಅಧ್ಯಕ್ಷರನ್ನುಳ್ಳ ರಾಜ್ಯ. ಅಂಥ ರಾಜ್ಯದಲ್ಲಿ ಆಡಳಿತದ ಎಲ್ಲ ಅಧಿಕಾರವೂ ಮತನೀಡಲು ಅರ್ಹರಾದ ಪ್ರಜೆಗಳಿಗೆ ಸೇರಿದ್ದು. ಅವರು ಚುನಾಯಿಸಿದ ಅವರ ಪ್ರತಿನಿಧಿಗಳು ಆ ಅಧಿಕಾರವನ್ನು ಉಪಯೋಗಿಸಿ ಆಡಳಿತವನ್ನು ನಡೆಸುತ್ತಾರೆ. ಇಂಥ ರಾಜ್ಯವು ಸ್ಥಾಪಿತವಾದ

ದಿನವನ್ನು ಗಣರಾಜ್ಯದ ಉತ್ಸವ ಎಂದು ಆಚರಿಸುತ್ತಾರೆ. ಇದೇ Republic Day.

**ಗಣಿಕೆ** ಇದು ಸಂಸ್ಕೃತದ ಗಣಿಕಾ ಶಬ್ದದ ತದ್ಭವ. **ವಿಟಗಣೋ ಅಸ್ಯಾ ಅಸ್ತೀತಿ ಗಣಿಕಾ** ಎಂದು ಟೀಕೆ. ಆಕೆಗೆ ವಿಟರ ಗುಂಪೇ ಜತೆಗಿದೆ ಎಂಬುದರಿಂದ ಆಕೆಯ ಹೆಸರು ಗಣಿಕೆ.

**ಗಣಿಗನೂರು** ಚಾಮರಾಜನಗರದ ಸುತ್ತಮುತ್ತ ಇರುವ ಊರುಗಳಲ್ಲಿ ಒಂದು. ಏಕೆಂದರೆ ಮೈಸೂರು ಜಿಲ್ಲೆಯ ಚಾಮರಾಜನಗರದಲ್ಲಿ ಒಂದು ಶಾಸನದಲ್ಲಿ ಉಕ್ತವಾದ ಎಲ್ಲ ಊರುಗಳೂ ಇವೆ. ಬದಣಗುಪ್ಪೆ, ಕೊಳೆಯನೂರು, ಮುಟ್ಟಿಗೆ, ಧಾಸನೂರು, ಗಣಿಗನೂರು, ಉಮ್ಮತ್ತೂರು, ಆಲ್ಗೋಡು, ತಗಡೂರು ಎಂಬ ಎಲ್ಲ ಹಳ್ಳಿಗಳೂ ಹೆಸರಿನಲ್ಲಿ ಅಲ್ಪಸ್ವಲ್ಪ ಬದಲಾವಣೆಯೊಡನೆ ಅಲ್ಲಿಯೇ ಇವೆ. ಆದುದರಿಂದ ಈ ಗಣಿಗನೂರ ಶಾಸನವನ್ನು ಚಾಮರಾಜನಗರಕ್ಕೆ ಸಂಬಂಧಿಸಿದಂತೆ ಪರಿಶೀಲಿಸಬೇಕು. ಈ ಶಾಸನವು ಸ್ವಿಟ್ಜರ್‌ಲೆಂಡ್‌ನ ಬಾಸೆಲ್ ಮಿಷನ್ನಿನ ಲ್ಯೂಥೇರಿನ ವಸ್ತುಸಂಗ್ರಹಾಲಯದಲ್ಲಿ ಈಗ ಇರುವುದರಿಂದ ಅದಕ್ಕೆ ಹೆಚ್ಚು ಪ್ರಾಧಾನ್ಯ ಬರುತ್ತದೆ.

**ಗತ್ತು** ಇದು ಹಿಂದೀ ಮತ್ತು ಮರಾಠೀ ಭಾಷೆಯ ಶಬ್ದ. ಇದಕ್ಕೆ ೧. *ಠೀವಿ, ದರ್ಪ, ಜಬ್ಬು, ಆದಬ್ಬು* ೨. *ಕುಯುಕ್ತಿ, ತಂತ್ರ* ೩. *ತಾಲಮಾನದಲ್ಲಿ ಒಂದುಲಯ* ಎಂಬ ಅರ್ಥಗಳಿವೆ. ಗಮ್ಮತ್ತು ಶಬ್ದಕ್ಕೆ ಇದು ಸದಾ ಜೊತೆಯಲ್ಲಿ ಬರುತ್ತದೆ. ಗಮ್ಮತ್ತು ಎಂದರೆ ೧. *ಠೀವಿ, ಜಬ್ಬು, ಗತ್ತು* ೨. *ತಮಾಷೆ, ವಿನೋದ, ಮೋಜು* ಎಂದರ್ಥ. ಇದೂ ಹಿಂದೀ ಭಾಷೆಯ ಶಬ್ದ.

**ಗದ್ಯಾಣ** ಚಾರಿತ್ರಿಕವಾಗಿ ಒಂದು ಕಾಲದಲ್ಲಿ ಇದ್ದ ನಾಣ್ಯಗಳಿಗೆ ಬೇರೆ ಬೇರೆ ಹೆಸರುಗಳಿದ್ದವು. ಕಾಸು, ಹಾಗ, ಹಣ, ಗದ್ಯಾಣ ಮುಂತಾಗಿ ನಾಣ್ಯಗಳಿರುತ್ತಿದ್ದವು. ಇವು ಚಿನ್ನದ ನಾಣ್ಯಗಳು. ಇವುಗಳನ್ನು ಗುಲಗಂಜಿಯ ತೂಕದ ಪ್ರಮಾಣದಲ್ಲಿ ಸಿದ್ಧ ಮಾಡುತ್ತಿದ್ದರು. ೧೬ ಅಥವಾ ೩೨ ಗುಲಗಂಜಿ ತೂಕದ ನಾಣ್ಯ ಗದ್ಯಾಣ. ಹಳೆಯ ಶಾಸನಗಳಲ್ಲಿ ಗ/ ಎಂದು ಸೂಚಿಸಿದ್ದರೆ ಅದಕ್ಕೆ ಗದ್ಯಾಣ ಎಂದು ಹೆಸರು. ಇದು ಸಂಸ್ಕೃತದ ಗದ್ಯಾಣಕ ಎಂಬ ಶಬ್ದದಿಂದ ಬಂದುದು. ಪಂಪಭಾರತದಲ್ಲಿಯೇ ಗದ್ಯಾಣದ ಪ್ರಯೋಗವಿದೆ. '**ಸಾಯಿರ ಗದ್ಯಾಣದ ಪೊನ್ನೇ ಸಾಲ್ಗುಮಗ್ಗಳಂ ಬೇಡ**' (೬-೭೧ ವಚನ) ಎಂದು ಲೆತ್ತದಾಟ ಮೊದಲಾಗುತ್ತದೆ. ಶಿಲಾಶಾಸನಗಳಲ್ಲಿ ಅನೇಯ ಶತಮಾನದಲ್ಲಿಯೇ ಪ್ರಯೋಗಗಳು ದೊರಕುತ್ತವೆ.

**ಗಮ ಗಮ, ಘಮಘಮ** ಕನ್ನಡದ ಮೂಲ ಶಬ್ದಗಳಲ್ಲಿ ಸಾಮಾನ್ಯವಾಗಿ ಮಹಾಪ್ರಾಣಾಕ್ಷರಗಳು ಪ್ರಯೋಗದಲ್ಲಿರುವುದಿಲ್ಲ. ಗಮ ಎಂದರೆ ಸುವಾಸನೆ. ತೆಲುಗಿನಲ್ಲಿ ಗಮಲು ಎಂಬ ಶಬ್ದವಿದೆ. ಗಮಗಮ ಎನ್ನುವುದು ದ್ವಿರುಕ್ತಿ. ಕನ್ನಡದಲ್ಲಿ ಕಮ್ಮಿತು, ಕಂಪು ಎಂಬ ಶಬ್ದಗಳಿಗೂ ಇದಕ್ಕೂ ಸಂಬಂಧವಿರಬಹುದು. ಆದರೂ ಘಮ ಎಂಬುದೂ ಘಮಘಮ ಎಂಬುದೂ ಸರಿಯಾದವು. ಅವು ಈಗಲೂ ಜನತೆಯಲ್ಲಿ ಪ್ರಯೋಗದಲ್ಲಿವೆ. ಇದು ಗ್ರಾಮೀಣ ಭಾಷೆಯ ಪ್ರಭಾವವಿರಬಹುದು. '**ಅಮ್ಮಾನ ಗುಡಿ ಮುಂದೆ ಘಮ್ಮೆನ್ನೋದಿದು ಏನೆ. ಗಂಡು ಭೂತಾಳೆ, ಗಜನಿಂಬೆ ಘಮನಕ್ಕೆ ಹಿಂಡು ಮರತಿಲ್ಲ ಫಲಬಿಟ್ಟೊ**' ಇದೊಂದು ಹಳ್ಳಿಯಹಾಡು. "**ನೀವು ಮುಡಿದುಕೊಂಡಿರುವ ಮಲ್ಲಿಗೆಯ ಹೂವು ತುಂಬಾ ಘಮ್ಮೆನ್ನುತ್ತಿದೆ**" ಎಂದು ಯುವತಿಯರಿಗೆ ಹೇಳಿದರೆ ತುಂಬ ಸಂತೋಷಪಡುತ್ತಾರೆ, ಅವರು ಹೂವನ್ನು ಮುಡಿದಿದ್ದರೆ.

**ಗರಗಸ** ನೋಡಿ: ಕರಗಸ

**ಗರಜು** ಇದು ಅರಬ್ಬಿ ಶಬ್ದ. ಇದಕ್ಕೆ ಅಗತ್ಯ, ಆವಶ್ಯಕತೆ ಎಂದರ್ಥ. ಮರಾಠಿ ಭಾಷೆಯಲ್ಲಿ ಇದಕ್ಕೆ ಅಡ್ಡಿ, ಅಡಚಣೆ ಎಂಬ ಅರ್ಥಗಳೂ ಇವೆ.

**ಗರ್ಹಣೀಯ** ಎಂಬ ಶಬ್ದದ ಅರ್ಥ ಏನು, ಗರ್ಹಣ ಎಂದರೆ ನಿಂದೆ, ತೆಗಳಿಕೆ, ಬಯ್ಗುಳು.

ಆದುದರಿಂದ ಗರ್ಹಣೀಯ ಎಂದರೆ ಬೈಯುವುದಕ್ಕೆ ಅರ್ಹವಾದ (ಅರ್ಹನಾದ) ಎಂದು ವಿಶೇಷಣಾರ್ಥ. ನಿಂದಿಸುವುದಕ್ಕೆ ಸಾಧ್ಯವಾದ, ನಿಂದೆಯನ್ನು ಹೊಂದುವ ಎಂಬ ಅರ್ಥಗಳೂ ಬರುತ್ತವೆ. ಈ ಶಬ್ದದ ಅರ್ಥ ಗೊತ್ತಿದ್ದರೆ ಸಾಕು. ಅದನ್ನು ಪ್ರಯೋಗಿಸುವುದು ಅಷ್ಟು ಪ್ರಯೋಜನಕಾರಿಯಲ್ಲ.

**ಗಲಬರಿಸು** ಎಂಬ ಶಬ್ದ ಕನ್ನಡ ಭಾಷೆಯಲ್ಲಿ ಗ್ರಂಥಗಳಲ್ಲಿಯೂ ಪ್ರಯೋಗವಾಗಿದೆ. ಈ ಶಬ್ದವನ್ನು ಮುಖ್ಯವಾಗಿ ಪಾತ್ರೆಗಳನ್ನು ತೊಳೆಯುವಾಗ ಸ್ತ್ರೀಯರು ಉಪಯೋಗಿಸುತ್ತಾರೆ. ಒಂದು ಪಾತ್ರೆಯನ್ನು ಬೂದಿ ಮುಂತಾದ ವಸ್ತುಗಳ ಜೊತೆಯಲ್ಲಿ ಹುಳಿಹಚ್ಚಿ ತಿಕ್ಕಿದ ಬಳಿಕ ಆ ಎಲ್ಲ ಕಸವೂ ತೊಳೆದು ಹೋಗುವಂತೆ ನೀರಿನಲ್ಲಿ ಆ ಪಾತ್ರೆಯನ್ನು ಅತ್ತಿಂದಿತ್ತ ಚಲಿಸುವುದು. ಇದು ಹೊಳೆಯ ದಡ, ಕೆರೆ ಕಟ್ಟೆ ಕಾಲುವೆಗಳ ಬಳಿ ಮಾಡುವ ಕಾರ್ಯ. ಹೆಚ್ಚು ನೀರು ಇಲ್ಲದ ಕಡೆ ಈಗ ಪಾತ್ರೆಗೇ ನೀರು ಹೊಯ್ದು ಅದು ಶುಭ್ರವಾಗುವಂತೆ ಮಾಡುವಾಗಲೂ ಅದೇ ಪದವನ್ನು ಉಪಯೋಗಿಸುತ್ತಾರೆ. ಪ್ರಾರಂಭದಲ್ಲಿ ಇದು ಹರಿಯುವ ನೀರಿನಲ್ಲಿ ಅಥವಾ ನಿಂತ ನೀರಿನ ಜಲಾಶಯದಲ್ಲಿ ಪಾತ್ರೆ ತೊಳೆಯುವ ಕಾರ್ಯದ ಕೊನೆಯ ಘಟ್ಟಕ್ಕೆ ಉಪಯೋಗಿಸುತ್ತಿದ್ದ ಶಬ್ದ. ಈಗ ಮುಖವನ್ನು ಗಲಬರಿಸುತ್ತಾರೆ. ಇದು ಶಬ್ದಗಳ ಅರ್ಥವು ಬೆಳೆಯುವ ರೀತಿ. ಅ.ನ. ಕೃಷ್ಣರಾಯರ 'ಅಭಿಮಾನ' ಎಂಬ ಗ್ರಂಥದಲ್ಲಿ ಈ ಮಾತು ಬರುತ್ತದೆ. **'ಅವನು ಬರುವ ಹೊತ್ತಿಗೆ ನೀನು ಮೋರೆ ಗಲಬರಿಸಿಕೊಂಡು ಬಟ್ಟೆ ಬದಲಾಯಿಸು'** (ಪುಟ ೭). ಇದೊಂದು ವಿಚಿತ್ರವಾದ ಶಬ್ದ. ಕಲಂಕು, ಅಲುಬು ಎಂಬ ಎರಡು ಶಬ್ದಗಳು ಒಟ್ಟು ಸೇರಿ ಹುಟ್ಟಿಕೊಂಡಿರುವ ಶಬ್ದದಂತಿದೆ. ಕಲಂಕು = ಕಲಕು = ಕದಡು. ಅಲುಬು = ನೀರಿನಲ್ಲಿ ತೊಳೆ. ಈಗ ಪರಿಶೀಲಿಸಿ ಅದರ ವ್ಯುತ್ಪತ್ತಿಯನ್ನು ಗಮನಿಸಿ.

**ಗಲೀಜು** ಇದು ಅರಬ್ಬೀ ಭಾಷೆಯ ಶಬ್ದ. ಅದಕ್ಕೆ ಕೊಳಕು, ಹೊಲಸು ಎಂಬ ಅರ್ಥಗಳಿವೆ. ಮರಾಠಿಯಲ್ಲಿ ಗಲಿಚ್ಚ ಎಂಬ ರೂಪದಲ್ಲಿ ಈ ಶಬ್ದವು ಪ್ರಯೋಗವಾಗುತ್ತಿದೆ.

**ಗಲ್ಲ** ಗಲ್ಲ ಕನ್ನಡ ಶಬ್ದವಲ್ಲ. ಸಂಸ್ಕೃತ ಶಬ್ದ. ಇದಕ್ಕೆ ೧. ಕೆನ್ನೆ ೨. ಗದ್ದ ಎಂದು ಎರಡು ಅರ್ಥಗಳಿವೆ. ಬತ್ತಿದ ಗಲ್ಲ ಎಂದಾಗ ಕೆನ್ನೆ ಎಂದರ್ಥ. **'ಮೆಲ್ಲಮೆಲ್ಲನೆ ಬಂದು ಗಲ್ಲಕೆ ಮುದ್ದು ಕೊಟ್ಟು ನಿಲ್ಲದೆ ಓಡಿಪೋದ'** ಎಂದಾಗ ಅದು ಕೆಳತುಟಿಯ ಕೆಳಭಾಗ ಗದ್ದ. ಗಡ್ಡ ಎಂಬ ಶಬ್ದಕ್ಕೆ ಗದ್ದದ ಮೇಲಿನ ಕೂದಲು ಎಂಬ ಅರ್ಥ ವ್ಯಾಪಕವಾದುದು.

**ಗಲ್ಲಿ** ಇಕ್ಕಟ್ಟಾದ ಬೀದಿ. ಎರಡು ಕಡೆಯೂ ಮನೆಗಳಿರುವ ಸಣ್ಣ ಬೀದಿ. ಇದು ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ಪ್ರಯೋಗದಲ್ಲಿದೆ. ಇಂಗ್ಲಿಷ್‌ನ Gully ಎಂಬ ಶಬ್ದಕ್ಕೂ ಇದಕ್ಕೂ ಸಂಬಂಧವಿಲ್ಲ. ಗುಜರಾತಿ, ಪಂಜಾಬಿ ಮತ್ತು ಸಿಂಧಿ ಭಾಷೆಗಳಲ್ಲಿ ಇದು ಗಲ್ಲೀ ಎಂಬ ರೂಪದಲ್ಲಿ ಪ್ರಯೋಗದಲ್ಲಿದೆ. ನೋಡಿ: ಓಣಿ.

**ಗಲ್ಲೆ** ಇದು ಬೈಗುಳಿಗೆ ಉಪಯೋಗವಾಗುವ ಶಬ್ದ. ನಿನ್ನ **ತಲೆ ಮೇಲೆ** ನನ್ನ **ಗಲ್ಲೆ ಹಾಕ** ಎಂಬ ವಾಕ್ಯದಲ್ಲಿ ಹೆಚ್ಚಾಗಿ ಪ್ರಯೋಗವಾಗುತ್ತದೆ. ಇದು ಗ್ರಾಮ್ಯ ಶಬ್ದ. ಗರೆಣೆ-ಗರಳೆ ಎಂಬುದರ ಗ್ರಾಮ್ಯರೂಪ. ರಕ್ತದ ಉಂಡೆ ಎಂಬರ್ಥ ಬರುತ್ತದೆ. ಮುಟ್ಟಿನ ರಕ್ತಸ್ರಾವವನ್ನು ಇದು ತಿಳಿಸುತ್ತದೆ. ಅಂಥ ಹೊಲಸನ್ನು ತಲೆಮೇಲೆ ಹಾಕ ಎಂದರೆ ನಿನ್ನ ತಲೆ ತಿಪ್ಪೆಯಾಗಲಿ, ಎಂದರೆ ನೀನು ತಿಪ್ಪೆಯ ಮಣ್ಣಿನಲ್ಲಿ ಹೂತುಹೋಗು, ಎಂದರೆ ಸಾಯಿ ಎಂದರ್ಥ.

**ಗಳಸ್ಯ ಕಂಠಸ್ಯ** ಸಂಸ್ಕೃತದಲ್ಲಿ ಕೊರಳು, ಕತ್ತು, ಎಂಬುದಕ್ಕೆ ಗಳ ಎಂದೂ ಕಂಠ ಎಂದೂ ಎರಡು ಶಬ್ದಗಳಿವೆ. ಎರಡಕ್ಕೂ ಒಂದೇ ಅರ್ಥವಾದುದರಿಂದ ಕತ್ತಿನ ಮೇಲೆ ಪರಸ್ಪರ ಕೈಹಾಕಿಕೊಂಡು ಓಡಾಡುವ ಆತ್ಮೀಯರಾದ ಸ್ನೇಹಿತರ ಸಂಬಂಧವನ್ನು ತಿಳಿಸಬೇಕಾದರೆ ಸಂಸ್ಕೃತ ಬಲ್ಲವರು ಈ ಪದಪುಂಜವನ್ನು ಉಪಯೋಗಿಸುತ್ತಾರೆ. ಅದರ ಉಚ್ಚಾರಣೆ

ತಿಳಿಯದೆ ಕೆಲವರು ತಪ್ಪಾಗಿ ಗಂಟಸ್ಯ ಕಳಸ್ಯ ಎಂದು ಹೇಳುತ್ತಿರಬಹುದು. ಅಂಥವರಿಗೆ ತಿಳಿವಳಿಕೆ ಕೊಡಬೇಕು ಬಲ್ಲವರು.

**ಗಳಿತ** ಗಳಿತ ಎಂದರೆ ಪಕ್ವವಾದ ಎಂಬ ಅರ್ಥದಲ್ಲಿ ಕೆಲವು ಕಡೆ ಪ್ರಯೋಗದಲ್ಲಿದೆ. ಸರಿಯಾದ ಶಬ್ದ ಕಳಿತ. ಗಳಿತ ಅಲ್ಲ. ಕಳಿ ಎಂಬ ಧಾತುವಿಗೆ ಹಣ್ಣಾಗು, ಮಾಗು ಎಂಬ ಅರ್ಥಗಳಿವೆ. ಗಳಿ ಎಂಬುದು ತಪ್ಪುರೂಪ. ಗ್ರಾಮ್ಯದಲ್ಲಿ ಅದು ಕೆಲವು ಪ್ರದೇಶಗಳಲ್ಲಿ ಉಪಯೋಗದಲ್ಲಿ ಇರಬಹುದು, ಬರಹದಲ್ಲಿಲ್ಲ. **ಗಳಿತವಾಗು** ಎಂದರೆ ಕಳಚಿ ಬೀಳು, ಉದುರು ಎಂದು ಅರ್ಥ. ಮನುಷ್ಯನಿಗೆ ಹಲ್ಲುಗಳು ಗಳಿತವಾಗಬಹುದು. ಮರದಿಂದ ಹಣ್ಣು ಕೆಳಕ್ಕೆ ಗಳಿತವಾಗಬಹುದು. 'ಭಜಗೋವಿಂದಂ ಸ್ತೋತ್ರ' ದಲ್ಲಿ **'ಅಂಗಂ ಗಳಿತಂ ಪಲಿತಂ ಮುಂಡಂ'** ಸಾಲುಗಳನ್ನು ನೆನಪಿಗೆ ತಂದುಕೊಳ್ಳಿ.

**'ಗಳಿಸು'** 'ಗಳಿಸು' ಧಾತುವಿನಿಂದ 'ಗಳಿತ' ರೂಪ ಸಾಧ್ಯವೇ ? ಪ್ರೌಢಶಾಲೆಯ ಹತ್ತನೇ ತರಗತಿಯ ಕನ್ನಡ ಪಠ್ಯವಾದ 'ಮೈಕಲ್ ಫಾರಡೆ' ಎಂಬ ಪಾಠದಲ್ಲಿ (ಪುಟ. ೪೯) ಈ ಶಬ್ದವನ್ನು ಉಪಯೋಗಿಸಿದ್ದಾರೆ. ಕನ್ನಡದಲ್ಲಿ 'ತ' ಎಂಬ ಕೃದಂತ ಭಾವನಾಮ ಪ್ರತ್ಯಯವಿರುವುದು ನಿಜ. ಅದನ್ನು ಪ್ರಯೋಗಿಸುವಾಗ ತುಂಬ ಎಚ್ಚರಿಕೆಯಿರಬೇಕು. ಕುಡಿತ, ತುಳಿತ, ಕುಣಿತ, ನುಡಿತ ಮುಂತಾದ ರೂಪಗಳಿಗೆ ಸಹಾಯಕವಾದ ಕುಡಿ, ತುಳಿ, ಕುಣಿ, ನುಡಿ ಮುಂತಾದ ಧಾತುಗಳಿವೆ. ಆದರೆ 'ಗಳಿ' ಎಂಬ ಧಾತುವಿಲ್ಲ. ಗಳಿಕೆಯ ವ್ಯುತ್ಪತ್ತಿಯು ಕೂಡ 'ಗಳಿಸು +ಇಕೆ' ಎಂಬುದು ನಿಜ. ಆದರೆ ಗಳಿಸು ಎಂಬುದಕ್ಕೆ ಮೂಲ 'ಘಟಿಸು'. ಈ ಶಬ್ದ ಸಂಸ್ಕೃತದ 'ಘಟನ' ಶಬ್ದಕ್ಕೆ 'ಇಸು' ಸೇರಿಸಿ ಮಾಡಿಕೊಂಡಿರುವುದು 'ಘಟಿಸು'. ಘಟಿಯಿಸು, ಘಟಿಸುಯಿಸು, ಘಟಿ ಮುಂತಾದ ರೂಪಗಳು ಕನ್ನಡ ಸಾಹಿತ್ಯದಲ್ಲಿ ಪ್ರಯೋಗವಾಗಿವೆ. ಹೀಗಿರುವುದರಿಂದ 'ಗಳಿತ' ಎಂಬುದು ಗಳಿಕೆ ಎಂಬ ಅರ್ಥದ ತಪ್ಪುರೂಪ. ಸಂಸ್ಕೃತದ ಗಲಿತ ರೂಪದಿಂದ ಕನ್ನಡಕ್ಕೆ ಬಂದ 'ಗಳಿತ' ಎಂಬ ಶಬ್ದವೊಂದಿದೆ. ಇದಕ್ಕೆ ಜಾರಿದ, ಬಿದ್ದ, ಸೋರಿಹೋದ ಮುಂತಾದ ಅರ್ಥಗಳಿವೆ. ಕನ್ನಡದ ಪ್ರಾಚೀನ ಕಾವ್ಯಗಳಲ್ಲಿ ಇದರ ಪ್ರಯೋಗಗಳುಂಟು. ರನ್ನನ 'ಗದಾಯುದ್ಧ' ಎಂಬ ಕಾವ್ಯದಲ್ಲಿ **'ಗಳಿತ ಕೋಪನೇ ಕಲಿಭೀಮಂ'** (೧-೬೩) ಎಂಬ ಪ್ರಯೋಗವಿದೆ. ಇದರ ಮೂಲ, ಅರ್ಥ ಎರಡೂ ಬೇರೆ. ಇದು ತಿಳಿದಿದ್ದರೆ ಪ್ರಯೋಜನವುಂಟು.

**ಗಾಂಚಾಲಿ** ಇದು ತುಂಬ ಪ್ರಚಾರದಲ್ಲಿರುವ ಶಬ್ದ. ಗಾಂಡ್ಚಾಲಿ ಎಂಬ ರೂಪವೂ ಕನ್ನಡದಲ್ಲಿ ಉಂಟು. ಗ್ರಾಮೀಣ ಭಾಷೆಯಲ್ಲಿ ಇದರ ಪ್ರಯೋಗ ದೈನಂದಿನದ ಮಾತಿನಲ್ಲಿ ಕಂಡುಬರುತ್ತದೆ. ಇದಕ್ಕೆ ಮೊದಲ ಅರ್ಥ ಸೊಕ್ಕು, ಗರ್ವ, ಮದ ಎಂದು ಕಾಣಬರುತ್ತದೆ. ಆದರೆ ಹಾಗೆ ಅರ್ಥ ಇರುವುದು ಶಿಷ್ಟ ಪ್ರಯೋಗದಲ್ಲಿ ಮಾತ್ರ.

ಈ ಶಬ್ದದ ಚರಿತ್ರೆಯನ್ನು ತಿಳಿಯುವುದರಿಂದ ಭಾಷೆಯಲ್ಲಿ ಶಬ್ದಗಳು ಏನೇನಾಗುತ್ತವೆ ಎಂಬುದರ ಕಿರುಪರಿಚಯವಾದರೂ ದೊರಕುತ್ತದೆ. ಟರ್ನರ್ ಈ ಶಬ್ದವನ್ನು ಕುರಿತು ವಿವರಣೆ ನೀಡುತ್ತಾ ಇದು ಸಂಸ್ಕೃತದ ಗಂಡ ಅಥವಾ ಗಲ ಶಬ್ದದಿಂದ ಬಂದಿತೆನ್ನುತ್ತಾನೆ. ಅವನು ತಪ್ಪಿದ್ದಾನೆ ಎನ್ನುವುದು ಸ್ವಯಂ ಸ್ಪಷ್ಟ. ಕನ್ನಡದ ಎಲ್ಲ ಶಬ್ದಗಳನ್ನೂ ಸಂಸ್ಕೃತದಿಂದಲೇ ತರುವವರಿಗೆ ಮಾತ್ರ ಈ ಮಾತು ಸರಿಯಾಗಿ ತೋರಬಹುದು. ಆದರೆ ವಸ್ತು ಸ್ಥಿತಿ ಬೇರೆ. ಆಫ್ರೋಏಷಿಯಾಟಿಕ್ ಸಂಬಂಧವುಳ್ಳ ಗಾಂಡ್ ಎಂಬ ಶಬ್ದವಿದೆ. ಕನ್ನಡದಲ್ಲಿ ಗಂಡ ಎಂದರೆ ಪುರುಷನ ಜನನೇಂದ್ರಿಯ. ಗೆಲ್ಲೆ ಎಂದರೆ ಗುದ. ಮರಾಠಿಯಲ್ಲಿ **ಗಾಂಡ್‌ಫಾಟಣೇ ಗಾಂಡ್ ಮಾರಣೇ** ಎಂಬ ಶಬ್ದಗಳಿವೆ. ಇದಕ್ಕೆ ಗುದ ಮೈಥುನ ಮಾಡು ಎಂದರ್ಥ. ಗಾಂಡಾಳ್ ಶಬ್ದಕ್ಕೆ ವ್ಯಭಿಚಾರ ಎಂಬ ಅರ್ಥವಿದೆ. ಗಾಂಡ್ಯಾ ಎಂದರೆ ಷಂಡ, ನಪುಂಸಕ. ಹಿಂದೀ ಭಾಷೆಯಲ್ಲಿ ಗಾಂಡೂ ಎಂದರೆ ೧. ಗುದಮೈಥುನ ಮಾಡುವವನು

ಮತ್ತು ೨. ಹೇಡಿ ಎಂಬ ಎರಡು ಅರ್ಥಗಳಿವೆ. **ಗುದಾಮ್ಮೈಥುನ್ ಕರಾನೆವಾಲಾ** ಮತ್ತು **ಥರ್‌ಫೋಕ** ಎಂಬುದು ಆ ಭಾಷೆಯ ವಿವರಣೆ. ತೆಲುಗಿನಲ್ಲಿ ಗಾಂಡ್ ಎಂದರೆ ಗುದ. ಅಂಡು, ತಳ. ಎಲ್ಲ ವಸ್ತುಗಳ ತಳಭಾಗ. ಕನ್ನಡದಲ್ಲಿ ಅಂಡು ಎಂಬ ಶಬ್ದಕ್ಕೆ ತಳ ಎಂಬ ಅರ್ಥವಿದೆ. ಅವನಿಗೆ ವೇದಾಂತದ ಅಂಡೇ ತಿಳಿಯದು ಎಂದರೆ ಅವನು ಅಜ್ಞಾನಿ ಎಂದರ್ಥ. ಹಿಂದಿಯಲ್ಲಿ **ಗಾಂಡ್‌ಕೆ ನೀಚೆ ಗಂಗಾ ಬಹನಾ** ಎಂದರೆ ಬಹಳ ಐಶ್ವರ್ಯ ಉಂಟಾಗುತ್ತದೆ ಎಂದರ್ಥ. **ಗಾಂಡ್ ಗರ್ಹನ್ ಏಕ್‌ಹೋಜಾನಾ** ಎಂದರೆ ಅವನು ಮಣ್ಣು ಮುಕ್ಕಿದ ಎಂದರ್ಥ. ಹೀಗೆ ಈ ಶಬ್ದದ ಪ್ರಚಾರವಿದೆ.

ಕನ್ನಡದಲ್ಲಿ ಗಾಂಚಾಲಿ ಎಂದರೆ ಗುದಮ್ಮೈಥುನ ಎಂದೂ ಆಲಂಕಾರಿಕವಾಗಿ ಸೊಕ್ಕು, ಮದ, ಅಮಲು, ಗರ್ವ ಎಂದೂ ಅರ್ಥವಿದೆ. ಇದು Unparliamentary ಆದ ಶಬ್ದ. ನಿಘಂಟಿನ ವಿಚಾರವಾದುದರಿಂದ ಪ್ರಶ್ನೆಗೆ ದೀರ್ಘವಾಗಿ ಉತ್ತರವನ್ನು ನೀಡಬೇಕಾಯಿತು.

**ಗಾಂಡೀವಿ** ಎಂದರೆ ಅರ್ಜುನ. ಗಾಂಡಿ ಎಂಬ ಬಿಲ್ಲನ್ನು ಉಪಯೋಗಿಸುವವನು ಎಂದರ್ಥ. ಗಾಂಡಿವ ಎಂಬ ರೂಪವೂ ಇದೆ. ಅದರಿಂದ ಗಾಂಡೀವಿ ಎಂಬ ಶಬ್ದವೂ ಸಾಧಿತವಾಗುತ್ತದೆ. ಈ ಧನುಸ್ಸಿಗೆ ಅನೇಕ ಸಂಬಂಧಗಳು =ಗ್ರಂಥಿಗಳು ಇವೆ ಎಂದು ಇದಕ್ಕೆ ಗಾಂಡೀವ ಎಂದು ಹೆಸರು. ಇದು ಬ್ರಹ್ಮನಿಂದ ಇಂದ್ರನಿಗೆ, ಇಂದ್ರನಿಂದ ವರುಣನಿಗೆ, ವರುಣನಿಂದ ಅಗ್ನಿಗೆ, ಖಾಂಡವ ದಹನದಲ್ಲಿ ಅಗ್ನಿಯಿಂದ ಅರ್ಜುನನಿಗೆ ಬಂದು ಸೇರಿತು.

**ಗಾದಿ** ಇದು ಹಿಂದಿಯ 'ಗದ್ದಿ' ಎಂಬ ಶಬ್ದ. ಮರಾಠಿಯಲ್ಲಿ 'ಗಾದೀ' ಆಗಿ ನಮ್ಮಲ್ಲಿ 'ಗಾದಿ' ಆಗಿದೆ. ಇದಕ್ಕೆ ಮೊದಲನೆಯ ಅರ್ಥ 'ಹಿಂಜಿದ ಹತ್ತಿಯನ್ನು ತುಂಬಿದ ಮೆತ್ತನೆಯ ದಿಂಬು'; ಎರಡನೆಯ ಅರ್ಥ ಸಿಂಹಾಸನ. ಅಧಿಕಾರಿಯ ಪೀಠ ಅಥವಾ ಗದ್ದುಗೆ. ಕೆಲವು ವೀರಶೈವ ಜಂಗಮರ ಮಠಗಳ ಗುರುಗಳು ಸಮಾಧಿಸ್ಥರಾಗಿರುವ ಸ್ಥಳಗಳಿಗೆ 'ಗದ್ದುಗೆ' ಎಂಬ ಹೆಸರನ್ನು ಅನ್ವಯಿಸುತ್ತಾರೆ.

**ಗಾದೆ** ಎಂಬುದು ಸರಳವಾದ ಮಾತುಗಳಲ್ಲಿ ತುಂಬಿಸಿ ಇಟ್ಟಿರುವ ಪ್ರಯೋಜನಕರವಾದ ವಿವೇಕ ವಚನಗಳು. ಇವು ಮಾನವರ ಬಾಳಿಗೆ ದಾರಿದೀಪವಾಗಬಲ್ಲ ಅರ್ಥವಂತಿಕೆಯಿಂದ ಕೂಡಿರುತ್ತವೆ. ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು ಎಂಬುದು ಒಂದು ಗಾದೆ. ಇದರ ಅರ್ಥವನ್ನು ಕುರಿತು ಸ್ವಲ್ಪ ಚಿಂತನೆ ಮಾಡಿ ನೋಡಿದರೆ ಗಾದೆಗಳ ಅರ್ಥವಿಸ್ತಾರಕ್ಕೆ ದಾರಿತೋರಿಸುತ್ತದೆ. ಇದು ಸಂಸ್ಕೃತದ ಗಾಥಾ ಎಂಬ ಶಬ್ದದ ತದ್ಭವ. ಸಂಸ್ಕೃತದಲ್ಲಿ ಗಾಥಾ ಎಂಬ ಶಬ್ದಕ್ಕೆ ಹಾಡು, ಪದ್ಯ, ಸ್ತೋತ್ರ ಮುಂತಾದ ಅರ್ಥಗಳಿವೆ.

**ಗಾರುಡಿಗ** ಈ ಶಬ್ದವು ಗರುಡ ಎಂಬ ಶಬ್ದದಿಂದ ಬಂದಿದೆ. ಗಾರುಡಿ ಎಂದರೆ ಗರುಡನಿಗೆ ಸಂಬಂಧಪಟ್ಟ ವಿದ್ಯೆ. ಹಾವುಗಳನ್ನು ಹಿಡಿಯುವ ವಿದ್ಯೆ. ಜೊತೆಗೆ ವಿಷವನ್ನು ಪರಿಹಾರ ಮಾಡುವ ವಿದ್ಯೆ. ಇದನ್ನು ಕಲಿಸುವವನೇ ಗಾರುಡಿಗ. ಈ ಅರ್ಥವು ವ್ಯಾಪಕವಾಗಿ ಬೆಳೆದು ಈಗ ಯಕ್ಷಿಣಿ (Magic) ಮಾಡುವವನಿಗೂ ಇದೇ ಶಬ್ದವನ್ನು ಉಪಯೋಗಿಸುತ್ತಾರೆ.

**ಗಾಳಿ ಗುದ್ದುವುದು,** ನೋಡಿ: ಚರ್ವಿತ ಚರ್ವಣ

**ಗಾಳಿಗೋಪುರ** ಗಾಳಿ ಕೈಗೆ ಸಿಗದ ಯಾವ ಆಕಾರವೂ ಇಲ್ಲದುದು. ಪಂಚಭೂತಗಳಲ್ಲಿ ಒಂದು. ಇದರಿಂದ ಗೋಪುರವನ್ನು ಕಟ್ಟುವುದಕ್ಕೆ ಆಗುವುದಿಲ್ಲ. ಹೀಗೆ ಸಾಧಿಸಲಾಗದ ಆಸೆಗೆ ಗಾಳಿಗೋಪುರ ಕಟ್ಟುವುದು ಎನ್ನುತ್ತಾರೆ. ಈ ಮಾತು ಕನ್ನಡದಲ್ಲಿ ಹದಿನೈದನೆಯ ಶತಮಾನದಿಂದ ಪ್ರಚಾರದಲ್ಲಿದೆ. ಇಂಗ್ಲಿಷಿನಲ್ಲಿ Building castles in the air ಎಂಬ ಒಂದು ನುಡಿಗಟ್ಟಿದೆ. ಅದಕ್ಕೂ ಇದೇ ಅರ್ಥ. ಹಗಲುಗನಸು ಎಂಬ ಅರ್ಥ ಎರಡು ಭಾಷೆಗಳಿಗೂ ಸರಿಹೊಂದುತ್ತದೆ. ಇಂಥ ಕಾರ್ಯಗಳು ಪೌರಾಣಿಕ ಕಥೆ ಅಥವಾ Fairy Tale ಗಳಲ್ಲಿ

ನಡೆಯುತ್ತದೆ. ಅಲ್ಲಾವುದ್ದೀನ್ ಮತ್ತು ಅವನ ಅದ್ಭುತ ದೀಪದಂಥ ಕಥೆಗಳಲ್ಲಿ ನಡೆಯುವ ಕಾಲ್ಪನಿಕ ಕ್ರಿಯೆಗಳು ಇವು. ಆದರೂ ತುಂಬ ಮನೋಹರವಾದವು. ಇಂಗ್ಲಿಷಿನಲ್ಲಿ ಇದನ್ನು Building castles in spain ಎಂದೂ ಉಪಯೋಗಿಸುತ್ತಾರೆ, ಇದೇ ಅರ್ಥದಲ್ಲಿ.

**ಗಿರವಿ** ಇದು ಪಾರಸೀ ಭಾಷೆಯ ಗಿರವೀ ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಒತ್ತೆ ಇಡುವುದು, ಅಡವು ಇಡುವುದು ಎಂದರ್ಥ. ಗಿರವಿ ಮಾಲು ಎಂದರೆ ಅಡವು ಇಟ್ಟ ವಸ್ತು. ಮಗಳ ಮದುವೆಗೆಂದು ಭೂಮಿಯನ್ನು ಗಿರವಿ ಹಾಕಬೇಕಾಯಿತು. ಕದ್ದಮಾಲನ್ನು ಗಿರವಿ ಹಾಕಿ ಹಣ ತೆಗೆದುಕೊಂಡಿದ್ದ ಕಳ್ಳನು ಸಿಕ್ಕಿಬಿದ್ದನು-ಎಂಬ ವಾಕ್ಯಗಳನ್ನು ನೋಡಿ.

**ಗಿರ್ಮಿಟ್** ಎಂಬುದು ಮರಾಠಿ ಶಬ್ದ. ಇದಕ್ಕೆ ಬೈರಿಗೆ ಎಂದರ್ಥ. ಮರದಲ್ಲಿ ರಂಧ್ರಮಾಡಲು ಬಡಗಿಯು ಉಪಯೋಗಿಸುವ ಸಾಧನ. ಈ ಶಬ್ದಕ್ಕೆ ಒಂದು ಬಗೆಯ ಚುರುಮುರಿ ಎಂಬ ಅರ್ಥವಿದೆ. ಚುರುಮುರಿ, ಚುನಾಮುರಿ ಅಥವಾ ಹಿಂದಿಯ ಮುರ್‌ಮುರಿಯನ್ನು ಸ್ವಾದಿಷ್ಟಗೊಳಿಸಿದರೆ ಅದೇ ಗಿರ್ಮಿಟ್. ಈಚಿನ ವರ್ಷಗಳಲ್ಲಿ ಉತ್ತರ ಕರ್ನಾಟಕದಲ್ಲಿ ಜನಪ್ರಿಯವಾದ ಖಾದ್ಯ ಇದು. ಈ ಅರ್ಥ ಮೊದಲನೆಯ ಅರ್ಥದ ವ್ಯಾಪಕಾರ್ಥ. ಆ ಖಾದ್ಯ ಹೊಟ್ಟೆಗೆ ಇಳಿಯುವಾಗ ಬೈರಿಗೆಯ ಕೆಲಸ ಮಾಡುತ್ತದೆ ಎಂದು ಯಾರೋ ಅನುಭವಸ್ಥರ ಮಾತು ಜನಪ್ರಿಯವಾಗಿದೆ. ಬೆಂಗಳೂರಿನಲ್ಲಿ ಇಂಥ ಒಣಪುರಿಗೆ Brain Tonic ಎಂದು ಮಾರಾಟ ಮಾಡುತ್ತಾರೆ. ಹೀಗೆ ಹೊಸ ಅರ್ಥಗಳು ಉನ್ನತೀಕರಣದಿಂದ ಶಬ್ದಗಳಿಗೆ ಅಂಟಿಕೊಳ್ಳುತ್ತವೆ.

**ಗುಂಡಿ** ಈ ಶಬ್ದವು ಕನ್ನಡದ್ದು. ಇದಕ್ಕೆ ಇರುವ ಅರ್ಥಗಳು ೧. ಗುಂಡಾಗಿರುವ ಲೋಹದ ಅಥವಾ ಮಣ್ಣಿನ ದೊಡ್ಡ ಪಾತ್ರೆ. ೨. ಬಿಲ, ಗುಣಿ ೩. ಬಟ್ಟೆಗಳಿಗೆ ಜೋಡಿಸಿರುವ ಬಿರಡೆ, ಬಟನ್ನು ೪. ಎದೆ ಗುಂಡಿಗೆ ೫. ವೇಶ್ಯೆ, ದುಷ್ಟೆ.

**ಗುಂಡಿಗೆ** ಕನ್ನಡದಲ್ಲಿ ಗುಂಡಿ ಎಂದರೆ ಎದೆ ಎಂಬ ಅರ್ಥವೂ ಇದೆ. ಇದಕ್ಕೆ ಗೆ ಪ್ರತ್ಯಯ ಸೇರಿ ಗುಂಡಿಗೆ ಆಗಿದೆ. ಅದಕ್ಕೂ ಎದೆ ಎಂದೇ ಅರ್ಥ. ಇದು ದ್ರಾವಿಡ ಭಾಷೆಗಳಲ್ಲಿ ಜ್ಞಾತಿ ಶಬ್ದಗಳನ್ನು ಹೊಂದಿದೆ. ಇದಲ್ಲದೆ ಇನ್ನೊಂದು ಗುಂಡಿಗೆ ಎಂಬ ಶಬ್ದವಿದೆ. ಅದು ಸಂಸ್ಕೃತದ ಕುಂಡಿಕಾ ಶಬ್ದದ ತದ್ಭವ. ಅದಕ್ಕೆ ನೀರಿನ ಪಾತ್ರೆ, ಕಮಂಡಲು ಎಂದರ್ಥ.

**ಗುಟ್ಟು** ಈ ಶಬ್ದದಲ್ಲಿ ಗುಟ್ಟು ಏನೂ ಇಲ್ಲ. ಎಲ್ಲ ಸ್ಪಷ್ಟ, ಸುವ್ಯಕ್ತ. ಇದರ ಅರ್ಥ ರಹಸ್ಯ, ಗುಪ್ತವಾದ ವಿಚಾರ ಎಂದು. ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಜ್ಞಾತಿಶಬ್ದಗಳಿವೆ. ಈಗ ನಿಮ್ಮ ಗುಟ್ಟು ರಟ್ಟಾಯಿತು ಎಂದರೆ ಅರ್ಥ ಮತ್ತಷ್ಟು ಸ್ಪಷ್ಟ.

**ಗುಣಗ್ರಾಹಿ** ಇತರರಲ್ಲಿರುವ ಗುಣವನ್ನು ಅರ್ಥಮಾಡಿಕೊಳ್ಳುವವನು. ಇವನು ಕಾವ್ಯ, ನಾಟಕ, ಸಂಗೀತ, ನಾಟ್ಯ ಮುಂತಾದ ಕಲೆಗಳು ಪ್ರದರ್ಶನವಾದಾಗ ಆ ಪ್ರದರ್ಶನಕಾರರ ಕಲೆಯಲ್ಲಿ ಕಂಡುಬರುವ ಗುಣವನ್ನು ಮೆಚ್ಚಿಕೊಳ್ಳುವ ಶಕ್ತಿಯುಳ್ಳ ವ್ಯಕ್ತಿ ಎಂದರ್ಥ. ಈ ಶಬ್ದ ಜೀವನದ ಎಲ್ಲ ಕ್ಷೇತ್ರಗಳಿಗೂ ಸಂಬಂಧಪಟ್ಟದ್ದು.

**ಗುಣುಪು** ಎಂಬುದು ಗುಣ್ಪು ಎಂಬುದರ ಮತ್ತೊಂದು ರೂಪ. ಗುಣ್ಪು ಎಂದರೆ ಆಳ. ಕೆಲವು ಕಡೆ ಎಲೆ ಅಡಕೆಯನ್ನು ಕುಟ್ಟಿ ಹದಮಾಡಿಕೊಳ್ಳುವುದಕ್ಕೆ ಮುದುಕಿಯರು ಏರ್ಪಾಟುಮಾಡಿಕೊಂಡಿರುವ ಕುಟ್ಟಾಣಿ ಎಂಬ ಪಾತ್ರೆಗೆ ಗುಣುಪು ಎನ್ನುತ್ತಾರೆ. ಕುಟ್ಟುವ ಸಾಧನಕ್ಕೂ ಇದೇ ಶಬ್ದವನ್ನು ಉಪಯೋಗಿಸುತ್ತಾರೆ.

**ಗುಮಾಸ್ತಾ** ಎಂಬುದು ಪಾರಸಿ ಭಾಷೆಯ ಶಬ್ದ. ಇದಕ್ಕೆ ಬರೆಯುವವನು, ಕರಣಿಕ, ನೌಕರ, ಸಿಬ್ಬಂದಿಗೆ ಸೇರಿದವನು ಎಂಬ ಅರ್ಥಗಳಿವೆ. ಇದನ್ನು ಕನ್ನಡದಲ್ಲಿ ಗುಮಾಸ್ತೆ ಎಂದು ಮಾಡಿಕೊಂಡಿದ್ದೇವೆ. ಸರಿಯಾಗಿದೆ. ಇಂಗ್ಲಿಷಿನ Clerk ಶಬ್ದಕ್ಕೆ ಸಮಾನವಾದುದು.

**ಗುಮ್ಮನ ಗುಸುಕಿ** ಎಂಬ ಶಬ್ದದಲ್ಲಿ ಎರಡು ಭಾಗಗಳಿವೆ. ಒಂದು ಗುಮ್ಮನೆ = ಮೌನವಾಗಿ,

ಇನ್ನೊಂದು ಕುಸುಕು = ಗುದ್ದು, ಕುಟ್ಟು, ಚಚ್ಚು, ಹಿಂಸಿಸು. ತಾನು ಮಾತನಾಡದೆಯೇ ಇನ್ನೊಬ್ಬರಿಗೆ ಹಿಂಸೆಯನ್ನುಂಟು ಮಾಡುವುದು. ಇದೇ ಗುಮ್ಮನ ಗುಸುಕು. ಇದು ಅ ಎಂಬ ವ್ಯಕ್ತಿವಾಚಕ ಪ್ರತ್ಯಯ ಸೇರಿದರೆ ಗುಮ್ಮನ ಗುಸುಕ. ಅದು ಪುಲ್ಲಿಂಗ. ಇ ಎಂಬ ಸ್ತ್ರೀ ಲಿಂಗ ಪ್ರತ್ಯಯ ಸೇರಿದರೆ ಮೌನವಾಗಿದ್ದು ತೊಂದರೆ ಮಾಡುವವಳು. ಗುಮ್ಮನ ಗುಸುಕಿ. ಈ ಶಬ್ದದ ಪ್ರಯೋಗ ಈಗ ಕಡಿಮೆಯಾಗಿದ್ದರೂ ಅಂಥ ವ್ಯಕ್ತಿಗಳು ಕಡಮೆಯಾಗಿಲ್ಲ ಎಂಬುದು ಸರ್ವವಿದಿತ.

**ಗುರಿಕಾರ** ಈ ಶಬ್ದವು ಹಳಗನ್ನಡದ ಗುಱಿಕಾಱ ಎಂಬುದರ ಹೊಸಗನ್ನಡ ರೂಪ. ಬೇಟೆಯಾಡುವುದರಲ್ಲಿ ಗುರಿಯಿಟ್ಟು ಹೊಡೆಯುವುದರಲ್ಲಿ ನೈಪುಣ್ಯವುಳ್ಳವರು. ಇಂಥವರನ್ನು ರಾಜ್ಯದ ಗಡಿ ಪ್ರದೇಶಗಳಲ್ಲಿ ಶತ್ರುಗಳ ದಾಳಿಯನ್ನು ಎದುರಿಸಲು ರಾಜರು ನೇಮಿಸುತ್ತಿದ್ದರು. ಇವರು ಗ್ರಾಮಗಳ ಮುಖಂಡರೂ ಆಗಿದ್ದರು. ಗುರ್ಕಾರ ಎಂಬ ರೂಪದ ಶಬ್ದವೂ ಇದೆ.

**ಗುರ್ವು:** ನೋಡಿ ಅಗುರ್ವು.

**ಗುಲ್ಫ** ಇದು ಪಾದದ ಗಂಟು. ಹಿಮ್ಮಡಿಯ ಬಳಿ ಇರುವ ಹರಡು. ಇದು ಗೂಢವಾಗಿದ್ದರೆ ಅದು ಸೌಂದರ್ಯದ ಒಂದು ಚಿಹ್ನೆ ಎಂಬ ನಂಬಿಕೆಯಿದೆ. ಲಲಿತಾ ದೇವಿಯ ವರ್ಣನೆಯಲ್ಲಿ ಈ ಮಾತು ಬರುತ್ತದೆ. ಗೂಢಗುಲ್ಫ ಎಂದರೆ ಹೊರಕ್ಕೆ ಎಂದೂ ಕಾಣದಿರುವಂಥ ಹರಡು ಎಂದರ್ಥ.

**ಗುಲಾಮ** ಇದು ಅರಬ್ಬಿಯ ಘುಲಾಮ್ ಎಂಬ ಶಬ್ದದಿಂದ ಬಂದಿದೆ. ತೊತ್ತಿನ ಮಗ ಎಂದರ್ಥ. ಅಂದರೆ ಜೀತದ ಹೆಣ್ಣಾಳಿನ ಮಗ. ಆದರೆ ಗುಲಾಮನೊಬ್ಬ ರಾಜ್ಯವನ್ನು ಸ್ಥಾಪಿಸಿದಾಗ ಆ ರಾಜವಂಶವೇ ಗುಲಾಮೀ ವಂಶವೆಂದು ಹೆಸರಾದುದು ಚರಿತ್ರೆಯ ವಿಷಯ.

**ಗುಹಾಂತ** ಎಂದರೆ ಗುಹೆಯ ಒಳಭಾಗ. ಗುಹಾಂತರ್ದೇವಾಲಯ ಎಂಬ ಶಬ್ದವಿದೆ. ಬಾದಾಮಿ, ಅಜಂತಾ ಮತ್ತು ಎಲ್ಲೋರ ಗುಹಾಂತರ್ದೇವಾಲಯಗಳು ಬಹು ಪ್ರಸಿದ್ಧ.

**ಗೂಬೆ ಶಂಕರಿ (ರ)** ಎಂಬುದು ಒಂದು ಬೈಗುಳು. ಯಾವಾಗಲೂ ಜೋಲುಮೋರೆಯನ್ನು ಪ್ರದರ್ಶಿಸುತ್ತ ಇರುವ ವ್ಯಕ್ತಿಗೆ ಅನ್ವಯಿಸುವ ಶಬ್ದ. ಸೋಮಾರಿತನದ ಅರ್ಥವೂ ಸೇರಿದೆ.

**ಗೂಬೆಕೂರಿಸು** ಇದು ಕನ್ನಡದಲ್ಲಿ ತುಂಬ ಪ್ರಚಲಿತವಾಗಿರುವ ನುಡಿಗಟ್ಟು. ಗೂಬೆ ಅಪಶಕುನದ ಹಕ್ಕಿ. ಹಿಂದಿನ ಕಾಲದಲ್ಲಿ ಮನೆಯ ಮೇಲೆ ಗೂಬೆ ಕುಳಿತರೆ ಕೆಲವು ದಿನ ಆ ಮನೆಯನ್ನು ಬಿಟ್ಟು ಬೇರೆಯ ಕಡೆಯಲ್ಲಿ ವಾಸ ಮಾಡುತ್ತಿದ್ದರು. ಗೂಬೆ ಕೂತರೆ ಮನೆ ಅಪವಿತ್ರವಾಯಿತು, ಕೆಡುಕಿಗೆ ತಾಣವಾಯಿತು ಎಂದರ್ಥ. ಹಾಗೆಯೆ ಯಾರ ಮೇಲಾದರೂ ಗೂಬೆ ಕೂರಿಸುವುದು ಎಂದರೆ ಅವರ ಮೇಲೆ ಅಪವಾದ ಹೊರಿಸು ಎಂದರ್ಥ. ಅಪವಾದ ಏನಾದರೂ, ಆ ವ್ಯಕ್ತಿ ಸಹವಾಸಕ್ಕೆ ಯೋಗ್ಯನಲ್ಲ ಎಂಬುದು ಆ ಮಾತಿನ ಅಭಿಪ್ರಾಯ. ಸಾಮಾನ್ಯವಾಗಿ ಸಣ್ಣಪುಟ್ಟ ತಪ್ಪುಗಳಿಗೆ ಯಾರೂ ಗೂಬೆ ಕೂರಿಸುವುದಿಲ್ಲ. ಗೂಬೆ ಕೂರಿಸಬೇಕಾದರೆ ಅದಕ್ಕೆ ಯೋಗ್ಯವಾಗುವಂಥ ಅಪರಾಧವನ್ನು ಹೊರಿಸಬೇಕು. ಎಲ್ಲರಿಗೂ ಇದು ಸಾಧ್ಯವಿಲ್ಲ. ಅದಕ್ಕೂ ಒಂದು ಬಗೆಯ ಸಾಮರ್ಥ್ಯ ಬೇಕು.

**ಗೃಧ್ರ** ಈ ಶಬ್ದ ಗೃಧು ಎಂಬ ಧಾತುವಿನಿಂದ ಬಂದಿದೆ. ಆ ಧಾತುವಿಗೆ ಅತ್ಯಾಶೆ ಹೊಂದುವುದು ಬಯಸುವುದು, ಅಪೇಕ್ಷಿಸುವುದು ಎಂದರ್ಥ. ಹದ್ದು ಹಾಗೆ ಪ್ರಾಣಿಗಳ ಹೆಣಗಳಿಗೆ ಕಾಯುತ್ತದೆ. ಹೆಚ್ಚು ಆಸೆಯುಳ್ಳ ಮನುಷ್ಯನಿಗೂ ಸಂಸ್ಕೃತದಲ್ಲಿ ಗೃಧ್ರ ಎಂದೇ ಕರೆಯುತ್ತಾರೆ. ಕನ್ನಡದಲ್ಲಿ ತುಂಬ ಮುದುಕರಾದವರನ್ನು ಗೃಧ್ರ ಎಂದು ಟೀಕಿಸುವ

ಪರಿಪಾಠ ಕೆಲವರು ಯುವಕರಲ್ಲಿಯೂ ಮಧ್ಯ ವಯಸ್ಸಿನವರಲ್ಲಿಯೂ ಇದೆ. **ಪಕ್ಷಿ ಜ್ಯೇಷ್ಠ ಗೃಧ್ರಮೆನೆ ಹದ್ದು** ಎಂಬುದು ನಿಘಂಟಿನ ಅರ್ಥ.

**'ಗೃಹಿಣಿ'** ಶಬ್ದಕ್ಕೆ 'ಗರತಿ' ತದ್ಭವವಾಗುತ್ತದೆಯೇ ? 'ಗೇಹಿನಿ' ಎಂಬುದು ಸಾಧುವಾದೀತೋ ಏನೋ ? 'ಗರತಿ' ಎಂಬ ಶಬ್ದದ ವ್ಯುತ್ಪತ್ತಿ ನಿರ್ಧಾರವಾಗಿಲ್ಲ. ಇದಕ್ಕೂ 'ಗೃಹಣಿ'ಗೂ ಸಂಬಂಧವಿಲ್ಲ. 'ಗೇಹ' ಎನ್ನುವುದೇ ಸಂಸ್ಕೃತ ಶಬ್ದ. ಆದುದರಿಂದ 'ಗೇಹಿನೀ' ಎಂಬ ರೂಪವು ಅದರಿಂದ ಬಂದುದು. ಅದನ್ನು ಕಾಳಿದಾಸನೇ ಮೇಘದೂತದಲ್ಲಿಯೂ (೨-೧೪) ರಘುವಂಶದಲ್ಲಿಯೂ (೮-೭೨) ಉಪಯೋಗಿಸಿದ್ದಾನೆ. ಗರತಿ ಹೇಗೆ ತದ್ಭವವಾಗುತ್ತದೆ ? ತೆಲುಗಿನಲ್ಲಿ 'ಗರಿತ-ಗರ್ತ' ಎಂಬ ಶಬ್ದಗಳಿಗೆ ಈ ಅರ್ಥವಿದೆ. ತುಳುವಿನಲ್ಲಿ 'ಗರ್ತಿ' ಎಂಬ ಶಬ್ದವಿದೆ. ತಮಿಳಿನಲ್ಲಿ ಇಲ್ಲ. ಈ ಶಬ್ದಕ್ಕೆ ಸಂಸ್ಕೃತ ಮೂಲವಿರಬಹುದು. 'ಗೃಹಸ್ಥಾ' ಎಂಬ ಸಂಸ್ಕೃತಶಬ್ದ ಕನ್ನಡದಲ್ಲಿ 'ಗೃಹಸ್ಥೆ' ಆಗುತ್ತದೆ. ಈ ಶಬ್ದ 'ಗರತಿ'ಗೆ ಹತ್ತಿರವಾಗಿದೆ. ಇಷ್ಟು ಮಾತ್ರ ಹೇಳಬಹುದು. ಈ ವಿಚಾರವಾಗಿ ಇನ್ನೂ ಸಂಶೋಧನೆ ಮುಂದುವರಿಯಬೇಕು.

**ಗೆದ್ದಲು, ಗೆಜ್ಜಲು** ಗೆದಲ್ ಎನ್ನುವ ದ್ರಾವಿಡ ಮೂಲವಾದ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ಗೆಜ್ಜಲು, ಗೆದಲಿ, ಗೆದಲು, ಗೆದಲೆ, ಗೆದ್ದಲಿ, ಗೆದ್ದಲು ಇಷ್ಟೂ ರೂಪಗಳನ್ನು ಉಪಯೋಗಿಸುತ್ತಾರೆ, ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ. ಇಂಗ್ಲಿಷ್‌ನಲ್ಲಿ White Ant. ಈ Termiteಜಾತಿಯ ಕೀಟ ಭಾರತದಲ್ಲೇ ಹೆಚ್ಚು. ಒಬ್ಬಳು ರಾಣಿ ಅವಳ ಸುತ್ತ ಲಕ್ಷಾಂತರ ಕೀಟಗಳು ಮರ, ಕಾಗದ, ಬಟ್ಟೆ, ಹತ್ತಿ ಮುಂತಾದವನ್ನು ಕ್ಷಣಾರ್ಧದಲ್ಲಿ ಪೂರೈಸಿಬಿಡುತ್ತವೆ. ಪಾಶ್ಚಾತ್ಯರು ಬರೆದ ಗ್ರಂಥಗಳಲ್ಲಿ ಗೆಜ್ಜಲಿನ ವರ್ಣನೆ ಅನೇಕ ಕಡೆ ಬಹಳ ರಮ್ಯವಾಗಿದೆ. ಒಂದು ಉದಾಹರಣೆಯನ್ನೇ ಕೊಡುತ್ತೇನೆ. "If great care be not taken in the place where you lockup your bales of silk in four and twenty hours they will eat through a bale as if it had been sawed in two in the middle" dated ೧೬೭೯. ಈ ಶಬ್ದಕ್ಕೆ ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಜ್ಞಾತಿಶಬ್ದಗಳು ದೊರಕುತ್ತವೆ.

**ಗೇಯತೆ** ಸಂಸ್ಕೃತದ ಗೇಯತಾ ಎಂಬ ಶಬ್ದವು ತದ್ಭವವಾಗಿ ಗೇಯತೆ ಎಂದಾಗುತ್ತದೆ. ಅದಕ್ಕೆ ಅರ್ಥ, ಗಾನಗುಣವನ್ನು ಹೊಂದಿರುವುದು, ಹಾಡುವುದಕ್ಕೆ ಅರ್ಹವಾಗಿರುವುದು ಎಂದು.

**ಗೊಂಡಾರಣ್ಯ** ವಿಂಧ್ಯ ಪರ್ವತದ ತಪ್ಪಲಿನಲ್ಲಿ ವಾಸಮಾಡುವ ಒಂದು ದ್ರಾವಿಡ ಜನಾಂಗವಿದೆ. ಅದಕ್ಕೆ ಗೋಂಡರು ಎನ್ನುತ್ತಾರೆ. ಅವರು ವಾಸಮಾಡುವ ಸ್ಥಳಕ್ಕೆ ಗೊಂಡಾರಣ್ಯ ಎಂದು ಹೆಸರು. ಆದರೆ, ಅದು ಬರುಬರುತ್ತಾ ದೂರದಲ್ಲಿರುವ ದಟ್ಟವಾದ ಅರಣ್ಯಕ್ಕೆ ಆ ಹೆಸರು ಅನ್ವಯವಾಗುತ್ತದೆ. ಈಗ ನಾವು ಗೊಂಡಾರಣ್ಯ ಎಂಬ ಶಬ್ದಕ್ಕೆ ನಿಬಿಡವಾದ ಮರಗಳಿಂದ ಕೂಡಿದ ದಟ್ಟವಾದ ಅರಣ್ಯ ಎಂಬ ಅರ್ಥದಲ್ಲಿ ಮಾತ್ರ ಅದನ್ನು ಉಪಯೋಗಿಸುತ್ತೇವೆ. ಸಂಸ್ಕೃತದಲ್ಲಿಯೂ ಗೋಂಡವನ ಎಂಬುದು ಪ್ರಸಿದ್ಧವಾದ ಪ್ರದೇಶದ ಹೆಸರು.

**ಗೊಣಗೊಣ** ಎನ್ನುವುದು ಇದೊಂದು ವಾಗ್ರೂಢಿ. ಯಾರಿಗೂ ಸ್ಪಷ್ಟವಾಗಿ ಕೇಳಿಸದೆ ತನ್ನಷ್ಟಕ್ಕೆ ತಾನೆ ಗೊಣಗಿಕೊಳ್ಳುವುದು ಎಂದರ್ಥ.

**ಗೊಮ್ಮಟ, ಗೊಮ್ಮಟೇಶ್ವರ ಎಂದು ಹೆಸರು ಬರಲು ಕಾರಣವೇನು ?** ಗೊಮ್ಮಟ ಶಬ್ದವು ನಮಗೆ ಪ್ರಾಕೃತದ ಮೂಲಕ ಬಂದಿದೆ. ಪ್ರಾಕೃತದಲ್ಲಿ ಗುಮ್ಮಡ =ಮೋಹಗೊಳ್ಳು; ಆಕರ್ಷಿಸು, ಆಕರ್ಷಕವಾಗಿರು ಎಂಬ ಅರ್ಥಗಳಿವೆ. ಇದರಿಂದ ಸುಂದರ, ಮನ್ಮಥ ಎಂಬ ಅರ್ಥಗಳನ್ನು ಸಾಧಿಸಬಹುದು. ಗೊಮ್ಮಟನು ಬಾಹುಬಲಿಯ ಪ್ರತಿನಿಧಿ ತಾನೆ. ಬಾಹುಬಲಿ ಜೈನಪುರಾಣದಲ್ಲಿ ಮೊದಲನೆಯ ಕಾಮದೇವ. ಆದುದರಿಂದ ಆ ವಿಗ್ರಹಕ್ಕೆ ಗೊಮ್ಮಟ, ಗೊಮ್ಮಟೇಶ್ವರ ಎಂದು ಹೆಸರು ಬಂದಿದೆ. ಗೊಮ್ಮಟ +ಈಶ್ವರ. ಈಶ್ವರ ಶಬ್ದಕ್ಕೆ ಒಡೆಯ ಎಂದರ್ಥ. ಈ ಶಬ್ದದ ವ್ಯುತ್ಪತ್ತಿಯ ಬಗ್ಗೆ ಇತರ ಅಭಿಪ್ರಾಯಗಳು ಇವೆ. ಆದರೆ ಇದೇ

ಸರಿಯಾದುದು ಎಂದು ನನಗೆ ತೋರುತ್ತದೆ.

**ಗೊಲಸು** ಇದಕ್ಕೆ ಕೊಂಡಿ, ಸರಪಣಿಗೆ ಹಾಕುವ ಕುಣಿಕೆ ಎಂದರ್ಥ. ಹಾಗೆ ಕೊಂಡಿಯಿಂದ ಕೂಡಿರುವ ಆಭರಣಗಳಿಗೂ ಈ ಹೆಸರಿದೆ. 'ಕಾಲ್ಗೊಲಸು' ಎಂಬ ಶಬ್ದವನ್ನು ನೋಡಿ.

**ಗೊಳಲು** ಎಂದರೆ ಧಾನ್ಯದ ಹೊಟ್ಟು. ವಿಶೇಷವಾಗಿ ಹುಣಸೆಯ ಹಣ್ಣಿನ ಮೇಲಿನ ಸಿಪ್ಪೆಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಗೊಳಲೆ ಎಂಬ ರೂಪವೂ ಉಂಟು.

**ಗೋಟಾಳಿ** ಈ ಶಬ್ದ ನಮಗೆ ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ಉಪಯೋಗವಾಗುವ 'ಘೋಟಾಳಾ' ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಗೊಂದಲ, ಸಿಕ್ಕು, ಪೇಚು, ತೊಡಕು ಎಂದರ್ಥ. ಮರಾಠೀ ಮಾತು ಹೆಚ್ಚಾಗಿ ಆಡುವ ಕಡೆ ಇದು ತುಂಬ ಪ್ರಚಾರದಲ್ಲಿದೆ. ಕನ್ನಡದಲ್ಲಿ ಘೋಟಾಳೆ (ಳಿ) ಎಂಬ ಮಹಾಪ್ರಾಣದ ಪ್ರಯೋಗವೂ ಉಂಟು. ಆಲೂರು ವೆಂಕಟರಾಯರ 'ಸ್ಮೃತಿ ಚಿತ್ರ'ದಿಂದ ಈ ವಾಕ್ಯವನ್ನು ಪರಿಶೀಲಿಸಿ; '**ಬೆರಳಿಗೆ ಮುದ್ರೆಯುಂಗುರ ಇದ್ದುದರಿಂದ ಹಿಂದೂ ಮಹಿಳೆಯೆಂದುಕೊಂಡೆ. ಅಂತೇ ನನಗೆ ಘೋಟಾಳಿಯಾಯಿತು.**'

**ಗೋಣಿ** ಮೂಢ ಬಲ್ಲನೆ ಜ್ಞಾನ ದೃಢಭಕ್ತಿಯ.... ಗೋಣಿಬಲ್ಲುದೆ ಎತ್ತಿನ ದುಃಖವ. ಇಲ್ಲಿ ಗೋಣಿ ಎಂದರೆ ಗೋಣಿಯಚೀಲ. ಹೊರೆ ಹೊರಿಸಲು ಉಪಯೋಗಿಸುವ ಸಾಧನ. ಆದುದರಿಂದ ಎತ್ತಿನ ಮೇಲಿರುವ ಭಾರ ಗೋಣಿಯ ಒಳಗೂ ಇದೆ. ಆದರೂ ಈ ಚೀಲಕ್ಕೆ ಆ ಭಾರದ ಪರಿಚಯವಿಲ್ಲ.

**ಗೋದಾಮು** ಈ ಶಬ್ದಕ್ಕೆ ಕನ್ನಡದಲ್ಲಿ ಇನ್ನೂ ಮೂರು ಪರ್ಯಾಯ ರೂಪಗಳಿವೆ. ಗುದಾಮು, ಗುದಾಮ, ಗೊದಾಮು, ಎಲ್ಲಕ್ಕೂ ಪ್ರಯೋಗಗಳಿವೆ. ಇದು ಇಂಗ್ಲಿಷಿನ godown ಎಂಬ ಶಬ್ದದಿಂದ ಬಂದದ್ದು. ಪೋರ್ಚುಗೀಸ್ ಭಾಷೆಯಲ್ಲಿ ಈ godown ಎಂಬುದು ಗುದಾಂವ ಎಂದಾಗುತ್ತದೆ. ಆ ರೂಪದ ಪ್ರಭಾವ ಕನ್ನಡದ ಮೇಲೆ ಆಗಿದೆ.

**ಗೋಪತಿ** ಗೋ ಎಂಬುದಕ್ಕೆ ಅನೇಕ ಅರ್ಥಗಳಿವೆ. ೧. ಎತ್ತು ೨. ಕಿರಣ ೩. ಸೂರ್ಯ ೪. ಚಂದ್ರ ೫. ಸ್ವರ್ಗ ೬. ಭೂಮಿ ೭. ಮಾತು ೮. ದಿಕ್ಕು ೯. ಹಸು ೧೦. ಕಣ್ಣು ೧೧. ನೀರು ಇತ್ಯಾದಿ. ಆದುದರಿಂದ ಆ ಶಬ್ದವು ಎಲ್ಲಿ ಉಪಯೋಗವಾಗಿದೆಯೋ ಆ ಸಂದರ್ಭವನ್ನು ನೋಡಿ ಅರ್ಥಮಾಡಬೇಕು. ಗೊಲ್ಲ, ದನಕಾಯುವವ, ಕೃಷ್ಣ, ರಾಜ, ಈಶ್ವರ, ಬ್ರಹ್ಮ ಇತ್ಯಾದಿ ಅರ್ಥವಾಗುತ್ತದೆ. ಗೋಪತಿ ಎಂದರೆ ನಪುಂಸಕ ಎಂಬ ಅರ್ಥವೂ ಉಂಟು.

**ಗೋಮೂತ್ರ** = **ಗಂಜಳ**. ಈ ಶಬ್ದವು ಕೆಲವು ಕಡೆ **ಗೋತ** ಎಂಬಂತೆ ಪ್ರಯೋಗವಾಗುತ್ತದೆ. ಅದು ಗೋಮೂತ್ರದ ತದ್ಭವ. ಗೋಮಂತ್ರ ಎಂಬ ಅಪಶಬ್ದವನ್ನು ಕೆಲವರು ಉಪಯೋಗಿಸುತ್ತಾರೆ. ಅದು ಸರಿಯಲ್ಲ.

**ಗೋಮೆ** ಇದು ಸಂಸ್ಕೃತದ 'ಗೋಮಯ' ಎಂಬ ಶಬ್ದದ ತದ್ಭವ. ಇದಕ್ಕೆ 'ಗೋಮ' ಎಂಬ ಪರ್ಯಾಯ ರೂಪವೂ ಉಂಟು. ಊಟ ಮಾಡಿದ ಮೇಲೆ ಊಟದ ಎಲೆಯನ್ನು ಎತ್ತಿ, ಎಲೆಯನ್ನು ಹಾಕಿದ್ದ ಸ್ಥಳವನ್ನು ಸಗಣಿಯ ನೀರಿನಿಂದ ಶುದ್ಧಿ ಮಾಡುತ್ತಿದ್ದರು. 'ಗೋಮಯ' ಎಂದರೆ ಸಗಣಿ. ಬರಿಯ ನೀರಿನ ಗೋಮೆಯೂ ಇತ್ತು. ಈ ಪದ್ಧತಿ ಈಗಿನವರಿಗೆ ತಿಳಿಯುವುದಿಲ್ಲ. ಏಕೆಂದರೆ ಅವರು ನೆಲದಮೇಲೆ ಎಲೆ ಹಾಕಿಕೊಂಡು ಊಟ ಮಾಡುವುದು ಹೇಗೆ ಎಂಬುದನ್ನು ತಿಳಿದಿರುವುದಿಲ್ಲ. ಈಗೆಲ್ಲ ಮೇಜಿನ ಮೇಲೆ ತಟ್ಟೆಗಳ ಸಾಮ್ರಾಜ್ಯ.

**ಗೋರಂಟಿ** ಇದಕ್ಕೆ ಗೋರಟೆ ಎಂಬ ರೂಪವೂ ಇದೆ. ನೀಲಿಕ ಎಂಬ ಹೆಸರೂ ಇದೆ. ಮದರಂಗಿ ಇನ್ನೊಂದು ಹೆಸರು. ಮರಾಠಿ ಶಬ್ದವಿರಬಹುದು. ಮೆಹಂದಿ ಶಬ್ದಕ್ಕೂ ಇದೇ ಅರ್ಥ.

**ಗೋಲ್ ಮಾಲ್** ಎಂಬುದು ಹಿಂದೀ ಶಬ್ದ. ಇದಕ್ಕೆ ಮೋಸ ಎಂಬ ಅರ್ಥವೇ ಕನ್ನಡದಲ್ಲಿ ಪ್ರಚಾರದಲ್ಲಿದ್ದರೂ ಮೂಲದಲ್ಲಿ ಇದಕ್ಕೆ ಗೊಂದಲ, ಅವ್ಯವಸ್ಥೆ, ತರಲೆ ಎಂಬ ಅರ್ಥವೂ ಇದೆ. ಮರಾಠಿಯಲ್ಲಿ ಹೆಚ್ಚಾಗಿ ಅವ್ಯವಸ್ಥೆ, ಗೊಂದಲ ಎಂಬ ಅರ್ಥದಲ್ಲೇ ಬಳಕೆ.

**ಗೋಸುಂಬೆ** ಎಂದರೆ ಓತಿಕೇತ. ಆಗಾಗ ತನ್ನ ಮೈಬಣ್ಣವನ್ನು ಬದಲಾಯಿಸುವ ಒಂದು ಪ್ರಾಣಿ. ಹಲ್ಲಿಯ ಜಾತಿಗೆ ಸೇರಿದುದು. ಗೋಸುಬೆ ಎಂಬ ರೂಪವೂ ಇದೆ. ಗೋಸಿಂಬೆ ಎಂಬ ಒಂದು ಪ್ರಾದೇಶಿಕ ರೂಪವೂ ಇದೆ. ರಾಜಕೀಯದಲ್ಲಿ ಆಗಾಗ ಬಣ್ಣವನ್ನು ಬದಲಾಯಿಸುವವರಿಗೂ ಈ ಶಬ್ದವನ್ನು ಪ್ರಯೋಗಿಸುತ್ತಾರೆ.

**ಗೌಸು** ಇದು ಕನ್ನಡದ ಕವಿಸು ಎಂಬ ಶಬ್ದದ ಬೇರೆ ರೂಪ. ಕವಿಸು ಎಂದರೆ ಮುಚ್ಚು, ಮುಚ್ಚಿಸು. ಕವಿ ಎಂದರೆ ಮುಚ್ಚು ಎಂದರ್ಥ. ಮರಾಠಿಯಲ್ಲಿ ಗವಸಣೀ ಎಂದರೆ ಮುಚ್ಚು.

**ಗೌಳ** ಎಂಬ ಶಬ್ದದ ಮೂಲ ಸಂಸ್ಕೃತದಲ್ಲಿ ಒಂದು ದೇಶವನ್ನು ಸೂಚಿಸುವ ಗೌಡ ಎಂಬ ಶಬ್ದವಿದೆ. ಅದರಿಂದ ಬಂದದ್ದು ಗೌಳ. ಸಂಗೀತ ಕ್ಷೇತ್ರದಲ್ಲಿ ಪ್ರಯೋಗದಲ್ಲಿರುವ ರೀತಿಗೌಳ, ಕೇದಾರಗೌಳ, ಮಾಯಾಮಾಳವಗೌಳ ಎಂಬಲ್ಲಿರುವ ಗೌಳ ಶಬ್ದವು ಆ ದೇಶವಾಚಕದ ಪ್ರಭಾವವೆಂದು ಹೇಳುತ್ತಾರೆ.

**ಗ್ಯಾರಂಟಿ** ಇದು ಫ್ರೆಂಚ್ ಭಾಷೆಯ ಶಬ್ದ. ಇದಕ್ಕೆ ಯಾವುದಾದರೂ ಒಪ್ಪಂದಕ್ಕೆ ಹೊಣೆಯಾಗಿರುವುದು ಎಂದರ್ಥ. ಈ ಶಬ್ದ ಅದೇ ಉಚ್ಚಾರಣೆಯಲ್ಲಿ ಕನ್ನಡದಲ್ಲಿಯೂ ಉಪಯೋಗವಾಗುತ್ತ ಇದೆ. ಹೊಣೆ, ಹೊಣೆಗಾರ ಎಂಬ ಎರಡೂ ಅರ್ಥವುಂಟು.

**ಗ್ರಂಥ ಗ್ರಥ್, ಗ್ರಂಥ್** ಎಂಬ ಧಾತುಗಳಿಗೆ ಸಂಸ್ಕೃತದಲ್ಲಿ ಕಟ್ಟು, ಒಟ್ಟು ಸೇರಿಸು, ಜೋಡಿಸು, ಕೂಡಿಸು ಎಂದು ಅರ್ಥ. ಅದು ಓಲೆಗರಿಗಳನ್ನು ಕುರಿತು ಆಗಬಹುದು. ಹೂವುಗಳನ್ನು ಕುರಿತು ಆಗಬಹುದು. ಶಬ್ದಗಳನ್ನು ಕುರಿತೂ ಆಗಬಹುದು. ಇದರಿಂದ ಬಂದ ಶಬ್ದ ಗ್ರಂಥ. ನಾಮಪದ. ಜೋಡಿಸಿದ್ದು, ಪೋಣಿಸಿದ್ದು, ಗದ್ಯದಲ್ಲಾಗಲಿ ಪದ್ಯದಲ್ಲಾಗಲಿ ರಚಿಸಿದ ಕಾವ್ಯ ಕಥನ ಇತ್ಯಾದಿ. ಒಂದು ಕಾವ್ಯದ ಅಥವಾ ಪವಿತ್ರಗ್ರಂಥದ ಪಾಠವಾಗಬಹುದು. ಒಂದು ಪವಿತ್ರ ಗ್ರಂಥವಾಗಬಹುದು. ಪುಸ್ತಕ ಎಂಬ ಶಬ್ದಕ್ಕೂ ಅದೇ ಅರ್ಥ. ಜೋಡಿಸು, ಅಣಿಗೊಳಿಸು, ಕ್ರಮಗೊಳಿಸು. ಈ ಶಬ್ದಕ್ಕೆ ವಿಶೇಷವಾಗಿ ಒಂದು ಪುಸ್ತಕದ ಹಸ್ತಪ್ರತಿ ಎಂಬ ಅರ್ಥವೂ ಇದೆ. ಪುಸ್ತಕ ಎಂದರೆ ಸಂಸ್ಕೃತದಲ್ಲಿ ಪುಲ್ಲಿಂಗ, ಪುಸ್ತಿಕಾ ಎನ್ನುವುದು ಸ್ತ್ರೀಲಿಂಗ. ಅದಕ್ಕೂ 'ಪುಸ್ತ' ಶಬ್ದದ್ದೇ ಅರ್ಥ. ಪುಸ್ತಕದಿಂದ ಹೊತ್ತಗೆ ಎಂದು ತದ್ಭವವಾಗುತ್ತದೆ. ಎರಡಕ್ಕೂ ಒಂದೇ ಅರ್ಥ. ಗ್ರಂಥ ಎಂಬ ಶಬ್ದವನ್ನು ಗಂಭೀರ ವಿಷಯಗಳನ್ನು ಒಳಗೊಂಡ ಸಂಪುಟಗಳಿಗೂ ಪುಸ್ತಕ ಎಂಬುದನ್ನು ಮಿಕ್ಕೆಲ್ಲ ಹೊತ್ತಗೆಗಳಿಗೂ ಅನ್ವಯಿಸುವುದು ಸರಿ. ಆದರೆ ಸಾಮಾನ್ಯವಾಗಿ ಮಾತನಾಡುವಾಗ ಮಾತುಗಾರರು ತಮ್ಮ ಮಾತಿನ ಹಿರಿಮೆಯನ್ನು ಎತ್ತಿ ತೋರಿಸಲು ಗ್ರಂಥ ಶಬ್ದವನ್ನೇ ಎಲ್ಲಕ್ಕೂ ಉಪಯೋಗಿಸುತ್ತಾರೆ. ಸಂಸ್ಕೃತವನ್ನು ಬಲ್ಲವರು ಗ್ರಂಥ ಶಬ್ದವನ್ನು ಹೆಚ್ಚಾಗಿಯೂ ಸಂಸ್ಕೃತದ ತಿಳಿವಳಿಕೆಯಿಲ್ಲದವರು ಪುಸ್ತಕ ಶಬ್ದವನ್ನು ಹೆಚ್ಚಾಗಿಯೂ ಉಪಯೋಗಿಸುತ್ತಾರೆ. ಹಳಗನ್ನಡವನ್ನು ಓದಿಕೊಂಡಿರುವವರು ಅದರ ಪ್ರಭಾವವನ್ನು ಬೀರುವುದಕ್ಕಾಗಿ ಹೊತ್ತಗೆಯನ್ನೇ ಉಪಯೋಗಿಸುತ್ತಾರೆ. ಇದೆಲ್ಲ ವ್ಯಕ್ತಿಗತವಾದ ಪ್ರಯೋಗದ ರೀತಿಗಳು ಅಷ್ಟೇ. ವ್ಯತ್ಯಾಸವೇನೂ ಇಲ್ಲ. ಸಂದರ್ಭಾನುಸಾರ ಆ ಶಬ್ದಗಳನ್ನು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಬಹುದು. ಇಂಗ್ಲಿಷಿನ Book. Volume ಇದ್ದಂತೆ. ಹಳೆಯ ಇಂಗ್ಲಿಷಿನ Boc ಸಿಂದ Book ಬಂತು. ಹಳೆಯ ಫ್ರೆಂಚ್ ಭಾಷೆಯ Volum ನಿಂದ Volume ಬಂದಿತು. ಈ ಶಬ್ದಕ್ಕೆ Book ಎಂದೇ ಅರ್ಥ.

**ಗ್ರಂದಿಗೆ** ಈ ಶಬ್ದ ನಿಜವಾಗಿ ಗಂದಿಗೆ. ಸಂಸ್ಕೃತದ ಗಂಧ ಶಬ್ದದ ತದ್ಭವ ಗಂದ. ಈ ಶಬ್ದಕ್ಕೆ

ಇಗ ಪ್ರತ್ಯಯವು ಸೇರಿ ಗಂದಿಗ ಆಗಿದೆ. ಪರಿಮಳ ದ್ರವ್ಯವನ್ನು ಮಾರುವವನು ಎಂಬುದು ಅರ್ಥ. ಗ್ರಂದಿಗೆ ಎನ್ನುವುದು ಒಂದು ಪರ್ಯಾಯ ರೂಪ.

**ಗ್ರಹಚಾರ** ಎಂದರೆ ತೊಂದರೆಗಳೇ ? ಗ್ರಹ ಎಂದರೆ ಆಕಾಶದಲ್ಲಿ ಚಲಿಸುತ್ತಿರುವ Planetಗಳು. ಚಾರ ಎಂದರೆ ಚಲಿಸುವುದು, ಓಡಾಟ, ಪ್ರಯಾಣ, Movement. ಜ್ಯೋತಿಶ್ಶಾಸ್ತ್ರದಲ್ಲಿ ಗ್ರಹಗಳ ಚಲನೆಯು ಮಾನವನ ಜೀವಿತದ ಮೇಲೆ ಪ್ರಭಾವ ಬೀರಬಲ್ಲದು ಎಂಬ ನಂಬಿಕೆಯಿದೆ. ವ್ಯಕ್ತಿಗಳ ಜಾತಕವನ್ನು ನೋಡಿ, ಅಲ್ಲಿ ಕಾಣುವ ಗ್ರಹಗಳ ಚಲನೆ ವ್ಯಕ್ತಿಗೆ ಅನುಕೂಲಕರವೋ ಅನಿಷ್ಟಕಾರಕವೋ ಎಂಬುದನ್ನು ಜೋಯಿಸರು ಹೇಳುತ್ತಾರೆ. ಈ ಗ್ರಹಗಳ ಚಲನೆಯೇ ಗ್ರಹಚಾರ. ಜನಸಾಮಾನ್ಯರು ತಮಗೆ ಏನಾದರೂ ತೊಂದರೆ ಬಂದಾಗ 'ನನ್ನ ಗ್ರಹಚಾರ ಚೆನ್ನಾಗಿಲ್ಲ' ಎಂದು ಹೇಳುವುದು ಈ ಅರ್ಥದಲ್ಲಿ. ಈ ಶಬ್ದದಲ್ಲಿ ಹಿಂದಿಯ ಚಾರ್ ಇಲ್ಲ.

**ಗ್ರಹಣ ಬಿಟ್ಟಿತು, ಗ್ರಹಣ ಹಿಡಿಯಿತು** ಎನ್ನುವುದು ಸರಿಯಾದ ವಾಕ್ಯಗಳೇ ? ನಲ್ಲಿಯಲ್ಲಿ ನೀರು ಬಂದಿತು ಎನ್ನುವುದಕ್ಕೆ ನಲ್ಲಿ ಬಂದಿತು ಎನ್ನುವುದು ಸಂಕ್ಷಿಪ್ತ ರೂಪ. ವಿದ್ಯುಚ್ಛಕ್ತಿ ನಿಂತು ಹೋಗಿದ್ದುದು ಮತ್ತೆ ಬಂದಾಗ ನಾವು 'ದೀಪ ಬಂದಿತು' ಎನ್ನುವುದಿಲ್ಲವೆ ? ಹಾಗೆ ಕೆಲವರು 'ಎಲೆಕ್ಟ್ರಿಸಿಟಿ ಬಂತು, ಕರೆಂಟ್ ಬಂತು' ಎಂದೂ ಉಪಯೋಗಿಸುತ್ತಾರೆ. ಇವೆಲ್ಲ ಭಾಷೆಯ ಉಪಯೋಗದ ವೈಲಕ್ಷಣ್ಯಗಳು. ಶಬ್ದಾರ್ಥ ಶಾಸ್ತ್ರದಲ್ಲಿ (Semantics) ಈ ಬಗ್ಗೆ ಶಾಸ್ತ್ರೀಯವಾದ ವಿವರಣೆ ಸಿಕ್ಕುತ್ತದೆ. ಗ್ರಹಣ ಶಬ್ದಕ್ಕೆ ಹಿಡಿಯುವುದು ಎಂದೇ ಅರ್ಥ. ಹಿಂದಿನ ಕಾಲದಲ್ಲಿ ಗ್ರಹಣದ ದಿನಗಳಲ್ಲಿ 'ಗ್ರಹಣ ಸ್ನಾನ, ಮೋಕ್ಷ ಸ್ನಾನ' ಎಂದು ಎರಡು ಸಲ ಸಂಪ್ರದಾಯಸ್ಥರು ಸ್ನಾನ ಮಾಡುತ್ತಿದ್ದರು. ಗ್ರಹಣ ಸ್ನಾನ ಗ್ರಹಣದ ಸೂಚನೆ ಕಂಡಕೂಡಲೆ ಮಾಡುವ ಸ್ನಾನ. ಮೋಕ್ಷಸ್ನಾನ ಎಂದರೆ ಗ್ರಹಣದ ನೆರಳು ಪೂರ್ತಿಯಾಗಿ ಮರೆಯಾದಾಗ ಮಾಡುವ ಸ್ನಾನ. ಕಥೆಯ ಪ್ರಕಾರ ರಾಹು ಚಂದ್ರ ಸೂರ್ಯರನ್ನು ಹಿಡಿಯುತ್ತಾನೆ. ಆ ಬಳಿಕ ಬಿಡುತ್ತಾನೆ ಎಂಬ ನಂಬಿಕೆಯಿದೆ. ಆ ಸಂದರ್ಭದಲ್ಲಿ ಗ್ರಹಣ ಹಿಡಿಯಿತು ಅಂದರೆ ರಾಹು ಚಂದ್ರನನ್ನು ಅಥವಾ ಸೂರ್ಯನನ್ನು ಬಾಯಿಯಲ್ಲಿ ಕಚ್ಚಿತು ಎಂಬರ್ಥದಲ್ಲಿ ಆ ವಾಕ್ಯವನ್ನು ಉಪಯೋಗಿಸುತ್ತಾರೆ. ಈಗಲೂ ಗ್ರಹಣ ಬಿಟ್ಟಿತು ಎನ್ನುವುದಕ್ಕೂ ಇದೇ ಬಗೆಯ ಅರ್ಥ-ಕಚ್ಚಿದ್ದನ್ನು ಬಿಚ್ಚಿದ ಅರ್ಥ ಬರುತ್ತದೆ. ವ್ಯಾಕರಣಕ್ಕೂ ಸಾಮಾಜಿಕ ಸಂಪ್ರದಾಯಕ್ಕೂ ಇಲ್ಲಿ ಸಂಬಂಧವೇರ್ಪಟ್ಟಿರುವುದು ಸ್ಪಷ್ಟ. ಗ್ರಹಣ ಪ್ರಾರಂಭ. ಗ್ರಹಣದ ಮುಕ್ತಾಯ ಎಂಬುದು ಸರಿಯಾದ ಪ್ರಯೋಗಗಳಾಗುತ್ತವೆ.

**ಗ್ಯಾಂಗು** ಗ್ಯಾಂಗ್ ಇಂಗ್ಲಿಷ್ ಶಬ್ದ. ಇದಕ್ಕೆ ಕೆಲಸಗಾರರ ಗುಂಪು ಅಥವಾ ಅಂಥ ಬೇರೆ ಬೇರೆ ಗುಂಪುಗಳು. ಇವರೆಲ್ಲ ಒಟ್ಟು ಸೇರಿ ಕೆಲಸ ಮಾಡುತ್ತಾರೆ. ಗ್ಯಾಂಗು ಕನ್ನಡ ರೂಪ. ಗ್ಯಾಂಗು ಬಂದರೆ ಕೆಲಸ ಬೇಗ ಆಗುತ್ತದೆ ಎಂಬ ನಂಬಿಕೆ ಬರುತ್ತದೆ. ಆದರೆ ಈಚೆಗೆ ಈ ಗ್ಯಾಂಗು ಶಬ್ದಕ್ಕೆ ಹೀನಾರ್ಥ ಬಂದಿದೆ. ಯಾವುದಾದರೂ ಅಪರಾಧ ಮಾಡಲು ಒಟ್ಟು ಸೇರುವ ಜನರಿಗೆ ಗ್ಯಾಂಗು ಎನ್ನುತ್ತಾರೆ. ಡಕಾಯಿತಿ ಮಾಡುವ ಗ್ಯಾಂಗುಗಳು ಎಂದು ಪೋಲಿಸರು ತಿಳಿಸುತ್ತಾರೆ.

**ಗ್ರಾಸ** ಈ ಸಂಸ್ಕೃತ ಶಬ್ದಕ್ಕೆ ಕಬಳ, ತುತ್ತು ಎಂದು ಮುಖ್ಯವಾದ ಅರ್ಥ. ಆಹಾರ, ನುಂಗುವುದು ಎಂಬ ಅರ್ಥಗಳೂ ಉಂಟು. ಗ್ರಸ್ ಎಂಬ ಧಾತುವಿಗೆ ತಿನ್ನು ಎಂದು ಅರ್ಥವಾದುದರಿಂದ ಈ ಎಲ್ಲ ಅರ್ಥಗಳೂ ಸರಿಯಾಗಿವೆ. ಚಂದ್ರ ಸೂರ್ಯರ ಗ್ರಹಣಕಾಲದಲ್ಲಿ ಆ ಗ್ರಹವನ್ನು ಮುಚ್ಚುವುದು ಎಂದೂ ಅರ್ಥವಿದೆ. ರಾಹುವಿಗೆ ಇನ್ನೂ ಗ್ರಾಸವಾಗಿಲ್ಲ ಚಂದ್ರ, ಎಂಬ ವಾಕ್ಯವನ್ನು ನೋಡಿ. ಗ್ರಾಸ ಶಬ್ದಕ್ಕೆ ಸಾಮಗ್ರಿ ಎಂಬ ಅರ್ಥವೂ ಇದೆ. ಈ ಘಟನೆ ಸುದ್ದಿಗೆ ಗ್ರಾಸ, ಎಂಬ ವಾಕ್ಯವನ್ನು ನೋಡಿ.

# ಘ

**ಘಟವಾಣಿ** ಎಂದು ಜನರು ಉಪಯೋಗಿಸುವ ಶಬ್ದ ನಿಜವಾಗಿ ಗಟವಾಳಿ. ಇದು ಗಟವಾಣಿ ಎಂದಾಗಿದೆ. ಗಟ್ಟಿವಾಳ ಎಂಬ ಶಬ್ದಕ್ಕೆ ಗಟ್ಟಿಗ, ಧೈರ್ಯಶಾಲಿ, ಪರಾಕ್ರಮಿ ಎಂಬ ಅರ್ಥಗಳಿವೆ. ಅದಕ್ಕೆ 'ಇ' ಎಂಬ ಸ್ತ್ರೀ ಪ್ರತ್ಯಯ ಸೇರಿದರೆ ಗಟ್ಟಿವಾಳಿ ಎಂದಾಗುತ್ತದೆ. ಅದಕ್ಕೆ ಗಟ್ಟಿಗಿತ್ತಿ, ಧೈರ್ಯವಂತೆ ಎಂದರ್ಥ. ಈಗ ಆ ಅರ್ಥ ಮಾಯವಾಗಿ ಆ ಶಬ್ದಕ್ಕೆ ಜಗಳಗಂಟಿ, ಗಯ್ಯಾಳಿ ಎಂಬ ಅರ್ಥ ಅಂಟಿಕೊಂಡಿದೆ. ಭಾಷೆಯಲ್ಲಿ ಹೀಗಾಗುವುದುಂಟು.

**ಘಟಶ್ರಾದ್ಧ** ಘಟ ಎಂದರೆ ಮಡಕೆ. ಘಟಶ್ರಾದ್ಧ ಎಂದರೆ ಬದುಕಿರುವ ವ್ಯಕ್ತಿಯೊಡನೆ ಇರುವ ಸಂಬಂಧವನ್ನು ಇಲ್ಲಗೊಳಿಸಲು ಮಡಕೆಯೊಳಗೆ ಹೊಲಸನ್ನು ತುಂಬಿಸಿ ಅದನ್ನು ಒಡೆದು ಬಳಿಕ ಮಾಡುವ ಒಂದು ಬಗೆಯ ಧಾರ್ಮಿಕ ವಿಧಿ. ಘಟಸ್ಫೋಟ ಎನ್ನುವುದು ಅಂಥ ಸಮಯದಲ್ಲಿ ಮಡಕೆಯನ್ನು ಒಡೆಯುವ ಕಾರ್ಯ. ಈ ಕ್ರಿಯೆಯನ್ನು ಪ್ರಕಟವಾಗಿ ಮಾಡುವುದರಿಂದ ಎಲ್ಲ ಸಂಬಂಧಿಕರಿಗೂ ಇಂಥವರ ಸಂಬಂಧ ಧಾರ್ಮಿಕವಾಗಿ ಇಲ್ಲವಾಗಿದೆ ಎಂಬುದು ಜಾಹೀರಾತನ್ನು ಪಡೆಯುತ್ತದೆ.

**ಘಟಾನುಘಟಕ** ಈ ಶಬ್ದವನ್ನು ಸಂಸ್ಕೃತದ ಘಟಕ + ಅನುಘಟಕ ಎಂಬ ಶಬ್ದದ ಪ್ರಯೋಗವನ್ನು ಅನುಸರಿಸಿ ಕನ್ನಡದವರು ಮಾಡಿಕೊಂಡಿದ್ದಾರೆ. ಘಟಕ ಎಂದರೆ ೧. ಬುದ್ಧಿವಂತ, ಚತುರ, ಜಾಣ ೨. ಮದುವೆಯನ್ನು ಕುದುರಿಸುವವನು ೩. ಸಂಘಟನೆಯನ್ನು ಉಂಟು ಮಾಡುವವನು ಎಂಬ ಅರ್ಥಗಳಿವೆ. ಅನುಘಟಕಕ್ಕೂ ಅದೇ ಅರ್ಥ. ಆದ್ದರಿಂದ ಘಟಕಾನುಘಟಕ ಎಂಬುದು ಒಂದು ವಿಧದ ದ್ವಿರುಕ್ತಿ. ಹೀಗೆ ಕನ್ನಡಕ್ಕೆ ಇದು ಬಂದಿದೆ. ಘಟಾನುಘಟಿ ಎಂಬ ಶಬ್ದವೂ ಇದಕ್ಕೆ ಸಂಬಂಧಿಸಿದ್ದೇ! ಅದಕ್ಕೆ ಪ್ರಚಂಡ, ಪರಾಕ್ರಮಿ, ಮಹಾಚತುರ, ತುಂಬ ಸಮರ್ಥ ಎಂಬ ಅರ್ಥಗಳು ಕೂಡಿಬಂದಿವೆ.

**ಘಟೋತ್ಕಚ** ಇದು ಮಹಾಭಾರತದ ಭೀಮಸೇನನ ಮತ್ತು ಹಿಡಿಂಬೆಯ ಮಗನ ಹೆಸರು. ಆ ಮಗುವಿನ ತಲೆಯ ಕೂದಲಿನ ಗಂಟು ಘಟದಂತಿದೆ ಎಂದು ಯಾರೋ ಹೇಳಿದುದರಿಂದ ಅವನಿಗೆ ಅದೇ ಹೆಸರಾಯಿತು, ಎಂದು ಭಾರತದ ಆದಿಪರ್ವದಲ್ಲಿ ವಿವರಣೆ ಇದೆ. ಘಟೋದ್ಗಜ ಎಂದು ಉಪಯೋಗಿಸುವುದು ತಪ್ಪು.

**ಘೀ Ghee** ಎಂಬುದು ಹಿಂದೀ ಭಾಷೆಯಿಂದ ಇಂಗ್ಲಿಷಿಗೆ ಹೋಗಿದೆ. ಹಿಂದಿಯಲ್ಲಿ ಘೀ ರೂಪದಲ್ಲಿದ್ದರೂ ಅದರ ಮೂಲ ಸಂಸ್ಕೃತದ ಘೃತ ಎಂಬುದು ಈಗ ನಿರ್ಧಾರವಾಗಿರುವ ವಿಷಯ. ಇದು ಕನ್ನಡದ ತುಪ್ಪ.

**ಘೋಟಕ** ಈ ಸಂಸ್ಕೃತ ಶಬ್ದಕ್ಕೆ ಕುದುರೆ ಎಂದು ಅರ್ಥ. ಘೋಡ, ಘೋಡಾ ಎಂಬುದು ಹಿಂದಿಯಲ್ಲಿ ಆ ಶಬ್ದದ ಅಪಭ್ರಂಶ. ಕನ್ನಡದಲ್ಲಿಯೂ ಘೋಟಕ, ಘೋಟ ಎಂಬ ಶಬ್ದಗಳು ಕುದುರೆ ಎಂಬ ಅರ್ಥದಲ್ಲಿ ಪ್ರಸಿದ್ಧ.

**ಘೋಷ್ವಾರೆ** ಪಾರಸೀ ಭಾಷೆಯಲ್ಲಿ ಗೋಶ್ವಾರಾ ಎಂಬ ಶಬ್ದವಿದೆ. ಇದಕ್ಕೆ ತಃಖ್ತೆ ಎಂದು ಅರ್ಥ, ವಿವರವಾದ ವರದಿ ಎನ್ನಬಹುದು. ಅದಕ್ಕೆ ಅಂದಾಜು, ಸಂಕ್ಷೇಪ ಎಂಬ ಬೇರೆ ಅರ್ಥಗಳೂ ಇವೆ. ಕನ್ನಡದ ಸರಿಯಾದ ರೂಪ ಗೋಶ್ವಾರೆ.

# ಚ

**ಚಂಚಿ** ಇದು ಕನ್ನಡದ ಸಂಚಿ ಎಂಬ ಶಬ್ದದ ಪರ್ಯಾಯ ರೂಪ. ಎಲೆ ಅಡಕೆ, ಸುಣ್ಣ, ಹೊಗೆಸೊಪ್ಪು ಮುಂತಾದುವನ್ನು ಇಡುವ ಸಣ್ಣ ಚೀಲ ಎಂದು ಇದಕ್ಕೆ ಅರ್ಥ. ಅದು ಸೊಂಟಕ್ಕೆ ಸಿಕ್ಕಿಸಿಕೊಳ್ಳಬಹುದಾದ ಅನೇಕ ಜೇಬುಗಳುಳ್ಳ ಸಣ್ಣ ಚೀಲ.

**ಚಂದನ** ಎಂದರೆ ಶ್ರೀಗಂಧ. ಇದು ಸಂಸ್ಕೃತ ಸಮಾಜದಲ್ಲಿ ಉಪಯೋಗಿಸುತ್ತಿದ್ದ ತುಂಬ ಪ್ರಸಿದ್ಧವಾದ ಪರಿಮಳದ್ರವ್ಯ. ಕುಚಂದನ, ಪೀತಚಂದನ, ರಕ್ತಚಂದನ, ಶ್ವೇತಚಂದನ, ಹರಿಚಂದನ ಎಂಬ ಬೇರೆ ಬೇರೆ ವಿಧಗಳನ್ನು ಸಾಹಿತ್ಯದಲ್ಲಿ ನಾವು ಕಾಣಬಹುದು. ಕನ್ನಡದಲ್ಲಿ ಇದು ಬಾವನ್ನ ಎಂಬ ಹೆಸರಿನಿಂದ ಪ್ರಸಿದ್ಧ. ಹರಿಹರನ ಒಲಘಾಂಡಮೂರ್ತಿಗಳ ರಗಳೆ ಎಂಬ ಕೃತಿಯಲ್ಲಿ ಕಥಾನಾಯಕನು ಶಿವಪೂಜೆಗೆಂದು ತನ್ನ ಮೊಳಕೈಯನ್ನು ತೇದು ಪರಿಮಳವನ್ನು ಬರಿಸುತ್ತಾನೆ. **'ಏಕೆ ಬಾವನ್ನವದು, ಮೀರಿತ್ತು ಪರಿಮಳಾ'** ಎಂದು ಕವಿಯ ವರ್ಣನೆ. ಅನಾರೋಗ್ಯ, ವಿರಹತಾಪಾದಿಗಳನ್ನು ಈ ದ್ರವ್ಯ ಶಮನಗೊಳಿಸುತ್ತದೆ ಎಂಬುದು ವೈದ್ಯರ ಮತ. **'ಚಂದನ ಚರ್ಚಿತ ನೀಲಕಳೇವರ ಪೀತವಸನ ವನಮಾಲಿ'** ಎಂಬ ಜಯದೇವನ ಪ್ರಸಿದ್ಧ ಅಷ್ಟಪದಿಯನ್ನು ನೆನೆದುಕೊಳ್ಳಿ. ಮುದ್ದಣ ತನ್ನ ಶ್ರೀರಾಮ ಪಟ್ಟಾಭಿಷೇಕದಲ್ಲಿ **"ತೇದೊಡೆ ಚಂದನಂ ಸುಗಂಧಮನೀವ ತೆರದೆ"** ಎಂದು ರಾಮನ ಕಥೆಯನ್ನು ವರ್ಣಿಸುತ್ತಾನೆ.

**ಚಂದ್ರ** ಚಂದ್ರ ಸಂಸ್ಕೃತ ಭಾಷೆಯ ಶಬ್ದ. ಕವಿಗಳಿಗೆ ತುಂಬ ಪ್ರಿಯವಾದ ಶಬ್ದ. ಪುರಾಣಗಳ ಪ್ರಕಾರ ಅತ್ರಿಯೆಂಬ ಮಹರ್ಷಿಯು ತಪಸ್ಸು ಮಾಡುತ್ತಿದ್ದಾಗ ಆತನ ಮುಖದಿಂದ ಹೊರಟ ದಿವ್ಯ ಜ್ಯೋತಿ ಪ್ರಪಂಚವನ್ನೆಲ್ಲ ವ್ಯಾಪಿಸಿತು. ಬ್ರಹ್ಮನು ಆ ಜ್ಯೋತಿಯನ್ನು ಸಂಗ್ರಹಿಸಿ ಒಬ್ಬ ಪುರುಷನನ್ನಾಗಿ ಮಾಡಿದನು. ಅವನಿಗೆ ಚಂದ್ರ ಎಂದು ಹೆಸರಿಟ್ಟನು. ಚಂದ್ರನಿಗೆ ಸಂಬಂಧಿಸಿದ ಇತರ ಕಥೆಗಳೂ ಸ್ವಾರಸ್ಯವಾಗಿದೆ. ಚಂದಿರ ತದ್ಭವದ ರೂಪ. ಭಾಷಾಶಾಸ್ತ್ರದ ದೃಷ್ಟಿಯಿಂದ ಈ ಶಬ್ದ ಚದಿ ಎಂಬ ಧಾತುವಿನಿಂದ ಬಂದುದು. ಚದಿ ಎಂದರೆ ಸಂತೋಷ ಹೊಂದು, ಆಹ್ಲಾದಿಸು ಎಂದರ್ಥ. ಪ್ರಕಾಶಿಸು ಎಂಬರ್ಥವೂ ಇದೆ. ಚಂದ್ರ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ಚಿನ್ನ ೨. ನವಿಲಗರಿಯ ಕಣ್ಣು ೩. ನೀರು, ೪. ರತ್ನ ೫. ಪಚ್ಚಕರ್ಪೂರ ಇತ್ಯಾದಿ. ಚಂದ್ರನಿಗೆ ೧೬ ಕಲೆಗಳಿವೆ.* ಒಂದೊಂದು ಕಲೆಗೂ ಬೇರೆ ಬೇರೆ ಹೆಸರುಗಳಿವೆ. ಚಂದ್ರಕಾಂತ ಶಿಲೆಯು ಬೆಳದಿಂಗಳಿನಲ್ಲಿ ದ್ರವಿಸುವುದಂತೆ. ಚಂದ್ರನನ್ನು ಕವಿಗಳು ವರ್ಣಿಸುವುದರಲ್ಲಿ ನಿಸ್ಸೀಮರು. ಕೆಲವೇ ಸುಂದರವಾದ ವೃತ್ತಗಳನ್ನು ಆರಿಸಿ ವಿವರಿಸಿದರೂ ೫೦೦ ಪುಟದ ಒಂದು ಪುಟ್ಟ ಗ್ರಂಥವನ್ನೇ ಬರೆಯಬಹುದು.

ಕನ್ನಡದಲ್ಲಿ ಚಂದ್ರನಿಗೆ ಪೆರ್ಜಿ, ತಿಂಗಳು ಎಂಬ ಎರಡು ಶಬ್ದಗಳಿವೆ. ಚಂದಮಾಮ ಎಂಬುದು ಮಕ್ಕಳಿಗೆ ಚಂದ್ರನನ್ನು ತೋರಿಸುವಾಗ ಹೇಳುವ ಮಾತು. ಚಂದ್ರಮುಖಿ ಎಂದು ಸ್ತ್ರೀಯನ್ನು ಕರೆದರೆ ಅವಳ ಮುಖ ಚಂದ್ರನಂತೆಯೆ ಕೆಂಪಾಗುತ್ತಿತ್ತು. ಈಚೆಗೆ ಮಾನವ ಚಂದ್ರಗ್ರಹದ ಮೇಲೆ ಕಾಲಿಟ್ಟಾಗಿನಿಂದ ಗಂಡಸರು ಈ ಶಬ್ದವನ್ನು ಹೆಂಗಸರ ಎದುರಿಗೆ ಹೇಳಲು ಹೆದರುತ್ತಾರೆ.

**ಚಕಾರ, ಚಾಚೂತಪ್ಪದೆ** ಚಕಾರ ಎಂದರೆ ಚ ಎಂಬ ಅಕ್ಷರ. ಸಂಸ್ಕೃತದಲ್ಲಿ ಚ.ವೈ.ತು.ಹಿ ಎಂಬ ಪಾದಪೂರಣಕ್ಕಾಗಿ ಉಪಯೋಗಿಸುವ ಅರ್ಥವಿಲ್ಲದ ಅಕ್ಷರಗಳಿವೆ. ಕನ್ನಡಲ್ಲಿ ದಲ್, ವಲಂ, ನೆರೆ, ಮೇಣ್ ಮುಂತಾದ ಶಬ್ದಗಳ ಹಾಗೆ. ಇವು ಛಂದಸ್ಸಿನಲ್ಲಿ ಖಾಲಿ ಜಾಗವನ್ನು ಭರ್ತಿ

ಮಾಡಲು ಉಪಯೋಗಿಸುವ ಅಕ್ಷರಗಳು. ಆದುದರಿಂದ ಚಕಾರ ಎಂದರೆ ಅರ್ಥವಿಲ್ಲದ ಮಾತು. ನಾನು ಆಡಿದ ಮಾತಿಗೆ ಅವನು ಚಕಾರವನ್ನು ಎತ್ತಲಿಲ್ಲ. ಯಾವ ವ್ಯರ್ಥವಾದ ಮಾತನ್ನೂ ಎತ್ತಲಿಲ್ಲ. ನನ್ನ ಮಾತಿಗೆ ಪ್ರತಿಬರಲಿಲ್ಲ ಎಂದು ಅರ್ಥ.

ಇದು ಒಂದು ವಿವರಣೆ. ಇನ್ನೊಂದು ಸಂಸ್ಕೃತದಲ್ಲಿ ಚಕ್ರಕಾರಕ ಎಂಬ ಶಬ್ದವಿದೆ. ಇದಕ್ಕೆ ಉಗುರು ಎಂದರ್ಥ. ಈ ಚಕ್ರಕಾರಕವೇ ಚಕಾರವಾಗಿದೆ. ಇದಕ್ಕೆ ಉಗುರಿನಷ್ಟು ಎಂದರ್ಥ. ಅಂದರೆ ಸ್ವಲ್ಪವೂ ಬಿಡದೆ ಎಂದರ್ಥ ಎಂಬುದು ಇನ್ನೊಂದು ವಿವರಣೆ. ಚಚೂ ತಪ್ಪದೆ, ಚಾಚೂತಪ್ಪದೆ ಎಂದರೂ ಇದೇ ಅರ್ಥ. ಕೆಲವರು ಇದು ಕಾಗುಣಿತದಲ್ಲಿ ಬರುವ ಚಕಾರದಿಂದ ಹಿಡಿದು ಚಃ ವರೆಗಿನ ಎಲ್ಲ ಅಕ್ಷರಗಳನ್ನೂ ಪೂರ್ತಿಯಾಗಿ ಹೇಳುವುದು ಎಂದರ್ಥ, ಆದುದರಿಂದ ಚಾಚೂ ಎಂದರೆ ಯಾವ ಕ್ರಮವನ್ನೂ ತಪ್ಪದೆ ಎಲ್ಲವನ್ನೂ ಸರಿಯಾಗಿ ಮಾಡಿದರು ಎಂದು ಅರ್ಥ, ಎಂದು ವಿವರಿಸುತ್ತಾರೆ.

**ಚಕ್ಕರ್** ಎನ್ನುವುದು ಮರಾಠೀ ಮತ್ತು ಹಿಂದೀ ಭಾಷೆಗಳಲ್ಲಿ ತಪ್ಪಿಸಿಕೊಳ್ಳುವುದು ಎಂಬ ಅರ್ಥದಲ್ಲಿ ಉಪಯೋಗವಾಗುತ್ತಿದೆ. ಅಲ್ಲಿಂದಲೇ ಕನ್ನಡಕ್ಕೆ ಬಂದಿದೆ. ಶಾಲೆಯಿಂದ, ಕಚೇರಿಯಿಂದ, ಫ್ಯಾಕ್ಟರಿಯಿಂದ ತಪ್ಪಿಸಿಕೊಳ್ಳುವುದಕ್ಕೆ ಚಕ್ಕರ್ ಹೊಡೆಯುವುದು ಎನ್ನುವುದು ಸಾಮಾನ್ಯ. ವಿದ್ಯಾರ್ಥಿಗಳು ಈ ಶಬ್ದವನ್ನು ಹೆಚ್ಚಾಗಿ ಸಾರ್ಥಕಪಡಿಸುತ್ತಾರೆ.

**ಚಕ್ಕಳ** ಇದು ದ್ರಾವಿಡ ಶಬ್ದ. ಇದಕ್ಕೆ ಚರ್ಮ ಎಂದರ್ಥ. ಚಕ್ಕಣ ಎಂಬ ಇನ್ನೊಂದು ಶಬ್ದವಿದೆ. ಅದಕ್ಕೆ ಮದ್ಯಪಾನ ಮಾಡುವವರು ಮಧ್ಯೆಮಧ್ಯೆ ನಂಜಿಕೊಳ್ಳುವ ಖಾರವಾದ ಮಾಂಸ ಪದಾರ್ಥ ಎಂದು ಅರ್ಥ. ಸಂಸ್ಕೃತದ ಚಕ್ಷಣ ಶಬ್ದದ ತದ್ಭವ. ಚಕ್ಕಳಕ್ಕೆ ಸಂಬಂಧವಿಲ್ಲ.

**ಚಕ್ಕಂಬಟ್ಲು** ಶಬ್ದಕ್ಕೆ ಪದ್ಮಾಸನ ಎಂಬುದು ಅರ್ಥ. ಆದರೆ ಚಕ್ಕಂಬಟ್ಲು ಹೇಗೆ ಬಂತು ಹೇಳುವುದು ಕಷ್ಟ. ಈ ರೂಪಗಳನ್ನು ನೋಡಿ: ಚಕ್ಕಳ ಬಕ್ಕಳ, ಚಕ್ಕಲು ಬಕ್ಕಲು, ಚಕ್ಕಳ ಮುಕ್ಕಳ, ಚಕ್ಕಳೆ ಮುಕ್ಕಳೆ ಇವುಗಳ ಜೊತೆಗೆ ಚಕ್ಕಂಬಟ್ಲು ಬೇರೆ ಸೇರಿತು. ಕನ್ನಡ ನಾಡಿನ ಇತರ ಪ್ರದೇಶಗಳಲ್ಲಿ ಈ ಶಬ್ದಕ್ಕೆ ಇನ್ನೆಷ್ಟು ಪರ್ಯಾಯ ಇವೆಯೋ ಕಾಣೆ. ವ್ಯುತ್ಪತ್ತಿ ಅನಿಶ್ಚಿತ.

**ಚಟ್ನಿ** ಇದು ಹಿಂದೂಸ್ತಾನೀ ಶಬ್ದ. ಮರಾಠೀ, ಹಿಂದೀ, ಸಿಂಧೀ, ಕನ್ನಡ, ತೆಲುಗು, ತಮಿಳು, ಇಂಗ್ಲಿಷ್ ಈ ಎಲ್ಲ ಭಾಷೆಗಳಲ್ಲಿಯೂ ಈಗ ಉಪಯೋಗವಾಗುತ್ತಿದೆ. ಸಿಹಿ ಚಟ್ನಿ, ಕಾರದ ಚಟ್ನಿ ಎಂದು ಎರಡು ಬಗೆ. ಇಂಗ್ಲಿಷರಿಗೆ ಚಟ್ನಿಯನ್ನು ಕಂಡರೆ ತುಂಬ ಪ್ರೀತಿ. ಅವರು ಚಟ್ನಿಯ ಸಾರ್ವತ್ರಿಕ ಉಪಯೋಗವನ್ನು ಕಂಡು ಅದು the kitchen of the indian peasant ಎಂದು ವರ್ಣಿಸುತ್ತಾರೆ. ಅಂದರೆ ಅದೇ ರೈತರಿಗೆ ಸಕಲ ಮೃಷ್ಟಾನ್ನ ಎಂದು ವ್ಯಂಗ್ಯ. ಆದರೆ ಸತ್ಯ. ಅವರಿಗೆ ಚಟ್ನಿ ಇದ್ದರೆ ಮತ್ತೇನೂ ಬೇಕಿಲ್ಲ. ಆ ಕಾರದಿಂದಲೇ ಅವರ ಊಟ ಪೂರೈಸುತ್ತದೆ — ಪ್ರತಿ ನಿತ್ಯ. ಇಂಗ್ಲಿಷಿನವರು ಇಂಡಿಯಾ ದೇಶದಲ್ಲಿ ೨೦೦ ವರ್ಷ ರಾಜ್ಯವಾಳಿದರೂ ಅವರು ಚಟ್ನಿಗೂ ನಮ್ಮ ಉಪ್ಪಿನಕಾಯಿಗೂ ವ್ಯತ್ಯಾಸವನ್ನು ತಿಳಿಯುವಷ್ಟು ಭಾರತದ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲೇ ಇಲ್ಲ. ಅವರ ನಿಘಂಟುಗಳಲ್ಲಿ ಚಟ್ನಿ ಪದಕ್ಕೆ pickle ಎಂಬ ಅರ್ಥ ದೊರಕುತ್ತದೆ. ನನ್ನ ಜೊತೆ ಜಗಳಕ್ಕೆ ಬಂದರೆ ನಿನ್ನನ್ನು ಚಟ್ನಿ ಮಾಡಿಬಿಡುತ್ತೇನೆ ಎಂದರೆ ಅದು ದೋಸೆಗೆ ನಂಜಿಕೊಳ್ಳಲು ಉಪಯೋಗಿಸುವ ಚಟ್ನಿಯಲ್ಲ ಎಂಬುದು ಸ್ಪಷ್ಟ. ನಮ್ಮಲ್ಲಿ ಉಪ್ಪಿನಕಾಯಿ ಎಷ್ಟು ಬಗೆಯಾಗಿವೆಯೋ ಚಟ್ನಿಯೂ ಅಷ್ಟೇ ಬಗೆಯಾಗಿವೆ. ಆಂಧ್ರದ ಗೊಂಗುರು ಚಟ್ನಿ ಪ್ರಸಿದ್ಧ. ಉಡುಪಿಯ ಕಡೆ ೮-೧೦ ಬಗೆಯ ಚಟ್ನಿಯನ್ನು ತಯಾರಿಸುತ್ತಾರೆ.

**ಚಟ್ಟೆಕಾರ** ಚಟ್ಟೆ ಎಂದರೆ ಯೂರೋಪಿನ ಜನರು ಧರಿಸುವ ಉಡುಪು. ತಮಿಳಿನಲ್ಲಿ ಚಟ್ಟೈಕ್ಕಾರನ್ ಎಂಬ ಶಬ್ದವಿದೆ. ಅದಕ್ಕೆ ಎರಡು ಅರ್ಥಗಳಿವೆ. ೧. ಯೂರೋಪಿಯನ್ನರ

ಹಾಗೆ ಉಡುಪು ಧರಿಸಿದವನು ೨. ಯೂರೋಪಿಯನ್ನರ ಮತ್ತು ದೇಶ್ಯ ಜನರ ಸಂಕರದಿಂದ ಹುಟ್ಟಿದವನು, ಆಂಗ್ಲೋ ಇಂಡಿಯನ್. ಕನ್ನಡದಲ್ಲಿಯೂ ಚಟ್ಟೆಕಾರ ಎಂಬ ಶಬ್ದಗಳಿಗೆ ಈ ಎರಡೂ ಅರ್ಥಗಳಿವೆ.

**ಚಡಾವು** ಇದು ಹಿಂದೀ ಶಬ್ದ. ಇದಕ್ಕೆ ಇರುವ ಅರ್ಥಗಳು: ೧. ದಿಣ್ಣೆ, ಎತ್ತರದ ಸ್ಥಳ, ೨. ಅಭಿವೃದ್ಧಿ, ಬಡತಿ, ೩. ಒಂದು ಬಗೆಯ ಮಹಮದೀಯ ಸಂಪ್ರದಾಯದ ಪಾದರಕ್ಷೆ, ಮೆಟ್ಟು. ಮರಾಠಿಯಲ್ಲಿಯೂ ಈ ಶಬ್ದ ಪ್ರಯೋಗದಲ್ಲಿದೆ. ಹಿಂದಿಯಲ್ಲಿ ಚಢಾವ್, ಚಢಾವಾ ಎಂಬ ರೂಪಗಳಲ್ಲಿ ಪ್ರಯೋಗವಾಗುತ್ತದೆ. ಈಗಲೂ ಉಪಯೋಗದಲ್ಲಿರುವ ಪಾದರಕ್ಷೆಯ ಮಾದರಿ ಇದು.

**ಚತುರ** ಇದು ಸಂಸ್ಕೃತ ಶಬ್ದ. ಇದಕ್ಕೆ ೧. ಜಾಣತನವುಳ್ಳ, ಕುಶಲಿಯಾದ ಎಂದೂ ೨. ಸಮರ್ಥನಾದ, ದಕ್ಷನಾದ ಎಂದೂ ಗುಣವಾಚಕದ ಅರ್ಥವಿದೆ. ಇದರಿಂದ ಚಾತುರ್ಯ ಎಂಬ ಭಾವನಾಮವಾಗಿ ಅದಕ್ಕೆ ೧. ಜಾಣತನ ೨. ಸಾಮರ್ಥ್ಯ ಎಂಬ ಅರ್ಥಗಳು ಬರುತ್ತವೆ. ಈ ಶಬ್ದದ ಕನ್ನಡ ತದ್ಭವ ಚದುರ =೧. ಜಾಣ ೨. ಸಮರ್ಥ. ಕನ್ನಡಲ್ಲಿಯೂ ಗುಣವಾಚಕದ ಅರ್ಥ ಉಂಟು.

**ಚತುರೋಪಾಯಗಳು** ಸಾಮ, ದಾನ, ಭೇದ, ದಂಡ ಎಂಬುದಾಗಿ ನಾಲ್ಕು. ಇವು ಮುಖ್ಯವಾಗಿ ರಾಜನೀತಿಗೆ ಸಂಬಂಧಪಟ್ಟ ಉಪಾಯಗಳು. ಇದರಲ್ಲಿ ಬೇರೆ ಬೇರೆ ಕ್ಷೇತ್ರಕ್ಕೆ ಸೇರಿದ ೨,೩,೫,೬,೭ ಸಂಖ್ಯೆಯ ಉಪಾಯಗಳಿವೆ. ಸದ್ಯಕ್ಕೆ ಈ ನಾಲ್ಕು ಉಪಾಯಗಳನ್ನು ಅರ್ಥಮಾಡಿಕೊಳ್ಳೋಣ. ಚತುರುಪಾಯ ಎಂಬುದು ಸರಿಯಾದ ಶಬ್ದ. ಚತುರೋಪಾಯ ಎಂಬುದು ವ್ಯಾಕರಣ ಶುದ್ಧವಲ್ಲ. ಪ್ರಯೋಗದಲ್ಲಿ ವ್ಯಾಪಕವಾಗಿದೆ. ಉಪಾಯ ಎಂದರೇನು ? ಅಪೇಕ್ಷಿಪಟ್ಟದ್ದನ್ನು ಇದರಿಂದ ಪಡೆಯಬಹುದು ಎಂದೇ ಅದಕ್ಕೆ ಉಪಾಯ ಎಂದು ಹೆಸರು, **ಉಪೈತಿ ವಾಂಛಿತಮನೇನ ಪ್ರಾಪ್ನೋತಿ ಇತಿ ಉಪಾಯಃ** ಎಂದು ಸಂಸ್ಕೃತ ಟೀಕಾಕಾರರು ಹೇಳುತ್ತಾರೆ. **ಸಾಮ** ಸಾಂತ್ವನ ಅಥವಾ ಸಮಾಧಾನದ ಮಾತನಾಡಿ ಒಳ್ಳೆಯತನವನ್ನು ತಿಳಿಸಿ ಶತ್ರುವನ್ನು ತನ್ನ ಕಡೆಗೆ ಮಾಡಿಕೊಳ್ಳುವುದು ಮೊದಲನೆಯ ಉಪಾಯ. **ದಾನ** ಎಂದರೆ ಶತ್ರುವಿಗೆ ಬೇಕಾದದ್ದನ್ನು ಕೊಡುವುದು. **ಭೇದ** ಎಂದರೆ ಶತ್ರುಗಳಾದವರಲ್ಲಿ ಒಬ್ಬೊಬ್ಬರಿಗೆ ಅಭಿಪ್ರಾಯ ಭೇದ ಬರುವಂತೆ ಮಾಡುವುದು. ಇದೇ ಭೇದೋಪಾಯ. ಇದರಿಂದ ಶತ್ರುಗಳು ದುರ್ಬಲರಾಗುತ್ತಾರೆ. **ದಂಡ** ಎಂದರೆ ದುಷ್ಟತನವನ್ನು ಈ ಮಾರ್ಗದಿಂದ ಶಿಕ್ಷಿಸುವುದು. ದಂಡನೀತಿಯಲ್ಲಿ ಎರಡು ಬಗೆಗಳಿವೆ. ಒಂದು **ಪ್ರಕಟದಂಡ** ಎಲ್ಲರಿಗೂ ಗೊತ್ತಾಗುವಂತೆ ಶಿಕ್ಷಿಸುವುದು. ಇನ್ನೊಂದು **ತೂಷ್ಣೀಂದಂಡ** ಅಂದರೆ ಗೂಢವಾಗಿ ಕೊಲೆ ಮುಂತಾದುವನ್ನು ಮಾಡಿಸುವುದು. ಹೀಗೆ ಈ ಉಪಾಯಗಳು ಸ್ವಾರಸ್ಯವಾಗಿವೆ. ಇದೆಲ್ಲ ರಾಜತಂತ್ರಗಳು. ತಂತ್ರ ಎಂದರೆ ಸ್ವರಾಷ್ಟ್ರಚಿಂತನ. ಅಂದರೆ ತನ್ನ ರಾಜ್ಯದ ಕ್ಷೇಮದ ಆಲೋಚನೆ.

**ಚಪ್ಪರ** ಇದು ಕನ್ನಡ ಶಬ್ದ. ಮಂಟಪ ಎಂದು ಇದರ ಅರ್ಥ. ಇತರ ಅರ್ಥಗಳೂ ಇವೆ. ೧. ಮೇಲ್ಕಟ್ಟು, ಚಾವಣಿ ೨. ಬಳ್ಳಿಗಳನ್ನು ಹಬ್ಬಿಸಲು ಕಟ್ಟಿದ ಹಂದರ ೩. ಗುಡಿಸಲು.

**ಚಪ್ಪರಿಸು** ಈ ಶಬ್ದ ಚಪ್ಪರಕ್ಕೆ ಸಂಬಂಧಪಟ್ಟದ್ದಲ್ಲ. ಇದಕ್ಕೆ ೧. ಏನನ್ನಾದರೂ ತಿನ್ನುವಾಗ ನಾಲಗೆಯಿಂದ ಚಪ್ ಎಂದು ಶಬ್ದಮಾಡು ೨. ಬಾಯಿಯಿಂದ ಚಪ್ ಎಂಬ ಶಬ್ದ ಬರುವಂತೆ ಮಾಡು ೩. ಪ್ರಾಣಿಗಳ ಮೈತಡವು. ೪. ಕುದುರೆಯ ಕತ್ತಿನ ಬಳಿ ತಟ್ಟು ಎಂಬ ಅರ್ಥಗಳಿವೆ.

**ಚಪ್ರಾಸಿ, ಚಪರಾಶಿ** ಇದು ಹಿಂದೀ ಭಾಷೆಯ ಚಪರಾಸೀ ಎಂಬ ಶಬ್ದದ ಕನ್ನಡ ರೂಪ. ಈ ಶಬ್ದಕ್ಕೆ ಯಾವುದಾದರೂ ಕಚೇರಿಯಲ್ಲಿ ಎದೆಯ ಮೇಲೆ ತನ್ನ ವೃತ್ತಿಯನ್ನು ಸೂಚಿಸುವ

ಲೋಹದ ಬಿಲ್ಲೆಯನ್ನು ಧರಿಸಿಕೊಂಡಿರುವ ಸೇವಕ ಎಂದು ಅರ್ಥ. ಕೆಲವು ಕಡೆಗಳಲ್ಲಿ ಛಪ್ರಾಸಿ ಎಂಬ ರೂಪವನ್ನೂ ಉಪಯೋಗಿಸುತ್ತಾರೆ.

**ಚಮಚ** ಎಂಬುದು ಹಿಂದೀ ಭಾಷೆಯ ಶಬ್ದ. ಇದಕ್ಕೆ ತಟ್ಟೆಯಿಂದ ಉಪಹಾರವನ್ನು ಎತ್ತಿ ಬಾಯಿಗೆ ಇಡುವ ಲೋಹದಲ್ಲಿ ಅಥವಾ ಇತರ ರೀತಿಯಲ್ಲಿ ತಯಾರಾದ ಸಣ್ಣ ಮಿಳ್ಳೆಯಾಕಾರದ ಸಾಧನ ಎಂದರ್ಥ. ಕನ್ನಡದಲ್ಲಿಯೂ ಅದನ್ನು ಚಮಚ ಅಥವಾ ಸ್ಪೂನು, (spoon) ಎಂದೇ ಕರೆಯುತ್ತಾರೆ. ಮಿಳ್ಳೆ, ಎಣ್ಣೆ ಮುಂತಾದ ಖಾದ್ಯ ದ್ರವವನ್ನು ದೊಡ್ಡ ಪಾತ್ರೆಯಿಂದ ಎಲೆಗೆ ಬಡಿಸುವ ಸಾಧನ ಎಂದು ತಿಳಿಯಲಾಗಿದೆ. ಮಿಳ್ಳೆಯ ತುದಿ ಗುಂಡಗಿದ್ದರೆ ಚಮಚದ ತುದಿ ಉದ್ದುದ್ದವಾಗಿ ಹಳ್ಳವಾಗಿರುತ್ತದೆ. ಈ ಶಬ್ದಕ್ಕೆ ವ್ಯಾಪಕವಾಗಿ ಹೊಗಳುಭಟ್ಟ, ವಂದಿ ಎಂಬ ಅರ್ಥ ಬಂದಿದೆ. Sycophant ಎಂಬುದು ಸರಿಯಾದ ಇಂಗ್ಲಿಷ್ ಶಬ್ದ. ಚಮಚಾಗಿರಿ ಎಂದರೆ ಹೊಗಳುವವರನ್ನು ಸುತ್ತ ಸೇರಿಸಿಕೊಂಡಿರುವ ಸ್ಥಿತಿ, ಅಧಿಕಾರ. ಇಂಗ್ಲಿಷಿನಲ್ಲಿ Sycophancy.

**ಚರಮಗೀತೆ** ಎಂದರೆ ಯಾರಾದರೂ ಆತ್ಮೀಯರು ಅವಸಾನ ಹೊಂದಿದಾಗ ಕವಿಯಾದವನು ರಚಿಸಿದ ಸಂತಾಪದ ಭಾವನೆಯಿಂದ ತುಂಬಿರುವ ಕವನ. ಚರಮ ಎಂದರೆ ಕೊನೆಯದಾದ ಎಂದರ್ಥ. ಇದನ್ನು ವಿಲಾಪ ಗೀತೆ ಎಂದೂ ಕರೆಯಬಹುದು; ಏಕೆಂದರೆ ಆ ಕವನಗಳಲ್ಲಿರುವುದೆಲ್ಲ ವಿಲಾಪವೇ. ಸತ್ತವರ ಗುಣಗಾನ ಮಾಡುತ್ತ ವಿಲಾಪ ಮಾಡುತ್ತಿರುವುದು ಚರಮ ಶ್ಲೋಕ; ಚರಮವಾಕ್ಯ, ಚರಮಗೀತ ಎಂಬ ಶಬ್ದಗಳೂ ಪ್ರಯೋಗದಲ್ಲಿವೆ. ಇಂಗ್ಲಿಷ್ ಭಾಷೆಯ Elegy ಎಂಬ ಶಬ್ದಕ್ಕೆ ಸಮಾನವಾಗಿ ನಾವು ಈ ಶಬ್ದವನ್ನು ಉಪಯೋಗಿಸುತ್ತ ಬಂದಿದ್ದೇವೆ. ಇಂಗ್ಲಿಷಿನಲ್ಲಿ Dirge ಎಂಬುದೂ Threnody ಎಂಬುದೂ ಇದೇ ಬಗೆಯ ರಚನೆಗಳಿಗೆ ಅನ್ವಯವಾಗುತ್ತಿವೆ. Monody ಎಂಬುದೂ ಇಂಥದೇ ಶಬ್ದ. ಅದು ಗ್ರೀಕ್ ಶಬ್ದ. ಅದಕ್ಕೆ ಒಬ್ಬನೇ ಹಾಡುವುದು ಎಂದು ಅರ್ಥ. ಸಂಸ್ಕೃತದಲ್ಲಿ ಈ ಚರಮಶ್ಲೋಕ ಎಂಬ ಶಬ್ದ ಚಾಲ್ತಿಯಲ್ಲಿಲ್ಲ. ಭೋಜನು ಸತ್ತಂತೆ ನಟಿಸಿ ಕಾಳಿದಾಸನಿಂದ ಇಂಥ ಶ್ಲೋಕವನ್ನು ಕೇಳಿದನೆಂಬ ಕಥೆ ಇದೆ. ಆದರೆ ಅದನ್ನು ಚರಮಶ್ಲೋಕ ಎಂದು ಯಾರೂ ಕರೆದಿಲ್ಲ.

**ಚರಿತ್ರೆ** ಎಂದರೆ ನಡವಳಿಕೆ, ವರ್ತನೆ. ಒಬ್ಬ ವ್ಯಕ್ತಿಯ ಜೀವನ ಚಿತ್ರ. ಈ ಮೂಲಕ ಸಂಶೋಧನೆ ಮಾಡಿ ರಚಿಸಿದ ದೇಶದ ಕಥೆಯ ಆಧಾರಭೂತವಾದ ಚಿತ್ರ. ಒಂದು ದೇಶದ, ಜನಾಂಗದ ಭೂತಕಾಲದ ಘಟನೆಗಳ ವ್ಯವಸ್ಥಿತವಾದ ನಿರೂಪಣೆ. ಪ್ರಮುಖವಾದ ಎಲ್ಲ ಘಟನೆಗಳ ನಿರೂಪಣೆಯನ್ನೂ ಹೊಂದಿರುವ ಗ್ರಂಥ.

**ಚರುಕಲು** ಸಂಸ್ಕೃತದಲ್ಲಿ ಚರು ಎಂದರೆ ಅನ್ನ. ಅಗ್ನಿಗೆ ಆಹುತಿಯಾಗಿ ಹಾಕುವ ನೈವೇದ್ಯ. ಇದನ್ನು ಇಡುವ ಅಗಲವಾದ ಬಾಯಿಯುಳ್ಳ ಪಾತ್ರೆಗೆ ಚರುಕ ಎಂದು ಹೆಸರು. ಆ ಚರುಕವೇ ಕನ್ನಡದಲ್ಲಿ ಚರುಕಲು ಎಂದಾಗಿರಬೇಕು. ಮುಚ್ಚಳವಿರದ ಅಗಲ ಬಾಯಿಯುಳ್ಳ ಪಾತ್ರೆ; ಲೋಹದ ಪಾತ್ರೆ. ಮರದ ಪಾತ್ರೆಗೆ **ಮರಗಿ** ಎಂಬ ಬೇರೆಯ ಹೆಸರಿದೆ.

**ಚರ್ಚಾಗೋಷ್ಠಿ** ಎಂಬುದು ಒಂದು ವಿಷಯದ ಪರವಾಗಿಯೂ ವಿರೋಧವಾಗಿಯೂ ಮಾತನಾಡುವವರನ್ನು ಬೇರೆ ಬೇರೆ ಪಂಗಡಗಳಾಗಿ ವಿಂಗಡಿಸಿ ಒಬ್ಬರಾದ ಮೇಲೆ ಒಬ್ಬರು ಮಾತನಾಡುವ ಏರ್ಪಾಡು. ಇದರಲ್ಲಿ ಒಬ್ಬರು ಹೇಳುವ ಅಭಿಪ್ರಾಯಗಳನ್ನು ಸಕಾರಣವಾಗಿ ವಿರೋಧಿಸಿ ತಮ್ಮ ಅಭಿಪ್ರಾಯವನ್ನು ಸಾಧಿಸುವುದಕ್ಕೆ ಅವಕಾಶವಿರುತ್ತದೆ. ಈ ಬಗೆಯ ಸಭೆಯಲ್ಲಿ ಒಬ್ಬ ಅಧ್ಯಕ್ಷನಿದ್ದು ಚರ್ಚೆ ಜಗಳಕ್ಕೆ ತಿರುಗದಂತೆ ನೋಡಿಕೊಳ್ಳುತ್ತಾನೆ. ಅಧ್ಯಕ್ಷನ ತೀರ್ಮಾನಕ್ಕೆ ಎಲ್ಲರೂ ಬದ್ಧರಾಗಿರಬೇಕು. ಚರ್ಚೆಯಾದ ಕೊನೆಯಲ್ಲಿ ವಿಷಯವನ್ನು ಓಟಿಗೆ ಹಾಕಿ ಯಾವ ಕಡೆಗೆ ಹೆಚ್ಚು ಮತ ಬರುತ್ತದೆಯೊ

ಅವರು ಗೆದ್ದರೆಂದು ತೀರ್ಮಾನಿಸುತ್ತಾರೆ. ಇಂಥ ಸಭೆಗಳು ಯುವಕರನ್ನು ಒಳ್ಳೆಯ ಮಾತುಗಾರರನ್ನಾಗಿ ಮಾಡಲು ಸಹಾಯಕ. ಶಿಕ್ಷಣ ಕ್ಷೇತ್ರದಲ್ಲಿ ಇದಕ್ಕೆ ಪ್ರಾಧಾನ್ಯ ಹೆಚ್ಚು.

**ಚರ್ಚೆ** ಇದು ವಾದವಿವಾದಗಳಿಂದ ಕೂಡಿದ ಮಾತುಕತೆ. ವಿಚಾರವನ್ನು ಮಂಡಿಸುವುದು ಮತ್ತು ಇತರರು ಅದನ್ನು ಖಂಡಿಸುವುದು. ಯಾವುದಾದರೂ ಒಂದು ವಿಚಾರದ ಎರಡು ಮಗ್ಗುಲುಗಳನ್ನು ಸ್ಪಷ್ಟವಾಗಿ ತಿಳಿಯಲು ಸಹಾಯ ಮಾಡುವ ವಿಧಾನ ಇದು. ಇಂಥ ಕಡೆಗಳಲ್ಲಿ ವಿಚಾರ ವಿನಿಮಯವಾಗುತ್ತದೆ. ಪರಸ್ಪರ ಭಿನ್ನಾಭಿಪ್ರಾಯಗಳ ಹಿಂದಿರುವ ಆಧಾರಗಳು ಸ್ಪಷ್ಟಗೊಳ್ಳುತ್ತವೆ. ಇಂಥ ಸಂದರ್ಭಗಳಲ್ಲಿ ಅಭಿಪ್ರಾಯ ಭೇದಗಳು ಮಾಯವಾಗಿ ಏಕಾಭಿಪ್ರಾಯ ಮೂಡುವ ಅವಕಾಶ ಉಂಟು.

**ಚರ್ಮ, ತ್ವಚೆ, ತೊಗಲು** ಚರ್ಮ ಎಂಬುದು ಸಂಸ್ಕೃತದ ಶಬ್ದ. ಪ್ರಾಣಿಗಳ ದೇಹವನ್ನು ಮುಚ್ಚಿರುವ ಒಂದು ಇಂದ್ರಿಯ. ಪಂಚೇಂದ್ರಿಯಗಳಲ್ಲಿ ಒಂದು. ಇದನ್ನು ತ್ವಕ್ಕು ಎಂದೂ ಕರೆಯುತ್ತಾರೆ. ತ್ವಚೆ ಎಂದರೂ ಅದೇ. ತೊಗಲು ಕನ್ನಡ ಶಬ್ದ. ಈ ಶಬ್ದಕ್ಕೆ ತೋಲ್, ತೋಲು, ತೋವಲ್, ತೊವಲು ಎಂಬ ಪರ್ಯಾಯ ರೂಪಗಳಿವೆ. ಈ ಶಬ್ದಗಳಿಗೆ ಎಲ್ಲಕ್ಕೂ ಚರ್ಮ ಎಂದೇ ಅರ್ಥ.

**ಚರ್ವಿತಚರ್ವಣ:** ನಿಘಂಟಿಗೆ ಒಂದು ಪ್ರವೇಶ ಸಿದ್ಧತೆ ನೋಡಿ, ಪುಟ ೩೫.

**ಚಲ, ನಿಶ್ಚಲ, ಅಚಲ** ಈ ಮೂರೂ ಶಬ್ದಗಳ ಮೂಲ ಚಲ. ಈ ಶಬ್ದದ ಮೊದಲ ಅರ್ಥ ಚಂಚಲವಾದ, ಸ್ಥಿರವಲ್ಲದ ಎಂದು. ಚಲ ಶಬ್ದಕ್ಕೆ ಗಾಳಿ, ಪಾದರಸ, ಉಪಾಯ, ದೂತ ಎಂಬ ಇತರ ಅರ್ಥಗಳು ಇದ್ದರೂ ಈ ಮೂರರೊಡನೆ ಅವುಗಳ ಸಂಬಂಧವಿಲ್ಲ. ನಿಶ್ಚಲ, ಚಲಿಸದಿರುವ ಎಂದರ್ಥ. ಅಚಲ ಎಂಬುದಕ್ಕೂ ಅದೇ ಅರ್ಥವಾದರೂ ೧. ಬೆಟ್ಟ, ಪರ್ವತ, ೨. ಶಿವ, ೩. ಅಗಳಿ ಮತ್ತು ೪. ಏಳು ಎಂಬ ಸಂಖ್ಯೆ ಎಂಬ ಇತರ ಅರ್ಥಗಳೂ ಇವೆ.

**ಚಲ್ಲಣ** ಇದು ಕನ್ನಡದ ಶಬ್ದ. ತಮಿಳು, ಮಲೆಯಾಳ ಮತ್ತು ತೆಲುಗು ಭಾಷೆಗಳಲ್ಲಿ ಚಲ್ಲಡ ಎಂಬ ಜ್ಞಾತಿಶಬ್ದವಿದೆ. ಇದಕ್ಕೆ ಎರಡು ಅರ್ಥಗಳಿವೆ. ೧. ಮೊಳಕಾಲಿನವರೆಗೆ ಬರುವ ಸೊಂಟವನ್ನು ಬಳಸುವ ಉಡುಪು. ೨. ಷರಾಯಿ. ಈ ಶಬ್ದಕ್ಕೆ ಕನ್ನಡದಲ್ಲಿ ಅನೇಕ ಪರ್ಯಾಯ ರೂಪಗಳಿವೆ. ಚಣ್ಣ, ಚೆಲ್ಲಣ, ಚೊಣ್ಣ, ಚೊಲ್ಲಣ. ಈ ಎಲ್ಲ ರೂಪಗಳಿಗೂ ಕವಿ ಪ್ರಯೋಗಗಳಿವೆ.

**ಚಳವಳಿ, ಚಳುವಳಿ** ಇದು ನಮಗೆ ಮರಾಠಿಯ ಚಳವಳ ಎಂಬ ಶಬ್ದದಿಂದ ಬಂದದ್ದು. ಸಂಸ್ಕೃತದ ಚಲನವಲನದ ಮೂಲ ಇರಬಹುದು. ಆದುದರಿಂದ 'ಚಳವಳಿ'ಯೇ ಸರಿಯಾದ ರೂಪ. ಈಚೆಗೆ ಜನರು ಪರ್ಯಾಯ ರೂಪವಾಗಿ 'ಚಳುವಳಿ'ಯನ್ನೂ ಉಪಯೋಗಿಸುತ್ತಿದ್ದಾರೆ. ರೂಢಿಯಿಂದ ಬಲಗೊಂಡಿದೆ. ಅಲ್ಲಾಡಿಸುವಂತಿಲ್ಲ.

**ಚಳ್ಳೇಹಣ್ಣು ತಿನ್ನಿಸು** ಚಳ್ಳೆ ಹಣ್ಣಿಗೆ ಶ್ಲೇಷ್ಮಾತಕ ಎಂಬುದು ಸಂಸ್ಕೃತದ ಹೆಸರು. ಅದು ಬಹಳ ಅಂಟಂಟಾಗಿ ಇರುತ್ತದೆ. ತಿಂದರೆ ಬಾಯಿ ಅಂಟಿಕೊಂಡು ಬಿಡುತ್ತದೆ. ಅದು ತಿಂದ ಮೇಲೆ ಭೇದಿಯಾಗುತ್ತದೆ ಎಂದು ಹೇಳುತ್ತಾರೆ. ಅಂತೂ ಅದನ್ನು ತಿನ್ನುವ ವ್ಯಕ್ತಿಗೆ ತುಂಬ ಫಜೀತಿಯನ್ನು ಉಂಟು ಮಾಡುತ್ತದೆ. ಆದ್ದರಿಂದ ಚಳ್ಳೆಹಣ್ಣು ತಿನ್ನಿಸಿದ ಎಂದರೆ ಫಜೀತಿಗೆ ತಂದ ಎಂಬರ್ಥವಿದ್ದಂತೆ ಕಾಣುತ್ತದೆ. ಹಿಂದೆ ಪಟದ ಹಬ್ಬದಲ್ಲಿ ಆಟವಾಡಿಸಲು ಗಾಳಿಪಟಗಳನ್ನು ಕಟ್ಟುವಾಗ ಕಾಗದವನ್ನು ಅಂಟಿಸಲು ಈ ಹಣ್ಣಿನ ರಸವನ್ನೇ ಉಪಯೋಗಿಸುತ್ತಿದ್ದರು. ಈಗ ನಗರ ಪ್ರದೇಶದವರಿಗೆ ಅದರ ಅನುಭವವೇ ಇಲ್ಲವಾಗಿದೆ. ಈ ಗಾದೆಯೂ ಮುಂದೆ ಮಾಯವಾಗಬಹುದು.

**ಚಾ tea ಚಹ** ನಾವು ಈಗ ಉಪಯೋಗಿಸುವ tea ಎಂಬ ಉಚ್ಚಾರಣೆ ಸರಿಯೇ ಚಾ

ಎಂಬುದು ಸರಿಯೋ, ಚಾಯ ಎಂಬುದು ಸರಿಯೋ ಎಂದು ಅನುಮಾನ ಬರುವುದು ಸಹಜ. ಇದು ಚೀಣಾದೇಶದಿಂದ ಇತರ ಪ್ರದೇಶಗಳಿಗೆ ಹರಡಿದ ಪಾನೀಯದ ಹೆಸರಾದುದರಿಂದ ಇದರ ಮೂಲವನ್ನು ಹುಡುಕುವುದು ಮುಖ್ಯ. ಚೀಣಾ ದೇಶದಲ್ಲಿ ಇದು ಮೂಲದಲ್ಲಿ ಚಾ (Chha) ಎಂದೇ ಇದ್ದಿತ್ತು. ಮಲೆಯಾದೇಶಕ್ಕೆ ಮೊದಲು ಇದು ಪ್ರವೇಶಿಸಿದಾಗ ತೆ (te)ಎಂದಾಯಿತು. ಭಾರತ, ಪರ್ಷಿಯ, ಗ್ರೀಸ್, ಪೋರ್ಚುಗಲ್, ರಷ್ಯ ಮುಂತಾದ ಕಡೆಗಳಿಗೆ ಆ ಬಳಿಕ ಈ ಪಾನೀಯದ ಪ್ರವೇಶವಾಯಿತು. ಇಂಗ್ಲೆಂಡಿನಲ್ಲಿ ಇದನ್ನು ಹೇಗೆ ಉಚ್ಚರಿಸುತ್ತಿದ್ದರು ಎನ್ನುವುದಕ್ಕೆ ಕೆಲವು ಸ್ಪಷ್ಟವಾದ ದೃಷ್ಟಾಂತಗಳಿವೆ. ಪೋಪ್ ಕವಿಯ ಒಂದು ದ್ವಿಪದಿ ಹೀಗಿದೆ. (ಕ್ರಿ.ಶ. ೧೭೧೧)

Here thou, great ANNA, whom
three realms obey
Dost sometimes counsel take and
sometimes tea.

ಇಲ್ಲಿ ಆ ಶಬ್ದದ ಉಚ್ಚಾರ obey (ಒಬೇ) ಶಬ್ದಕ್ಕೆ ಪ್ರಾಸದಂತೆ ಬರಬೇಕು. ಆದ್ದರಿಂದ ಅದು ತೇ. ಜಾನ್‌ಸನ್ ಕವಿಯ ನಾಲ್ಕು ಸಾಲು ಹೀಗಿದೆ (ಕ್ರಿ.ಶ. ೧೭೭೦)

I therefore pray thee, Renny, Dear
that thou will give to me
with cream and sugar soften'd well,
Another dish of tea.

ಇಲ್ಲಿ me (ಮೀ) ಶಬ್ದಕ್ಕಿರುವ ಅಂತ್ಯಪ್ರಾಸದ ಪ್ರಕಾರ ಅದರ ಉಚ್ಚಾರಣೆ ಟೀ. ಹೀಗೆ ಮೊದಲು ಈ ಎರಡು ಬಗೆಯ ಉಚ್ಚಾರಣೆಗಳೂ ಇದ್ದು ಬಳಿಕ ಟೀ ಎಂಬುದೇ ಸ್ಥಿರವಾಗಿ ನಿಂತಿರಬೇಕು. ಇದರ ಕಾಗುಣಿತವೂ ಸಹ ಕೆಲವು ಸಲ tee, ಮತ್ತೆ ಕೆಲವು ಸಲ tea ಆಗಿತ್ತು. ಇಟಲಿಯಲ್ಲಿ ಚಿಯಾ ಮತ್ತು ತೇ ಎಂಬ ಎರಡು ಉಚ್ಚಾರಣೆಗಳಿವೆ. ಇಂಗ್ಲೆಂಡಿನಲ್ಲಂತೂ ಮೊದಲು ಸಿಕ್ಕುವ ಉಚ್ಚಾರಣೆ ಚಾ ಎಂಬುದು ಸ್ಪಷ್ಟ. (೧೬೭೧) ಕೆಲವು ಸಲ ಈ ಶಬ್ದವನ್ನು teha ಎಂದು ಬರೆಯುತ್ತಿದ್ದರಂತೆ.

ಭಾರತ ದೇಶದಲ್ಲಿ ಟೀ, ಚಾಯ್, ಚಾಯ, ಚಹ ಎಂಬ ಬೇರೆ ಬೇರೆ ಉಚ್ಚಾರಗಳನ್ನು ದೇಶದ ಬೇರೆ ಬೇರೆ ಭಾಗಗಳಲ್ಲಿ ಕೇಳಬಹುದು.

**ಚಾಂದ್ರಮಾನದ ಮಾಸಗಳು** ಇವು ಹನ್ನೆರಡು. *ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ.* ಈ ತಿಂಗಳುಗಳಲ್ಲಿ ಆಯಾ ಹೆಸರಿನ ನಕ್ಷತ್ರದಲ್ಲಿ ಹುಣ್ಣಿಮೆ ಬರುವುದರಿಂದ ಆ ಹೆಸರುಗಳನ್ನು ಪಡೆದಿವೆ. ಚಿತ್ರಾ ನಕ್ಷತ್ರದಲ್ಲಿ ಹುಣ್ಣಿಮೆ ಬರುವುದರಿಂದ ಚೈತ್ರ. ಹೀಗೆಯೇ ವಿಶಾಖಾ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಅಶ್ವಿನಿ, ಕೃತ್ತಿಕ, ಮೃಗಶಿರ, ಪುಷ್ಯ, ಮಾಘ, ಫಲ್ಗುನಿ ಈ ನಕ್ಷತ್ರಗಳಲ್ಲಿ ಹುಣ್ಣಿಮೆ ಬರುವುದರಿಂದ ಆ ಹೆಸರುಗಳಿವೆ.

**ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್ (೪-೨೯) ಪಂಪನ ಒಂದು ಪದ್ಯದ (ಮೇಲಿನ) ಒಂದು ಸಾಲಿನ ಅರ್ಥ.**

*೧. ಚಾಗ ಎಂದರೆ ತ್ಯಾಗ, ಅಂದರೆ ದಾನಗುಣ. ೨. ಭೋಗ ಎಂದರೆ ಸುಖಾನುಭವ, ಸುಖವನ್ನು ಇತರರಿಗೆ ತೊಂದರೆಯಾಗದ ಹಾಗೆ, ಜೀವನದಲ್ಲಿ ತಂದುಕೊಳ್ಳುವ ಗುಣ. ೩. ಅಕ್ಕರ ಎಂದರೆ ವಿದ್ಯೆ. ಅನೇಕ ವಿಷಯಗಳನ್ನು ತಿಳಿದಿರುವ ಗುಣ,*

*ವಿದ್ಯಾವಂತನಾಗಿರುವಿಕೆ. ೪. ಗೇಯ ಎಂದರೆ ಸಂಗೀತ. ಸಂಗೀತವನ್ನು ಅರ್ಥ ಮಾಡಿಕೊಂಡು ಮೆಚ್ಚಬಲ್ಲ ಯೋಗ್ಯತೆ. ೫. ಗೊಟ್ಟಿ ಎಂದರೆ ಗೋಷ್ಠಿ. ತಿಳಿವಳಿಕೆಯುಳ್ಳವರ ಸಮುದಾಯದಲ್ಲಿ ಸಂತೋಷಗೊಂಡು ತಲ್ಲೀನನಾಗುವ ಸ್ವಭಾವ. ೬. ಇವುಗಳೆಲ್ಲದರ ಅಲಂಪು ಎಂದರೆ ಸಂತೋಷದಿಂದ ದೊರೆಯುವ ಇಂಪು.* ಅಂದರೆ ಬನಿ. ವರ್ಣಿಸಲಾಗದ ಸೊಗಸು. ಇವುಗಳೆಲ್ಲಕ್ಕೂ ಆಗರವಾಗಿರುವವನೇ ನಿಜವಾಗಿ ಮನುಷ್ಯ. ಇಂಥ ಮಾನವನಾಗಿ ಬಾಳಬೇಕು ಎಂಬುದು ಪಂಪನ ಅಭಿಪ್ರಾಯ.

**ಚಾತಕ** ಇದು ಒಂದು ಪಕ್ಷಿ. ಇದು ಮಳೆಯ ನೀರಿನ ಹನಿಗಳನ್ನೇ ಕುಡಿದು ಬದುಕುತ್ತದೆಂದು ನಂಬಿಕೆಯಿದೆ. ಮಳೆ ಬರದಿದ್ದರೆ ಅದಕ್ಕಾಗಿ ಆ ಪಕ್ಷಿ ಕಾಯುತ್ತಾ ಇರುತ್ತದೆಯಂತೆ. ಚಾತಕದ ಹಾಗೆ ಕಾಯುತ್ತಾ ಇದ್ದಾನೆ ಎನ್ನುವುದು ಗಾದೆಯ ಮಾತಾಗಿದೆ. ಕನ್ನಡದಲ್ಲಿ ಚಾದಗೆ ಎಂಬುದು ತದ್ಭವರೂಪ. ಜಾತಕ ಪಕ್ಷಿ ಎಂಬುದು ತಪ್ಪು ಶಬ್ದ. ತೆಲುಗಿನಲ್ಲಿ ಚಾತಕ ಪಕ್ಷಿಯನ್ನು ವಾನಕೋಕಿಲ ಅಂದರೆ ಮಳೆಯ ಕೋಗಿಲೆ ಎಂದು ಕರೆಯುತ್ತಾರೆ. ಸಂಸ್ಕೃತದಲ್ಲಿ ಚಾತಕ ಎಂಬ ಶಬ್ದಕ್ಕೆ ನೀಡಿರುವ ವಿವರಣೆ ಹೀಗಿದೆ: **ಚಕತೇ ಚಲವರ್ಷ ಬಿಂದೂನ್ ಇತಿ ಚಾತಕಃ**. ಬೀಳುತ್ತಿರುವ ನೀರಿನ ಹನಿಗಳನ್ನು ಕುಡಿದು ತೃಪ್ತಿಪಡುತ್ತದೆ, ಎಂದು ಅರ್ಥ.

**ಚಾಮರ** ಉದ್ದವಾದ ಕೂದಲು ಮತ್ತು ಕುಚ್ಚಿನಾಕಾರದ ಬಾಲವುಳ್ಳ ಮೃಗಕ್ಕೆ ಚಾಮರ ಮೃಗ ಎಂದು ಹೆಸರು. ಅದರ ಬಾಲದ ಕೂದಲಿನಿಂದ ಸಿದ್ಧಪಡಿಸದ ಕುಂಚಕ್ಕೆ ಚಾಮರ ಎಂದು ಹೆಸರು. ಇದು ದೇವತೆಗಳ ಪೂಜಾ ಸಮಯದಲ್ಲಿ ಗಾಳಿ ಬೀಸುವ ನೆವದಲ್ಲಿ ಬೀಸಲು ಉಪಯೋಗ. ರಾಜರ ಆಸ್ಥಾನದಲ್ಲಿ ಹಿಂದೆ ರಾಜರಿಗೆ ಈ ಗೌರವ ನೀಡುತ್ತಿದ್ದರು.

**ಚಾಮುಂಡೇಶ್ವರಿ** ಚಾಮುಂಡಾ ಎಂಬುದು ದುರ್ಗಿಯ ಹೆಸರು. **ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ವಾರಾಹೀ ಚೈವ ಮಾಹೇಂದ್ರೀ ಚಾಮುಂಡಾ ಸಪ್ತಮಾತರಃ** ಎಂದು ಅಮರ ಹೇಳುತ್ತದೆ. ಇವರೆಲ್ಲ ಪಾರ್ವತಿಯ ಅನುಚರರು. ಇನ್ನೊಂದು ಕಡೆ ಅದೇ ಅಮರದಲ್ಲಿ **ಅಪರ್ಣಾ ಪಾರ್ವತೀ ದುರ್ಗಾ ಮೃಡಾನೀ ಚಂಡಿಕಾಂಬಿಕಾ** ಎಂದೂ ಹೇಳಿದೆ. **ಕರ್ಣ ಮೋಟೀತು ಚಾಮುಂಡಾ ಚರ್ಮ ಮುಂಡಾತು ಚರ್ಚಿಕಾ** ಎಂದೂ ದುರ್ಗಿಯ ಹೆಸರುಗಳನ್ನು ತಿಳಿಸಿದೆ. ಆದುದರಿಂದ ಚಾಮುಂಡಾ ಎಂಬುದು ಶಬ್ದ. ಇದಕ್ಕೆ ಈಶ್ವರಿ ಎಂಬ ಶಬ್ದವನ್ನು ಸೇರಿಸಿದರೆ **ಚಾಮುಂಡಾ + ಈಶ್ವರಿ = ಚಾಮುಂಡೇಶ್ವರಿ** ಎಂದೇ ಆಗಬೇಕು. ಇದು ಗುಣಸಂಧಿ. ಕನ್ನಡದ ಚಾಮುಂಡಿ ಸಂಸ್ಕೃತದ ಚಾಮುಂಡಾ ಎಂಬ ಶಬ್ದದಿಂದ ಬಂದುದು.

**ಚಾರಣ** ಇದು ಸಂಸ್ಕೃತ ಶಬ್ದ. ಚರ್ ಎಂಬ ಧಾತುವಿನಿಂದ ಬಂದದ್ದು. ಈ ಶಬ್ದಕ್ಕೆ ಇರುವ ಅರ್ಥಗಳು ಇವು: *೧. ಸುತ್ತಾಡುವಿಕೆ, ಸಂಚಾರ, ೨. ಸಂಚಾರ* ಮಾಡುವ ನಟ, ನರ್ತಕ, ಕವಿ, *ಗಾಯಕ ಇತ್ಯಾದಿ ಜನ ೩. ಗಗನದಲ್ಲಿ ಸಂಚರಿಸುವರೆಂದು ನಂಬಲಾದ* ಮುನಿ. ಚಾರಣ ಕವಿಗಳು ಹಿಂದೆ ಬೇಕಾದ ಹಾಡುಗಳನ್ನು ಹೇಳಿಕೊಂಡು, ಆಶುಕವಿತ್ವ ಮಾಡಿ ಜನರನ್ನು ರಂಜಿಸುತ್ತಿದ್ದರೆಂಬುದು ಜನಪದ ಸಾಹಿತ್ಯ ಪ್ರಕಾರದಲ್ಲಿ ಪ್ರಸಿದ್ಧ. ಈಗೀಗ ಇಂಗ್ಲಿಷಿನ Trekking ಎಂಬ ಶಬ್ದಕ್ಕೆ ಸಮಾನವಾಗಿ ಚಾರಣ ಎಂಬುದನ್ನು ಉಪಯೋಗಿಸುತ್ತಿದ್ದಾರೆ. ಆಗ ಅದು ನಿಜವಾಗಿ ಬೆಟ್ಟ, ಕಾಡು, ಮರಳುಗಾಡುಗಳಲ್ಲಿ ಅಲೆದಾಡುವುದು ಎಂಬ ಅರ್ಥವನ್ನು ನೀಡುತ್ತದೆ.

**ಚಾರಿ** ಆಚಾರ್ಯ ಎಂಬುದು ಸಂಸ್ಕೃತದ ಶಬ್ದ. ಅದಕ್ಕೆ ವಿದ್ವಾಂಸ, ಉಪಾಧ್ಯಾಯ, ಗುರು, ಪೂಜ್ಯ ಮುಂತಾದ ಅರ್ಥಗಳಿವೆ. ಕನ್ನಡದಲ್ಲಿ ಅದು ತದ್ಭವವಾದರೆ, **ಆಚಾರಿಯ** ಎಂದಾಗುತ್ತದೆ. **ತಪ್ಪದಾಚಾರಿಯನ ನುಡಿ** ಎಂಬುದು ಕುಮಾರವ್ಯಾಸನ ವಾಣಿ.

(ಗದಾಪರ್ವ - 9-12) ಸಂಸ್ಕೃತದಲ್ಲಿ ಆಚಾರಿನ್ ಎಂಬ ಗುಣ ವಾಚಕಾರ್ಥವುಳ್ಳ ಶಬ್ದವೂ ಇದೆ. ಅದು ಕನ್ನಡದಲ್ಲಿ ಆಚಾರಿ ಎಂದಾಗುತ್ತದೆ. ಅದಕ್ಕೆ ಸದಾಚಾರವುಳ್ಳವನು ಎಂದರ್ಥ. **'ಆಚಾರಿಗೀಯದೆ ಮತ್ತುಸ್ತತೆಯನಿನ್ನಾರಿಗೀವೆನು'** (೪-೧) ಎಂಬ ವಾಕ್ಯ ಬಸವಪುರಾಣದಲ್ಲಿ ಬರುತ್ತದೆ. ಕನ್ನಡದ ಜನ ತಮ್ಮ ಹೆಸರಿನ ಜೊತೆಯಲ್ಲಿ ಆಚಾರ್ಯ ಎಂಬುದನ್ನೇ ಉಪಯೋಗಿಸುತ್ತಿದ್ದರು. ಇಂಗ್ಲಿಷಿನಲ್ಲಿ ತಮ್ಮ ಹೆಸರನ್ನು ಬರೆಯುವಾಗ ಅದು ಆಚಾರ್ ಎಂಬ ರೂಪವನ್ನು ಪಡೆಯಿತು. ಇದೇ ಬರಬರುತ್ತಾ ಚಾರ್ ಆಯಿತು. ಹೀಗೆಯೇ ಚಾರಿಯೂ ಪ್ರಯೋಗದಲ್ಲಿ ಬಂದಿತು. ಆಚಾರಿ ಎಂಬುದನ್ನು ಹೆಸರಿನ ಮುಂದೆ ಸೇರಿಸುವುದು ಅಗೌರವವೇನೂ ಅಲ್ಲ. ಶ್ರೀ ರಾಜಗೋಪಾಲಾಚಾರಿಯವರು ಭಾಷೆಯ ಬಗ್ಗೆ ಮಹಾವಿದ್ವಾಂಸರಾಗಿದ್ದರು. ಅವರ ಹೆಸರಿನ ಅರ್ಥ ಅವರಿಗೆ ಗೊತ್ತಿದ್ದರಿಂದ ಅದನ್ನು ಬದಲಾಯಿಸಬೇಕಾಗಲಿಲ್ಲ. ಆದರೆ ಹೆಸರಿನಲ್ಲಿ ಚಾರಿ ಎಂಬುದನ್ನು ಬೇರೆಯಾದ ಶಬ್ದವೆಂಬಂತೆ ಬರೆಯುವುದು ತಪ್ಪು. ಕೆಲವರು ಬರಿಯ ಚಾರಿ ಎಂದೇ ಹೆಸರನ್ನು ಹೊಂದಿರುತ್ತಾರೆ. ಇವೆಲ್ಲ ವೈಯಕ್ತಿಕ ವಿಷಯ. ಕೆಲವು ಸಲ ವರ್ತಮಾನ ಪತ್ರಿಕೆಯವರು ಹೀಗೆ ಹೊಸ ಶಬ್ದಗಳನ್ನು ಸೃಷ್ಟಿಸುತ್ತಾರೆ.

**ಚಾರುಶ್ರೀ** ಈ ಶಬ್ದ ಸಂಸ್ಕೃತದ ಒಂದು ಸಮಾಸವಾಗಬಹುದು. ಚಾರು ಎಂದರೆ ಸುಂದರವಾದ ಎಂದರ್ಥ. **ಸುಂದರಂ ರುಚಿರಂ ಚಾರು** ಎಂದು ಅಮರವು ಸಮಾನಾರ್ಥಕಗಳನ್ನು ತಿಳಿಸಿ ಕೊಡುತ್ತದೆ. ಚಾರು ಶಬ್ದಕ್ಕೆ ಚರತಿ ಮನೋಽಸ್ಮಿನ್ ಅಂದರೆ ಮನಸ್ಸಿನಲ್ಲಿ ಚರಿಸುತ್ತಿದೆ ಎಂದು ವಿಶದವಾದ ವಿವರಣೆ. ಶ್ರೀ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಲಕ್ಷ್ಮಿ ಎಂಬುದು ಮುಖ್ಯವಾದ ಅರ್ಥ. ಇತರ ಅರ್ಥಗಳೂ ಹೊಂದಿಕೊಳ್ಳುತ್ತವೆ. ಸಂಪತ್ತು, ಕೀರ್ತಿ, ಬುದ್ಧಿ, ಸರಸ್ವತಿ, ಕಮಲ ಇತ್ಯಾದಿ ಅರ್ಥಗಳೂ ಇವೆ. ಚಾರುಶ್ರೀ ಎಂದರೆ ಸುಂದರ ಲಕ್ಷ್ಮಿ

**ಚಾರ್ವಾಕ** ಲೋಕಸಮ್ಮತವಾದ, ಸುಂದರವಾದ ಮಾತುಗಳನ್ನು ಯಾರು ಆಡಬಲ್ಲರೋ ಅವರೇ ಚಾರ್ವಾಕರು. ಚಾರ್ವಾಕ, ಚಾರ್ವಾಕದರ್ಶನ ಅಥವಾ ಚಾರ್ವಾಕಮತ ಎಂಬುದು ಉಳಿದ ಎಲ್ಲ ದರ್ಶನಗಳಿಗಿಂತಲೂ ಪ್ರಾಚೀನವಾದುದು ಎಂದು ಹೇಳುತ್ತಾರೆ. ಅಲ್ಲದೆ ಆ ಎಲ್ಲ ದರ್ಶನಗಳಿಗೂ ವಿರುದ್ಧವಾದುದು. ಈ ದರ್ಶನದ ಸೂತ್ರಗಳನ್ನು ಬೃಹಸ್ಪತ್ಯಾಚಾರ್ಯರೇ ರಚಿಸಿದರೆಂದು ಪ್ರತೀತಿ. ಇದು ಪ್ರಪಂಚದಲ್ಲೆಲ್ಲಾ ವ್ಯಾಪಿಸಿರುವುದರಿಂದ ಇದಕ್ಕೆ ಲೋಕಾಯತಮತ ಎಂಬ ಮತ್ತೊಂದು ಹೆಸರಿದೆ. ಇದು ಪರಲೋಕವೂ, ದೇವರೂ ಇಲ್ಲವೆಂದು ಪ್ರತಿಪಾದಿಸುವುದರಿಂದ ಇದಕ್ಕೆ ನಾಸ್ತಿಕಮತವೆಂದು ಬೇರೊಂದು ಹೆಸರೂ ಇದೆ. ಚಾರ್ವಾಕರು ಪ್ರತ್ಯಕ್ಷವೇ ಪ್ರಮಾಣವೆಂದು ನಂಬುತ್ತಾರೆ. ಬೃಹಸ್ಪತ್ಯಾಚಾರ್ಯರ ಸೂತ್ರಗಳಿಗೆ ಭಾಷ್ಯವನ್ನು ರಚಿಸಿದ ವಿದ್ವಾಂಸರ ಹೆಸರೂ ಚಾರ್ವಾಕ. ಈ ವಿದ್ವಾಂಸರಿಂದಲೇ ಈ ಮತಕ್ಕೆ ಈ ಹೆಸರು ಬಂದಿರುವುದೂ ಸಾಧ್ಯ.

**ಚಾಲೂಕ್ಯ** ಇದು ಚಾಲುಕ್ಯ ಎಂಬುದರ ಪರ್ಯಾಯ ರೂಪ. ಚಾಲೂಕ್ಯ ಚಾಣಾಕ್ಷತನ ಎಂದರೆ ಚಾಲುಕ್ಯರಾಜರ ಜಾಣತನ ಎಂದು ಅರ್ಥ. ಅಷ್ಟೆ!

**ಚಿಂತಾಮಣಿ** ಇದು ಸ್ವರ್ಗಲೋಕದಲ್ಲಿ ಇಂದ್ರನ ಅಧೀನದಲ್ಲಿರುವ ಒಂದು ಶ್ರೇಷ್ಠವಾದ ರತ್ನ. ಇದರ ಮುಂದೆ ನಿಂತು ಯಾರು ಯಾವುದನ್ನು ಚಿಂತಿಸಿ ಕೇಳಿದರೂ ಅದನ್ನು ನೀಡುವ ಶಕ್ತಿಯುಳ್ಳದ್ದು ಎಂದು ನಂಬಿಕೆ. ಆದುದರಿಂದಲೇ ಅದಕ್ಕೆ ಚಿಂತಾಮಣಿ ಎಂಬ ಹೆಸರು ಬಂದಿದೆ. ಇದರ ಜೊತೆಗೆ ಇಂದ್ರನ ಬಳಿ **ಕಾಮಧೇನು** ಎಂಬ ಒಂದು ಹಸು **ಕಲ್ಪವೃಕ್ಷ** ಎಂಬ ಒಂದು ವೃಕ್ಷ ಇವುಗಳೂ ಇವೆಯಂತೆ. ಅವುಗಳಿಗೂ ಇಂಥದೇ ಶಕ್ತಿಯಿದೆ ಎಂದು ನಂಬಿಕೆ. ಇಂದ್ರನಿಗೆ ಇಷ್ಟೊಂದು ಸ್ವಾರ್ಥ ಏಕೆ? ಯಾವುದೋ ಒಂದನ್ನು ನಮಗೆ

ಕಳಿಸಬಾರದೆ!

**ಚಿಂತೆ, ಚಿಂತನೆ** ಎಂಬ ಶಬ್ದಗಳ ವ್ಯತ್ಯಾಸ. ಚಿಂತಾ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ *1. ಆಸಕ್ತಿಯಿಂದ ಸ್ಮರಿಸುವುದು 2. ಧ್ಯಾನ, ಅಭಿಲಾಷೆ ಎಂಬ ಅರ್ಥಗಳಿವೆ.* ಈ ಶಬ್ದ ಕನ್ನಡಕ್ಕೆ ಬಂದಾಗ ಚಿಂತೆ ಎಂದಾಗುತ್ತದೆ. ಕನ್ನಡಕ್ಕೆ ಬಂದ ಮೇಲೆ ಇದಕ್ಕೆ ವ್ಯಾಪಕವಾಗಿ ದುಃಖ, ವ್ಯಸನ ಎಂಬ ಅರ್ಥ ಬಂದಿದೆ.

ಚಿಂತನ ಎಂಬುದು ಚಿಂತನೆ ಎಂದಾಗಿದೆ. ಈ ಎರಡೂ ಶಬ್ದಗಳು '**ಚಿತಿ ಸ್ಮೃತ್ಯತು**' ಎಂಬ ಮೂಲದಿಂದ ಬಂದಿದೆ. ಆದರೂ ಚಿಂತನೆಗೆ ಕನ್ನಡದಲ್ಲಿ ಆಲೋಚನೆ, ವಿಚಾರ ಮಾಡುವುದು, ವಿಮರ್ಶೆ ಮಾಡುವುದು ಮುಂತಾದ ಅರ್ಥಗಳು ಬೆಳೆದಿವೆ.

**ಚಿಟಾಯಿ** ಈ ಶಬ್ದಕ್ಕೆ ಗುಬ್ಬಚ್ಚಿ ಎಂಬ ಅರ್ಥವಿರುವಂತಿದೆ. ಈ ವಿಷಯವನ್ನು ಮತ್ತಷ್ಟು ಪರಿಶೀಲಿಸಬೇಕಾಗಿದೆ.

**ಚಿಟಿಕೆ** ಈ ಶಬ್ದಕ್ಕೆ ಅನೇಕ ರೂಪಗಳೂ ಅನೇಕ ಅರ್ಥಗಳೂ ಇವೆ. ಚಿಟಿಕೆ, ಚಿಟುಕೆ ಚಿಟಕೆ ಇತ್ಯಾದಿ. ಅರ್ಥಗಳು: ೧. ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳನ್ನು ಸೇರಿಸಿ ಶಬ್ದ ಬರಿಸುವಂತೆ ಬೇರೆ ಮಾಡುವುದು ೨. ಹೆಬ್ಬೆರಳು ಮತ್ತು ತೋರು ಬೆರಳುಗಳಿಂದ ಒತ್ತಿ ಸ್ವಲ್ಪ ನಶ್ಯವನ್ನು ತೆಗೆದ ಹಾಗೆ ತೆಗೆದಷ್ಟು ಪುಡಿ. ೩. ತಾಳ ಹಾಕುವ ಮರದ ಸಾಧನ. ೪. ಬಳೆಯ ಚೂರನ್ನು ಕಾಸಿ ಹಣೆಗಣ್ಣಿಗೆ ಮುಟ್ಟಿಸುವುದು. ೫. ಚಿಕ್ಕ ಹೊಲಿಗೆ ೬. ಸಣ್ಣದು. ಇದು ಬಹಳವಾಗಿ ಉಪಯೋಗವಾಗುವ ಶಬ್ದ.

**ಚಿತ್ತಜನ್ಮ** ಎಂದರೆ ಸಂಸ್ಕೃತದಲ್ಲಿ ಮನ್ಮಥ. ಮದನೋ ಮನ್ಮಥೋ ಮಾರಃ ಪ್ರದ್ಯುಮ್ನೋ ಮೀನಕೇತನಃ ಮುಂತಾಗಿ ಅವನ ಹೆಸರುಗಳನ್ನು ಅಮರವು ದಾಖಲಿಸುತ್ತದೆ. ಅವನೇ ಮನೋಜ, ಮನಸಿಜ, ಚಿತ್ತಜ, ಚಿತ್ತಜನ್ಮ ಹೀಗೆ ಅವನ ಹೆಸರಿಗೆ ಅನೇಕ ರೂಪಗಳು. ಅವನು ಮನಸ್ಸಿನಲ್ಲಿ ಹುಟ್ಟುವವನು ಎಂದರ್ಥ.

**ಚಿದಂಬರ ರಹಸ್ಯ** ಎಂದರೆ ಬಿಡಿಸಲಾರದ ಗುಟ್ಟು. ಸುಲಭವಾಗಿ ಅರಿವಿಗೆ ಬರಲಾರದುದು ಎಂದರ್ಥ. ಯೋಗ, ವೇದಾಂತ, ಆತ್ಮಸಾಕ್ಷಾತ್ಕಾರ ಮುಂತಾದ ವಿಷಯಗಳನ್ನು ಕುರಿತು ಬರೆಯುವಾಗ ಮಾತನಾಡುವಾಗ ಚಿದಾಕಾಶ, ಚಿದಂಬರ ಎಂಬ ಶಬ್ದಗಳು ಪ್ರಯೋಗವಾಗುತ್ತವೆ. ಆ ಶಬ್ದಗಳಿಗೆ ಶುದ್ಧಬ್ರಹ್ಮ ಎಂದರ್ಥ. ಜನಸಾಮಾನ್ಯರು ಇದನ್ನು ಅರ್ಥ ಮಾಡಿಕೊಳ್ಳಲಾರರು. ಅಂಥವರು ಚಿದಂಬರ ರಹಸ್ಯ ಎಂಬ ಶಬ್ದವನ್ನು ಮೊದಲು ಪ್ರಯೋಗ ಮಾಡಿರಬೇಕು. ಬರಬರುತ್ತಾ ಈ ಶಬ್ದದ ಸಂದರ್ಭ ತಿಳಿಯದ ಜನರು ರಹಸ್ಯದ ಜೊತೆಯಲ್ಲಿ ಬರುವ ಚಿದಂಬರ ಎಂಬುದನ್ನು ಗಮನಿಸಿ ಅಗಾಧವಾದ ರಹಸ್ಯ ಎಂದು ಅರ್ಥ ಮಾಡಿದರು. ಬಳಿಕ ಅದರ ಗಂಭೀರವಾದ ಆವರಣ ಕಳಚಿಬಿದ್ದು ಗುಟ್ಟಾದದ್ದೆಲ್ಲ ಚಿದಂಬರ ರಹಸ್ಯ ಎಂದೇ ಹೇಳಲು ಮೊದಲು ಮಾಡಿದ್ದಾರೆ. ತಮಿಳುನಾಡಿನ ಪ್ರಸಿದ್ಧ ಚಿದಂಬರದಲ್ಲಿರುವ ನಟರಾಜ ವಿಗ್ರಹದ ಬಗ್ಗೆ ಒಂದು ಕಥೆಯಿದೆ. ಈ ದೇವತಾ ವಿಗ್ರಹಕ್ಕೆ ಮಂಗಳಾರತಿ ಮಾಡುವಾಗ ಒಂದು ರಹಸ್ಯವು ಬಯಲಾಗುವುದಂತೆ. ಅದು ಮೂರ್ತಿಯ ಮುಂದಿರುವ ಕರಿಯ ಕಂಬಗಳಲ್ಲಿ ಗೋಚರವಾಗುವುದಂತೆ. ಈ ಕಥೆಯನ್ನು ನಾನು ಕೇಳಿದ್ದೇನೆ. ಆ ದೇವಾಲಯದ ಕಲಾ ಸೌಂದರ್ಯವನ್ನು ನೋಡಲು ಹೋದಾಗ ನಾನು ಅಲ್ಲಿಯ ವಿದ್ವಾಂಸರಲ್ಲಿ ಚರ್ಚಿಸಿದೆ. ಅವರು ಈ ದೇವಾಲಯಕ್ಕೂ ಆ ನುಡಿಕಟ್ಟಿಗೂ ಏನೂ ಸಂಬಂಧವಿಲ್ಲವೆಂದು ಹೇಳಿದರು. ಆದರೆ ಕಥೆಯಿರುವುದನ್ನು ನಿರಾಕರಿಸಲಿಲ್ಲ.

**ಚಿಪ್ಪಾಡಿ** ಇದು ಸ್ತ್ರೀಯರನ್ನು ಧಿಕ್ಕರಿಸಿ ಬೈಯುವಾಗ ಉಪಯೋಗಿಸುವ ಒಂದು ಬೈಗಳ ಶಬ್ದ. ಮರಾಠಿಯಲ್ಲಿ ಚಿಪುಳಿ, ಚಿಪಾಳಿ ಎಂದರೆ ಪಿಚಕಾರಿ Syringe ಎಂದರ್ಥ. ಜೀರ್ಕೊಳವಿ.

ಆದುದರಿಂದ ನೀರನ್ನು ಎಳೆದುಕೊಳ್ಳುವ ಈ ಸಾಧನದ ರೂಪಕದಿಂದ ಸ್ತ್ರೀಯ ಬಹುಪುರುಷರ ಸಂಬಂಧವನ್ನು ಟೀಕಿಸಲಾಗುತ್ತದೆ. ಮರಾಠಿಯ ಮಾತು ಹೆಚ್ಚಾಗಿರುವ ಕಡೆ ಈ ಶಬ್ದ ಪ್ರಯೋಗದಲ್ಲಿದೆ. ರಸ ತೆಗೆದ ಕಬ್ಬಿನ ಸಿಪ್ಪೆಗೂ ಈ ಹೆಸರಿದೆ. ಅದೂ ಬೈಗಳಾಗಬಹುದು.

**ಚಿಪ್ಪಿಗ** ಇದು ಸಂಸ್ಕೃತದ ಶಿಲ್ಪಿಕ ಶಬ್ದದಿಂದ ಬಂದಿದೆ ಎಂದು ಹೇಳುತ್ತಾರೆ. ಕನ್ನಡದಲ್ಲಿ ದರ್ಜಿ, ಸಿಂಪಿಗ, ಹೊಲಿಗೆಯವ ಎಂಬ ಬೇರೆ ಶಬ್ದಗಳೂ ಇವೆ. ಮರಾಠಿಯಲ್ಲಿ ಸಿಪ್ಪಿ, ದರ್ಜಿ ಶಬ್ದಗಳು ಪ್ರಮುಖವಾಗಿವೆ. ಸಂಸ್ಕೃತದ ಸೂಚಿಕ, ಸೌಚಿಕ ಶಬ್ದಗಳೂ ಇವೆ.

**ಚಿರಸ್ಮರಣೆ** ಬಹುಕಾಲ ನೆನಪಿಡುವುದು ಎಂದರ್ಥ.

**ಚಿ.ರಾ.** ಲಗ್ನಪತ್ರಿಕೆಗಳಲ್ಲಿ ವರನ ಹೆಸರಿನ ಹಿಂದೆ ಕೆಲವರು ಚಿ.ರಾ. ಎಂದು ಮುದ್ರಿಸಿರುತ್ತಾರೆ. ಇದು ಸಾಮಾನ್ಯ ಪದ್ಧತಿ. ಚಿ-ಚಿರಂಜೀವಿ. ರಾ-ರಾಜಶ್ರೀ ಮ.ರಾ. ಎಂದಾಗ =ಮಹಾರಾಜ ರಾಜ ಶ್ರೀ. ಇದು ಒಂದು ಗೌರವಯುತವಾದ ಬರಹದ ಕ್ರಮ. ಈಗ ಮಹಾರಾಜ, ರಾಜ ಮಾಯವಾಗಿದೆ. ಶ್ರೀ ಮಾತ್ರ ಉಳಿದಿದೆ. ಆದರೆ ಅವು ಲಗ್ನಪತ್ರಿಕೆಗಳಲ್ಲಿ ಉಳಿದು ಬಂದಿವೆ. ಆದರಪೂರ್ವಕ ಸಂಬೋಧನೆಯೆಂದು ಹಿಂದೀ ಭಾಷಾ ನಿಘಂಟುಗಳು ದಾಖಲಿಸುತ್ತವೆ.

**ಚಿತ್ರಹಿಂಸೆ** ಹಿಂಸಾ ಎಂಬ ಸಂಸ್ಕೃತದ ಶಬ್ದಕ್ಕೆ *೧. ಪೀಡೆ, ತೊಂದರೆ, ಕೇಡು ೨. ಬಂಧನ, ಸೆರೆ ೩. ಹೊಡೆಯುವುದು, ಬಡಿಯುವುದು ಮುಂತಾದ ಅರ್ಥಗಳಿವೆ.* ಚಿತ್ರ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿದ್ದರೂ ಈ ಸಂದರ್ಭಕ್ಕೆ ಸರಿಯಾದ ಅರ್ಥ, ನಾನಾ ವಿಧವಾಗುವುದು ಎಂಬುದು. ಒಂದೇ ಬಗೆಯಲ್ಲದೆ ಅನೇಕ ಬಗೆ ಹಿಂಸೆ ಮಾಡುವುದಕ್ಕೆ ಚಿತ್ರಹಿಂಸೆ ಎಂದು ಹೇಳಬಹುದು. ಈ ಬಗೆಗಳೇನು ಎನ್ನುವುದನ್ನು ಹಿಂಸಕನೇ ಗೊತ್ತುಮಾಡಿಕೊಳ್ಳುತ್ತಾನೆ, ತನ್ನ ಕಲ್ಪನೆಗೆ ಹೊಳೆದಂತೆ. ಈ ಸಂದರ್ಭದಲ್ಲಿ ದಿವಂಗತ ಸಿ. ರಾಜಗೋಪಾಲಾಚಾರಿಯವರು ಹೇಳುತ್ತಿದ್ದ ಒಂದು ಮಾತು ನೆನಪಿಗೆ ಬರುತ್ತದೆ. ಗಾಂಧೀಜಿಯವರ ಅನುಯಾಯಿಗಳು ಅವರ ಚಿತ್ರವನ್ನು ತಮ್ಮ ಮನೆಯಲ್ಲಿ ಪ್ರಮುಖವಾದ ಸ್ಥಾನದಲ್ಲಿ ಪ್ರದರ್ಶಿಸುತ್ತಿದ್ದರು. ಆದರೆ ಗಾಂಧಿಯವರ ಯಾವ ಬೋಧನೆಯನ್ನೂ ಅನುಸರಿಸುತ್ತಿರಲಿಲ್ಲ. ಅಂಥ ನಡವಳಿಕೆಯನ್ನು ಅವರು ಗಾಂಧಿಗೆ ನೀಡುವ **ಚಿತ್ರಹಿಂಸೆ** ಎಂದು ಕರೆಯುತ್ತಿದ್ದರು. ಆಗ ಅದರ ಅರ್ಥ ಚಿತ್ರಕ್ಕೆ ನೀಡುವ ಹಿಂಸೆ ಅಥವಾ ಚಿತ್ರಕ್ಕೆ ಮಾತ್ರ ಗೌರವ ನೀಡುವ ವ್ಯವಹಾರ ಎಂದರ್ಥ.

**ಚಿಲುಮೆ** ಚಿಲುಮೆ = ತಲಪರಿಗೆ = ನೆಲದಿಂದ ಮೇಲೆ ನೀರು ಉಕ್ಕಿ ಬರುವುದು. ಈಚೆಗೆ ಇಂಗ್ಲಿಷಿನ Fountain ಎಂಬ ಶಬ್ದಕ್ಕೂ ಈ ಶಬ್ದವನ್ನೇ ಉಪಯೋಗಿಸುತ್ತಾರೆ.

**ಚುಟಕ** ಇದು ಸಣ್ಣಪದ್ಯ. ಸಾಮಾನ್ಯವಾಗಿ ಹಾಸ್ಯಕ್ಕೆಂದೇ ರಚಿತವಾದುದು. ಇದು ಮರಾಠಿಯ ಮೂಲದ ಶಬ್ದ. ಚುಟುಕ ಎಂಬ ಒಂದು ಪರ್ಯಾಯ ರೂಪವೂ ಇದೆ ಈಚೀಚೆಗೆ ಹನಿಗವನ, ಮಿನಿಗವನ ಎಂಬ ಹೆಸರುಗಳು ಜನಪ್ರಿಯವಾಗುತ್ತಿವೆ. mini ಎಂಬ ಇಂಗ್ಲಿಷ್ ಶಬ್ದವು ಇತರ ಶಬ್ದಗಳೊಂದಿಗೆ ಸೇರಿಸುವುದಕ್ಕೆಂದೇ ಮಾಡಿಕೊಂಡಿರುವ miniature ಎಂಬುದರ ಸಂಕ್ಷಿಪ್ತ ರೂಪ. ದಿನಕರ ದೇಸಾಯಿ, ವಿ.ಜಿ. ಭಟ್ಟ, ಡುಂಡಿರಾಜ್ ಮುಂತಾದವರು ಈ ರೂಪವನ್ನು ಪ್ರಭಾವಯುತವಾಗಿ ಉಪಯೋಗಿಸಿಕೊಂಡಿದ್ದಾರೆ. ಡುಂಡಿರಾಜರ ಒಂದು ಕವನದ ಕಡೆಯ ಭಾಗ ಹೀಗಿದೆ:

*ಓದಿದಾಗ ಅಷ್ಟೊಂದು*
*ಪರಿಣಾಮ ಬೀರಿರಲಿಲ್ಲ.*
*ಯಾಕೆಂದರೆ ಅಲ್ಲಿ*

ಬೀರಿರಲಿಲ್ಲ.

**ಚೆಂಡು** ಚೆಂಡು ಸರಿ. ಏಕೆಂದರೆ ಅದು ಸೆಂಡು ಎಂಬ ಶಬ್ದದ ಪರ್ಯಾಯ ಶಬ್ದ. ಚಂಡು ಎಂಬುದನ್ನು ಈಚೀಚೆಗೆ ಪರ್ಯಾಯವಾಗಿ ಉಪಯೋಗಿಸುತ್ತಿದ್ದಾರೆ. ಬಿಟ್ಟರೆ ಒಳ್ಳೆಯದು.

**ಚೆಂಬವಳ** ಚೆಂಬವಳದ ವಿಗ್ರಹವಾಕ್ಯ — ಕೆಚ್ಚನೆಯ +ಪವಳ. ಕನ್ನಡದಲ್ಲಿ ಕೆಚ್ಚನೆ ಎಂಬುದಕ್ಕೆ ಚೆಂ ಎಂದು ಆದೇಶವಾಗುವುದು ಕನ್ನಡದ ಜಾಯಮಾನ. ಇದು ವಿಶೇಷಣ ಪೂರ್ವಪದ ಕರ್ಮಧಾರಯ ಸಮಾಸ.

**ಚೈನೀ** ಚೈನಿ ಇದರ ಸರಿಯಾದ ರೂಪ. ಇದು ಹಿಂದೀ ಭಾಷೆಯ ಶಬ್ದ. ಮರಾಠೀ ಭಾಷೆಯಲ್ಲಿಯೂ ಇದನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಚೈನ್ ಎಂದರೆ ಸಂತೋಷ, ವಿಲಾಸ, ಸಂಭ್ರಮ. ಚೈನೀ ಎಂದರೆ ವಿಲಾಸದ ವಸ್ತು, ಭೋಗದ ವಸ್ತು, ಆರಾಮ ಜೀವನ. **ಬೇಚೈನೀ** ಎಂಬ ಹಿಂದೀ ಶಬ್ದಕ್ಕೆ ಆರಾಮವಿಲ್ಲದಿರುವಿಕೆ ಎಂದರ್ಥ. ಇದು ತುಂಬ ಸ್ವಾರಸ್ಯವಾದ ಶಬ್ದ. ಮರಾಠೀ ಪ್ರಭಾವವಿರುವ ಕಡೆ ಬಹು ಪ್ರಚಾರದಲ್ಲಿದೆ. ಕನ್ನಡ ದೇಶದ ದಕ್ಷಿಣ ಭಾಗದಲ್ಲಿ ವಿಲಾಸ ಜೀವನ ಇದ್ದರೂ ಚೈನೀ ಶಬ್ದ ಪ್ರಯೋಗದಲ್ಲಿಲ್ಲ. ನಾವು ಆ ಶಬ್ದ ಬಿಡಬಾರದು. ಅನೇಕ ಜನರ ಜೀವನ ಮಾರ್ಗವನ್ನು ಅದು ಚೆನ್ನಾಗಿ ವಿವರಿಸುತ್ತದೆ.

## ಛ

**ಛತ್ರಪತಿ** ಛತ್ರಿ ಅಂದರೆ ಕೊಡೆ. ದೇವತೆಗಳಿಗೂ ರಾಜರಿಗೂ ಇದನ್ನು ಗೌರವ ಚಿಹ್ನೆಯಾಗಿ ಉಪಯೋಗಿಸುತ್ತಾರೆ. ಛತ್ರಪತಿ = ರಾಜ್ಯವನ್ನು ಹೊಂದಿರುವವ, ಎಂಬ ಗುರುತಾಗಿ ರಾಜನು ಇರುವ ಕಡೆ ಛತ್ರಿಯನ್ನು ಹಿಡಿದಿರುತ್ತಾರೆ. ಇಂಥ ಗೌರವಕ್ಕೆ ಒಡೆಯನಾದವನು ಛತ್ರಪತಿ. ಶಿವಾಜಿಯ ವಿಷಯದಲ್ಲಿ ಈ ಶಬ್ದವನ್ನು ಮರಾಠರು ವಿಶೇಷವಾಗಿ ಉಪಯೋಗಿಸುತ್ತಾರೆ.

**ಛದ್ಮನಾಮ** ಎಂದರೆ ನಿಜವಾದ ಹೆಸರನ್ನು ಮರೆಮಾಚಿ ಬೇರೆಯ ಹೆಸರನ್ನು ಹೊಂದಿರುವುದು. ಛದ್ಮ ಎಂಬ ಶಬ್ದಕ್ಕೆ ವ್ಯಾಪಕವಾದ ಅರ್ಥಗಳಿವೆ. *೧. ಕಪಟ, ಮೋಸ ೨. ನೆಪ ೩. ಮೂರ್ಖತನ ೪. ಮನೆ ೫. ಮನೆಯ ಮೇಲಿನ ಛಾವಣಿ.* ಛದ್ಮವೇಷ ಎಂಬ ಶಬ್ದವಿದೆ. ಇದಕ್ಕೆ ಮಾರುವೇಷ ಎಂದರ್ಥ. ಮಹಾಭಾರತದಲ್ಲಿ ಪಾಂಡವರು ಅಜ್ಞಾತವಾಸವನ್ನು ಮಾಡಬೇಕಾದಾಗ ಛದ್ಮನಾಮವನ್ನೂ ಛದ್ಮವೇಷವನ್ನೂ ಹೊಂದಿದ್ದರು ಎಂಬುದು ಪ್ರಸಿದ್ಧವಾದ ವಿಷಯ.

**ಛಾಯಾಚಿತ್ರ** ಇದು photograph ಶಬ್ದಕ್ಕೆ ಸರಿಯಾದ ಕನ್ನಡ ಶಬ್ದ. ಏಕೆಂದರೆ ಬೆಳಕಿನ ಪರಿಣಾಮವಾಗಿ film ಮೇಲೆ ಬೀಳುವ ಛಾಯೆಯಿಂದ ತೆಗೆದ ಚಿತ್ರ. ಇದರಲ್ಲಿ ರಾಸಾಯನಿಕ ಕ್ರಿಯೆಯ ಅರ್ಥ ತುಂಬಿದೆ. ಭಾವಚಿತ್ರ — ಇದು Portrait ಶಬ್ದಕ್ಕೆ ಸರಿಯಾದ ಕನ್ನಡ ಶಬ್ದ. ಒಬ್ಬ ವ್ಯಕ್ತಿಯ ಮುಖದ ಪ್ರತಿಕ್ರಿಯೆಯನ್ನು ಚಿತ್ರದಲ್ಲಿ ಸೆರೆಹಿಡಿದಿರುವುದು.

# ಜ

**ಜಂಗಮ** ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ ಚಲಿಸುವ, ಓಡಾಡುವ ಎಂಬ ಗುಣವಾಚಕದ ಅರ್ಥವಿದೆ. ಕನ್ನಡದಲ್ಲಿ ವೀರಶೈವರಲ್ಲಿ ಪರಿವ್ರಾಜಕನಾದ ವಿರಕ್ತನಿಗೆ ಈ ಹೆಸರು ಸಲ್ಲುತ್ತದೆ. ಭಿಕ್ಷಾಟನ ಚರಿತೆಯಲ್ಲಿ ಶಿವನು ಭಿಕ್ಷೆ ಬೇಡುವ ಜಂಗಮ. ಆ ಕಥೆ ಸ್ವಾರಸ್ಯವಾಗಿದೆ.

**ಜಂಗಿ ಕುಸ್ತಿ** ಜಂಗೀ ಎಂಬುದು ಪಾರಸೀಭಾಷೆಯ ಶಬ್ದ. ಇದು ಹಿಂದೀ ಮತ್ತು ಮರಾಠೀ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿದೆ. ಈ ಶಬ್ದಕ್ಕೆ ಜಂಗ್ ಎಂದರೆ ಯುದ್ಧ, ಜಂಗೀ, ಜಂಘೀ ಎಂದರೆ ಯುದ್ಧಕ್ಕೆ ಸಂಬಂಧಿಸಿದ, ಪರಾಕ್ರಮದ, ಶೀಘ್ರ ಪರಿಣಾಮದ ಎಂದರ್ಥ. ಆದ್ದರಿಂದ ಜಂಗಿ ಕುಸ್ತಿ ಎಂದರೆ ಭಾರಿಯ ಶಕ್ತಿಯುಳ್ಳ ಪೈಲ್ವಾನರು ಮಾಡುವ ಕುಸ್ತಿ ಎಂದರ್ಥ. ಕುಸ್ತಿ ಎಂಬ ಶಬ್ದ ಕೂಡ ಪಾರಸಿ ಭಾಷೆಯದೇ. ಅಲ್ಲಿ ಕುಸ್ತೀ ಎಂಬ ರೂಪದಲ್ಲಿದೆ. ಹೀಗಿದೆ ಜಂಗಿ ಕುಸ್ತಿಯ ಕಥೆ. ಜಂಗೀ ಕುಸ್ತಿ ಎಂಬ ರೂಪವೂ ಉಂಟು.

**ಜಂಘಾಬಲ** ಜಂಘಾ =ಜಂಘೆ ಎಂದರೆ ಮೊಣಕಾಲು. ಮಂಡಿ ಮತ್ತು ಹೆಜ್ಜೆಯ ನಡುವಿನ ಭಾಗ. ಅದರ ಬಲವೇ ಜಂಘಾಬಲ. ನಡೆಯುವ, ಓಡುವ ಚಲನೆಯ ಶಕ್ತಿ. ಆಲಂಕಾರಿಕವಾಗಿ ಉಪಯೋಗಿಸಿದರೆ ಪಲಾಯನಶಕ್ತಿ.

**ಜಂಘೆ** ಇದು ಸಂಸ್ಕೃತದ ಜಂಘಾ ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ಮೊಣಕಾಲು ಎಂದರೆ ಮಂಡಿಯಿಂದ ಪಾದದವರೆಗಿನ ದೇಹಭಾಗ ಎಂದರ್ಥ. ಜಂಘಾಬಲ ಉಡುಗಿತು ಎಂಬ ವಾಕ್ಯವನ್ನು ನೋಡಿ.

**ಜಂಜಾಟ** ಈ ಶಬ್ದಕ್ಕೆ ಹಿಂದಿಯ ಝಂಝಟ್ ಎಂಬುದು ಮೂಲ. ಕಷ್ಟ, ತೊಂದರೆ, ಗೊಂದಲ, ಸಿಕ್ಕು ಎಂದು ಅರ್ಥ. ಹಿಂದಿಯಲ್ಲಿ ವ್ಯರ್ಥವಾದ ಜಗಳ ಎಂಬ ಅರ್ಥವಿದೆ.

**ಜಂಬರ** ಇದು ತುಳು ಭಾಷೆಯ ಶಬ್ದ. ಆ ಭಾಷೆಯಲ್ಲಿ ಈ ಶಬ್ದಕ್ಕೆ ೧. ಕೆಲಸ, ಕಾರ್ಯ ೨. ಕಸುಬು, ಉದ್ಯೋಗ ೩. ಧಾರ್ಮಿಕ ಕಾರ್ಯ ೪. ಯಾವುದಾದರೂ ವಿಷಯ (matter) ಎಂಬ ಅರ್ಥಗಳಿವೆ. ಆ ಭಾಷೆಯಲ್ಲಿ ಆಲಂಕಾರಿಕವಾಗಿ ಸಂಭೋಗ ಎಂಬ ಅರ್ಥದಲ್ಲಿಯೂ ಉಪಯೋಗಿಸುತ್ತಾರೆ. ಕನ್ನಡದಲ್ಲಿ ಉದ್ಯೋಗ ಕೆಲಸ ಎಂದಷ್ಟೆ ಅರ್ಥ.

**ಜಂಬೂದ್ವೀಪ** ಇದು ಒಂದು ಪೌರಾಣಿಕ ದ್ವೀಪ. ಅದು ಪುರಾಣಗಳಲ್ಲಿ ಬರುವ ಸಪ್ತ ದ್ವೀಪಗಳಲ್ಲಿ ಮೊದಲನೆಯದು. ಮೇರು ಪರ್ವತದ ಸುತ್ತ, ಗುಂಡಾದ ಭೂಮಿಯ ಸುತ್ತ ಉಪ್ಪು ನೀರಿನ ಸಮುದ್ರವಿದೆ. ಆ ಭೂಮಿಯನ್ನು ಆದಿಕಾಲದಲ್ಲಿ ಅಗ್ನೀಧ್ರ ಎಂಬ ರಾಜನು ತನ್ನ ೯ ಮಕ್ಕಳಿಗೆ ೯ ಭಾಗಗಳಾಗಿ ಹಂಚಿಕೊಟ್ಟನಂತೆ. ಅದರಲ್ಲಿರುವ ಜಂಬೂದ್ವೀಪದಲ್ಲಿ ಒಂದು ದೊಡ್ಡ ನೇರಿಲೆ ಮರವಿದೆ, ಎಂದು ಅದಕ್ಕೆ ಆ ಹೆಸರು ಬಂದಿದೆ. ಆ ದ್ವೀಪಕ್ಕೆ ಸುದರ್ಶನ ಎಂಬ ಮತ್ತೊಂದು ಹೆಸರೂ ಇದೆ. ಇದೆಲ್ಲವೂ ಪುರಾಣ ಕಥೆಗಳಿಗೆ ಸಂಬಂಧಿಸಿದುದು. ಆದರೆ ಈಗಲೂ ನಮ್ಮಲ್ಲಿ ಎಲ್ಲ ಕರ್ಮಗಳ ಕಾಲದಲ್ಲಿ **ಜಂಬೂದ್ವೀಪೇ ಭರತವರ್ಷೇ ಭರತ ಖಂಡೇ ಅಸ್ಮಿನ್ ವರ್ತಮಾನೇ** — ಎಂದೇ ಪ್ರಾರಂಭಿಸುತ್ತಾರೆ. ಅದು ಸಂಕಲ್ಪ ಮಾಡುವ ರೀತಿ.

**ಜಗತ್ತು, ವಿಶ್ವ** ಇವುಗಳ ವ್ಯತ್ಯಾಸವನ್ನು ವಿವರಿಸಿ. ಜಗತೀ, ಜಗತ್ ಎಂಬ ಎರಡು ಶಬ್ದಗಳಿಗೂ '**ಭೃಶಂ ಗಚ್ಛತೀತಿ**' ಎಂದು ಸಂಸ್ಕೃತದ ಟೀಕೆಗಳಿವೆ. 'ಬೇಗ ಗಮಿಸುತ್ತದೆ' - ಎಂದು ಅರ್ಥ. 'ಸ್ವಾಭಾವಿಕವಾದ, ಚಲನಯುಕ್ತವಾಗಿರುವಿಕೆಯಿಂದ ಕೂಡಿದುದು' ಜಗತ್. 'ಮನುಷ್ಯರಿಂದ ಕೂಡಿರುವುದು' ಎಂದು ಮತ್ತೊಂದು ವಿವರಣೆಯೂ ಇದೆ.

'ವಿಶ್ವ' ಶಬ್ದಕ್ಕೆ ಮೂಲ 'ವಿಶ್'. ಇದಕ್ಕೆ 'ಪ್ರವೇಶ ಮಾಡು, ವ್ಯಾಪಿಸು, ಆಕ್ರಮಿಸು, ಎಲ್ಲ, ಎಲ್ಲವೂ, ಸರ್ವವೂ' ಎಂದರ್ಥ. 'ಎಲ್ಲ ದೇವತೆಗಳೂ ಒಟ್ಟುಗೂಡಿರುವುದು' ಮತ್ತೊಂದು ಅರ್ಥ.

ಆದರೆ ಈಗ ವಿಶ್ವ, ಪ್ರಪಂಚ, ಜಗತ್ತು, ಲೋಕ ಎಂಬ ಶಬ್ದಗಳನ್ನು ಪರ್ಯಾಯ ಶಬ್ದಗಳಾಗಿಯೇ ಪ್ರಯೋಗಿಸುತ್ತಿದ್ದಾರೆ. ವೇದಾಂತ ಮತ್ತು ಇತರ ದರ್ಶನಗಳನ್ನು ಕುರಿತು ಮಾತನಾಡುವಾಗ ಈ ಶಬ್ದಕ್ಕೆ ವ್ಯಾಪಕವಾದ ಬೇರೆಯೇ ಅರ್ಥ ಬರುತ್ತದೆ. ಅದು ಪಾರಿಭಾಷಿಕವಾಗಿ ಪ್ರಯೋಗವಾಗುತ್ತದೆ ಎಂದು ತಿಳಿಯಬೇಕು.

**ಜಗದೋದ್ಧಾರ** ಈ ಶಬ್ದ ಸರಿಯಾಗಬೇಕಾದರೆ ಜಗದುದ್ಧಾರ ಎಂದೇ ಆಗಬೇಕು. ಆದರೆ ಕೆಲವು ಶಬ್ದಗಳನ್ನು ಕೇಳಿ ಅವುಗಳ ಸಾಮ್ಯದ ಮೇಲೆ ಈ ರೂಪವನ್ನು ಜನ ಉಪಯೋಗಿಸುತ್ತಾರೆ. ಗ್ರಾಮೋದ್ಧಾರ, ಜೀರ್ಣೋದ್ಧಾರ ಮುಂತಾದುವೇ ಆ ಶಬ್ದಗಳು. ದಾಸರು ಜಗದೋದ್ಧಾರನ ಎಂಬಂತೆ ಹಾಡುತ್ತಿದ್ದರೇ ಎಂಬುದೇ ನನಗೆ ಸಂದೇಹವಾಗಿದೆ. ದೋ ಎಂಬಂತೆ ದೀರ್ಘಾಕ್ಷರ ಬೇಕೇ ಆಗಿದ್ದರೆ ದು ಎಂಬುದನ್ನೇ ಎಳೆದು ಹಾಡಬಹುದಲ್ಲ. ಹಾಡುವ ಜನರ ಬಾಯಲ್ಲಿ ಅದು ಜಗದೋದ್ಧಾರನ ಎಂದಾಗಿರಬೇಕು. ನೋಡಿ: **ಚತುರೋಪಾಯ.**

**ಜಗ್ಲರಿ** ಇದು ಇಂಗ್ಲಿಷ್ ಭಾಷೆಯ ಶಬ್ದ. Jugglery ಕೈಚಳಕದಿಂದ, ದೈಹಿಕ ಚಾಕಚಕ್ಯತೆಯಿಂದ ಅಸಾಧ್ಯವೆಂಬಂಥ ಕೆಲಸಗಳನ್ನು ಮಾಡುವುದು. ಉದಾಹರಣೆಗೆ ಅನೇಕ ಚೆಂಡುಗಳನ್ನು ಮೇಲಕ್ಕೆಸೆದು ಕೆಳಕ್ಕೆ ಬೀಳದಂತೆ ಒಂದಾದ ಮೇಲೊಂದನ್ನು ಹಿಡಿದು ಎಸೆದು ಮಾಡುವುದು, ಹಗ್ಗದ ಮೇಲೆ ನಡೆಯುವುದು ಮುಂತಾದ ದೊಂಬರಾಟಗಳನ್ನು ಪ್ರದರ್ಶಿಸುವುದು. ಈಚೆಗೆ ಈ ಶಬ್ದಕ್ಕೆ ವಂಚಿಸುವುದು ಎಂಬ ಅರ್ಥವೂ ಸೇರಿಕೊಂಡಿದೆ. Juggle ಎಂಬುದು ಕ್ರಿಯಾಪದ.

**ಜಟಾಜೂಟ** ಇದು ಸಂಸ್ಕೃತದ ಎರಡು ಶಬ್ದಗಳಾದ ಜಟಾ ಮತ್ತು ಜೂಟ ಎಂಬುವು ಸೇರಿ ಆದ ಸಮಾಸ. ಜಟಾ = ಕೂದಲು, ಜೂಟ = ಮುಡಿ, ಅಂದರೆ ಜಡೆಗಟ್ಟಿದ ಕೂದಲು, ಕೇಶ ಸಮೂಹ ಎಂದು ಅರ್ಥ. ಹರಜಟಾಜೂಟ ಎಂಬುದು ಅನೇಕ ಕವಿಗಳು ಉಪಯೋಗಿಸಿರುವ ಪದಪುಂಜ. ಅದಕ್ಕೆ ಶಿವನ ಕೇಶಸಮೂಹ ಎಂದು ಅರ್ಥ.

**ಜಡಿ** ಇದು ದೇಶೀಯ ಪದ. ಝಳಪಿಸು ಎಂದರ್ಥ. **'ಜಡಿಯುತ್ತುಂ ಚಂದ್ರಹಾಸಾಸಿಯಂ'** ಎಂದು ಅಭಿನವ ಪಂಪನ ಪ್ರಯೋಗವಿದೆ.

**ಜತೆ, ಜೊತೆ - ಈ ಎರಡು ಶಬ್ದಗಳಲ್ಲಿ ಯಾವುದು ಸರಿ?** ಸಂಸ್ಕೃತದ ಯುತ ಎಂಬ ಶಬ್ದದಿಂದ ಬಂದ ಶಬ್ದ ಜೊತೆ. ಕ್ರಮೇಣ ಜತೆ ರೂಪವನ್ನು ಪಡೆದಿದೆ. ಎರಡೂ ಸರಿ.

**ಜನರು, ಜನಗಳು.** ಜನ ಶಬ್ದ ಪುಲ್ಲಿಂಗ ಸಂಸ್ಕೃತದಲ್ಲಿ. ಅದಕ್ಕೆ ಏಕವಚನದ ಅರ್ಥವೂ ಇದೆ. **'ಕಿಮೇತದಿತ್ಯಾಕುಲಮೀಕ್ಷಿತಂ ಜನೈ:'** ಎಂಬುದು ಮಾಘನ ಪ್ರಯೋಗ. ಕನ್ನಡದಲ್ಲಿ ಜನರು, ಜನಗಳು ಎಂಬ ಎರಡು ಬಗೆಯ ಪ್ರಯೋಗವೂ ಉಂಟು. ಆದರೆ ಜನರು ಎಂಬಷ್ಟು ಪ್ರಭಾವ ಜನಗಳು ಎಂಬುದಕ್ಕೆ ಇಲ್ಲ. ಈ ರೂಪವನ್ನು ಬಿಡುವುದು ವಾಸಿ.

**ಜನಾಬ್** ಎಂಬುದು ಅರಬ್ಬಿ ಮತ್ತು ಪಾರಸೀ ಭಾಷೆಗಳಿಂದ ಭಾರತದ ಭಾಷೆಗಳಿಗೆ ಬಂದ ಶಬ್ದ. ಅದಕ್ಕೆ ಮಹಾಶಯ, ಘನತೆ ಪಡೆದ ವ್ಯಕ್ತಿ ಎಂಬುದು ಮುಖ್ಯಾರ್ಥ. ಸನ್ನಿಧಿ, ಸಮಕ್ಷ ಎಂಬುದು ಇನ್ನೊಂದು ಅರ್ಥ. 'ತಮ್ಮ ಜನಾಬಿಗೆ ನನ್ನ ಬೇಡಿಕೆಗಳನ್ನು ಕಳುಹಿಸುತ್ತಿದ್ದೇನೆ' ಎಂಬ ವಾಕ್ಯದಲ್ಲಿ ಇದು ಸ್ಪಷ್ಟವಾಗುತ್ತದೆ.

**ಜನಾರ್ದನ** ಎಂದರೆ ವಿಷ್ಣು, ಕೃಷ್ಣ. ತನ್ನ ಶಕ್ತಿ, ಸೌಂದರ್ಯ, ಕರುಣೆ ಮುಂತಾದ ದೇವತಾಗುಣಗಳಿಂದ ಜನರ ಮನಸ್ಸನ್ನು ಕಲಕುವವನು, ಕ್ಷೋಭೆಗೊಳಿಸುವವನು,

ಉದ್ರೇಕಗೊಳಿಸುವವನು. 'ಜನಾರ್ಧನ' ಎಂಬುದು ಅಪಶಬ್ದ. 'ಧ' ಎಂಬ ಮಹಾಪ್ರಾಣಕ್ಕೆ ಈ ಶಬ್ದದಲ್ಲಿ ಸ್ಥಾನವಿಲ್ಲ. 'ಸೋಮಶೇಖರ' ಶಬ್ದಕ್ಕೆ ಅರ್ಧಚಂದ್ರನನ್ನು ತಲೆಯಲ್ಲಿ ಅಲಂಕಾರಕ್ಕಾಗಿ ಧರಿಸಿರುವವನು, ಶಿವ ಎಂದರ್ಥ. ಶೇಖರ ಶಬ್ದವು ಶಿಖರಕ್ಕೆ ಸಂಬಂಧಿಸಿದುದು. 'ಶಿಖರ'ಕ್ಕೆ ತುದಿ, ಮೇಲ್ತುದಿ ಎಂದೆಲ್ಲ ಅರ್ಥವಿದೆ. ತಲೆ ಎಂಬ ಅರ್ಥವೂ ಉಂಟು.

ಜನಿವಾರ ಈ ಶಬ್ದದ ವ್ಯುತ್ಪತ್ತಿಯನ್ನು ಖಚಿತವಾಗಿ ತಿಳಿಯಪಡಿಸಲಾಗುವುದಿಲ್ಲ. ಕನ್ನಡದ ಕಾವ್ಯಗಳಲ್ಲಿಯೂ ಕೆಲವು ಶಾಸನಗಳಲ್ಲಿಯೂ ಕಾಣಿಸಿಕೊಳ್ಳುವ ಈ ಶಬ್ದಕ್ಕೆ ಆರು ಬೇರೆ ಬೇರೆ ಪರ್ಯಾಯ ರೂಪಗಳು ಸಿಕ್ಕಿವೆ. ಜನ್ನವೀರ, ಜನ್ನವರ, ಜನ್ನಿವರ, ಜನ್ನಿವಾರ, ಜನ್ನುರು ಈ ಐದೂ ಜನಿವಾರಕ್ಕೆ ಪರ್ಯಾಯಗಳು. ಸಂಸ್ಕೃತದಲ್ಲಿ ಯಜ್ಞೋಪವೀತ, ಯಜ್ಞಸೂತ್ರ ಎಂಬ ಶಬ್ದಗಳಿಗೆ ಸಮಾನವಾದ ಕನ್ನಡ ಶಬ್ದ ಜನಿವಾರ. ಬ್ರಹ್ಮಸೂತ್ರ ಎಂಬ ಸಂಸ್ಕೃತ ಶಬ್ದಕ್ಕೂ ಇದೇ ಅರ್ಥ ಇದೆ; ಬೇರೆಯಾಗಿ ವೇದಾಂತ ಸೂತ್ರಗಳು ಎಂಬ ಅರ್ಥವೂ ಇದೆ. ಬ್ರಹ್ಮಸೂತ್ರಿ ಎಂದರೆ ಜನಿವಾರವನ್ನು ಧರಿಸಿದವನು. ಜನಿವಾರದಲ್ಲಿ ಮೊದಲ ಭಾಗ ಜನ್ನ. ಇದು ಸಂಸ್ಕೃತ ಯಜ್ಞದ ತದ್ಭವ ರೂಪ. ಆದರೆ ವಾರ ಎಂಬುದು ಹೇಗೆ ಬಂತು ಎಂಬುದು ವಿಚಾರಣೆ ಮಾಡಬೇಕಾದ ಭಾಗ. ಪ್ರಾಕೃತ ಭಾಷೆಯಲ್ಲಿ ಯಜ್ಞೋಪವೀತ ಎಂಬ ಶಬ್ದವು ಜಣ್ಣೋವಈಯು, ಜಣ್ಣೋವವೀಯ ಎಂಬ ರೂಪಗಳನ್ನು ಪಡೆಯುತ್ತದೆ. ಆದರೆ ಜನಿವಾರದಲ್ಲಿರುವ ವಾರ ಎಲ್ಲಿಂದ ಬಂದುದು? ಎಂಬುದೇ ಪ್ರಶ್ನೆ. ಶಬ್ದಗಳ ಬಗ್ಗೆ ತುಂಬ ಎಚ್ಚರ ವಹಿಸುತ್ತಿದ್ದ ಮುದ್ದಣ ಕವಿಯು ಈ ಪ್ರಶ್ನೆಯನ್ನು ಪರಿಶೀಲಿಸ ಹೊರಟು ಜನ್ನದಾರ ಎಂಬ ಹೊಸ ಶಬ್ದವನ್ನೇ ಸೃಷ್ಟಿ ಮಾಡಿಕೊಂಡನು. ಈಗ ಪ್ರಶ್ನೆಯು ವಾರದಿಂದ ದಾರಕ್ಕೆ ವರ್ಗಾವಣೆಗೊಂಡಿತು. ದಾರ ಎಂಬ ಶಬ್ದ ದೇಶ್ಯವೇ ಇರಬೇಕು. ತಮಿಳಿನಲ್ಲಿ ತಾರ ಎಂಬ ಜ್ಞಾತಿ ಶಬ್ದವಿದೆ. ಆದರೆ ಸಂಸ್ಕೃತದಲ್ಲಿ ದೋರ ಎಂಬ ಶಬ್ದವಿದೆ. ಅದಕ್ಕೆ ದಾರ ಎಂಬ ಅರ್ಥವೇ ಇದೆ. ದೋರ ಎಂಬುದು ದಾರ ಎಂದಾಗುವ ಸಾಧ್ಯತೆ ಇದೆ. ಹೀಗೆ ಇದು ಗೋಜಾಗಿದೆ. ಇನ್ನೂ ಒಂದು ವಿಷಯ. ಜನ್ನ ಎಂಬುದು ಜನಿ ಏಕಾಯಿತು ಎಂಬುದೂ ಸ್ಪಷ್ಟವಿಲ್ಲ.

ಜನಿವಾರವನ್ನು ಎಂದರೆ ಯಜ್ಞೋಪವೀತವನ್ನು ಹೇಗೆ ಸಿದ್ಧಪಡಿಸಬೇಕೆಂಬ ಬಗ್ಗೆ ಯಾಜ್ಞಿಕ ದೇವಣಭಟ್ಟನು ರಚಿಸಿರುವ ಸ್ಮೃತಿಚಂದ್ರಿಕಾ ಎಂಬ ಗ್ರಂಥದಲ್ಲಿ ಸಂಪೂರ್ಣ ವಿವರವಿದೆ (ಪುಟ ೮೦). **'ಯಜ್ಞೋಪವೀತಂ ಕುರ್ವೀತ ಸೂತ್ರೇಣ ನವ ತಂತುಕಂ'**, ಎಂದು ವಿವರಣೆಯಿದೆ. **'ನವತಂತುಕಂ ತ್ರಿವೃದ್ಯಜ್ಞೋಪವೀತಮಿತ್ಯುಕ್ತಂ'** ಎಂಬ ಪುನರ್ವಿವರಣೆಯೂ ಇದೆ. ಇದೂ ಕೂಡ ದಾರಕ್ಕೆ ಸಂಬಂಧಪಟ್ಟ ವಿವರಣೆ. ಇಷ್ಟೆಲ್ಲ ಆದರೂ ದಾರ ಏಕೆ ವಾರವಾಯಿತು? ಎಂಬ ಪ್ರಶ್ನೆಗೆ ನಾನು ಉತ್ತರವೀಯುವುದು ಅಸಾಧ್ಯವಾಗಿದೆ. ಕೆಲವು ಸಂಸ್ಕೃತ ನಿಘಂಟುಗಳಲ್ಲಿ 'ವಾರ' ಎಂಬ ಶಬ್ದಕ್ಕೆ ಆಚ್ಛಾದನ, ಹೊದಿಕೆ ಎಂಬ ಅರ್ಥ ದೊರಕುತ್ತದೆ. ಜನಿವಾರವು ಉತ್ತರೀಯದ ಬದಲು ಉಪಯೋಗಕ್ಕೆ ಸಮರ್ಥವಾದುದು ಎಂಬ ಅರ್ಥ ಬರಬಹುದು. ಆದರೆ ಇದು ದೂರಾನ್ವಯ. ಹಿಂದಿಯಲ್ಲಿ ಜನಿವಾರಕ್ಕೆ **ಜನೇವೂ** ಎನ್ನುತ್ತಾರೆ.

ಜಪ್ತಿ ಇದು ಅನ್ಯದೇಶ್ಯ; ಅರಬ್ಬೀ ಶಬ್ದ ಜಪ್ತ್. ಅದರಿಂದ ಬಂದ ಶಬ್ದವಾದರೂ ಕನ್ನಡದಲ್ಲಿ ಜಪ್ತಿ, ಜಪ್ತ, ಜಪ್ತು ಎಂಬ ಬೇರೆ ಬೇರೆ ರೂಪಗಳಲ್ಲಿ ಪ್ರಯೋಗವಾಗುತ್ತಾ ಇದೆ. ಕೆಲವು ವೇಳೆ ಫ ಎಂಬ ಮಹಾಪ್ರಾಣವನ್ನು ಬರೆದುಬಿಡುತ್ತಾರೆ. ಅದು ತಪ್ಪು. ಮುಟ್ಟುಗೋಲು ಹಾಕುವುದು ಎಂದು ಅರ್ಥ

ಜಬರ್‌ದಸ್ತು ಇದು ಪಾರಸೀ ಪದ. ಇದಕ್ಕೆ ಒತ್ತಾಯ, ಬಲವಂತ, ಜೋರು ಎಂದರ್ಥ.

**ಜಯ-ವಿಜಯ** ಈ ಎರಡೂ ಶಬ್ದಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಜಯ =ಗೆಲುವು. ವಿಜಯ =ವಿಶೇಷವಾದ ಗೆಲುವು. ವೈಕುಂಠದಲ್ಲಿ ನಾರಾಯಣನಿಗೆ ದ್ವಾರಪಾಲಕರಾಗಿರುವ ಇಬ್ಬರಿಗೆ ಈ ಹೆಸರಿದೆ ಎಂದು ಪುರಾಣಗಳು ಹೇಳುತ್ತವೆ.

**ಜಯಂತಿ-ವರ್ಧಂತಿ** ಎರಡೂ ಸಂಸ್ಕೃತ ಶಬ್ದಗಳು. ಜಯಂತೀ, ವರ್ಧಂತೀ ಎಂಬುದು ಸಂಸ್ಕೃತ ರೂಪಗಳು. ಜಯಂತಿ ಕನ್ನಡಕ್ಕೆ ಬಂದ ತದ್ಭವ ರೂಪ. ಇದಕ್ಕೆ ಅನೇಕ ಅರ್ಥಗಳಿವೆ. ೧. ಬಾವುಟ ೨. ದುರ್ಗಾದೇವಿ ೩. ಕೃಷ್ಣ ಜನ್ಮಾಷ್ಟಮಿ. ಆದರೆ ಸಾಮಾನ್ಯವಾಗಿ ಹಿಂದಿನ ಮಹಾಮಹಿಮರ ಹುಟ್ಟಿದ ದಿನ ಎಂಬ ಅರ್ಥದಲ್ಲಿಯೂ ಆ ಶಬ್ದವನ್ನು ಪ್ರಯೋಗಿಸಲಾಗುತ್ತಿದೆ. ಕೃಷ್ಣ ಜನ್ಮಾಷ್ಟಮಿ ಎಂಬ ಅರ್ಥದಿಂದ ಬೆಳೆದು ಬಂದ ಅರ್ಥ ಇದು. ಶಂಕರ ಜಯಂತಿ, ಗಾಂಧಿ ಜಯಂತಿ, ಬಸವ ಜಯಂತಿ, ಮಹಾವೀರ ಜಯಂತಿ ಮುಂತಾಗಿ ಹಿಂದೆ ಆಗಿ ಹೋದ ಖ್ಯಾತನಾಮರ ಹುಟ್ಟಿದ ದಿನಗಳಂದು ಜಯಂತೀ ಉತ್ಸವಗಳನ್ನು ಆಚರಿಸುತ್ತಾರೆ. ವರ್ಧಂತೀ ಉತ್ಸವವು ಇನ್ನೂ ಬದುಕಿರುವವರ ಪ್ರತಿವರ್ಷದ ಹುಟ್ಟಿದ ಹಬ್ಬಕ್ಕೆ ಅನ್ವಯಿಸುತ್ತದೆ. ಹಿಂದೆ ಮೈಸೂರಿನಲ್ಲಿ ಮಹಾರಾಜರ ವರ್ಧಂತಿಯ ಉತ್ಸವವನ್ನು ಬಹು ವೈಭವದಿಂದ ಆಚರಿಸುತ್ತಿದ್ದರು. ಮೈಸೂರು ನಗರದಲ್ಲಿ ಬೀದಿಗಳನ್ನು ತೊಳೆದು ರಂಗವಲ್ಲಿಯಲ್ಲಿ ಮನೆಯ ಮುಂದೆ ಹಸೆಗಳನ್ನು ಹಾಕಿ ಮನೆಯ ಮಹಿಳೆಯರು ಆರತಿ ಹಿಡಿದು ನಿಂತಿರುತ್ತಿದ್ದರು. ಮಹಾರಾಜರು ಮೆರವಣಿಗೆ ಬಂದಾಗ ಪ್ರತಿಮನೆಯವರೂ ಹಾಡು ಹೇಳಿ ಆರತಿ ಎತ್ತುತ್ತಿದ್ದರು. ಪ್ರತಿ ಮನೆಯ ಆರತಿಯ ತಟ್ಟೆಗೂ ಮಹಾರಾಜರ ಕಡೆಯ ಅಧಿಕಾರಿ ಒಂದು ಬೆಳ್ಳಿಯ ನಾಣ್ಯವನ್ನು ಉಡುಗೊರೆಯಾಗಿ ಹಾಕುತ್ತಿದ್ದನು. ಇದು ಉತ್ಸವದ ಮಾತಾಯಿತು. ವರ್ಧಂತೀ ಎಂಬುದು ನಾಮಪದವಾಗುವುದು ಸಾಧ್ಯವಿಲ್ಲ. ಆದುದರಿಂದ ಅದು ವರ್ಧಂತೀ ಉತ್ಸವ ಎಂಬ ಅಥವಾ ವರ್ಧಂತೀ ತಿಥಿ (ದಿವಸ) ಎಂಬ ಶಬ್ದಗಳ ಸಂಕ್ಷಿಪ್ತ ರೂಪ ಎಂದು ತಿಳಿಯಬೇಕು. ಆದರೆ ಸಾಮಾನ್ಯರ ಹುಟ್ಟಿದ ಹಬ್ಬಕ್ಕೆ ವರ್ಧಂತೀ ಎಂಬ ಶಬ್ದವನ್ನು ಉಪಯೋಗಿಸುವುದಿಲ್ಲ. ಕನ್ನಡದಲ್ಲಿ 'ಹುಟ್ಟಿದ ಹಬ್ಬ' ಎನ್ನುವುದೇ ಸಾಮಾನ್ಯ. ಮಕ್ಕಳ ಮೊದಲನೇ ವರ್ಷದ ಹುಟ್ಟಿದ ಹಬ್ಬವನ್ನು **ವರ್ಷದ ಹೆಚ್ಚು** ಎಂಬ ವಿಶೇಷವಾದ ಹೆಸರಿನಿಂದ ಈಗಲೂ ಕರೆಯುತ್ತಾರೆ.

**ಜಲಾನಯನ ಪ್ರದೇಶ** ಜಲಾನಯನ ಎಂದರೆ ಕೆರೆ ಕಟ್ಟೆಗಳಿಗೆ ಮಳೆಯ ನೀರು ಹರಿಯುವಂತೆ ಮಾಡುವ ಸ್ಥಳ ಎಂದರ್ಥ. ಇಂಗ್ಲಿಷಿನ catchment area ಎಂಬುದಕ್ಕೆ ಸರಿಸಮಾನ. ಗ್ರಾಮ ಪ್ರದೇಶದಲ್ಲಿ ಇದನ್ನು **ಇಳಿ ಮೇಡು** ಎಂದು ಕರೆಯುತ್ತಾರೆ.

**ಜಲಾಶಯ** 'ಜಲಂ ಆಶೇತೇ ಅತ್ರ' ಎಂದು ಇದರ ವಿಗ್ರಹವಾಕ್ಯ. ಈ ಶಬ್ದವನ್ನು ಸಾಮಾನ್ಯವಾಗಿ ಕಡಮೆಯ ಆಳ ವಿಸ್ತಾರಗಳುಳ್ಳ ಸರೋವರ, ಕಾಸಾರ, ಕೆರೆ, ಕೊಳ, ಕಟ್ಟೆಗಳಿಗೆ ಅನ್ವಯಿಸುತ್ತಾರೆ. ಸಮುದ್ರ ಎಂಬ ಅರ್ಥವೂ ಇದೆ. ನೀರಿಗೆ ಆಶ್ರಯವಾಗಿರುವ ಸ್ಥಳ. ಜಲಾಶ್ರಯ ಎಂದೂ ಶಬ್ದವಿದೆ.

**ಜಲ್ದಿ** ಇದು ಅರಬ್ಬಿಯಲ್ಲಿ ಜಲದ್ ಎಂದೂ ಪಾರಸಿಯಲ್ಲಿ ಜಲ್ದೀ ಎಂದೂ ಉಪಯೋಗವಾಗುವ ಶಬ್ದ. ಇದಕ್ಕೆ ಬೇಗ, ಶೀಘ್ರವಾಗಿ, ತತ್‌ಕ್ಷಣ ಎಂದರ್ಥ. ಮರಾಠಿಯಲ್ಲಿ ತಾಬಡ್ ತೋಬ ಎಂಬ ಶಬ್ದಕ್ಕೆ ಸಮೀಪವಾದುದು.

**ಜವಳಿ** ಇದು ದ್ರಾವಿಡ ವರ್ಗಕ್ಕೆ ಸೇರಿದ ಶಬ್ದ. ತಮಿಳು, ತೆಲುಗು, ಮಲೆಯಾಳಂ ಭಾಷೆಗಳಲ್ಲೆಲ್ಲಾ ಇದರ ಜ್ಞಾತಿ ಶಬ್ದವಿದೆ. ಬಟ್ಟೆ, ವಸ್ತ್ರ, ಅರಿವೆ ಎಂದು ಈ ಶಬ್ದಕ್ಕೆ ಅರ್ಥ.

**ಜವಾನ** ಜವಾನ್ ಎಂಬುದು ಪಾರಸಿ ಭಾಷೆಯ ಶಬ್ದ. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿಯೂ ಬಳಕೆಯಲ್ಲಿದೆ. ಮೂಲದಲ್ಲಿ ಅದಕ್ಕೆ ೧. ಯುವಕ, ೨. ಸೈನಿಕ,

೩. ಆಳು ಎಂಬ ಅರ್ಥಗಳಿವೆ. ಕನ್ನಡದಲ್ಲಿ ಆಳು ಎಂಬುದು ಒಂದೇ ಅರ್ಥ.

**ಜವಾಬುದಾರಿ, ಜವಾಬ್ದಾರಿ** ಎಂಬ ಎರಡೂ ಕನ್ನಡದಲ್ಲಿ ಸರಿಯಾದ ಶಬ್ದಗಳು. ಜವಾಬ್ ಎಂಬುದು ಪಾರಸೀ ಭಾಷೆಯ ಶಬ್ದ. ಇದಕ್ಕೆ ೧. ಉತ್ತರ ೨. ಹೊಣೆಗಾರಿಕೆ ಎಂಬ ಎರಡು ಅರ್ಥಗಳಿವೆ. ಕನ್ನಡದಲ್ಲಿ ಈ ಶಬ್ದಕ್ಕೆ ಹೊಣೆಗಾರಿಕೆ ಎಂಬುದೇ ಮುಖ್ಯ ಅರ್ಥ.

**ಜವಾರಿ** ಇದು ಅರಬ್ಬಿಯ ಜುವಾರ್ ಎಂಬ ಶಬ್ದದಿಂದ ಬಂದಿದೆ. ಸುತ್ತಮುತ್ತಣ ಪ್ರದೇಶಕ್ಕೆ ಸಂಬಂಧಿಸಿದ ಎಂದರ್ಥ. ಮರಾಠಿಯಲ್ಲಿ ಪ್ರಚಾರದಲ್ಲಿದೆ.

**ಜಾಗರಣ (ಜಾಗ್ರಣ, ಜನ ಜಾಗರಣ)** ಜಾಗರಣ ಎಂಬುದು ಸಂಸ್ಕೃತ ಶಬ್ದ. ಅದಕ್ಕೆ ಎಚ್ಚರ, ನಿದ್ರೆಯಿಲ್ಲದಿರುವುದು ಎಂದು ಅರ್ಥ. ಕನ್ನಡದಲ್ಲಿ ರಾತ್ರೆಯೆಲ್ಲ ಜಾಗರಣೆ ಮಾಡಿದೆ ಎಂದು ಉಪಯೋಗಿಸುವ ಪದ ಇದೆ. ಹಿಂದೀ ಭಾಷೆಯಲ್ಲಿ ಜಾಗೃತಿ ಎಂಬ ಅರ್ಥದಲ್ಲಿ ಜಾಗರಣ ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಸಂಸ್ಕೃತದ ಜಾಗರ್ತಿ ಎಂಬ ರೂಪವು ಜಾಗೃ ಧಾತುವಿನಿಂದ ನಿಷ್ಪನ್ನವಾಗುತ್ತದೆ. ಈ ಜಾಗರ್ತಿ ಶಬ್ದವನ್ನು ಹೊಸಗನ್ನಡದಲ್ಲಿ ಲೇಖಕರು ಜಾಗ್ರತಿ, ಜಾಗೃತಿ ಮುಂತಾದ ಅಶುದ್ಧ ರೂಪಗಳಲ್ಲಿ ಬಳಸಿ ಬಳಸಿ ಜನತೆಯಲ್ಲಿ ಚಲಾವಣೆಗೆ ತಂದಿದ್ದಾರೆ. ಅವು ವ್ಯಾಕರಣ ಶುದ್ಧವಲ್ಲ. ಅವರಿಗೆ ಜಾಗರ್ತಿ ಎನ್ನುವುದನ್ನು ಉಚ್ಚರಿಸುವುದೂ, ಬರೆಯುವುದೂ ಕಷ್ಟವಾಗಿ ಕಂಡಿರಬೇಕು. ಈಗ ಈ ಶಬ್ದಗಳಿಗೆ ಕೇವಲ ಎಚ್ಚರದಿಂದಿರುವುದು ಎಂದು ಮಾತ್ರ ಅರ್ಥವಲ್ಲ. ಅದರ ಅರ್ಥದಲ್ಲಿ ಇನ್ನೂ ವಿಸ್ತಾರವಾದ ಅಭಿಪ್ರಾಯವಿದೆ: ಜನರಿಗೆ ತಿಳಿವಳಿಕೆಯನ್ನುಂಟು ಮಾಡುವುದು, ನಿದ್ದೆಯಲ್ಲಿದ್ದಂತೆ ಕ್ರಿಯಾಹೀನರಾದವರನ್ನು ಕ್ರಿಯಾಮುಖರನ್ನಾಗಿ ಮಾಡುವುದು. ಇಂಗ್ಲಿಷಿನಲ್ಲಿ Create awareness ಎಂಬ ಅರ್ಥ ಆ ಶಬ್ದಗಳಲ್ಲಿದೆ.

ಒಂದು ಮಾತನ್ನು ವಿಶೇಷವಾಗಿ ಈ ಸಂದರ್ಭದಲ್ಲಿ ತಿಳಿಸಬೇಕು. ನಮ್ಮ ದೇಶವೇ ಈಗ ಎದ್ದೇಳುವ ಪ್ರಯತ್ನದಲ್ಲಿದೆ. ಈ ಸಂದರ್ಭದಲ್ಲಿ ಒಂದಿಪ್ಪತ್ತು ವರ್ಷಗಳ ಕಾಲ ಭಾರತದ ಎಲ್ಲ ಭಾಷೆಗಳೂ ಅಪಾರವಾದ ವ್ಯತ್ಯಾಸಕ್ಕೆ ಒಳಗಾಗುತ್ತವೆ. ಆಗ ಜನಸಾಗರದ ಕ್ಷೋಭೆಯಿಂದ ಎದ್ದುಬಂದ ಶಬ್ದಬುದ್ಬುದಗಳಲ್ಲಿ ಕೆಲವು ಉಳಿಯುತ್ತವೆ. ಮತ್ತೆ ಕೆಲವು ಒಡೆದು ಗಾಳಿಯಲ್ಲಿ ಮಾಯವಾಗುತ್ತವೆ. ಸಂಸ್ಕೃತದಲ್ಲಿ ಜಾಗೃ ಎಂಬ ಒಂದು ಧಾತುವಿದೆ. ನಿದ್ರೆಯಿಲ್ಲದಿರುವುದು ಎಂದು ಅದರ ಅರ್ಥ. ಇದರಿಂದ ನಿಷ್ಪನ್ನವಾದ ಸಂಸ್ಕೃತ ಶಬ್ದಗಳು ಇವು: ಜಾಗರ = ನಿದ್ರೆ ಮಾಡದಿರುವುದು; ಜಾಗರಣ ಮಾಡುವುದು. ಜಾಗರಿಕ = ಎಚ್ಚರಗೊಳ್ಳುವುದು, ಜಾಗರೂಕ = ಎಚ್ಚರಿಕೆಯಿಂದಿರುವ ಸ್ವಭಾವದ, ಜಾಗರ್ತಿ = ಜಾಗರಣೆ, ಜಾಗೃತ =ಎಚ್ಚರಗೊಂಡ. ಇದೊಂದು ಕ್ಲಿಷ್ಟವಾದ ಶಬ್ದ. ಇದರ ರೂಪಗಳು ಸ್ಪಷ್ಟವಾಗಿ ತಿಳಿಯಬೇಕಾದರೆ ನಿಧಾನವಾಗಿ ವ್ಯಾಸಂಗ ಮಾಡಬೇಕು. ಹೀಗಿರುವುದರಿಂದ ಜಾಗೃತ ಶಬ್ದವನ್ನು ಮೂಲವಾಗಿ ಮಾಡಿಕೊಂಡು ಕನ್ನಡದಲ್ಲಿ ಜಾಗೃತಗೊಳ್ಳು, ಜಾಗೃತಿ = ಎಚ್ಚರ, ಜಾಗ್ರ = ಎಚ್ಚರಾಗಿರುವುದು, ಜಾಗ್ರತ = ಎಚ್ಚರಗೊಂಡವನು, ಜಾಗ್ರತಿ = ಎಚ್ಚರವಾಗಿರುವಿಕೆ, ಜಾಗ್ರತೆ = ಎಚ್ಚರವಾಗಿರುವ ಸ್ಥಿತಿ ಮತ್ತು ಬೇಗ. ಮುಂತಾದ ರೂಪಗಳು ವ್ಯಾಕರಣ ಶುದ್ಧವಲ್ಲದಿದ್ದರೂ ಪ್ರಚಾರಕ್ಕೆ ಬಂದುಬಿಟ್ಟಿವೆ. ಇವುಗಳನ್ನು ಉಪಯೋಗದಿಂದ ಗಡೀಪಾರು ಮಾಡುವುದು ಕಷ್ಟದ ಕೆಲಸ. ಅವುಗಳ ಜಾತಕ ಚೆನ್ನಾಗಿದ್ದು ಬದುಕಿಕೊಂಡರೆ ಬದುಕಲಿ ಬಿಡಿ. ಆದರೆ ಅವುಗಳ ಜಾತಕದಲ್ಲಿ ಅವು ಅಶುದ್ಧ ರೂಪಗಳು ಆದರೂ ಬದುಕಿಕೊಂಡಿವೆ ಎಂಬುದನ್ನು ತಿಳಿಸಿರಬೇಕು.

**ಜಾಣ** ಇದು ಕನ್ನಡದ ಶಬ್ದ. ಆದರೆ ಇದರ ಮೂಲ ಸಂಸ್ಕೃತದ ಜ್ಞಾನ. ಅದು ಪ್ರಾಕೃತದಲ್ಲಿ ಜಾಣ ಎಂದಾಗುತ್ತದೆ. ದೇಶೀಯ ಭಾಷೆಗಳಲ್ಲಿ ತಿಳಿದವನು ಎಂಬರ್ಥದಲ್ಲಿ ಉಪಯೋಗದಲ್ಲಿದೆ. ಬುದ್ಧಿವಂತ ನೇರವಾಗಿ ಸಂಸ್ಕೃತದ ಶಬ್ದ - ಬುದ್ಧಿಮಾನ್. ಅದಕ್ಕೂ

ಅದೇ ಅರ್ಥ.

**ಜಾತಕ** ಜಾತಕ ಎನ್ನುವುದು ಜನ್ಮಪತ್ರಿಕೆ. ಒಂದು ಮನೆಯಲ್ಲಿ ಮಗು ಜನನವಾದಾಗ ಆ ಕಾಲದ ತಿಥಿ, ವಾರ, ನಕ್ಷತ್ರ, ಲಗ್ನ ಮತ್ತು ಗ್ರಹಗಳ ಸ್ಥಾನವನ್ನು ಗುರುತಿಸುವ ಪತ್ರಿಕೆಗೆ ಜಾತಕ ಎಂದು ಹೆಸರು. ಹಾಗೆ ಹುಟ್ಟಿದ ಮಗುವಿಗೂ ಜಾತಕ ಎಂದೇ ಹೆಸರು.

**ಜಾತಿ, ಮತ, ಕುಲ, ವರ್ಣ, ಪಂಗಡ** ಇವು ಪರ್ಯಾಯ ಶಬ್ದಗಳೇ? ನಿಜವಾಗಿ ಈ ಶಬ್ದಗಳು ಪರ್ಯಾಯ ಶಬ್ದಗಳೇ ಆಗಿದ್ದರೆ, ಸಮಾಜವು ಆ ರೀತಿಯಲ್ಲಿ ಬಾಳುವುದು ಸಾಧ್ಯವಾಗಿದ್ದರೆ, ಲೋಕ ಎಷ್ಟು ಸುಖವಾಗಿರಬಹುದಾಗಿತ್ತು. ಆದರೆ ಹಾಗಿಲ್ಲ. ಜಾತಿ ಶಬ್ದಕ್ಕೆ ಜನ್ಮ ಹುಟ್ಟುವುದು, ಉತ್ಪತ್ತಿ ಎಂದರ್ಥ. ಈಗಿರುವ ಸಾವಿರಾರು ಜಾತಿಗಳು ಕಾಲಕ್ರಮದಲ್ಲಿ ಹುಟ್ಟಿಕೊಂಡುವು. ಅವು ವೃತ್ತಿ ಮುಂತಾದುವುಗಳಿಂದ ಗುರುತಿಸಲಾಗುವವುಗಳು. ಈ ಬಗೆಯ ಜಾತಿಗಳು ಹೆಚ್ಚುತ್ತಲೇ ಇವೆ. **ಮತ.** ಮತವೇ ಬೇರೆ. ಇದು ದೈವಿಕವಾದ ವಿಷಯಗಳಲ್ಲಿ ಮಾನವರು ತೋರುವ ವಿವಿಧ ನಂಬಿಕೆಗಳು, ಭಾವನೆಗಳು. ಪೂಜಾವಿಧಿಗಳು, ಸಾಮಾಜಿಕ ಸಂಪ್ರದಾಯಗಳು ಮುಂತಾದವೆಲ್ಲವನ್ನೂ ಒಳಗೊಳ್ಳುತ್ತದೆ. **ಕುಲ** ಇದು ಪ್ರಾರಂಭದಲ್ಲಿ ಒಂದು ಮನೆತನಕ್ಕೆ ಸಂಬಂಧಿಸಿದ್ದು. ಕ್ರಮವಾಗಿ ವಿಸ್ತಾರವಾದ ಅರ್ಥವನ್ನು ಹೊಂದುತ್ತಾ ಇದೆ. **ವರ್ಣ** ಇದು ಖಚಿತವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂದು ನಾಲ್ಕು ಬಗೆ. ಚಾತುರ್ವರ್ಣ್ಯ ಎಂಬ ಹೆಸರು ಇದಕ್ಕೆ ಸಲ್ಲುತ್ತದೆ. **ಪಂಗಡ** ಇದು ಒಂದು ಸಮೂಹ. ಮೇಲೆ ಹೇಳಿದ ಎಲ್ಲ ಜಾತಿ, ಮತ, ಕುಲ, ವರ್ಣಗಳಲ್ಲಿಯೂ ಅನೇಕ ಒಳಪಂಗಡಗಳಿವೆ. ಇವನ್ನು ಸಂಪೂರ್ಣವಾಗಿ ವರ್ಣಿಸುವುದಕ್ಕೆ ಒಂದು ದೊಡ್ಡ ಗ್ರಂಥವೇ ಬೇಕು.

**ಜಾತ್ಯತೀತ** ಈ ಶಬ್ದ ಜಾತಿವಾದಕ್ಕಿಂತ ಹೆಚ್ಚು ವ್ಯಾಪಕವಾಗಿ ಪ್ರಭಾವವನ್ನು ಬೀರುತ್ತಿದೆ. 'ಜಾತಿ + ಅತೀತ' ಎಂಬ ಎರಡು ಶಬ್ದಗಳು ಸೇರಿದಾಗ ನಡುವೆ **ಜಾತ್ಯಾತೀತ** ಎಂದು ದೀರ್ಘ ಬರುವ ಅವಕಾಶವೇ ಇಲ್ಲ. ಇಂಥ ಕಡೆಗಳಲ್ಲಿ ಬಂದು ಬೀಡುಬಿಟ್ಟು ಬೇರೂರಿರುವ ಈ ದೀರ್ಘವನ್ನು ತಡೆಗಟ್ಟುವುದು ಸಾಧ್ಯವೇ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. **'ಜಾತ್ಯತೀತ'** ಎಂದರೆ 'ಜಾತಿಯನ್ನು ಮೀರಿರುವುದು' ಎಂದರ್ಥ; ಜಾತಿಯ ಪರಿಮಿತಿಗೆ ಒಳಪಡದಿರುವುದು ಎಂದರ್ಥ. ನಾವು ಚುನಾವಣೆಗಳಲ್ಲಿ ಜಾತ್ಯತೀತರಾಗಿ ಮತದಾನ ಮಾಡಬೇಕು. ಸಾಮಾಜಿಕ ಕುಂದು ಕೊರತೆಗಳನ್ನು ವಿಮರ್ಶಿಸುವಾಗ, ಅವಕ್ಕೆ ಪರಿಹಾರವನ್ನು ಕಂಡು ಹಿಡಿಯುವಾಗ ನಮ್ಮ ದೃಷ್ಟಿ ಜಾತ್ಯತೀತವಾಗಿರಬೇಕು. ಹೀಗೆ ಮಾತನಾಡುವಾಗಲೆಲ್ಲ ಜಾತಿಗಳನ್ನು ಮೀರಿದ ದೃಷ್ಟಿಯ ಚಿಂತನೆಯಿದೆ. ಆದರೆ ಈ ಶಬ್ದಕ್ಕೆ ರಾಜಕೀಯ ವಾತಾವರಣದಲ್ಲಿ ದೊರಕಿರುವ ಪಾಲನೆ ಮತ್ತು ಪೋಷಣೆ ತುಂಬ ಘನವಾದುದು. ರಾಜಕಾರಣದ ಮುಂದಾಳುಗಳು ಯಾವ ಮುಲಾಜೂ ಇಲ್ಲದೆ 'ಜಾತ್ಯಾತೀತ' ಎಂದು ಎತ್ತರವಾದ ವೇದಿಕೆಗಳಿಂದ ಈ ಶಬ್ದವನ್ನು ಘೋಷಿಸುತ್ತಿರುವಾಗ ಜನಸಾಮಾನ್ಯರಿಗೆ ಅದು ತಪ್ಪು ಎಂದು ತಿಳಿಯುವ ಬಗೆ ಯಾವುದು? ಹೀಗೆ ನಿರಾಶೆ ಹುಟ್ಟಿದರೂ ತಪ್ಪಾದುದನ್ನು ತಪ್ಪು ಎಂದು ಹೇಳುತ್ತಿರುವುದು ಪ್ರಯೋಜನಕರ.

**ಜಾದು** ಇದು ಸಂಸ್ಕೃತದ ಧಾತು ಇಂದ ಬಂದ ಶಬ್ದ. ಇದಕ್ಕೆ ಕೆಂಪು ಬಣ್ಣದ ಕಲ್ಲು ಎಂದರ್ಥ. ಜಾದು ಶಿಲೆ, ಜಾದುಗಲ್ಲು ಎಂಬ ಶಬ್ದಗಳೂ ಇವೆ. **ಜಾದೂ** ಎಂಬ ಶಬ್ದ ಬೇರೆಯದು. ಅದಕ್ಕೆ 'ಇಂದ್ರಜಾಲ' ಎಂಬ ಅರ್ಥವಿದೆ. ಅದು ಪಾರಸೀ ಶಬ್ದ.

**ಜಾನಪದ** ಎಂಬುದು ಜನಪದ ಎಂಬ ಶಬ್ದದಿಂದ ಬಂದುದು. ಅದಕ್ಕೆ ಒಂದು ದೇಶದ ನಿವಾಸಿ ಎಂದೂ, ಜನಪದಕ್ಕೆ ಸಂಬಂಧಿಸಿದುದು ಎಂದೂ ಅರ್ಥವಾಗುತ್ತದೆ. ಜನಪದ, ಜಾನಪದ ಈ ಶಬ್ದಗಳಲ್ಲಿ ಗೊಂದಲವಿಲ್ಲ. ಆದರೆ ಈಚೆಗೆ ಪಾರಿಭಾಷಿಕವಾಗಿ ಈ ಶಬ್ದಗಳಿಗೆ

ಅರ್ಥಮಿತಿಯನ್ನುಂಟು ಮಾಡುವ ಪ್ರಯತ್ನಗಳೂ ಸೂಚನೆಗಳೂ ನಡೆಯುತ್ತಿವೆ ಎಂಬುದು ನನಗೆ ಗೊತ್ತು. ವಿದ್ವಜ್ಜನರ ಒಪ್ಪಿಗೆಯಿಂದ ಮಾಡಿದ ತೀರ್ಮಾನಕ್ಕೆ ಸಾಮಾನ್ಯ ಜನ ಒಪ್ಪಿದರೆ ಸರಿಯಾಗುತ್ತದೆ ಅಷ್ಟೇ! Folklore ಶಬ್ದಕ್ಕೆ ಜಾನಪದ ಎಂಬುದೇ ಸರಿಯಾದ ಶಬ್ದವೆಂದು ನನ್ನ ಅಭಿಪ್ರಾಯ.

**ಜಾನು** ಸಂಸ್ಕೃತದ ಈ ಶಬ್ದಕ್ಕೆ ಮಂಡಿ ಎಂದರ್ಥ. ಆಜಾನುಬಾಹು ಎಂದರೆ ಮಂಡಿಯನ್ನು ಮುಟ್ಟುವಷ್ಟು ಉದ್ದವಾಗಿರುವ ತೋಳುಳ್ಳ ವ್ಯಕ್ತಿ ಎಂದು ವಿವರ. ತುಲಸೀದಾಸರು 'ಶ್ರೀರಾಮಚಂದ್ರ ಕೃಪಾಲು'ವನ್ನು ಭಜಿಸುತ್ತ **'ಆಜಾನುಭುಜ ಶರಚಾಪಧರ ಸಂಗ್ರಾಮಜಿತ ಖರದೂಷಣಂ'** ಎನ್ನುತ್ತಾರೆ. ಆಜಾನುಭುಜ ಎಂದರೂ ಆಜಾನುಬಾಹು ಎಂದೇ ಅರ್ಥ.

**ಜಾನುವಾರು** ಎಂಬುದು ಸಂಸ್ಕೃತದ ಜಾನು ಎಂಬ ಶಬ್ದಕ್ಕೆ ಸಂಬಂಧಪಟ್ಟದ್ದಲ್ಲ. ಅದು ಪಾರಸೀ ಭಾಷೆಯ ಜಾನ್‌ವರ್ ಎಂಬ ಶಬ್ದದಿಂದ ಬಂದುದು. ಮರಾಠಿಯಲ್ಲಿ ಜನಾವರ್ ಎಂಬ ರೂಪವನ್ನು ತಳೆದಿದೆ. ಅಲ್ಲಿಂದ ಕನ್ನಡದಲ್ಲಿ ಜಾನುವಾರು ಆಗಿದೆ. ಇದಕ್ಕೆ ಅರ್ಥ ದನ, ಹಸುಕರು ಮುಂತಾದವು.

**ಜಾಯಮಾನ** ಇದು ಸಂಸ್ಕೃತದ ಶಬ್ದ. ಗುಣವಾಚಕವಾದರೆ ಹುಟ್ಟಲಿರುವ, ಜನ್ಮ ತಳೆಯಲಿರುವ, ಉಂಟಾಗುವ ಎಂದರ್ಥ. ನಾಮಪದವಾದರೆ ಹುಟ್ಟುಗುಣ, ಸ್ವಭಾವ ಎಂದರ್ಥ. ಕಾದಾಟವೇ ಅವನ ಜಾಯಮಾನ. ಎಂದರೆ ಆ ವ್ಯಕ್ತಿಯ ಶೀಲದ ಸೌಭಾಗ್ಯವೇ ಜಗಳಗಂಟನಾಗಿರುವುದು ಎಂದರ್ಥ.

**ಜಾವಕ** ಇದು ಮರಾಠಿ ಶಬ್ದ. ಒಂದು ಕಚೇರಿಯಲ್ಲಿ ಹೊರಕ್ಕೆ ಕಳುಹಿಸುವ ಕಾಗದ ಪತ್ರಗಳ ದಾಖಲೆ ಇರುವ ಪುಸ್ತಕ. To register. ಇದನ್ನು ಕನ್ನಡದಲ್ಲಿ ಈಗ -ಗೆ ರಿಜಿಸ್ಟರ್ ಎಂದು ಕರೆಯುತ್ತಿದ್ದಾರೆ. ಜಾವಕ ಎಂಬುದು ಹೆಚ್ಚು ಉಚಿತವಾಗಿ ಕಾಣುತ್ತದೆ. ನೋಡಿ: ಆವಕ

**ಜಾಹೀರಾತು** ಇದೂ ಅರಬ್ಬಿಯ ಶಬ್ದ. ಅಲ್ಲಿ ಝಾಹಿರ್ ಎಂದು ಆ ಶಬ್ದದ ರೂಪ. ಇದು ಮರಾಠಿಯಲ್ಲಿ ಜಾಹೀರಾತ್ ಎಂದು ಬಹುವಚನದ ರೂಪವನ್ನು ಪಡೆದು ಕನ್ನಡದಲ್ಲಿ ಜಾಹೀರಾತು ಆಗಿದೆ. ಪ್ರಕಟಪಡಿಸುವುದು ಎಂದರ್ಥ. ಇಂಗ್ಲಿಷಿನ Advertisement ಎಂಬ ಅರ್ಥ ಹೊಂದಿದೆ.

**ಜಾಹ್ನವಿ, ಜಾನ್ಹವಿ, ಜಾನವಿ** ಈ ಶಬ್ದದ ನಿಜವಾದ, ಸರಿಯಾದ ರೂಪ ಒಂದೇ - ಜಾಹ್ನವಿ. ಮಿಕ್ಕ ಎರಡೂ ತಪ್ಪು. ಈ ಶಬ್ದಕ್ಕೆ ಗಂಗಾನದಿ ಎಂದು ಅರ್ಥ. ರಾಮಾಯಣದಲ್ಲಿ ಗಂಗೆಗೆ ಈ ಹೆಸರು ಹೇಗೆ ಬಂದಿತು ಎಂಬ ವಿವರವು ದೊರಕುತ್ತದೆ. ಜಹ್ನು ಎಂಬ ಒಬ್ಬ ಋಷಿಯಿದ್ದನು. ಆತನು ನಡೆಸುತ್ತಿದ್ದ ಯಜ್ಞದ ಮಂಟಪವನ್ನು ಭಗೀರಥನ ಹಿಂದೆ ಬರುತ್ತಿದ್ದ ಗಂಗಾನದಿಯು ಕೊಚ್ಚಿಕೊಂಡು ಹೋಯಿತು. ಕೋಪಗೊಂಡ ಜಹ್ನುವು ಗಂಗಾ ನದಿಯನ್ನೇ ಕುಡಿದುಬಿಟ್ಟನು. ಆಗ ಭಗೀರಥನು ಜಹ್ನುವನ್ನು ಮರೆಹೊಕ್ಕು ಗಂಗೆಯನ್ನು ಬಿಡುವಂತೆ ಪ್ರಾರ್ಥಿಸಿದನು. ಆಗ ಜಹ್ನುವು ತನ್ನ ಕಿವಿಯಿಂದ ಗಂಗೆಯನ್ನು ಈಚೆಗೆ ಬಿಟ್ಟನು. ಜಹ್ನುವಿನಿಂದ ಹುಟ್ಟಿದ್ದರಿಂದ ಗಂಗೆಗೆ ಜಾಹ್ನವಿ ಹೆಸರು ಬಂತು.

**ಜಿಗುಪ್ಸೆ** ಜುಗುಪ್ಸಾ ಎಂಬುದು ಸಂಸ್ಕೃತ ಶಬ್ದ. ಅದಕ್ಕೆ ಹೇಸಿಕೆ ಎಂದರ್ಥ. ಅದೇ ಕನ್ನಡದಲ್ಲಿ ಜುಗುಪ್ಸೆ ಎಂದು ತದ್ಭವವಾಗುತ್ತದೆ. ಅಲ್ಲದೆ ಜಿಗುಪ್ಸೆ ಎಂಬ ರೂಪದಲ್ಲಿಯೂ ಕನ್ನಡ ಗ್ರಂಥಗಳಲ್ಲಿ ಬಳಕೆಯಲ್ಲಿದೆ. ಎರಡನ್ನೂ ಕನ್ನಡದಲ್ಲಿ ತದ್ಭವ-ರೂಪಗಳೆಂದು ತಿಳಿಯಬಹುದು.

**ಜಿಜ್ಞಾಸೆ** ಜಿಜ್ಞಾಸಾ ಎಂಬ ಸಂಸ್ಕೃತದ ಶಬ್ದದಿಂದ ಕನ್ನಡದಲ್ಲಿ ಜಿಜ್ಞಾಸೆ ಆಗಿದೆ. **ಜ್ಞಾತುಂ ಇಚ್ಛಾ** = ತಿಳಿದುಕೊಳ್ಳುವ ಆಸೆ ಎಂದು ಅದರ ಅರ್ಥ. **ಜಿಜ್ಞಾಸನ** ಎಂಬ ಶಬ್ದವೂ ಇದೇ

ಅರ್ಥದ್ದು. **ಜಿಜ್ಞಾಸು** ಎಂದರೆ ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯುಳ್ಳ ವ್ಯಕ್ತಿ. ಸಾಮಾನ್ಯವಾಗಿ ಈ ಶಬ್ದವನ್ನು ಪ್ರೌಢವಾದ ವಿಷಯಗಳಿಗೆ ಅನ್ವಯಿಸುತ್ತಾರೆ. 'ನಿಮ್ಮ ಮನೆಯಲ್ಲಿ ಏನು ಅಡಿಗೆ?' ಎಂದು ಕೇಳುವುದು ಜಿಜ್ಞಾಸೆಯಾಗುವುದಿಲ್ಲ.

**ಜಿನಸು, ದಿನಸಿ** ಇದು ಅರಬ್ಬೀ ಭಾಷೆಯ ಜಿನ್ಸ್ ಎಂಬ ಶಬ್ದದಿಂದ ಹಿಂದಿಯ ಮೂಲಕ ಕನ್ನಡಕ್ಕೆ ಬಂದಿದೆ. ಕನ್ನಡದಲ್ಲಿ ಬೇರೆ ಬೇರೆ ಕಡೆಗಳಲ್ಲಿ ಈ ಶಬ್ದದ ಅನೇಕ ಬೇರೆ ಬೇರೆ ರೂಪಗಳು ಪ್ರಯೋಗದಲ್ಲಿ ಇಂದಿಗೂ ದೊರೆಯುತ್ತವೆ. ಜಿನಸು, ಜಿನಶಿ, ಜಿನಿಸು, ಜಿನ್ನಸು, ಜೀನಸು, ಜೀನಿಸು, ದಿನಸಿ, ದಿನಸು, ದಿನಿಸು, ದೀನಸು. ಈ ಶಬ್ದಕ್ಕೆ ೧. ಸಾಮಾನು, ಸರಕು ೨. ಕಾಳು, ಧಾನ್ಯ. ೩. ಬೆಲೆ ಬಾಳುವಂಥದು ಮುಂತಾಗಿ ಅರ್ಥಗಳಿವೆ. ಹೀಗೆ ೧೦ ಬೇರೆ ಬೇರೆ ರೂಪಗಳು ಪ್ರಯೋಗದಲ್ಲಿ ಇಂದಿಗೂ ಕಾಣುತ್ತಿರುವಾಗ ಸ್ವಲ್ಪ ಗೊಂದಲವಾಗುವುದು ಸಹಜ. ಜಕಾರ ದಕಾರಗಳು ಪಲ್ಲಟವಾಗುವುದು ಕನ್ನಡದಲ್ಲಿ ಸ್ವಾಭಾವಿಕ. ಈ ಎಲ್ಲ ರೂಪಗಳನ್ನೂ ಒಪ್ಪಬೇಕು.

**ಜಿಲ್ಲಾ ಪರಿಷತ್ತು** ಇತ್ಯಾದಿ ಕನ್ನಡ ಭಾಷೆಗೆ ಅನ್ಯದೇಶ್ಯ ಶಬ್ದಗಳು ಅನೇಕ ಬಂದು ಸೇರಿವೆ. ಮೊದಮೊದಲು ಸಂಸ್ಕೃತ ಶಬ್ದಗಳು ಮಾತ್ರ ಹೆಚ್ಚಾಗಿ ಉಪಯೋಗವಾಗುತ್ತಿದ್ದಾಗ ಲಕ್ಷ್ಮೀಪತಿ, ಲಂಕಾಪತ್ತನ, ಲಜ್ಜಾಶೀಲ ಮುಂತಾಗಿ ಸ್ತ್ರೀಲಿಂಗದ ಶಬ್ದಗಳುಳ್ಳ ಸಮಾಸಗಳು ಪ್ರಯೋಗದಲ್ಲಿದ್ದುವು. ಬಳಿಕ ಈ ಶಬ್ದಗಳ ರೂಪಸಾಮ್ಯದಿಂದ ಜನತೆ ಅನ್ಯದೇಶ್ಯಗಳ ಶಬ್ದಗಳನ್ನು ಸೇರಿಸಿ ಸಮಾಸಗಳನ್ನು ಮೊದಮೊದಲು ಮಾಡಿದರು. ಹೀಗೆ ಬಂದ ಶಬ್ದಗಳು ಜಿಲ್ಲಾ ಪರಿಷತ್ತು, ಸಲಹಾ ಸಮಿತಿ, ಕೈಗಾರಿಕಾ ಕಟ್ಟಡ, ಕಾರ್ಯಕಾರೀ ಸಮಿತಿ, ದೇಶಾವರೀ ನಗು. ಇವು ಷಷ್ಠಿಯ ರೂಪಗಳೂ ಅಲ್ಲ. ವ್ಯಾಕರಣಬದ್ಧವಾದ ಶಬ್ದಗಳೂ ಅಲ್ಲ. ಧಾರಾಕಾರ, ದಯಾವಂತ ಮುಂತಾದ ಶಬ್ದಗಳು ಸಾಮ್ಯದಿಂದ ಹುಟ್ಟಿವೆ. ಇವುಗಳನ್ನು ತಡೆಹಾಕಲಾಗುವುದಿಲ್ಲ. ಭಾಷೆ ಬೆಳೆಯುವುದೇ ಹೀಗೆ. ಕ್ರಮೇಣ ಅವು ಶುದ್ಧವೆಂಬ ಗೌರವಕ್ಕೆ ಪಾತ್ರವಾಗಿಬಿಡುತ್ತವೆ.

**ಜಿಲ್ಲೆ - ಜಿಲ್ಹೆ** ಪತ್ರಿಕೆಗಳಲ್ಲಿ 'ಜಿಲ್ಹೆ' ಯನ್ನು ಏಕೆ 'ಜಿಲ್ಲೆ' ಎಂದು ಮುದ್ರಿಸುತ್ತಾರೆ? ಈ ಶಬ್ದ ಅರಬ್ಬಿ ಭಾಷೆಯ ಶಬ್ದ. ಆ ಭಾಷೆಯಲ್ಲಿ ಇದು 'ಜ ಲ ಅ'. ಇದು ಹಿಂದೀ ಭಾಷೆಯಲ್ಲಿ 'ಜಿಲಾ' ಆಗಿದೆ. ಮರಾಠಿ ಭಾಷೆಯಲ್ಲಿ 'ಜಿಲ್ಹಾ' ಆಗಿದೆ. ಮಹಾರಾಷ್ಟ್ರದ ಕಡೆಯ ಸಂಬಂಧ ಹೆಚ್ಚಾಗಿರುವವರು ಕನ್ನಡದಲ್ಲಿ ಜಿಲ್ಹೆ ಎಂದು ಬರೆಯುತ್ತಾರೆ. ಜಿಲ್ಲೆ ಎಂದು ಬರೆಯುವುದೇ ಹೆಚ್ಚು ಸೂಕ್ತವಾದುದು, ಕನ್ನಡದಲ್ಲಿ.

**ಜಿಹಾಸೆ** ಇದು ಜಿಹಾಸಾ ಎಂಬ ಸಂಸ್ಕೃತ ಶಬ್ದದ ತದ್ಭವ. ಇದಕ್ಕೆ ಏನನ್ನಾದರೂ ತ್ಯಜಿಸುವ ದೂರಮಾಡುವ ಅಪೇಕ್ಷೆ ಎಂದರ್ಥ. ತುಂಬ ಜುಗುಪ್ಸೆಗೆ ಕೂಡ ಈ ಶಬ್ದವನ್ನು ಉಪಯೋಗಿಸುತ್ತಾರೆ. ಯುಧಿಷ್ಠಿರನಿಗೆ ತುಂಬ ಜಿಹಾಸೆಯುಂಟಾಗಿಬಿಟ್ಟಿತು (ವಚನಭಾರತ ೩.೨೮) ಎಂಬ ವಾಕ್ಯವನ್ನು ಗಮನಿಸಿ.

**ಜುಜುಮಿ** ಇದರ ಸರಿಯಾದ ರೂಪ ಜುಜುಬಿ. ಅರಬ್ಬೀ ಭಾಷೆಯಲ್ಲಿ ಜುಜ್ಬೀ, ಜುಜ್ಮೀ ಎಂಬ ರೂಪಗಳಲ್ಲಿರುವ ಈ ಶಬ್ದ ನಮಗೆ ಹಿಂದೀ ಮತ್ತು ಮರಾಠೀ ಭಾಷೆಗಳ ಮೂಲಕ ಬಂದಿದೆ. ಇದಕ್ಕೆ ಬಹಳ ಸಾಮಾನ್ಯವಾದ, ಅತ್ಯಲ್ಪವಾದ, ಲೆಕ್ಕಕ್ಕೆ ಬಾರದ ಎಂಬ ಅರ್ಥಗಳಿವೆ. ಇಂಥ ಅಲ್ಪಾರ್ಥ ಶಬ್ದವಾದರೂ ತುಂಬಾ ಪ್ರಭಾವಶಾಲಿ. ಇತರರ ಗೌರವವನ್ನು ತಗ್ಗಿಸಲು ಬಹು ಸುಲಭವಾಗಿ ದಕ್ಕುವ ಶಬ್ದ!

**ಜುಟ್ಟು** ಕೂದಲು, ಶಿಖೆ, ತುರುಬು, ನವಿಲಿನಂಥ ಪಕ್ಷಿಯ ತಲೆಯ ಮೇಲಿನ ಕೊಟ್ಟು ಎಂದು ಅರ್ಥವಾಗುತ್ತದೆ. ಈ ಶಬ್ದವು ಸಂಸ್ಕೃತದ ಜೂಟ ಶಬ್ದದಿಂದ ಬಂದಿರಬಹುದು ಎನ್ನುತ್ತಾರೆ. ದೇಶ್ಯವೇ ಇರಬಹುದು ಎನ್ನಿಸುತ್ತದೆ.

**ಜುಲಾಹಿ** ಇದು ಇಂಗ್ಲಿಷಿನ ಜುಲೈ ಎಂಬ ತಿಂಗಳಿನ ಹೆಸರಿನ ಅಪಭ್ರಂಶ. ಇದಕ್ಕೆ ರೂಢಿಯಲ್ಲಿ ಕನ್ನಡದಲ್ಲಿ ನೇಯ್ಗೆಯವನು ನೇಕಾರ ಅರ್ಥವಿದೆಯೆಂದು ಕಿಟ್ಟೆಲ್ ಹೇಳಿದ್ದಾನೆ.

**ಜುಲುಮೆ** ಅರಬ್ಬಿಯ ಜಲ್ಮ್ ಶಬ್ದದಿಂದ ಬಂದಿರುವ ಈ ಶಬ್ದಕ್ಕೆ ಜಬರದಸ್ತಿ ಎಂದು ಅರ್ಥ ಆ ಭಾಷೆಯಲ್ಲಿ. ಕನ್ನಡದಲ್ಲಿ ಒತ್ತಾಯ, ಬಲಾತ್ಕಾರ ಎಂಬ ಅರ್ಥಗಳಿವೆ. ಇದಕ್ಕೆ ಬಲಾತ್ಕಾರದಿಂದ ಆಗುವ ಪೀಡೆ, ಅನ್ಯಾಯ ಎಂಬ ಅರ್ಥಗಳೂ ವ್ಯಾಪಕವಾಗಿ ಅಲ್ಲಲ್ಲಿ ಕಾಣಬರುತ್ತವೆ. ಕನ್ನಡದಲ್ಲಿ ಜುಲುಂ ಎಂಬ ರೂಪವೂ ಪ್ರಚಾರದಲ್ಲಿದೆ.

**ಜೆರಾಕ್ಸ್ ಎಂಬ ಇಂಗ್ಲಿಷ್ ಶಬ್ದಕ್ಕೆ ನೆರಳಚ್ಚು ಎಂದು ಒಪ್ಪಬಹುದೇ?**
ಆಶ್ಚರ್ಯವೇನೆಂದರೆ ಈ ZEROX ಶಬ್ದ ಇಂಗ್ಲೀಷಿನ ಸುಪ್ರಸಿದ್ಧ ನಿಘಂಟುಗಳಿಗೆ ಇನ್ನೂ ಸೇರಿಲ್ಲ. ಇತ್ತೀಚೆಗೆ ಪ್ರಕಟವಾದ Webster III ಎಂದು ಕರೆಯುವ ಸುಪ್ರಸಿದ್ಧ ಅಮೆರಿಕನ್ ನಿಘಂಟಿನಲ್ಲಿ ಅದು Xerox ಎಂದಿದೆ. Xerox ಎಂಬುದು trade mark ಆದುದರಿಂದ ಇತರರು ಆ ಹೆಸರನ್ನು ಬಿಟ್ಟು Zerox ಎಂದು ಉಪಯೋಗಿಸುತ್ತಾರೆ. Xerography ಎಂಬುದು ಒಂದು ಒಣಮುದ್ರಣ ಕ್ರಮ. Xerox ಎಂದರೆ ಗ್ರೀಕ್ ಭಾಷೆಯಲ್ಲಿ Dry ಎಂದರ್ಥ. Graph ಎಂದರೆ ಬರಹ. ಅವೆರಡೂ ಸೇರಿ Xerography ಆಗಿದೆ. The Random House Dictionary ಯಲ್ಲಿ ೧೯೭೩ ರ ವೇಳೆಗೆ Xerox ಶಬ್ದ ಸೇರಿದೆ. ಅದನ್ನು Trade Mark ಎಂದು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ವ್ಯಾವಹಾರಿಕವಾಗಿ ನೆರಳಚ್ಚು ಪ್ರಯೋಜನಕರವಾಗಿದೆ. ಉಪಯೋಗಿಸಲು ಪ್ರಾರಂಭಿಸಿದರೆ ನೆಲೆ ನಿಲ್ಲುವ ಎಲ್ಲ ಗುಣಗಳೂ ಆ ಶಬ್ದಕ್ಕೆ ಇದೆ. ನಿಂತರೆ ಒಳ್ಳೆಯದೇ. ನಿಜವಾಗಿ ಅದು **ಒಣನೆರಳಚ್ಚು.**

**ಜೊಂಪೆ** ಎಂದರೆ ಗೊಂಚಲು. ಮುತ್ತಿನ ಜೊಂಪೆಯನ್ನು ಧರಿಸಿದ್ದರು. **ಬೀಗದ ಕೈ ಜೊಂಪೆಯನ್ನು ತೆಗೆದುಕೊಂಡು ಹೊರಟರು.** (ಮುಸುಗ ತೆಗೆಯೇ ಮಾಯಾಂಗನೆ ೧೨೪) ಮುಂತಾದ ಪ್ರಯೋಗಗಳಿವೆ. ಈ ಶಬ್ದಕ್ಕೆ ಕನ್ನಡ ಸಾಹಿತ್ಯದಲ್ಲಿ ಅನೇಕ ಪರ್ಯಾಯ ರೂಪಗಳಿವೆ. ಜಂಪ, ಜೊಂಪ, ಜೊಂಪು ಇತ್ಯಾದಿ.

**ಜೋಬದ್ರ** ಎಂಬ ಶಬ್ದಕ್ಕೆ ಸದಾ ನಿದ್ದೆ ಮಾಡುವ ಸೋಮಾರಿ ಎಂದರ್ಥ. ಇದನ್ನು ಕೆಲವರು ವಿದ್ವಾಂಸರು ಸೋಂಬ ಶಬ್ದದಿಂದ ವ್ಯುತ್ಪತ್ತಿ ಮಾಡುತ್ತಾರೆ. ಅದು ದೂರಾನ್ವಯದಂತೆ ಕಾಣುತ್ತದೆ. ಈ ಶಬ್ದದಲ್ಲಿ ವೀರಭದ್ರನಿಗೆ ವಿರುದ್ಧವಾಗಿರುವ ಗುಣವುಳ್ಳ ವ್ಯಕ್ತಿಗೆಂದು ಸೃಷ್ಟಿಸಿರುವ ಶಬ್ದ ಜೋಭದ್ರ. ಅದೇ ಜೋಬದ್ರ ಆಗಿದೆ. ಇಲ್ಲದಿದ್ದರೆ ಬದ್ರ ಎಂಬ ಶಬ್ದ ಭಾಗದ ವಿವರಣೆ ಅಸಾಧ್ಯವಾಗುತ್ತದೆ. ಅಲ್ಲದೆ ನಮ್ಮ ಬಾಲ್ಯದಲ್ಲಿ ತುಂಟಾಟ ಮಾಡುವವನನ್ನು ವೀರಭದ್ರನೆಂದೂ ಸೋಮಾರಿಯನ್ನು ಜೋಭದ್ರನೆಂದೂ ಕರೆಯುತ್ತಿದ್ದುದನ್ನು ನಾನು ಕೇಳಿದ್ದೇನೆ. ಈ ಶಬ್ದದ ಕತೆ ಇದು.

**ಜೋಷಿ (ಶಿ)** ಇದು ಸಂಸ್ಕೃತದ ಜ್ಯೋತಿಷಿನ್ ಎಂಬ ಶಬ್ದದಿಂದ ಬಂದದ್ದು. ತದ್ಭವ. ಜ್ಯೋತಿಷ್ಯ ಶಾಸ್ತ್ರವನ್ನು ತಿಳಿದವನು ಎಂದರ್ಥ. ತದ್ಭವವೆಂದು ಪರಿಗಣಿಸುವವರು ಜೋಶಿ ಎಂಬ ರೂಪಕ್ಕೆ ಹೆಚ್ಚು ಮಾನ್ಯತೆ ಕೊಡುತ್ತಾರೆ.

**ಜೋಳವಾಳಿ** ಜೋಳವಾಟಿ ಎಂಬುದು ಹಳಗನ್ನಡದ ಶಬ್ದ. ಜೋಳದ + ಪಾಟಿ = ಜೋಳವಾಳಿ. ನಡುಗನ್ನಡದಲ್ಲಿ ಪಾಟಿ ಶಬ್ದಕ್ಕೆ ಪದ್ಧತಿ ಎಂಬ ಅರ್ಥವಿದೆ. ಜೋಳ ಎಂದರೆ ಆಹಾರ, ಅನ್ನ. ಅನ್ನದ ಋಣವನ್ನು ತೀರಿಸುವುದು ಒಂದು ಪದ್ಧತಿ. ದಣಿಯ ಋಣವನ್ನು ತನ್ನ ಪ್ರಾಣ ಕೊಟ್ಟು ತೀರಿಸುವ ಸೈನಿಕರು, ಸೇನಾಪತಿಗಳು ಹಿಂದೆ ಹಾಗೆ ಪ್ರತಿಜ್ಞೆ ಮಾಡಿರುತ್ತಿದ್ದರು. ಅಂಥವರನ್ನೂ ಜೋಳವಾಳಿಗಳು ಎಂದು ಕರೆಯುತ್ತಿದ್ದರು.

**ಜ್ಞಾನ, ಜ್ಞಾತೃ, ಜ್ಞೇಯ** ಈ ಮೂರು ಶಬ್ದಗಳೂ ಸಂಸ್ಕೃತದ ಜ್ಞಾ ಎಂಬ ಧಾತುವಿನಿಂದ ವ್ಯುತ್ಪತ್ತಿ ಹೊಂದಿದ ರೂಪಗಳು. ಜ್ಞಾ ಎಂದರೆ ತಿಳಿ, ಗ್ರಹಿಸು, ಅರ್ಥ ಮಾಡಿಕೋ ವಿಚಾರ

ಮಾಡು ಮುಂತಾದ ಅರ್ಥಗಳಿವೆ. ಜ್ಞಾನ ಎಂದರೆ ತಿಳಿವಳಿಕೆ. ಸಂಸ್ಕೃತದಲ್ಲಿ ಈ ಶಬ್ದವನ್ನು ವಿಶೇಷವಾಗಿ ಆತ್ಮಜ್ಞಾನಕ್ಕೆ ಉಪಯೋಗಿಸುತ್ತಾರೆ. ಆತ್ಮಜ್ಞಾನ ಎಂದರೆ ಪರಮಾತ್ಮನ ಸ್ವರೂಪವನ್ನು ತಿಳಿಸುವ ಜ್ಞಾನ. ಜ್ಞಾತೃ ಎಂದರೆ ತಿಳಿದವನು, ಜ್ಞಾನಿ. ಜ್ಞಾತ್ರೀ ಎಂದರೆ ತಿಳಿದವಳು. ಜ್ಞಾತೃನಿಷ್ಠ subjective ಅರ್ಥದಲ್ಲಿ ಬಳಕೆ. ಜ್ಞೇಯ ಎಂದರೆ ಪರಬ್ರಹ್ಮ ತಿಳಿಯ ಬೇಕಾಗಿರುವ ಒಂದೇ ಮುಖ್ಯವಸ್ತು. ತರ್ಕ ಶಾಸ್ತ್ರದಲ್ಲಿಯೂ ಈ ಶಬ್ದಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಜ್ಞಾ ಎಂಬ ಧಾತುವಿಗೆ ಅನೇಕ ಉಪಸರ್ಗಗಳು ಸೇರಿ ಬೇರೆ ಬೇರೆ ಶಬ್ದಗಳಾಗುತ್ತವೆ. ಅನುಜ್ಞಾ =ಅಪ್ಪಣೆ. ಅಭಿಜ್ಞಾ = ಗುರುತು ಹಿಡಿ, ಚೆನ್ನಾಗಿ ತಿಳಿ. ಪ್ರತಿಜ್ಞಾ =ಶಪಥ ಮಾಡು ಇತ್ಯಾದಿ. ತತ್ವಜ್ಞ ಎಂದರೆ ಪರಮಾತ್ಮವೆಂಬ ತತ್ವವನ್ನು ತಿಳಿದವನು, ಬ್ರಹ್ಮಜ್ಞಾನಿ. ಜ್ಞೇಯನಿಷ್ಠ objective ಅರ್ಥದಲ್ಲಿ ಬಳಕೆ.

**ಜ್ಯೇಷ್ಠ** ಜ್ಯೇಷ್ಠ ಎಂಬ ಸಂಸ್ಕೃತ ಶಬ್ದಕ್ಕೆ ಮೊದಲು ಹುಟ್ಟಿದ ಮಗು ಎಂಬ ಅರ್ಥವಿದೆ. ಜ್ಯೇಷ್ಠಾ ಎಂಬ ಶಬ್ದಕ್ಕೆ ಹಿರಿಯ ಹೆಂಡತಿ, ಪ್ರಿಯೆಯಾದ ಹೆಂಡತಿ ಎಂಬ ಅರ್ಥಗಳೂ ಇವೆ. ಲಕ್ಷ್ಮಿಯ ಹಿರಿಯ ಅಕ್ಕನಾದ ಜ್ಯೇಷ್ಠೆಗೆ ದುರದೃಷ್ಟದ ದೇವತೆ ಎಂಬ ಹೆಸರಿದೆ. ಆದುದರಿಂದ ಹೆಣ್ಣು ಮಕ್ಕಳನ್ನು ಜ್ಯೇಷ್ಠೆ ಎಂದು ಕರೆಯುವುದಿಲ್ಲ. ಇದು ಸಂಪ್ರದಾಯ ಅಷ್ಟೆ!

**ಜ್ಯೋತಿರ್ವರ್ಷ** ಜ್ಯೋತಿಸ್ ಎನ್ನುವುದು ಮೊದಲ ಶಬ್ದ. ಇದಕ್ಕೆ 'ವರ್ಷ' ಎಂಬ ಶಬ್ದವು ಸೇರಿ ಸಂಧಿಯಾಗುವಾಗ 'ಜ್ಯೋತಿಸ್' ಶಬ್ದದ ಅಂತ್ಯಾಕ್ಷರವು 'ರ್' ಎಂದಾಗುತ್ತದೆ. ಆಗ ಎರಡೂ ಸೇರಿದರೆ ಆಗುವ ರೂಪ 'ಜ್ಯೋತಿರ್ವರ್ಷ'. ಇದಕ್ಕೆ 'ಬೆಳಕು ಒಂದು ವರ್ಷದಲ್ಲಿ ಎಷ್ಟು ದೂರ ಚಲಿಸುತ್ತದೋ ಅಷ್ಟು ದೂರ' ಎಂದರ್ಥ, ವೈಜ್ಞಾನಿಕವಾಗಿ.

**ಜ್ಯೋತಿಷ್ಟೋಮ** ಎಂದರೆ ಸ್ವರ್ಗದ ಅಪೇಕ್ಷೆಯಿಂದ ಮಾಡುವ ಯಾಗ. **ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ** ಎಂದು ಆ ಶಬ್ದದ ವಿವರಣೆ. ಮೂರು ವೇದಗಳ ಸಮೂಹವೇ ಜ್ಯೋತಿಷ್ಟೋಮ. ಇವುಗಳ ಸಹಾಯದಿಂದ ಸ್ವರ್ಗ ಲಭಿಸುತ್ತದೆ ಎಂಬ ನಂಬಿಕೆ ಇದೆ.

**ಜ್ಯೋತ್ಸ್ನಾ** ಇದು ಸಂಸ್ಕೃತದ ಶಬ್ದ. ಇದಕ್ಕೆ ಬೆಳುದಿಂಗಳು ಎಂದರ್ಥ. ಹೆಣ್ಣು ಮಕ್ಕಳಿಗೆ ಈ ಹೆಸರಿಡಬಹುದು.

ಆದರೆ ಈಚೆಗೆ ನಮ್ಮ ಜನರಲ್ಲಿ ಹೆಸರಿಡುವ ಬಗ್ಗೆ ಯಾವ ಆಲೋಚನೆಯೂ ಇಲ್ಲದೆ ಅರ್ಥತಿಳಿಯದೆ ಹೆಸರುಗಳನ್ನು ಆರಿಸುತ್ತಿದ್ದಾರೆ. ಆವೇದ, ಅಸಿತ, ಪರಾಜಿತ್ಮಿ ಇತ್ಯಾದಿ. ಈ ಬಗ್ಗೆ ಹೆಚ್ಚು ಹೇಳಲಾಗುವುದಿಲ್ಲ.

**ಜೌಗು** ಜವುಗು, ಜೋಗ ಎಂಬ ಬೇರೆ ಎರಡು ರೂಪಗಳೂ ಇವೆ. ಮೂಲ ರೂಪ ಜವುಗು. ಇದಕ್ಕೆ ಅರ್ಥ ಒದ್ದೆ, ಜಿನುಗುವಿಕೆ. ಅಲ್ಲದೆ ಅಂಥ ಪ್ರದೇಶಕ್ಕೂ ಈ ಶಬ್ದವನ್ನೇ ಉಪಯೋಗಿಸುತ್ತಾರೆ. ಸದಾ ತೇವವಾಗಿರುವುದು ಇಂಥ ನೆಲದ ಗುಣ.

## ಟ

**ಟಂಕಸಾಲೆ** ಟಂಕ ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ ೧. ಕಲ್ಲು ಕುಟಿಗನು ಉಪಯೋಗಿಸುವ ಒಂದು ಉಳಿ ೨. ನಾಣ್ಯವನ್ನು ಅಚ್ಚು ಮಾಡುವ ಸಾಧನ ೩. ತಾಳೇಗರಿಯಲ್ಲಿ ರೂಪ ಕೊರೆಯುವ ಸಾಧನ, ಮೊಳೆ ೪. ಮುದ್ರೆಯೊತ್ತಿದ ನಾಣ್ಯ ಇತ್ಯಾದಿ ಅರ್ಥಗಳಿವೆ. ಈ ಶಬ್ದಕ್ಕೆ ಸಾಲೆ ಎಂಬುದು ಸೇರಿ ಟಂಕಸಾಲೆ ಆಗಿದೆ. ಇದಕ್ಕೆ ನಾಣ್ಯವನ್ನು ಮುದ್ರಿಸುವ ಸ್ಥಳ ಎಂದರ್ಥ. ಸಾಲೆ ಎಂಬುದು ಸಂಸ್ಕೃತದ ಶಾಲಾ ಶಬ್ದದ ತದ್ಭವ.

**ಟಾಕಪ್ಪ, ಟೀಕಪ್ಪ, ಡಾಕಪ್ಪ** ಎಂದರೇನು? ಇವು ಮನುಷ್ಯರ ಹೆಸರುಗಳು. ಇವುಗಳು ಏನನ್ನು ಸೂಚಿಸುತ್ತವೆ ಎಂಬುದನ್ನು ತಿಳಿಸುವುದು ಅಸಾಧ್ಯವಾಗಿದೆ. ಆದರೆ ಇಂಥ ಹೆಸರುಗಳನ್ನು ಕನ್ನಡಿಗರು ಇಟ್ಟುಕೊಳ್ಳುತ್ತಿದ್ದುದಕ್ಕೆ ಪ್ರಾಚೀನ ಆಧಾರಗಳಿವೆ. ಡಾಕ ಎಂಬ ಹೆಸರಿನ ಒಬ್ಬ ಅರಸನನ್ನು **ಡಾಕರಸ** ಎಂದು ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ನಾವು ಈಗ ವಿವರಿಸಲಾಗದ ಅನೇಕ ಹೆಸರುಗಳು ಕನ್ನಡ ಶಾಸನಗಳಲ್ಲಿ ದೊರಕುತ್ತವೆ.

**ಟಾಟಾ** ಕೈಬೀಸಿ ಬೀಳ್ಕೊಡುವ ಪಾಶ್ಚಾತ್ಯ ಸಂಪ್ರದಾಯ ನಮಗೆ ನುಸುಳಿ ಬಂದಿದೆ. ನಮ್ಮ ಜನ ಸಿನಿಮಾಗಳನ್ನು ತಯಾರಿಸುವಾಗ ಇಂಗ್ಲಿಷ್ ಸಿನಿಮಾಗಳನ್ನು ಅನುಸರಿಸುವುದನ್ನು ಹೆಚ್ಚು ಮಾಡಿದ ಕಾಲದಿಂದ ಈ ಟಾಟಾ ನಮಗೆ ನಗರ ಜೀವನದಲ್ಲಿ ಅಮರಿಕೊಂಡಿದೆ. ಗ್ರಾಮೀಣ ಜನರು ಇನ್ನೂ ಟಾಟಾ ಪದ್ಧತಿಗೆ ಮಾರುಹೋಗಿಲ್ಲ. ಈ ಹೊಸ ನಾಗರಿಕ ಸಂಪ್ರದಾಯ ಪ್ರವರ್ಧಮಾನಕ್ಕೆ ಬರುವ ಮುಂಚೆ ಕನ್ನಡದ ಜನ ಎಲ್ಲರೂ ಮತ್ತೊಬ್ಬರನ್ನು ಬೀಳ್ಕೊಡುವಾಗ ಅವರು 'ಹೋಗಿ ಬರುತ್ತೇವೆ' ಎಂದರೆ **'ಒಳ್ಳೆಯದು, ಹೋಗಿ ಬನ್ನಿ'** ಎಂದೇ ಹೇಳುತ್ತಿದ್ದರು. ಸಂಸ್ಕೃತ ಬಲ್ಲವರು 'ಶುಭಮಸ್ತು', **'ಶುಭಾಃತೇ ಪಂಥಾನಃ'** ಎಂದು ಹೇಳುವುದು ಇತ್ತು. ಭದ್ರ, ಶುಭ ಮಂಗಳ ಎಂಬರ್ಥ ಬರುವ ಮಾತುಗಳನ್ನು ಆಡುತ್ತಿದ್ದರು. ಇತ್ತೀಚಿನವರೆಗೂ ನನ್ನ ಮೊಮ್ಮಗಳು ಬೆಳಗ್ಗೆ ಸ್ಕೂಲಿಗೆ ಹೋಗುವಾಗ ಟಾಟಾ ಎಂದರೆ ನನ್ನ ನೂರೇಳು ವರ್ಷದ ತಾಯಿ 'ಒಳ್ಳೇದು ಹೋಗಿ ಬಾ' ಎನ್ನುತ್ತಿದ್ದರು. ಪಂಪಭಾರತದಲ್ಲಿ ಪಾಂಡವರು ಕಾಡಿಗೆ ಹೋಗಬೇಕಾದ ಪ್ರಸಂಗ ಬಂದಾಗ ಭೀಷ್ಮನಿಗೆ, ಇತರ ಹಿರಿಯರಿಗೆ ಹೇಳಿಹೋಗಲು ಬರುತ್ತಾರೆ. ಆಗ ಭೀಷ್ಮನ ಮತ್ತು ಇತರರ ಬಾಯಲ್ಲಿ ಪಂಪ ಹೇಳಿಸುವ ಮಾತು ಇದು. **ಪುಗುವುದರಣ್ಯಂ.... ಪೋಗು ಜಯಮಕ್ಕೆ ಭದ್ರಂ ಶುಭಂ ನಿಮಗಕ್ಕೆ ಮಂಗಳಂ.** ಕುವೆಂಪು ಅವರ ರಾಮಾಯಣದಲ್ಲಿ ಆಂಜನೇಯನನ್ನು ಲಂಕೆಗೆ ಕಳುಹಿಸುವಾಗ ರಾಮನು ಹೀಗೆ ಹೇಳುತ್ತಾನೆ. **ನಿನ್ನಿಂದಮೆನ್ನ ಕಜ್ಜಂ ಸಫಲಮಪ್ಪುದೆಂದುಲಿಯುತಿರ್ಪುದೈ ಹೃದ್ವೀಣೆಯುಂ, ನಮಸ್ಕರಿಸಿ ಬೀಳ್ಕೊಳ್ವೆನಿದೊ ಹೇ ಮಹತ್ಕಾರ್ಯಪಟು ನಿನಗೆ ಮಂಗಳಮಕ್ಕೆ ಮಾರ್ಗಂ ಸುಪಥಮಕ್ಕೆ.** ಹೀಗೆ ಹೇಳುವುದರ ಜೊತೆಗೆ ಅವರೊಡನೆ ಸ್ವಲ್ಪ ದೂರ ಊರಿನ ಜಲಾಶಯದವರೆಗೆ ಹೋಗಿ ಬರುವುದು ಇತ್ತು. ಈಗಿನ ಜೀವನದಲ್ಲಿ ಕಾರಣಾಂತರಗಳಿಂದ ಇವೆಲ್ಲ ಬದಲಾಗಿವೆ ಎಂಬುದು ಸರ್ವವಿದಿತ.

**ಟ ಟೆ ಎಂಬ ಅಕ್ಷರಗಳನ್ನು ಬರೆಯುವುದು ಹೇಗೆ?** ಅಕ್ಷರಗಳನ್ನು ಮುದ್ರಿಸುವುದಕ್ಕಾಗಿ ಮೊಳೆಗಳನ್ನು ಸಿದ್ಧ ಮಾಡುವಾಗ ಬೇರೆ ಬೇರೆಯವರು ವಿವಿಧ ರೀತಿಯಲ್ಲಿ ತಯಾರಿಸುತ್ತಾರೆ. ಅದರಿಂದ ಈ ಸಮಸ್ಯೆ ಎದ್ದಿದೆ. ಇ ಕಾರದ ಗುರುತಾದ ಗುಡಿಸನ್ನು ಮೇಲ್ಭಾಗದಲ್ಲಿ ಬಿಡುವು ಇದ್ದರೆ ಬಲಭಾಗದಲ್ಲಿ ಸೇರಿಸಬೇಕು. ಬ ಎಂಬುದು ಬಿ, ಚ, ಚಿ, ಟ, ಟಿ ಆಗುತ್ತದೆ. ಬರವಣಿಗೆಯಲ್ಲಿ ಟೆ ಎಂದೂ ಆಗಿಬಿಡಬಹುದು. ಟೆ- ಇದು ಟೆ, ಸರಿಯಾಗಿದೆ. ಮುದ್ರಾಕ್ಷರಗಳು ಕೆಲವು ವೇಳೆ ಸರಿಯಾಗಿರುವುದಿಲ್ಲ.

**ಟೀಕೆ** ಎನ್ನುವುದು ಒಂದು ಕ್ಲಿಷ್ಟವಾದ ಗ್ರಂಥವನ್ನು ಕುರಿತು ಬರೆದ ವ್ಯಾಖ್ಯಾನ. ಅಂದರೆ ವಿವರವಾಗಿ ಹೇಳುವುದು, ಒಂದು ಕ್ಲಿಷ್ಟವಾದ ವ್ಯಾಖ್ಯಾನದ ಮೇಲೆ ಬರೆದ ಗ್ರಂಥಕ್ಕೂ ಟೀಕೆಯೆಂಬ ಹೆಸರಿದೆ. ಈ ಎರಡು ಬಗೆಯ ಗ್ರಂಥಗಳಲ್ಲಿಯೂ ಸ್ವಂತವಾದ ಆಳವಾದ ಅಭ್ಯಾಸದ ಪರಿಣಾಮ ಕಂಡುಬರುತ್ತದೆ. ಸಂಸ್ಕೃತದಲ್ಲಿ ಇಂಥ ಗ್ರಂಥಗಳು ಹೇರಳವಾಗಿವೆ. ಕನ್ನಡದಲ್ಲಿ ಕಡಮೆ. ಕನ್ನಡದಲ್ಲಿ 'ಟೀಕೆ' ಎಂಬ ಶಬ್ದವನ್ನು ಈಗೀಗ 'ದೋಷಾರೋಪಣೆ' ಎಂಬ ಅರ್ಥದಲ್ಲಿಯೇ ಹೆಚ್ಚಾಗಿ ಪ್ರಯೋಗಿಸುತ್ತಾರೆ.

**ಟೆಂಡರು** ಇಂದು ಇಂಗ್ಲಿಷಿನ Tender ಎಂಬ ಶಬ್ದದಿಂದ ಬಂದದ್ದು. ಇಂಗ್ಲಿಷಿಗೆ ಲ್ಯಾಟಿನ್ ಭಾಷೆಯಿಂದ ಬಂದದ್ದು. ಇದು ಇಂಗ್ಲಿಷಿನಲ್ಲಿ ನಾಮಪದವಾಗಿಯೂ ಕ್ರಿಯಾಪದವಾಗಿಯೂ ಪ್ರಯೋಗದಲ್ಲಿದೆ. ಕನ್ನಡದಲ್ಲಿ ನಾಮಪದವಾಗಿ ಮಾತ್ರ ಇದೆ. ಇದಕ್ಕೆ ಒಪ್ಪಿಗೆಗಾಗಿ ಕಳುಹಿಸಿದ ಕೆಲಸದ ಖರ್ಚಿನ ವಿವರ ಎಂದರ್ಥ.

**ಟೊಮಾಟೊ Tomato ಶಬ್ದಕ್ಕೆ ಕನ್ನಡದಲ್ಲಿ ಬೇರೆ ಶಬ್ದವೇ ಇಲ್ಲವೇ?** ಇಲ್ಲದೆ ಏನು? ಇದೆ. ಅದನ್ನು ಗೂದೆಹಣ್ಣು ಎಂದು ಕರೆಯುತ್ತಿದ್ದರು. ತೆಲುಗಿನಲ್ಲಿ ಅದು ಅವಗೂದೆ. ಅದು ನಮ್ಮಲ್ಲಿ ತಿಪ್ಪೆಗುಂಡಿಗಳಲ್ಲಿ ಬೆಳೆಯುತ್ತಿದ್ದುದರಿಂದ ಈ ಹೆಸರು ಬಂದಿತ್ತು. ಈಚೆಗೆ ಕಸಿ ಮಾಡಿ ಆ ಬೆಳೆಯನ್ನು ಉತ್ತಮ ತಳಿಗಳಲ್ಲಿ ಸಮೃದ್ಧವಾಗಿ ಸೃಷ್ಟಿ ಮಾಡಿದ್ದಾರೆ. ಅದರಿಂದ ಟೊಮಾಟೋ ಎಂಬ ಹೆಸರೇ ಪ್ರಚಾರದಲ್ಲಿದೆ. ಅದೇ ಶಬ್ದವನ್ನು ಕನ್ನಡವೆಂದೇ ಉಪಯೋಗಿಸಬಹುದು. ತಪ್ಪೇನೂ ಇಲ್ಲ. ಗೂದೆ ಶಬ್ದ ಸಂಸ್ಕೃತದ ಗುದ =ಮಲದ್ವಾರ ಎಂಬುದರಿಂದ ಬಂದಿದೆ. ಅದರಿಂದ ಪರಿತ್ಯಕ್ತವಾಗಿದೆ.

**ಟೋಪಿ-ಟೊಪ್ಪಿಗೆ** ಹಿಂದೀ ಭಾಷೆಯ ಟೋಪಿಯೇ ಮೂಲ. ಟೊಪ್ಪಿಗೆ ಒಂದು ಪರ್ಯಾಯ ರೂಪ ಅಷ್ಟೆ. ವ್ಯತ್ಯಾಸವೇನೂ ಇಲ್ಲ. ಇದು ತಲೆಗೆ ಧರಿಸುವ ಒಂದು ಉಡುಪು. ದಕ್ಷಿಣ ಭಾರತದಲ್ಲಿ ಟೋಪಿಕಾರ್, ಟೋಪಿವಾಲ ಎಂದರೆ ಹ್ಯಾಟು ಧರಿಸುವ ಇಂಗ್ಲಿಷರವ ಎಂದು ಅರ್ಥವಿತ್ತು ಹಿಂದೆ. ಈ ವಾಕ್ಯವನ್ನು ಗಮನಿಸಿ. ''All topiwallas ..... are brothers to each other. The magistrates and judges will always decide in favour of their white brethren'' date 1874.

**ಟ್ರೈನು** ಇದು ಇಂಗ್ಲಿಷಿನ Train ಎಂಬುದರಿಂದ ಬಂದದ್ದು. ಇಂಗ್ಲಿಷಿನಲ್ಲಿ Train ಎಂಬ ಶಬ್ದಕ್ಕೆ ರೈಲು ರಸ್ತೆಯಲ್ಲಿ ಸರಿದಾಡಲು ಸಹಾಯವಾಗುವಂತೆ ಅನೇಕ ಗಾಡಿಗಳನ್ನು ಒಟ್ಟಿಗೆ ಸೇರಿಸಿ ಒಂದು ಎಂಜಿನ್‌ನಿಂದ ಎಳೆಯಲ್ಪಡುವ ಪ್ರಯಾಣ ಸಾಧನ ಎಂಬ ಅರ್ಥದ ಜೊತೆಗೆ ಬೇರೆ ಬೇರೆ ಹತ್ತು ಹನ್ನೆರಡು ಅರ್ಥಗಳಿವೆ. ಕನ್ನಡದಲ್ಲಿ ಮಾತ್ರ ಒಂದೇ ಅರ್ಥ, ರೈಲು. ರೈಲುಮಾರ್ಗ, ಈ ಶಬ್ದದಲ್ಲಿರುವ ರೈಲು ಎಂಬ ಭಾಗ ಇಂಗ್ಲಿಷಿನ Rail ಶಬ್ದದಿಂದ ಬಂದದ್ದು. Rail ಎಂದರೆ ಕಬ್ಬಿಣದ ಕಂಬಿ. ಕಬ್ಬಿಣದ ಕಂಬಿಗಳನ್ನು ಸಮಾನಾಂತರದಲ್ಲಿ ಹಾಸಿ ಮಾಡಿರುವ ದಾರಿಯೇ Rail Road or Railway. ಇದೇ ರೈಲು ಮಾರ್ಗ.

## ಠ

**ಠರಾವು** ತೀರ್ಮಾನ. ಇದು ಮರಾಠಿಯ ಠರಾವ್ ಶಬ್ದದ ಕನ್ನಡ ರೂಪ.

**ಠಳಾಯ್ಸು** ಈ ಶಬ್ದ ಹಿಂದಿಯ 'ಟಲನಾ' ಎಂಬ ಶಬ್ದದಿಂದ ಬಂದದ್ದು. ಈ ಶಬ್ದಕ್ಕೆ ಹಿಂದಿಯಲ್ಲಿ ಅನೇಕ ಅರ್ಥಗಳಿವೆ. 'ಇದ್ದಕಡೆ ಇರದಿರುವುದು. ಮುಖ್ಯವಾಗಿ 'ಅತ್ತಇತ್ತ ಸುತ್ತಾಡುವುದು.' ಟಲಾಯಿಸು ಎನ್ನುವುದೇ ಸರಿಯಾದ ಶಬ್ದ. ಅದಕ್ಕೆ ಉಚ್ಚಾರಣೆಯಲ್ಲಿ ಆ ಬಳಿಕ ಠಳಾಯ್ಸು ಎಂಬ ಮಹಾಪ್ರಾಣ ಒದಗಿಬಂದಿದೆ.

**ಠಾಕಣ** ಇದು ಅರಬ್ಬೀ ದೇಶದ ಗಿಡ್ಡಕುದುರೆಯ ಹೆಸರು. ನಮಗೆ ಹಿಂದೀ ಮೂಲಕ ಬಂದಿದೆ. ಟಾಕಣ ಎಂಬ ರೂಪವೂ ಉಂಟು.

**ಠಾಕುಠೀಕು** ಇದು ಮರಾಠಿಯ ಶಬ್ದ ಠಾಕ್‌ಠೀಕ್. ಇದಕ್ಕೆ ಎರಡು ಅರ್ಥಗಳಿವೆ: ೧. ಸುವ್ಯವಸ್ಥೆ. ೨. ಡೌಲು, ಆಡಂಬರ, Show, ಬಡಾಯಿ. ಕನ್ನಡದಲ್ಲಿ ಟಾಕುಟೀಕ್ ಎಂಬ ರೂಪವೂ ಉಂಟು. ಇಂಗ್ಲಿಷಿನ Spick and Span ಎಂಬ ನುಡಿಗಟ್ಟಿಗೆ ಸರಿಸಮಾನವಾದ ಅರ್ಥ

ಮೊದಲನೆಯದು. ಎರಡನೆಯದು ಬೆಳೆದು ಬಂದ ವ್ಯಾಪಕಾರ್ಥ. ಹಿಂದಿಯಲ್ಲಿ ಠೀಕ್‌ಠಾಕ್.

**ಠಿಕಾಣಿ** ಇದು ಮರಾಠಿಯ ಠಿಕಾಣ, ಠಿಕಾಣಾ ಎಂಬ ಶಬ್ದದಿಂದ ಬಂದಿದೆ. ಹಿಂದಿಯಲ್ಲಿ ಠಿಕಾನಾ ಎಂಬ ಶಬ್ದವೂ ಇದೆ. ಈ ಶಬ್ದಕ್ಕೆ ಸ್ಥಳ, ಜಾಗ ಎಂದು ಅರ್ಥ. ಠಿಕಾಣಿ ಊರು, ಠಿಕಾಣಿ ಹಾಕು ಎಂದರೆ ಒಂದೆಡೆಯಲ್ಲಿ ತಂಗು, ಇಳಿದುಕೊಳ್ಳು ಎಂದರ್ಥ. ಠಿಕಾಣ, ಠಿಕಾಣೇ ಎಂಬ ರೂಪಗಳೂ ಕನ್ನಡದಲ್ಲಿ ಉಂಟು.

# ಡ

**ಡಂಗಾಣಿ** ಇದು ಒಂದು ಸಣ್ಣ ಅಳತೆ. ಅಕ್ಕಿ ಮುಂತಾದ ಪದಾರ್ಥಗಳನ್ನು ಅಳೆಯಲು ಉಪಯೋಗಿಸುತ್ತಾರೆ. ಶಾಲೆಗೆ ಹೋಗುವ ಹುಡುಗ ಹುಡುಗಿಯರು ತುಂಬ ಚಿಕ್ಕ ಆಕಾರದವರಾಗಿದ್ದರೆ ಈ ಶಬ್ದ ಬಳಸುತ್ತಾರೆ. ಪಾವು, ಪಡಿ, ಎಂದು ಬಳಸುವಂತೆ.

**ಡಾಂಬರು** ಇದು ಹಿಂದೀ ಭಾಷೆಯಿಂದ ಕನ್ನಡಕ್ಕೆ ಬಂದಿದೆ. ಹಿಂದೀ ಭಾಷೆಗೆ ಮಲೆಯಾ ಭಾಷೆಯಿಂದ ಬಂದಿದೆ ಎಂದು ಊಹಿಸಲಾಗಿದೆ. ಇದಕ್ಕೆ ಟಾರೆಣ್ಣೆ ಎಂದರ್ಥ. ಇದು ಕರಿಯ ಬಣ್ಣದ ಅಂಟು ದ್ರವ. ಮರ ಮತ್ತು ಕಬ್ಬಿಣ ಮೊದಲಾದುವನ್ನು ರಕ್ಷಿಸಲು ಇದನ್ನು ಬಳಿಯುತ್ತಾರೆ. ನಗರ ಪ್ರದೇಶಗಳಲ್ಲಿಯೂ ರಾಜಮಾರ್ಗಗಳಲ್ಲಿಯೂ ರಸ್ತೆಯನ್ನು ವಾಹನ ಯೋಗ್ಯ ಮಾಡಲು ಮರಳಿನೊಡನೆ ಬೆರಸಿ ಉಪಯೋಗಿಸುತ್ತಾರೆ. ಇದೇ ಇಂಗ್ಲಿಷಿನ Asphalt.

**ಡಾಕ್ಟರ್** ಎಂಬ ಇಂಗ್ಲಿಷ್ ಶಬ್ದ ಲ್ಯಾಟಿನ್ ಭಾಷೆಯ ಡಾಕ್ಟರ್ ಎಂಬುದೇ ಆಗಿದೆ. ಆದರೆ ಲ್ಯಾಟಿನ್ ಭಾಷೆಯಲ್ಲಿ ಡಾಕ್ಟರ್ ಎಂದರೆ ಉಪಾಧ್ಯಾಯ ಎಂದರ್ಥ. ಡಾಕ್ಟ್ =ಬೋಧಿಸು ಎಂಬುದಕ್ಕೆ Or ಎಂಬ ಪ್ರತ್ಯಯ ಸೇರಿದೆ. ಇಂಗ್ಲಿಷ್ ಭಾಷೆಯಲ್ಲಿ ಡಾಕ್ಟರ್ ಶಬ್ದಕ್ಕೆ ಬೇರೆ ಬೇರೆ ಅರ್ಥಗಳಿವೆ. ೧. ಉಪಾಧ್ಯಾಯ ೨. ಒಂದು ವಿಶ್ವವಿದ್ಯಾಲಯದ ಅತ್ಯಂತ ದೊಡ್ಡ ಪದವಿಯನ್ನು ಪಡೆದವನು. ೩. ವೈದ್ಯ ೪. ಮೀನು ಹಿಡಿಯಲು ಗಾಳಕ್ಕೆ ಸಿಕ್ಕಿಸುವ ಒಂದು ಬಗೆಯ ಹಸಿರು ನೊಣ. ಕ್ರಿಯಾಪದವಾದರೆ ೧. ಔಷಧಿ ಕೊಡು, ರೋಗಕ್ಕೆ ಚಿಕಿತ್ಸೆ ನೀಡು. ೨. ಯಂತ್ರಾದಿಗಳನ್ನು ರಿಪೇರಿ ಮಾಡು. ೩. ಆಹಾರದಲ್ಲಿ ಕಲಬೆರಕೆ ಮಾಡು. ೪. ಲೆಕ್ಕಾಚಾರದಲ್ಲಿ ಚಮತ್ಕಾರವನ್ನು ತೋರಿಸು, ಅಂದರೆ ಸುಳ್ಳು ಲೆಕ್ಕವನ್ನು ತೋರಿಸು. ೫. ಮದ್ಯಗಳನ್ನು ಬೇರೆಬೇರೆ ಪ್ರಮಾಣದಲ್ಲಿ ಬೆರೆಸು ಇತ್ಯಾದಿ ಇತರ ಅರ್ಥಗಳೂ ಇವೆ. ಒಟ್ಟಿನಲ್ಲಿ ವೈದ್ಯ ಪದಕ್ಕಿಂತ ಡಾಕ್ಟರ್ ಪದಕ್ಕೆ ಅಹಿತಕರವಾದ ಅರ್ಥಗಳೂ ಬೆಳೆದುಬಂದಿವೆ. ನಮ್ಮ ವೈದ್ಯರ ಕೆಲವು ಕಥೆಗಳನ್ನು ನೆನೆದರೆ ನಮಗೂ ಹೆದರಿಕೆಯಾಗುತ್ತದೆ. ವಿಗಡ ವಿಕ್ರಮರಾಯ ಎಂಬ ನಾಟಕದಲ್ಲಿ ನಾಟಕಕಾರ ಸಂಸರು ಎರಡನೆಯ ರಾಜವೊಡೆಯರು ಆಯುರ್ವೇದ ಪಂಡಿತನ ವಿಷಪ್ರಾಶನದಿಂದ ಸತ್ತ ದೃಶ್ಯವನ್ನು ತುಂಬ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಆದರೆ ಇದು ಅಪೂರ್ವವಾದ ಘಟನೆ ಎಂಬುದು ಸಮಾಧಾನದ ಸಂಗತಿ.

**ಡಿಂಡಿಮ** ಈ ಸಂಸ್ಕೃತ ಶಬ್ದಕ್ಕೆ ಒಂದು ವಾದ್ಯ ಎಂದು ಅರ್ಥ. ಇದು ಡಿವ್ ಡಿವ್ ಎಂದು ಶಬ್ದ ಮಾಡುವುದರಿಂದ ಈ ಹೆಸರು ಬಂದಿದೆ. ಎಂದು ಟೀಕಾಕಾರರು ಹೇಳುತ್ತಾರೆ. ಹಿತೋಪದೇಶದಲ್ಲಿ **ಇತಿ ಘೋಷಯತೀವ ಡಿಂಡಿಮ** ಎಂಬ ಪ್ರಯೋಗ ಬರುತ್ತದೆ. ಕುವೆಂಪು ಅವರ **ಬಾರಿಸು ಕನ್ನಡ ಡಿಂಡಿಮವ ಓ ಕರ್ನಾಟಕ ಹೃದಯ ಶಿವ** ಎಂಬ ಪ್ರಯೋಗವನ್ನು ಗಮನಿಸಿ. ಶಿವನು ನುಡಿಸುವ ವಾದ್ಯ ಡಮರುಗ. ಆ ವಾದ್ಯವೂ ಡಂ

ಎಂದು ಶಬ್ದ ಮಾಡುವುದರಿಂದ ಆ ಹೆಸರನ್ನು ಪಡೆದಿದೆ.

**ಡಿಸೌಜ D'Souza ಎಂಬ ಹೆಸರಿನಲ್ಲಿ D ಆದಮೇಲೆ ' ಈ ವಿರಾಮ ಚಿಹ್ನೆಯನ್ನು ಏಕೆ ಹಾಕುತ್ತಾರೆ ?**

D' ಎಂಬುದು de ಎಂಬುದರ ಪ್ರತಿಯಾಗಿ ಉಪಯೋಗಿಸುತ್ತಾರೆ. ಇದಕ್ಕೆ of ಎಂದು ಅರ್ಥ. ಅದರಲ್ಲಿ e ಎಂಬುದನ್ನು ಬಿಟ್ಟಿದೆ ಎಂಬುದನ್ನು ತೋರಿಸಲು D ಪಕ್ಕದಲ್ಲಿ ಮೇಲುಗಡೆ Apostropheಯನ್ನು ಹಾಕುತ್ತಾರೆ. ಇದು ಪೋರ್ಚುಗೀಸ್ ಭಾಷೆಯ ಅಭ್ಯಾಸ.

**ಡುಮ್ಮಿ** ಮರಾಠಿ ಭಾಷೆಯಲ್ಲಿ ಡುಬಕ್ ಎಂಬ ಶಬ್ದವಿದೆ. ಇದೂ ಒಂದು ಅನುಕರಣ ಶಬ್ದ. ಡುಬಕನ್ ಎಂದೂ ಹೇಳುತ್ತಾರೆ. ಏನಾದರೂ ದೊಪ್ಪನೆ ಬಿದ್ದಾಗ ಈ ಶಬ್ದವನ್ನು ಉಪಯೋಗಿಸುತ್ತಾರೆ. ಡುಬಕ್ ಎಂದರೆ ನೀರಿನಲ್ಲಿ ಮುಳುಗುವುದು ಎಂದರ್ಥ. ಹಿಂದಿ ಭಾಷೆಯಲ್ಲಿ ಡೂಬನಾ ಎಂಬ ಶಬ್ದಕ್ಕೆ ಮುಳುಗು ಎಂಬ ಅರ್ಥ. ಇದೇ ಕನ್ನಡದಲ್ಲಿ ಡುಂಕಿ, ಡುಮ್ಕಿ ಆಗಿದೆ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದದಿರು, ನಪಾಸಾಗು, ಸೋಲು ಎಂದರ್ಥ.

**ಡೊಗರು** ಈ ಶಬ್ದ ಕನ್ನಡದ್ದು. ಇದಕ್ಕೆ ಕನ್ನಡ ಸಾಹಿತ್ಯದಲ್ಲಿ ಅನೇಕ ರೂಪಗಳಿವೆ. ಡೊಂಗಱ, ಡೊಂಗಱು, ಡೊಕ್ಕರ, ಡೊಗರು, ಡೋರು, ದೋರು, ದೊಗರು ಇತ್ಯಾದಿ. ಇವೆಲ್ಲಕ್ಕೂ *೧. ಗುಹೆಗಳು ಮರಗಳು ಇವುಗಳ ಒಳಗಿನ ರಂಧ್ರ, ಬಿಲ, ಪೊಟರೆ ೨. ಹಳ್ಳ, ಗುಂಡಿ, ಕುಳಿ, ತಗ್ಗು* ಎಂಬ ಎರಡು ಅರ್ಥಗಳಿವೆ.

**ಡೋಲಾಯಮಾನ** ತೂಗಾಡುತ್ತಿರುವ. ಯಾವ ವಿಷಯದಲ್ಲಾಗಲಿ ಒಂದು ನಿರ್ಧಾರವನ್ನು ಕೈಗೊಳ್ಳದ ಮನಸ್ಸನ್ನು ಡೋಲಾಯಮಾನ ಸ್ಥಿತಿಯಲ್ಲಿದೆ ಎಂದು ಹೇಳಬಹುದು. ಇತರ ಸಂದರ್ಭಗಳಲ್ಲಿಯೂ ಇದನ್ನು ಉಪಯೋಗಿಸಬಹುದು. ಸಂಸ್ಕೃತದ ಶಬ್ದ.

**ಡೌಲು** ಇದು ಮೂಲದಲ್ಲಿ ಅರಬ್ಬಿ ಶಬ್ದ. ಆ ಭಾಷೆಯಲ್ಲಿ ಇದಕ್ಕೆ ಪದ್ಧತಿ, ಪ್ರಚಾರ, ಸ್ವರೂಪ, ದಿಮಾಕು, ಅಲಂಕೃತ ಆಕಾರ ಎಂಬ ಅನೇಕ ಅರ್ಥಗಳಿವೆ. ಕನ್ನಡದಲ್ಲಿ ೧. ದಿಮಾಕು, ಆಡಂಬರ, ಬಡಾಯಿ ೨. ಘನತೆ, ದೊಡ್ಡಸ್ತಿಕೆ ೩. ದರ್ಪ, ಠೀವಿ ಎಂಬ ಅರ್ಥಗಳಿವೆ. ಕಂದಾಯದ ಇಲಾಖೆಯಲ್ಲಿ ಡೌಲು ಜಮಾಬಂದಿ ಎಂಬ ಒಂದು ಶಬ್ದವನ್ನು ಹಿಂದೆ ಉಪಯೋಗಿಸುತ್ತಿದ್ದರು. ಅದಕ್ಕೆ ಅಂದಾಜು, Estimate ಎಂದು ಅರ್ಥವಿತ್ತು. ಡೌಲು ಶಬ್ದದಲ್ಲಿಯೇ ಒಂದು ಡೌಲು ಇದೆ.

## ಢ

**ಢೋಂಗಿ** ಇದು ಹಿಂದೀ ಮತ್ತು ಮರಾಠೀ ಭಾಷೆಗಳಲ್ಲೂ ಪ್ರಚಾರದಲ್ಲಿರುವ ಶಬ್ದ. ಇದಕ್ಕೆ ಮೋಸ, ಸುಳ್ಳು, ವಂಚನೆ ಎಂದರ್ಥ. ಢೋಂಗಿ ಬಿಡು, ಢೋಂಗಿ ಹೊಡೆ ಎಂಬ ನುಡಿಗಟ್ಟುಗಳಿಗೆ ಸುಳ್ಳು ಹೇಳು ಎಂದರ್ಥ. ಕನ್ನಡದಲ್ಲಿ ಡೋಂಗಿ, ಡೊಂಗು, ಢೋಂಗು ಎಂಬ ಪರ್ಯಾಯ ರೂಪಗಳೂ ಇವೆ. ಮರಾಠಿಯಲ್ಲಿ ಢೋಂಗ್ ಎಂದರೆ ಮೋಸಗಾರ, ಕಪಟಿ, ವಂಚಕ ಎಂದರ್ಥ.

## ತ

**ತಂಗದಿರ** ಎಂದರೆ ಚಂದ್ರ. ತಂಪಾದ ಕದಿರು ಉಳ್ಳವನು. ಕದಿರು ಎಂದರೆ ಕಿರಣ. ಶೀತಕಿರಣ ಎಂಬ ಸಂಸ್ಕೃತದ ಕನ್ನಡ ಅನುವಾದ ಈ ಶಬ್ದ. ಇದರ ಪೂರ್ವದ ರೂಪ ತಣ್ +ಕದಿರ್ +ಅ =ತಣ್ಗದಿರ. ಅದೇ ಆ ಬಳಿಕ ತಂಗದಿರ ಆಗಿದೆ.

**ತಂಚವಂಚ** **ತಂಚಾವಂಚ** ಈ ಶಬ್ದ ತೊಂಚವಂಚ, ತೊಂಚಾವಂಚ ಇತ್ಯಾದಿ ರೂಪಗಳಲ್ಲಿಯೂ ಸಿಕ್ಕುತ್ತದೆ. ಇದು ಸಂಸ್ಕೃತದ ತ್ವಂಚ, ಅಹಂಚ, ತಂಚ, ಅಹಂಚ - ಎಂಬ ಎರಡು ಶಬ್ದಗಳ ಅಶಿಷ್ಟ ರೂಪ ಎನ್ನುತ್ತಾರೆ. ನೀನೇನು ನಾನೇನು ಎಂಬಂತೆ ಸ್ವಪ್ರತಿಷ್ಠೆಯ ಮಾತನಾಡುವ ಜಗಳದಲ್ಲಿ ಯಾವುದೂ ಬೇಗ ನಿರ್ಧಾರವಾಗುವುದಿಲ್ಲ. ಅಂಥ ಗೊಂದಲದ ಮನಸ್ಸಿನ ಸ್ಥಿತಿಯನ್ನು ಇದು ವರ್ಣಿಸುತ್ತದೆ.

**ತಂತ್ರ** ಎಂಬ ಸಂಸ್ಕೃತ ಶಬ್ದಕ್ಕೆ ಸುಮಾರು ೨೫ ಅರ್ಥಗಳಿವೆ. ಮುಖ್ಯವಾಗಿ ೧. ದಾರ, ನೂಲು, ೨. ಧಾರ್ಮಿಕ ಉತ್ಸವಗಳ ವಿಧಿ, ೩. ಶಾಸ್ತ್ರ, ೪. ಯಕ್ಷಿಣಿ ವಿದ್ಯೆ, ೫. ಉಪಾಯ, ೬. ಕಪಟೋಪಾಯ, ೭. ಸೈನ್ಯ, ೮. ರಾಜ್ಯಭಾರ ಇತ್ಯಾದಿ. ಈಚೆಗೆ ಇಂಗ್ಲಿಷಿನ Technology ಎಂಬ ಶಬ್ದಕ್ಕೆ ತಂತ್ರಜ್ಞಾನ, ತಂತ್ರವಿಜ್ಞಾನ ಎಂಬ ಶಬ್ದಗಳನ್ನು ಉಪಯೋಗಿಸುತ್ತಾರೆ. ಇದು ತುಂಬ ವ್ಯಾಪಕವಾದ ಅರ್ಥವುಳ್ಳದ್ದು. ಉದಾಹರಣೆಗೆ ಕೈಗಾರಿಕೆಯ ತಂತ್ರವಿಜ್ಞಾನ ಎಂದರೆ ಅದು ರಾಸಾಯನಿಕ, ಯಾಂತ್ರಿಕ, ಭೌತಿಕ ಶಾಸ್ತ್ರಗಳನ್ನೆಲ್ಲ ಒಳಗೊಳ್ಳುತ್ತದೆ. Technologyಎನ್ನುವುದು ಗ್ರೀಕ್ ಭಾಷೆಯ Technology = Systematic Treatment ಎಂಬ ಶಬ್ದದಿಂದ ಬಂದದ್ದು. **ತಂತ್ರಕೌಶಲ** ಎಂಬುದು ಯಾವುದಾದರೂ ಒಂದು ಸಾಧನದ ಉಪಾಯವನ್ನು ಜಾಣತನದಿಂದ ಉಪಯೋಗಿಸುವುದು. ಇದೇ Technical Skill. ಇದು ಯಂತ್ರ ಆಗಬಹುದು, ಬೋಧನೆ ಆಗಬಹುದು. ಎರಡಕ್ಕೂ ಉಪಾಯಗಳು ಬೇಕು ತಾನೆ? ತಂತ್ರಕೌಶಲಕ್ಕೆ ಸಾಧನೋಪಾಯ ಚಾತುರ್ಯ ಎಂದು ವಿವರಣೆ ನೀಡಬಹುದು.

**ತಂಬಾಕು** ಈ ಶಬ್ದ ಕನ್ನಡದಲ್ಲಿ ತಂಬಾಕ ಎಂದೂ ಪ್ರಯೋಗವಾಗುತ್ತದೆ. ಇದು ವೆಸ್ಟ್ ಇಂಡೀಸ್ ಜನಾಂಗದ ಪ್ರಾಚೀನ ಭಾಷೆಗಳಿಂದ ಸ್ಪಾನಿಷ್ ಭಾಷೆಗೆ ಮೊದಲು ಬಂತು. ಮೂಲರೂಪ ಟಬಾಕೋ Tobaco. ಇದು ಇಂಗ್ಲಿಷಿನಲ್ಲಿ Tobacco. ಅಲ್ಲಿಂದ ಹಿಂದಿಗೆ ತಂಬಾಕೂ ಎಂಬ ರೂಪಕ್ಕೆ ತಿರುಗಿತು. ಈಗ ಭಾರತದ ಎಲ್ಲ ಭಾಷೆಗಳಲ್ಲಿಯೂ ಅದು ಪರಿಚಿತ. ಇದೇ ಕೆಲವು ಕಡೆಗಳಲ್ಲಿ ಹೊಗೆಸೊಪ್ಪು ಎಂದು ಪ್ರಯೋಗವಾಗುತ್ತದೆ.

ಹೀಗೆ ಅನ್ಯ ಭಾಷೆಗಳಿಂದ ಯಾವ ಯಾವ ಮಾರ್ಗವಾಗಿ ಶಬ್ದಗಳು ಪ್ರಯಾಣ ಮಾಡುತ್ತವೆ ಎಂಬುದನ್ನು ಅಭ್ಯಾಸ ಮಾಡುವುದೇ ಒಂದು ಸೊಗಸಾದ ಶಾಬ್ದಿಕ ವ್ಯಾಸಂಗ.

**ತಕರಾರು** ಇದು ಅರಬ್ಬಿಯ ಶಬ್ದ. ತಕರಾರ್, ತಕ್ರಾರ್ ಎಂಬ ರೂಪಗಳಲ್ಲಿ ಹಿಂದಿ ಮತ್ತು ಮರಾಠೀ ಭಾಷೆಗಳಲ್ಲಿ ಸಿಗುತ್ತವೆ. ಇದಕ್ಕೆ ವಿವಾದ, ದೂರು ಎಂದರ್ಥ. ಅಡ್ಡಿ ತರುವುದು ಎಂಬ ಅರ್ಥವೂ ಇದೆ. ತಕರಾರು ತೆಗೆ, ತಕರಾರು ಹೂಡು ಎಂಬ ಎರಡು ನುಡಿಗಟ್ಟುಗಳನ್ನು ಜನರು ಉಪಯೋಗಿಸುತ್ತಾರೆ. ತಕ್ರಾರು, ತಕ್ರಾಲು ಗ್ರಾಮ್ಯ ರೂಪಗಳು.

**ತಕ್ಕಂಥ** ಹಿಂದೆ ನಮ್ಮ ವಿದ್ಯಾರ್ಥಿಗಳು ಅವರವರ ಶಾಲೆಗಳಲ್ಲಿ ನಡೆಯುವ ಚರ್ಚಾಕೂಟಗಳಲ್ಲಿ ಎಷ್ಟು ಸೊಗಸಾಗಿ ಮಾತನಾಡುತ್ತಿದ್ದರು! ಈಗ ಎಲ್ಲ ಯುವಕರೂ, ರಾಜಕೀಯ ಮುಂದಾಳುಗಳ ಭಾಷಣ ಮಾಲೆಗಳ ವೈಖರಿಯನ್ನೇ ಅನುಸರಿಸುತ್ತಿದ್ದಾರೆ. ಉದಾಹರಣೆಗೆ: ಎಂಬ ತಕ್ಕಂಥ, ಹೇಳತಕ್ಕಂಥ, ಅನುಸರಿಸತಕ್ಕಂಥ - ಎಂಬ ಬಗೆಯ 'ತಕ್ಕಂಥ' ಎಂಬ ಶಬ್ದಗಳ ಸುರಿಮಳೆಯಿಲ್ಲದೆ ಭಾಷಣವೇ ಇಲ್ಲ. ಎಷ್ಟೋ ವೇಳೆ ಪ್ರಾರಂಭವಾದ ವಾಕ್ಯ ಕೊನೆಗಾಣುವುದೇ ಇಲ್ಲ. ಎರಡು ಮೂರು ಅಸಂಪೂರ್ಣ ವಾಕ್ಯಗಳು ಆಡಂಬರದಲ್ಲಿ ಚಪ್ಪಾಳೆ ಗಿಟ್ಟಿಸುತ್ತವೆ. ಇದು ನಮ್ಮ ಭಾಷಾ ಸೌಂದರ್ಯವನ್ನು ವೃದ್ಧಿಗೊಳಿಸುವ ಬಗೆಯೇ? ವಿದ್ವಾಂಸರಾದವರು ಈಗಲೂ ಅರ್ಥಕ್ಕೆ ಸರಿಯಾದ ಶಬ್ದವನ್ನೇ ಆರಿಸಿ ಪ್ರಯೋಗಿಸುತ್ತಾರೆ. ಆಗ ಭಾಷಣಕ್ಕೆ ಆಳವಾದ ಪ್ರಭಾವದ ಮೆರುಗು ಬರುತ್ತದೆ. ಒಳ್ಳೆಯ ಭಾಷಣ ಉತ್ತಮವಾದ ಕವನದಂತೆ. ಆಯಾ ವಿಷಯಕ್ಕೆ

ಯೋಗ್ಯವಾದ ವ್ಯಾಪ್ತಿಯನ್ನೂ ಅರ್ಥವಿಸ್ತಾರವನ್ನೂ ಒಟ್ಟಂದವನ್ನೂ ಹಿತವಾದ ಪರಿಣಾಮವನ್ನೂ ಪಡೆದು ಸಾಧಾರಣವಾದ ಗುಣವನ್ನು ಮೆಟ್ಟಿ ಮೇಲೇರಿರುತ್ತದೆ. ನಮ್ಮ ಯುವಕ ಭಾಷಣಕಾರರು ಶಬ್ದಕಲ್ಪದಲ್ಲಿ ಆಸಕ್ತಿಯುಳ್ಳವರೂ, ರಮಣೀಯವಾಗಿ ಮಾತನಾಡಬಲ್ಲವರೂ ಆಗಿ ಬೆಳೆಯಬೇಕು ಎಂಬುದು ಭಾಷೆಯಲ್ಲಿ ಆಸಕ್ತರಾದವರೆಲ್ಲರ ಆಸೆ. ಈ ಅಂಥಾಂತ ಶಬ್ದಗಳನ್ನು ಭಾಷೆಯಿಂದಲೇ ಗಡೀಪಾರು ಮಾಡಬೇಕು.

**ತಕ್ಷಣ** ತತ್ +ಕ್ಷಣ = ತತ್ಕ್ಷಣ ಎಂಬುದು ಸರಿಯಾದ ಶಬ್ದ. ಇದರ ತದ್ಭವ ತಕ್ಷಣ. ಅದನ್ನೂ ಉಪಯೋಗಿಸಬಹುದು. ಈ ಶಬ್ದಕ್ಕೆ ಆ ಕ್ಷಣದಲ್ಲಿ ಎಂಬ ಅವ್ಯಯದ ಅರ್ಥ ಬರುತ್ತದೆ.

**ತಖ್ತೆ** ಇದು ಪಾರಸೀ ಭಾಷೆಯ ತಖ್ತಹ್ ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಆಯ-ವ್ಯಯ ಇವುಗಳ ವಿವರವನ್ನು ಸ್ಪಷ್ಟವಾಗಿ ತಿಳಿಸುವ ಪಟ್ಟಿ. ಕಚೇರಿಗಳ ಲೆಕ್ಕಗಳ ಪರಿಶೋಧಕರು ಈ ಪಟ್ಟಿಯನ್ನು ತುಂಬ ಗಮನವಿಟ್ಟು ಪರೀಕ್ಷಿಸುತ್ತಾರೆ, ತಪಾಸು ಮಾಡುತ್ತಾರೆ.

**ತಗಾದೆ** ಎಂಬ ಶಬ್ದ ಅರಬ್ಬಿ ಭಾಷೆಯಿಂದ ಮರಾಠಿಯ ಮೂಲಕ ಕನ್ನಡಕ್ಕೆ ಬಂದಿದೆ. ಅರಬ್ಬಿಯಲ್ಲಿ ಅದು ತಕಾಝಾ ಎಂದಿದೆ. ಅದು ಮರಾಠಿಯಲ್ಲಿ ತಕಾದಾ ಆಗಿ ಕನ್ನಡದಲ್ಲಿ ತಗಾದೆ ಆಗಿದೆ. ಇದಕ್ಕೆ ಯಾವುದಾದರೂ ಕೊಟ್ಟ ಸಾಲವನ್ನು ಹಿಂದಿರುಗಿಸುವಂತೆ ಒತ್ತಾಯಪಡಿಸುವುದು ಎಂದರ್ಥ. ಈಚೆಗೆ ಎಲ್ಲ ಬಗೆಯ ಎರವಲನ್ನು ಹಿಂದಿರುಗಿಸುವುದಕ್ಕೂ, ಅವಧಿ ಮೀರಿದಾಗ ಕೊಡಬೇಕಾದುದನ್ನು ಕೊಡುವುದಕ್ಕೂ ಮಾಡುವ ಒತ್ತಾಯಕ್ಕೆ ಅನ್ವಯಿಸುತ್ತಾರೆ. ತುಂಬ ಪ್ರಭಾವ ಬೀರುವ ಶಬ್ದ.

**ತಟವಟ** ಕನ್ನಡದಲ್ಲಿ ತಾಟಾಪೋಟ ಎಂಬುದು ಒಂದು ಶಬ್ದ. ಇದಕ್ಕೆ ಕಪಟ, ಮೋಸ ಎಂಬ ಅರ್ಥ ವ್ಯಾಪಕವಾಗಿದೆ. ಅಲ್ಲದೆ ಈ ಶಬ್ದಕ್ಕೆ ಪರ್ಯಾಯ ರೂಪಗಳೂ ಹೆಚ್ಚು. ತಾಟುಪೋಟ, ತಾಟಿಪೋಟಿ, ತಾಟೋಟು, ತಾಟುಹೋಟು, ತಟವಟ ಎಂಬ ರೂಪಗಳೆಲ್ಲ ಕನ್ನಡ ಗ್ರಂಥಗಳಲ್ಲಿ ಕಂಡುಬರುತ್ತವೆ. ಅಟಮಟ ಎಂಬ ಮತ್ತೊಂದು ಶಬ್ದವಿದೆ. ಅದಕ್ಕೂ ಇದೇ ಅರ್ಥ. ಈ ಎಲ್ಲ ರೂಪಗಳಲ್ಲಿ ತಟವಟ ಎಂಬ ರೂಪ ಆಡುಮಾತಿನಲ್ಲಿ ತುಂಬ ಪ್ರಚುರವಾಗಿದೆ. ಇದಕ್ಕೆ ಸುಳ್ಳು ಎಂಬ ಅರ್ಥವೂ ವ್ಯಾಪಕವಾಗಿದೆ.

**ತಟಸ್ಥ** ತಟ ಎಂದರೆ ನದಿಯ ದಡ; 'ಸ್ಥ' ಎಂಬ ಪ್ರತ್ಯಯವನ್ನು ಸೇರಿಸಿದರೆ ದಡದ ಮೇಲೆ ನಿಂತಿರುವವನು ಎಂದರ್ಥ. ಎಂದರೆ 'ನೀರಿನ ಪ್ರವಾಹಕ್ಕೆ ನೆಗೆಯದೆ ದಡದಲ್ಲಿ ನಿಂತಿರುವವನು' ಎಂದು ವಾಚ್ಯಾರ್ಥ. ಜಗಳವಾದಾಗ ಎರಡು ಪಂಗಡಗಳು, ಪಕ್ಷಗಳು ಇದ್ದೇ ಇರುತ್ತವೆ. ಯಾವುದಾದರೂ ಒಂದು ಕಡೆಗೆ ಸೇರಿದರೆ ಅಂಥವರೂ ಆ ಕಾರ್ಯದಲ್ಲಿ ಭಾಗಿಗಳಾಗುತ್ತಾರೆ. ಹಾಗೆ ಆಗದೆ ಯಾವ ಕಡೆಗೂ ಸೇರದೆ ಇರುವವರು ತಟಸ್ಥರು. ಇವರನ್ನೇ ಇಂಗ್ಲಿಷಿನಲ್ಲಿ Neutral - Not taking part on either side ಎಂದು ವರ್ಣಿಸುತ್ತಾರೆ.

**ತಡವರಿಸು** ಈ ಶಬ್ದಕ್ಕೂ ತಡವು ಎಂಬ ಶಬ್ದಕ್ಕೂ ಸಂಬಂಧವಿದೆ. ಇದಕ್ಕೆ ೧. ಹುಡುಕಾಡು, ತಡಕಾಡು ೨. ಕೈಯಿಂದ ನೇವರಿಸು ೩. ನಡೆಯುವಾಗ ತತ್ತರಿಸು ೪. ತಡೆದು ತಡೆದು ಮಾತನಾಡು ಎಂಬ ಅರ್ಥಗಳಿವೆ. ಆಯಾ ಸಮಯಕ್ಕೆ ಸರಿಯಾಗಿ ಅರ್ಥವಾಗುವಂತೆ ಇದನ್ನು ಉಪಯೋಗಿಸಬೇಕು. ಕತ್ತಲಲ್ಲಿ ತಡವರಿಸುವುದಕ್ಕೂ ಮಾತನಾಡುವಾಗ ತಡವರಿಸುವುದಕ್ಕೂ ವ್ಯತ್ಯಾಸವಿದೆ.

**ತತ್ವಶಾಸ್ತ್ರ** ಶಬ್ದವು ಅದರ ವ್ಯುತ್ಪತ್ತಿಯ ಪ್ರಕಾರ ತತ್ +ತ್ವ +ಶಾಸ್ತ್ರ ಆದುದರಿಂದ ತಕಾರ ಒತ್ತು ಇರಬೇಕಾದುದು ಸರಿ. ಕನ್ನಡ ಜನ ಈ ಶಬ್ದದ ಸಜಾತೀಯ ಸಂಯುಕ್ತಾಕ್ಷ ವನ್ನು ಉಚ್ಚಾರ ಮಾಡುವುದರ ಕಷ್ಟವನ್ನು ಅರಿತು 'ತತ್ವಶಾಸ್ತ್ರ' ವನ್ನು ಬಳಕೆಗೆ ತಂದಿದ್ದಾ - ಈ ಶಬ್ದವನ್ನು ಕನ್ನಡದಲ್ಲಿ ಸಮಸಂಸ್ಕೃತವಾಗಿ ಬಳಸುತ್ತಿದ್ದಾರೆ. ಇದನ್ನು ಬಹುಜ

ಪ್ರಯೋಗದ ಬಲದಿಂದ ಒಪ್ಪಿಕೊಳ್ಳುವುದು ತಪ್ಪಲ್ಲ. ಕೊನೆಗೆ ಎಲ್ಲ ವ್ಯಾಕರಣಕಾರರೂ ಪ್ರಯೋಗಶರಣರು ತಾನೇ!

**ತತ್ಸಮ ತದ್ಭವ** ಕೆಲವು ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಬಂದಾಗ ಸ್ವಲ್ಪ ವ್ಯತ್ಯಾಸಗೊಂಡ ರೂಪವನ್ನು ಪಡೆಯುತ್ತವೆ.

ಮಾಲಾ - ಮಾಲೆ, ಬಾಲಾ - ಬಾಲೆ, ಸೀತಾ - ಸೀತೆ, ಪಾರ್ವತೀ - ಪಾರ್ವತಿ, ಅರುಂಧತೀ - ಅರುಂಧತಿ ಹೀಗೆ.

ಕನ್ನಡದ ವ್ಯಾಕರಣದ ರೀತಿಯೇ ಬೇರೆ. ಸಂಸ್ಕೃತದ ವ್ಯಾಕರಣದ ರೀತಿಯೇ ಬೇರೆ. ಈ ಎರಡೂ ಭಾಷೆಗಳು ಬೇರೆ ಬೇರೆ ವರ್ಗಕ್ಕೆ ಸೇರಿರುವ ಭಾಷೆಗಳು. ಆದರೂ ಕನ್ನಡದಲ್ಲಿ ಶೇಕಡಾ ೬೦ ಕ್ಕೂ ಹೆಚ್ಚು ಸಂಸ್ಕೃತ ಶಬ್ದಗಳಿವೆ. ಇವುಗಳಲ್ಲಿ ಕೆಲವು ಅತ್ಯಲ್ಪ ವ್ಯತ್ಯಾಸಗೊಂಡವು. ಅವುಗಳನ್ನು **ಸಮಸಂಸ್ಕೃತ** ಎಂದು ಕರೆಯುತ್ತಾರೆ. ಹೆಚ್ಚು ವ್ಯತ್ಯಾಸಗೊಂಡ ಶಬ್ದಗಳನ್ನು **ತದ್ಭವಗಳು** ಎಂದು ಕರೆಯುತ್ತಾರೆ. ಹೀಗಿರುವುದರಿಂದ ಕನ್ನಡದಲ್ಲಿ ಸೀತೆ, ಸಾವಿತ್ರಿ, ಪಾರ್ವತಿ, ಶಾಸ್ತ್ರಿ ಎಂದು ಬರೆಯುವುದು ತಪ್ಪಲ್ಲ. ಅದೇ ಸರಿ, ನೀವೇ ನೋಡಿ. ಸೀತಾ ಗಂಡನೊಡನೆ ಕಾಡಿಗೆ ಹೋದಳು. ಪಾರ್ವತೀ ಶಿವನಿಗೆ ನಮಸ್ಕರಿಸಿದಳು — ಎಂಬ ವಾಕ್ಯಗಳು ಕನ್ನಡದ ಜಾಯಮಾನಕ್ಕೆ ಹೊಂದುತ್ತವೆಯೆ? ಸೀತೆ, ಪಾರ್ವತಿ ಎಂದು ಸೇರಿಸಿ ಓದಿನೋಡಿ.

**ತತ್ರಾಪಿ** ಇದು ತತ್ರ +ಅಪಿ ಎಂಬ ಎರಡು ಸಂಸ್ಕೃತ ಶಬ್ದಗಳು ಸೇರಿ ಆಗಿರುವ ಸಂಧಿ. ಇದು ಅವ್ಯಯ. ಇದಕ್ಕೆ ಅದರಲ್ಲಿಯೂ, ವಿಶೇಷವಾಗಿ, ಮುಖ್ಯವಾಗಿ ಎಂಬ ಅರ್ಥಗಳು ಬರುತ್ತವೆ. ಈಗ ಪರಿಮಳಗಳ ಬೆಲೆ ತುಂಬ ಹೆಚ್ಚಾಗಿದೆ; ತತ್ರಾಪಿ ಗಂಧದ ಎಣ್ಣೆಯ ಬೆಲೆ ಯಾರ ಕೈಗೂ ನಿಲುಕುವುದಿಲ್ಲ - ಎಂಬ ವಾಕ್ಯವನ್ನು ಪರಿಶೀಲಿಸಿ.

**ತನಿಖೆ** ಈ ಶಬ್ದಕ್ಕೆ ಪಾರಸೀ ಭಾಷೆಯ ತನಖಾಹ್ ಎಂಬುದು ಮೂಲ. ಅರಬ್ಬಿ ಮತ್ತು ಹಿಂದೀ ಭಾಷೆಗಳಲ್ಲಿ ತನಕೀಹ್. ಕನ್ನಡದಲ್ಲಿ ಈ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ತನಕಿ, ತನಿಖೆ, ತನಖಿ ಇತ್ಯಾದಿ. ಈ ಶಬ್ದಕ್ಕೆ ಶೋಧಿಸುವುದು, ತಪ್ಪಿದೆಯೇ ಎಂದು ಪರಿಶೀಲಿಸಿ ಹುಡುಕುವುದು ಎಂದರ್ಥ. ಪರೀಕ್ಷಿಸುವುದು, ವಿಶೇಷವಾಗಿ ಏನಾದರೂ ಅವ್ಯವಹಾರ ನಡೆದಿದೆ ಎಂಬ ಗುಮಾನಿ ಬಂದಾಗ ಮಾಡುವ ಪರೀಕ್ಷೆ. ಹಣಕಾಸು ವಿಚಾರದ ಪರಿಶೀಲನೆಗೆ ಹೆಚ್ಚಾಗಿ ಉಪಯೋಗವಾಗುವ ಶಬ್ದ.

**ತನುಜಾ ಎಂದರೇನು?** ತನುಜ ಎಂದರೆ ಸಂಸ್ಕೃತದಲ್ಲಿ ಮಗ. ತನುಜಾ ಎಂದರೆ ಮಗಳು. ಕನ್ನಡದಲ್ಲಿ ಅದೇ ತನುಜೆ ಎಂದಾಗುತ್ತದೆ. **ಸ್ತ್ರೀ ರತ್ನದೊಳ್ ಮಿಗಿಲೆಂಬ ಪೆಂಪಿನ ತನುಜೆಯ ಕೊಟ್ಟಂ** (ಶಾಂತಿಪುರಾಣ ೧೧-೬೯) ಎಂಬ ವಾಕ್ಯವನ್ನು ನೋಡಿ.

**ತಪರಾಕಿ, ತಪರಾಕು** ಇದು ಮರಾಠಿಯ ಚಪರಾಕ್, ತಪರಾಖ್ ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಅರ್ಥ ಅಂಗೈಯಿಂದ ಕೆನ್ನೆಗೆ ಕೊಡುವ ಏಟು, ಪೆಟ್ಟು. ಕಪಾಳಮೋಕ್ಷ ಎಂದು ಅದನ್ನು ವ್ಯಂಗ್ಯವಾಗಿ ಕರೆಯುತ್ತಾರೆ. ಸಂಸ್ಕೃತದಲ್ಲಿ ಚಪ್ ಎಂಬ ಶಬ್ದಕ್ಕೆ ಇದು ಸಂಬಂಧಪಟ್ಟಿರಬಹುದು.

**ತಪಸೀಲು - ತಹಸೀಲು** ಇದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ತಪಶೀಲ, ತಫ್ಸೀಲು; ಇದಕ್ಕೆ ವಿವರ, ಯಾದಿ ಎಂದು ಅರ್ಥ. ಇದು ಅರಬ್ಬಿಯ ತಪ್‌ಶೀಲ್ ಎಂಬ ಶಬ್ದದಿಂದ ಬಂದಿದೆ.

ತಹಸೀಲು ಎಂಬ ಇನ್ನೊಂದು ಶಬ್ದವೂ ಇದೆ. ಅದಕ್ಕೆ ಕಂದಾಯದ ವಸೂಲಿಗೆಂದು ಗೊತ್ತುಪಡಿಸಿರುವ ಒಂದು ವಿಭಾಗ. ತಾಲ್ಲೂಕು ಎಂದು ಅರ್ಥ. ಇದು ಕೂಡ ಅರಬ್ಬೀ

ಶಬ್ದ. ತಪಸೀಲ್ ಎಂಬ ಶಬ್ದದಿಂದ ಬಂದಿದೆ. ಈ ಎರಡೂ ಶಬ್ದಗಳಿಗೆ ಇರುವ ವ್ಯತ್ಯಾಸವನ್ನು ಗಮನಿಸಬೇಕು.

**ತಪಸ್ಸು** ಪರಮಾತ್ಮನನ್ನು ಕುರಿತು ಮಾಡುವ ಧ್ಯಾನವೇ ತಪಸ್ಸು. ಇದು ಶಾರೀರ ತಪಸ್ಸು, ವಾಙ್ಮಯ ತಪಸ್ಸು ಮತ್ತು ಮಾನಸ ತಪಸ್ಸು ಎಂದು ಮೂರು ವಿಧ. ಸಾತ್ವಿಕ, ರಾಜಸ, ತಾಮಸ ಎಂಬುದಾಗಿ ಮತ್ತೆ ಬೇರೆ ಮೂರು ವಿಧಗಳಿವೆ.

**ತಪೋನುಷ್ಠಾನ** ಇದನ್ನು ತಪಸ್ + ಅನುಷ್ಠಾನ ಎಂದು ಬಿಡಿಸಬೇಕು. ಸಂಧಿಯಾಗುವಾಗ ತಪಸ್ ಎನ್ನುವುದು ತಪಃ ಆಗುತ್ತದೆ. ಆಗ ತಪೋನುಷ್ಠಾನ ಎಂಬ ಶಬ್ದ ರೂಪ ಬರುತ್ತದೆ. ಇದು ವಿಸರ್ಗ ಸಂಧಿ. ತಪಸ್ಸನ್ನು ವಿಧಿ ಪೂರ್ವಕವಾಗಿ ಕೈಗೊಳ್ಳುವುದು ಎಂದರ್ಥ.

**ತಪ್ಪಲೆ - ತಪ್ಲೆ** ತಪ್ಪಲೆ ತಪ್ಲೆ ಆಗಿದೆ ಅಷ್ಟೆ. ಇದು ದೇಶ್ಯ ಶಬ್ದ. ತಮಿಳು, ತೆಲುಗು, ತುಳು ಮುಂತಾದ ಭಾಷೆಗಳಲ್ಲಿಯೂ ಇದೆ. ಇದು ಕಂಠ ಸ್ವಲ್ಪ ಚಿಕ್ಕದಾಗಿರುವ ಅನ್ನ ಮಾಡಲು ಉಪಯೋಗಿಸುವ ಪಾತ್ರೆ. ಹಿತ್ತಾಳೆಯದಾಗಬಹುದು, ತಾಮ್ರದ್ದಾಗಬಹುದು. ಹುಳಿ ಹಾಕಿ ಮಾಡುವ ಅಡಿಗೆಗೆ ಕಲಾಯಿ ಹಾಕಿರುವ ಪಾತ್ರೆಯೇ ಆಗಬೇಕು.

**ತಮ್ಮಡಿ** ಈ ಶಬ್ದದ ವ್ಯುತ್ಪತ್ತಿ ಸರಿಯಾಗಿ ತಿಳಿಯದು. ತೆಲುಗಿನಲ್ಲಿ ತಮ್ಬಳಿ, ತಮ್ಮಲಿ, ತಮ್ಮಳವಾಡು ಮುಂತಾಗಿ ಜ್ಞಾತಿ ಶಬ್ದಗಳಿವೆ. ಇದನ್ನು ಸರಳವಾಗಿ ತಮ್ಮ + ಅಡಿ ಎಂದು ಬಿಡಿಸಿ ಅರ್ಥ ಹೇಳುವುದು ಸರಿಯಾಗುವುದಿಲ್ಲ. ಈ ಶಬ್ದಕ್ಕೆ ೧. ದೇವರ ಪೂಜಾರಿ ೨. ಒಡೆಯ, ಯಜಮಾನ ೩. ಗುರು ೪. ಮುನಿ ಮುಂತಾಗಿ ಅರ್ಥಗಳಿವೆ. ಈ ಎಲ್ಲ ಅರ್ಥಗಳಿಗೂ ಕನ್ನಡದಲ್ಲಿ ಕಾವ್ಯದಲ್ಲಿ ಶಾಸನಗಳಲ್ಲಿ ಪ್ರಯೋಗಗಳಿವೆ.

**ತರಂಗಿಣಿ** ಸಂಸ್ಕೃತದಲ್ಲಿ ತರಂಗ ಶಬ್ದಕ್ಕೆ ಅಲೆ, ವೀಚಿ ಎಂದು ಅರ್ಥ. ಅಲೆಗಳಿಂದ ಕೂಡಿರುವುದು ತರಂಗಿಣಿ. ಅಂದರೆ ಹೊಳೆ, ನದಿ. **'ಮಳೆಗಾಲದ ಮಹಾತರಂಗಿಣಿಯ ಧೀರ ಶೈಲಿಯಲ್ಲಿ'** ಎಂದು ಕುವೆಂಪು ಅವರ ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಉಲ್ಲೇಖವಿದೆ.

**ತರಕಾರಿ - ಕಾಯಿಪಲ್ಲೆ** ಇವೆರಡೂ ಒಂದೇ. ಉತ್ತರ ಕರ್ನಾಟಕದಲ್ಲಿ ಕಾಯಿಪಲ್ಯ ಎಂಬ ಶಬ್ದ ಕಾಯಿಪಲ್ಲೆ ಆಗಿದೆ. ಈ ಶಬ್ದದಲ್ಲಿ ಕಾಯಿ ಮತ್ತು ಪಲ್ಯ ಎಂಬ ಎರಡು ಶಬ್ದಗಳಿವೆ. ಪಲ್ಯ ಎಂದರೆ ವ್ಯಂಜನ ಪದಾರ್ಥ. ಇದು ದೇಶ್ಯ ಶಬ್ದ. ಕಾಯಿಪಲ್ಯ ಎಂಬುದು ಜೋಡಿ ಕನ್ನಡ ಶಬ್ದ. ತರಕಾರಿ ಎಂಬುದು ಪಾರಸೀ ಭಾಷೆಯ ಶಬ್ದ. ಅದೇ ಅರ್ಥದ ಶಬ್ದ ಹಿಂದೀ ಮತ್ತು ಮರಾಠೀ ಭಾಷೆಯಲ್ಲಿಯೂ ಪ್ರಚಾರದಲ್ಲಿದೆ. ಆಶ್ಚರ್ಯವೆಂದರೆ ಸಂಸ್ಕೃತದಲ್ಲಿಯೂ ಈ ಶಬ್ದವಿದೆ. ಅದರ ರೂಪ ತರ್ಕಾರಿ. ಆದರೆ ಅದಕ್ಕೆ ಪಡುವಲ, ಹೀರೆ, ಸೋರೆ ಮುಂತಾದ ಗಿಡ ಎಂದರ್ಥ. ಸುಶ್ರುತನ ಗ್ರಂಥದಲ್ಲಿ ಈ ಶಬ್ದ ಸಿಕ್ಕಿದೆ.

**ತರಕ್ಷು** ಶಬ್ದ ಸಂಸ್ಕೃತದ್ದು. ಅದಕ್ಕೆ ಕಿರುಬ ಎಂದರ್ಥ. ಶಿವಂಗಿ ಎಂಬುದು ತೆಲುಗು ಭಾಷೆಯ ಅರ್ಥ. **ತರಕ್ಷುಶ್ಚ ಮೃಗಾಜೀವಃ** ತರಕ್ಷು ಎನ್ನುವ ಪ್ರಾಣಿ ಇತರ ಪ್ರಾಣಿಗಳನ್ನು ತಿಂದು ಬದುಕುತ್ತದೆ ಎಂದರ್ಥ. ಕನ್ನಡ ಕಾವ್ಯಗಳಲ್ಲಿ ಹುಲಿ ಎಂಬ ಅರ್ಥದಲ್ಲಿಯೂ ಬಳಸಿದೆ.

**ತರಪೇತಿ - ತರಬೇತಿ** ಈ ಶಬ್ದ ಅರಬ್ಬಿ ಭಾಷೆಯದು. ಅಲ್ಲಿ ಅದು ತರ್ಬಿಯತ್. ಇದು ಹಿಂದಿಗೆ ಬಂದಾಗ ತರಬಿಯತ್ ಆಯಿತು. ಮರಾಠಿಗೆ ಬಂದಾಗ ತರಬೇಜ್, ತರಬೇತ್, ತರಬೇದ್ ಎಂದು ಮೂರು ರೂಪಗಳನ್ನು ಪಡೆಯಿತು. ಕನ್ನಡಕ್ಕೆ ಬರುವ ವೇಳೆಗೆ ಆರು ಬೇರೆ ಬೇರೆ ರೂಪಗಳನ್ನು ಪಡೆದಿದೆ. *೧. ತರಬೇತು ೨. ತರಪೇತಿ ೩. ತರಪೇತು ೪. ತರಬಿಯತ್ತು ೫. ತರಬೇತಿ ೬. ತರ್ಬಿಯತ್ತು.* ಈ ಎಲ್ಲ ರೂಪಗಳನ್ನೂ ಕನ್ನಡದ ಬೇರೆ ಬೇರೆ ಕಡೆಗಳಲ್ಲಿ ಉಪಯೋಗಿಸುತ್ತ ಇದ್ದಾರೆ. ಇದಕ್ಕೆ ಶಿಕ್ಷಣ, ತಿದ್ದುವಿಕೆ, ಪಳಗಿಸುವಿಕೆ ಎಂದರ್ಥ.

ಈ ಸಂದರ್ಭದಲ್ಲಿ ಭಾಷಾ ಶಾಸ್ತ್ರದ ದೃಷ್ಟಿಯಿಂದ ಒಂದು ವಿವರಣೆ ನೀಡುವುದು ಅಗತ್ಯವಾಗಿದೆ. ಒಂದು ಭಾಷೆಗೆ ಮತ್ತೊಂದು ಭಾಷೆಯಿಂದ ಶಬ್ದವನ್ನು ಆಮದು ಮಾಡಿ ಎರವಲು ಪದವಾಗಿ ಒಂದು ಶಬ್ದವನ್ನು ಉಪಯೋಗಿಸುವಾಗ ಹಾಗೆ ಮಾಡುವವರು ಮೂಲಭಾಷೆಯ ಉಚ್ಚಾರಣೆಗೆ ಸಮನಾಗಿಯೇ ಪ್ರಯೋಗಿಸಲು ಪ್ರಯತ್ನ ಪಡುತ್ತಾರೆ. ಆದರೆ ಜನತೆಗೆ ಅದು ಪ್ರಯೋಜನಕರವಾಗಿ ಕಂಡು ಅದರ ಬಳಕೆ ಹೆಚ್ಚಿದಂತೆಲ್ಲ ಅದರ ರೂಪದಲ್ಲಿ ಅನೇಕ ಬದಲಾವಣೆಗಳು ಆಗುತ್ತಿವೆ. ಅವುಗಳಲ್ಲಿ ಕೆಲವಾದರೂ ಉಳಿದುಬಿಡುತ್ತವೆ. ಇದನ್ನು ತಪ್ಪಿಸುವುದಕ್ಕೆ ಆಗುವುದಿಲ್ಲ.

**ತರಲೆ** ಇದು ತುಳು ಭಾಷೆಯ ಶಬ್ದ. ಇದಕ್ಕೆ *೧. ಕಾಟ, ಹಿಂಸೆ, ಪೀಡೆ ೨. ನಿರಾಧಾರವಾದ ಆರೋಪ, ಅಪವಾದ ೩. ಅಪ್ರಯೋಜಕವಾದ ಕಿತಾಪತಿ ಎಂಬ ಅರ್ಥಗಳಿವೆ.* ಈ ಶಬ್ದಕ್ಕೆ ತರ್ಲೆ ಎಂಬ ಪರ್ಯಾಯ ರೂಪವೂ ಉಂಟು. ತರಲೆ ಮಾಡುವ ವ್ಯಕ್ತಿಯನ್ನು ಕೂಡ ಅವನೊಬ್ಬ **ಅಸಾಧ್ಯ ತರಲೆ** ಎಂದು ಕರೆಯುತ್ತಾರೆ. ಅಂಥವರಿಗಿಂತ **ಶುದ್ಧ ತರಲೆಗಳು** ಹೆಚ್ಚು ಅಪಾಯಕಾರಿ ಮನುಷ್ಯರು.

**ತರಾವರಿ, ಥರಾವರಿ** ಈ ಶಬ್ದ ಕನ್ನಡಕ್ಕೆ ಮರಾಠಿಯ ಮೂಲಕ ಬಂದಿದೆ. ಅರಬ್ಬಿ ಮತ್ತು ಪಾರಸೀ ಭಾಷೆಗಳಲ್ಲಿ ತರಹ್ ಎಂದರೆ ವಿವಿಧ, ಬೇರೆ ಬೇರೆ ಎಂದರ್ಥ. ಮರಾಠಿಯಲ್ಲಿ ಈ ಶಬ್ದವು ಬೆಳೆದು ತರ್ಹೇವಾರ್ ಎಂದಾಗಿದೆ. ಇದಕ್ಕೆ ಅರ್ಥ ಬೇರೆ ಬೇರೆಯ ಗುಣಗಳಿಗೆ ಸಂಬಂಧಿಸಿದಂತೆ. ವಿವಿಧ ಬೆಲೆಗಳಿಗೆ ಸರಿಯಾಗಿರುವಂತೆ ವರ್ಗೀಕರಣ ಮಾಡುವುದು. ಈ ಶಬ್ದವೇ ಕನ್ನಡದಲ್ಲಿ ತರಹೇವಾರು, ತರಾವಾರು, ತರಾವರಿ, ಥರಾವರಿ ಎಂಬ ರೂಪಗಳನ್ನು ಪಡೆದಿದೆ.

**ತರಿ** ನೋಡಿ: ತೆರೆ

**ತರುಣಿ** ತರುಣ ಎಂದರೆ ಯುವಕ, ಬೆಳೆಯುತ್ತಿರುವವ. ತರುಣೀ ಸ್ತ್ರೀಲಿಂಗ. ಇದರಿಂದ ತರುಣಿ ಆಗಿದೆ. ಇಲ್ಲಿ ಪ್ರಾಯ ಅಥವಾ ವಯಸ್ಸಿನ ಕಡೆಗೆ ಲಕ್ಷ್ಯ ಹೆಚ್ಚು.

**ತರುವಾಯ** ಈ ಶಬ್ದ ದ್ರಾವಿಡ ಭಾಷೆಯದು. ಇದರ ಮೂಲರೂಪ ತರುವಾಯ್. ತೆಲುಗಿನಲ್ಲಿ ತರುವಾತ, ತರುವಾಯಿ ಎಂಬ ರೂಪವನ್ನೇ ಉಪಯೋಗಿಸುತ್ತಾರೆ. ತಮಿಳಿನಲ್ಲಿ ಈಗ ತರುವಾಯ್ ಎಂದೇ ಉಪಯೋಗಿಸುತ್ತಾರೆ. ಈ ಶಬ್ದಕ್ಕೆ *೧. ಕ್ರಮ, ರೀತಿ ೨. ಸರದಿ ೩. ಸಮಯ ೪. ಬಾಯಿಪಾಠ ಮಾಡುವುದು ಎಂಬ ಅರ್ಥಗಳಿವೆ.* ಹೊಸ ಕನ್ನಡದಲ್ಲಿ ಈ ಅರ್ಥಗಳೆಲ್ಲ ಮಾಯವಾಗಿ ಆ ಬಳಿಕ, ಆಮೇಲೆ, ಮುಂದೆ, ಮತ್ತೆ ಎಂಬ ಅವ್ಯಯದ ಅರ್ಥ ಮಾತ್ರ ಉಳಿದಿದೆ. ಕುಮಾರವ್ಯಾಸನ ಕಾಲದಿಂದಲೂ ಈ ಅರ್ಥವೇ ವ್ಯಾಪಕವಾಗಿದೆ. ಆ ಕವಿಯಿಂದಲೇ ಒಂದು ವಾಕ್ಯವನ್ನು ನೋಡೋಣ: **'ರಾಯಕಟಕಾಚಾರ್ಯನಾ ತರುವಾಯ ಸೇನಾಪಟ್ಟವನು ರಾಧೇಯನಲಿ ರಚಿಸಿದನು ಮುದದಲಿ ಕೌರವರ ರಾಯ'** (ಕುಮಾರವ್ಯಾಸ ಕರ್ಣಪರ್ವ ಸಂಧಿ ೧. ಸೂಚನೆ) ಆದರೆ ದಕ್ಷಿಣ ಕನ್ನಡ ಭಾಗದಲ್ಲಿ ಈಗಲೂ ಬಾಯಿಪಾಠ ಮಾಡುವುದು ಎಂಬ ಅರ್ಥವಿದೆ.

**ತರ್ಜುಮೆ ನೋಡಿ: ಅನುವಾದ**

**ತರ್ಪಣ** ಇದು ಸಂಸ್ಕೃತದ ಶಬ್ದ. ಇದಕ್ಕೆ ತೃಪ್ತಿಪಡಿಸುವುದು ಎಂದರ್ಥ. ದೇವತೆಗಳಿಗೆ, ಪಿತೃಗಳಿಗೆ ಕೊಡುವ ಜಲಾಂಜಲಿಗೂ ಇದೇ ಶಬ್ದವನ್ನು ಉಪಯೋಗಿಸುತ್ತಾರೆ. ಯಾಗ ಮಾಡುವಾಗ ಅಗ್ನಿಗೆ ಹಾಕುವ ಸಮಿತ್ತಿಗೂ ಈ ಹೆಸರಿದೆ. ವೈದಿಕನಾದ ಗೃಹಸ್ಥನು ಪ್ರತಿನಿತ್ಯವೂ ದೇವತೆಗಳು — ಋಷಿಗಳು — ಪಿತೃಗಳು ಇವರಿಗೆ ಜಲಾಂಜಲಿಯನ್ನು ನೀಡುವುದು ಹಿಂದೆ ಪ್ರಚಾರದಲ್ಲಿತ್ತು.

**ತರ್ಪಯಂತೀ** ಇದು ಸಂಸ್ಕೃತ ಶಬ್ದ. ವೈದಿಕ ಗ್ರಂಥಗಳಲ್ಲಿ ಇವುಗಳನ್ನು ಓದಿದ ನೆನಪು

ಬಂದು, ಇವುಗಳಿಗೆ ಪ್ರಾಚೀನ ಸಾಹಿತ್ಯದಲ್ಲಿಯೂ ಪ್ರಯೋಗಗಳು ದೊರಕಬಹುದು ಎನ್ನಿಸಿತು. ತೃಪ್ ಧಾತುವಿನಿಂದಾದುದು ಈ ಶಬ್ದ. ಇದಕ್ಕೆ ತೃಪ್ತಿಯನ್ನು ಉಂಟು ಮಾಡುವವಳು. ಬಯಕೆಯನ್ನು ಪೂರೈಸುವವಳು ಎಂದು ಅರ್ಥ. ತರ್ಪಯಂತೀ ಶಬ್ದವನ್ನು ಎರಡು ಮೂರು ಸಲ ಮನಸ್ಸಿನಲ್ಲಿ ಹೇಳಿಕೊಳ್ಳುತ್ತಿರುವಾಗ ಇದ್ದಕ್ಕಿದ್ದಂತೆ **ತೃಪ್ತಾಂ ತರ್ಪಯಂತೀಂ** ಎಂಬ ಶ್ರೀಸೂಕ್ತದ ಭಾಗ ನೆನಪಿಗೆ ಬಂದಿತು. ತೃಪ್ತಾಂ = ಪೂರ್ಣವಾಗಿ ತೃಪ್ತಿ ಹೊಂದಿರುವವಳು. ತರ್ಪಯಂತೀ = ಇತರರನ್ನು ತೃಪ್ತಿಪಡಿಸುವವಳು. ಇನ್ನೂ ಸ್ವಲ್ಪ ನೆನಪನ್ನು ಹಿಂದಕ್ಕೆ ತಳ್ಳಿದಾಗ ನಮ್ಮ ತಂದೆ ನನಗೆ ಅರ್ಥ ಸಹಿತವಾಗಿ ಬೋಧಿಸಿದ್ದ ಶ್ರೀಸೂಕ್ತವೇ ಸಂಪೂರ್ಣವಾಗಿ ನೆನಪಿಗೆ ಬಂತು. ಶ್ರೀಸೂಕ್ತವು ಋಗ್ವೇದದ ಖಿಲಮಂತ್ರಗಳಲ್ಲಿ ದೊರಕುತ್ತದೆ. ಇದರಲ್ಲಿ ಒಟ್ಟು ೨೮ ಋಕ್ಕುಗಳಿದ್ದರೂ ೧೫ ಮಾತ್ರ ಮುಖ್ಯವೆಂದು ನಮ್ಮ ಹಿರಿಯರು ಹೇಳಿದ್ದ ನೆನಪು. ಪ್ರತಿನಿತ್ಯ ಈ ಸೂಕ್ತವನ್ನು ದೇವತಾರ್ಚನೆ ಮಾಡುವಾಗ ಹಿಂದೆ ನಾನೇ ಹೇಳಿಕೊಳ್ಳುತ್ತಿದ್ದ ನೆನಪಿದೆ. ನಗರ ಜೀವನದ ಪ್ರಭಾವಕ್ಕೆ ಸಿಕ್ಕಿ ದೇವತಾರ್ಚನೆಯೆಂದರೆ ದೇವರ ವಿಗ್ರಹಕ್ಕೆ ಕೈಮುಗಿಯುವ ಮಟ್ಟಕ್ಕೆ ಬಂದ ಮೇಲೆ ಈ ಶ್ರೀಸೂಕ್ತದ ಪಠಣ ಅನೇಕರ ಅಭ್ಯಾಸದಲ್ಲಿ ನಿಂತು ಹೋಗಿದೆ.

**ತಲಪು** ಈ ಶಬ್ದದ ಸರಿಯಾದ ರೂಪ ಇದು. ಇದಕ್ಕೆ ಕನ್ನಡದಲ್ಲಿ ಮುಟ್ಟು, ಸೇರು ಎಂದು ಅರ್ಥ. ನಾನು ಊರಿಗೆ ತಲಪಿದೆನು. ಪತ್ರ ನನಗೆ ತಲಪಿದೆ ಎಂಬ ಎರಡು ವಾಕ್ಯಗಳನ್ನು ನೋಡಿ. ಇದೇ ಸರಿ - ತಲಪು. ಆದರೆ ಕನ್ನಡದ ಸ್ವರಗಳು ತೀರ ದುರ್ಬಲವಾದುವು. ಆದುದರಿಂದಲೇ ಪ್ರಯೋಗದಲ್ಲಿ ಬೇರೆ ಬೇರೆ ರೂಪಗಳು ಬೆಳೆಯುತ್ತವೆ. ಹಾಗೆ ಬಂದಿರುವ ರೂಪ ತಲುಪು. ಅನೇಕರು ಉಪಯೋಗಿಸುತ್ತಾರೆ. ಎರಡನ್ನೂ ಒಪ್ಪಬೇಕು.

**ತಲಾಟ** ಇದು ಮರಾಠಿ ಶಬ್ದ. ಅದಕ್ಕೆ ತಲಾಠಿ ಎಂಬ ಪರ್ಯಾಯ ರೂಪವೂ ಉಂಟು. ಗ್ರಾಮಗಳಲ್ಲಿ ಕಂದಾಯವನ್ನು ವಸೂಲು ಮಾಡಿ, ಅದರ ಲೆಕ್ಕಗಳನ್ನು ಇಟ್ಟಿರುವ ಗ್ರಾಮಾಧಿಕಾರಿ. ಶಾನುಭೋಗ, ಕುಲಕರಣಿ, ಲೆಕ್ಕಿಗ. ಕರ್ನಾಟಕದ ಗಡಿನಾಡಿನಲ್ಲಿ ದ್ವಿಭಾಷಾವಲಯದಲ್ಲಿ ಈ ಶಬ್ದ ಈಗಲೂ ಪ್ರಚಾರದಲ್ಲಿದೆ.

**ತಲೆಗೊಂದು ಕೋಡು ಎಂದರೇನು?** ಹೀಗೆ ಹೇಳುವುದು ಮಾತಿನ ಒಂದು ಮೋಡಿ. ಯಾರಾದರೂ ಏನಾದರೂ ಒಳ್ಳೆಯ ಕೆಲಸವನ್ನು ಮಾಡಿದರೆ ಅದನ್ನು ಜನ ಮೆಚ್ಚುತ್ತಾರೆ. ಆ ಮೆಚ್ಚುಗೆ, ತಲೆಗೆ ಕೋಡು ಮೂಡಿದಂತೆ ಎಂದು ವಿವರಣೆ. ಯಾರ ತಲೆಗೂ ಕೋಡಿಲ್ಲ ತಾನೆ. ಒಳ್ಳೆಯ ಕೆಲಸ ಮಾಡಿ ಮೆಚ್ಚಿಗೆ ಗಳಿಸಿದಾತನಿಗೂ ನಿಜವಾಗಿ ಆ ಕೋಡೇನೂ ಮೂಡಿರುವುದಿಲ್ಲ. ಆದರೆ ಮೂಡಿದಂತೆ ಇತರರಿಗಿಂತ ಅವನು ಬೇರೆಯಾಗಿ ಕಾಣುತ್ತಾನೆ. ಇಂಗ್ಲಿಷ್‌ನಲ್ಲಿ A feather in one's cap ಎನ್ನುವ ರೀತಿಯ ಆಲಂಕಾರಿಕ ಮಾತು ಇದು.

**ತಲೆ ತಿರುಕ** ತಲೆತಿರುಗು +ಅ ಎಂಬುದು ಕೂಡಿದಾಗ ತಲೆತಿರುಕ ಎಂಬ ಶಬ್ದವಾಗುತ್ತದೆ. ಇದಕ್ಕೆ ತಲೆತಿರುಗುವಿಕೆ ಎಂದು ಅರ್ಥ. ತಲೆ +ತಿರಿಕ ಎಂಬುದು ಸೇರಿದಾಗಲೂ ತಲೆತಿರುಕ ಎಂಬ ರೂಪಸಿದ್ಧವಾಗುತ್ತದೆ. ಏಕೆಂದರೆ ತಿರಿಕ, ತಿರುಕ ಎರಡೂ ಪರ್ಯಾಯ ರೂಪಗಳು. ಅದಕ್ಕೆ ೧. ತಿರುಗುವವನು ೨. ಭಿಕ್ಷೆ ಬೇಡುವವನು ಎಂದು ಅರ್ಥ. ತಲೆ ತಿರುಗುತ್ತಿರುವವನು ಯಾರು ಎಂದರೆ ನಿಜವಾಗಿ ತಲೆ ತಿರುಗು = ಭ್ರಮಣ ಇರುವವನು ಅಥವಾ ಅದೇ ವ್ಯಾಪಕವಾಗಿ ತಲೆ ನಿಲ್ಲದೆ ಇರುವವನು. ಮಹಾ ಅಹಂಕಾರಿ.

**ತಲೆಮಾರು ಜೀವನ ಎಂದರೇನು?** ತಲೆಮಾರು ಎಂಬ ಶಬ್ದವನ್ನು ಇಂಗ್ಲಿಷಿನ Generation ಎಂಬ ಶಬ್ದಕ್ಕೆ ಸಮಾನವಾಗಿ ಉಪಯೋಗಿಸುತ್ತಾರೆ. ಮಕ್ಕಳು ಹುಟ್ಟುವ ವೇಳೆಗೆ ತಂದೆ ತಾಯಿಗಳಿಗೆ ಆಗಿರಬಹುದಾದ ವಯಸ್ಸು ಸುಮಾರು ೨೫-೩೦ ವರ್ಷಗಳು. ಅಷ್ಟು

ವರ್ಷಗಳ ಅವಧಿ. ಆ ಅವಧಿಯಲ್ಲಿ ಹುಟ್ಟಿದ ಒಟ್ಟು ಜನತೆಯ ಸಮೂಹ. ತಲೆಮಾರು ಜೀವನ ಎಂದರೆ ೨೫-೩೦ ವರ್ಷಗಳ ಅವಧಿಯಲ್ಲಿ ವ್ಯತ್ಯಾಸಗೊಳ್ಳುವ ಜೀವನ ವಿಧಾನ.

**ತಲೆಹರಟೆ** ಹರಟೆ ಎಂಬ ಶಬ್ದಕ್ಕೆ ಹರಟುವುದು, ಗಳಹುವುದು. ವ್ಯರ್ಥವಾದ ಮಾತನ್ನು ಆಡುತ್ತಿರುವುದು. ಅದಕ್ಕೆ ಹರಟೆ ಹೊಡೆಯುವುದು ಎಂಬುದೇ ಸರಿಯಾದ ನುಡಿಕಟ್ಟು. ಆದರೆ ಈ ಅಪಾಯದ ಗುಣ ತಲೆ ಎಂಬ ಶಬ್ದದ ಜೊತೆ ಹೇಗೆ ಸೇರಿತು ಎಂಬುದು ವಿಚಾರಣೀಯ. ಯಾರ ತಲೆಯಲ್ಲಿ ಕೇವಲ ಹರಟೆಯೇ ತುಂಬಿದೆಯೋ ಅವನು ತಲೆಹರಟೆ. ಈ ಶಬ್ದಕ್ಕೆ ತುಂಬ ವ್ಯರ್ಥವಾದ ಮಾತನ್ನಾಡುವವನು ಎಂದೇ ಅರ್ಥ. ಅವನ ಕಾರ್ಯಕ್ಕೂ ಈ ಮಾತು ಅನ್ವಯ. ಉದಾ: **'ಅವನ ತಲೆಹರಟೆ ನನಗೆ ಬೇಡ'**.

**ತವದೋಣೆ, ತವನಿಧಿ** ಕನ್ನಡದಲ್ಲಿ ತವು ಎಂಬ ಒಂದು ಕ್ರಿಯಾಪದವಿದೆ. ಇದಕ್ಕೆ ೧. *ಕಡಮೆಯಾಗು ೨. ಅಳಿ, ನಾಶವಾಗು, ೩. ವ್ಯಯವಾಗು ೪. ಕೊನೆಗೊಳ್ಳು ೫. ಅಸ್ತಮಿಸು ೬. ಬಡವಾಗು ೭. ಹಿಂಜರಿ ಮುಂತಾಗಿ ಅರ್ಥಗಳಿವೆ.* ಈ ಶಬ್ದಕ್ಕೆ ಇತರ ಶಬ್ದಗಳ ಜೊತೆ ಸಿಕ್ಕಿ ಸಮಾಸವಾದಾಗ ತವದೋಣೆ, ತವನಿಧಿ ಮುಂತಾದ ರೂಪಗಳು ಉಂಟಾಗುತ್ತವೆ. ಆಗ ಅವಕ್ಕೆ ತವದದೋಣೆ =ಬರಿದಾಗದ ಬತ್ತಳಿಕೆ. ತವನಿಧಿ =ಅಕ್ಷಯ ನಿಧಿ ಎಂಬ ಅರ್ಥಗಳು ಬರುತ್ತವೆ.

**ತವರು** ಗಂಡಿಗೆ ತವರೂರು ಯಾವುದು ಎಂದು ಕೆಲವರು ಕೇಳುತ್ತಾರೆ. ಯಾರು ಯಾರು ಅವರಿಗೆ ಬೇಕಾದವರೋ ಅವರು ವಾಸ ಮಾಡುವ ಊರುಗಳೆಲ್ಲ ಗಂಡಿಗೆ ತವರೂರೇ! ಈ ಶಬ್ದ ತಮ್ಮವರು ಎಂಬುದರಿಂದ ಬಂದಿದೆ. ಆ ಶಬ್ದ ಬೆಳೆದಿರುವುದು ಹೀಗೆ. ತಮ್ಮವರ್ - ತಮರ್ - ತವರ್ - ತವರು - ತವುರು - ತೌರು. ತವರೂರು ಎಂದರೆ ತಮ್ಮವರು ಇರುವ ಊರು. ಹೀಗೆ ತಮ್ಮವರನ್ನು ಅಧಿಕಗೊಳಿಸುತ್ತಾ ಬಾಳುವ ಬದುಕು ನಿಜವಾಗಿ ಹಿರಿಯ ಸತ್ವಗಳಿಗೆ ಮೀಸಲಾದುದು. ಅಲ್ಲವೆ? ಆದರೆ ಜನತೆಯ ಮಾತಿನಲ್ಲಿ ತವರೂರು ಎಂದರೆ ಹೆಣ್ಣು ಹುಟ್ಟಿದ ಊರು. ತವರು ಎಂದರೆ ಹುಟ್ಟಿದ ಮನೆ. ಗಂಡನ ಮನೆ, ತವರು ಮನೆ ಇವೆರಡೂ ಬೇರೆ. ಗಂಡನ ಮನೆ ಸೇರಿದ ಮೇಲೆಯೂ ಹೆಣ್ಣಿಗೆ ತವರಿನ ಮೋಹ ಹೋಗುವುದಿಲ್ಲ. ಇದು ಸ್ವಾಭಾವಿಕವಾದದ್ದು ತಾನೆ. ನೆನಪಿಡಬೇಕಾದದ್ದು ಇಷ್ಟೆ! ತವರು ಶಬ್ದದಲ್ಲಿ ಊರು ಎಂಬ ಪದ ಸೇರಿಲ್ಲ. ತವರ್‌ಗೆ ಇಂಗ್ಲಿಷಿನಲ್ಲಿ ones own people ಎನ್ನುತ್ತಾರೆ. ತವರ್ ಎನ್ನುವುದು ತಮ್ಮವರ್ ಎಂಬುದರಿಂದ ಬಂದಿದೆ ತಾನೆ. ಆಗ ಆ ಇಂಗ್ಲಿಷ್ ಪದಪುಂಜ ಸರಿಹೋಗುತ್ತದೆ. A woman's native house ಎನ್ನುವುದು Kittel ಕನ್ನಡ ನಿಘಂಟಿನಲ್ಲಿ ನೀಡಿರುವ ಅರ್ಥ.

**ತವೆ** ಹಿಂದೀ ಭಾಷೆಯ ಶಬ್ದ. ಹಿಂದಿಯ ತವಾ ಎಂಬ ಶಬ್ದದಿಂದ ಬಂದಿದೆ. ಇದೇ ಗ್ರಾಮೀಣ ಪ್ರದೇಶದಲ್ಲಿ ಉತ್ತರ ಕರ್ನಾಟಕದಲ್ಲಿ ತವಿ ಆಗಿದೆ. ರೊಟ್ಟಿಯನ್ನಾಗಲೀ, ದೋಸೆಯನ್ನಾಗಲಿ ಬೇಯಿಸಲು ಆಧಾರವಾದ ಸಾಧನ ಪಾತ್ರೆ ತವೆ.

**ತಹಸೀಲ್ದಾರ, ಮಮಲೇದಾರ** ಈ ಎರಡೂ ಅರಬ್ಬಿಯ ಶಬ್ದಗಳೇ. ತಹ್‌ಶೀಲ್, ಮುಆಮಲಾ ಎಂಬುದು ಮೂಲರೂಪಗಳು. ಇದಕ್ಕೆ ಕಂದಾಯ ವಸೂಲಿಗಾಗಿ ಮಾಡಿಕೊಂಡ ಭೂಮಿ ಭಾಗಗಳು ಎಂದರ್ಥ. ದಾರ ಎನ್ನುವುದು ಒಂದು ಪ್ರತ್ಯಯ. ಅದಕ್ಕೆ ಅಧಿಕಾರ ಹೊಂದಿರುವವನು ಎಂದರ್ಥ. ಇದಕ್ಕೆ ಮೂಲ ಪಾರಸಿಯ ದಾರ್‌ಕನ್ ಎಂಬ ರೂಪ. ಮೇಲಿನ ಎರಡಕ್ಕೂ ಒಂದೇ ಅರ್ಥ. ಕನ್ನಡದಲ್ಲಿ ಸಕಾರಕ್ಕೆ ಶಕಾರವನ್ನು ಉಪಯೋಗಿಸುವುದು ಕನ್ನಡಿಗರ ಜಾಯಮಾನ. ಮೆಣಶಿನಕಾಯಿ, ಹುಣಿಶೆಹಣ್ಣು, ಅರಿಶಿಣ ಎಂಬ ಶಬ್ದ ರೂಪಗಳನ್ನು ನೋಡಿ.

**ತಾಂಬಾಣ** ಇದು ಮರಾಠಿಯ ಶಬ್ದ. ತಾಮವಾಣ ಎಂಬುದರ ಕನ್ನಡ ರೂಪ. ಇದಕ್ಕೆ ಹಿತ್ತಾಳೆ

ಮೊದಲಾದ ಲೋಹದಿಂದ ಮಾಡಿದ ಊಟದ ತಟ್ಟೆ ಎಂದರ್ಥ. ಈ ತಂಬಾಳ, ತಂಬಾಳೆ, ತಾಂಬಾಳೆ, ತಾಂಬಂಡಿ, ತಾಬಾಣ ಎಂಬ ಬೇರೆ ಬೇರೆ ಪರ್ಯಾಯ ರೂಪಗಳಿವೆ. **'ಗೌಡ ಎಲೆ ಅಡಿಕೆಯ ತಾಂಬಾಣವನ್ನು ಮುಂದಿರಿಸಿದ'** ಎಂಬ ವಾಕ್ಯವನ್ನು ನೋಡಿ.

**ತಾಕತ್ತು** ಎಂಬುದು ಅರಬ್ಬೀ ಭಾಷೆಯ ತಾಕತ್ ಎಂಬುದರ ಕನ್ನಡ ರೂಪ. ಇದು ಹಿಂದೀ, ಮರಾಠೀ ಭಾಷೆಗಳಲ್ಲಿ ಅದೇ ರೂಪದಲ್ಲಿ ಪ್ರಯೋಗದಲ್ಲಿದೆ. ಇದಕ್ಕೆ ಅರ್ಥ ಶಕ್ತಿ, ಬಲ, ಸಾಮರ್ಥ್ಯ. ಇದಕ್ಕೂ ತಾಕೀತ್ ಎಂಬುದಕ್ಕೂ ಸಂಬಂಧವಿಲ್ಲ. ಅದೂ ಅರಬ್ಬೀ ಶಬ್ದವೇ. ಅದಕ್ಕೆ ಸೂಚನೆ, ಪುಸಲಾವಣೆ ಎಂದರ್ಥ.

**ತಾಟಪೋಟಿ** ಈ ಶಬ್ದಕ್ಕೆ ಕಪಟ, ಮೋಸ, ಸುಳ್ಳು, ವಂಚನೆ ಎಂಬ ಅರ್ಥಗಳು ಸಂದರ್ಭಾನುಸಾರ ಉಂಟಾಗುತ್ತವೆ. ಇದು ಕನ್ನಡಶಬ್ದ. ತಮಿಳು ತೆಲಗು ಭಾಷೆಗಳಲ್ಲಿ ಜ್ಞಾತಿ ಶಬ್ದಗಳು ಇವೆ. ಈ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳೂ ಇವೆ. ತಾಟಾಪೋಟಿ, ತಾಟಿಪೋಟಿ, ತಟವಟ, ತಟವಾಟ ಇತ್ಯಾದಿ. ಎಂದರೆ ಈ ಶಬ್ದವನ್ನು ಎಷ್ಟು ಜನ ಉಪಯೋಗಿಸುತ್ತಿದ್ದಾರೆ, ಅದನ್ನು ತಮಗೆ ಅನ್ವಯಿಸಲು ಅರ್ಹತೆಯನ್ನು ಸಂಪಾದಿಸಿರುವ ಜನ ಎಷ್ಟೊಂದು ಸಂಖ್ಯೆಯಲ್ಲಿ ಇದ್ದಾರೆ ಎಂಬುದು ಸ್ಪಷ್ಟ.

**ತಾತ** ತಾತಾ ಎಂಬುದು ಸಂಬೋಧನಾ ವಿಭಕ್ತಿ ರೂಪ. ಇದು ಸಂಸ್ಕೃತ ಶಬ್ದ. ಇದಕ್ಕೆ ೧. ತಂದೆ ೨. ಪೂಜ್ಯ ಮುಂತಾದ ಅರ್ಥಗಳಿವೆ. ತಾತಾಚಾರ್ಯ ಎಂದರೆ ಹಿರಿಯರಾದ ಗುರು ಎಂದರ್ಥ. ಕೆಲವು ಮನೆತನಗಳಲ್ಲಿ ಈ ಹೆಸರು ವಂಶಪರಂಪರೆಯಾಗಿ ಪ್ರಯೋಗವಾಗುತ್ತದೆ. ತಿರುಮಲೆ ತಾತಾಚಾರ್ಯಶರ್ಮರ ಹೆಸರನ್ನು ಕೇಳದ ಕನ್ನಡಿಗನಿಲ್ಲ. ಅಲ್ಲಿ ಅದು ವಂಶಪರಂಪರೆಯಿಂದ ಬಂದ ಹೆಸರು. ಬಹಳ ಪ್ರಾಚೀನ ಕಾಲದಿಂದಲೂ ಕನ್ನಡ ಸಾಹಿತ್ಯದಲ್ಲಿ ತಾತಾ ಶಬ್ದವನ್ನು ತಂದೆ ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ನಾಗವರ್ಮನ ಕಾದಂಬರಿಯಲ್ಲಿ, **ಮೋಹದೆ ತಾತಂ ಮಱುಗುತ್ತಿರ್ಪಿನಂ** (ಕಾದಂಬರಿ ಪು. ೧೮೩) ಎಂಬ ಕಡೆ ತಂದೆ ಎಂದೇ ಅರ್ಥ. ಆದರೆ ಕನ್ನಡದಲ್ಲಿ ತಾತ ಎಂಬುದನ್ನು ಅಜ್ಜ ಎಂಬ ಅರ್ಥದಲ್ಲಿಯೇ ಜನಸಾಮಾನ್ಯರು ಉಪಯೋಗಿಸುತ್ತಾರೆ. ಪು.ತಿ. ನರಸಿಂಹಾಚಾರ್ಯರು ಬರೆದ ರಾಮಾಚಾರಿಯ ನೆನಪಿನಲ್ಲಿ ಬರುವ ಒಂದು ಪದ್ಯದ ಸಾಲು ಹೀಗಿದೆ: **'ಪಲಿತ ಶಿರದ ತಾತ ರಾಯರು'** ಇಲ್ಲಿ ಅಜ್ಜ ಎಂದೇ ಅರ್ಥ. ಕೇವಲ ಮುದುಕ ಎಂಬ ಅರ್ಥವೂ ಇದೆ. ಈ ಗಾದೆಯನ್ನು ನೋಡಿ: **ಏತ ತಲೆದೂಗಿದರೆ ನೀರು ಬಂತು. ತಾತ ತಲೆದೂಗಿದರೆ ಪಗಡಿ ಬಿತ್ತು.**

ತಾತ ಶಬ್ದಕ್ಕೆ ಸ್ತ್ರೀಲಿಂಗದ ರೂಪವೇನು? ಸ್ತ್ರೀಲಿಂಗದ ರೂಪವಿರಲೇಬೇಕೆಂದು ನಿರೀಕ್ಷಿಸಬೇಕಾಗಿಲ್ಲ. ಎಷ್ಟೋ ಶಬ್ದಗಳಿಗೆ ಪುಲ್ಲಿಂಗ ರೂಪವಿಲ್ಲ. ಉದಾಹರಣೆಗೆ ಮುತ್ತೈದೆ ಶಬ್ದಕ್ಕೆ ಪುಲ್ಲಿಂಗ ರೂಪವೇನು? ಹಾಗೆಯೇ ಸೀಮಿತ ವ್ಯಾಪ್ತಿಯುಳ್ಳ ಅನೇಕ ಶಬ್ದಗಳು ಭಾಷೆಯಲ್ಲಿ ಇರುತ್ತವೆ. ಆ ವ್ಯಾಪ್ತಿಗೆ ಒಳಗಾಗಿಯೇ ನಾವು ಭಾಷೆಯನ್ನು ಉಪಯೋಗಿಸಬೇಕು. ನಾವೇಕೆ ಉಪಯೋಗಿಸಬಾರದು ಎಂದು **ತಾತಾ - ತಾತಿ** ಎಂದು ಪ್ರಯೋಗ ಮಾಡಿದರೆ ಹಾಸ್ಯಕ್ಕೆ ಗುರಿಯಾಗುತ್ತೀರಿ. ಮತ್ತೊಬ್ಬರು **ಮುತ್ತೈದ** ಎಂದು ಉಪಯೋಗಿಸಿಬಿಟ್ಟಾರು. ಪಾಟಿ ಶಬ್ದಕ್ಕೆ ಪುಲ್ಲಿಂಗವೇನು? ಆಲೋಚನೆ ಮಾಡಿ.

**'ತಾದಾತ್ಮ್ಯ'** ತದಾತ್ಮ್ಯ ಎಂಬುದು ತಪ್ಪು ಶಬ್ದ. ಅದು 'ತಾದಾತ್ಮ್ಯ' ಎಂದಿರಬೇಕು. ಇನ್ನೊಂದಾಗಿರುವಿಕೆ, ಮಗ್ನತೆ, ತಲ್ಲೀನತೆ ಎಂಬುದು ಅರ್ಥ. **'ನಟನು ರಂಗದ ಮೇಲೆ ಅಭಿನಯಿಸುವಾಗ ತಾದಾತ್ಮ್ಯ ಭಾವವನ್ನು ಹೊಂದಿರುತ್ತಾನೆ'** ಎಂಬ ವಾಕ್ಯವನ್ನು ನೋಡಿ.

**ತಾಪತ್ರಯ** ಎಂದರೆ ಮೂರು ತಾಪಗಳು. ಇವು ಹೀಗಿವೆ: ಆಧ್ಯಾತ್ಮಿಕ, ಆಧಿದೈವಿಕ ಮತ್ತು

ಆಧಿಭೌತಿಕ. ಆಧ್ಯಾತ್ಮಿಕವು ಮಾನವನ ದೇಹ ಮತ್ತು ಮನಸ್ಸಿನ ಸಂಬಂಧವಾದ ದುಃಖ, ಶುಕ್ರ ಶೋಣಿತ ದ್ರವ್ಯಗಳ ದೋಷ, ತಾಯಿಯ ಅತ್ಯಾಚಾರ, ದುಷ್ಟಾಹಾರ ಅಥವಾ ದುರಾಚಾರಗಳಿಂದ ಉಂಟಾಗುವ ವ್ಯಾಧಿ ಮುಂತಾದವು. ಆಧಿದೈವಿಕ ಎಂಬುದು ಋತುಧರ್ಮಗಳಿಂದಾಗುವ ಶೀತ, ಉಷ್ಣ, ವಾಯು ಮುಂತಾದವುಗಳಿಂದಲೂ ಉಂಟಾಗುವ ದುಃಖ. ಆಧಿಭೌತಿಕವು ಅಧಿಕ ಬಲನಾದ ದುಷ್ಟನಿಂದಲೂ ದುಷ್ಪರಿಣಾಮಗಳಿಂದಲೂ ಒದಗುವ ದುಃಖ. ಹೀಗೆ ಮಾನವನಿಗೆ ಉಂಟಾಗುವ ತಾಪಗಳನ್ನು ಹಿಂದಿನವರು ವಿಭಾಗಿಸಿದ್ದಾರೆ.

**ತಾಬಡತೋಬ** ಇದು ಮರಾಠೀ ಶಬ್ದ. ಇದಕ್ಕೆ ಕೂಡಲೇ, ತತ್‌ಕ್ಷಣ ಎಂಬ ಅರ್ಥವಿದೆ. ಕನ್ನಡದಲ್ಲಿ 'ತಾಬಡತೋಬಡ' ಎಂಬ ಬೇರೆ ರೂಪವೂ ಇದೆ. ಇದೂ ಪ್ರಚಾರದಲ್ಲಿದೆ.

**ತಾಬೇದಾರಿ** ಇದರಲ್ಲಿ ಎರಡು ಅರಬ್ಬೀ ಶಬ್ದಗಳು ಸೇರಿವೆ. ತಾಬೇ + ದಾರಿ = ಮತ್ತೊಬ್ಬರ ಅಧೀನವಾಗಿ ಮಾಡುವ ಕೆಲಸ, ಸೇವೆ, ಕೆಳದರ್ಜೆಯ ಅಧಿಕಾರ.

**ತಾಯಿತ** ತಾಯಿತ, ತಾಯತಿ, ತಾತಿ ಮುಂತಾದ ಅನೇಕ ಪರ್ಯಾಯ ರೂಪಗಳುಳ್ಳ ಈ ಶಬ್ದವು ಪಾರಸೀ ಭಾಷೆಯಿಂದ ಬಂದದ್ದು. ಆ ಭಾಷೆಯಲ್ಲಿ ಅದು ತಾಅವೀಝ್. ಇದು ಕೇಡುಕಿನಿಂದ ರಕ್ಷಣೆ ಪಡೆಯುವುದಕ್ಕಾಗಿ ಲೋಹದ ತೆಳು ತಗಡಿನಲ್ಲಿ ಯಾವುದಾದರೂ ನಕ್ಷೆ ಅಥವಾ ಮಂತ್ರವನ್ನು ಬರೆಯಿಸಿ ಸುರುಳಿಯಾಗಿ ಮಾಡಿ ಕೈ ಅಥವಾ ಕತ್ತಿಗೆ ಕಟ್ಟಿಕೊಳ್ಳುವ ಒಂದು ವಸ್ತು, ಯಂತ್ರ. ಈ ಶಬ್ದವು ಮರಾಠೀ ಹಿಂದೀ ಭಾಷೆಗಳಲ್ಲಿ ತಾಈತ್ ಎಂದು ಉಪಯೋಗವಾಗುತ್ತಿದೆ. ಈ ಅರ್ಥದ ಶಬ್ದ ಇಂಗ್ಲಿಷಿನಲ್ಲಿ Talisman.

**ತಾರಾತಿಗಡಿ** ಶಬ್ದದಲ್ಲಿ ತಿಗಡಿ, ತಿಕಡಿ ಎಂಬ ಶಬ್ದ ಹಿಂದಿಯಿಂದ ಬಂದಿರಬಹುದು. ತಿಗಡಮ್ ಎಂದರೆ ಅನ್ಯಾಯ, ಅಕ್ರಮ, ಮೋಸ ಎಂದರ್ಥ. ಕನ್ನಡದ ತಾರುಮಾರು ಎಂಬ ಶಬ್ದಕ್ಕೆ ಅಕ್ರಮ ಎಂಬ ಅರ್ಥವಿದೆ. ಈ ಎರಡರ ಸಂಬಂಧದಿಂದ ತಾರಾತಿಗಡಿ ಬಂದಿರಬಹುದು.

**ತಾರೀಫು** ಇದು ಅರಬ್ಬಿಯ ತಾರೀಫ್ ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ಹೊಗಳಿಕೆ, ಮೆಚ್ಚಿಕೆ, ಶಹಬಾಸ್ ಗಿರಿ ಎಂದರ್ಥ. ಆಲಂಕಾರಿಕವಾಗಿ ಚೇಷ್ಟೆ ಎಂಬ ಅರ್ಥವೂ ಇದೆ. ಇದು ಮಾತಿನ ವ್ಯಂಗ್ಯಕ್ಕೆ ಸೇರಿದ ಅರ್ಥ. ತಾರೀಫು ಎಂಬ ರೂಪವೂ ಕನ್ನಡದಲ್ಲಿದೆ.

**ತಾರೀಖು - ತಾರೀಕು** ತಾರೀಖ್ ಎಂಬುದು ಅರಬ್ಬೀ ಮತ್ತು ಪಾರಸೀ ಭಾಷೆಯ ಶಬ್ದ. ಕನ್ನಡದಲ್ಲಿ ಎರಡು ರೂಪವೂ ಸರಿ. ಇದು ದಿನಾಂಕವನ್ನು ಸೂಚಿಸುತ್ತದೆ.

**ತಾಲ, ದೊಡ್ಡಿ, ಕೊಪ್ಪಲು, ಗೋಡು, ಸಂದ್ರ: ಮುಂತಾದ ಶಬ್ದಗಳ ಅರ್ಥವೇನು?** ಭಾಷಾಶಾಸ್ತ್ರದಲ್ಲಿ Onomastics ಎಂಬ ಒಂದು ವಿಭಾಗವಿದೆ. ಹೆಸರುಗಳ ಮೂಲವನ್ನು ಅವುಗಳ ಅರ್ಥವನ್ನು ಕುರಿತು ನಡೆಸುವ ವ್ಯಾಸಂಗಕ್ಕೆ ಈ ಹೆಸರು ಸಲ್ಲುತ್ತದೆ. ಇದರಲ್ಲಿ ಎರಡು ಉಪ ವಿಭಾಗಗಳಿವೆ. ಅವುಗಳು toponymy ಮತ್ತು anthroponymy; ಕನ್ನಡದಲ್ಲಿ ನಾವು onomastics ಎಂಬುದನ್ನು 'ನಾಮ ವಿಜ್ಞಾನ ಶಾಸ್ತ್ರ' ಎಂದು ಕರೆಯಬಹುದು. ಸ್ಥಲನಾಮಗಳು ಮತ್ತು ಜಲಸ್ಥಲನಾಮಗಳು ಎಂಬುದು toponymy ಆದರೆ, ವ್ಯಕ್ತಿ ನಾಮವು anthroponymy ಆಗುತ್ತದೆ. ಈ ಶಾಸ್ತ್ರಗಳ ಸೂತ್ರಗಳನ್ನು ಆಧರಿಸಿ ಸ್ಥಳನಾಮ ಜಲಸ್ಥಳನಾಮ ಮತ್ತು ವ್ಯಕ್ತಿನಾಮಗಳ ಅರ್ಥವನ್ನು ವಿಸ್ತಾರವಾಗಿ ಸ್ಪಷ್ಟಪಡಿಸಬಹುದು. Language in culture and society ಎಂಬ ಇಂಗ್ಲಿಷ್ ಗ್ರಂಥದಲ್ಲಿ ಈ ಬಗ್ಗೆ ತುಂಬ ವಿಚಾರಗಳು ಸಿಕ್ಕುತ್ತವೆ. ಕನ್ನಡದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ 'ಕನ್ನಡ ನಾಮ ವಿಜ್ಞಾನ' ಗ್ರಂಥದಲ್ಲಿ ಸಾಕಷ್ಟು ವಿವರಗಳಿವೆ.

**ತಾಲೀಮು** ಈ ಶಬ್ದವು ಅರಬ್ಬಿ ಭಾಷೆಗೆ ಸೇರಿದ್ದು. ಅಲ್ಲಿ ಅದು ತಅಲೀಮ್ ಎಂದಿದೆ. ಹಿಂದೀ ಮತ್ತು ಮರಾಠಿ ಭಾಷೆಗಳಲ್ಲಿ ತಾಲೀಮ್ ಆಗಿದೆ. ಅಲ್ಲಿಂದ ನಮಗೆ ಅದೇ ರೂಪದಲ್ಲಿ

ಬಂದು ಹಾಗೇ ಉಪಯೋಗವಾಗುತ್ತ ಇದೆ. ಇದಕ್ಕೆ ಶಾರೀರಿಕ ವ್ಯಾಯಾಮ ಎಂದು ಅರ್ಥ. ಎಲ್ಲ ಬಗೆಯ ಅಭ್ಯಾಸಗಳಿಗೂ ಈಗೀಗ ಅನ್ವಯವಾಗುತ್ತ ಇದೆ. 'ಪರೀಕ್ಷೆಗೆ ತಾಲೀಮು ಹೇಗೆ ನಡೆಯುತ್ತಾ ಇದೆ?' ಎಂದು ಕೇಳುವುದೂ ಉಂಟು. 'ರಂಗತಾಲೀಮು' ನಾಟ್ಯ ಅಥವಾ ನಾಟಕ ಪ್ರದರ್ಶನಕ್ಕೆ ಮುಂಚೆ ಮಾಡುವ ಸಿದ್ಧತೆ.

**ತಾಲ್ಲೂಕು, ತಾಲ್ಲೋಕು, ತಾಲೂಕು** ಎಂಬ ಮೂರು ಶಬ್ದ ರೂಪಗಳಲ್ಲಿ ಯಾವುದು ಸರಿ? ಈ ಮೂರು ರೂಪಗಳು ಒಂದೇ ಶಬ್ದದ ಪರ್ಯಾಯ ರೂಪಗಳು ಮೂರನ್ನೂ ಉಪಯೋಗಿಸಬಹುದು. ಕೆಲವು ಶಬ್ದಗಳಿಗೆ ಹೀಗೆ ಪರ್ಯಾಯ ರೂಪಗಳಿರುವುದುಂಟು. ಈ ಶಬ್ದ ಅರಬ್ಬೀ ಭಾಷೆಯ ತಅಲ್ಲುಕಹ್ ಎಂಬ ಶಬ್ದದಿಂದ ಹಿಂದೀ ಭಾಷೆಯ ಮೂಲಕ ಕನ್ನಡಕ್ಕೆ ಬಂದಿದೆ. ಹಿಂದಿಯಲ್ಲಿ ತಾಲ್ಲೂಕಾ, ತಅಲ್ಲುಕಾ ಎಂಬ ಪರ್ಯಾಯ ರೂಪಗಳಿವೆ. ಮರಾಠಿಯಲ್ಲಿ ತಾಲೂಕಾ, ತಾಲುಖಾ ಎಂಬ ರೂಪಗಳಿವೆ. ಈ ಎಲ್ಲ ಭಾಷೆಗಳಲ್ಲಿಯೂ ಇದಕ್ಕೆ ಜಿಲ್ಲೆಯ ಒಂದು ಭಾಗ ಎಂದು ಅರ್ಥ. ಒಬ್ಬ ಅಮಲ್ದಾರನ ಅಥವಾ ಅವನ ಅಧಿಕಾರಕ್ಕೆ ಸಮಾನ ಅಧಿಕಾರವುಳ್ಳವನ ಆಡಳಿತಕ್ಕೆ ಒಳಪಟ್ಟ ಪ್ರದೇಶ ಎಂಬುದು ವಿವರಣೆ.

**ತಿಕ್ಕಲು** ಇದು ದ್ರಾವಿಡ ಶಬ್ದ. ಹುಚ್ಚು ಎಂದರ್ಥ. ಭ್ರಮೆ ಹೊಂದಿದ ಗುಣವನ್ನು ತಿಳಿಸುತ್ತದೆ. ಇಲ್ಲಿನ ಲು ಪ್ರತ್ಯಯ ತೆಲುಗಿನ ಬಹುವಚನ ಪ್ರತ್ಯಯವಿರಬಹುದು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಗಮ ಗಮಲು ಇದ್ದ ಹಾಗೆ.

**'ತಿಥಿ' - 'ಪರಿಸ್ಥಿತಿ'** 'ತಿಥಿ' ಗೂ 'ಪರಿಸ್ಥಿತಿ' ಮುಂತಾದ ಶಬ್ದಗಳಿಗೂ ಪರಸ್ಪರ ಸಂಬಂಧವಿಲ್ಲ. ಚಂದ್ರನ ಕಲೆಗಳು ವೃದ್ಧಿಯಾಗುತ್ತ ಕ್ಷೀಣಿಸುತ್ತ ಹೋಗುವ 'ಪಾಡ್ಯ' ಮೊದಲಾದ ೧೫ ದಿವಸಗಳಿಗೆ ಪ್ರತಿಯೊಂದಕ್ಕೂ 'ತಿಥಿ' ಎಂದು ಹೆಸರು. ಶುಕ್ಲ ಪಕ್ಷದ ಕೊನೆಯಲ್ಲಿ ಹುಣ್ಣಿಮೆ ಬಂದರೆ ಕೃಷ್ಣ ಪಕ್ಷದ ಕೊನೆಯಲ್ಲಿ ಅಮಾವಾಸ್ಯೆ ಬರುತ್ತದೆ. 'ಪರಿಸ್ಥಿತಿ' ಯಲ್ಲಿ ಇರುವುದು 'ಸ್ಥಿತಿ'. ಇದಕ್ಕೆ 'ಪರಿ' ಎಂಬ ಉಪಸರ್ಗ ಹಿಂದೆ ಸೇರಿದೆ. 'ಸ್ಥಿತಿ-ಗತಿ' ಪದಪುಂಜ ನೋಡಿ.

**ತಿಮಿರ** ಎಂದರೆ ಸಂಸ್ಕೃತದಲ್ಲಿ ಕತ್ತಲೆ ಎಂದರ್ಥ. ಕನ್ನಡದಲ್ಲಿ ತಿಮಿರ ತಿಮಿರು ಎಂಬ ಮತ್ತೊಂದು ಶಬ್ದವಿದೆ. ಇದಕ್ಕೆ ೧. ನವೆ, ಕಡಿತ ೨. ಜಂಬ, ಸೊಕ್ಕು, ಗರ್ವ ಎಂಬ ಅರ್ಥಗಳಿವೆ. ಮೊದಲನೆಯದಕ್ಕೆ ಉದಾಹರಣೆಗೆ (ಸಂಭವಪರ್ವ ೬.೨೭) **ನಿಮ್ಮಯ ಭುಜದ ತಿಮಿರವು ಶೂನ್ಯವಹುದೆಂದ.** ಎರಡನೆಯದಕ್ಕೆ ಉದಾಹರಣೆ **ಅವನಿಗೆ ತಾನು ಕಲಿತುದನ್ನು ತೋರಿಸಿಕೊಳ್ಳಬೇಕೆಂಬ ತಿಮಿರು ಹೆಚ್ಚಾಗಿತ್ತು** ಎಂಬ ವಾಕ್ಯವನ್ನು ಗಮನಿಸಿ.

**ತಿರು** ಇದು ಶ್ರೀ ಎಂಬ ಶಬ್ದದ ತದ್ಭವ ತಮಿಳಿನಲ್ಲಿ.

**ತಿರುಪೆ - ತಿರುವು - ತಿರುಕ** ತಿರಿ ಎಂಬ ಶಬ್ದಕ್ಕೆ ೧. ಸುತ್ತಾಡು ೨. ಭಿಕ್ಷೆ ಬೇಡು ೩. *ಹೊಸೆ, ತಿರಿಚು ಎಂಬ ಅರ್ಥಗಳಿವೆ.* ಈ ಧಾತುವಿನಿಂದ ತಿರಿಕ ಎಂಬ ಶಬ್ದವಾಗುತ್ತದೆ. ಅದಕ್ಕೆ ಭಿಕ್ಷುಕ ಎಂದು ಅರ್ಥ. ಅದೇ ಶಬ್ದ ತಿರುಕ ಎಂಬ ಬೇರೆಯ ರೂಪವನ್ನು ಪಡೆದಿದೆ. ತಿರುಪೆ, ತಿರುಪ ಮುಂತಾದ ರೂಪಗಳು ತಿರಿ ಶಬ್ದದಿಂದಲೇ ಬಂದಿವೆ. ಇದಕ್ಕೆ ಭಿಕ್ಷೆ ಕೇಳುವುದು ಎಂದು ಅರ್ಥ. ತಿರುಬೋಕಿ ಇದು ತಿರಿಪೆ ಎತ್ತುವವನ ಮಣ್ಣಿನ ಮಡಿಕೆಯ ಚೂರು. ತಿರುಗಾಟ ಮತ್ತು ತಿರುಗು ಮುರುಗು ಎಂಬ ಶಬ್ದಗಳಿಗೆ ತಿರುಗು ಎಂಬುದು ಮೂಲಶಬ್ದ. ಈ ಧಾತುವಿಗೆ ಸುತ್ತು, ಅಲೆದಾಡು, ಎಂದರ್ಥ. ಹಾಗೆ ಅಲೆದಾಡುವಿಕೆಯೇ ತಿರುಗಾಟ. ತಿರುಗು +ಮುರುಗು ಎಂಬೆರಡು ಶಬ್ದಗಳಲ್ಲಿ ಮುರುಗು ಎಂಬುದು ಮುರಿ ಎಂಬ ಧಾತುವಿನಿಂದ ಬಂದುದು. ಮುರಿ ಎಂದರೆ ಹಿಂದಕ್ಕೆ ತಿರುಗು ಎಂದರ್ಥ. ಆದುದರಿಂದ ತಿರುಗು - ಮುರುಗು ಎಂದರೆ ಹಿಂದು ಮುಂದಾಗುವುದು.

**ತಿರುಳು, ತಿಳಲು** ತಿರುಳು ಎಂದರೆ ಸಾರ, ಸರ್ವಸ್ವ, ಪ್ರಧಾನ ಭಾಗ ಎಂಬುದು ಅರ್ಥ.

ತಿಳಲು ಎಂಬ ಬೇರೆಯ ರೂಪವೂ ಉಂಟು. ತಿರುಳ್ಗನ್ನಡ ಎಂದರೆ ಸತ್ವಯುತವಾದ ಕನ್ನಡಭಾಷೆ ಎಂದರ್ಥ. **ಪುಲಿಗೆಱೆಯ ತಿರುಳ ಕನ್ನಡ** ಎಂದು ಪಂಪ ಹೇಳಿದರೆ ರನ್ನ, **ತಿರುಳ ಕನ್ನಡಂ ಮಧುರಮ್ಯೋತ್ವನ್ನಂ** ಎನ್ನುತ್ತಾನೆ. ನಮ್ಮ ಕವಿಗಳಿಗೆ ಕನ್ನಡ ಭಾಷೆಯೆಂದರೆ ಅಷ್ಟು ಅಭಿಮಾನ. ಕನ್ನಡದಲ್ಲಿ ಎಷ್ಟು ಹುರುಳು ಇದೆ ಎಂಬುದನ್ನು ತಿಳಿಯಲು ನಮ್ಮ ಪ್ರಾಚೀನ, ಆಧುನಿಕ ಕಾವ್ಯರಾಶಿಯಲ್ಲಿ ಮುಳುಗಿ ಏಳಬೇಕು. ಆಗ ನಿಮ್ಮ ಸ್ವಂತ ಹುರುಳು ಅಧಿಕಗೊಳ್ಳುತ್ತದೆ.

**ತಿರೋಧಾನ** ಅಂತರ್ಧಾನವಾಗುವುದು, ಕಣ್ಣಿಗೆ ಕಾಣದಾಗುವುದು, ಇದು ಸಂಸ್ಕೃತ ಶಬ್ದ.

**ತಿರೋಹಿತ** ಇದು ಸಂಸ್ಕೃತದ ಶಬ್ದ. ಇದಕ್ಕೆ ಕಣ್ಣಿಗೆ ಕಾಣದಂತಾಗುವುದು ಎಂದರ್ಥ. ಅಂತರ್ಧಾನವಾಗು, ಕಾಣದಿರು, ದೃಷ್ಟಿಗೆ ಅಗೋಚರವಾಗು ಎಂದರ್ಥ.

**ತಿಲಕಾಲಕ** ಇದು ಎರಡು ಪದಗಳು ಸೇರಿರುವ ಸಮಾಸ. ತಿಲಕ + ಅಲಕ = ಹಣೆಯ ಕುಂಕುಮ ಮುಂತಾದ ಅಲಂಕಾರ ಮತ್ತು ಅಲಕ ಎಂದರೆ ಮುಂಗುರುಳು.

**ತಿಲಾಂಜಲಿ** ಎಂದರೆ ಅಂಜಲಿಯಲ್ಲಿ ಅಂದರೆ ಕೈಬೊಗಸೆಯಲ್ಲಿ ಎಳ್ಳನ್ನು ಇಟ್ಟುಕೊಳ್ಳುವುದು ಮತ್ತು ಅದಕ್ಕೆ ನೀರನ್ನು ಹಾಕಿ ನೆಲಕ್ಕೆ ಬಿಡುವುದು. ಇದೇ ಎಳ್ಳು ನೀರು ಬಿಡುವುದು ಎಂದು ಹೇಳುತ್ತಾರೆ. ಇದು ಒಂದು ಕರ್ಮ. ಸತ್ತವರಿಗೆ ತರ್ಪಣ ಕೊಡುವುದು ಎಂದು ಅದರ ಹೆಸರು. ಈ ನುಡಿಗಟ್ಟಿಗೆ ವ್ಯಾಪಕವಾದ ಅರ್ಥವೂ ಬೆಳೆದು ಬಂದಿದೆ. ಯಾವುದಾದರೂ ನಷ್ಟವಾದರೆ ಆಗ ಅದಕ್ಕೆ ಎಳ್ಳು ನೀರು ಬಿಟ್ಟುಬಿಡು ಎನ್ನುತ್ತಾರೆ. ಅಂದರೆ ಇನ್ನು ಅದು ನಿನಗೆ ಹಿಂದಕ್ಕೆ ಬರುವುದಿಲ್ಲ ಎಂದರ್ಥ.

**ತಿಳಿಗನ್ನಡ** ಈ ಶಬ್ದಕ್ಕೆ ಬೇಗ ಇತರರಿಗೆ ತಿಳಿಯುವ ಕನ್ನಡ, ಸರಳ ಕನ್ನಡ, ಸುಲಭ ಕನ್ನಡ ಎಂದರ್ಥ. ತಲೆನೋವಿನಿಂದ ನರಳುತ್ತಿದ್ದೇನೆ ಎಂಬುದು ತಿಳಿಗನ್ನಡ. **ಶಿರೋವೇದನೆಯಿಂದ ಜರ್ಜರಿತನಾಗಿದ್ದೇನೆ** ಎನ್ನುವುದು ತಿಳಿಗನ್ನಡವಲ್ಲ.

**ತಿಳಿವಳಿಕೆ** ಸರಿಯಾದ ಶಬ್ದ. ಇದು ತಿಳಿ ಎಂಬ ಧಾತುವಿನಿಂದ ಬಂದುದು. ಈಚೆಗೆ ತಿಳುವಳಿಕೆ ಎಂಬುದೂ ಪ್ರಚಾರದಲ್ಲಿದೆ. ಅದು ಸರಿಯಾದ ಶಬ್ದವಲ್ಲ. ಸರಿ ಯಾವುದು, ಪ್ರಚಾರದಲ್ಲಿರುವುದು ಯಾವುದು ಎಂದು ತಿಳಿದಿದ್ದರೆ ಸಾಕು.

**ತೀಕ್ಷ್ಣ** ಇದು ಸಂಸ್ಕೃತ ಶಬ್ದ. ತೀಕ್ಷ್ಣ ಶಬ್ದಕ್ಕೆ ಅನೇಕ ಅರ್ಥಗಳಿವೆ. ಇದು ತುಂಬ ವ್ಯಾಪಕವಾದ ಅರ್ಥ ವಿಶೇಷದಿಂದ ಕೂಡಿದುದು. ಸುಮಾರು ಇಪ್ಪತ್ತು ಅರ್ಥಗಳಿವೆ. ಹರಿತವಾದ, ಕಠಿಣವಾದ, ಬಿಸಿಯಾದ ಎಂಬವು ಮುಖ್ಯವಾದ ಅರ್ಥಗಳು.

**ತೀಟೆ** ಇದು ಕನ್ನಡ ಶಬ್ದ. ಇದಕ್ಕೆ ಮೂಲ ರೂಪ ತೀಂಟೆ. ಈ ಶಬ್ದಕ್ಕೆ ಕೆಲವು ಅರ್ಥಗಳಿವೆ. *೧. ನವೆ, ತುರಿಕೆ, ಕಡಿತ ೨. ತೀವ್ರವಾದ ಬಯಕೆ, ಚಾಪಲ್ಯ, ಅಪೇಕ್ಷೆ ೩. ಬೆದೆ, ನಸೆ, ೪. ಚೇಷ್ಟೆ ೫. ಆವಶ್ಯಕತೆ ಎಂಬುವು ಮುಖ್ಯವಾದವು. ೧. ಕಜ್ಜಿಯ ತೀಟೆ ೨. ಮಲ್ಲರ ಭುಜದ ತೀಟೆ ೩. ಕಾಮುಕರ ತೀಟೆ ೪. ತೀಟೆಯ ಹುಡುಗ, ೫. ತೀಟೆಯಾದರೆ ತಾನೇ ಬರುತ್ತಾನೆ* ಎಂಬ ಪ್ರಯೋಗಗಳನ್ನು ಪರಿಶೀಲಿಸಿ. ತೀಟ ಎಂಬ ಪ್ರಯೋಗವೂ ಉಂಟು.

**ತೀರ್ಥ** ಶಂಕರಾಚಾರ್ಯರು ಸ್ಥಾಪಿಸಿದ ಮಠಗಳಲ್ಲಿ ಮಠಾಧಿಪತಿಗಳಾಗುವವರಿಗೆ ಇಂಥ ಹೆಸರಿನಿಂದ ಕೊನೆಯಾಗಬೇಕು ಎಂಬ ಒಂದು ಪದ್ಧತಿ ನಡೆದುಬಂದಿದೆ. ಆದುದರಿಂದ ಶೃಂಗೇರಿಯ ಶಂಕರಮಠದ ಸ್ವಾಮಿಗಳು ಸರಸ್ವತಿ, ಭಾರತಿ, ಪುರೀ ಎಂಬ ಬಿರುದನ್ನು ಸೇರಿಸುತ್ತಾರೆ. ದ್ವಾರಿಕೆಯ ಶಾರದಾಪೀಠದ ಸ್ವಾಮಿಗಳು ತೀರ್ಥ, ಆಶ್ರಮ ಎಂದು ಸೇರಿಸುತ್ತಾರೆ. ಬದರಿಕಾಶ್ರಮದ ಮಠಾಧಿಪತಿಗಳು ಗಿರಿ, ಪರ್ವತ, ಸಾಗರ ಎಂಬ ಬಿರುದನ್ನು ಹೊಂದುತ್ತಾರೆ. ಪೂರ್ವಾಮ್ನಾಯದ ಗೋವರ್ಧನ ಮಠದಲ್ಲಿ ಅರಣ್ಯ, ವನ ಎಂಬ ಹೆಸರನ್ನು ಧರಿಸುತ್ತಾರೆ. ಶೃಂಗೇರಿಗೆ **ಅಹಂ ಬ್ರಹ್ಮಾಸ್ಮಿ** ಎಂಬುದು ಮಹಾವಾಕ್ಯ.

ಪುರಿಯಮಠಕ್ಕೆ ಪ್ರಜ್ಞಾನಂ ಬ್ರಹ್ಮ. ದ್ವಾರಿಕಾ ಮಠಕ್ಕೆ ತತ್ವಮಸಿ. ಬದರಿಕಾಶ್ರಮದ ಮಠಕ್ಕೆ ಅಯಮಾತ್ಮಾ ಬ್ರಹ್ಮ ಎಂಬುವು ಮಹಾವಾಕ್ಯಗಳು.

**ತೀರ್ಥರೂಪ** ಸಂಸ್ಕೃತದಲ್ಲಿ ತೀರ್ಥ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಸುಮಾರು ಇಪ್ಪತ್ತು ಅರ್ಥಗಳಿವೆ. ಅವುಗಳಲ್ಲಿ ಹಿರಿಯರಿಗೆ ಪತ್ರವನ್ನು ಬರೆಯುವಾಗ ತೀರ್ಥರೂಪರಾದ ತಂದೆಯವರಿಗೆ ಎಂಬ ಸಂಬೋಧನೆಗೆ ಒಂದು ನಿರ್ದಿಷ್ಟವಾದ ಅರ್ಥವಿದೆ. ತೀರ್ಥ ಶಬ್ದಕ್ಕೆ ಧರ್ಮಗುರು, ಆಚಾರ್ಯ ಎಂಬುದು ಒಂದು ಅರ್ಥವಿದೆ. ತಂದೆಯನ್ನು ಧರ್ಮಗುರುವಿಗೆ ಸಮಾನವೆಂದು ತಿಳಿದು ಪತ್ರವನ್ನು ಬರೆಯಬೇಕಾದುದು ಮಕ್ಕಳ ಧರ್ಮ. ಈ ಪದ್ಧತಿ ಹಳೆಯದು. ಆದುದರಿಂದ ತೀರ್ಥರೂಪ ಎಂಬ ಶಬ್ದಕ್ಕೆ ತಂದೆ ಎಂದೇ ಅರ್ಥ ಬಂದಿದೆ. ಮಾತನಾಡುವಾಗ ನಮ್ಮ ತೀರ್ಥರೂಪರು ಊರಿನಲ್ಲಿಲ್ಲ ಎಂದು ಹೇಳುವುದನ್ನು ಸಂಸ್ಕೃತ ಸಮಾಜದಲ್ಲಿ ನೀವು ಕೇಳಿರಬಹುದು. ಪತ್ರ ಬರೆಯುವಾಗ ತೀರ್ಥರೂಪರಿಗೆ ಎಂಬುದೇ ಸಾಕು. ಆದರೆ ತೀರ್ಥರೂಪರಾದ ತಂದೆಯವರಿಗೆ ಎಂಬುದು ತಪ್ಪಲ್ಲ.

**ತೀರ್ಪು - ಐತೀರ್ಪು** ತೀರ್ಪು = ತೀರ್ಮಾನ, Judgement. ನ್ಯಾಯಾಲಯದಲ್ಲಿ ಯಾವುದಾದರೂ ಮೊಕದ್ದಮೆಯಲ್ಲಿ ನ್ಯಾಯಾಧಿಕಾರಿಗಳು ಇತ್ತ ತೀರ್ಮಾನ. ಆ ಬಳಿಕ, ಐತೀರ್ಪು = ಐದು ಜನ ಪಂಚಾಯಿತಿಯವರು ಅಥವಾ ಹಳ್ಳಿಯ ಪಂಚರು ನೀಡಿದ ತೀರ್ಮಾನ.

**ತೀವ್ರ** ಅನೇಕಾರ್ಥಗಳುಳ್ಳ ಸಂಸ್ಕೃತ ಶಬ್ದ. ಕಟುವಾದ, ಬಲವಾದ, ವೇಗವಾದ, ಖಾರವಾದ ಇತ್ಯಾದಿ ಮುಖ್ಯಾರ್ಥಗಳು. ಸಂದರ್ಭಾನುಸಾರ ಬೇರೆ ಬೇರೆ ಅರ್ಥಗಳು ಬರುತ್ತವೆ.

**ತುಂಬುರ ನಾರದ** ಇವರು ಯಾರು ? ತುಂಬರ, ನಾರದ ಇಬ್ಬರೂ ವಿಷ್ಣು ಭಕ್ತರು. ಇವರಲ್ಲಿ ತುಂಬುರ ಒಳ್ಳೆಯ ಸಂಗೀತಬಲ್ಲವನು. ಅವನು ಸ್ತುತಿ ಮಾಡುತ್ತಿದ್ದ ಗೀತಗಳು ನಾರಾಯಣನಿಗೆ ಪರಮಪ್ರಿಯವಾಗಿದ್ದುವು. ನಾರದನಿಗೆ ಸಂಗೀತವೇನೇನೂ ಬರುತ್ತಿರಲಿಲ್ಲ. ತ್ಯಾಗ, ಭೋಗ, ದಾನ, ಮಾನ, ಧರ್ಮ, ಕರ್ಮ, ನಡೆ, ನುಡಿ, ವಿದ್ಯೆ, ಚಾತುರ್ಯಗಳಲ್ಲೆಲ್ಲಾ ನಾರದನೇ ದೊಡ್ಡವನಾದರೂ ಮುದುಕನಾದ ತುಂಬುರನ ಸಂಗೀತದ ತಲ್ಲೀನತೆ ನಾರದನಲ್ಲಿ ಇರಲಿಲ್ಲ. ಒಮ್ಮೆ ನಾರಾಯಣನ ಸಭೆಯಲ್ಲಿ ಸಂಗೀತಗೋಷ್ಠಿ ನಡೆಯುತ್ತಿದ್ದಾಗ ಅಲ್ಲಿ ಬ್ರಹ್ಮಾದಿಗಳಿಗೂ ಸ್ಥಳ ಸಿಗಲಿಲ್ಲ. ನಾರದನೂ ಅವರಂತೆ ಹೊರಗೆ ಉಳಿಯಬೇಕಾಯಿತು. ಆದರೆ ತುಂಬುರನು ಬಂದ ಕೂಡಲೇ ಅವನಿಗೆ ಒಳಕ್ಕೆ ಪ್ರವೇಶ ಸಿಕ್ಕಿತು. ನಾರಾಯಣನೇ ಸ್ವಂತವಾಗಿ ಗೌರವಿಸಿ ಕರೆದು, ಕಳುಹಿಸಿದನು. ಇದರಿಂದ ಕೋಪಗೊಂಡ ನಾರದನು ನಾರಾಯಣನಿಗೂ ಲಕ್ಷ್ಮೀದೇವಿಗೂ ಶಾಪ ಹಾಕಿದನು. ಅಲ್ಲದೆ ತಾನು ತುಂಬುರನಿಗೆ ಯಾವ ರೀತಿ ಕಡಮೆ ಎಂದು ಪ್ರಶ್ನೆ ಮಾಡಿದನು. ಆಗ ನಾರಾಯಣನೇ ನಾರದನಿಗೆ ತುಂಬುರನ ಸಂಗೀತ ವಿದ್ಯೆಯನ್ನು ಹೊಗಳಿ ಅಂಥ ವಿದ್ಯೆ ಇದ್ದರೆ ಗೌರವ ಪಡೆಯದೆ ಬಿಡುತ್ತಾರೆಯೇ ಎಂದು ಮರುಪ್ರಶ್ನಿಸಿದನು. ಇದನ್ನು ತಿಳಿದು ನಾರದನು ಒಳ್ಳೆಯ ಸಂಗೀತಗಾರನಾಗುವುದಕ್ಕೆ ಏನೇನು ಪ್ರಯತ್ನಪಟ್ಟ ಎಂಬ ವಿಷಯ ಸಂಸ್ಕೃತದ ಅದ್ಭುತ ರಾಮಾಯಣದಲ್ಲಿ ವಿಸ್ತಾರವಾಗಿ ನಿರೂಪಣೆಗೊಂಡಿದೆ. ಕನ್ನಡದಲ್ಲಿ ಮುದ್ದಣನ **'ಅದ್ಭುತ ರಾಮಾಯಣ'** ದಲ್ಲಿ ಇದು ಸಂಕ್ಷಿಪ್ತವಾಗಿ ಆದರೆ ಅಚ್ಚುಕಟ್ಟಾಗಿ ನಿರೂಪಿತವಾಗಿದೆ. ಅದನ್ನು ಓದಿದರೆ ತುಂಬ ಸಂತೋಷವಾಗುತ್ತದೆ. ಸಂಗೀತದ ಹಿರಿಮೆಯನ್ನು ಅಷ್ಟು ಚೆನ್ನಾಗಿ ಇನ್ನಾವ ಕಾವ್ಯದಲ್ಲಿಯೂ ಹೇಳಿಲ್ಲ.

**ತುದಿಗಾಲ ಮೇಲೆ ನಿಂತಿರು** ಇದಕ್ಕೆ ಎರಡು ಅರ್ಥಗಳಿವೆ. ೧. ಎತ್ತರದಲ್ಲಿರುವುದನ್ನು ಎಟುಕಿಸಿಕೊಳ್ಳುವುದಕ್ಕೆ ಕಾಲುಗಳ ಬೆರಳುಗಳ ಮೇಲೆ ನಿಗುರಿ ನಿಂತಿರುವುದು. ಜೈಮಿನಿ ಭಾರತದಲ್ಲಿ *"ತುದಿಗಾಲ್ಗಳಿಂದ ನಿಂದು ಬಣ್ಣವಳಿಯದ ಪೂಗಳಂ ಕೊಯ್ದು" (೮-೧೮)*

ಎಂಬ ಭಾಗವನ್ನು ಗಮನಿಸಿ. ೨. ತುಂಬ ಆತುರದಲ್ಲಿರು "ತವರು ಮನೆಗೆ ಹೊರಟು ಅವಳು ತುದಿಗಾಲ ಮೇಲೆ ನಿಂತಿದ್ದಳು" ಎಂಬ ರೂಢಿವಾಕ್ಯವನ್ನು ಗಮನಿಸಿ.

**ತುಪ್ಪ** ತುಂಬ ಹಳೆಯ ಕನ್ನಡ ಶಬ್ದ. ವಡ್ಡಾರಾಧನೆಯೆಂಬ ಗ್ರಂಥದಲ್ಲಿ ಇದು ಸಿಗುತ್ತದೆ. ಗಾಥಾಸಪ್ತಶತಿಯಲ್ಲಿ ಇದೆ ಎಂದು ವಿದ್ವಾಂಸರು ತಿಳಿಸುತ್ತಾರೆ. ಇದು ದ್ರಾವಿಡ ಶಬ್ದ. **ತುಪ್ಪೇಱಿದ ದರ್ಪಣದೊಳ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ** ಎಂಬ ಯಶೋಧರ ಚರಿತೆಯ ವಾಕ್ಯವನ್ನು ಗಮನಿಸಿ. ಈ ವಾಕ್ಯದಲ್ಲಿ ತುಪ್ಪ ಎಂಬ ಶಬ್ದಕ್ಕೆ ಜಿಡ್ಡು ಎಂದರ್ಥ.

**ತುಬ್ಬೇರಿಸು** ಇದು ಕನ್ನಡದ ತುಬ್ಬು + ಏರಿಸು. 'ತುಬ್ಬು' ಎಂದರೆ ಉತ್ಸಾಹ, ಹುಮ್ಮಸ್ಸು, ಅದನ್ನು 'ಏರಿಸು' ಎಂದರೆ ಹೆಚ್ಚು ಮಾಡು, ಪುಸಲಾಯಿಸು. ಇದರಿಂದ Instigate ಎಂಬ ಅರ್ಥ ಬರಬಹುದು.

**ತುರಗ-ಮಹಿಷ** ಸಂಸ್ಕೃತದ ಲೌಕಿಕ ನ್ಯಾಯಗಳಲ್ಲಿ **ಅಶ್ವಮಹಿಷನ್ಯಾಯ** ಎಂಬ ಒಂದು ನ್ಯಾಯವಿದೆ. ಲೋಕದ ಜನರ ವ್ಯವಹಾರವನ್ನು ಸಮಂಜಸವಾಗಿ ದೃಷ್ಟಾಂತಗಳಿಂದ ಸ್ಪಷ್ಟಪಡಿಸುವ ಹೇಳಿಕೆಗಳನ್ನು ಲೌಕಿಕ ನ್ಯಾಯಗಳು ಎನ್ನುತ್ತಾರೆ. ಇದು ಕುದುರೆಗೂ ಕೋಣಕ್ಕೂ ಇರುವ ಸ್ವಾಭಾವಿಕ ವೈರವನ್ನು ಕುರಿತದ್ದು. ಇದು ಎಲ್ಲ ಸ್ವಾಭಾವಿಕ ಹಗೆತನಗಳಿಗೂ ಅನ್ವಯಿಸುತ್ತದೆ. ಎಣ್ಣೆಸೀಗೇಕಾಯಿ ಇದ್ದಂತೆ ಕುದುರೆ ಕೋಣ. ಇವುಗಳಲ್ಲಿ ಯಾವುದು ಮತ್ತೊಂದರ ಎಂಜಲನ್ನು ತಿಂದರೂ ಅದು ಸಾಯುತ್ತದೆ ಎಂಬ ನಂಬಿಕೆಯಿದೆ. ತುರಗ ಎಂದರೆ ಸಂಸ್ಕೃತದಲ್ಲಿ ಕುದುರೆ ಎಂದರ್ಥ.

**ತುಷಾರ** ಈ ಸಂಸ್ಕೃತ ಶಬ್ದಕ್ಕೆ *೧. ಹಿಮ, ಮಂಜು ೨. ಹಿಮದ ತುಂತುರು, ಸೀರ್ಪನಿ ೩. ಮಂಜುಗಡ್ಡೆ ೪. ಕರ್ಪೂರ ಎಂಬ ಅರ್ಥಗಳಿವೆ.* **ತಪ್ತಂ ತೋಷಯತಿ** ಎಂದು ಸಂಸ್ಕೃತದ ಟೀಕೆ. ಹಾಗೆಂದರೆ ಬಿಸಿಲಿನ ತಾಪವನ್ನು ಅನುಭವಿಸಿದವನನ್ನು ಸಂತೋಷಪಡಿಸುತ್ತದೆ ಎಂದರ್ಥ. ಜ್ವರ ಬಂದವನಿಗೆ ಸಮಾಧಾನ ತರುವ ಔಷಧಿಯೂ ಆಗಬಹುದು. ಒಂದು ಟೀಕೆಯಲ್ಲಿ **ತುಷ್ಯಂತಿ ಅನೇನ** (ಔಷಧಿ ವಿಶೇಷ) ಎಂದೂ ವಿವರಣೆಯಿದೆ.

**ತುಳು ಭಾಷೆಯ ಮೂಲ, ಕಾಲ.** ಪಂಚದ್ರಾವಿಡ ಭಾಷೆಗಳು ಎಂದು ಕರೆಯುವ ಭಾಷೆಗಳಲ್ಲಿ ತುಳು ಒಂದು. ತಮಿಳು, ಕನ್ನಡ, ತೆಲುಗು, ಮಲೆಯಾಳ ಇವು ಇತರ ನಾಲ್ಕು. ಇವಲ್ಲದೆ ಇನ್ನೂ ಕೊಡಗು, ತೊದ, ಕೋಟ, ಕುಯಿ, ಬ್ರಾಹ್ವಿ ಮುಂತಾಗಿ ಇನ್ನೂ ಅನೇಕ ದ್ರಾವಿಡ (ಸು. ೨೫) ಭಾಷೆಗಳಿವೆ. ತುಳು ಮುಂತಾದ ಭಾಷೆಗಳಿಗೆ ಬೇರೆ ಲಿಪಿಯಿಲ್ಲ. ತುಳುವಿನಲ್ಲಿ ಶ್ರೀ ಭಾಗವತೊ ಎಂಬ ಗ್ರಂಥವಿದೆ. ಒಂದು ರಾಮಾಯಣ, ಮಂದಾರ ರಾಮಾಯಣ ಗ್ರಂಥ ಪ್ರಕಟವಾಗಿದೆ. ಇವುಗಳೆಲ್ಲ ಕೇವಲ ಎರಡು ಶತಮಾನಗಳಷ್ಟು ಹಳೆಯವು. ಈಗ ಒಳ್ಳೆಯ ತುಳು ನಿಘಂಟನ್ನು ಕನ್ನಡ ಲಿಪಿಯಲ್ಲಿ ಮುದ್ರಿಸುತ್ತಿದ್ದಾರೆ. ತಿಗಳಾರಿ ಎಂಬ ಲಿಪಿಯು ಈ ಭಾಷೆಗೆ ಹಿಂದೆ ಉಪಯೋಗದಲ್ಲಿತ್ತು. ಈಗ ಅದರ ಪ್ರಚಾರ ನಿಂತಿದೆ. ಆದರೆ ಲಿಪಿಯ ಬಗ್ಗೆ ತಿಳಿವಳಿಕೆ ಇದೆ.

**ತೆರೆ - ತೆಗೆ** ಇವುಗಳಲ್ಲಿ ಯಾವುದು ಸರಿ? ತೆರೆ ಎಂಬುದೇ ಸರಿಯಾದ ಶಬ್ದ. ತೆಗೆ ಎಂಬುದಕ್ಕೆ ಮೊದಲನೆಯ ಅರ್ಥ ಬೇರೆ ಮಾಡು (separate). ಆದರೆ ತೆಗೆ ಎಂಬುದಕ್ಕೆ ಸುಮಾರು ೪೦ ಅರ್ಥಗಳಿವೆ. ಮುಚ್ಚು ಶಬ್ದಕ್ಕೆ ವಿರುದ್ಧ ಶಬ್ದ ತೆಗೆ = open. ಈ ಅರ್ಥದಲ್ಲಿ ಅದನ್ನು ಸಮಾನಾರ್ಥಕವಾಗಿ ಉಪಯೋಗಿಸಬಹುದು. ಹಾಗೆ ಉಪಯೋಗಿಸುತ್ತಲೂ ಇದ್ದೇವೆ. ಉದಾ: ಬಾಯಿ ತೆಗೆ, ಪುಸ್ತಕವನ್ನು ತೆಗೆ, ಪೆಟ್ಟಿಗೆಯನ್ನು ತೆಗೆ, ಬೀಗವನ್ನು ತೆಗೆ. ಆದುದರಿಂದ ಈ ಎರಡು ಪ್ರಯೋಗಗಳೂ ಪ್ರಯೋಜನಕರವಾದವೇ. ಬಾಗಿಲು ತೆರೆ, ಕಸ ತೆಗೆ - ಈ ವಾಕ್ಯಗಳನ್ನು ನೋಡಿ.

**ತೆರೆ, ಮರೆ, ಮಡಿ, ಹಿಡಿ, ತರಿ** ಈ ಶಬ್ದಗಳು ನಾಮಪದವಾಗಿಯೂ ಕ್ರಿಯಾಪದವಾಗಿಯೂ ಪ್ರಯೋಗವಾಗುತ್ತವೆ. ಆದರೆ ಅರ್ಥ ಮಾತ್ರ ಕೆಲವು ವೇಳೆ ಬೇರೆಯಾಗುತ್ತದೆ. ತೆರೆ (ನಾ) ಪರದೆ (ಕ್ರಿ) ತೆಗೆದು ತೋರಿಸು. ಮರೆ (ನಾ) ಮುಚ್ಚಿರುವುದು (ಕ್ರಿ) ಸ್ಮರಣೆಯಿಲ್ಲದಿರು, ಇದಕ್ಕೆ ಮೂಲ ಮಱೆ. ಮಡಿ (ನಾ) ಒಗೆದ ಬಟ್ಟೆ (ಕ್ರಿ) ಸಾಯಿ. ಹಿಡಿ (ನಾ) ಕೈಲಿ ಹಿಡಿಯುವ ಭಾಗ (ಕ್ರಿ) ಹಿಡಿದುಕೊಳ್ಳು, ಅಪರಾಧಿಯನ್ನು ಸೆರೆ ತೆಗೆದುಕೊಳ್ಳು. ತರಿ (ನಾ) ಅಕ್ಕಿ ಮುಂತಾದ ಧಾನ್ಯದ ನುಚ್ಚು (ಕ್ರಿ) ಕತ್ತರಿಸು, ಸವರು.

ಆದುದರಿಂದ ಎಚ್ಚರಿಕೆಯಿಂದ ಉಪಯೋಗಿಸಬೇಕು. ಇದಕ್ಕೆ ತಱೆ ಎಂಬುದು ಮೂಲರೂಪ. ತಱಿ > ತರಿ.

**ತೇಮಾನ** ತೇಯ್, ತೇಯು ಎಂಬ ಧಾತುವಿನಿಂದ ಆದ ಶಬ್ದ. ತಿಕ್ಕುವಿಕೆಯಿಂದ ಲೋಹಗಳಲ್ಲಿ ಉಂಟಾಗುವ ಸವೆತ, ನಷ್ಟ. ಯಂತ್ರ ಮೊದಲಾದವುಗಳ ಸವೆತದಿಂದ ಆದ ನಷ್ಟ ಎಂದು ವರ್ಷದ ಕೊನೆಯಲ್ಲಿ ನಿಗದಿ ಮಾಡುವ ಹಣ. ಜಮಾಖರ್ಚಿನ ಒಕ್ಕಣೆಯಲ್ಲಿ ಬರುವ ಒಂದು ವಿವರ. ಇಂಗ್ಲಿಷಿನ Depreciation ಪದಕ್ಕೆ ಸಮಾನವಾದ ಪದ.

**ತೇರ್ಗಡೆ** ತೇರ್ +ಕಡೆ = ತೇರ್ಗಡೆ. ತೇರ್ ಎಂದರೆ ಶಕ್ತನಾಗು, ಜಯಹೊಂದು, ಸಫಲನಾಗು ಎಂದರ್ಥ. ಹಾಗೆ ಜಯ ಪಡೆದ ಕಡೆ ಎಂದರೆ ದೆಸೆ, ದಿಕ್ಕು, ಸ್ಥಳ ಎಂದರ್ಥ. ಜಯ ಪಡೆದ ಸ್ಥಳ = ತೇರ್ಗಡೆ.

**ತೈನಾತಿ** ಇದು ಮರಾಠೀ ಭಾಷೆಯಿಂದ ನಮಗೆ ಬಂದಿದೆ. ಇದಕ್ಕೆ ಅರ್ಥ ಊಳಿಗಕ್ಕಿರುವವನು. ಇದು ಅರಬ್ಬಿಯ ತಇನಾತ್ ಎಂಬ ಶಬ್ದ - ಅದಕ್ಕೆ ಆ ಭಾಷೆಯಲ್ಲಿ ಸಂಬಳ, ಊಳಿಗ, ಎಂಬ ಅರ್ಥವಿದೆ. ಮರಾಠಿಗೆ ಬಂದಾಗ ಅದು ತೈನಾತ್ ಎಂಬ ರೂಪವನ್ನು ಪಡೆಯಿತು. ಅಲ್ಲಿಂದ ಕನ್ನಡಕ್ಕೆ ಬಂದಾಗ ತೈನಾತಿ ಆಗಿದೆ.

**ತೊಂದರೆ** ಇದು ದೇಶ್ಯ ಶಬ್ದ. ಇದಕ್ಕೆ ಎರಡು ಮೂರು ಅರ್ಥಗಳಿವೆ. *೧. ಕಷ್ಟ, ೨. ಅಡ್ಡಿ, ೩. ಕಾಟ, ಹಿಂಸೆ.* ನಾವು ಇದಕ್ಕೆ ವಿರುದ್ಧಾರ್ಥದ ಶಬ್ದವನ್ನು ಹುಡುಕಬೇಕಾದರೆ ಯಾವ ಅರ್ಥದಲ್ಲಿ ಎಂದು ಯೋಚಿಸಬೇಕಾಗುತ್ತದೆ. *೧. ಕಷ್ಟ* ಆದರೆ ನೆಮ್ಮದಿ *೨. ಅಡ್ಡಿ* ಆದರೆ ನೆರವು *೩. ಕಾಟ* ಆದರೆ ಒತ್ತಾಸೆ. ಹೀಗೆ ಹುಡುಕಬೇಕಾಗುತ್ತದೆ. ಸಂಸ್ಕೃತದ ಸಹಾಯ, ಸುಖ ಇತ್ಯಾದಿ ಆಗಬಹುದು. ಆದುದರಿಂದ ಪರೀಕ್ಷೆಯಲ್ಲಿ ಇಂಥ ಪ್ರಶ್ನೆಗಳನ್ನು ಕೊಡುವ ಅಧ್ಯಾಪಕರು ಒಂದೇ ಅರ್ಥವು ಸ್ಪಷ್ಟವಾಗಿರುವ ಮತ್ತು ವಿರೋಧ ಶಬ್ದವಿರುವ ದೃಷ್ಟಾಂತಗಳನ್ನೇ ಹುಡುಕಬೇಕು. ಪ್ರಶ್ನಪತ್ರಿಕೆಯನ್ನು ಸಿದ್ಧ ಮಾಡುವುದು ತುಂಬ ಅನುಭವ ತಿಳಿವಳಿಕೆಗಳನ್ನು ನಿರೀಕ್ಷಿಸುತ್ತದೆ.

**ತೊಗಟ, ತೊಗಜ** ಶ್ರೀ ಹಯವದನರಾಯರು ಸಂಪಾದಿಸಿರುವ ಮೈಸೂರು ಗೆಜೆಟಿಯರ್ ಪುಸ್ತಕದಲ್ಲಿ ಈ ಶಬ್ದಗಳನ್ನು ನೇಯ್ಗೆಯ ಜಾತಿಗಳಿಗೆ ಅನ್ವಯಿಸಿದ್ದಾರೆ. ಮೈಸೂರಿನ ಕಡೆ ತೊಗಟವೀರರು ಎಂಬ ಒಂದು ಜಾತಿಯ ಜನರಿದ್ದಾರೆ. ಅವರೂ ನೇಯ್ಗೆಯ ಕಸುಬಿನವರೇ. ಆದರೆ ತೊಗಟ ಅಥವಾ ತೊಗಜ ಎಂಬ ಶಬ್ದದ ಮೂಲದ ಬಗ್ಗೆ ಯಾರೂ ವಿವರವನ್ನು ನೀಡಿದಂತೆ ನನ್ನ ಗಮನಕ್ಕೆ ಬಂದಿಲ್ಲ. ತೊಗಟವೀರ, ತೊಗಜ ಎಂಬ ಶಬ್ದದ ಬಗ್ಗೆ, ತೆಲುಗು ಭಾಷೆಯಲ್ಲಿರುವ "ಚೌಡೇಶ್ವರೀ ಮಹಾತ್ಮೆ" ಎಂಬ ಗ್ರಂಥದ ಆಧಾರದ ಸಹಾಯದಿಂದ ತೊಗಟ ಎಂಬುದು ಸೂರ್ಯವಂಶದ ಕ್ಷತ್ರಿಯ ಕುಲವನ್ನು ಸೂಚಿಸುತ್ತದೆ ಎಂದು ತಿಳಿಯುತ್ತದೆ. ತೆಲುಗು ಭಾಷೆಯಲ್ಲಿ ಚೌಡೇಶ್ವರಿ ದೇವಿಗೆ ಸಂಬಂಧಿಸಿದಂತೆ ಪುರಾಣ, ಭಕ್ತಿಗೀತೆ, ದಂಡಕ ಕುರಿತಾದ ಸಾಹಿತ್ಯವು ವಿಪುಲವಾಗಿದೆ. ಆಸಕ್ತರು ಆ ಗ್ರಂಥಗಳನ್ನು ಪರಿಶೀಲಿಸಬಹುದು.

**ತೊಣ್ಣ** ಎಂದರೆ ಎರಡು ಅರ್ಥಗಳಿವೆ. ೧. ಸೇವಕ ೨. ತುಂಟ, ಸ್ವೇಚ್ಛಾಚಾರಿ. ಇವೆರಡೂ ಅರ್ಥಗಳು ಬೇರೆ ಬೇರೆ ಮೂಲದಿಂದ ಬಂದಿವೆ.

**ತೊತ್ತು** ಇದು ಕನ್ನಡದ ಶಬ್ದ. ಹಳಗನ್ನಡದಲ್ಲಿ ಇದರ ರೂಪ ತೊಟ್ಟು. ಇದಕ್ಕೆ ೧. ದಾಸಿ, ಸೇವಕಿ ಎಂದರ್ಥ. ೨. ದಾಸ, ಸೇವಕ ಎಂದೂ ೩. ಜಾತಿ ಎಂದೂ ಅರ್ಥಗಳುಂಟು. ತೊಳ್ತು, ತೊರ್ತು ಎಂಬ ರೂಪಗಳೂ ಕಾವ್ಯಗಳಲ್ಲಿ, ಶಾಸನಗಳಲ್ಲಿ ದೊರಕುತ್ತವೆ.

**ತೊದಲು** ಕನ್ನಡದಲ್ಲಿ ತೊದಲ್ ಎಂಬ ಶಬ್ದ ಹತ್ತನೆಯ ಶತಮಾನದಿಂದಲೂ ಪ್ರಯೋಗದಲ್ಲಿದೆ. ಪಂಪ ಭಾರತದಲ್ಲಿ **ಸುರಿವ ಸುರಯಿಯರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ ತೊದಳ್ವ ಶಿಶುಶುಕಂಗಳಿಂ** ಎಂದು ಪ್ರಯೋಗವಿದೆ. ಶಿಶು ಶುಕಗಳು =ಮರಿಗಿಳಿಗಳು ತೊದಳುತ್ತಿದ್ದುವು ಎಂದು ಅರ್ಥ. ಈ ಶಬ್ದ ಅನೇಕ ದ್ರಾವಿಡ ಭಾಷೆಗಳಲ್ಲಿ ಕಂಡು ಬರುತ್ತದೆ. ಹಿಂದಿಯಲ್ಲಿ ತುತಲಾನಾ ಎಂದೂ ಪಂಜಾಬಿಯಲ್ಲಿ ತೊತ್ಲಾವುಣಾ ಎಂದೂ ಒರಿಯದಲ್ಲಿ ತೂಕಳಾ, ತೊಕಲಾ ಎಂದೂ ಗುಜರಾತಿಯಲ್ಲಿ ತೊಕ್ಲೂ, ತೊತ್ರೂ ಎಂದೂ ಪ್ರಯೋಗವಾಗುತ್ತದೆ. ನಾಮಪದ, ಕ್ರಿಯಾಪದವಾಗಿ ಕೂಡ ಪ್ರಯೋಗವಾಗುತ್ತಿದೆ. ಇದು ದ್ರಾವಿಡ ಶಬ್ದ. ಇಲ್ಲಿಂದ ಆ ಭಾಷೆಗಳಿಗೆ ಹೋಗಿರುವ ಸಾಧ್ಯತೆಯೇ ಹೆಚ್ಚು. ಈ ಶಬ್ದಕ್ಕೆ ೧. ಮಾತಿನಲ್ಲಿ ತಡವರಿಸು ೨. ಮಕ್ಕಳಂತೆ ಮುದ್ದಾಗಿ ಮಾತನಾಡು. ೩. ಸುಳ್ಳು ಹೇಳು ಎಂದು ಕ್ರಿಯಾರ್ಥಗಳೂ ೧. ತಡವರಿಸಿ ಮಾತನಾಡುವಿಕೆ ೨. ಮಕ್ಕಳ ಮಾತು ೩. ಸುಳ್ಳು ೪. ಸಂದೇಹ ೫. ಮೋಸ ೬. ಗದ್ಗದ ಎಂಬ ನಾಮಪದದ ಅರ್ಥಗಳೂ ಇವೆ. ಈ ಅರ್ಥಗಳಿಗೆ ಅನೇಕ ಕಾವ್ಯಗಳಲ್ಲಿ ಪ್ರಯೋಗಗಳು ದೊರಕುತ್ತವೆ. ಈ ಕೆಳಗಿನ ಕವಿ ಪ್ರಯೋಗಗಳನ್ನು ಪರಿಶೀಲಿಸಿ, ಅರ್ಥವ್ಯತ್ಯಾಸವನ್ನು ಗಮನಿಸಿ.

> **ಮೊದಲು ತಾಯ ಹಾಲ ಕುಡಿದು**
> **ಲಲ್ಲೆಯಿಂದ ತೊದಲಿ ನುಡಿದು**
> ***ಕೆಳೆಯರೊಡನೆ ಬೆಳೆದು ಬಂದ -***
> **ಮಾತದಾವುದು** ***- ಶ್ರೀ - ಕಾಣಿಕೆ***

> **ಎಲ್ಲಿ ನಿನ್ನಾ ಪದವಿ**
> **ಎಲ್ಲಿ ನನ್ನೀ ತೊದಲು**
> ***ಸಂಬಂಧವೆರಡರಲ್ಲಿ ! — ತೀ.ನಂ.ಶ್ರೀ — ಕವಿತೆಗೆ***

**ತೊಪ್ಪೆ** ಇದು ಕನ್ನಡದ ಶಬ್ದ. ಇದಕ್ಕೆ ೧. ಬೊಜ್ಜು, ೨. ಹಸಿಯಾದ ಸಗಣಿಯ ಮುದ್ದೆ ೩. ಮರದ ತೊಗಟೆ ಎಂಬ ಅರ್ಥಗಳಿವೆ. ತೊಪ್ಪೆ ಮೈ ಎಂದರೆ ಬೊಜ್ಜು ಬೆಳೆದ ದೇಹ. ತೊಪ್ಪೆ ತಟ್ಟು ಎಂದರೆ ಬೆರಣಿಯನ್ನು ಮಾಡು, ಬೆರಣಿಯ ಆಕಾರದಲ್ಲಿ ತಟ್ಟು ಎಂದರ್ಥ. ವೈದ್ಯ ಶಾಸ್ತ್ರದಲ್ಲಿ ಮರದ ತೊಗಟೆಗೆ ತೊಪ್ಪೆ ಎಂಬ ಪ್ರಯೋಗವಿದೆ. ತಮಿಳಿನಲ್ಲಿ ತೊಪ್ಪೈ.

**ತೋಟದ ಕಪ್ಪು** ಅಡಕೆಯ ತೋಟಗಳಲ್ಲಿ ಪ್ರತಿ ೧೪ ಅಥವಾ ೧೬ ಅಡಿಗಳಿಗೆ ಒಂದರಂತೆ ಸಣ್ಣ ಕಾಲುವೆಗಳನ್ನು ತೋಡುತ್ತಾರೆ. ಹೆಚ್ಚು ಮಳೆಯಾದಾಗ ನೀರನ್ನು ಹೊರಗೆ ಹಾಕಲೂ ಬೇಸಗೆಯಲ್ಲಿ ಗಿಡಗಳಿಗೆ ನೀರು ಹಾಯಿಸಲೂ ಒಂದು ಅಡಿ ಅಗಲದ ಎರಡು ಅಡಿ ಆಳದ ಇಂಥ ತೋಡುಗಳನ್ನು ತೋಟದ ಕಪ್ಪು ಎಂದು ಕರೆಯುತ್ತಾರೆ. ಹೊಸನಗರ ತಾಲ್ಲೂಕಿನಲ್ಲಿ ಇದನ್ನೇ ಕಾದಿಗೆ = ಕಾಲುವೆ ಎನ್ನುತ್ತಾರೆ. ಸಣ್ಣ ಕಾಲುವೆಗಳನ್ನು ದೊಡ್ಡ ಕಾಲುವೆಗೆ ಜೋಡಿಸುತ್ತಾರೆ. ದೊಡ್ಡ ಕಾಲುವೆಯನ್ನು ಹೆಗ್ಗಪ್ಪು ಎಂದೂ ಹೆಗ್ಗಾದಿಗೆ ಎಂದೂ ಕರೆಯುತ್ತಾರೆ. ಕಪ್ಪು ಹೆರೆ, ಕಪ್ಪುಕಟ್ಟು, ಕಪ್ಪು ಹಾಕು ಎಂಬ ಶಬ್ದಗಳು

ಮಲೆನಾಡಿನಲ್ಲಿ ಸಾಮಾನ್ಯ. ಕನ್ನಡದಲ್ಲಿ ಕಪ್ಪು, ಕಪ್ಪ, ಎಂಬ ಪರ್ಯಾಯ ರೂಪಗಳುಳ್ಳ ಕರ್ಪು ಎಂಬ ಒಂದು ಶಬ್ದವಿದೆ. ಇದಕ್ಕೆ ತುಳು ಭಾಷೆಯಲ್ಲಿ ಹೆಚ್ಚು ಪ್ರಚಾರವಿದೆ. ವಚನಗಳಲ್ಲಿಯೂ ಕೆಲವು ಕಾವ್ಯಗಳಲ್ಲಿಯೂ ಈ ಶಬ್ದ ಪ್ರಯೋಗದಲ್ಲಿದೆ. ಈ ಶಬ್ದಕ್ಕೆ ಹಳ್ಳ, ಗುಳಿ, ಪ್ರಾಣಿಗಳನ್ನು ಬೇಟೆಯಾಡಲು ತೋಡುವ ಗುಳಿ ಎಂಬ ಅರ್ಥವೂ ತೋಟದ, ಗದ್ದೆಗಳ ಸುತ್ತಲೂ ಮಾಡುವ ಕಾಲುವೆ ಎಂದೂ ಅರ್ಥವಿದೆ. **ಕಪ್ಪಿನೊಳ್ ಬಿದ್ದ ಪೇರಾನೆಯಂ** ಎಂದು ಚಿಕದೇವರಾಜವಂಶಾವಳಿಯಲ್ಲಿಯೂ **ಕರ್ಪನಗುಬ್ಬಿಂ ಬಲೆಗಳನೊಡ್ಡಿಯುಂ** ಎಂದು ಮುದ್ದಣನ ರಾಮಾಶ್ವಮೇಧದಲ್ಲಿಯೂ, ಇತರ ಕಾವ್ಯಗಳಲ್ಲಿಯೂ ಪ್ರಯೋಗಗಳಿವೆ.

**ತೋಯೇಜಾಕ್ಷ** ತೋಯ = ನೀರಿನಲ್ಲಿ ಜ = ಹುಟ್ಟಿದ್ದು, ಕಮಲ. ಅಕ್ಷ = ಕಣ್ಣು. ಕಮಲದಂಥ ಕಣ್ಣುಳ್ಳವನು ಎಂದು ಅರ್ಥ. ಅಂದರೆ ವಿಷ್ಣು ಎಂದರ್ಥ. ಈ ಹೆಸರನ್ನು ಕೆಲವರು ಇಟ್ಟುಕೊಂಡಿರಬಹುದು. ತೋಯೇಜಾಕ್ಷಿ ಎಂದರೆ ಪಾರ್ವತಿ, ಗೌರಿ. ಮೈಸೂರು ಅರಸರ ರಾಜ್ಯದಲ್ಲಿ ಹಿಂದೆ ಪ್ರಸಿದ್ಧವಾಗಿದ್ದ **ಕಾಯೌ ಶ್ರೀ ಗೌರೀ ಕರುಣಾಲಹರೀ** ಎಂಬ ರಾಷ್ಟ್ರಗೀತೆಯ ಕೊನೆಯ ಸಾಲಿನಲ್ಲಿ **ತೋಯೇಜಾಕ್ಷೀ ಶಂಕರೀಶ್ವರೀ** ಎಂದು ಉಲ್ಲೇಖವಿದೆ.

**ತೋಳಾಂಡರಾಯ** ಎಂಬುದರ ಅರ್ಥವಾಗಲಿ ವ್ಯುತ್ಪತ್ತಿಯಾಗಲಿ ನನಗೆ ಗೊತ್ತಿಲ್ಲ. ಆದರೆ ಒಬ್ಬ ಹರಿಕಥೆ ದಾಸರು ಹೇಳಿದ ವ್ಯುತ್ಪತ್ತಿ ನೆನಪಿದೆ. ಅದು ಸ್ವಾರಸ್ಯವಾಗಿರುವುದರಿಂದ ಅದನ್ನು ತಿಳಿಸುತ್ತೇನೆ. ಅದು ಸರಿ ಎಂದಾಗಲಿ ತಪ್ಪೆಂದಾಗಲಿ ನಾನು ಹೇಳುತ್ತಿಲ್ಲ. ಯಾವ ಕೆಲಸಕ್ಕೂ ಬಾರದ ಒಬ್ಬ ಮನುಷ್ಯ ತನಗೆಲ್ಲವೂ ಗೊತ್ತಿದೆ ಎಂದು ಹೇಳಿಕೊಳ್ಳುತ್ತಿದ್ದನಂತೆ. ಯಾರೋ ಅವನಿಗೆ ಒಂದು ಪ್ರಶ್ನೆ ಕೇಳಿದರು. ನಿನಗೆ ಬ್ರಹ್ಮಾಂಡ ಎಂದರೆ ಗೊತ್ತೇ? ಎಂದು. ಅವನು 'ಹೋ, ಗೊತ್ತು' ಎಂದನಂತೆ. ಅಂದಿನಿಂದ ಅವನಿಗೆ ಜನ ಬ್ರಹ್ಮಾಂಡರಾಯ ಎಂಬ ವ್ಯಂಗ್ಯದ ಹೆಸರನ್ನು ಕೊಟ್ಟರಂತೆ! ಊರಿನ ವಿದ್ವಾಂಸರೊಬ್ಬರಿಗೆ ಈ ವಿಚಾರ ತಿಳಿದಾಗ ಅವರು ಹೇಳಿದರಂತೆ - ಅವನಿಗೆ ತೋಳದ ಹಾಗೆ ತಿನ್ನುವುದನ್ನು ಬಿಟ್ಟರೆ ಮತ್ತೇನೂ ಗೊತ್ತಿಲ್ಲ. ಬೇಕಾದರೆ ಅವನನ್ನು ತೋಳಾಂಡರಾಯ ಎಂದು ಕರೆಯಬಹುದಷ್ಟೆ! ಅಂದಿನಿಂದ ಅವನಿಗೂ ಅವನಂಥವರಿಗೂ ತೋಳಾಂಡರಾಯ ಅನ್ವರ್ಥನಾಮವಾಯಿತು.

**ತೌಡು ಕುಟ್ಟುವುದು** ನೋಡಿ : **ಚರ್ವಿತಚರ್ವಣ**

**ತ್ರಯಂಬಕ** ಇದರ ಸರಿಯಾದ ರೂಪ ತ್ರ್ಯಂಬಕ = ಮೂರು ಕಣ್ಣುಗಳು ಉಳ್ಳವನು. **ತ್ರಿ ಅಂಬಕಾನಿ ಯಸ್ಯ** ಎಂದು ವಿಗ್ರಹವಾಕ್ಯ.

**ತ್ರಾಟಕ** ಇದು ಒಂದು ಏಕಾಗ್ರತಾ ಸಾಧನೆಯ ಮಾರ್ಗವೆಂದು ಕೆಲವರು ಹೇಳುತ್ತಾರೆ. ಒಂದು ವಸ್ತುವನ್ನು ಕಣ್ಣುಗಳಲ್ಲಿ ನೀರು ಬರುವವರೆಗೂ ದೃಷ್ಟಿಯಿಟ್ಟು ನೋಡುತ್ತಿರುವುದು. ಯೋಗಾಭ್ಯಾಸದ ಗ್ರಂಥಗಳಲ್ಲಿ ಈ ಶಬ್ದದ ಪ್ರಯೋಗವಿದೆಯೆಂದು ಕೆಲವರು ವಿದ್ವಾಂಸರು ಹೇಳುತ್ತಾರೆ.

**ತ್ರಾಸ** ತ್ರಾಸ, ಕಷ್ಟ ಎರಡೂ ಸಂಸ್ಕೃತದ ಶಬ್ದಗಳು. ತ್ರಾಸ ಎಂಬುದಕ್ಕೆ ಹೆದರಿಕೆ ಮುಖ್ಯ ಅರ್ಥ. ತೊಂದರೆ ಬಳಿಕ ಬೆಳೆದ ಅರ್ಥ. ಕಷ್ಟದಲ್ಲಿ ಭಯದ ಸಂಬಂಧ ಇಲ್ಲ.

**ತ್ರಿ, three** ಪ್ರಪಂಚದ ಎಲ್ಲ ಭಾಷೆಗಳನ್ನೂ ಕೆಲವು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ. ಹಾಗೆ ವಿಂಗಡಿಸಿರುವ ಗುಂಪುಗಳಲ್ಲಿ ಇಂಡೋ - ಯೂರೋಪಿಯನ್ ಎಂಬ ಒಂದು ಗುಂಪಿದೆ. ಅದರಲ್ಲಿ ಸಂಸ್ಕೃತ, ಗ್ರೀಕ್, ಲ್ಯಾಟಿನ್, ಜರ್ಮನ್ ಮುಂತಾದ ಭಾಷೆಗಳು ಸೇರುತ್ತವೆ. ಈ ಪಂಗಡದ ಭಾಷೆಗಳ ಬಗ್ಗೆ ವ್ಯಾಪಕವಾದ ಸಂಶೋಧನೆಗಳು ನಡೆದಿವೆ. ಈಚೆಗೆ ಈ ಗುಂಪಿನ ಭಾಷೆಗಳನ್ನು ಪುನರ್ವಿಂಗಡಣೆ ಮಾಡಿದ್ದೂ ಆಗಿದೆ. ತ್ರಿ ಎನ್ನುವುದು ಈ ಗುಂಪಿಗೆ ಸೇರಿದ

ಎಲ್ಲ ಭಾಷೆಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿ ಕಾಣಬರುತ್ತದೆ. ಆದುದರಿಂದ ಅವಕ್ಕೆ ಜ್ಞಾತಿ ಶಬ್ದಗಳು ಎಂದು ಹೆಸರು ಬಂದಿದೆ. ಮೂರು ಇದು ಕನ್ನಡದ ಮಾತು.

**ತ್ರಿಕಾಲ ಜ್ಞಾನಿ** ಯೋಗಾಭ್ಯಾಸವನ್ನು ಸಮರ್ಪಕವಾಗಿ ಮಾಡಿದವರಿಗೆ ಕೆಲವು ವಿಶೇಷ ಶಕ್ತಿಗಳು, ಅತಿಮಾನವ ಸಾಮರ್ಥ್ಯಗಳು ದೊರಕುತ್ತವೆ ಎಂಬ ನಂಬಿಕೆಯಿದೆ. ಹಿಂದಿನ ಕಾಲದಲ್ಲಿ ಋಷಿಗಳು, ಯೋಗಿಗಳು, ಮುನಿಗಳು ಇಂಥ ಸಾಮರ್ಥ್ಯವನ್ನು ಗಳಿಸುತ್ತಿದ್ದರೆಂಬ ನಂಬಿಕೆಯೂ ಇದೆ. ಹೀಗೆ ಬರುವ ಶಕ್ತಿಯಿಂದ ಭೂತ, ವರ್ತಮಾನ ಭವಿಷ್ಯತ್ ಎಂಬ ತ್ರಿಕಾಲಗಳಲ್ಲಿ ಎಲ್ಲ ಏನಾಗಿದ್ದರೂ ಏನಾಗುತ್ತಿದ್ದರೂ ಏನಾಗುವುದಿದ್ದರೂ ಅದನ್ನು ತಿಳಿದುಕೊಳ್ಳಬಲ್ಲವರಾಗಿದ್ದರು. ಅವರೇ ತ್ರಿಕಾಲ ಜ್ಞಾನಿಗಳು.

**ತ್ರಿಶಂಕು** ಈ ಹೆಸರು ಪುರಾಣಗಳ ಕಥೆಗೆ ಸಂಬಂಧಿಸಿದುದು. ಸೂರ್ಯವಂಶದ ನಿಬಂಧನ ಎಂಬ ರಾಜನಿಗೆ ಸತ್ಯವ್ರತನೆಂಬ ಮಗನಿದ್ದನು. ಅವನು ಒಬ್ಬಳು ಪರಸ್ತ್ರೀಯನ್ನು ಅಪಹರಿಸಿದನು. ಇದನ್ನು ಕಂಡ ನಿಬಂಧನನು ಮಗನಿಗೆ ಶ್ವಪಾಕರೊಡನೆ = ನಾಯಿಯ ಮಾಂಸವನ್ನು ತಿನ್ನುವವರೊಡನೆ ಬಾಳು ಎಂದು ಶಾಪವನ್ನಿತ್ತ. ರಾಜನು ತನ್ನನ್ನು ಮನೆ ಬಿಟ್ಟು ಓಡಿಸಿದಾಗ ಮನೆಗೆ ಗುರುವಾದ ವಸಿಷ್ಠನೂ ಸುಮ್ಮನಿದ್ದುದರಿಂದ ಸತ್ಯವ್ರತನಿಗೆ ವಸಿಷ್ಠನ ಮೇಲೆ ಕೋಪ ಬಂತು. ಈ ಕಾರಣದಿಂದ ಅವನು ವಿಶ್ವಾಮಿತ್ರನನ್ನು ಆಶ್ರಯಿಸಿದನು. ಆ ಸಮಯದಲ್ಲಿ ಸತ್ಯವ್ರತನು ವಸಿಷ್ಠರ ಬಳಿ ಇದ್ದ ಧೇನು = ಹಸುವನ್ನು ಕೊಂದು ಅದರ ಮಾಂಸವನ್ನು ತಿಂದನು. ಹೀಗೆ ಅವನು ೧. ತಂದೆಗೆ ಬೇಡದ ಕಾರ್ಯವನ್ನು ಮಾಡಿದ್ದು ೨. ಗುರುವಿನ ಹಸುವನ್ನು ಕೊಂದದ್ದು, ೩. ಅದರ ಮಾಂಸವನ್ನು ತಿಂದದ್ದು ಎಂಬ ಮೂರು ಪಾಪಗಳನ್ನು ಮಾಡಿದುದರಿಂದ ಅವನಿಗೆ ತ್ರಿಶಂಕು = ಮೂರು ಪಾಪ ಮಾಡಿದವನು ಎಂಬ ಹೆಸರು ಉಳಿದುಬಿಟ್ಟಿತು. ಈ ಶಬ್ದಕ್ಕೆ ಬೆಕ್ಕು, ಪತಂಗದ ಹುಳು, ಚಾತಕಪಕ್ಷಿ ಎಂಬ ಅರ್ಥಗಳೂ ಇವೆ. ವಿಶ್ವಾಮಿತ್ರನ ಸಹಾಯದಿಂದ ಸ್ವರ್ಗಕ್ಕೆ ಹೋಗಲು ಪ್ರಯತ್ನ ಮಾಡಿ ತ್ರಿಶಂಕು ಸ್ಥಿತಿಯಲ್ಲಿದ್ದ ಕಥೆ ಪ್ರಸಿದ್ಧ.

**ತ್ವಾಟದೂರ** ಈ ಪ್ರಯೋಗಕ್ಕೆ ಕಿವುಡು ಎಂದರ್ಥ. ಈ ಶಬ್ದ ನಮ್ಮ ಗ್ರಾಮೀಣ ಜೀವನದ ಸಂಸ್ಕೃತಿಯ ಒಂದು ಅಂಶವನ್ನು ನಮಗೆ ಪರಿಚಯ ಮಾಡಿಕೊಡುತ್ತದೆ. ಹಳ್ಳಿಯ ಮನೆಗಳಿಗೂ ಆ ಹಳ್ಳಿಯವರ ತೋಟಗಳಿಗೂ ಹೆಚ್ಚು ದೂರವಿರುತ್ತಿರಲಿಲ್ಲ. ಮನೆಯ ಹಿತ್ತಿಲಲ್ಲಿ ನಿಂತು ಗಟ್ಟಿಯಾಗಿ ಮಾತನಾಡಿದರೆ ತೋಟದ ಯಾವ ಮೂಲೆಯಲ್ಲಿದ್ದರೂ ಕೇಳುತ್ತಿತ್ತು. ಹಳ್ಳಿಯ ಮೌನವಾದ ವಾತಾವರಣದಲ್ಲಿ ಇದು ಸಾಧ್ಯವಿತ್ತು. ಒಂದೂರಿಗೂ ಮತ್ತೊಂದು ಊರಿಗೂ ಎಷ್ಟು ದೂರ ಎಂಬುದನ್ನು ಹಿಂದೆ 'ಎರಡು ಕೂಗು ದೂರ. ಮೂರು ಕೂಗು ದೂರ' ಎಂದು ಹೇಳುತ್ತಿದ್ದರು. ಆದುದರಿಂದ 'ಕಿವಿ ಕೇಳಿಸುವವನಿಗೆ ತೋಟ ಹತ್ತಿರ, ಕಿವುಡನಿಗೆ ತೋಟ ದೂರ' ಎಂಬ ಶಬ್ದ ಪುಂಜ ಚಲಾವಣೆಗೆ ಬಂತು. ಈಗ ವ್ಯಂಗ್ಯವಾಗಿ ನಗರದಲ್ಲೂ ಈ ಶಬ್ದಗಳನ್ನು ಉಪಯೋಗಿಸುತ್ತಾರೆ. ಹಳ್ಳಿಗಳು ಬದಲಾದರೂ ಅಲ್ಲಿ ಜೀವನದ ಸಂಸ್ಕೃತಿ ಹೀಗೆ ಭಾಷೆಯಲ್ಲಿ ಉಳಿದುಕೊಂಡು ಬಂದಿರುತ್ತದೆ. ಸಾಮಾಜಿಕ ಭಾಷಾಶಾಸ್ತ್ರದಲ್ಲಿ ಇಂಥ ಅನೇಕ ವಿವರಗಳು ದೊರಕುತ್ತವೆ. ತ್ವಾಟ = ತೋಟ.

# ಥ

**ಥೇಟ್** ಎನ್ನುವುದು ಅನ್ಯದೇಶ್ಯ ಶಬ್ದ. ಮರಾಠಿಯಲ್ಲಿ ಈ ರೂಪವಿದೆ. ಹಿಂದಿಯಲ್ಲಿ ಥೇಠ್ ಎಂಬ ರೂಪವಿದೆ. ಇದು ಗುಣವಾಚಕ. ವ್ಯತ್ಯಾಸವಿಲ್ಲದ ಎಂಬುದು ಅದರ ಅರ್ಥ.

# ದ

**ದಂಗೆ** ಇದು ಮರಾಠಿಯ ದಂಗಾ ಎಂಬ ಶಬ್ದದಿಂದ ಬಂದಿದೆ. ಆಡಳಿತದ ವಿರುದ್ಧವಾಗಿ ನಡೆಸುವ ಸಾಮಾಜಿಕ, ಸಾಮೂಹಿಕ ಬಂಡಾಯ. ಕಾಟಕಾಯಿ.

**ದಂಡ** ಎನ್ನುವುದು ಸಂಸ್ಕೃತದ ಶಬ್ದ. ಇದಕ್ಕೆ ಸುಮಾರು ೨೫ ಅರ್ಥಗಳಿವೆ. ಅವುಗಳನ್ನು ಆಯಾ ಸಂದರ್ಭದಲ್ಲಿ ಉಪಯೋಗಿಸುತ್ತಾರೆ ಲೇಖಕರು. ಸಾಮಾನ್ಯವಾಗಿ 'ದಂಡ' ಎಂದರೆ *೧. ಕೋಲು, ೨. ಸಾಮ ದಾನ ಭೇದ ದಂಡ ಎಂಬ ನಾಲ್ಕು ಉಪಾಯಗಳಲ್ಲಿ ಒಂದು ೩. ಅಪರಾಧಿಗಳಿಗೆ ವಿಧಿಸುವ ಜುಲ್ಮಾನೆ ೪. ವ್ಯರ್ಥವಾದುದು, ಉಪಯೋಗಕ್ಕೆ ಬರದಿರುವುದು* ಇತ್ಯಾದಿ. ದಂಡಕ್ಕೆ ಬಾವುಟವನ್ನು ಕಟ್ಟಿದರು, ದಂಡೋಪಾಯದಿಂದಲೇ ದುರ್ಯೋಧನನು ಹಾಳಾದನು. ಅವನು ೪೦೦ ರೂಪಾಯಿಗಳ ದಂಡ ತೆರಬೇಕಾಯಿತು. ಹೀಗೆ ಇದು ವಿವರವಾಗಿದೆ.

**ದಂಡಕಾರಣ್ಯ** ರಾಮಾಯಣದಲ್ಲಿ ಬರುವ ಒಂದು ಕಾಡಿಗೆ ಅಂಕಿತನಾಮ. ದಂಡಕ ಎಂಬ ಹೆಸರಿನ ಕಾಡು. ಈಗಿನ ಜಯಪುರದ ಸುತ್ತಮುತ್ತ ಈ ಅರಣ್ಯವು ಹರಡಿದ್ದಿತು ಎಂಬುದು ಈಗಿನವರು ಊಹಿಸಿರುವ ಪ್ರದೇಶಗಳ ಕಾಡು. ಈಗಲೂ ಅಲ್ಲಿ ದಟ್ಟವಾದ ಕಾಡಿದೆ. ಅದಕ್ಕೆ ದಂಡಕಾರಣ್ಯ ಎಂದೇ ಹೆಸರು.

**ದಂಡಿ** ಇದು ಸಂಸ್ಕೃತದ ದಂಡಿನ್ ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಅನೇಕ ಅರ್ಥಗಳಿವೆ. *೧. ಬಾಗಿಲು ಕಾಯುವವನು, ದ್ವಾರಪಾಲಕ ೨. ಯಮ ೩. ಸಂನ್ಯಾಸಿ ೪. ಶಿವ ೫. ಅಂಬಿಗ, ದೋಣಿಯನ್ನು ನಡೆಸುವವನು. ಕನ್ನಡದಲ್ಲಿ ಈ ಶಬ್ದವು ಅಷ್ಟು ಪ್ರಚಾರದಲ್ಲಿಲ್ಲ. ಕನ್ನಡದ್ದೇ ಆದ ದಂಡಿ ಎಂಬ ಇನ್ನೊಂದು ಶಬ್ದವಿದೆ. ಅದಕ್ಕೆ ೧. ಹಿರಿಮೆ, ಘನತೆ, ೨. ಪರಾಕ್ರಮ ೩. ಪ್ರಯಾಸ ೪. ಯುದ್ಧ, ಕಾಳಗ ೫. ಅತಿಶಯ ಎಂಬ ಅರ್ಥಗಳಿವೆ.*

**ದಂತಕಥೆ** ಈ ಶಬ್ದದ ಚರಿತ್ರೆಯೇ ಒಂದು ಕಥೆ. ಸಂಸ್ಕೃತದಲ್ಲಿ 'ಉದಂತ' ಎಂಬ ಶಬ್ದವಿದೆ. ಇದಕ್ಕೆ ವರ್ತಮಾನ, ಸುದ್ದಿ, ಸಮಾಚಾರ, ವಿವರವಾದ, ಕೊನೆಯ ತನಕ ಹೇಳುವ ಸಮಾಚಾರ, ಪೂರ್ಣವಾದ ಸುದ್ದಿ ಎಂದರ್ಥ. ಹೀಗಿರುವುದರಿಂದ ವರ್ತಮಾನವನ್ನು ಒಯ್ಯುವವನಿಗೂ ಉದಂತ ಎಂಬ ಹೆಸರೇ ಅನ್ವಯವಾಗುತ್ತದೆ. ಹೀಗೆ ಉದಂತನು ತಂದ ವರ್ತಮಾನ ಎಂಬುದು 'ಉದಂತ ಕಥಾ' ಎಂದಾಯಿತು. ಇದೇ ಬಳಿಕ 'ದಂತ ಕಥೆ' ಆಗಿದೆ. 'ರಾಮೋದಂತ' ಎಂಬ ಒಂದು ಕಾವ್ಯವೇ ಇದೆ ಸಂಸ್ಕೃತದಲ್ಲಿ. ಉದಂತ ಕಥೆ ಎಂಬುದು ಮೊದಲು ಪ್ರಚಾರದಲ್ಲಿದ್ದು ಬಳಿಕ ದಂತ ಕಥೆ (ತೆ) ಎಂದಾಗಿದೆ. ಇದಕ್ಕೆ ಈಗಿರುವ ಅರ್ಥಕ್ಕೆ ಯಾವ ಆಧಾರವೂ ಇಲ್ಲದ, ಕರ್ಣಾಕರ್ಣಿಕೆಯಾಗಿ ಹಬ್ಬಿ ಬಾಯಿಂದ ಬಾಯಿಗೆ ಸಾಗುವ ಕಥೆ, ವರ್ತಮಾನ ಎಂದಷ್ಟೇ Rumour ಎಂಬ ಅರ್ಥ.

'ಜನಸಾಮಾನ್ಯರು ಎಲ್ಲರೂ ನಂಬಿರುವ, ಆದರೆ ಯಾವ ಆಧಾರವೂ ಇಲ್ಲದ ಕಥೆ' ಎಂದೇ ಅದಕ್ಕೆ ಅರ್ಥ. ರಾಘವಾಂಕನ ಹಲ್ಲುಗಳು ಉದುರಿ ಹೋದುವೆಂಬ ಚಾರಿತ್ರಕವಾದ ಹಿನ್ನೆಲೆಯುಳ್ಳ ಕಥೆ ಇಂಥದೆ. ಅದರಲ್ಲಿಯೂ ಯಾವ ದಂತದ ಸಂಬಂಧವೂ ಇಲ್ಲ.

**ದಂದಣ - ದತ್ತಣ** ಈ ಶಬ್ದ ಅನುಕರಣವಾಚಕ. ಯಾವುದಾದರೂ ಸಮಯದಲ್ಲಿ ಇಕ್ಕಟ್ಟಿಗೆ ಸಿಕ್ಕಿಕೊಂಡವರು ದಮ್ಮಯ್ಯಾ, ದತ್ತಯ್ಯಾ ಎಂದು ಕಿರಿಚಿ ಸಹಾಯವನ್ನು ಬೇಡುವಂತೆ ಈ 'ದಂದಣ ದತ್ತಣ' ವನ್ನೂ ಉಪಯೋಗಿಸುತ್ತಿದ್ದರು. ಈಗ ಇದು ಕೇವಲ ಗ್ರಂಥಗಳಲ್ಲಿರುವ ಶಬ್ದಗಳಾಗಿವೆ.

**ದಂದರ ಹಾಳಿ** ಈ ಶಬ್ದ ದುಂದು +ಹಾಳು ಎಂದು ಎರಡು ಶಬ್ದಗಳು ಸೇರಿ ಆಗಿರುವುದು. ದಂದರ ಹಾಳ ಪುಲ್ಲಿಂಗ. ದಂದರ ಹಾಳಿ - ಸ್ತ್ರೀಲಿಂಗ. ಈ ಶಬ್ದಕ್ಕೆ ದುಂದುವೆಚ್ಚ ಮಾಡುವ ವ್ಯಕ್ತಿ ಎಂದರ್ಥ. ದಂಧರ ಹಾಳಿ ಎಂಬ ಶಬ್ದದಲ್ಲಿರುವ ಮಹಾಪ್ರಾಣ ತಪ್ಪು. ದಂದರ ಹಾಳಿ ಸರಿಯಾದ ರೂಪ. ದಂಧ್ರ ಹಾಳಿ, ದಂಧ್ರಾಳಿ ಮುಂತಾದ ರೂಪಗಳೂ ತಪ್ಪು.

**ದಂಧೆ** ಇದು ಹಿಂದಿಯ ಧಂಧಾ ಮತ್ತು ಮರಾಠಿಯ ಧಂದಾ ಎಂಬ ಶಬ್ದಗಳಿಂದ ಬಂದುದು. ಇದಕ್ಕೆ ಜೀವನಕ್ಕೆ ಹುಡುಕುವ ಉಪಾಯ, ಮಾರ್ಗ ಎಂದರ್ಥ. ಹೊಟ್ಟೆಪಾಡಿಗಾಗಿ ಒಬ್ಬ ವ್ಯಕ್ತಿ ಕೈಗೊಳ್ಳುವ ವೃತ್ತಿಯು ಅವನ ದಂಧೆ ಆಗಬಹುದು. ಬರಿಯ ಕೆಲಸಕ್ಕೂ ಕನ್ನಡದಲ್ಲಿ ದಂಧೆ ಎಂದೇ ಉಪಯೋಗಿಸುತ್ತಾರೆ.

**ದಂಪತಿ** ಇದು ಸಂಸ್ಕೃತ ಶಬ್ದ. ಪತ್ನಿ ಮತ್ತು ಪತಿ ಎಂದು ಅದರ ಅರ್ಥ. ಸಂಸ್ಕೃತದಲ್ಲಿ ಅದರ ವಿಗ್ರಹವಾಕ್ಯ ಹೀಗಿದೆ: **ಜಾಯಾಚ ಪತಿಶ್ಚ**. ಹೆಂಡತಿ ಮತ್ತು ಗಂಡ. **ಜಾಯಾ ಶಬ್ದಸ್ಯ ದಮ್ ಭಾವೋ ನಿಪಾತ್ಯತೇ** ಎಂದು ವ್ಯಾಕರಣದ ವಿವರಣೆ. ಇದರಿಂದಾಗಿ ದಮ್ + ಪತಿ ಸೇರಿ ದಂಪತಿ ಎಂದಾಗಿದೆ. ಈ ಶಬ್ದವನ್ನು ಕಾಳಿದಾಸನು ಕುಮಾರ ಸಂಭವದಲ್ಲಿ ಉಪಯೋಗಿಸಿರುವ ರಸಮಯವಾದ ಸನ್ನಿವೇಶವನ್ನು ನೋಡಿ. **ತೌ ದಂಪತೀ ತ್ರಿಃಪರಿಣೀಯ ವಹ್ನಿಮನ್ಯೋನ್ಯ ಸಂಸ್ಪರ್ಶ ನಿಮೀಲಿತಾಕ್ಷೌ** (೭-೮೦). ಸಮಾಸವಾದಾಗ ಜಾಯಾ ಶಬ್ದಕ್ಕೆ ದಮ್ ಎಂಬ ಭಾವ ಬರುತ್ತದೆ ಎಂದು ತಿಳಿಯಬೇಕು.

**ದಂಷ್ಟ್ರಾ** ಎಂದರೆ ಕೋರೆ ಹಲ್ಲುಗಳು. ಆನೆ, ಹುಲಿ, ಸಿಂಹ,ಕರಡಿ ಮುಂತಾದುವುಗಳಿಗೆ ಇರುವ ಉದ್ದವಾದ ಹಲ್ಲುಗಳು. ಕನ್ನಡದಲ್ಲಿ ಈ ಶಬ್ದ ದಾಡೆ ಎಂದಾಗುತ್ತದೆ. ಅದಕ್ಕೆ ಕೋರೆ ಹಲ್ಲು ಎಂದೇ ಅರ್ಥ. ಕೋರೆದಾಡೆ ಎಂಬ ಶಬ್ದವೂ ಪ್ರಯೋಗದಲ್ಲಿದೆ.

**ದಗದ** ಎಂದರೆ ಕೆಲಸ, ಉದ್ಯೋಗ. ಈ ಶಬ್ದ ಮರಾಠೀ ಭಾಷೆಯಿಂದ ಕನ್ನಡಕ್ಕೆ ಬಂದಿದೆ. ಮರಾಠೀ ಭಾಷೆಯಲ್ಲಿ 'ದಗದ' ಎಂದರೆ ಶ್ರಮಪಡುವುದು. ಅದೇ ಕೆಲಸ, ಕಾರ್ಯ ಎಂಬ ಅರ್ಥದಲ್ಲಿ ದ್ವಿಭಾಷಾ ಪ್ರದೇಶಗಳಲ್ಲಿ ಪ್ರಯೋಗದಲ್ಲಿದೆ.

**ದಡಿಯ-ಧಾಂಡಿಗ** ಎಂದರೇನು? ಧಡಿಯ ಎಂಬುದು ದಡಿಗ ದಾಂಡಿಗ ಎಂಬ ಅರ್ಥದ ಶಬ್ದ. ಬಲಶಾಲಿ, ಶಕ್ತ ಎಂದರ್ಥ. ತಮಿಳಿನಲ್ಲಿ ತಟಿಯ ಎಂಬ ಶಬ್ದವಿದೆ. ಇದು ದ್ರಾವಿಡ ಮೂಲದ ಶಬ್ದ. ದಾಂಡಿಗ ಎನ್ನುವುದು ಮರಾಠಿಯ ದಾಂಡಗಾ ಎಂಬ ಶಬ್ದದ ರೂಪಾಂತರ. ಅದಕ್ಕೆ ಗಟ್ಟಿಗ, ಕಟ್ಟುಮಸ್ತಾದ ಆಳು ಎಂದೇ ಅರ್ಥ.

**ದಣಪೆ** ಈ ಶಬ್ದಕ್ಕೆ ಮತ್ತೊಂದು ಪರ್ಯಾಯ ಶಬ್ದವಿದೆ ಕನ್ನಡದಲ್ಲಿ: ತಡಮೆ. ಮನೆಯ ಮುಂದಿನ ಅಂಗಳಕ್ಕೆ ದನಕರುಗಳು ನುಗ್ಗದಂತೆ ಅಡ್ಡಲಾಗಿ ಬಿದಿರು ಕೋಲುಗಳನ್ನು ಸೇರಿಸುವ ಚೌಕಟ್ಟಿಗೆ ದಣಪೆ ಎಂದು ಹೆಸರು. ವಿಸ್ತಾರವಾದ ತೋಟಕ್ಕಾಗಲಿ ಸಣ್ಣ ಕೈ ತೋಟಕ್ಕಾಗಲಿ ಹೀಗೆ ರಕ್ಷಣೆ ಮಾಡುವುದು ಎಲ್ಲ ಕಡೆಯ ಸಂಪ್ರದಾಯ. ದಕ್ಷಿಣ ಕನ್ನಡದಲ್ಲಿ ಈ ಏರ್ಪಾಟಿಗೆ ದಣಪೆ ಎಂದು ಕರೆಯುತ್ತಾರೆ.

**ದತ್ತಾತ್ರೇಯ** ಅತ್ರಿ ಮಹರ್ಷಿಯ ಮಗ ಆತ್ರೇಯ. ಅತ್ರಿಯ ಹೆಂಡತಿ ಅನಸೂಯಾದೇವಿ.

ಇವರ ಮಗ ದತ್ತ +ಆತ್ರೇಯ. ಅತ್ರಿಮಹರ್ಷಿಯು ತ್ರಿಮೂರ್ತಿಗಳನ್ನು ಕುರಿತು ತಪಸ್ಸು ಮಾಡಿದಾಗ ತ್ರಿಮೂರ್ತಿಗಳು ಒಬ್ಬೊಬ್ಬರ ಅಂಶದಿಂದ ಒಬ್ಬೊಬ್ಬ ಮಗ ಹುಟ್ಟುವಂತೆ ವರ ನೀಡಿದರು. ಬ್ರಹ್ಮನ ಅಂಶದಿಂದ ಚಂದ್ರನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ, ಈಶ್ವರನ ಅಂಶದಿಂದ ದೂರ್ವಾಸನೂ ಜನಿಸಿದರು. ದತ್ತಾತ್ರೇಯನು ಬ್ರಹ್ಮಚಾರಿಯಾಗಿದ್ದು ಅಲರ್ಕನಿಗೆ ಆನ್ವೀಕ್ಷಕೀ ವಿದ್ಯೆಯನ್ನು ಬೋಧಿಸಿದನು.

**ದಧಿ** ಎನ್ನುವುದು ಆಜ್ಯ = ತುಪ್ಪ, ನವನೀತ = ಬೆಣ್ಣೆ ಇವುಗಳ ಮೂಲದ ಹೆಸರು ಎಂದು ಒಂದು ಟೀಕೆ ಹೇಳುತ್ತದೆ. ಎಂದರೆ ಮೊಸರು, ಹಾಲಿಗೆ ಹೆಪ್ಪು ಹಾಕಿದಾಗ ಉಂಟಾಗುವ ವಸ್ತು. ಇದೇ ದಧಿ. ಮಜ್ಜಿಗೆಗೆ ಶರ, ದ್ರಪ್ಸ ಎಂಬ ಹೆಸರುಗಳಿವೆ ಸಂಸ್ಕೃತದಲ್ಲಿ.

**ದನಗ** ಇದು ಕನ್ನಡದ ಶಬ್ದ. ಇದಕ್ಕೆ ಅರ್ಥ ಒಂದು ಬಗೆಯ ನಪುಂಸಕ ಟಗರು. ಹುಟ್ಟಾ ಪುಂಸತ್ವವಿಲ್ಲದ ಟಗರು. ಸುಮ್ಮನೆ ಕೊಬ್ಬಿರುವ ವ್ಯಕ್ತಿಗೂ ಇದನ್ನು ಅನ್ವಯಿಸುತ್ತಾರೆ.

**ದಫಾ** ಇದು ಅರಬ್ಬಿ ಶಬ್ದ. ಮೂಲದಲ್ಲಿ 'ದಫ್ಆ' ಎಂದು ರೂಪ. ಸರದಿ, ಸಲ, ಕಾಲ ಎಂದು ಅರ್ಥ.

**ದಫ್ತರ್, ದಪ್ತರ** ಇದು ಅರಬ್ಬೀ ಭಾಷೆಯ ಶಬ್ದ. ಅದಕ್ಕೂ ಗ್ರೀಕ್ ಭಾಷೆಯ ಶಬ್ದಕ್ಕೂ ಸಂಬಂಧವಿದೆ, ಎಂದು ಹೇಳುತ್ತಾರೆ. ಇದಕ್ಕೆ ಸರ್ಕಾರದ ಕಾಗದ ಪತ್ರ, ದಾಖಲೆ, ಲೆಕ್ಕಪತ್ರ ಎಂಬ ಅರ್ಥಗಳಿವೆ. ಮರಾಠೀ, ಹಿಂದೀ ಭಾಷೆಗಳಲ್ಲೂ 'ದಫ್ತರ್' ಎಂದು ಉಪಯೋಗವಾಗುತ್ತಿದೆ. ಇದು ಕಛೇರಿಯ ಎಲ್ಲ ರಿಜಿಸ್ಟರು, ಕಡತಗಳು — ಇವುಗಳಿಗೂ ಅನ್ವಯವಾಗುತ್ತದೆ. ಒಂದು ವಿಷಯದ ಬಗ್ಗೆ ಇರುವ ಎಲ್ಲ ವಿವರಗಳೂ ಒಂದೇ ಕಡೆ ಸಿಕ್ಕುವಂತೆ ಇರುವ ದಾಖಲೆ ಅದು. ದಪ್ತರ್ ಎಂಬ ತತ್ಸಮ ಪ್ರಯೋಗದಲ್ಲಿದೆ. ಆ ಎಲ್ಲ ವಿವರಗಳನ್ನೂ ಇಡುವ ಜಾಗಕ್ಕೆ ದಫ್ತರ್ ಖಾನಾ ಎಂದು ಕರೆಯುತ್ತಾರೆ.

**ದಬರಿ** ಇದು ಹಿಂದೀ ಭಾಷೆಯ ಡಬರೀ ಎಂಬ ಶಬ್ದದಿಂದ ಬಂದದ್ದು. ಹಿಂದಿಯಲ್ಲಿ ಆ ಶಬ್ದಕ್ಕೆ ಚಿಕ್ಕ ಹೊಂಡ, ಹಳ್ಳ ಎಂದರ್ಥ. ಕನ್ನಡದಲ್ಲಿ ಲೋಹದಿಂದ ಮಾಡಿದ ಅಗಲವಾದ ಬಾಯಿಯುಳ್ಳ ಪಾತ್ರೆ, ಬೋಗುಣಿ ಎಂದರ್ಥ. ಕನ್ನಡದಲ್ಲಿ ಡಬರಿ, ದಬರಿ, ದಬ್ಬರಿ, ದಬ್ಬರೆ ಎಂಬ ರೂಪಗಳೂ ಇವೆ.

**ದಬಾಯಿಸು** ಇದು ಕನ್ನಡದ ಶಬ್ದವಲ್ಲ. ಹಿಂದೀ ಭಾಷೆಯಲ್ಲಿ ದಬಾವ್ ಎಂಬ ಶಬ್ದವಿದೆ. ಅದಕ್ಕೆ ಒತ್ತಾಯ, ಜುಲುಮೆ ಎಂದರ್ಥ. ಇದರಿಂದ ಗದರಿಸು, ಒತ್ತಾಯ ಮಾಡು ಎಂಬ ಅರ್ಥ ಬರುವಂತೆ ದಬಾಯಿಸು ಎಂದು ಕನ್ನಡಕ್ಕೆ ಎರವಲಾಗಿ ತಂದಿದ್ದೇವೆ. ದಬಾವ್ + ಇಸು = ದಬಾಯಿಸು.

**ದರಖಾಸ್ತು, ದರಕಾಸ್ತು** ಇದು ಪಾರಸೀ ಭಾಷೆಯ ದರಖಾಸ್ತ್ ಶಬ್ದದಿಂದ ಬಂದಿದೆ. ಇದಕ್ಕೆ ಅರ್ಜಿ, ವಿನಂತಿ, ಬೇಡಿಕೆಯ ಪತ್ರ ಎಂದಷ್ಟೇ ಅರ್ಥ. ಕನ್ನಡದಲ್ಲಿ ಈ ಬಗೆಯ ಆಡಳಿತ ಭಾಷೆಯ ಉಪಯೋಗ ಹೆಚ್ಚಿದಂತೆಲ್ಲಾ ಈ ಶಬ್ದದ ಅರ್ಥವೂ ಬೇರೆ ಬೇರೆಯಾಗಿದೆ. ಕನ್ನಡದಲ್ಲಿ ಸಾಗುವಳಿ ಭೂಮಿಗೆ ಕೊಡುವ ತೆರಿಗೆಯ ಹಣಕ್ಕೆ ಈ ಹೆಸರಿದೆ. ಸರಕಾರದವರು ಸಾಗುವಳಿಗೆಂದು ನೀಡುವ ಜಮೀನಿಗೂ ಕೂಡ ಇದೇ ಶಬ್ದವನ್ನು ಉಪಯೋಗಿಸುತ್ತಾರೆ. ಈಗಲೂ ಈ ಶಬ್ದ ವ್ಯವಸಾಯದ ಇಲಾಖೆಯಲ್ಲಿ ತುಂಬಾ ಪ್ರಚಾರದಲ್ಲಿದೆ. ದರಖಾಸ್ತು ಎಂಬುದು ಹೆಚ್ಚು ಪ್ರಚಾರದಲ್ಲಿರುವ ರೂಪ.

**ದರಬೇಸಿ, ದರ್ವೇಶ್** ಎಂಬುದು ಪಾರಸೀ ಶಬ್ದ. ಅದಕ್ಕೆ ಮುಸಲ್ಮಾನ್ ಮತದ ಫಕೀರ ಎಂದರ್ಥ. ಅದಲ್ಲದೆ, ದರಿದ್ರ, ಬಡವ ಎಂದೂ ಅರ್ಥವಿದೆ. ಈ ಶಬ್ದ ನಮಗೆ ಮರಾಠಿ ಭಾಷೆಯ ಮೂಲಕ ಬಂದಿದೆ. ಮರಾಠಿಯಲ್ಲಿ ಕರಡಿಯನ್ನು ಆಡಿಸುವವನಿಗೆ ವಿಶೇಷವಾಗಿ ದರವೇಶೀ ಎಂಬ ಶಬ್ದ ರೂಪವನ್ನು ಉಪಯೋಗಿಸುತ್ತಾರೆ.

**ದರೋಡೆ** ಎಂಬ ಶಬ್ದವು ನಮಗೆ ಮರಾಠಿಯಿಂದ ಬಂದಿದೆ. ಹೆದರಿಸಿ ಸುಲಿಗೆ ಮಾಡುವುದು ಎಂದು ಅದರ ಅರ್ಥ. ಇದಕ್ಕೆ ಕನ್ನಡದ ಕಾರ ಪ್ರತ್ಯಯ ಹತ್ತಿಸಿದರೆ ದರೋಡೆಕಾರ = ದರೋಡೆ ಮಾಡುವವನು ಎಂದು ಅರ್ಥವಾಗುತ್ತದೆ. ಖೋರ ಎಂಬುದು ಅರಬ್ಬಿ ಪಾರ್ಸಿ ಭಾಷೆಗಳಿಂದ ಬಂದ ಒಂದು ಪ್ರತ್ಯಯ. 'ಇದನ್ನು ಮಾಡುವವನು' ಎಂಬ ಅರ್ಥದಲ್ಲಿ ಇದನ್ನು ಶಬ್ದಕ್ಕೆ ಹತ್ತಿಸುತ್ತಾರೆ. ಹೀಗೆ ಅದು ಮರಾಠಿಯಲ್ಲಿ ದರೋಡೆಖೋರ ಆಯಿತು. ಕನ್ನಡಕ್ಕೆ ಬಂದು ದರೋಡೆಕೋರ ಆಯಿತು. ಎರಡು ಶಬ್ದಗಳಿಗೂ ಒಂದೇ ಅರ್ಥ.

**ದರ್ಬಾರು** ಇದು ಪಾರಸೀ ಭಾಷೆಯ ಶಬ್ದ. ಇದಕ್ಕೆ ಆಸ್ಥಾನ, ರಾಜನ ಒಡ್ಡೋಲಗ ಎಂದು ಅರ್ಥ. ಸರಕಾರ ಎಂಬ ಅರ್ಥವೂ ಇದೆ. ಕನ್ನಡದಲ್ಲಿ ರಾಜಸಭೆ ಎಂಬ ಅರ್ಥಕ್ಕಿಂತ ಹೆಚ್ಚಾಗಿ ದರ್ಪ, ಧಿಮಾಕು ಎಂಬುದು ಈಗಿನ ಪ್ರಯೋಗಗಳ ಅರ್ಥ.

**ದರ್ಶನ** ಶಬ್ದಕ್ಕೆ ೧೫-೧೬ ಅರ್ಥಗಳಿವೆ. ನೋಡುವುದು ಎಂಬುದು ಮೊದಲ ಅರ್ಥ. ಪ್ರದರ್ಶನ ಎಂದರೆ ಸಂಸ್ಕೃತದಲ್ಲೂ ಕನ್ನಡದಲ್ಲೂ ತೋರಿಸುವುದು ಎಂದರ್ಥ. ತನ್ನನ್ನೇ ತೋರ್ಪಡಿಸಿಕೊಳ್ಳುವುದಕ್ಕೂ ಅದೇ ಶಬ್ದವನ್ನು ಉಪಯೋಗಿಸಬಹುದು. ವಿಶ್ವರೂಪ ದರ್ಶನ, ವಸ್ತುಪ್ರದರ್ಶನ, ದರ್ಶನಗೃಹ ಮುಂತಾದ ಶಬ್ದಗಳನ್ನು ಗಮನಿಸಿ.

**ದಲ್ಲಾಳ** ಇದು ಅರಬ್ಬಿ ಮತ್ತು ಪಾರಸೀ ಭಾಷೆಯ ದಲ್ಲಾಲ್ ಶಬ್ದದಿಂದ ಬಂದಿದೆ. ಕನ್ನಡದಲ್ಲಿ ದಲ್ಲಾಲ, ದಳ್ಳಾಳ ಎಂಬ ಮತ್ತೆರಡು ರೂಪಗಳನ್ನು ಹೊಂದಿದೆ. ಇವನು commission agent. ಮಾರಾಟ ಮಾಡುವವರ ಕೊಳ್ಳುವವರ ನಡುವೆ ವ್ಯವಹಾರ ಕುದುರಿಸಿ ತನ್ನ ಶುಲ್ಕ ಪಡೆಯುವವನು. ಇವರಿಂದಲೇ ಮಾರುಕಟ್ಟೆಯಲ್ಲಿ ವಸ್ತುಗಳ ಬೆಲೆ ನಿಗದಿತವಾಗುವುದು.

**ದವಾಖಾನೆ** ದವಾಖಾನೆ ಎಂಬುದು ಅರಬ್ಬೀ ಮತ್ತು ಪಾರಸೀ ಭಾಷೆಗಳ ಶಬ್ದ. ಮರಾಠಿಯ ಮೂಲಕ ಕನ್ನಡಕ್ಕೆ ಬಂದಿದೆ. ಆಸ್ಪತ್ರೆಗೆ ಪೋರ್ಚುಗಲ್ ಭಾಷೆಯಲ್ಲಿ ಎಸ್ಪಿಟಲ್ ಎಂದಿರುವ ಶಬ್ದವೇ ಮೂಲ. ಅದು ಇಂಗ್ಲೀಷ್ನಲ್ಲಿ ಹಾಸ್ಪಿಟಲ್ ಎಂದಾಗಿ ಕನ್ನಡದಲ್ಲಿ ಆಸ್ಪತ್ರೆ ಎಂದಾಗಿದೆ. ತೆಲುಗಿನಲ್ಲಿ ಆಸ್ಪತ್ತಿರಿ ಎಂದಾಗಿದೆ. ಈ ಎಲ್ಲಕ್ಕೂ ವೈದ್ಯಶಾಲೆ ಎಂಬ ಅರ್ಥಗಳೂ ಮೂಲದಲ್ಲಿವೆ. ದವಾ = ಔಷಧಿ, ಖಾನಾ = ಸ್ಥಾನ.

**ದಶದಿಕ್ಕು** ೧. ಪೂರ್ವ ೨. ಆಗ್ನೇಯ ೩. ದಕ್ಷಿಣ ೪. ನೈರ್ಋುತ ೫. ಪಶ್ಚಿಮ ೬. ವಾಯುವ್ಯ ೭. ಉತ್ತರ ೮. ಈಶಾನ್ಯ. ಇವು ೮ ದಿಕ್ಕುಗಳು ಸರಿ. ಇವುಗಳ ಜೊತೆಗೆ ಆಕಾಶದ ಕಡೆಗಿರುವ ದಿಕ್ಕು ೯. ಊರ್ಧ್ವ ದಿಕ್ಕು. ಪಾತಾಳದ ಕಡೆಗಿರುವ ದಿಕ್ಕು ೧೦. ಅಧೋದಿಕ್ಕು. ಅಂದರೆ ಮೇಲೆ ಕೆಳಗೆ. ಇಷ್ಟು ಸೇರಿ ದಶದಿಕ್ಕುಗಳಾಗುತ್ತವೆ. ದಶರಥ ಮಹಾರಾಜನು ಹತ್ತು ಕಡೆಗೂ ತನ್ನ ತೇರನ್ನು ಓಡಿಸುವ ಶಕ್ತಿಯುಳ್ಳವನಾಗಿದ್ದನು. ಅದಕ್ಕೆ ಅವನಿಗೆ ದಶರಥ ಎಂದು ಹೆಸರು ಬಂತು.

**ದಸ್ಕತ್ತು** ಪಾರಸೀ ಭಾಷೆಯ ದಸಖತ್, ದಸ್ತಖತ್ ಎಂಬ ಶಬ್ದಗಳ ಕನ್ನಡ ರೂಪ. ಇದಕ್ಕೆ ಸಹಿ, ಹಸ್ತಾಕ್ಷರ, ಒಪ್ಪ, ಅಂಕಿತ ಎಂದು ಅರ್ಥ. ಪತ್ರಕ್ಕೆ ದಸ್ಕತ್ ಹಾಕಿಸು ಎಂಬುದು ಸಾಮಾನ್ಯವಾಗಿ ಕೇಳುವ ಮಾತು. ಕನ್ನಡದಲ್ಲಿ ಈ ಶಬ್ದಕ್ಕೆ ದಸಕತು, ದಸ್ಕತ್, ದಸ್ಕತು, ದಸ್ತಕತ್ತು ಎಂಬ ರೂಪಗಳೂ ಇವೆ. ಸಾಹಿತ್ಯದಲ್ಲಿ ಇವೆಲ್ಲ ಪ್ರಯೋಗವಾಗಿವೆ.

**ದಸ್ತಗಿರಿ** ಇದಕ್ಕೆ ಸೆರೆ ಹಿಡಿಯುವುದು, ಸ್ವಾಧೀನಕ್ಕೆ ತರುವುದು, ಬಂಧಿಸುವುದು, ಕೈದ್ ಮಾಡುವುದು ಎಂದರ್ಥ. ಇದು ಪಾರಸೀ ಭಾಷೆಯಲ್ಲಿ ದಸ್ತಗಿರಿ ಎಂಬ ರೂಪದಲ್ಲಿ ಪ್ರಯೋಗದಲ್ಲಿರುವ ಶಬ್ದ. ಮರಾಠಿಯಲ್ಲಿ ದಸ್ತಗೀರ್ ಎಂಬಂತೆ ಉಪಯೋಗವಾಗುತ್ತಿದೆ.

**ದಸ್ತಾವೇಜು** ಇದು ಪಾರಸೀ ಭಾಷೆಯಲ್ಲಿರುವ ಎರಡು ಶಬ್ದಗಳು ಸೇರಿ ಆಗಿರುವ ಸಮಾಸ ಶಬ್ದ. ದಸ್ತ್ ಎಂದರೆ ತೆರಿಗೆ, ಅಧಿಕಾರ ಎಂಬ ಅರ್ಥಗಳಿವೆ. ಐವಜ್ ಎಂದರೆ ಆಸ್ತಿ, ಐಶ್ವರ್ಯ, ಹಣ ಎಂಬ ಅರ್ಥಗಳಿವೆ. ಆದುದರಿಂದ ದಸ್ತಾವೇಜು, ದಸ್ತೈವಜ್ ಶಬ್ದದ

ಕನ್ನಡ ರೂಪ. ಇದಕ್ಕೆ ಪ್ರಮಾಣಭೂತವಾಗಿರುವ ಕಾಗದ ಪತ್ರ, ದಾಖಲೆ ಎಂದರ್ಥ. ಹಣ ಪಾವತಿ ಮಾಡಿದ ರಸೀದಿ ಕೂಡ ಒಂದು ದಸ್ತಾವೇಜು. ಹಿಂದೀ ಭಾಷೆಯಲ್ಲಿ ದಸ್ತಾವೇಜ್ ತುಂಬಾ ಪ್ರಚಾರದಲ್ಲಿದೆ. ಮರಾಠಿಯಲ್ಲಿಯೂ ದಸ್ತಾವೇಜ್ ರೂಪವೇ ಇದೆ.

**ದಳ್ಳುರಿ** ಇದು ಕನ್ನಡದ ಶಬ್ದ. ದಳ್ + ಉರಿ = ದೊಡ್ಡ ಉರಿ, ಉರಿಯುವ ಜ್ವಾಲೆ, ಮಹತ್ತಾದ ಬೆಂಕಿಯ ಜ್ವಾಲೆ ಎಂದರ್ಥ. 'ದಳ್' ಎಂಬುದು ಒಂದು ಅನುಕರಣ ಶಬ್ದ.

**ದಾಖಲು** ಅರಬ್ಬೀ ಭಾಷೆಯ ದಾಖಿಲಾ ಎಂಬ ಶಬ್ದವು ಕನ್ನಡದಲ್ಲಿ ಪಡೆದಿರುವ ರೂಪ. ಇದಕ್ಕೆ ದಾಖಲೆ ಎಂಬ ಇನ್ನೊಂದು ಪರ್ಯಾಯ ರೂಪವೂ ಇದೆ. ಇದಕ್ಕೆ ಮೂಲದಲ್ಲಿ ದೃಷ್ಟಾಂತ, ಶಿಫಾರಸು ಎಂಬ ಅರ್ಥಗಳಿದ್ದರೆ, ಕನ್ನಡದಲ್ಲಿ — ಲೆಕ್ಕಕ್ಕೆ ಸೇರಿದುದು, ರುಜುವಾತು, ಸರಕಾರೀ ಪತ್ರಗಳಲ್ಲಿರುವ ಒಕ್ಕಣೆಕೆ ಎಂಬ ಅರ್ಥಗಳಿವೆ.

**ದಾಗ -** ದಾಗೀನ್ ಇದು ಮರಾಠೀ ಶಬ್ದ. 'ಒಡವೆ ವಸ್ತು' ಎಂಬಂತೆ 'ಅಲಂಕಾರ ಆಭರಣ' ಎಂಬಂತೆ ಜೊತೆಯಲ್ಲಿ ಪ್ರಯೋಗವಾಗುವ ಶಬ್ದ. ಕನ್ನಡಕ್ಕೆ ಮರಾಠಿಯಿಂದ ಬಂದಿದೆ.

**ದಾಡಿ** ನೋಡಿ: ಧಾಡಿ

**ದಾನಪಾತ್ರ** ಈ ಶಬ್ದಕ್ಕೆ ದಾನವನ್ನು ಸ್ವೀಕರಿಸಲು ಯೋಗ್ಯನಾದವನು. ದಾನ ಕೊಡಲು ಅರ್ಹನಾದವನು ಎಂದು ಅರ್ಥ. ಸಂಸ್ಕೃತ ಭಾಷೆಯಲ್ಲಿ ದಾನಿಗೆ ದಾನಪಾತ್ರ ಸರಿಯಾದ ಎದುರು ಪದವಾಗಬಹುದು. ಆದಾತೃ ಎಂಬ ಶಬ್ದವೂ ಆಗಬಹುದು. ಅದಕ್ಕೆ ದಾನವನ್ನು ಸ್ವೀಕರಿಸುವವನು ಎಂದೇ ಅರ್ಥ. ದಾನ ಮಾಡದೆ ಇರುವವನು ಎಂಬ ಅರ್ಥ ಬರಬೇಕಾದರೆ ಆಗ ಲೋಭಿ; ಕೃಪಣ ಎಂಬ ಶಬ್ದಗಳನ್ನು ಉಪಯೋಗಿಸಬಹುದು.

**ದಾನವ** ನೋಡಿ: ಅಸುರ

**ದಾಮೋದರ** ಯಾರ ಉದರದಲ್ಲಿ ದಾಮ ಇದೆಯೋ ಅವನು ದಾಮೋದರ = ವಿಷ್ಣು. ದಾಮ ಎಂದರೆ ಲೋಕ ಮತ್ತು ಹಗ್ಗ. ಯಾರ ಹೊಟ್ಟೆಯಲ್ಲಿ ಸಕಲ ಲೋಕಗಳೂ ಇವೆಯೋ ಅಂಥವನು ವಿಷ್ಣು, ನಾರಾಯಣ. ಕೃಷ್ಣಾವತಾರದಲ್ಲಿ ಯಶೋದೆಯು ಕೃಷ್ಣನ ಸೊಂಟಕ್ಕೆ ಹಗ್ಗವನ್ನು ಕಟ್ಟಿ ಒರಳುಕಲ್ಲಿಗೆ ಕಟ್ಟಿಹಾಕಿದ್ದ ಕತೆಯೂ ಇದೆ. ಈ ಕಾರಣದಿಂದಲೂ ಅವನು ನಾರಾಯಣ ಅಥವಾ ದಾಮೋದರ.

**ದಾರಿಹೋಕ** ಎಂದರೆ ದಾರಿಯಲ್ಲಿ ಓಡಾಡುವವನು ಎಂದರ್ಥ. ಅತಿ ಸಾಮಾನ್ಯ ಮನುಷ್ಯ ಎಂದರ್ಥ. ಸದಾ ಪ್ರಯಾಣದಲ್ಲಿರುವವರನ್ನೂ ದಾರಿಹೋಕರು ಎನ್ನುತ್ತಾರೆ.

**ದಾರುಣ** ಇದೂ ಸಂಸ್ಕೃತದ ಶಬ್ದವೇ. ಈ ಶಬ್ದಕ್ಕೆ ವಿಷ್ಣು ಎಂದು ಅರ್ಥವಿದೆ. ನಿರುಕ್ತದಲ್ಲಿ ಈ ಶಬ್ದವನ್ನು ವಿವರಿಸುತ್ತಾ **ಬಾಹ್ಯಾಭ್ಯಂತರ ಶತ್ರೂಣಾಂ ವಾರಣಾದಪಿ ದಾರುಣ:** ಎಂದು ವಿವರಣೆ ಇದೆ. ದೃ ಎಂಬ ಧಾತುವಿನಿಂದ ಸೀಳು ಎಂಬ ಅರ್ಥ ಬರುತ್ತದೆ. ಅಂದರೆ ನಾಶ ಮಾಡು ಎಂದರ್ಥ. ಇದೇ ಶಬ್ದಕ್ಕೆ ಕ್ರೂರ, ದುರುಳ ಎಂದೂ, ಭಯಂಕರವಾದ ಎಂದೂ ಅರ್ಥಗಳಿವೆ ಅದು ವಿಶೇಷಣವಾದಾಗ.

**ದಾರ್ಶನಿಕ** ಎಂದರೇನು ? ದರ್ಶನ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಆ ಹತ್ತು ಹದಿನೈದು ಅರ್ಥಗಳಲ್ಲಿ ದಾರ್ಶನಿಕ ಎಂಬ ಶಬ್ದಕ್ಕೆ ಸಂಬಂಧಿಸಿದ ಅರ್ಥ ತತ್ವಶಾಸ್ತ್ರದ್ದು. ಇವು ಮುಖ್ಯವಾಗಿ ಆರು ವಿಧ - ಷಡ್ದರ್ಶನಗಳು ಎನ್ನುತ್ತಾರೆ. ಭಕ್ತಿಮಾರ್ಗಗಳು ಎನ್ನುತ್ತಾರೆ. ಭಕ್ತಿಮಾರ್ಗದ ದರ್ಶನಗಳು ಬೇರೆ ಆರು ಇವೆ. ಇಂಥ ದರ್ಶನಗಳ ತತ್ವಗಳನ್ನು ಚೆನ್ನಾಗಿ ಬಲ್ಲವನು ದಾರ್ಶನಿಕ. ನಮ್ಮ ದೇಶದ ದರ್ಶನಗಳಲ್ಲದೆ ಬೇರೆ ದೇಶಗಳ ದರ್ಶನಗಳನ್ನು ಬಲ್ಲವನನ್ನೂ ದಾರ್ಶನಿಕ ಎಂದು ಕರೆಯುತ್ತಾರೆ. ಇದು ಇಂಗ್ಲಿಷಿನ Philosopher ಎಂಬ ಶಬ್ದದ ಕನ್ನಡ ಅನುವಾದ. ತತ್ವಜ್ಞಾನಿ ಎಂಬುದು ಅದರ ಅರ್ಥ.

**ದಾವಣಿ** ಎಂದರೆ ದನಗಳನ್ನು ಸಾಲಾಗಿ ಕಟ್ಟುವ ಹಗ್ಗ, ದಾವಣಿ ಗುರಿ ಎಂದರೆ ಹಾಗೆ ದಾವಣಿಯಲ್ಲಿ ಕಟ್ಟಿರುವ ಕುರಿಗಳ ಸಾಲು. ಇದು ಕನ್ನಡದ ಶಬ್ದ.

**ದಾಷ್ಟೀಕ** ಈ ಶಬ್ದ ಜನತೆಯ ಬಾಯಲ್ಲಿ ಪ್ರಚಾರದಲ್ಲಿದ್ದರೂ ತಪ್ಪು ಶಬ್ದ. ಸಂಸ್ಕೃತದ ಧಾರ್ಷ್ಟಿಕ ಎಂಬುದರ ಕನ್ನಡ ರೂಪ ದಾಷ್ಟಿಕ ಎಂದಾಗಬಹುದು ಅಷ್ಟೆ. ಆದರೆ ಪ್ರಚಾರಕ್ಕೆ ಬಂದ ಮೇಲೆ ಉಳಿದು ಬಿಡುತ್ತವೆ. ವೈದಿಕ ಎಂಬ ಶಬ್ದ ವೈದೀಕ ಎಂದಾಗಿಲ್ಲವೆ ? ಪೂರ್ವಿಕ ಎಂಬುದು ಪೂರ್ವೀಕ ಆಗಿಲ್ಲವೆ ? ಹಾಗೆ. ಧೃಷ್ಟ ಎಂದರೆ ನಾಚಿಕೆ ಇಲ್ಲದವನು, ಅವಿನೀತ.

**ದಾಸರು** ಹರಿದಾಸರು ಹರಿದಾಸ ಪಂಥ ಎಂಬ ಒಂದು ಮತೀಯ ಪಂಥಕ್ಕೆ ಸೇರಿದವರು ಇವರು. ದಾಸ ಎಂಬ ಶಬ್ದಕ್ಕೆ ಸೇವಕ ಎಂದರ್ಥ. ವೈಷ್ಣವ ಭಕ್ತರು ಇವರು. ದಾಸಕೂಟದವರಿಗೆ ಭಕ್ತಿ ಪ್ರಧಾನ. ವ್ಯಾಸಕೂಟ ದ್ವೈತ ತತ್ವಗಳ ಪ್ರತಿಪಾದನೆಯಲ್ಲಿ ಆಸಕ್ತಿಯುಳ್ಳವರ ಸಮೂಹ, ಸಭೆ.

**ದಾಳಿ** 'ದಾಳಿ' ಎನ್ನುವುದು ಸಂಸ್ಕೃತದ 'ಧಾಟೀ' ಶಬ್ದದ ತದ್ಭವ. ಕೆಲವು ಶಾಸನಗಳಲ್ಲಿಯೂ ಅದನ್ನು ಅನುಸರಿಸಿ ಕೆಲವು ಕಾವ್ಯಗಳಲ್ಲಿಯೂ 'ಧಾಳಿ' ಎಂಬುದನ್ನೂ ಉಪಯೋಗಿಸಿದ್ದಾರೆ. ಆದರೆ 'ದಾಳಿ' ಯೇ ಸರಿಯಾದ ರೂಪ. ಹಳಗನ್ನಡದಲ್ಲಿ ದಾಟಿ ಎಂಬ ರೂಪವಿದೆ. ಈ ಶಬ್ದ ಕನ್ನಡದಿಂದ ಸಂಸ್ಕೃತಕ್ಕೆ ಹೋಗಿರುವ ಸಾಧ್ಯತೆ ಇದೆ. ಅರ್ಥ ಆಕ್ರಮಣ.

**ದಿಂಡಿ ಉತ್ಸವ ಎಂದರೇನು ?** ದಿಂಡೀ ಎಂಬುದು ಮರಾಠಿಯ ಶಬ್ದ. ಅದಕ್ಕೆ ಭಜನೆಯ ಮೆರವಣಿಗೆ ಎಂದರ್ಥ. ಭಜನೆ ಮಾಡುವ ಮೇಳದವರು ದೇವಾಲಯಗಳಲ್ಲಿ ಪ್ರಾಕಾರದಲ್ಲಿ ದೇವರಿಗೆ ನಡೆಸುವ ಚಿಕ್ಕ ಉತ್ಸವಕ್ಕೆ ದಿಂಡಿ ಉತ್ಸವ ಎಂದು ಹೆಸರು.

**ದಿಗಂಬರ** ಎಂದರೆ ದಿಕ್ಕುಗಳೇ ಅಂದರೆ ಶೂನ್ಯವೇ ಬಟ್ಟೆಯಾಗಿ ಇರುವವನು. ಬೆತ್ತಲೆ ಇರುವವನು. ಈಶ್ವರನಿಗೆ ಈ ಹೆಸರಿದೆ. ಜೈನ ಸಂನ್ಯಾಸಿಗಳಲ್ಲಿ ಒಂದು ಪಂಗಡದವರಿಗೆ ದಿಗಂಬರರೆಂದು ಹೆಸರು ಇದೆ.

**ದಿಡುಗು** ಎಂದರೆ ಜಲಪಾತ. ಧಬಧಬ ನೀರು ಉತ್ಸಾಹದಿಂದ ಬೀಳುವ ಸನ್ನಿವೇಶ. ಈ ಶಬ್ದವನ್ನು ಮಾನವರ ಉತ್ಸಾಹಕ್ಕೂ ಕೆಲವು ವೇಳೆ ಅನ್ವಯಿಸುತ್ತಾರೆ.

**'ದಿಢೀರ್' 'ಧಿಡೀರ್'** ಎಂಬುದು ಒಂದು ಅನುಕರಣ ಶಬ್ದ. ಉಚ್ಚಾರಣೆಗೆ ಎರಡನೆಯ ಅಕ್ಷರ ಮಹಾಪ್ರಾಣವಾಗಿರುವುದೇ ಸರಿ. ಮೊದಲನೆಯ ಅಕ್ಷರವನ್ನು ಮರಾಠಿ ಮಾತನಾಡುವವರು ಹೆಚ್ಚಾಗಿ ಮಹಾಪ್ರಾಣದಲ್ಲಿ ಪ್ರಯೋಗಿಸುತ್ತಾರೆ. ಮಹಾಪ್ರಾಣವೇ ಇಲ್ಲದೆಯೂ ಪ್ರಯೋಗದಲ್ಲಿದೆ. ಮದರಾಸಿನ ನೈವೇಲಿ ಬಳಿ ಒಂದು ದಿಢೀರ್ ನಗರ ಎಂಬ ಬಡಾವಣೆ ಇದೆ. ಒಂದು ಕೊಳಚೆ ಪ್ರದೇಶದವರನ್ನು ಸರಕಾರದವರು ಗುಳೆ ಎಬ್ಬಿಸಿದಾಗ ಅವರೆಲ್ಲ ಒಂದೇ ದಿನದಲ್ಲಿ ಈ ಬಡಾವಣೆಯಲ್ಲಿ ಗುಡಿಸಿಲನ್ನು ಕಟ್ಟಿದರಂತೆ. ಆದುದರಿಂದ ಆ ಹೊಸ ಸ್ಥಳಕ್ಕೆ ಅದೇ ಜನರು ದಿಢೀರ್ ನಗರ್ ಎಂದು ಹೆಸರು ಕೊಟ್ಟರು.

**ದಿನಚರಿ** ಸಂಸ್ಕೃತದಲ್ಲಿ ದಿನಚರ್ಯಾ ಎಂಬ ಶಬ್ದವಿದೆ. ಅದಕ್ಕೆ ಪ್ರತಿನಿತ್ಯವೂ ನಡೆಸುವ ಆಚರಣೆ, ಕೆಲಸ ಎಂದರ್ಥ. ಇದೇ ದಿನಚರಿ = ಪ್ರತಿನಿತ್ಯವೂ ಎಂಬಂತೆ ಅವ್ಯಯವಾಗಿ ಕನ್ನಡದಲ್ಲಿ ಕಾವ್ಯಗಳಲ್ಲಿ ಪ್ರಯೋಗವಾಗಿದೆ. **ಆ ಗಿಳಿಯಂ ದಿನಚರಿ ಬರವೇಳುತ್ತುಂ** (ಜಯನೃಪಕಾವ್ಯ ೨-೩೫) ದಿನಚರಿ ಪುಸ್ತಕ ಎಂದು ಪ್ರತಿನಿತ್ಯದ ಜಮಾಖರ್ಚನ್ನು ಬರೆದಿಡುವ ಪುಸ್ತಕ ಎಂಬಂತೆ ಪ್ರಯೋಗಕ್ಕೆ ಬಂದು ಆ ಬಳಿಕ ಅದೇ ಡೈರಿ Diary = A daily record of an individual's experiences and attitudes ಎಂದಾಗಿದೆ. ದಿಲ್ಲೀಶ್ವರನ ದಿನಚರಿ ಪುಸ್ತಕವನ್ನು ದಿ॥ ನಾ. ಕಸ್ತೂರಿ ಅನುವಾದ ಮಾಡಿದ್ದಾರೆ.

**ದಿನಾಲು - ದಿನಾಗಲು** ಇವುಗಳಲ್ಲಿ ಯಾವುದು ಸರಿ ? ಇದು ದಿನ +ಆಗಲು ಎಂಬ ಎರಡು

ಶಬ್ದ ಸೇರಿ ಆಗಿರುವ ರೂಪ. ದಿನವಾಗಲು, ದಿನಾಗಲು, ದಿನಾಲು ಎಂಬ ಮೂರು ರೂಪಗಳೂ ಸರಿ. ಮೊದಲೆರಡು ವ್ಯಾಕರಣ ಶುದ್ಧವಾಗಿದ್ದರೆ, ದಿನಾಲು ಬಾಯಿಮಾತಿನಲ್ಲಿ ಪ್ರಯೋಗ ಶುದ್ಧ. ಆದರೆ ಅದು ಬರಹಕ್ಕೆ ಇನ್ನೂ ಬಂದಿಲ್ಲ. ಕೆಲವು ವೇಳೆ ಕೊನೆಯ ಅಕ್ಷರವನ್ನು ದೀರ್ಘ ಮಾಡುವುದೂ ಉಂಟು. ಇದಕ್ಕೆ ಪ್ರತಿದಿನ, ದಿನಸಿತ್ಯ ಎಂದು ಅರ್ಥ. ದಿನಕೇಳು, ದಿನಗಟ್ಟಲೆ, ದಿನತಳ್ಳು, ದಿನತುಂಬು, ದಿನದೊಳಗೆ ಬೀಳು, ದಿನಪಡಿ - ಹೀಗೆ ಇನ್ನೂ ಅನೇಕ ನುಡಿಗಟ್ಟುಗಳಿವೆ. ಇವುಗಳೆಲ್ಲಕ್ಕೂ ಬೇರೆ ಬೇರೆ ಅರ್ಥಗಳಿವೆ. ದಿನಕೇಳು =ಶುಭಕಾರ್ಯಗಳಿಗೆ ಒಳ್ಳೆಯ ದಿನವನ್ನು ಜೋಯಿಸರ ಬಳಿ ವಿಚಾರಿಸು. ದಿನಗಟ್ಟಲೆ = ಪ್ರತಿನಿತ್ಯ. ದಿನತಳ್ಳು =ಕಾಲಹರಣ ಮಾಡು, ಮಾಡುವ ಕೆಲಸವನ್ನು ಮುಂದಕ್ಕೆ ಹಾಕುತ್ತ ಇರು. ದಿನತುಂಬು =ಬಸುರಿ ಹೆಂಗಸಿಗೆ ಒಂಬತ್ತು ತಿಂಗಳು ಪೂರ್ಣವಾಗು. ದಿನದೊಳಗೆ ಬೀಳು = ದಿನ ತುಂಬು. ದಿನಪಡಿ = ನಮ್ಮ ಮನೆಯಲ್ಲಿ ಊಟ ಮಾಡದ ಅತಿಥಿಗೆ ಅವನೇ ಅಡುಗೆ ಮಾಡಿಕೊಳ್ಳಲು ಕೊಡುವ ಒಂದು ದಿನಕ್ಕಾಗುವ ಅಡುಗೆಯ ಸಾಮಾನು. ಹೀಗೆ ಒಂದು ಶಬ್ದಕ್ಕೆ ಇತರ ಶಬ್ದಗಳು ಸೇರುವುದರಿಂದ ಅಂಥ ನುಡಿಗಟ್ಟುಗಳಿಗೆ ಹೇಗೆ ಅರ್ಥ ಬದಲಾಯಿಸುತ್ತದೆ ಎಂಬುದನ್ನು ಪರಾಮರ್ಶಿಸುವುದು ಸ್ವಾರಸ್ಯವುಳ್ಳ ಹವ್ಯಾಸವಾಗುತ್ತದೆ.

**ದಿಬ್ಬಣ** ಇದು ತುಳುವಿನ ದಿಬ್ಬಣ; ನಿಬ್ಬಣ ಎಂಬ ಶಬ್ದಕ್ಕೆ ಸಂಬಂಧಿಸಿದುದು. ಕನ್ನಡದಲ್ಲಿ ಪ್ರಾಚೀನ ಕಾಲದಿಂದಲೂ ಬಿರ್ದಿನ ಎಂಬ ಶಬ್ದ ಪ್ರಯೋಗದಲ್ಲಿದೆ. **ಈತಂ ಬಿರ್ದಿನನ್** (ಪಂಪ ಭಾರತ ೪-೪೪). ಈ ಶಬ್ದಕ್ಕೆ ದಿಬ್ಬಣ, ನಿಬ್ಬಣ, ಬಿದ್ದಣ, ಬಿದ್ದಿನ ಎಂಬ ಪರ್ಯಾಯ ರೂಪಗಳೂ ಇವೆ. ಕನ್ನಡದಲ್ಲಿ ಅನೇಕ ಅರ್ಥಗಳಿವೆ: *೧. ಅತಿಥಿ, ಉಪಚಾರಕ್ಕೆ ಯೋಗ್ಯವಾದವನು. ೨. ಮದುವೆ ಮುಂತಾದ ಸಂದರ್ಭದ ಮೆರವಣಿಗೆ ೩. ಬೀಗರ ಸಮೂಹ ೪. ವಧೂವರರಿಗೆ ಕೊಡುವ ಬಳುವಳಿ ೫. ಭೋಜನದ ಔತಣಕ್ಕೆ ಆಹ್ವಾನ.*

**ದೀಕ್ಷಿತ** ಇದು ಸಂಸ್ಕೃತದ ಶಬ್ದ. ಯಾವುದಾದರೂ ಒಂದು ಕೆಲಸವನ್ನು ಮಾಡಿ ಮುಗಿಸಬೇಕೆಂದು ದೃಢವಾದ ಸಂಕಲ್ಪ ಮಾಡಿದವನು ದೀಕ್ಷಿತ. ಮುಖ್ಯವಾಗಿ ಇದು ಯಾಗ ಮಾಡುವ ಕಾರ್ಯಕ್ಕೆ ಸಂಬಂಧಿಸಿದುದು.

**ದೀರ್ಘ ಸುಮಂಗಲೀ ಭವ** ಈ ಆಶೀರ್ವಾದಕ್ಕೆ ಬಹುಪಾಲು ಸುಮಂಗಲಿಯಾಗಿ ಬಾಳು ಎಂದು ಅರ್ಥ. ಆಶೀರ್ವಾದವನ್ನು ಪಡೆದಾಕೆಯು ತನ್ನ ಗಂಡನೊಡನೆ ಬಹುಕಾಲ ಸುಖವಾಗಿ ಅನ್ಯೋನ್ಯವಾಗಿ ಬಾಳಲಿ ಎಂದು ಸದಾಶಯವನ್ನು ತಿಳಿಸುತ್ತದೆ. ನಿತ್ಯ ಸುಮಂಗಲಿ ಎಂಬ ಇನ್ನೊಂದು ಶಬ್ದವಿದೆ. ಇದು ವ್ಯಂಗ್ಯದಿಂದ ತುಂಬಿದ ಶಬ್ದ. ವೇಶ್ಯೆಗೆ ಈ ಶಬ್ದವನ್ನು ಅನ್ವಯಿಸುತ್ತಾರೆ.

**ದೀರ್ಘಾಯು** ಸಂಸ್ಕೃತದಲ್ಲಿ ಇದಕ್ಕೆ ಬಹುಕಾಲದ ಆಯುಸ್ಸು ಉಳ್ಳ ವ್ಯಕ್ತಿ ಎಂದರ್ಥ. ಇದು ಹೆಚ್ಚಾಗಿ ವೈದಿಕ ಪ್ರಯೋಗ. ಕನ್ನಡದಲ್ಲಿ ದೀರ್ಘಾಯು ಎನ್ನುವುದು *೧. ಹೆಚ್ಚು ಕಾಲ ಬದುಕುವವನು* ಎಂದೂ *೨. ಹೆಚ್ಚುಕಾಲದ ಆಯುಸ್ಸು* ಎಂದೂ ಎರಡು ಅರ್ಥದಲ್ಲಿ ಪ್ರಯೋಗವಾಗುತ್ತದೆ. ಕನ್ನಡದ ಕವಿ ಮುದ್ದಣನು ದೇವರಲ್ಲಿ ಪ್ರಾರ್ಥನೆ ಮಾಡುತ್ತ **"ದೀರ್ಘಾಯು ಕೊಡುಗೆ"** ಎಂದು ಹೇಳಿದ್ದಾನೆ. ಕುಮಾರವಿಜಯಾವೆಂಬ ಯಕ್ಷಗಾನದ ೭ನೆಯ ಪದ್ಯದಲ್ಲಿ ಹೀಗಿದೆ: **"ದ್ರುಹಿಣ ದೀರ್ಘಾಯು ಕರುಣಿಸೆನಗೆ"**. ದ್ರುಹಿಣ ಎಂದರೆ ಬ್ರಹ್ಮ

**ದೀಡು** ಈ ರೂಪದ ಮೂರು ಬೇರೆ ಬೇರೆ ಶಬ್ದಗಳಿವೆ. *೧. ದೀಡು ಮರಾಠಿಯ ದೀಢ್‌ನಿಂದ ಬಂದಿದೆ. ಇದಕ್ಕೆ ಒಂದೂವರೆ ಎಂದರ್ಥ. ೨. ಈಡ್ ಎಂಬ ಕನ್ನಡ ಶಬ್ದದ ಪರ್ಯಾಯ*

ಶಬ್ದ. *ಪಾತಕಕಂಗಳ ಬೀಡು. ಸ್ಮೃತಿ ಮೃತಿ ಸೂತಕಂಗಳ ದೀಡು* ಎಂಬ ಪ್ರಯೋಗವನ್ನು ನೋಡಿ. ೩. ಇಂಗ್ಲಿಷಿನ Deed ಶಬ್ದದ ಕನ್ನಡ ರೂಪ. ಅಡವು, ಗಿರವಿ ಮಾಡಿರುವ ವಸ್ತು.

**ದೀಪಂಕರ** ಎಂಬುದು ಬುದ್ಧನ ಹೆಸರುಗಳಲ್ಲಿ ಒಂದು. ಬೆಳಕನ್ನು ಉಂಟು ಮಾಡುವವನು; ಜ್ಞಾನವನ್ನು ಕೊಡುವವನು ಎಂದು ಅದಕ್ಕೆ ಅರ್ಥ. ದೀಪಾಂಕರ ಶಬ್ದ ತಪ್ಪು. ದೀಪಾಂಕುರ ಎಂದಿದ್ದರೆ, ಅದು ದೀಪದ ಕುಡಿ, ದೀಪಜ್ವಾಲೆ, a flame ಎಂಬ ಅರ್ಥವನ್ನು ನೀಡುತ್ತದೆ.

**ದುಂದುಭಿ** ಅದಕ್ಕೆ ಅರ್ಥ ನಗಾರಿ. ಅರವತ್ತು ಸಂವತ್ಸರಗಳಲ್ಲಿ ಒಂದು ವರ್ಷಕ್ಕೂ ಈ ಹೆಸರಿದೆ. ವಾಲಿಯೊಡನೆ ಯುದ್ಧ ಮಾಡಿ ಸತ್ತ ಒಬ್ಬ ರಾಕ್ಷಸನಿಗೆ ಈ ಹೆಸರಿತ್ತು. ದುಂದುಬಿ ಎಂದು ಅಲ್ಪಪ್ರಾಣದ 'ಬಿ' ಬರೆಯುವುದು ತಪ್ಪು.

**ದುಂಬಾಲು** ಎಂಬ ಶಬ್ದ ಪಾರಸೀ ಭಾಷೆಯ ದುಮಾಲಾ, ದುಂಬಾಲಾ ಎಂಬ ಶಬ್ದದಿಂದ ಬಂದಿದೆ. ಈ ಶಬ್ದಕ್ಕೆ ಹಿಂಬದಿ ಎಂದರ್ಥ. ಕನ್ನಡದಲ್ಲಿ ದುಂಬಾಲು ಬೀಳು ಎಂದರೆ, ಬೆನ್ನು ಹತ್ತುವುದು, ಅಂಗಲಾಚಿ ಬೇಡಿಕೊಂಡು ಹಿಂಬಾಲಿಸುವುದು, ತನ್ನ ಕೆಲಸವನ್ನು ಮಾಡಿಕೊಡಬೇಕೆಂದು ಬೇಡುತ್ತಾ ಒತ್ತಾಯ ಮಾಡುವುದು.

**ದುಃಖ** ಎಂಬ ಶಬ್ದದಲ್ಲಿ ದು ಎಂಬುದನ್ನು ಬೇರೆಯ ಸಾಲಿನಲ್ಲಿಟ್ಟು ಃಖ ಎಂಬುದನ್ನು ಮುಂದಿನ ಸಾಲಿಗೆ ಸೇರಿಸುವುದು ತಪ್ಪು. ದೃಷ್ಟಾಂತವಾಗಿ ರಾಮ ಎಂಬಲ್ಲಿ ರ ಎಂಬುದನ್ನು ಒಂದು ಸಾಲಿನ ಕೊನೆಯಲ್ಲಿ ಬರೆದು ಮುಂದಿನ ಸಾಲಿನ ಪ್ರಾರಂಭದಲ್ಲಿ ಾ ಎಂಬುದನ್ನು ಬರೆದರೆ ಎಷ್ಟು ಅನುಚಿತವೋ ಹಾಗೆಯೇ ಈ ಅನುಸ್ವಾರ ವಿಸರ್ಗಗಳ ಕಥೆಯೂ ಅಷ್ಟೇ ಅನುಚಿತ. ಅನುಸ್ವಾರ ವಿಸರ್ಗಗಳನ್ನು ಅವು ಸಂಬಂಧಿಸಿರುವ ಅಕ್ಷರಗಳ ಜೊತೆಯಲ್ಲಿಯೇ ಬರೆಯಬೇಕು ಅಥವಾ ಮುದ್ರಿಸಬೇಕು.

ಅಷ್ಟೇ ಅಲ್ಲ ಎರಡು ಮೂರು ಅಕ್ಷರಗಳುಳ್ಳ ಶಬ್ದಗಳನ್ನು ಬರೆಯುವಾಗಲೂ ಎಚ್ಚರಿಕೆ ಅಗತ್ಯ. ಶಾಮಲ ಎಂಬುದನ್ನು ಶಾ - ಮಲ ಎಂದು ಬಿಡಿಸಬಾರದು. ಶಾಮ - ಲ ಎಂದೂ ಬಿಡಿಸಬಾರದು. ಬೇರು ಎಂಬುದನ್ನು ಬೆ - ೀರು ಎಂದಾಗಲಿ ಬಿಡಿಸಿ ಬರೆಯಬಾರದು. ಮೈದಾನವನ್ನು ಮೈ- ದಾನ ಎಂದು ಬಿಡಿಸುವುದು ಅನುಚಿತ.

**ದುಕಾನ್** ಅರಬ್ಬಿ ಶಬ್ದ. ಇದಕ್ಕೆ 'ಅಂಗಡಿ' ಎಂದು ಅರ್ಥ. ಅರಬ್ಬಿಯಲ್ಲಿ ಅದರ ರೂಪ 'ದುಕ್ಕಾನ್'. ಪಾರಸಿಯಲ್ಲಿ 'ದುಕಾನ್'. ಹಿಂದಿಯಲ್ಲಿ ದುಕಾನ್, ದೂಕಾನ್ ಎರಡೂ ಇವೆ.

**ದುಕೂಲ** ಸಂಸ್ಕೃತದಲ್ಲಿ ಈ ಶಬ್ದಕ್ಕೆ ರೇಷ್ಮೆ ಬಟ್ಟೆ ಎಂದೂ ಉತ್ತಮವಾದ ವಸ್ತ್ರ ಎಂದೂ ಅರ್ಥಗಳಿವೆ. ಕುಮಾರವ್ಯಾಸನ ಭಾರತದಲ್ಲಿ ಬರುವ ಈ ವಾಕ್ಯವನ್ನು ಗಮನಿಸಿ: **ದುಕೂಲವರಾನುಲೇಪನವ ಪರಿಹರಿಸಬೇಡ ಒಲವಿನಲಿ ಪತಿಕರಿಸು.** (ಗದಾಪರ್ವ ೫-೩೯). ಭೀಮ ದುರ್ಯೋಧನರು ಗದಾಯುದ್ಧಕ್ಕೆ ಸಿದ್ಧವಾಗುವ ಸನ್ನಿವೇಶ ಇದು.

**ದುಮ್ಮಿ ಸಾಲು** ವಾದ್ಯಗಳ ಜೊತೆ ಹಾಡುವ ಒಂದು ಬಗೆಯ ಹಾಡು. ಜಾನಪದದ ಹಾಡು.

**'ದುರ್'** ಸಂಸ್ಕೃತದ 'ದುರ್' ಉಪಸರ್ಗವನ್ನು ಕನ್ನಡ ಶಬ್ದಗಳಿಗೆ ಹಚ್ಚುವುದು ಸರಿಯೇ? ದುರದೃಷ್ಟ, ದುರಭ್ಯಾಸ ಎಂಬುದನ್ನು ಅನುಸರಿಸಿ ಕನ್ನಡದಲ್ಲಿ ದುರ್ನಡತೆ, ದುರ್ನಡೆ, ದುರ್ವಾರಿ ಮುಂತಾಗಿ ಶಬ್ದಗಳನ್ನು ಟಂಕಿಸಿದ್ದಾಗಿದೆ. 'ದುರ್', 'ಸತ್' ಎಂಬಂಥ ಉಪಸರ್ಗಗಳನ್ನು ಉಪಯೋಗಿಸಿಕೊಂಡು ಕನ್ನಡ ಶಬ್ದ ಭಂಡಾರವನ್ನು ವಿಸ್ತಾರಗೊಳಿಸುವುದು ಸರಿಯಾದ ಮಾರ್ಗ. ಇದರಲ್ಲಿ ತಪ್ಪೇನೂ ಇಲ್ಲ. ಎಷ್ಟೋ ವೇಳೆ ಸಂಸ್ಕೃತ ಶಬ್ದಗಳಿಗೆ ಕನ್ನಡದ ಪ್ರತ್ಯಯಗಳನ್ನು ಈಗೀಗ ಪ್ರಯೋಗ ಮಾಡಲಾಗುತ್ತಿದೆ. ಇದರಿಂದ ಭಾಷೆಗೆ ಬಹಳ ಪ್ರಯೋಜನವುಂಟು. ಒಂದು ವಿಚಾರದಲ್ಲಿ ಎಚ್ಚರವಿರಬೇಕು. ಅದೇನೆಂದರೆ ಕನ್ನಡ ಸಂಸ್ಕೃತಗಳನ್ನು ಬೆರೆಸುವಾಗ ಕೇಳುವವರ ಕಿವಿಗೆ ಅದು ಒಗ್ಗಬೇಕು.

ಒಂದು ಉದಾಹರಣೆಯನ್ನು ನೀಡುತ್ತೇನೆ. ಪಿರಿದು ಎಂಬುದು ಪಿರಿದು ಎಂಬುದರ ಪರ್ಯಾಯ ರೂಪ. ಹಾಗೆಯೇ ಪೆರ್ =ಹೆರ್ ಎಂಬುದು ಸಮಾಸದಲ್ಲಿ ಅದು ಪಡೆಯುವ ಆದೇಶ ರೂಪ. ಇದನ್ನು ಉಪಯೋಗಿಸಿ "ಪಿರಿದು + ಗುಣ = ಹೆಗ್ಗುಣ" ಎಂದು ಶಬ್ದವನ್ನು ಸೃಷ್ಟಿಸಿದರೆ ಅದು ಉಳಿಯುವುದಾದರೂ ಹೇಗೆ? ಇಂಥದೇ ಮತ್ತೊಂದು ಶಬ್ದ 'ಬೂದಿ ಹೃದಯ'!

**ದುರದೃಷ್ಟ ಸರಿಯೇ ದುರಾದೃಷ್ಟ ಸರಿಯೇ?** ದುರ್ +ಅದೃಷ್ಟ =ದುರದೃಷ್ಟ. ದುರಾದೃಷ್ಟ ಎಂಬುದು ತಪ್ಪು. ಅನೇಕರು ಅದನ್ನು ಬರಹದಲ್ಲಿಯೂ ಮಾತಿನಲ್ಲಿಯೂ ಹೆಚ್ಚಾಗಿ ಬಳಸುತ್ತಿದ್ದಾರೆ. ಅದು ತಪ್ಪು ಎಂದು ತಿಳಿದಿರಬೇಕು.

**ದುರಾಲೋಚನೆ - ದೂರಾಲೋಚನೆ** ಈ ಎರಡರಲ್ಲಿ ಯಾವುದು ಸರಿ? ಅವು ಎರಡೂ ಸರಿಯಾದ ಶಬ್ದಗಳೇ. ಆದರೆ ಅವೆರಡಕ್ಕೂ ಬೇರೆ ಬೇರೆ ಅರ್ಥಗಳಿವೆ. ದುರ್ ಎಂಬುದು ಕೆಟ್ಟದ್ದು ಎಂಬ ಅರ್ಥವನ್ನು ನೀಡುವ ಸಂಸ್ಕೃತದ ಉಪಸರ್ಗ. ದುರಾಲೋಚನೆ ಎಂದರೆ ಕೆಟ್ಟ ಆಲೋಚನೆ ಎಂದರ್ಥ. 'ಬೇಗ ಐಶ್ವರ್ಯವಂತನಾಗಬೇಕಾದರೆ ಕಳ್ಳತನ ಮಾಡಬೇಕು' ಎಂಬುದು ದುರಾಲೋಚನೆ. ದೂರ +ಆಲೋಚನೆ = ದೂರಾಲೋಚನೆ, ಮುಂದೆ ಏನಾಗುತ್ತದೆ ಎಂಬುದನ್ನು ಕುರಿತು ಮಾಡುವ ಆಲೋಚನೆ. 'ಶ್ರಮವಹಿಸಿ ದುಡಿಯದಿದ್ದರೆ ಮುಂದೆ ಕಷ್ಟಕ್ಕೆ ಸಿಕ್ಕಿಕೊಳ್ಳಬಹುದು' ಎಂಬುದು ದೂರಾಲೋಚನೆ.

**ದುರೂಹ್ಯ** ಊಹಿಸಲು ಅಸಾಧ್ಯವಾದ, ಕಲ್ಪಿಸಲಾಗದ ಎಂಬ ಗುಣವಾಚಕದ ಅರ್ಥವಿದೆ ಈ ಸಂಸ್ಕೃತದ ಶಬ್ದಕ್ಕೆ. ಎಣಿಕೆಗೆ ಸಿಗದ, ಗ್ರಹಿಕೆಗೆ ಸಿಲುಕದ ಮುಂತಾದ ಅರ್ಥದ ಎಲ್ಲಕ್ಕೂ ಈ ಶಬ್ದವನ್ನು ಉಪಯೋಗಿಸಬಹುದು. ಈಗಂತೂ ವಂಚಕರ ಉಪಾಯಗಳು ದುರೂಹ್ಯವಾಗಿಬಿಟ್ಟಿವೆ ಎಂಬ ವಾಕ್ಯವನ್ನು ಗಮನಿಸಿ.

**ದುರ್ದಮ್ಯ** ದಮನ ಮಾಡಲು ಅಥವಾ ನಿಗ್ರಹಿಸಲು ಅಥವಾ ಹತೋಟಿಯಲ್ಲಿಡಲು ಅಸಾಧ್ಯವಾದ ಎಂದು ಈ ಶಬ್ದಕ್ಕೆ ಗುಣವಾಚಕದ ಅರ್ಥವಿದೆ. ಇದು ಸಂಸ್ಕೃತದ ಶಬ್ದ. ಯಾವ ಪಕ್ಷವೇ ಅಧಿಕಾರಕ್ಕೆ ಬಂದರೂ ಲಂಚವನ್ನು ನಿರ್ನಾಮಗೊಳಿಸಲಾರದಷ್ಟು ಅದು ದುರ್ದಮ್ಯವಾಗಿ ಹೋಗಿದೆ. ಈ ವಾಕ್ಯದ ವ್ಯಾಪಕವಾದ ಅರ್ಥವನ್ನು ಪರಿಶೀಲಿಸಿ.

**ದುರ್ಬೀನು** ಪಾರಸೀ ಭಾಷೆಯ ದುರ್ಬೀನ್ ಎಂಬುದರಿಂದ ಹಿಂದೀ ಮರಾಠೀ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿದೆ. ಹಿಂದಿಯಲ್ಲಿ ದುರಬೀನ್, ದೂರಬೀನ್ ಎಂಬ ಎರಡು ರೂಪಗಳೂ ಉಂಟು. ಮರಾಠಿಯಲ್ಲಿ ನಾಲ್ಕೈದು ರೂಪಗಳಿವೆ. ಕನ್ನಡದಲ್ಲಿ ದುರ್ಬಿಣಿ, ದುರ್ಬೀನಿ ಎಂಬ ಮತ್ತೆರಡು ರೂಪಗಳಿವೆ. ಇದಕ್ಕೆ ದೂರದರ್ಶಕ ಯಂತ್ರ ಎಂದರ್ಥ. ದೂರದ ವಸ್ತುಗಳು ಹತ್ತಿರದಲ್ಲಿರುವಂತೆ ತೋರಿಸುವ ಸಾಧನ.

**ದುರ್ಭಿಕ್ಷದಲ್ಲಿ ಅಧಿಕ ಮಾಸ** ಅಧಿಕ ಮಾಸ ಎಂದರೆ ಸಂಕ್ರಮಣವಿಲ್ಲದ ಮಾಸ. ಸೂರ್ಯಮಾನಕ್ಕೆ ಸರಿಯಾಗುವಂತೆ ಚಾಂದ್ರಮಾನದ ವರ್ಷವನ್ನು ಎಣಿಸುವಾಗ ಮೂರು ವರ್ಷಕ್ಕೆ ಒಂದು ಸಲ ಒಂದು ತಿಂಗಳನ್ನು ಚಾಂದ್ರಮಾನಕ್ಕೆ ಸೇರಿಸಬೇಕಾಗುತ್ತದೆ. ಇದೇ ಅಧಿಕಮಾಸ ಅಥವಾ ಸೂರ್ಯನು ಯಾವ ಮುಂದಿನ ರಾಶಿಗೂ ಪ್ರವೇಶಿಸದೆ ಇರುವ ಮಾಸ. ಇಂಥ ಮಾಸವನ್ನು ಮಲಮಾಸ, ಶೂನ್ಯ ಮಾಸ ಎಂದೂ ಕರೆಯುತ್ತಾರೆ. ಇಂಥ ತಿಂಗಳಲ್ಲಿ ಯಾರೂ ಯಾವ ಶುಭ ಕಾರ್ಯವನ್ನು ಕೈಗೊಳ್ಳುವುದಿಲ್ಲ. ಆದರೆ ಶ್ರಾದ್ಧಾದಿ ಕಾರ್ಯಗಳನ್ನು ವಿಶೇಷವಾಗಿ ಮಾಡಲೇಬೇಕೆಂಬ ನಿಯಮವನ್ನು ಕೆಲವರು ವಿಧಿಸುತ್ತಾರೆ. ದುರ್ಭಿಕ್ಷ ಎಂದರೆ ಬರಗಾಲ, ಕ್ಷಾಮ. ಶ್ರಾದ್ಧಾದಿಗಳನ್ನು ಮಾಡಬೇಕಾದರೆ ನಿಮಂತ್ರಿತರಾಗಿ ಬಂದ ಬ್ರಾಹ್ಮಣರಿಗೆ ಪುಷ್ಕಳವಾದ ಭೋಜನವಾಗಬೇಕು. ಮೊದಲೇ ಬರಗಾಲ.

ಹೀಗಿರುವಾಗ ಶ್ರಾದ್ಧಾದಿಗಳ ಆಚರಣೆಗೆ ಏನು ಮಾಡಬೇಕು? ಅಂದರೆ ಬಹಳ ಕಷ್ಟದ ಕಾಲ ಬಂತು. 'ಕೈ ಕಟ್ಟಿಹೋಗಿದೆ' ಎಂದರ್ಥ.

**ದುರ್ಲಕ್ಷ್ಯ** ಎಂಬುದು ಸರಿಯಾದ ಶುದ್ಧವಾದ ಸಂಸ್ಕೃತ ಶಬ್ದ. ಇದಕ್ಕೆ ನೋಡಲು ಅಸಾಧ್ಯವಾದ ಎಂದರ್ಥ. ಪಂಪಮಹಾಕವಿಯೇ ಈ ಶಬ್ದವನ್ನು ಉಪಯೋಗಿಸಿದ್ದಾನೆ. **'ಸರ್ವಾಂಗೀಣ ಮೌಕ್ತಿಕಾಭರಣ ಕಿರಣಾಕೀರ್ಣ ಸುವರ್ಣ ದುರ್ಲಕ್ಷ್ಯ ಹರಿಚಂದನಾಗರು** (ಆದಿಪುರಾಣ ೭-೨೬ ವಚನ). ಹೊಸಗನ್ನಡದಲ್ಲಿ ಉದಾಸೀನತೆ ಎಂಬ ಅರ್ಥವಿದೆ.

**ದೂರಪ್ರಾಚ್ಯ** ಎಂದು ಇಂಗ್ಲಿಷಿನ Far east ಎಂಬುದರ ಅನುವಾದ. ಈ ಶಬ್ದಕ್ಕೆ ಏಷ್ಯಾ ಖಂಡದ ಪೂರ್ವಭಾಗದ ದಕ್ಷಿಣ ದೇಶಗಳು ಎಂದರ್ಥ. ಇದರಲ್ಲಿ ಚೀನ, ಕೊರಿಯಾ, ಜಪಾನ್ ಮತ್ತು ಮಲಯ ದೇಶಗಳು ಸೇರುತ್ತವೆ. ಆ ದೇಶಗಳಿಗೆ ಸಂಬಂಧಿಸಿದ ಎಲ್ಲಕ್ಕೂ ಈ ಶಬ್ದ ಪ್ರಯೋಗವಾಗುತ್ತದೆ.

**ದೂಳು** ಎನ್ನುವುದು ಸಂಸ್ಕೃತದ 'ಧೂಲಿ' ಶಬ್ದದ ತದ್ಭವ. ಇದಕ್ಕೆ ಹುಡಿ, ಚೂರ್ಣ, ಮಣ್ಣಿನ ಹುಡಿ ಮುಂತಾದ ಅರ್ಥಗಳುಂಟು. 'ಧೂಳು' ಎಂದೂ ಅನೇಕರು ಉಪಯೋಗಿಸುತ್ತಿದ್ದಾರೆ. ಅದು ಅಷ್ಟು ಸರಿಯಾದುದಲ್ಲ.

**ದೃಷ್ಟಾಂತ ನೋಡಿ: ಉದಾಹರಣೆ**

**ದೇಖೀಲು** ಇದು ಮರಾಠೀ ಭಾಷೆಯ ಶಬ್ದ. ಸಂಸ್ಕೃತ ಮೂಲದಿಂದ ಬಂದದ್ದು. ಇದಕ್ಕೆ ಅವ್ಯಯದ ಅಥವಾ ಕ್ರಿಯಾ ವಿಶೇಷಣ ಪ್ರಯೋಗಗಳಿವೆ. ಕೂಡಿ, ಸೇರಿ, ಒಟ್ಟಾಗಿ, ಎಲ್ಲರೂ ಹೊಂದಿಕೊಂಡು ಎಂಬ ಅರ್ಥದ ಶಬ್ದ. ಆದರೂ ಎಂಬ ಅರ್ಥವೂ ಬರುತ್ತದೆ.

**ದೇವ + ಆಲಯ = ದೇವಾಲಯ** ಎಂಬುದು ಲೋಪ ಸಂಧಿಯಾಗುವುದಿಲ್ಲ. ಇಲ್ಲಿರುವ ಎರಡೂ ಸಂಸ್ಕೃತ ಶಬ್ದಗಳು. ದೇವ ಎಂದು ಶಬ್ದದ ಕೊನೆಯ ಅಕಾರ ಲೋಪವಾಗಿಲ್ಲ. ಅದು ಮುಂದಿನ ಆಕಾರದಲ್ಲಿ ಲೀನವಾಗುತ್ತದೆ. ಅ, ಆ, ಇವು ಸವರ್ಣಗಳು. ಆದ್ದರಿಂದ ಅದು ಸವರ್ಣದೀರ್ಘ ಸಂಧಿ.

**ದೇವರು ದಿಂಡಿರು** ದೇವರು ಎಂದರೆ ದೇವತೆಗಳು. ದಿಂಡಿರು ಎಂದರೆ ಸಮರ್ಥರು, ಶಕ್ತರು, ಬಲಾಢ್ಯರು. ಪ್ರಾಚೀನ ಕಾವ್ಯವೊಂದರಲ್ಲಿ **'ದೇವರನೆತ್ತಬಲ್ಲ ಅವರೊತ್ತಿನ ದಿಂಡಿರನೆತ್ತಬಲ್ಲ'** ಎಂಬ ವಾಕ್ಯ ಬರುತ್ತದೆ.

**ದೇವರು - ಪರಮಾತ್ಮ** ಎಂಬುದು ಎರಡೂ ಒಂದೇ ಅರ್ಥವುಳ್ಳದ್ದು. ಆದರೆ ಅದನ್ನು ಉಪಯೋಗಿಸುವವರು ವಿಶಿಷ್ಟವಾಗಿ ಬೇರೆ ಬೇರೆಯಾಗಿ ಉಪಯೋಗಿಸುತ್ತಾರೆ. ಕನ್ನಡದಲ್ಲಿ ದೇವರನ್ನು ಕರೆಯುವ ಶಬ್ದವೇ ಇಲ್ಲ. ದೇವ ಸಂಸ್ಕೃತ ಶಬ್ದ. ನಾವು ಬಹುವಚನದಲ್ಲಿ ದೇವರು ಎನ್ನುತ್ತೇವೆ. ಆದರೆ ವಾಕ್ಯದಲ್ಲಿ ಉಪಯೋಗಿಸುವಾಗ ದೇವರು ಮಾಡುತ್ತಾನೆ. ಕಾಪಾಡುತ್ತಾನೆ ಮುಂತಾಗಿ ಏಕವಚನದ ಕ್ರಿಯಾಪದವನ್ನು ಉಪಯೋಗಿಸುತ್ತೇವೆ. ಪರಮ + ಆತ್ಮ ಸೇರಿ ಪರಮಾತ್ಮ ಆಗಿದೆ. ಅತಿಶ್ರೇಷ್ಠವಾದ ಆತ್ಮ ಎಂಬುದು ಹೆಚ್ಚಾಗಿ ತಾತ್ವಿಕ ಅರ್ಥವುಳ್ಳದ್ದು. ಜೀವ - ಆತ್ಮ ಇವುಗಳ ಬಗ್ಗೆ ವ್ಯತ್ಯಾಸವನ್ನು ಗಮನಿಸಿ.

**ದೇವರ್ಕಳ್, ಬುಧರ್ಕಳ್, ಪಂಡಿತರ್ಕಳ್** ಎಂಬುದಾಗಿ ಎರಡು ಬಹುವಚನ ಪ್ರತ್ಯಯಗಳನ್ನು ಹತ್ತಿಸಿರುವುದು ಸರಿಯೇ? ಇದಕ್ಕೆ ವ್ಯಾಕರಣಕಾರರ ಒಪ್ಪಿಗೆ ಇದೆ. ಆದರೆ ಆಧುನಿಕ ಕನ್ನಡದಲ್ಲಿ ಇದು ಕಡಮೆಯಾಗಿದೆ. ನಾವು ಎಂಬುದೂ ಬಹುವಚನ. ಜನ ಎಂಬುದೂ ಬಹುವಚನ. ಹೀಗಿರುವಾಗ ಮತ್ತೊಂದು ಪ್ರತ್ಯಯ ಅನಗತ್ಯ. ಆದರೆ ಜನರು ಎಂಬುದು ತಪ್ಪಾಗುವುದಿಲ್ಲ. ಜನಗಳು ಅಥವಾ ಜನರು ಎಂದಾಗಬಹುದು. ಜನರುಗಳು ತಪ್ಪು. ಆದರೆ ಆಡುಮಾತಿನಲ್ಲಿ ಇಂಥ ಪ್ರಯೋಗಗಳು ವಿಶಿಷ್ಟ ಸಂದರ್ಭದಲ್ಲಿ

ಸರಿಯಾಗಬಹುದು. ವಿಧಾನಸೌಧದ ಮುಂದೆ ಎಲ್ಲ ಕಚೇರಿಯ ಗುಮಾಸ್ತರುಗಳೂ ಜವಾನರುಗಳೂ ಸೇರಿದ್ದರು. ದೇವರುಗಳ ಮೆರವಣಿಗೆ ಬರುತ್ತಿದೆ. ಎಂಟು ಮಠಗಳ ಸ್ವಾಮಿಗಳವರುಗಳು ದಯೆ ಮಾಡುತ್ತಾರೆ. ನೀವುಗಳೆಲ್ಲ ಮದುವೆಗೆ ಬರಬೇಕು. ಇಂಥ ವಾಕ್ಯಗಳನ್ನು ಗಮನಿಸಿ. ಅಲ್ಲಿ ವಿಶಿಷ್ಟವಾದ ಒಂದು ಅರ್ಥವಿರುವುದರಿಂದ ಅವುಗಳ ಉಪಯೋಗ ಸರಿ ಎಂದು ವಾದಿಸಬಹುದು. ಸಾಮಾನ್ಯವಾದ ಕಡೆಗಳಲ್ಲಿ ಎರಡು ಬಹುವಚನ ಪ್ರತ್ಯಯಗಳನ್ನು ಸೇರಿಸಬಾರದು.

**ದೇಶ-ರಾಷ್ಟ್ರ** ಈ ಎರಡು ಶಬ್ದಗಳ ಉಪಯೋಗದಲ್ಲಿ ನಿರ್ದಿಷ್ಟವಾದ ಅರ್ಥ ವ್ಯತ್ಯಾಸವು ಪ್ರಯೋಗದಲ್ಲಿ ಕಾಣಬರುತ್ತಿಲ್ಲ. ಈ ಎರಡನ್ನೂ ಒಂದೇ ಅರ್ಥದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ನಿಘಂಟುಗಳಲ್ಲಿ ಕೂಡ **ದೇಶ**, **ರಾಷ್ಟ್ರ**, **ವಿಷಯ** ಎಂಬ ಎಲ್ಲ ಶಬ್ದಗಳನ್ನೂ ಒಂದೇ ಅರ್ಥದಲ್ಲಿ ವಿವರಿಸುತ್ತಾರೆ. ದಿಶ ಎಂಬುದರಿಂದ ದೇಶ ಬಂದಿದೆ. ರಾಜ್ ಎಂಬ ಶಬ್ದದಿಂದ ರಾಷ್ಟ್ರ ಬಂದಿದೆ ಎಂದು ಕೆಲವರು ಟೀಕಾಕಾರರು ಹೇಳುತ್ತಾರೆ. ನಮ್ಮ ಭಾರತವನ್ನು ಒಟ್ಟಾಗಿ ಕಾಣುವಾಗ, ವಿವರಿಸುವಾಗ ರಾಷ್ಟ್ರ ಎಂಬುದು ಸರಿಯೆಂದೂ, ರಾಷ್ಟ್ರದ ವಿಭಾಗಗಳನ್ನು ದೇಶ ಎಂದು ಕರೆಯಬೇಕೆಂದೂ ಒಂದು ಅಭಿಪ್ರಾಯ ಇದ್ದಂತಿದೆ. ರಾಷ್ಟ್ರಪತಿ ಎಂಬ ಶಬ್ದವನ್ನು ಯಾರೂ **ದೇಶಪತಿ** ಎಂದಾಗಲೀ **ವಿಷಯ ಪತಿ** ಎಂದಾಗಲೀ ಪ್ರಯೋಗಿಸುತ್ತಿಲ್ಲ. ದೇಶ ಎಂದರೆ ಪ್ರದೇಶ, ಸ್ಥಳ, ಜನಪದ ಎಂಬ ಅರ್ಥ ಸರಿಹೊಂದುತ್ತದೆ. ಆದರೆ ನಮ್ಮ ದೇಶ ಎಂದಾಗ ಅದು ರಾಷ್ಟ್ರವೇ ಆಗುತ್ತದೆ. ದೇಶೀಯ ಎಂದರೆ ಪ್ರದೇಶೀಯ. ರಾಷ್ಟ್ರೀಯ ಎಂದರೆ ಒಟ್ಟು ಭಾರತದ ಎಂದು ಅರ್ಥ ಮಾಡಲು ಅಭ್ಯಾಸ ಮಾಡಿದರೆ ಸರಿಯಾದೀತು. ಅಂತರ್ದೇಶೀಯ ಎಂದಾಗ ನಮ್ಮ ದೇಶದೊಳಗಣ ಎಂದರ್ಥ. ಅಂತಾರಾಷ್ಟ್ರೀಯ ಅಥವಾ ಅಂತರ್ರಾಷ್ಟ್ರೀಯ ಎಂದರೆ ಬೇರೆ ಬೇರೆ ರಾಷ್ಟ್ರಗಳ ನಡುವೆ ಎಂಬ ಅರ್ಥ ಬರುವುದಿಲ್ಲವೇ? ಅಂತೂ ಈ ಶಬ್ದಗಳ ಪ್ರಯೋಗದಲ್ಲಿ ಗೊಂದಲವಿದೆ ಎಂಬ ಬಗ್ಗೆ ಅನುಮಾನವಿಲ್ಲ. ಆದರೂ ಎರಡು ಶಬ್ದಗಳನ್ನೂ ಒಟ್ಟು ರಾಷ್ಟ್ರಕ್ಕೆ ಅನ್ವಯಿಸುತ್ತಿರುವಾಗ ತಪ್ಪು ಅರ್ಥ ಬರುವುದಿಲ್ಲ. ಸಮಾಸಗಳಲ್ಲಿ ಬಳಸುವಾಗ ಎಚ್ಚರಿಕೆ ವಹಿಸಬೇಕು. ರಾಷ್ಟ್ರ ಎನ್ನುವುದನ್ನು ಒಟ್ಟು ಭಾರತಕ್ಕೂ ದೇಶ ಎನ್ನುವುದನ್ನು ದೇಶಭಾಗಕ್ಕೂ ಅನ್ವಯಿಸುವಂತೆ ಸಮಾಸ ಶಬ್ದಗಳನ್ನು ಉಪಯೋಗಿಸಬೇಕು. ರಾಜಕೀಯವಾಗಿ ಸರ್ವತಂತ್ರ ಸ್ವತಂತ್ರವಾಗಿರುವ (Sovereign) ಭೂ ಭಾಗಕ್ಕೆ ರಾಷ್ಟ್ರ (country) ಎಂದೂ ಆ ರಾಷ್ಟ್ರದ ಒಳವಿಭಾಗಗಳಿಗೆ ದೇಶ (state) ಎಂದೂ ಉಪಯೋಗಿಸುವುದನ್ನು ನಿರ್ದಿಷ್ಟಗೊಳಿಸಬೇಕು. ರಾಷ್ಟ್ರಗೀತೆ ಸರಿ, ಇದು National Anthem. ದೇಶಗೀತೆ ಎಂಬ ಶಬ್ದ ಪ್ರಯೋಗದಲ್ಲಿಲ್ಲ. ಆದರೆ ದೇಶಭಕ್ತಿ ಗೀತೆಗಳು ಇವೆ. ಇವು National Songs, Patriotic Songs. ಇಂಥ ಪ್ರಯೋಗಗಳಲ್ಲಿ ರಾಷ್ಟ್ರ ಭಕ್ತಿ ಎಂದೇ ಅರ್ಥ. ಶಬ್ದಗಳಿಗೆ ನಾನಾರ್ಥವಿರುವಾಗ ಈ ಸಂದೇಹಗಳು ಹುಟ್ಟುತ್ತವೆ. Inland Letter ಎಂಬುದನ್ನು ಅಂತರ್ದೇಶೀಯ ಪತ್ರ ಎಂದು ಅರ್ಥ ಬರುವಂತೆ ಉಪಯೋಗಿಸಿರುವುದು ಸರಿಯಾಗಿದೆ.

**ದೇಶಪಾಂಡೆ** ಇದು ಮರಾಠೀ ಭಾಷೆಯ ಶಬ್ದ. ಒಂದು ಜಿಲ್ಲೆಯ ಮುಖ್ಯ ಅಧಿಕಾರಿಯ ಹೆಸರು. ಪಾಂಡೆ ಎಂಬುದು ಹಿಂದೀ ಶಬ್ದ ಅದಕ್ಕೆ ಮೂಲ ಸಂಸ್ಕೃತದ ಪಂಡಿತ. ಇದೇ ಪಂಡಾ, ಪಾಂಡಾ ಎಂಬ ರೂಪಗಳನ್ನು ಹಿಂದಿಯಲ್ಲಿ ಪಡೆಯುತ್ತದೆ. ದೇಶ, ಒಂದು ಭೂಭಾಗ, ಜಿಲ್ಲೆ. ಅದರ ಮುಖ್ಯ ಅಧಿಕಾರವನ್ನು ಹೊಂದಿರುವವನು ಪಾಂಡೆ. **ದೇಶಮುಖ್** ಎಂಬ ಶಬ್ದವೂ ಇದೇ ಅರ್ಥದಲ್ಲಿ ಉಪಯೋಗದಲ್ಲಿದೆ. ಮುಖ್ ಎಂಬುದು ಮುಖ್ಯ ಎಂಬ ಶಬ್ದದ ತದ್ಭವ.

**ದೇಶಾವರಿ** ಮರಾಠೀ ಭಾಷೆಯಲ್ಲಿ ದೇಶಾವರ್ ಎಂಬ ಶಬ್ದವಿದೆ. ಅದಕ್ಕೆ ಯಾವುದಾದರೂ ಶುಭಕಾರ್ಯಕ್ಕೆ ಮನೆ ಮನೆ ಊರೂರುಗಳಿಗೆ ಹೋಗಿ ಹಣವನ್ನು ಬೇಡಿ ಸಂಪಾದಿಸುವುದು ಎಂದು ಅರ್ಥ. ಅದೇ ಕನ್ನಡದಲ್ಲಿ ದೇಶಾವರ, ದೇಶಾವರಿ ಆಗಿದೆ. ಇದು ಗುಣವಾಚಕವಾಗಿಯೂ ನಾಮವಾಚಕವಾಗಿಯೂ ಪ್ರಯೋಗದಲ್ಲಿದೆ. ದೇಶಾವರಿ ನಗು ಎಂದರೆ ಕೃತ್ರಿಮವಾದ ನಗು. ನಗು ಬರದಿದ್ದರೂ ಸ್ವಪ್ರಯೋಜನಾರ್ಥವಾಗಿ ನಗುವನ್ನು ಬರಿಸಿಕೊಳ್ಳುವುದು ಎಂದು ಅದರ ನಿರ್ದಿಷ್ಟಾರ್ಥ.

**ದೇಹ** ಎಂದರೆ ಅನ್ನರಸಾದಿಗಳನ್ನು ಸೇವಿಸಿ ಅಭಿವೃದ್ಧಿ ಹೊಂದುತ್ತದೆ — **ರಿತೇ ಅನ್ನರಸೇನ ಇತಿ ದೇಹಃ ಎಂದು. ದೇಹ ಕ್ರಮೇಣ ಕ್ಷೀಣವಾಗುತ್ತದೆ — ಶ್ರೀರ್ಯತೇ ಕಾಲಕ್ರಮೇಣ ಇತಿ ಶರೀರಂ = ಶರೀರ.** ಈ ಎರಡು ಶಬ್ದಗಳಿಗೂ ಒಂದೇ ಅರ್ಥವಿದ್ದರೂ ಅದು ವ್ಯುತ್ಪತ್ತಿಗೊಂಡ ರೀತಿ ಮಾತ್ರ ಬೇರೆ ಬೇರೆ.

**ದೈತ್ಯ ನೋಡಿ:** ಅಸುರ.

**ದೈವದತ್ತ** ಎಂದರೆ ದೇವರಿಂದ ಕೊಡಲ್ಪಟ್ಟದ್ದು.

**ದೈವಾಯತ್ತ** ಎಂದರೆ ದೈವದ ಅಧೀನದಲ್ಲಿರುವುದು. ವೇಣೀಸಂಹಾರದಲ್ಲಿ ಕರ್ಣನ ಮಾತು **"ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷಂ"** ಬಹುಪ್ರಸಿದ್ಧವಾದುದು.

**ದೊಗ್ಗ** ಇದು ಕನ್ನಡದ ಶಬ್ದ. ಅಕ್ಕಿಯ ನುಚ್ಚಿನಿಂದ ಮಾಡಿದ ಹುಳಿ ಅಂಬಲಿ. ಇದು ಹುಳಿ ಮಾಡುವುದರಿಂದ ಹುದುಗು ಬರುತ್ತದೆ. ಧರ್ಮಾಮೃತದಲ್ಲಿ ಕವಿ ನಯಸೇನನು **ದೊಗ್ಗಳೆಯಂತೆ ಉರ್ಬಿ** ಎಂಬ ಪ್ರಯೋಗವನ್ನು ಪ್ರಯೋಗಿಸಿದ್ದಾನೆ. ದೊಗ್ಗ + ಅಳೆ = ಅಕ್ಕಿಯ ನುಚ್ಚಿನ ಅಂಬಲಿ ಮತ್ತು ಹುಳಿಮಜ್ಜಿಗೆ. ಇವೆರಡೂ ಸೇರಿದಂತೆ ಉರ್ಬಿ ಎಂದರ್ಥ. ವ್ಯಕ್ತಿಗೆ ಬರುವ ವ್ಯರ್ಥವಾದ ದರ್ಪವನ್ನು ಈ ಕವಿವಾಕ್ಯ ಸೂಚಿಸುತ್ತದೆ.

**ದೊಡ್ಡಸ್ತಿಕೆ - ದೊಡ್ಡಸ್ತನ** ಗೃಹಸ್ಥ, ತಟಸ್ಥ, ಮಧ್ಯಸ್ಥ ಎಂಬ ಸಂಸ್ಕೃತ ಶಬ್ದಗಳ ಸಾಮ್ಯದ ಮೇಲೆ ಕನ್ನಡ ರೂಪವನ್ನು ಮಾಡಿಕೊಂಡು ಅದಕ್ಕೆ ಇಕೆ ಪ್ರತ್ಯಯವನ್ನು ತನ ಪ್ರತ್ಯಯವನ್ನು ಹತ್ತಿಸಿ ಮಾಡಿಕೊಂಡಿರುವ ತಪ್ಪು ರೂಪಗಳಿವು. ಆದರೆ ವ್ಯಾಪಕವಾಗಿ ಬಳಕೆಗೆ ಬಂದು ಉಳಿದುಬಿಟ್ಟಿವೆ; ನೆಂಟಸ್ತನ ಎಂಬ ಶಬ್ದದ ಹಾಗೆ. ಅವುಗಳನ್ನು ಒಪ್ಪಿ ಉಪಯೋಗಿಸಬೇಕು ಅಷ್ಟೆ. ಭಾಷೆ ಬೆಳೆಯುವಾಗ ಹೀಗೆಲ್ಲ ವ್ಯತ್ಯಾಸಗಳಾಗುತ್ತವೆ. ಇವು ಒಂದು ಭಾಷೆ ಬೆಳೆಯುತ್ತಿದೆ ಎಂಬುದರ ದೃಷ್ಟಾಂತಗಳು.

**ದೊರೆ** ಶಬ್ದಕ್ಕೆ ಸ್ತ್ರೀಲಿಂಗ. ದೊರೆ ಕನ್ನಡದ ಶಬ್ದ ೧. ರಾಜ, ಪ್ರಭು ಎಂದರ್ಥ ೨. ಯೂರೋಪಿನಿಂದ ಬಂದ ಇಂಗ್ಲಿಷ್ ಅಧಿಕಾರಿಯನ್ನು ಹಿಂದೆ ಇಲ್ಲಿನ ಜನ ಹೆಚ್ಚಾಗಿ ಸೇವಕ ವರ್ಗದವರು ದೊರೆ ಎಂದು ಕರೆಯುತ್ತಿದ್ದರು. ೩. ಹಿರಿಮೆ, ಅತಿಶಯ ಎಂಬ ಅರ್ಥವೂ ಇದೆ. ಇದಕ್ಕೆ ತಮಿಳಿನಲ್ಲಿ ತುರೈ ಎಂದೂ ತೆಲುಗಿನಲ್ಲಿ ದೊರ ಎಂದೂ ಮಲೆಯಾಳದಲ್ಲಿ ತುರ ಎಂದೂ ಜ್ಞಾತಿ ಶಬ್ದಗಳಿವೆ. ಈ ಶಬ್ದಕ್ಕೆ ಸ್ತ್ರೀಲಿಂಗದ ರೂಪ ದೊರೆಸಾನಿ. ಸಾನಿ ಎನ್ನುವುದು ಸ್ವಾಮಿನಿ ಎಂಬ ಸಂಸ್ಕೃತ ಶಬ್ದದ ತದ್ಭವ. ಕನ್ನಡದಲ್ಲಿ ಅರಸ ಎಂಬ ಶಬ್ದಕ್ಕೆ ರಾಜ ಎಂದೇ ಅರ್ಥ. ಆ ಶಬ್ದಕ್ಕೆ ಸ್ತ್ರೀಲಿಂಗ ರೂಪವನ್ನು ಸಿದ್ಧಪಡಿಸಬೇಕಾದರೆ ಇ, ಇತಿ, ಇತ್ತಿ, ತಿ ಎಂಬ ಪ್ರತ್ಯಯಗಳನ್ನು ಹತ್ತಿಸುತ್ತೇವೆ. ಈ ಪ್ರತ್ಯಯಗಳು ಕೂಡ ಸಂಸ್ಕೃತದ ಸ್ತ್ರೀ ಶಬ್ದದಿಂದ ಬಂದವು. ಆಗ ಅರಸಿತಿ, ಅರಸಿತ್ತಿ, ಅರಸಿ ಎಂಬ ರೂಪಗಳು ಸಿದ್ಧವಾಗುತ್ತವೆ. ಅರಗುವರ - ರಾಜಕುಮಾರ, ಅರಗುವರಿ - ರಾಜಕುಮಾರಿ. ಆದರೆ ದೊರೆ ಎಂಬ ಶಬ್ದದಿಂದ ಅರಸ ಶಬ್ದದಿಂದ ಪಡೆದ ರೂಪಗಳನ್ನು ಯಾರೂ ಪ್ರಯೋಗಿಸಿಲ್ಲ. ಆದರೂ ದೊರೆ ಮಗಳು, ದೊರೆ ಮಗ ಎಂಬ ರೂಪಗಳಿವೆ. ಅರಸಾನಿ ಎಂಬ ರೂಪವೂ ಇದೆ. ಬಿ.ಎಂ. ಶ್ರೀಕಂಠಯ್ಯನವರು ದೊರೆ ತಾಯಿ ಎಂಬ ಶಬ್ದವನ್ನು

Queen Mother ಎಂಬ ಇಂಗ್ಲಿಷ್ ಶಬ್ದಕ್ಕೆ ಸಮಾನವಾಗಿರುವಂತೆ ಉಪಯೋಗಿಸಿದ್ದಾರೆ. (ನೋಡಿ ಪಾರಸೀಕರು - ೮-೧೭೭) **'ಅದೆಕೋ ಬರುವಳು.... ದೇವರ ಕಣ್ಬೊಳಪಿನ ದೊರೆ ತಾಯಿ.'**

**ದೋರ್ದಂಡ** ಎಂಬುದು ಒಂದು ರೂಪಕ. ಸಂಸ್ಕೃತದಲ್ಲಿ ದೋಸ್ ಎಂಬ ಶಬ್ದಕ್ಕೆ ತೋಳು, ಭುಜ ಎಂದರ್ಥ. ದಂಡ ಎಂಬುದು ದೊಣ್ಣೆ. ಸಮಾಸದಲ್ಲಿ ದೋಸ್ ಎಂಬುದು ದೋರ್ ಎಂದಾಗುತ್ತದೆ. ತೋಳೆಂಬ ದೊಣ್ಣೆ ಎಂದು ಈ ಶಬ್ದಕ್ಕೆ ಅರ್ಥ.

**ದೌವಾರಿಕ** ಈ ಸಂಸ್ಕೃತದ ಶಬ್ದಕ್ಕೆ ಬಾಗಿಲನ್ನು ಕಾಯಲು ನಿಯುಕ್ತವಾದವನು ಎಂದು ಅರ್ಥ. ದೌವಾರಿಕಿ ಎಂಬುದು ಸ್ತ್ರೀಲಿಂಗದಲ್ಲಿ ಪ್ರಯೋಗವಾಗುತ್ತದೆ. ಶಾಂತಿ ಪುರಾಣದ ಈ ಪ್ರಯೋಗವನ್ನು ನೋಡಿ - **ಖೇಚರಂ ಒಂದು ದೌವಾರಿಕ ವೇದಿತ ವೃತ್ತಾಂತನಾಗಿ.** ಆಗ ಅರ್ಥಸ್ಪಷ್ಟವಾಗುತ್ತದೆ. ದ್ವಾರಪಾಲಕ ಎಂಬುದು ಇದೇ ಅರ್ಥದ ಮತ್ತೊಂದು ಶಬ್ದ.

**ದ್ರವ್ಯಾನುಕೂಲ** = ಹಣದ ಸಹಾಯ. ಯಾವುದಾದರೂ ಕೆಲಸಕ್ಕೆ ಅಗತ್ಯವಾದಷ್ಟು ಧನಸಹಾಯ ಸಿಕ್ಕದಿದ್ದಾಗ ಜನರು ಈ ಶಬ್ದವನ್ನು ದ್ರವ್ಯಾನುಕೂಲ ಸಾಲದು ಎಂದೂ, ಸಿಕ್ಕಿದಾಗ ದ್ರವ್ಯಾನುಕೂಲ ಬೇಕಾದ ಹಾಗಿದೆ ಎಂದೂ ಮಾತನಾಡುತ್ತಾರೆ. ದ್ರವ್ಯ ಎಂದರೆ ಹಣ. ಇತರ ಅರ್ಥಗಳೂ ಇವೆ. ಈ ಸಂದರ್ಭದಲ್ಲಿ ಅದಕ್ಕೆ ಹಣ ಎಂದೇ ಅರ್ಥ.

**ದೃಷ್ಟಾರ** ಇದು ಸಂಸ್ಕೃತದ ದ್ರಷ್ಟೃ ಶಬ್ದದ ಕನ್ನಡ ರೂಪ. ಇದಕ್ಕೆ ದೈವಿಕವಾದ ತಿಳಿವಳಿಕೆಯುಳ್ಳವನು, ದಿವ್ಯವಾದ ದೃಷ್ಟಿಯನ್ನು ಹೊಂದಿರುವವನು ಎಂದರ್ಥ. ಇಂಥವರೆಲ್ಲರನ್ನೂ ದಾರ್ಶನಿಕರು ಎಂದು ಕರೆಯುತ್ತಾರೆ. ಕೆಲವರು ಮಂತ್ರ ದ್ರಷ್ಟಾರರಾಗಿರುತ್ತಾರೆ. ಒಂದು ಮಂತ್ರದಲ್ಲಿ ಅಡಗಿರುವ ದರ್ಶನವನ್ನು ಕಂಡವರಾಗುತ್ತಾರೆ.

**ದ್ರಾಭೆ** ಈ ಶಬ್ದಕ್ಕೆ ಮೂಲ ಸಂಸ್ಕೃತದ ದ್ರಾಪ. ಸಂಸ್ಕೃತದ ಶಬ್ದಕ್ಕೆ ೧. ಕೊಳಕು, ೨. ಕೆಸರು, ೩. ಮೂರ್ಖ ಎಂಬ ಅರ್ಥಗಳಿವೆ. ಕನ್ನಡದಲ್ಲಿ ದ್ರಾಭೆ ಶಬ್ದಕ್ಕೆ ಈ ಮೂರೂ ಸೇರಿದ ಅರ್ಥವಿದೆ. ಕೊಳಕನಾದ, ನಿಷ್ಪ್ರಯೋಜಕನಾದ, ಪೆದ್ದ ಎಂದರ್ಥ. ಇದೊಂದು ತರಹ ದುಷ್ಟಲಕ್ಷಣ. ಮನೆಯಲ್ಲಿ ಒಬ್ಬ ದ್ರಾಭೆ ಇದ್ದರೆ ಸಾಕು, ಆ ಮನೆಗೆ ಅದು ಹರಡಿಕೊಳ್ಳುವ ಸ್ವಭಾವವುಳ್ಳದ್ದು. ತುಂಬ ಎಚ್ಚರದಿಂದ ಇರಬೇಕು. ಅಂಟುರೋಗಕ್ಕೆ ಸಮಾನವಾದ ಈ ದುರ್ಗುಣದ ಹತ್ತಿರ ಇದ್ದರೂ ಕಷ್ಟ.

**ದ್ರಾವಿಡ ಪ್ರಾಣಾಯಾಮ ಎಂದರೇನು?** ಪ್ರಾಣಾಯಾಮ ಎಂದರೆ ಪ್ರಾಣವಾಯುವನ್ನು ನಿರೋಧಗೊಳಿಸುವುದು ಅಥವಾ ತಡೆದು ನಿಲ್ಲಿಸುವುದು. ಇದು ಅಷ್ಟಾಂಗ ಯೋಗದ ಒಂದು ಅಂಶ. ಇದು ಪ್ರಾಣವಾಯುವು ದೇಹದಲ್ಲಿ ಹೆಚ್ಚುಕಾಲ ಇರುವಂತೆ ಮಾಡಿ ಬಹಳ ಕಾಲ ಜೀವಿಸಿರುವ ಮಾರ್ಗ. ಇದೇ ಪ್ರಾಣಾಯಾಮ. ಉಸಿರನ್ನು ಹಿಡಿದು ನಿಲ್ಲಿಸಬೇಕಾದರೆ ಮೂಗಿನ ಹೊಳ್ಳೆಗಳನ್ನು ನಿಯಮಕ್ಕೆ ಒಳಪಡಿಸಬೇಕು ಮೂಗಿನ ಎಡಗಡೆಯ ಹೊಳ್ಳೆಯಿಂದ ಉಸಿರನ್ನು ಶ್ವಾಸಕೋಶಕ್ಕೆ ತುಂಬಬೇಕು. ಇದಕ್ಕೆ ಪೂರಕ ಎಂದು ಹೆಸರು. ಬಳಿಕ ದೇಹದ ಒಳಗಡೆಯೇ ಇರುವಂತೆ ನಿಲ್ಲಿಸಬೇಕು. ಇದು ಕುಂಭಕ. ಆ ಬಳಿಕ ಸ್ವಲ್ಪ ಹೊತ್ತು ಜಪಮಾಡಿ ಉಸಿರನ್ನು ಹೊರಗಡೆಗೆ ಬಿಡಬೇಕು. ಇದು ರೇಚಕ. ಹೀಗೆ ಉಸಿರನ್ನು ಹತೋಟಿಗೆ ತರುವುದೇ ಪ್ರಾಣಾಯಾಮ. ಹೀಗೆ ಮಾಡುವುದಕ್ಕೆ ಕೈಬೆರಳುಗಳಿಂದ ಮೂಗಿನ ಹೊಳ್ಳೆಗಳನ್ನು ಅಮುಕಿ ತಡೆಯಬೇಕಾಗುತ್ತದೆ. ಕರ್ನಾಟಕ ದೇಶದಲ್ಲಿ ಕೈ ಬೆರಳುಗಳನ್ನು ನೇರವಾಗಿ ಮೂಗಿನ ಬಳಿಗೆ ತರುತ್ತಾರೆ. ದ್ರಾವಿಡ ದೇಶದ ಜನರು ತಮ್ಮ ಕೈಯಿಂದ ತಲೆಯನ್ನು ಒಂದು ಸಲ ಬಲಗಡೆಯಿಂದ ಎಡಗಡೆಗೆ ಬಳಸಿ ಬಳಿಕ ಮೂಗಿನ ಬಳಿಗೆ ತರುತ್ತಾರೆ. ಇದೇ ದ್ರಾವಿಡ ಪ್ರಾಣಾಯಾಮ. ನೇರವಾಗಿಲ್ಲದೆ ಸುತ್ತಿ ಬಳಸುವ ಎಲ್ಲ ಕೆಲಸವನ್ನೂ ದ್ರಾವಿಡ ಪ್ರಾಣಾಯಾಮ ಎಂದು ಕರೆಯುತ್ತಾರೆ. **ಕೊಂಕಣ ಸುತ್ತಿ**

ಮೈಲಾರಕ್ಕೆ ಬಂದರು ಎಂಬ ಗಾದೆ ಇದೆ. ಮೈಲಾರ ಒಂದು ಊರು. ಆ ಊರಿನ ಪಕ್ಕದ ಊರಿನವರು ನೇರವಾಗಿ ಮೈಲಾರಕ್ಕೆ ಹೋಗದೆ ಕೊಂಕಣವನ್ನು ಸುತ್ತಿ ಮೈಲಾರ ಎಂಬ ಊರಿಗೆ ಬಂದ ಹಾಗೆ ಸುತ್ತಿಸುತ್ತಿ ಬರುವುದು ಎಂದರ್ಥ ಆ ಗಾದೆಗೆ. ಈ ಎರಡೂ ಒಂದೇ ಅರ್ಥದ ಬೇರೆ ಬೇರೆ ಪದಪುಂಜಗಳು.

**ದ್ವಿಜಾವಂತಿ** ಎಂಬ ಶಬ್ದವು ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದೆ. ಬೇರೆಯ ಕಡೆಗಳಲ್ಲಿ ಪ್ರಯೋಗವಾದಂತೆ ನನಗೆ ತಿಳಿದು ಬಂದಿಲ್ಲ. ಆದರೆ ಸಂಗೀತ ಶಾಸ್ತ್ರ ಪ್ರಪಂಚದಲ್ಲಿಯೂ ಈ ರಾಗಕ್ಕೆ ಬೇರೆ ಬೇರೆ ಪರ್ಯಾಯ ಶಬ್ದಗಳಿರುವುದು ಕಂಡು ಬಂದಿದೆ - ಜಯವಂತಿ, ಜಯ ಜಯವಂತಿ, ವೈಜಯಂತಿ, ಜಿಜಾವಂತಿ, ಜುಜಾವಂತಿ, ಜಯಂತಿ ಇತ್ಯಾದಿ. ಈ ಶಬ್ದದ ವ್ಯುತ್ಪತ್ತಿಯನ್ನು ತಿಳಿಸುವುದು ಕಷ್ಟ.

**ದ್ವೀಪ** ಎಲ್ಲ ಕಡೆಗಳಲ್ಲಿ ನೀರು ಸುತ್ತುವರಿದಿರುವ ಭೂ ಪ್ರದೇಶ ಎಂದರ್ಥ. ಇದಕ್ಕೆ ಅಂತರೀಪ ಎಂಬ ಹೆಸರೂ ಇದೆ. ನೀರಿನ ಮಧ್ಯೆ ಇರುವ ಭೂಮಿ ಎಂದು ಅದಕ್ಕೆ ಅರ್ಥ. ದ್ವಿಪ ಎಂಬ ಪದ ಇದೆ. ಅದಕ್ಕೆ ಆನೆ ಎಂದರ್ಥ. ಸೊಂಡಿಲು ಮತ್ತು ಬಾಯಿ ಎರಡರಿಂದಲೂ ನೀರು ಕುಡಿಯುವುದರಿಂದ ದ್ವಿ + ಪ ಸೇರಿ ದ್ವಿಪ = ಆನೆ ಆಗಿದೆ.

# ಧ

**'ಧಡೂತಿ - ದಡೂತಿ'** ಧಡೂತಿ ಶಬ್ದ ಮರಾಠಿ ಭಾಷೆಯಿಂದ ಕನ್ನಡಕ್ಕೆ ಬಂದುದು. ಆದುದರಿಂದ ಅದರಲ್ಲಿ ಮಹಾಪ್ರಾಣವೇ ಮೊದಲಕ್ಷರವಾಗಿದೆ. ಕನ್ನಡದವರು 'ದಡೂತಿ' ಎಂದು ಉಪಯೋಗಿಸುತ್ತಾರೆ. ಅದೂ ಸರಿಯಾದುದೆ. ಆದರೆ 'ದಢೂತಿ' ಸಾಧುವಲ್ಲ. ದಡೂತಿ = ಗಟ್ಟಿಮುಟ್ಟಾದ.

**ಧನುರ್ಧರ** ಈ ಶಬ್ದಕ್ಕೆ ಧನುಸ್ಸನ್ನು ಹಿಡಿದಿರುವವನು ಎಂದರ್ಥ. ಧನುಸ್ಸು ಎಂದರೆ ಬಿಲ್ಲು. ಆದುದರಿಂದಲೇ ಬಿಲ್ಲು ಹಿಡಿದಿರುವವನಿಗೆ ಈ ಶಬ್ದ ಅನ್ವಯಿಸುತ್ತದೆ. ಇದೇ ಶಬ್ದಕ್ಕೆ ಜ್ಯೋತಿಷ್ಯದಲ್ಲಿ ಧನೂರಾಶಿ ಎಂಬ ಅರ್ಥವೂ ಬರುತ್ತದೆ. ಮೇಷದಿಂದ ಹಿಡಿದು ಒಂಬತ್ತನೆಯ ರಾಶಿ ಅದು.

**ಧನ್ಯವಾದ** ಎಂಬ ಸಂಸ್ಕೃತ ಶಬ್ದಕ್ಕೆ ಧನ್ಯನು ಆಡುವ ಮಾತು, ಕೃತಜ್ಞತೆಯ ಮಾತು ಎಂದರ್ಥ. ಹಿಂದೀ ಭಾಷೆಯ ಜನರು ಈ ಮಾತನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಧನ್ಯ ಶಬ್ದಕ್ಕೆ ಅದೃಷ್ಟವಂತ, ಭಾಗ್ಯವಂತ ಎಂದರ್ಥ. ಹಿಂದೀ ಭಾಷಾ ಮರ್ಯಾದೆಗೆ ತಕ್ಕಂತೆ ಧನ್ಯವಾದ ಎಂಬ ರೂಪ ಪ್ರಸಿದ್ಧ. ಇಂಗ್ಲಿಷಿನ Thanks ಗೆ ಸಮಾನವಾದುದು.

**ಧರ್ಮ** ಇದು ಸಂಸ್ಕೃತದ ಶಬ್ದ. ಧೃ ಎಂಬ ಧಾತುವಿಗೆ ಧಾರಣ ಮಾಡು ಎಂದರ್ಥ. ಸಂಸ್ಕೃತದಲ್ಲಿ ಈ ಶಬ್ದವನ್ನು **ಧ್ರಿಯತ ಇತಿ ಧರ್ಮಃ** ಎಂದು ವಿವರಿಸುತ್ತಾರೆ. **ಧಾರಯತಿ ಜಗಂತೀತಿ ಧರ್ಮಃ** ಎಂಬ ಇನ್ನೊಂದು ವಿವರಣೆಯೂ ಇದೆ. ಈ ಶಬ್ದಕ್ಕೆ ನೈತಿಕ ಮತ್ತು ಮತೀಯವಾದ ವ್ಯವಹಾರ, ಪ್ರಕೃತಿ, ರೂಢಿ, ಯಮಧರ್ಮರಾಯ, ದೇಹದ ಆರೋಗ್ಯ, ಸೋಮರಸ, ಉಪನಿಷತ್ತು, ಪಾಂಡುವಿನ ಮಗ ಯುಧಿಷ್ಠಿರ ಎಂಬೆಲ್ಲ ಅರ್ಥಗಳೂ ಬರುತ್ತವೆ. ಧರ್ಮವನ್ನು ಯಾರು ರಕ್ಷಿಸುತ್ತಾರೋ ಅವರನ್ನು ಧರ್ಮವು ರಕ್ಷಿಸುತ್ತದೆ ಎಂಬುದು ಪ್ರಾಚೀನ ಋಷಿವಾಣಿ.

**ಧಾಡಿ ಎಂದರೇನು?** ದಾಡಿ, ಧಾಡಿ ಎಂದು ಎರಡು ರೂಪದಲ್ಲಿಯೂ ಈ ಶಬ್ದ ಪ್ರಯೋಗವಾಗುತ್ತಿದೆ. ಇದು ಕನ್ನಡಕ್ಕೆ ಮರಾಠೀ ಭಾಷೆಯಿಂದ ಬಂದ ಶಬ್ದ. ಮರಾಠಿಯಲ್ಲಿ

ಧಾಡ್ ಎಂದರೆ ಪೆಟ್ಟು, ಹೊಡೆತ, ಹಲ್ಲೆ ಎಂಬ ಅರ್ಥವಿದೆ. ಕನ್ನಡದಲ್ಲಿ ಕಷ್ಟ, ತೊಂದರೆ, ಪೀಡೆ, ವಿಪತ್ತು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಅವನಿಗೇನು ಧಾಡಿ ? ಎಂದರೆ ಅವನಿಗೇನೂ ತೊಂದರೆಯಿಲ್ಲ, ಕೆಡುಕಿಲ್ಲ, ಕಡಿಮೆಯಾಗಿಲ್ಲ ಎಂಬುದೇ ನಿಜವಾದ ಅರ್ಥ.

ಗಡ್ಡ ಎಂಬರ್ಥದ ದಾಡಿ ಎಂಬ ಕನ್ನಡ ಶಬ್ದವಿದೆ. ಅದು ಸಂಸ್ಕೃತದ ದಾಢಿಕಾ ಎಂಬುದರಿಂದ ಪ್ರಾಕೃತ ಭಾಷೆಯ ದಾಢಿಆ ಎಂದಾಗಿ, ಕನ್ನಡದಲ್ಲಿ ದಾಡಿ ಎಂದಾಗಿದೆ. ಇದು ಮುಖದ ಕೆಳಭಾಗದಲ್ಲಿರುವ ಕೂದಲು. ಇವೆರಡಕ್ಕೂ ಮೂಲ ಬೇರೆ ಬೇರೆ. ಅರ್ಥವೂ ಬೇರೆ.

**ಧಾತು ಯಾವ ಶಬ್ದ?** ಧಾತು ಸಂಸ್ಕೃತದ ಶಬ್ದ. ಇದಕ್ಕೆ ಸುಮಾರು ಹದಿನೈದು ಅರ್ಥಗಳಿವೆ. ಆಯಾ ಸಂದರ್ಭಕ್ಕೆ ತಕ್ಕ ಹಾಗೆ ಆ ಶಬ್ದವನ್ನು ಉಪಯೋಗಿಸಬಹುದು ಕೆಲವು ಅರ್ಥಗಳನ್ನು ಇಲ್ಲಿ ತಿಳಿಸುತ್ತೇನೆ.

*೧. ಬ್ರಹ್ಮ ೨. ದೇಹದಲ್ಲಿರುವ ಏಳು ಧಾತುಗಳು: ಅನ್ನ, ರಕ್ತ, ಮಾಂಸ, ಮೇದಸ್ಸು, ಮೂಳೆ, ಮಜ್ಜೆ ಮತ್ತು ಶುಕ್ರ ಅಥವಾ ವೀರ್ಯ. ೩. ಚಿನ್ನ ಬೆಳ್ಳಿ ಮುಂತಾದ ಏಳು ಧಾತುಗಳು, ೪. ಶಿಲಾವಿಕಾರಗಳು, ೫. ಲೋಹ ಇತ್ಯಾದಿ.* ವ್ಯಾಕರಣದಲ್ಲಿ ಕ್ರಿಯಾಪದದ ಮೂಲಕ್ಕೂ ಈ ಶಬ್ದವೇ ಅನ್ವಯವಾಗುತ್ತದೆ.

**ಧಾತುವಿಗೆ ಭೂತಕಾಲ ಆಖ್ಯಾತ ಪ್ರತ್ಯಯ ಹತ್ತುವಾಗ ದ್ವಿತ್ವದಲ್ಲಿ ವ್ಯತ್ಯಾಸವೂ ಕೆಲವು ವೇಳೆ ಅನುಸ್ವಾರವೂ ಬರುವುದೇಕೆ?** ಎಂಬ ಒಂದು ಪ್ರಶ್ನೆ ಉಂಟು.

ಕನ್ನಡದಲ್ಲಿ ಭೂತಕಾಲದಲ್ಲಿ ಧಾತುಗಳಿಗೆ ದ ಎಂಬ ಪ್ರತ್ಯಯವು ಹತ್ತುತ್ತದೆ. ಧಾತುವು ಇಕಾರಾಂತ, ಉಕಾರಾಂತ, ಎಕಾರಾಂತವಾದರೆ ಬರುವ ರೂಪಗಳು ಹೀಗಿರುತ್ತವೆ. ಹಿಡಿ + ದ + ಅನು = ಹಿಡಿದನು, ಮಾಡಿದನು, ತೆಗೆದನು ಇತ್ಯಾದಿ. ಆದರೆ ಡಕಾರಾಂತ, ಳಕಾರಾಂತಗಳಿಗೆ ಬೇರೆ ರೂಪ ಬರುತ್ತದೆ. ನೆಡು + ದ + ಅನು = ನೆಟ್ಟನು. ಅಳು + ದ + ಅನು = ಅತ್ತನು. ತೆರು + ದ + ಅನು = ತೆತ್ತನು. ಇದಕ್ಕೆ ಕಾರಣ ಡ್ದ, ಳ್ದ, ರ್ದ ಎಂಬ ಉಚ್ಚಾರಣೆ ಕಠಿಣವಾದುದರಿಂದ ಉಚ್ಚಾರಣೆಯ ಸೌಲಭ್ಯಕ್ಕಾಗಿ ಅವು ಟ್ಟ, ದ್ದ ಎಂಬ ರೂಪವನ್ನು ಪಡೆಯುತ್ತವೆ. ಹಾಗೆಯೇ ಬೇ, ಬೆಯ್ + ದ + ಅನು = ಬೆಂದನು ಆಗುತ್ತದೆ. ಇದಕ್ಕೆ ಕಾರಣ ಧಾತುವಿನ ಅಂತ್ಯದ ಯ ಕಾರವು ಅನುನಾಸಿಕವೂ ಅನನುನಾಸಿಕವೂ ಆಗಿರುತ್ತದೆ. ಅನುನಾಸಿಕವಾದಾಗ ಬೆಂದನು ಅನನುನಾಸಿಕವಾದಾಗ ಬಯ್ + ದ + ಅನು = ಬಯ್ದನು ಹೀಗೆ ಈ ರೂಪಗಳು ಸಿದ್ಧಿಸುತ್ತವೆ.

**ಧಾರಾವಾಹಿ** ಎಂಬುದು ಸಂಸ್ಕೃತದ ಧಾರಾವಾಹಿನ್ ಶಬ್ದದ ತದ್ಭವ. ಎಡಬಿಡದೆ ಮುಂದುವರೆಯುವುದು ಎಂದರ್ಥ. **'ಧಾರಾಕಾರವಾಗಿ ಮಳೆ ಸುರಿಯುತ್ತಿದೆ'** - ಎಂಬ ವಾಕ್ಯವನ್ನು ನೋಡಿ. ಧಾರಾವರ್ಷ ಅಂದರೆ ಎಡೆಬಿಡದೆ ನೀರು ಸುರಿಯುವುದು ಎಂದರ್ಥ. ಧಾರಾವಾಹಿ ಎನ್ನುವುದು ಈ ಎರಡು ಅರ್ಥಗಳನ್ನೂ ಒಳಗೊಂಡಿದೆ. ಇದನ್ನು ಅನುಸರಿಸಿ ಯಾವ ಭಾನುವಾರವನ್ನೂ ಬಿಡದೆ ವಾರಪತ್ರಿಕೆಗಳಲ್ಲಿ ಧಾರಾವಾಹಿ ಕಾದಂಬರಿಗಳು ಪ್ರಕಟವಾಗುತ್ತಿವೆ. ದಿನಪತ್ರಿಕೆಯಲ್ಲಿ ಬರುವ ಧಾರಾವಾಹಿಗಳೂ ಉಂಟು. ಎರಡನ್ನೂ ಬಿಡದೆ ಓದುವ ಜನ ಒಂದು ಕಥೆಯ ನಾಯಕನನ್ನು ಇನ್ನೊಂದು ಕಥೆಯ ನಾಯಕಿಯೊಡನೆ ಬೆಸೆದು ಬೇಸ್ತು ಬೀಳುವುದೂ ಉಂಟು. ಧಾರವಾಹಿ ಎಂಬುದು ತಪ್ಪು ಶಬ್ದ. ಅದನ್ನು ಉಪಯೋಗಿಸಬಾರದು.

**ಧೀರೋದಾತ್ತ** ಧೀರೋದಾತ್ತ, ಧೀರೋದ್ಧತ ಇವೆರಡೂ ಕಾವ್ಯಮೀಮಾಂಸೆಗೆ ಸೇರಿದ ಶಬ್ದಗಳು. ಇವೆರಡೂ ಕಾವ್ಯಗಳಲ್ಲಿ ಬರುವ ನಾಯಕರನ್ನು ವರ್ಣಿಸುತ್ತವೆ. ಧೀರೋದಾತ್ತ

ಎಂದರೆ ಉದಾತ್ತವಾದ ಗುಣಗಳಿಂದಲೂ ಗಾಂಭೀರ್ಯದಿಂದಲೂ ಕೂಡಿದ ನಾಯಕ. ಮಹಾಶಕ್ತಿಯ ಜೊತೆಗೆ ಕ್ಷಮಾಗುಣವುಳ್ಳ ವಿನಯವಂತನೂ ದಕ್ಷನೂ ಆದ ವ್ಯಕ್ತಿ.

ಧೀರೋದ್ಧತ = ಧೀರನ ಗುಣಗಳೊಡನೆ ಉದ್ಧತನ ಗುಣಗಳನ್ನು ಹೊಂದಿರುವ ವ್ಯಕ್ತಿ. ಪರಾಕ್ರಮ, ದರ್ಪ, ಅಸೂಯೆ, ಅಹಂಕಾರ, ಚಾಂಚಲ್ಯಾದಿ ಗುಣಗಳಿಂದ ಕೂಡಿರುವವ. ರಾಮ, ಹರಿಶ್ಚಂದ್ರರು ಧೀರೋದಾತ್ತರು. ರಾವಣ, ದುರ್ಯೋಧನ ಇವರು ಧೀರೋದ್ಧತರು. ಕಾವ್ಯಗಳಲ್ಲಿ ಧೀರೋದ್ಧತರು ಪ್ರತಿನಾಯಕರಾಗಿರುತ್ತಾರೆ.

**ಧುರಂಧರ** ಈ ಸಂಸ್ಕೃತ ಶಬ್ದಕ್ಕೆ ಭಾರವನ್ನು ಹೊತ್ತಿರುವವನು ಎಂದರ್ಥ. ವ್ಯಾಪಕವಾಗಿ ಮುಂದಾಳು, ಹೊಣೆಗಾರ, ಉತ್ತಮ, ಶ್ರೇಷ್ಠ ಎಂಬ ಅರ್ಥಗಳೂ ಬರುತ್ತವೆ.

**ಧೂಮ** ಧೂಮ್ರ ಎಂಬ ಎರಡೂ ಶಬ್ದಗಳೂ ಸಂಸ್ಕೃತದಲ್ಲಿವೆ. ಧೂಮ ಎಂದರೆ ಹೊಗೆ. ಧೂಮ್ರ ಎಂದರೆ ಬೂದಿಯ ಬಣ್ಣ. ಹೊಗೆಯ ಬಣ್ಣ - **ಸಂಸ್ಕೃತದಲ್ಲಿ ಧೂಮ್ರಪಾನಿನ್** ಎಂದರೆ ತಪಸ್ಸಿನ ಸಮಯದಲ್ಲಿ ಪಂಚ ಅಗ್ನಿಗಳ ನಡುವೆ ಕುಳಿತು ಹೊಗೆಯನ್ನು ಕುಡಿಯುವವನು ಎಂಬ ಅರ್ಥವಿದೆ. ಆದರೂ ಧೂಮಪಾನ ಎಂಬುದೇ ಸಮಾಜದ ಈಗಿನ ಪದ್ಧತಿಗೆ ಸರಿಯಾದ ಶಬ್ದ. ಆರೋಗ್ಯ ದೃಷ್ಟಿಯಿಂದ ಪದ್ಧತಿ ಸರಿಯೇ ಎಂಬುದನ್ನು ಹೊಗೆ ಕುಡಿಯುವವರು ಆಲೋಚಿಸಬೇಕು. **ಧೂಮಪಾನ - ಧೂಮ್ರಪಾನ** ಈ ಎರಡೂ ಸರಿ. ಆದರೆ ಧೂಮವನ್ನು ಪಾನ ಮಾಡುವುದು ಹೇಗೆ ? ಎಂಬ ಪ್ರಶ್ನೆ ಹಾಗೆಯೇ ಉಳಿದುಬಿಡುತ್ತದೆ. ಇಂಗ್ಲಿಷ್ ಭಾಷೆಯಲ್ಲಿ smoke ಎಂಬುದು ಕ್ರಿಯಾಪದ. ಹಾಗೆಯೇ **ಧೂಮಿಸು** ಎಂಬ ಕನ್ನಡ ಪದವನ್ನೂ ನಾವು ಬಳಕೆಗೆ ತಂದಿದ್ದರೆ ಚೆನ್ನಾಗಿತ್ತು. ಯಾರೋ ಧೂಮಪಾನಾಸಕ್ತರು ಈ ಶಬ್ದ ಸೃಷ್ಟಿ ಮಾಡಿದ್ದಾರೆ. ಅದು ನಿಂತು ಹೋಗಿದೆ. ಇರಲಿ ಬಿಡಿ. ಸುಶ್ರುತನು ಪಂಚವಿಧ ಧೂಮಪಾನಗಳನ್ನು ವಿವರಿಸಿದ್ದಾನೆ.

**ಧೇನಿಸು** ಧೇನಿಸು ಎಂಬುದು ಧ್ಯಾನ ಶಬ್ದದಿಂದ ಬಂದಿದೆ. ಅದಕ್ಕೆ ಇಸು ಪ್ರತ್ಯಯವನ್ನು ಸೇರಿಸಿ ಈ ಮಾತನ್ನು ರೂಪಿಸಿದ್ದಾರೆ. ಇದಕ್ಕೆ ಧ್ಯಾನ ಮಾಡು ಚಿಂತಿಸು, ಸ್ಮರಿಸು, ನೆನೆ. ಹೀಗೆಯೇ ಧೇನಿಕೆ ಎಂಬ ಶಬ್ದವೂ ಇದೆ. ಜಾನಿಸು ಎಂಬ ಶಬ್ದವೂ ಇದೆ. ಇವುಗಳ ಸಂಬಂಧವನ್ನು ನೆನೆಯಬೇಕು. ಧ್ಯಾನ ಎಂಬ ಶಬ್ದಕ್ಕೆ **ಧೇನ** ಎಂಬ ತದ್ಭವವಿಲ್ಲ. ಆದರೆ **ಜಾನ** ಎಂಬ ತದ್ಭವದ ರೂಪವಿದೆ.

**ಧೋತರ** ಇದು ಹಿಂದೀ ಮರಾಠೀ ಭಾಷೆಗಳಿಂದ ಕನ್ನಡಕ್ಕೆ ಬಂದಿದೆ. ಇದಕ್ಕೆ ಅರ್ಥ ಉಡುವ ಅಥವಾ ಹೊದೆಯುವ ವಸ್ತ್ರ. ಹಿಂದೀ ಭಾಷೆಯಲ್ಲಿ ಧೋತರ ಎಂದರೆ ದಪ್ಪ ಬಟ್ಟೆ. ಕನ್ನಡದ ಧೋತಿ ಎಂಬ ಮತ್ತೊಂದು ಶಬ್ದವಿದೆ. ಅದಕ್ಕೆ ಧೋತರ, ಧೋತ್ರ ಎನ್ನುತ್ತಾರೆ. ಈ ಶಬ್ದವು ಸಂಸ್ಕೃತದ ಧೌತವಸ್ತ್ರ =ಒಗೆದ ಬಟ್ಟೆ ಅಥವಾ ಧೃತವಸ್ತ್ರ =ಧರಿಸಿದ ಬಟ್ಟೆ ಎಂಬ ಶಬ್ದದಿಂದ ಬಂದಿರಬಹುದು ಎಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಧೋತರ, ಧೋತಿ, ಧೋತ್ರ. ಈ ಎಲ್ಲಾ ಶಬ್ದಗಳಿಗೂ ಸಂಸ್ಕೃತವೇ ಮೂಲವಿರಬಹುದು.

**ಧ್ರುವ** ಎಂಬ ರೂಪ ಶುದ್ಧ. ಧೃವ ಎನ್ನುವುದು ಅಶುದ್ಧ. ಧ್ರುವಕ್ಕೆ ಅನೇಕ ಅರ್ಥಗಳಿವೆ. *೧. ಧ್ರುವಕುಮಾರ, ಉತ್ತಾನಪಾದನ ಮತ್ತು ಅವನ ಹಿರಿಯ ಹೆಂಡತಿಯಾದ ಸುನೀತಿಯ ಮಗ. ೨. ಪರಮಾತ್ಮ, ೩. ಮೋಟು ಮರ, ೪. ಆಲದ ಮರ, ೫. ಮೂಗಿನ ತುದಿ.* ಇವಲ್ಲದೆ ಸ್ಥಿರವಾದ, ಅಚಲವಾದ ಶಾಶ್ವತವಾದ ಎಂಬ ಗುಣವಾಚಕದ ಅರ್ಥವುಂಟು. ಧ್ರುವಾ ಎಂದರೆ ಯಾಗಾದಿಗಳಲ್ಲಿ ಉಪಯೋಗಿಸುವ ಒಂದು ಪಾತ್ರೆ. ಧ್ರುವ ನಕ್ಷತ್ರದ ಹೆಸರನ್ನು ಎಲ್ಲರೂ ಕೇಳಿರುತ್ತಾರೆ. ಉತ್ತರ ಧ್ರುವ, ದಕ್ಷಿಣ ಧ್ರುವ ಎಂಬವನ್ನು ಎಲ್ಲ ಶಾಲೆಯ ಮಕ್ಕಳೂ ಅರಿತಿರುತ್ತಾರೆ. ಈ ಶಬ್ದದ ಗುಣವಾಚಕದ ಅರ್ಥವನ್ನು ಗಮನದಲ್ಲಿಟ್ಟು ಅದನ್ನು ಪ್ರಯೋಗಿಸುವುದು ಉತ್ತಮ.

**ಧ್ವನಿಮತ - ಬಹುಮತ - ಸರ್ವಾನುಮತ** ಇಂಗ್ಲೆಂಡಿನ ಪಾರ್ಲಿಮೆಂಟ್ ನಮ್ಮ ಲೋಕಸಭೆ ಮುಂತಾದ ಕಡೆಗಳಲ್ಲಿ ಬಹುಮುಖ್ಯ ಠರಾವುಗಳನ್ನು ಧ್ವನಿಮತಕ್ಕೆ ಹಾಕುತ್ತಾರೆ. ಪರವಾಗಿರುವವರು 'aye' ಎಂದೂ, ವಿರೋಧವಾಗಿರುವವರು 'nay' ಎಂದೂ ಒಟ್ಟಿಗೆ ಕಿರಿಚುತ್ತಾರೆ. ಧ್ವನಿಯು ಹೆಚ್ಚಾದ ಕಡೆಗೆ ತೀರ್ಮಾನವಾಯಿತು ಎಂದರ್ಥ. Aye ಅಥವಾ Ay ಎಂದರೆ Affirmative vote ಎಂದೂ Nay ಗೆ Negative vote ಎಂದೂ ಹೆಸರು. ಸಾಮಾನ್ಯ ಸಭೆಗಳಿಗೆ ಇದು ಅನ್ವಯಿಸುವುದಿಲ್ಲ. ಸಾಮಾನ್ಯ ಸಭೆಗಳಲ್ಲಿ ತೀರ್ಮಾನವಾಗಬೇಕಾದರೆ ಅದಕ್ಕೆ ಬಹುಮತವಿರಬೇಕು. ಅಂದರೆ ಅರ್ಧಕ್ಕಿಂತ ಹೆಚ್ಚು ಜನ ಒಪ್ಪಬೇಕು. ಅಥವಾ ಎಲ್ಲರಿಗೂ ಒಂದೇ ಅಭಿಮತವಿದ್ದರೆ ಸರ್ವಾನುಮತವಾಗಬಹುದು. ಸಭೆಯಲ್ಲಿ ಏನಾಗಿದೆಯೋ ಅದಕ್ಕೆ ಅನುಸಾರವಾಗಿ ವರದಿಯಲ್ಲಿ ಬರೆಯಬೇಕು.

**'ಧ್ವನಿಮಾ'** ಇದು ಯಾವುದಾದರೂ ಒಂದು ಭಾಷೆಯ ಅತ್ಯಂತ ಸಣ್ಣದಾದ ಉಚ್ಚಾರಣೆಯ ಘಟಕ. ನಮ್ಮ ಕನ್ನಡದ ಎಲ್ಲ ಅಕ್ಷರಗಳೂ ಒಂದೊಂದು ಧ್ವನಿಮಾವನ್ನು ಪ್ರತಿನಿಧಿಸುತ್ತವೆ. ಇದು Phoneme ಎಂಬ ಶಬ್ದಕ್ಕೆಂದು ಕನ್ನಡದಲ್ಲಿ ಮಾಡಿಕೊಂಡಿರುವ ರೂಪ.

**ಧ್ಯಾನ** ಧ್ಯೈ ಧಾತುವಿಗೆ ಸಂಸ್ಕೃತದಲ್ಲಿ ಚಿಂತನೆ ಮಾಡು ಎಂದರ್ಥ. **ಧ್ಯೈ ಚಿಂತಾಯಾಂ** ಎಂದು ಅರ್ಥ ವಿವರಣೆ. ಮನಸ್ಸಿನಲ್ಲಿ ಆಲೋಚಿಸುವುದು. ಚಿತ್ತದ ಏಕಾಗ್ರತೆಯನ್ನು ತಿಳಿಸುವ ಶಬ್ದ.

# ನ

**'ನ್' 'ೞ'** 'ನ್' ಎಂಬ ಅರ್ಧಾಕ್ಷರದ ಬದಲು 'ೞ' ಎಂಬಂಥ ಒಂದು ಮೊಳೆಯನ್ನು ಉಪಯೋಗಿಸಿ ಮುದ್ರಣ ಮಾಡುತ್ತಿದ್ದರು, ಹಿಂದೆ. ಈಗ ಈ ಟೈಪು ಏಕೆ ಕಾಣುತ್ತಿಲ್ಲ?

ಇದು ವರ್ಣಮಾಲೆಯ ಅಕ್ಷರವಲ್ಲ. ಮುದ್ರಣಕ್ಕಾಗಿ ಅಕ್ಷರಗಳ ಸೌಂದರ್ಯವನ್ನು ಸಾಧಿಸಲು ಬೇರೆ ಬೇರೆ ಟೈಪುಗಳ ತಯಾರಕರು ಬೇರೆ ಬೇರೆ ರೇಖಾಚಿತ್ರಗಾರರ ಸಹಾಯದಿಂದ ಟೈಪುಗಳನ್ನು ತಯಾರಿಸುತ್ತಾರೆ. ಇದು ಈಗಲೂ ಮುಂದುವರಿಯುತ್ತಿರುವ ಪದ್ಧತಿ. ಹಿಂದೆ ಜನಪ್ರಿಯವಾಗಿದ್ದ ಮಾದರಿ ಈಗ ಇಲ್ಲ, ಅಷ್ಟೇ! ಮುದ್ರಣಾಕ್ಷರಗಳು ಆಗಾಗ ಬದಲಾಗುತ್ತಿರುವುದರಿಂದ ಕೆಲವು ಸಮಸ್ಯೆಗಳು ನಮ್ಮನ್ನು ಎದುರಿಸುತ್ತಿವೆ. **'ಶಿಕ್ಷಣದಲ್ಲಿ ಮುದ್ರಣಾಕ್ಷರದ ಪ್ರಭಾವ'** ಎಂದು ಒಂದು ವಿಚಾರ ಸಂಕಿರಣವನ್ನು ಏರ್ಪಡಿಸಿ ಈ ವಿಷಯವನ್ನು ಚರ್ಚಿಸುವುದು ಒಳ್ಳೆಯದು.

**ನಂತರ - ಅನಂತರ** 'ನ +ಅಂತರ = ಅನಂತರ' ಎಂಬುದು ಶುದ್ಧವಾದ ರೂಪ. ನಂತರ ಎಂಬುದು ಅನಂತರ ಎಂಬುದರ ತಪ್ಪು ಪ್ರಯೋಗ. ಆದರೂ ಬಹುವಾಗಿ ಪ್ರಚಾರಕ್ಕೆ ಬಂದಿದೆ. ತದನಂತರ ಎಂಬುದು ತತ್ + ಅನಂತರ ಎಂಬ ಎರಡು ಶಬ್ದಗಳು ಸೇರಿ ಆಗಿರುವ ರೂಪ. ಇದಕ್ಕೆ ಅದಾದ ಮೇಲೆ ಎಂದರ್ಥ. ಆನಂತರ ಎಂಬ ಒಂದು ತಪ್ಪು ಶಬ್ದವೂ ಪ್ರಚಾರಕ್ಕೆ ಬರುತ್ತಿದೆ. **ಅದಾದ ಮೇಲೆ** ಎಂಬುದಕ್ಕೆ ಜನರು ಮಾಡಿಕೊಂಡಿರುವ ತಪ್ಪು ಪ್ರಯೋಗ. ಇದೂ ಉಳಿದುಬಿಡುತ್ತದೆ.

**ನಂಬಿಕೆ - ನಂಬುಗೆ** ಈ ಎರಡೂ ಶಬ್ದಗಳಿಗೂ ಮೂಲ ನಂಬು ಎಂಬ ಧಾತು. ಕನ್ನಡದ ಶಬ್ದ ಅದು. ಈ ಧಾತುವಿಗೆ ಬೇರೆ ಬೇರೆ ಪ್ರತ್ಯಯಗಳು ಸೇರಿ ಈ ರೂಪಗಳಾಗಿವೆ. ನಂಬು

+ ಇಕೆ = ನಂಬಿಕೆ, ನಂಬು +ಗೆ = ನಂಬುಗೆ. ಎರಡೂ ಸರಿ. ಅಷ್ಟೇ ಅಲ್ಲ. ಇಗೆ ಎಂಬ ಮತ್ತೊಂದು ಪ್ರತ್ಯಯವಿದೆ. ನಂಬು + ಇಗೆ = ನಂಬಿಗೆ. ಈ ರೂಪವೂ ಸರಿ.

**ನಖಶಿಖಾಂತ ಕೋಪ** ನಖಶಿಖಾಂತ ಕೋಪ ಎಂಬುದು ಸಂಸ್ಕೃತದ ಸರಿಯಾದ ರೂಪ. ನಖ ಎಂದರೆ ಕಾಲಿನ ಉಗುರು. ಶಿಖಾ ಎಂದರೆ ತಲೆಯ ಜುಟ್ಟು. ನಖಶಿಖಾಂತ ಎಂದರೆ ಕಾಲಿನಿಂದ ಹಿಡಿದು ಜುಟ್ಟಿನವರೆಗೆ. ಹಾಗೆ ದೇಹದಲ್ಲೆಲ್ಲ ತುಂಬಿಕೊಂಡಿರುವ ಕೋಪ, ನಖ ಶಿಖಾಂತ ಕೋಪ. ಅಂಥವರ ಎದುರಿಗೆ ಸ್ವಲ್ಪ ಶಾಂತವಾಗಿರಬೇಕು.

**ನಗಣ್ಯ** ಗಣ್ಯ ಎಂಬುದು ಸಂಸ್ಕೃತದ ಶಬ್ದ. ಗಣನೆಗೆ ಬರುವ ವ್ಯಕ್ತಿ ಅಥವಾ ವಸ್ತು ಎಂದರ್ಥ. ಇದಕ್ಕೆ ನಿಷೇಧಾರ್ಥದಲ್ಲಿ ನ ಎಂಬುದು ಹಿಂದೆ ಸೇರಿದರೆ ಗಣನೆಗೆ ಬರದ, ಲೆಕ್ಕಕ್ಕೆ ಬಾರದ, ಯೋಗ್ಯತೆ ಇಲ್ಲದ, ಅಯೋಗ್ಯವಾದ ಎಂದು ಅರ್ಥ ಬರುತ್ತದೆ.

**ನಗಾಡು** ಚೆನ್ನಾದ ಶಬ್ದವೇ. ನಗು + ಆಡು = ನಗಾಡು. ನಗುವಂತೆ ಆಡುವುದು. ಮಾತನಾಡುವುದು. ವಿನೋದವಾಗಿ ಹಾಸ್ಯ ಮಾಡಿಕೊಂಡಿರುವುದು. ನಗೆ +ಆಡು ಆದರೆ ನಗೆಯಾಡು ಎಂದಾಗುತ್ತದೆ. ನಗೆಯಾಡು ಹೆಚ್ಚು ಪ್ರಯೋಗದಲ್ಲಿಲ್ಲ. ನಗಾಡು ತುಂಬ ಜನಪ್ರಿಯವಾದ ಶಬ್ದ.

**ನಜರು** ಎಂಬುದು ಅರಬ್ಬಿ ಪದ. ಅದಕ್ಕೆ ಅರಬ್ಬಿಯಲ್ಲಿ ನಝುರ್ ಎಂಬ ರೂಪವಿದೆ. ಹಿರಿಯರಿಗೆ ಕಿರಿಯರು ನೀಡುವ ಕಾಣಿಕೆಗೆ ಈ ಹೆಸರಿದೆ. ದೊಡ್ಡ ಅಧಿಕಾರಿಗಳನ್ನು ಕಾಣಲು ಹೋಗುವಾಗ ನೀಡುವ ಕಾಣಿಕೆ.

**ನಡಾವಳಿ** ಇದು ಮೂಲದಲ್ಲಿ ನಡೆವಳಿ ಎಂದಿದ್ದಿತು. ನಡೆ + ವಳಿ = ನಡೆವಳಿ. ಇದಕ್ಕೆ ನಡೆಯುವಿಕೆ, ನಡಿಗೆ, ವ್ಯವಹಾರ, ಸಂಪ್ರದಾಯ, ಪದ್ಧತಿ ಎಂಬರ್ಥಗಳಿವೆ. ಕೆಲವು ಕ್ಷೇತ್ರಗಳಲ್ಲಿ ನಡೆಯುವ ಉತ್ಸವಗಳಿಗೂ ಈ ಹೆಸರನ್ನು ಸಲ್ಲಿಸುತ್ತಾರೆ. ಈ ಶಬ್ದಕ್ಕೆ ನಡವಣಿ, ನಡವಳಿ ಎಂಬ ಇತರ ಪರ್ಯಾಯ ಶಬ್ದಗಳೂ ಉಂಟು.

**ನಡುಮಧ್ಯೆ - ನಡೂಮಧ್ಯೆ** ನಡುವೆ, ಮಧ್ಯೆ ಎಂಬ ಎರಡು ಶಬ್ದಗಳಿಗೂ ಒಂದೇ ಅರ್ಥ. ಅವೆರಡನ್ನೂ ಸೇರಿಸಿದರೆ ದ್ವಿರುಕ್ತಿಯಾಗುತ್ತದೆ. ಆದರೆ ನಡುವೆ +ನಡುವೆ = ನಡುನಡುವೆ ಎಂಬಂತೆ. ಈ ಶಬ್ದದಲ್ಲಿ ಒಂದು ಸಂಸ್ಕೃತ ಮತ್ತೊಂದು ಕನ್ನಡ. ಆದುದರಿಂದ ಅಷ್ಟು ಚೆನ್ನಾಗಿ ಹೊಂದಿಕೊಂಡಂತೆ ಕಾಣುವುದಿಲ್ಲ. ಮಾತಿನಲ್ಲಿ ಅದು ನಡೂ ಮಧ್ಯೆ ಎಂಬ ರೂಪವನ್ನೇ ಪಡೆಯುತ್ತದೆ. ನಿಜವಾಗಿ ನಟ್ಟನಡುವೆ ಎಂಬುದೇ ದ್ವಿರುಕ್ತಿ. ಆದರೆ ಜನಬಳಕೆಯ ಗೌರವ ನಡೂಮಧ್ಯೆಗೆ ಇದೆ. ಈ ಎರಡಕ್ಕೂ ವ್ಯಾಕರಣದ ಒಪ್ಪಿಗೆ ಇಲ್ಲ. ಆದರೆ ಜನಪ್ರಯೋಗ ಗೌರವವಿದೆ.

**ನಡೆ - ನುಡಿ; ಆಚಾರ - ವಿಚಾರ, ರೀತಿ - ನೀತಿ** ಈ ಮೂರು ಜೊತೆ ಶಬ್ದಗಳೂ ಪರಸ್ಪರ ಪೂರಕವಾದ ಶಬ್ದಗಳ ಜೊತೆಯಾಗಿವೆ. ನಡತೆ ಚೆನ್ನಾಗಿದ್ದ ಕಡೆ, ನುಡಿ ಅಂದರೆ ಮಾತು ಚೆನ್ನಾಗಿರಬೇಕು. ಅದು ಸೊಗಸು. ಹಾಗೆಯೇ ಆಚಾರ ಎಂದರೆ ನಡವಳಿಕೆ, ವಿಚಾರ ಎಂದರೆ ಆಲೋಚನೆ; ಅವೂ ಪೂರಕವಾಗಿರಬೇಕು. ರೀತಿ ಎಂದರೆ ಕ್ರಮ. ನೀತಿ ಎಂದರೆ ಜೀವನ ತತ್ವ ವ್ಯವಹಾರದ ಬಗ್ಗೆ ಮತ್ತು ನಂಬಿರುವ ತತ್ವಗಳ ಸತ್ಯ ಒಂದೇ ಬಗೆಯಾಗಿರಬೇಕು. ಆಗ ಮಾತ್ರ ಬಾಳು ನಿಜವಾದ ಬಾಳು. ಈ ಮೂರು ತುಂಬ ಪ್ರಭಾವಯುತವಾದ ಜನಪ್ರಿಯತೆಯನ್ನು ಪಡೆದ ಜೋಡುನುಡಿಗಳು.

**ನದರ್ದ್** ಇದು ಪಾರಸೀ ಭಾಷೆಯ ದರ್ದ್ ಎಂಬ ಶಬ್ದಕ್ಕೆ ನ ಎಂಬ ನಿಷೇಧ ಪ್ರತ್ಯಯವನ್ನು ಸೇರಿಸಿರುವ ಶಬ್ದ. ದರ್ದ್ ಎಂದರೆ ಅಗತ್ಯ. ಆವಶ್ಯಕತೆ. ನದರ್ದ್ ಅಗತ್ಯವಿಲ್ಲದಿರುವಿಕೆ. ನಾದರ್ದ್ ಎಂದೂ ಇರಬಹುದು. ನಾಪಾಸು, ನಪಾಸ, ನಾದುರಸ್ತಿ ಮುಂತಾದ ಶಬ್ದಗಳಂತೆ.

**ನನ್ನೂರು** - ನಾನೂರು ಈ ಶಬ್ದಗಳ ಮೂಲ ನಾಲ್ಕು +ನೂರು =ನಾಲ್ಕುನೂರು. ನಾಲ್ಕು ನೂರು>ನಾಲ್ನೂರು>ನಾನೂರು>ನನ್ನೂರು ಆಗಿದೆ. ನಾನೂರು ಹೆಚ್ಚು ಪ್ರಚಾರದಲ್ಲಿರುವ ಶಬ್ದ. ಇದಕ್ಕೆ ಸಮಾನವಾಗಿರುವ ನಾಲ್ಕು +ಪತ್ತು =ನಾಲ್ವತ್ತು ಶಬ್ದವನ್ನು ನೋಡಿ. ಅದು ಹೇಗೆ ಬದಲಾವಣೆ ಹೊಂದಿದೆ. ನಾಲ್ವತ್ತು = ನಲವತ್ತು. ಸಮಾಜದಲ್ಲಿ ವ್ಯವಹಾರವು ಸಮರಸದಿಂದ ನಡೆಯುಬೇಕಾದರೆ ಯಾವುದು ಹೆಚ್ಚು ಪ್ರಚಾರದಲ್ಲಿದೆಯೋ ಆ ಶಬ್ದರೂಪವನ್ನು ಉಪಯೋಗಿಸುವುದು ಒಳ್ಳೆಯದು.

**ನಪಾಸು** ಇಂಗ್ಲಿಷಿನ Pass ಶಬ್ದಕ್ಕೆ ನಿಷೇಧಾರ್ಥಕ ಪ್ರತ್ಯಯ ನ ಎಂಬುದನ್ನು ಸೇರಿಸಿ ಮಾಡಿರುವ ಹೊಸ ತಳಿಯ ಶಬ್ದ ಪ್ರಯೋಗದಲ್ಲಿದೆ. ಕಾರಣ ಏನೆಂದರೆ ಪರೀಕ್ಷೆಗೆ ಕೂಡುವವರಲ್ಲಿ ಅಂಥವರದೇ ಹೆಚ್ಚು ಸಂಖ್ಯೆ. ಬಹು ಜನಪ್ರಿಯವಾದ ಶಬ್ದ.

**ನಮಸ್ಕಾರ ಇದನ್ನು ಉಪಯೋಗಿಸುವುದು ಯಾವಾಗ?** ಹಿರಿಯರನ್ನೂ ಸಮಾನ ವಯಸ್ಕರನ್ನೂ ಗೆಳೆಯರನ್ನೂ ಕಂಡಾಗ ನಮಸ್ಕಾರ. ಇದು ಪೂರ್ವಭಾಷಿತವಾಗಿದ್ದರೆ ಚೆನ್ನು. ಪೂರ್ವಭಾಷಿತ ಎಂದರೆ 'ಅವರೇ ಮೊದಲು ಮಾತನಾಡಲಿ' ಎಂದು ಕಾದು ಮಾತನಾಡುವುದಲ್ಲ. ಅವರು ಮಾತನಾಡಿಸಲಿ ಬಿಡಲಿ ತಾನೇ ಮೊದಲು ಮಾತನಾಡಿಸುವುದು ಸುಸಂಸ್ಕೃತನ ಲಕ್ಷಣ. ಇದರ ವಿಚಾರವು ರಾಮಾಯಣದಲ್ಲಿ ಚೆನ್ನಾಗಿ ನಿರೂಪಿತವಾಗಿದೆ.

**ನಮೂನೆ** ಒಂದು ಕ್ರಮ, ರೀತಿ, ವಿಧ ಎಂದು ಇದರ ಅರ್ಥ. ಇದು ಪಾರಸೀ ಭಾಷೆಯ ಶಬ್ದ. ಹಿಂದೀ ಮರಾಠಿ, ಭಾಷೆಗಳಲ್ಲಿಯೂ ಉಪಯೋಗವಾಗುತ್ತ ಇದೆ. ಕೇವಲ ನಮೂನೆ ಪದಕ್ಕೆ form ಎಂಬ ಅರ್ಥ ಬರುವಂತೆ ಉಪಯೋಗಿಸುವುದು ತಪ್ಪು. ಅರ್ಜಿಯ ನಮೂನೆ ಎಂದು ಉಪಯೋಗಿಸಬೇಕು. ಆಗ Application Form ಗೆ ಸರಿಹೋಗುತ್ತದೆ.

**ನಯನ, ನಮನ, ನವೀನ** ಮುಂತಾದ ಶಬ್ದಗಳನ್ನು ಇಂಗ್ಲಿಷಿನಲ್ಲೂ ಕನ್ನಡದಲ್ಲೂ ಏನೆಂದು ಕರೆಯುಬಹುದು? ಒಂದು ಶಬ್ದವನ್ನು ಅಥವಾ ಅನೇಕ ಶಬ್ದಗಳನ್ನು ಹಿಂದಿನಿಂದ ಮುಂದಕ್ಕೆ ಓದಿದರೂ ಮುಂದಿನಿಂದ ಹಿಂದಕ್ಕೆ ಓದಿದರೂ ಒಂದೇ ಬಗೆಯಾಗಿ ಶಬ್ದ ಅಥವಾ ವಾಕ್ಯವಾಗಿರುತ್ತದೆ. ಇದಕ್ಕೆ ಇಂಗ್ಲಿಷಿನಲ್ಲಿ Palindrome ಎಂದು ಕರೆಯುತ್ತಾರೆ. ಉದಾಹರಣೆ; Otto, Anna ಎಂಬ ಶಬ್ದಗಳು. ಇಂಗ್ಲಿಷಿನವರು ಒಂದು ಸಾಮಾನ್ಯ ವಾಕ್ಯವನ್ನೂ ಉದಾಹರಿಸುತ್ತಾರೆ. Able was I ere I saw Elba. –Anagram ಎಂಬ ಇನ್ನೊಂದು ಚಮತ್ಕಾರದ ಶಬ್ದವೂ ಇದೆ. ಒಂದು ಶಬ್ದದ ಅಕ್ಷರಗಳನ್ನೇ ಉಪಯೋಗಿಸಿ ಮತ್ತೊಂದು ಶಬ್ದವನ್ನು ರಚಿಸುವುದು. ಉದಾ: Late-tale ಇತ್ಯಾದಿ. ಕನ್ನಡದಲ್ಲಿ ಇಂಥ ಶಬ್ದಗಳನ್ನು ಗತಪ್ರತ್ಯಾಗತ ಶಬ್ದಗಳೆಂದು ಕರೆಯಬಹುದು. ನಯನ, ನಮನ, ನವೀನ ಇವೆಲ್ಲ ಸಂಸ್ಕೃತ ಶಬ್ದಗಳು. ಕಿಟಕಿ, ಚಮಚ, ವಿಕಟಕವಿ, ಕುಬೇರನಿಗೇನಿರಬೇಕು, ಗಂಗಾಂಗ, ಗದಗ ಇತ್ಯಾದಿ ಕನ್ನಡ ಶಬ್ದಗಳು. ಇಂತಹ ಶಬ್ದಗಳನ್ನು ಹಿಂದೆ ಎಲ್ಲ ಬಾಲಕರಿಗೂ ಹೇಳಿಕೊಡುತ್ತಿದ್ದರು.

**ನಯನಕರ್ಣಾಹಾರವಾಹನನಯನ** ಎಂದರೇನು? ಇಂಥ ಸಮಾಸ ಶಬ್ದಗಳು ಅಪೂರ್ವವಾದವುಗಳು. ಕವಿಗಳು ತಮ್ಮ ಶಬ್ದಪ್ರಯೋಗ ಕಲಾಚಾತುರ್ಯವನ್ನು ಪ್ರದರ್ಶಿಸಲು ಇಂಥ ಸವಲತ್ತುಗಳನ್ನು ಹೊಸೆಯುತ್ತಾರೆ. ಇದರಲ್ಲಿ ಕಾವ್ಯ ಸ್ವಾರಸ್ಯವಿಲ್ಲದಿದ್ದರೂ ಶಬ್ದದ ರಚನೆಯಲ್ಲಿ ಜಾಣತನವಿದೆ. ನಯನಕರ್ಣ ಎಂಬುದು ಮೊದಲ ಸಮಾಸ. ಅದಕ್ಕೆ ಯಾರಿಗೆ ಕಣ್ಣೇ ಕಿವಿಯೋ ಅಂಥದು ಎಂದರ್ಥ. ಅಂದರೆ ಹಾವು; ಹಾವಿಗೆ ಅದರ ಕಣ್ಣೇ ಕಿವಿಯ ಕೆಲಸವನ್ನು ಮಾಡುತ್ತದೆ. ಬೇರೆ ಕಿವಿಯಿಲ್ಲ ಎಂದು ನಂಬಿಕೆ. ಆಮೇಲೆ ಸಮಾಸ ರಚನೆ ಮುಂದುವರಿಯುತ್ತದೆ - ನಯನ ಕರ್ಣಾಹಾರ ಅಂದರೆ ಹಾವನ್ನೇ ಆಹಾರವಾಗಿವುಳ್ಳುದು

= ಗರುಡ. ಮುಂದಿನ ಸಮಾಸ ನಯನ ಕರ್ಣಾಹಾರವಾಹನ ಅಂಥ ಗರುಡನನ್ನೇ ವಾಹನವನ್ನಾಗಿ ಉಳ್ಳವನು = ವಿಷ್ಣು. ಸಮಾಸ ಮತ್ತೆ ಮುಂದುವರಿಯುತ್ತದೆ. ನಯನ ಕರ್ಣಾಹಾರವಾಹನ ನಯನ = ವಿಷ್ಣುವಿನ ಕಣ್ಣುಗಳನ್ನು ಕಾಲಿನಲ್ಲಿ ಅರ್ಪಿಸಿಕೊಂಡವನು = ಶಿವ. ಹೀಗೆ ಕವಿಗಳು ಓದುಗರನ್ನು ತಮ್ಮ ಶಬ್ದ ಚಮತ್ಕಾರದಿಂದ ಭ್ರಮೆಪಡಿಸುತ್ತಾರೆ. ಬಸವಪುರಾಣದಲ್ಲಿ (೨೦-೩೭) ರಲ್ಲಿ ಈ ಶಬ್ದವು ಪ್ರಯೋಗವಾಗಿದೆ. ಒಟ್ಟು ಪದ್ಯವೂ ಚೆನ್ನಾಗಿದೆ.

**ನರಮೇಧ** ಇದು ಸಂಸ್ಕೃತದ ಶಬ್ದ. ಇದಕ್ಕೆ ಮನುಷ್ಯರನ್ನು ಬಲಿ ಕೊಡುವ ಯಜ್ಞ ಎಂದರ್ಥ. ಯಾವ ಕಾರಣವೂ ಇಲ್ಲದೆ ಮನುಷ್ಯರನ್ನು ಕೊಲ್ಲುವ ಕೆಲಸಕ್ಕೆ ನರಮೇಧ ಎನ್ನುತ್ತಾರೆ. ಪ್ರಪಂಚದ ಅನೇಕ ಕಡೆ ಇದು ಆಗುತ್ತಿದೆ ಈಗ.

**ನರವಲು** ಇದಕ್ಕೆ ನರವುಲಿ, ನರಹುಲಿ, ನರುಲಿ, ನರುಳ್ಳೆ, ನರೂಲಿ ಎಂಬ ವಿವಿಧ ರೂಪಗಳಿವೆ. ಇದು ಚರ್ಮದ ಮೇಲೆ ಏಳುವ ಗಂಟು. ಇದು ಕನ್ನಡದ ಶಬ್ದ. ಇಂಗ್ಲಿಷಿನ Wart ಎಂಬ ಶಬ್ದಕ್ಕೆ ಸಮನಾದುದು.

**ನರಸಿಂಹ - ನಾರಸಿಂಹ** ನರಸಿಂಹ ಎಂದರೆ ತಲೆಯು ಸಿಂಹದ್ದಾಗಿ ದೇಹವು ಮಾನವನದಾಗಿರುವಂತೆ ತೋರುವ ಮಹಾವಿಷ್ಣುವಿನ ಒಂದು ಅವತಾರ. ಹಿರಣ್ಯ ಕಶಿಪು ಎಂಬ ರಾಕ್ಷಸನನ್ನು ಕೊಂದು ಪ್ರಹ್ಲಾದನನ್ನು ರಕ್ಷಿಸಿದ ಅವತಾರ. ನಾರಸಿಂಹ ಎಂದರೆ ನರಸಿಂಹ ಪುರಾಣ. ನರಸಿಂಹನಿಗೆ ಸಂಬಂಧಿಸಿದುದು. ಈ ಪುರಾಣದಲ್ಲಿ ೧೮ ಸಾವಿರ ಶ್ಲೋಕಗಳಿವೆಯೆಂದು ಹೇಳುತ್ತಾರೆ. ನಾರಸಿಂಹಾವತಾರ ಎಂದರೆ ನರಸಿಂಹನ ರೂಪಕ್ಕೆ ಸಂಬಂಧಿಸಿದ ಅವತಾರ. ನರಸಿಂಗ ಎಂಬುದು ನರಸಿಂಹದ ತದ್ಭವ.

**ನವನೀತ** ನವ + ನೀತ = ಹೊಸದಾಗಿ ಕಡೆದು ತೆಗೆದುದು, ಬೆಣ್ಣೆ. ಆಗತಾನೇ ಕಡೆದು ತೆಗೆದ ಬೆಣ್ಣೆಗೆ ಸಂಸ್ಕೃತದಲ್ಲಿ ನವನೀತ ಎಂದು ಹೆಸರು. ಲಕ್ಷ್ಮೀಶನ ಜೈಮಿನಿಭಾರತದಲ್ಲಿ ಮೊದಲ ಸಂಧಿಯ ಏಳನೇ ಪದ್ಯದಲ್ಲಿ ಬರುವ ಭಾಗವನ್ನು ನೋಡಿ. **ಕೆನೆವಾಲ ಕಡೆದು ನವನೀತಮಂ ತೆಗೆದು ಬಾಯ್ಗಿನಿದಾಗಿ ಸವಿಯದೆ** — ಈ ವಾಕ್ಯಭಾಗದಲ್ಲಿ ನವನೀತವನ್ನು ತೆಗೆದ ವಿವರಣೆಯಿದೆ. ಹೆಪ್ಪು ಹಾಕಿದ, ಹೆಪ್ಪು ಹಾಕದಿರುವ ಭೇದದ ಪ್ರಶ್ನೆ ನವನೀತವೆಂಬ ಶಬ್ದದಲ್ಲಿ ಇಲ್ಲ. ಆಗ ತಾನೇ ಕಡೆಯುವುದರಿಂದ ಹೊರಬಂದ ಬೆಣ್ಣೆಗೆ ನವನೀತ ಎಂಬ ಹೆಸರು ಇದೆ. ನವನೀತಜ ಎಂದರೆ ತುಪ್ಪ. ನವನೀತಮಯ ಎಂದರೆ ಬೆಣ್ಣೆಯಿಂದ ತುಂಬಿದ, ನವನೀತ ಸಮ ಎಂದರೆ ಮಧುರವಾದ. ಈ ಮಾತನ್ನು ಇಂಪಾದ ಧ್ವನಿಗೆ ಹೋಲಿಸುತ್ತಾರೆ. ಬೆಣ್ಣೆ ಎಂಬುದು ಕನ್ನಡ ಶಬ್ದ. ನೆಯ್ ಎಂದರೆ ಜಿಡ್ಡು. ಬೆಳ್ + ನೆಯ್ = ಬೆಣ್ಣೆ. ಎಳ್ + ನೆಯ್ = ಎಣ್ಣೆ. ಈ ಶಬ್ದದಲ್ಲಿ ಹೊಸದಾಗಿ ತೆಗೆದ ಮುಂತಾದ ಅರ್ಥ ತುಂಬಿಕೊಂಡಿಲ್ಲ. ಅದನ್ನು ಸೇರಿಸಬೇಕು.

**ನವರಿಗೆ, ರವರಿಗೆ, ಅವರಿಗೆ** ರಾಮಯ್ಯನವರು ಎಂಬಲ್ಲಿ ರಾಮಯ್ಯನು ಎಂಬ ಏಕವಚನದ ಪ್ರಥಮಾ ವಿಭಕ್ತಿಯ ಮೇಲೆ ಅವರಿಗೆ ಎಂಬ ಚತುರ್ಥೀ ವಿಭಕ್ತಿಯ ಗೆ ಸೇರಿದೆ. ಮಧ್ಯೆ ಇರುವ ಅವರು ಬಹುವಚನದ ಸೂಚಕ. ಇದು ಗೌರವಕ್ಕಾಗಿ ಇರುವ ಬಹುವಚನ. ರಾಮಯ್ಯನವರಿಗೆ ಸರಿ. ಹಾಗೆಯೇ ರಾಮಯ್ಯ ಅವರಿಗೆ - ಅದೂ ಸರಿ. ಪ್ರಥಮಾ ವಿಭಕ್ತಿಯ ಪ್ರತ್ಯಯವನ್ನು ಬಿಟ್ಟಿದೆ. ಆದರೆ ರಾಮಯ್ಯರವರಿಗೆ ತಪ್ಪು. ಹಾಗೆ ಬರೆದರೆ ರಾಮಯ್ಯರ್ + ಅವರಿಗೆ ಎಂಬಂತೆ ಅರ್ಥವಾಗಿ ಅವರ ಹೆಸರೇ ರಾಮಯ್ಯರ್ ಆಗಿಬಿಡುತ್ತದೆ. ಹೀಗೆಯೇ ರವರ ಎಂಬ ಬಹುವಚನ ಪ್ರತ್ಯಯವನ್ನು ಸೇರಿಸುವುದೂ ತಪ್ಪು. ಆದರೆ ಈ ತಪ್ಪು ಎಷ್ಟು ವ್ಯಾಪಕವಾಗಿ ನೆರವೇರುತ್ತಿದೆ ಎಂದರೆ ಇನ್ನು ಕೆಲವು

ಕಾಲವಾದ ಮೇಲೆ ಕನ್ನಡದಲ್ಲಿ ಗೌರವ ಸೂಚಕ ಬಹುವಚನಕ್ಕೆ ರವರು ಪ್ರತ್ಯಯವನ್ನು ವ್ಯಾಕರಣದಲ್ಲಿ ಸೇರಿಸಬೇಕಾಗಬಹುದು. ಇದನ್ನು ಉಪಾಧ್ಯಾಯರವರು ನೆನಪಿಡಬೇಕು.

ನವಾರ ಇದು ಪಾರಸೀ ಭಾಷೆಯ ನವಾರ್ ಶಬ್ದದ ಕನ್ನಡ ರೂಪ. ಇದಕ್ಕೆ ಒರಟಾದ ಅಗಲವಾದ ಹಗ್ಗದ ಮಂಚಗಳಿಗೆ ಉಪಯೋಗಿಸುವ ಲಾಡಿ, tapeಎಂದು ಅರ್ಥ. ಶಬ್ದದ ಪ್ರಯೋಗ ಕನ್ನಡದಲ್ಲಿ ಅಪೂರ್ವ.

ನವಿರು ಕನ್ನಡದಲ್ಲಿ ನವಿರು, ನವುರು ಎಂಬ ಎರಡು ಪರ್ಯಾಯ ರೂಪಗಳಿವೆ. ಇವುಗಳ ವಿವರಣೆ ಹೀಗಿದೆ. ನವಿರ್, ನವಿರು ಎಂಬುದು ಒಂದು ಶಬ್ದ. ಅದಕ್ಕೆ ಕೂದಲು ಎಂದೇ ಅರ್ಥ. ನವುರು ಎಂಬ ಪರ್ಯಾಯ ರೂಪವುಳ್ಳ ನವಿರು ಎಂಬ ಇನ್ನೊಂದು ಶಬ್ದವಿದೆ. ಇದಕ್ಕೆ ತೆಲುಗಿನಲ್ಲಿ ನವರ್, ನೌರು ಎಂಬ ಜ್ಞಾತಿ ಶಬ್ದಗಳಿವೆ. ಕನ್ನಡದ ಅನೇಕ ಹಿರಿಯ ಲೇಖಕರು ನವಿರು ಎಂಬುದಕ್ಕೆ ೧. ಮೃದುವಾದುದು ೨. ತೆಳುವಾದುದು ೩. ಸುಕುಮಾರತೆ ಎಂದು ಗುಣವಾಚಕದಲ್ಲಿ ಮೃದುವಾದ, ನುಣುಪಾದ, ತೆಳುವಾದ ಎಂದೂ ಅರ್ಥಗಳಿವೆ ಎಂಬುದನ್ನು ತಮ್ಮ ಪ್ರಯೋಗಗಳಲ್ಲಿ ತೋರಿಸಿದ್ದಾರೆ.

ಕನ್ನಡದ ಪ್ರಾಧ್ಯಾಪಕರೂ ಮಹಾ ವಿದ್ವಾಂಸರೂ ಆಗಿದ್ದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ವಚನಭಾರತದಲ್ಲಿ **'ತರತರವಾದವೂ ನವಿರು ನವಿರಾದವೂ ಆದ ಆ ಬಟ್ಟೆಗಳನ್ನು ನೋಡಿ ಉತ್ತರೆಗೆ ತುಂಬ ಹರ್ಷವಾಯಿತು.'** ಎಂದೂ, ಭಾರತೀಸುತ ಎಂಬ ಕತೆಗಾರರು **'ನವಿರಾದ ಪಟ್ಟೆ ಅರಿವೆಯನ್ನು ಕೂಸಿಗೆ ಹೊದೆಸಿದಳು'** ಎಂದೂ ಬರೆದಿದ್ದಾರೆ. ಪಟ್ಟೆ ಎಂದರೆ ರೇಷ್ಮೆ ನವಿರು ಮೆಯ್ ಎಂದರೆ ತೆಳುವಾದ ದೇಹ. ಉದಾ: **'ಅವನ ಕಣ್ಣು ನವಿರು ಮೆಯ್ಯ ಮಹಿಳೆಯನ್ನೇ ಹಿಂಬಾಲಿಸುತ್ತಿದ್ದುವು'** ಎಂಬ ಪ್ರಯೋಗವಿದೆ. ನವಿರು ಹಾಸ್ಯ ಎಂದರೆ ಮೃದುವಾದ ಹಾಸ್ಯ. ಸೂಕ್ಷ್ಮವಾದ ಹಾಸ್ಯ. ಅದೇ ಕೃಷ್ಣಶಾಸ್ತ್ರಿಗಳು ತಮ್ಮ 'ಬಂಕಿಮ ಚಂದ್ರ' ಎಂಬ ಗ್ರಂಥದಲ್ಲಿ **'ಇಂಗ್ಲಿಷ್ ಸಾಹಿತ್ಯದ ನವಿರು ಹಾಸ್ಯವನ್ನು ತನ್ನ ಕಾದಂಬರಿಗಳಲ್ಲಿಯೂ ಪ್ರಬಂಧಗಳಲ್ಲಿಯೂ ತರಲು ಪ್ರಯತ್ನಪಟ್ಟನು'** ಎಂದು ಬರೆದಿದ್ದಾರೆ. ಪು. ತಿ. ನರಸಿಂಹಾಚಾರ್ಯರು 'ರಾಮಾಚಾರಿಯ ನೆನಪು' ಎಂಬ ಗ್ರಂಥದಲ್ಲಿ ನವಿರೆಳೆ ಎಂಬ ಶಬ್ದವನ್ನು ಉಪಯೋಗಿಸಿದ್ದಾರೆ. **'ಕತ್ತಿಗೆ ನವಿರೆಳೆಯ ಚಿನ್ನದ ಸರವೊಂದು'** ಎಂದಿದ್ದಾರೆ. ಬೇಂದ್ರೆಯವರು **'ನವಿರುಗಣ್ಣು'** ಎಂದರೆ **ಕೋಮಲವಾದ ದೃಷ್ಟಿ ಎಂಬರ್ಥದಲ್ಲಿ 'ನವಿರುಗಣ್ಣಿನಲಿ ನವಿಲು ಬಣ್ಣದಲಿ ಹೆಣ್ಣಿನ ನಯ ತಲೆದೂಗಲಿ'** ಎಂಬ ಸಾಲನ್ನೂ ರಚಿಸಿದ್ದಾರೆ. ಹೆಚ್ಚೇಕೆ, ತೀರ್ಮಾನ ನೀಡುವ ಒಂದು ಕವನವನ್ನು ನಿಮ್ಮ ಮುಂದೆ ಇಡುತ್ತೇನೆ. ಓದಿ ನೋಡಿ.

***ನವಿರಂಗಿ***
***ಒಂದೂರಿನಲ್ಲಿ ಒಬ್ಬರಸಿದ್ದ***
***ಅವನುಡುಪೆಂದರೆ ಬಹು ಪ್ರಸಿದ್ಧ***
***ಒಮ್ಮೆಗೆ ಓಲಗದೊಳು ಕುಳಿತಿರಲು***
***ಬಂದರವೆಗೆ ಇಬ್ಬರು ದರ್ಜಿಗಳು.***
***'ಕಂಡೂ ಕಾಣದ ತೆರ ನವಿರಾಗಿಹ***
***ಗಾಳಿಗು ಆಕಾಶಕು ತೆಳುವಾಗಿಹ***
***ಸೋಜಿಗದುಡುಪನು ಹೊಲಿಯುವೆ'ವೆಂದು***
***ಆಣೆಯನಿಟ್ಟರು ಎಲ್ಲರ ಮುಂದು.***
***ಅರಸಗೆ ಉಡುಪೆಂದರೆ ಬಲು ಆಸೆ.***

ನಂಬಿಸಿತವನನು ಠಕ್ಕರ ಭಾಷೆ.
ಒಂದು ವರುಷ ಗಡುವನು ಕೇಳಿದರು.
ರಾಶಿ ಹೊನ್ನ ಮುಂಗಡ ಕೇಳಿದರು.
ಉಡುಪಿನಾಸೆಗರಸಸ್ತು ಎಂದ.
ಅವರೆರೆತಕೆಲ್ಲಕೂ 'ಹ್ದೂ' ಎಂದ.
ಇಂತು ಬೊಕ್ಕಸವ ಬರಿದನು ಮಾಡಿ
ನೆಯ್ಯುವ ಹೊಲಿಯುವ ಆಟವ ಹೂಡಿ
ಜಾಣರಿಗೇ ಇದು ಕಾಣುವುದೆಂದು
ಸಾಮಾನ್ಯರಿಗೆಂದಿಗು ಅಲ್ಲೆಂದು
ಬಂದವರಿಗೆಲ್ಲ ಬಯಲನೆ ತೋರಿ
ಇಲ್ಲದುಡುಪಿನಂದವನೇ ಸಾರಿ
ಎಲ್ಲರ ನಂಬಿಸಿದರು ದರ್ಜಿಗಳು.
ಇದರ ಮಾತನಡುಗೂಲಜ್ಜಿಗಳು
ಹರಡಿದರೆಲ್ಲೆಡೆ. ಜಾತ್ರೆ ನೆರೆಯಿತು.
ದೊರೆ ಉಡುಪನುಡುವ ದಿನವೇರ್ಪಟ್ಟಿತು.
ಉಟ್ಟನರಸನೀ ಬಯಲು ಬಟ್ಟೆಯ
ಬೆತ್ತಲೆಯೊಳೆ ಕೊಂಡನು ಜನದಿಟ್ಟಿಯ!
'ಅಯ್ಯೋ ಬರಿಮೈ' ಎಂದರು ಜನ ಮನದೊಳಗೆ,
'ಆಹಾ ವಸ್ತ್ರದ ನವಿರೆಂಥದು' ಎಂದರು ಹೊರಗೆ.
ಆದೊಡೆ ಮಗುವೊಂದು
'ಅಯ್ಯೋ ಬೆತ್ತಲೆ ಬಸವನ ನೋಡೆಂ'ದು
ಚಪ್ಪಾಳೆಯಿಕ್ಕಿತು; ಎಂಥ ದಿಟ್ಟತನ.
'ಹೌದೇ! ಬರಿ ಬೆತ್ತಲೆ' ಎಂದರು ಊರ ಜನ.
ದಿಟ, ದಿಟ ಪಿಸುಗುಟ್ಟಿತು ಪರಿವಾರ.
ಅಳುಕಿ ಅಳುಕಿ 'ಹೌದೆಂ; ದಿತು, ಸರಕಾರ.
ಆಗರಸನು ಬೆಚ್ಚಿ
'ಕೆಟ್ಟೆನಿವರ ನೆಚ್ಚಿ'
ಎನ್ನುತ ಅವಮಾನಕೆ ಕಣ್ಮುಚ್ಚಿ
ಓಡಿದನರಮನೆಗೆ,
ತಿಂಗಳವರೆಗೂ ಬಾರದೆ ಹೊರಗೆ.
ನೀವೇನೆನ್ನುವಿರೀ ಕತೆಗೆ?

ಪು. ತಿ. ನ. ಸಮಗ್ರ ಕವನಗಳು (ಪುಟ ೨೪೧-೨೪೨).

ಈಗ ನಾನು ಕೇಳುತ್ತೇನೆ ನೀವೇನೆನ್ನುವಿರೀ ಕವನಕೆ? ಭಾಷೆಯಲ್ಲಿರುವ ಶಬ್ದಗಳಿಗೆ ಹೀಗೆ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರೂಪಗಳೂ ಅರ್ಥಗಳೂ ಇರುತ್ತವೆ. ನವ್ವಾಲೆ ಜಾನಪದದ ಹಾಡುಗಳನ್ನು ಹಾಡುವಾಗ ನವಿಲು ಎಂಬುದನ್ನು ನವಿಲೇ ಎಂದು ಸಂಬೋಧಿಸುವಾಗ ನವ್ವಾಲೆ ಎಂದಾಗುತ್ತದೆ. ಹಾಡಿನ ಗತ್ತಿಗೆ ಸರಿ ಹೊಂದುತ್ತದೆ. ಆದುದರಿಂದ ಅದರ ಅರ್ಥ ನವಿಲು ಎಂದೇ.

**ನಸುಗುನ್ನಿ** ಇದು ಒಂದು ಗಿಡ. ಈ ಶಬ್ದಕ್ಕೆ ನಸುಗುನ್ನೆ, ನೊಸಗುನ್ನೆ ಎಂಬ ಪರ್ಯಾಯ ರೂಪಗಳಿವೆ. ಈ ಗಿಡಕ್ಕೆ ಕಪಿತುರಚೆ ಎಂಬ ಅನ್ವರ್ಥವಾದ ಹೆಸರೂ ಇದೆ. ಈ ಗಿಡವು ಮೈಗೆ ತಾಕಿದರೆ ಅಲ್ಲಿ ವಿಪರೀತವಾಗಿ ಬಹಳ ಹೊತ್ತು ನವೆಯನ್ನು ಉಂಟು ಮಾಡುತ್ತದೆ. ಆದುದರಿಂದ ಸುಮ್ಮನೆ ಇರಲಾರದೆ ಕಿತಾಪತಿ ಮಾಡುತ್ತಿರುವ ವ್ಯಕ್ತಿಯನ್ನು ನಸುಗುನ್ನಿ ಎಂಬ ಬಹು ಯೋಗ್ಯವಾದ ಹೆಸರಿನಿಂದ ಕರೆಯುತ್ತಾರೆ. ಇದು ಕನ್ನಡದ ಶಬ್ದ.

**ನಾಕಾಬಂದಿ** ಹಿಂದೀ ಶಬ್ದ. ಅದಕ್ಕೆ ಅಡ್ಡಿ, ತಡೆ, ಎಡರು ಎಂದರ್ಥ. ನಾಕಾ ಎರಡು ರಸ್ತೆ ಸೇರುವ ಜಾಗ. ಅಂಥ ಕಡೆ ಒಡ್ಡುವ ತಡೆ. ನಾಖಾಬಂದಿ ಸರಿಯಾದ ಶಬ್ದವಲ್ಲ.

**ನಾಗರ ತನಿ** ಇದು ತಣಿ =ತೃಪ್ತಿಪಡಿಸುವಿಕೆ ಎಂಬ ಶಬ್ದದಿಂದ ವ್ಯುತ್ಪತ್ತಿಯಾಗಿದೆ. ಆದ್ದರಿಂದ ಇದನ್ನು ಪರ್ಯಾಯ ರೂಪವೆನ್ನಬಹುದು. ತನಿ ಎರೆಯುವುದು ಎಂದರೆ ಹಾವಿಗೆ ತೃಪ್ತಿಯಾಗುವಂತೆ ಹಾಲನ್ನು ನೀಡುವುದು ಎಂದರ್ಥ. ಇಂದಿಗೂ ನಾಗರ ಪಂಚಮಿಯ ದಿನ ನಾಗರ ಹಾವಿಗೆ ತನಿಯೆರೆಯುವ ಪದ್ಧತಿಯಿದೆ.

**ನಾಗರಿಕ** ನಗರದಲ್ಲಿ ವಾಸಿಸುವವನು. ನಾಗರೀಕ ಎಂಬ ಅಪಶಬ್ದವೇ ವ್ಯಾಪಕವಾಗಿ ಪ್ರಯೋಗವಾಗುತ್ತಿದ್ದು ಜನರಿಗೆ ನಾಗರಿಕ ಎಂದು ಯಾರಾದರೂ ಹೇಳಿದರೆ ಅವರೇ ತಪ್ಪು ಮಾಡುತ್ತಿದ್ದಾರೆ ಎನ್ನುವಷ್ಟು ಮಟ್ಟಿಗೆ ನಾಗರೀಕ ಪ್ರಸಿದ್ಧಿಯಾಗಿದೆ. ಹೀಗೆಯೇ ಪೂರ್ವೀಕ, ವೈದೀಕ ಇತ್ಯಾದಿಗಳು ಪ್ರಚಾರಕ್ಕೆ ಬಂದುಬಿಟ್ಟಿವೆ. ಸಂಸ್ಕೃತದ ಧಾರ್ಷ್ಟಿಕ, ಧಾರ್ಷ್ಟ್ಯ ಶಬ್ದದಿಂದ ದಾರ್ಷ್ಟೀಕ ಎಂಬುದೂ ಬಂದಿದೆ. ಇಂಥ ಅಪಶಬ್ದಗಳ ಕಡೆ ಗಮನವಿಟ್ಟು ಅವುಗಳ ಉಪಯೋಗವನ್ನು ಬಿಡಬೇಕು. ನಾಗರೀಕ ಎಂಬ ಅಪಶಬ್ದದಿಂದ ನಾಗರೀಕತೆ ಎಂಬ ಭಾವನಾಮವೂ ಸೃಷ್ಟಿಯಾಗಿದೆ. ಅದೂ ತಪ್ಪು. ಆದರೆ ಇಂಥ ಕೆಲವು ಜನಪ್ರಿಯ ಶಬ್ದಗಳು ಭಾಷೆಯಲ್ಲಿ ಉಳಿದುಬಿಡುತ್ತವೆ.

**ನಾಗವಂದಿಗೆ** ಇದರ ಸರಿಯಾದ ರೂಪ ನಾಗಂದಿಗೆ. ಇದಕ್ಕೆ ನಾಗಂದಿ, ನಾಗವಂದಿ, ನಾಗೊಂದಿ, ನಾಗೊಂದಿಗೆ ಎಂಬ ಇತರ ಪರ್ಯಾಯ ರೂಪಗಳೂ ಇವೆ. ಇದು ಸಂಸ್ಕೃತದ ನಾಗದಂತಕ ಎಂಬ ಶಬ್ದದ ಅಪಭ್ರಂಶ. ಬಾಗಿಲುವಾಡದ ಮೇಲೆ, ಮನೆಯ ಒಳಗಡೆ ಆನೆಯ ಕೊಂಬಿನ ಆಕಾರದ ಮರದ ಮೇಲೆ ಒಂದು ಮರದ ಬಡುವನ್ನು ಇಡುತ್ತಿದ್ದರು. ಕಂಬಗಳ ಮೇಲ್ಭಾಗದಲ್ಲಿ ಈ ಅಲಂಕಾರ ಇರುತ್ತಿತ್ತು. ಅದಕ್ಕೆ ನಾಗದಂತಕ ಎಂಬ ಹೆಸರಿತ್ತು. ಈಗ ಆ ಬಗೆಯ ಮನೆಗಳು ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಕಾಣಸಿಗುತ್ತವೆ.

**ನಾಗವೀಣಾ** ಎಂದರೆ ಹಾವಿನ ಆಕಾರದ ಕೆತ್ತನೆಯನ್ನು ಹೊಂದಿರುವ ವೀಣೆ ಎಂದರ್ಥ. ಇದು ವೀಣೆಯ ತಯಾರಿಕೆಯಲ್ಲಿ ಒಂದು ಬಗೆ. ಒಂದು ಕಡೆ ಬುರುಡೆ ಅದಕ್ಕೆ ಎದುರಾಗಿರುವ ಕೊನೆಯಲ್ಲಿ ನಾಗರಹಾವಿನ ಆಕಾರದ ಕಟ್ಟಡವಿರುತ್ತದೆ. ಗೋಟುವಾದ್ಯಕ್ಕೂ ಈ ಹೆಸರಿದೆ. ಕನ್ನಡ ಕಾವ್ಯಗಳಲ್ಲಿ ಈ ಶಬ್ದ ಪ್ರಯೋಗವಾಗಿದೆ. ಹೊಯ್ಸಳ ದೇವಾಲಯಗಳಲ್ಲಿ ಈ ಬಗೆಯ ವೀಣೆಯ ಚಿತ್ರವನ್ನು ಕಾಣಬಹುದು.

**ನಾಗವೇಣಿ** ಎಂದರೆ ಹಾವಿನ ಹಾಗೆ ಜಡೆಯುಳ್ಳವಳು. ಈ ಶಬ್ದಕ್ಕೆ ಪೂರ್ಣವಾದ ಅರ್ಥ ನಮ್ಮ ಶ್ರೇಷ್ಠ ಕವಿ ಪು. ತಿ. ನ. ಅವರಿಗೆ ಗೊತ್ತಿರಲಿಲ್ಲವಂತೆ. ಅದರ ಅರ್ಥ ಅವರಿಗೆ ಸ್ಪಷ್ಟವಾಗಿ ಗೋಚರವಾದ್ದು ಒಂದು ರೈಲು ಪ್ರಯಾಣದಲ್ಲಿ ಎಂದು ಅವರೇ ನನ್ನ ಬಳಿ ಒಮ್ಮೆ ಹೇಳಿದ್ದರು. ಹೆಚ್ಚು ಜನರಿದ್ದ ರೈಲುಗಾಡಿಯಲ್ಲಿ ಇವರು ಕುಳಿತಿದ್ದ ಬೆಂಚಿನಲ್ಲಿಯೇ ಇವರ ಪಕ್ಕ ಒಬ್ಬ ಸುಂದರ ಯುವತಿಯೂ ಕುಳಿತಿದ್ದಳಂತೆ. ಕಿಟಕಿಯ ಕಡೆಗೆ ತಿರುಗಿ ಪ್ರಕೃತಿ ಸೌಂದರ್ಯದ ಆಸ್ವಾದನೆಯಲ್ಲಿ ಆಕೆ ತಲ್ಲೀನಳಾಗಿದ್ದಳು. ಆಕೆಯ ಹಿಂದೆಯೇ ಕುಳಿತಿದ್ದ ಈ ಕವಿಯೂ ಅದೇ ಕಾರ್ಯದಲ್ಲಿ ಆಸಕ್ತರಾಗಿದ್ದರು. ಇಬ್ಬರೂ ಒಂದೇ ಕಡೆ ನೋಡುತ್ತಿದ್ದುದರಿಂದ ಅದು ಸಾಧ್ಯವಾಯಿತು. ಸ್ವಲ್ಪ ಹೊತ್ತಿನ ಬಳಿಕ ಕವಿಯ ಕಣ್ಣು

ತಮ್ಮ ಮುಂದೆ ನೀಳವಾಗಿ ಬೆಂಚಿನ ಮೇಲೆ ಬಿದ್ದಿದ್ದ ಯುವತಿಯ ಜಡೆಯ ಕಡೆಗೆ ತಿರುಗಿತು. ಆಹಾ ಇದೀಗ ನಾಗವೇಣಿ ಎಂದುಕೊಂಡರು. ಆದರೆ ಕವಿಗೆ ನಾಗವೇಣಿ ಎಂಬುದು ಅಷ್ಟು ಸರಿಯಾಗಿಲ್ಲ, ಸಂಪೂರ್ಣವಾಗಿ ಹೋಲುವುದಿಲ್ಲ ಎಂಬ ಅಭಿಪ್ರಾಯ ಮೂಡಿತಂತೆ. ಜಡೆಯೇನೋ ತುಂಬ ಸೊಗಸಾಗಿತ್ತು. ಒಂದು ಸಾರಿ ಎಳೆಯಬಹುದು ಎನ್ನಿಸಿತಂತೆ. ಹಾಗೆ ಅನ್ನಿಸಿದ ಕೂಡಲೇ ಅವರಿಗೆ ನಾಗವೇಣಿಯ ಶಬ್ದಾರ್ಥ ಸಂಪೂರ್ಣ ಎಂದು ಗೋಚರಿಸಿತಂತೆ. ನಿಜವಾಗಿ ಎಳೆದೇಬಿಟ್ಟಿದ್ದರೆ ಆ ಯುವತಿ ಕೋಪದಿಂದ ಹಿಂದಿರುಗಿ ನೋಡಿದ್ದರೆ ನಾಗರಹಾವು ಹೆಡೆ ಬಿಚ್ಚಿ ಬುಸುಗುಡುವ ಹಾಗೆ ಇರುತ್ತಿತ್ತಲ್ಲವೆ ಎಂದು ಮೈ ಜುಂ ಎನ್ನಿಸಿತಂತೆ. ಹೀಗೆ ಶಬ್ದಾರ್ಥಗಳು ಚಿತ್ರವತ್ತಾಗಿ ಕೆಲವು ಸಲ ಕವಿಗೆ ಹೊಳೆಯುತ್ತವೆ. ಎಲ್ಲಿಂದ ಎಲ್ಲಿಗೋ ಹೊರಟುಬಿಟ್ಟೆ. ಆ ಕವಿಯೇ ಹಾಡಿಲ್ಲವೇ **"ಹೊರಟಿತೆಲ್ಲಿಗೆ ನನ್ನ ಮನಸು/ ಕರವಿಡಿದೊಯ್ಯಲು ನನ್ನ ಕನಸು"**. ಇರಲಿ ಹೆಣ್ಣು ಮಕ್ಕಳಿಗೆ ಹೆಸರಿಡುವಾಗ ಈಚಿನವರಿಗೆ ಕಲ್ಪನೆ ಚೆನ್ನಾಗಿ ಕೆಲಸ ಮಾಡುತ್ತಿದೆ.

**ನಾಗಾಲೋಟ** ಈ ಕನ್ನಡ ಶಬ್ದದಲ್ಲಿ ಮೂರು ಬೇರೆ ಬೇರೆ ಶಬ್ದಗಳು ಕೂಡಿಕೊಂಡಿವೆ. ನಾಲ್ಕು + ಕಾಲು + ಓಟ = ನಾಲ್ಕು ಕಾಲುಗಳಲ್ಲಿಯೂ ಒಂದೇ ಸಮನೆ ಓಡುವುದು. ಕುದುರೆ ತುಂಬ ವೇಗವಾಗಿ ಓಡುವಾಗ ನೆಲದಿಂದ ಮೇಲಕ್ಕೆ ನಾಲ್ಕು ಕಾಲುಗಳನ್ನು ಎತ್ತಿ ಇಟ್ಟು ಓಡುತ್ತದೆ. ಹೀಗೆ ಓಡಿದರೆ ವೇಗ ಹೆಚ್ಚಾಗುತ್ತದೆ. ಕುದುರೆಯ ಜೂಜಿನಲ್ಲಿ ಇಂಥ ಓಟವನ್ನು ನೋಡಬಹುದು.

**ನಾಗೋಲೆ** ಇದು ಮದುವೆಯಲ್ಲಿ ಮಾಡುವ ಸಮಾಪ್ತಿ ವಿಧಿ. ವಿವಾಹವು ಮುಗಿಯಿತೆಂದು ತಿಳಿಸುವ ಒಂದು ಶಾಸ್ತ್ರಕಾರ್ಯ. ಈ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ನಾಗವಲಿ, ನಾಗಬಲಿ, ನಾಗವಾಲಿ, ನಾಗೋಲಿ, ನಾಗೋಲೆ. ಈ ಎಲ್ಲ ಶಬ್ದ ರೂಪಗಳೂ ನಾಕಬಲಿ ಎಂಬ ಸಂಸ್ಕೃತ ಶಬ್ದದ ತದ್ಭವಗಳೆನ್ನುತ್ತಾರೆ. ಆದರೆ ನಾಕಬಲಿ ಸಂಸ್ಕೃತದಲ್ಲಿ ಪ್ರಸಿದ್ಧವಲ್ಲ.

**ನಾಟು** ಎಂಬ ಶಬ್ದ ದ್ರಾವಿಡ ಮೂಲವಾದ ಶಬ್ದ. ಇದು ನಾಂಟು ಶಬ್ದದಿಂದ ಬಂದಿದೆ. ಇದಕ್ಕೆ *೧. ಮುಳ್ಳು ಮುಂತಾದ ಮೊನಚಾದ ವಸ್ತುಗಳು ಚುಚ್ಚಿಕೊಳ್ಳು ೨. ಗಿಡ, ಸಸಿ ಮುಂತಾದವುಗಳನ್ನು ನೆಲದಲ್ಲಿ ನೆಡು ೩. ಮನಸ್ಸಿಗೆ ಹತ್ತು, ಮನದಟ್ಟಾಗು* ಎಂಬ ಅರ್ಥಗಳಿವೆ. ಕಾಲಿಗೆ ಮುಳ್ಳು ನಾಟಿತು ಎಂಬ ವಾಕ್ಯದಲ್ಲಿ ಮೊದಲನೆಯ ಅರ್ಥ. ಮಳೆ ಬಿದ್ದ ಮೇಲೆ ಬತ್ತದ ಸಸಿಗಳನ್ನು ಗದ್ದೆಯಲ್ಲಿ ನಾಟಬೇಕು. ಈ ವಾಕ್ಯದಲ್ಲಿ ಎರಡನೆಯ ಅರ್ಥ. ಉಪಾಧ್ಯಾಯರು ಮನಸ್ಸಿಗೆ ನಾಟುವಂತೆ ಪಾಠವನ್ನು ಹೇಳಿದರು. ಇಲ್ಲಿ ಮೂರನೆಯ ಅರ್ಥ. ಈ ಶಬ್ದಕ್ಕೂ ನಡು, ನೆಡು ಶಬ್ದಕ್ಕೂ ಅರ್ಥದಲ್ಲಿ ತುಂಬ ಸಾಮ್ಯವಿದೆ. ಪೂರ್ವದಲ್ಲಿ ಎರಡಕ್ಕೂ ಸಂಬಂಧವಿದ್ದಿರಬಹುದು. ಸಂಶೋಧನೆ ಮಾಡಬೇಕು.

**ನಾಟ್ಯ** ಇದು ಅಭಿನಯದಿಂದ ನಾನಾ ವಿಧಗಳ ನಾಯಕಾದಿಗಳ ದೈಹಿಕ ಮಾನಸಿಕ ಅವಸ್ಥೆಯನ್ನು ರಸೋತ್ಪತ್ತಿಯಾಗುವಂತೆ ಅನುಕರಣೆ ಮಾಡುವುದು. ಇದನ್ನೇ ನಾಟಕಕಲೆ ಎಂದೂ ಕರೆಯುತ್ತಾರೆ. ನಟನ ಕಲೆ, ನಾಟ್ಯ ಗೃಹ, ನಾಟ್ಯ ಕೂಟ ಎಂಬ ಶಬ್ದಗಳಿಗೂ ಇದಕ್ಕೂ ಸಂಬಂಧವಿದೆ.

**ನಾಡದೇವಿ** ನಾಡದೇವಿ ಎಂಬುದರಲ್ಲಿ ನಾಡಿನ ದೇವಿ ಎಂಬ ಅರ್ಥವಿದೆ. ಇದರಲ್ಲಿ ದೇವಿ ಎಂಬ ಶಬ್ದಕ್ಕೆ ದೇವ ಎಂಬುದು ಪುಲ್ಲಿಂಗ. ಆದರೆ ನಾಡದೇವ ಎಂಬ ಶಬ್ದವನ್ನು ಯಾರೂ ಉಪಯೋಗಿಸುವುದಿಲ್ಲ. ನಾಡದೈವ = ನಾಡಿನ ದೈವ = ದೇವತೆ ಎಂದು ಉಪಯೋಗಿಸಬಹುದು. ಆಗ ದೈವ ಎಂಬ ಶಬ್ದಕ್ಕೆ ದೇವತೆ, ದೇವರು, ಭಗವಂತ ಎಂದು ಪುಲ್ಲಿಂಗದ ಅರ್ಥ ಆರೋಪಿಸಬಹುದು. ಸಂಸ್ಕೃತದಲ್ಲಿ ದೈವ ಪುಲ್ಲಿಂಗ, ದೈವೀ ಸ್ತ್ರೀಲಿಂಗ ವಿಶೇಷಣ ರೂಪ.

**ನಾಣ್ನುಡಿ** ಎಂಬ ಶಬ್ದಕ್ಕೆ ನಾಡಿನಲ್ಲಿ ಪ್ರಚಲಿತವಾಗಿರುವ ಮಾತು ಎಂಬ ಅರ್ಥವಿದೆ. ಕನ್ನಡದ ಗಾದೆಗೂ ಇದೇ ಅರ್ಥ. ಇದಲ್ಲದೆ ಲೋಕೋಕ್ತಿ, ಸಾಮತಿ ಎಂಬ ಶಬ್ದಗಳನ್ನೂ ಪ್ರಯೋಗಿಸುತ್ತಾರೆ. ಬಹಳ ಹಿಂದಿನ ಕಾಲದಿಂದ ಜನತೆಯಲ್ಲಿ ರೂಢಮೂಲವಾಗಿ ಚಲಾವಣೆಯಲ್ಲಿರುವ, ನೀತಿ, ವ್ಯವಹಾರ, ವಿವೇಕ ಮುಂತಾದುವುಗಳನ್ನು ಅಂತರಂಗದಲ್ಲಿ ಉಳ್ಳ ವಾಕ್ಯಗಳಿಗೆ ಈ ಎಲ್ಲ ಶಬ್ದಗಳೂ ಅನ್ವಯಿಸುತ್ತವೆ. ನಾಣ್ನುಡಿ ಎಂಬ ಶಬ್ದಕ್ಕೆ ನಾಡುನುಡಿ, ನಾಟ್ನುಡಿ ಮುಂತಾದ ಪರ್ಯಾಯ ರೂಪಗಳಿವೆ. ಅರ್ಥವಂತಿಕೆಯಿಂದ ತುಂಬಿರುವ ಸನಾತನ ವಾಕ್ಯಗಳೂ ಕವಿ ಪ್ರಯೋಗಗಳೂ ಈ ಸತ್ವ ತುಂಬಿಕೊಂಡು ಬಂದಿರುತ್ತವೆ. ಈಗಲೂ ಕಾಲ ಪ್ರಭಾವದಿಂದ ಹೊಸಗಾದೆಗಳು ಹುಟ್ಟಿಕೊಳ್ಳಬಹುದು. ಸತ್ವವಿದ್ದರೆ ಅವು ಉಳಿಯುತ್ತವೆ. ಇಲ್ಲದಿದ್ದರೆ ಮರೆತುಹೋಗುತ್ತವೆ.

**ನಾತ** ಎಂಬ ಕನ್ನಡ ಶಬ್ದ ನಾಱು ಎಂಬ ಶಬ್ದದಿಂದ ಬಂದಿದೆ. ನಾರು ತುಂಬ ಪ್ರಾಚೀನ ಕಾವ್ಯಗಳಲ್ಲಿ ಎರಡು ಅರ್ಥದಲ್ಲಿ ಪ್ರಯೋಗಗೊಳ್ಳುತ್ತ ಇತ್ತು. **ಮಲ್ಲಿಗೆ ಕಂಪು ನಾಱಿ'** (ಪಂಪ. ಭಾ. ೪-೧೧೦) ಎಂದರೆ ಸುವಾಸನೆ ಬೀರು. ಸರ್ವಜ್ಞನ **ಯಾತರದು ಹೂವೇನು ನಾತರದು ಸಾಲದೇ?** ಎಂಬ ಮಾತಿನಲ್ಲಿಯೂ ಇದೇ ಅರ್ಥವಿದೆ. ಆದರೆ ಇದಕ್ಕೆ ವಿರುದ್ಧವಾದ ದುರ್ವಾಸನೆ ಬೀರು ಎಂಬ ಅರ್ಥದಲ್ಲಿಯೂ ಅದು ಪ್ರಯೋಗವಾಗಿದೆ. ಅದೇ ಪಂಪಭಾರತದಲ್ಲಿ **ಪೊಲಸು ನಾಱುವ ಮೆಯ್ಯನೆ ಕರ್ಚಲೆಂದು** (ಪಂ. ತ. ಭಾ. ೧೧-೫೧) ಎಂಬ ಪ್ರಯೋಗವೂ ಇದೆ. ಬಹುಶಃ ನಾಱು ಎಂಬ ಶಬ್ದಕ್ಕೆ ಪ್ರಾರಂಭದಲ್ಲಿ ವಾಸನೆ ಬೀರು ಎಂದಷ್ಟೇ ಅರ್ಥವಿರಬೇಕು. ಆ ಬಳಿಕ ದುರ್ವಾಸನೆಗೆ ಮಾತ್ರ ಅದು ಪ್ರಯೋಗವಾಗುತ್ತಿರಬೇಕು. ಈಗಂತೂ ನಾತ ಎಂದರೆ ದುರ್ವಾಸನೆ ಎಂದೇ ಅರ್ಥ.

**ನಾದಸ್ವರ–ನಾಗಸ್ವರ** ನಾದಸ್ವರ ಎನ್ನುವುದು ಪ್ರಾಚೀನ ಕಾಲದಿಂದಲೂ ಸರಿಯಾದ ಪ್ರಯೋಗದಲ್ಲಿದೆ. ಆದರೆ ಹಾವಾಡಿಗರು ಉಪಯೋಗಿಸುವ ವಾದ್ಯಕ್ಕೆ ನಾಗಸ್ವರ ಎಂದು ಹೆಸರು. ಇದೂ ಕೂಡ ಕನ್ನಡ ಕಾವ್ಯಗಳಲ್ಲಿ ಪ್ರಯೋಗವಾಗಿದೆ. ಓಲಗ ಎಂಬ ಶಬ್ದಕ್ಕೆ ಸಂಗೀತಗಾರರು ನಾದಸ್ವರ ಎಂಬ ಶಬ್ದವೇ ಸರಿಯೆಂದು ತಿಳಿಸುತ್ತಾರೆ. ಈ ಎರಡು ಶಬ್ದಗಳ ಪ್ರಯೋಗದಲ್ಲಿ ಸ್ವಲ್ಪ ಗೊಂದಲವಿದೆ ಎಂಬುದರ ಬಗ್ಗೆ ಸಂದೇಹವಿಲ್ಲ.

**ನಾನು, ತಾನು, ನನ್ನ, ತನ್ನ** ಇತ್ಯಾದಿ ಪ್ರಯೋಗಗಳ ಬಗ್ಗೆ ವಿವರಣೆ. ಇದು ಮುಖ್ಯವಾದ ವ್ಯಾಕರಣ ವಿಷಯ. ಇದನ್ನು ವಿವರವಾಗಿ ತಿಳಿದುಕೊಳ್ಳುವುದು ಒಳ್ಳೆಯದು. ಕನ್ನಡದಲ್ಲಿ ಅವನು, ನೀನು, ನಾನು ಎಂಬ ಸರ್ವನಾಮಗಳು ಇವೆಯಷ್ಟೆ! ಪಾರಿಭಾಷಿಕವಾಗಿ ಅವನು ಎಂಬುದನ್ನು ಪ್ರಥಮ ಪುರುಷ ಎಂದೂ ನೀನು ಎಂಬುದನ್ನು ಮಧ್ಯಮ ಪುರುಷ ಎಂದೂ ನಾನು ಎಂಬುದನ್ನು ಉತ್ತಮ ಪುರುಷ ಎಂದೂ ಕರೆಯುತ್ತಾರೆ. ಇವುಗಳು ಸೇರಿ ಕ್ರಿಯಾಪದಗಳು ಸಿದ್ಧಿಯಾಗುವ ಮಾರ್ಗ ಹೀಗಿದೆ:

| ಏಕವಚನ | ಬಹುವಚನ |
|---|---|
| ಅವನು ಕುಡಿದನು | ಅವರು ಕುಡಿದರು |
| ನೀನು ಕುಡಿದೆ | ನೀವು ಕುಡಿದಿರಿ |
| ನಾನು ಕುಡಿದೆನು | ನಾವು ಕುಡಿದೆವು |

ತಾನು ಎಂದು ಒಂದು ರೂಪವಿದೆ. ಇದಕ್ಕೆ ಬಹುವಚನ ತಾವು. ಇವುಗಳ ಪ್ರಯೋಗದ ಬಗ್ಗೆ ಸ್ವಲ್ಪ ವಿವರ ತಿಳಿದಿರಬೇಕು. ನಾನು ಕುಡಿದೆ ಎಂದು ಹೇಳುವಂತೆ ತಾನು ಕುಡಿದೆ ಎಂಬ ರೂಪವನ್ನು ಉಪಯೋಗಿಸುವುದು ಸರಿಯಲ್ಲ. ಇದನ್ನು ಪ್ರಥಮ ಪುರುಷದಲ್ಲಿ ಉಪಯೋಗಿಸುವಂತೆ ಪ್ರಯೋಗ ಮಾಡಬೇಕು. 'ತಾನು ಕುಡಿದೆ' ಎಂದು ಅವನು

ಹೇಳಿದನು. 'ತಾವು ಕುಡಿದೆವು' ಎಂದು ಅವರು ಹೇಳಿದರು. ಈ ಪ್ರಯೋಗಗಳು ಸರಿ. ತಾವು ಎಂಬುದನ್ನು ನೀವು ಎಂದು ಉಪಯೋಗಿಸುವ ಕಡೆ ಗೌರವಕ್ಕಾಗಿ ಉಪಯೋಗಿಸುತ್ತಾರೆ. 'ತಾವು ನಮಗೆ ತುಂಬ ಉಪಕಾರವನ್ನು ಮಾಡಿದಿರಿ.' ಅಲ್ಲದೆ ತಾವು ಎಂಬುದು ಅವರು ಎಂಬರ್ಥದಲ್ಲಿಯೂ ಅನೇಕ ಕಡೆ ಉಪಯೋಗವಾಗುತ್ತದೆ. 'ತಾವೊಬ್ಬರೇ ದಾನಿಗಳು ಇತರರು ಯಾರೂ ಇಲ್ಲ ಎಂದು ಅವರಿಗೆ ಹೆಮ್ಮೆ.' ಇಲ್ಲಿ ಅವರು ಎಂದೇ ಅರ್ಥ. ತನ್ನ ತಮ್ಮ ಎಂಬ ಶಬ್ದಗಳ ರೂಪವನ್ನು ಬೇರೆ ಬೇರೆಯ ರೀತಿಯಲ್ಲಿಯೇ ಉಪಯೋಗಿಸಬೇಕು. 'ಅವನು ತನ್ನ ವಿಚಾರವನ್ನು ಯಾರಿಗೂ ಹೇಳುವುದಿಲ್ಲ.' 'ಅವರು ತಮ್ಮ ವಿಚಾರವನ್ನು ಯಾರಿಗೂ ಹೇಳುವುದಿಲ್ಲ'. ಆದರೆ ಕರ್ನಾಟಕದ ಕೆಲವು ಕಡೆ ತನ್ನ ಎಂಬ ಏಕವಚನವನ್ನು ಬಹುವಚನದೊಂದಿಗೆ ಸ್ವಾಭಾವಿಕವಾಗಿಯೇ ಉಪಯೋಗಿಸುತ್ತಾರೆ. 'ಅವರು ತನ್ನ ವಿಚಾರವಾಗಿ ಏನನ್ನೂ ಹೇಳುವುದಿಲ್ಲ.' ಇದೂ ಸರಿಯೇ. ಇದನ್ನು ತಪ್ಪೆಂದು ಹೇಳಲಾಗುವುದಿಲ್ಲ. ಏಕೆಂದರೆ ಪ್ರಯೋಗದಲ್ಲಿ ನಿಂತು ಹೋಗಿರುವುದರಿಂದ. ಇದರ ಜೊತೆಗೆ ಕನ್ನಡದಲ್ಲಿ ಅವನು ಎಂಬ ಪ್ರಥಮ ಪುರುಷದ ಸರ್ವನಾಮದ ಜೊತೆಗೆ ಆತ, ಈತ, ಆಕೆ, ಈಕೆ ಎಂಬ ಶಬ್ದಗಳೂ ಇವೆ. ಊತ, ಊಕೆ ಎಂಬ ವಿಶೇಷದ ರೂಪಗಳೂ ಇವೆ. ಆತ ಎಂಬುದು ಅವನು. ಈತ ಇವನು. ಆಕೆ = ಅವಳು. ಈಕೆ = ಇವಳು. ಊಕೆ = ಇಬ್ಬರ ಮಧ್ಯೆ ಎದುರಿಗೆ ಇರುವವಳು. ಊತ = ಇಬ್ಬರ ಮಧ್ಯೆ ಎದುರಿಗೆ ಇರುವವನು. ಊ ಮನೆ ಎಂದರೆ ಅಕ್ಕಪಕ್ಕದ ಮನೆಯಲ್ಲದ ಎದುರು ಮನೆ ಎಂದರ್ಥ. ಎದುರು ಎಂದರೆ ಬೆರಳಿಟ್ಟು ತೋರಿಸಿದ ಸ್ಥಳದಲ್ಲಿ ಎಂದರ್ಥ. ಈ ಶಬ್ದಗಳನ್ನು ಬಳಸುವಾಗ ಸ್ವಲ್ಪ ಎಚ್ಚರಿಕೆ ವಹಿಸುವುದು ಮೇಲು. ಈ ಶಬ್ದಗಳ ಪ್ರಯೋಗದಲ್ಲಿರುವ ಇತರ ವಿವರಗಳನ್ನು ವ್ಯಾಕರಣ ಗ್ರಂಥಗಳಿಂದ ತಿಳಿಯಬೇಕು.

**ನಾನೊಬ್ಬಳು ಗೃಹಿಣಿ - ನಾನೊಬ್ಬ ಗೃಹಿಣಿ - ಯಾವುದು ಸರಿ?** ಇಲ್ಲಿ ನಾನೊಬ್ಬಳು ಗೃಹಿಣಿ ಎಂಬುದು ಸರಿ. ಒಬ್ಬ ಎಂಬ ಶಬ್ದ ಓರ್ವ ಎಂಬುದರಿಂದ ಬಂದದ್ದು. ಅದು ಪುಲ್ಲಿಂಗ ಶಬ್ದ. ಓರ್ವಳು ಸ್ತ್ರೀಲಿಂಗ ಶಬ್ದ. ಪಂಪಭಾರತದಲ್ಲಿ **ಓರ್ವ ಗೋವಳನನಿಬರ ಸಾವುಮಂ ಕಂಡು** (೮-೯೫) ಎಂದು ಬರುತ್ತದೆ. ಮತ್ತೊಂದು ಕಡೆ ಅದೇ ಗ್ರಂಥದಲ್ಲಿ **ಓರ್ವಳ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪ ಅಲರಂಬು ಬರ್ಪಂತೆ ಬಂದು** (೩-೩೭) ಎಂಬ ಪ್ರಯೋಗವಿದೆ. ಹೀಗೆಯೇ ಪುಲ್ಲಿಂಗ ಸ್ತ್ರೀಲಿಂಗಗಳಿಗೆ ಬೇರೆ ಬೇರೆಯಾಗಿ ಬರೆಯುವುದೇ ಸರಿ. ಆಡುಮಾತಿನಲ್ಲಿ ಕೆಲವರು ಒಮ್ಮೊಮ್ಮೆ ನಾನೊಬ್ಬ ಗೃಹಿಣಿ ಎಂದು ಉಪಯೋಗಿಸುತ್ತಾರೆ. ಬರಹದಲ್ಲಿ ನಿಜವಾದ ತಪ್ಪು. ನಾನೊಬ್ಬಳು ಸರಿ.

**ನಾಮರ್ದ** ಪಾರಸೀ ಭಾಷೆಯ 'ನಾಮರ್ದ್' ಎಂಬ ಶಬ್ದ. ಹಿಂದೀ ಮತ್ತು ಮರಾಠಿ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿದೆ. ಹೇಡಿ, ಅಂಜುಬುರುಕ, ಪಿರ್ಕಿ ಎಂದರ್ಥ. 'ನಪುಂಸಕ' ಎಂಬ ಅರ್ಥವೂ ಇದೆ. ಸಾಮಾನ್ಯವಾಗಿ ಈ ಶಬ್ದವನ್ನು ಬೈಗುಳಗಳ ಜೊತೆಯಲ್ಲಿ ಸೇರಿಸುತ್ತಾರೆ.

**ನಾರಿ** ಇದು ಸಂಸ್ಕೃತದ ನಾರೀ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಹೆಂಗಸು, ಹೆಂಡತಿ ಎಂಬ ಸಾಮಾನ್ಯವಾದ ಅರ್ಥ. ಆದ್ದರಿಂದ ಕೇವಲ ನಾರಿ ಎಂದು ಕರೆಸಿಕೊಳ್ಳುವುದು ಸ್ತ್ರೀಯರಿಗೆ ಅಷ್ಟೇನೂ ಪ್ರಿಯವಾದ ವಿಷಯವಲ್ಲ. ನಾರೀಮಣಿ ಎಂದಾದರೂ ಇರಬೇಕು.

**ನಾರುಮಡಿ** ಈ ಕನ್ನಡದ ಶಬ್ದಕ್ಕೆ ನಾರಿನಿಂದ ಮಾಡಿದ ಬಟ್ಟೆ ಎಂದರ್ಥ. ಸಂಸ್ಕೃತದ ವಲ್ಕಲ ಶಬ್ದಕ್ಕೆ ಸಮಾನವಾದುದು. ಬಾಳೆ, ಕತ್ತಾಳೆ. ಸೆಣಬು ಮೊದಲಾದವುಗಳಿಂದ ತೆಗೆದ ಎಳೆಗೆ ನಾರ್ ಎಂದು ಹೆಸರು. ಇದನ್ನು ಉಪಯೋಗಿಸಿ ನೆಯ್ದ ಬಟ್ಟೆಯೇ ನಾರುಮಡಿ.

ಋಷಿಗಳೂ ಆಶ್ರಮ ಸ್ತ್ರೀಯರೂ ಋಷಿಕನ್ಯೆಯರೂ ಆಶ್ರಮಗಳಲ್ಲಿರುವ ಎಲ್ಲರೂ ಈ ಬಟ್ಟೆಯನ್ನೇ ನಿತ್ಯದ ಉಡುಪನ್ನಾಗಿ ಉಪಯೋಗಿಸುತ್ತಿದ್ದರು.

**ನಾಲಾಯಕ್ಕು** ಲಾಯಕ್ ಎಂಬ ಶಬ್ದ ಪಾರಸೀ ಮತ್ತು ಅರಬ್ಬೀ ಭಾಷೆಯಿಂದ ಬಂದಿದೆ. ಇದಕ್ಕೆ ಅರ್ಥ ಯೋಗ್ಯ, ತಕ್ಕ, ಉಚಿತ, ಸರಿಯಾದ ಎಂದು. ನಾಲಾಯಕ್ ಎಂಬುದೂ ಆ ಭಾಷೆಗಳಿಂದ ಬಂದದ್ದೇ. ಅದಕ್ಕೆ ಅಯೋಗ್ಯವಾದ, ತಕ್ಕುದಲ್ಲದ, ಅನುಚಿತ ಎಂದರ್ಥ.

**ನಾಲಿಕೇರ, ನಾರಿಕೇಳ** ಈ ಎರಡರಲ್ಲಿ ಯಾವುದು ಸರಿಯಾದುದು ? ಇದು ಸಂಸ್ಕೃತದ ಶಬ್ದ. ಎರಡೂ ರೂಪಗಳು ಸರಿಯಾದುವು. ರ. ಲ. ಕಾರಗಳು ಸಂಸ್ಕೃತದಲ್ಲಿ ಪರಸ್ಪರ ಪಲ್ಲಟವಾಗುವುದು ಸಾಮಾನ್ಯ. 'ರಲಯೋರಭೇದಃ' ಎಂಬ ವ್ಯಾಕರಣ ಸೂತ್ರವೇ ಇದೆ. ಈ ಹೆಸರು ಹೇಗೆ ಬಂತು ಎಂಬುದು ಸ್ವಾರಸ್ಯವಾಗಿದೆ. '**ನಾರ್ಯಾಃ ವನಿತಾಯಾಃ ಕೇಲ ಇವ ಕೇಲೋ ಯಸ್ಯ**' ಎಂಬುದು ಟೀಕೆ. ಸ್ತ್ರೀಯರ ಚಲನೆಯಂತೆ ಚಲನೆಯುಳ್ಳದು ನಾರಿಕೇಲ = ತೆಂಗು. ಈ ಶಬ್ದಕ್ಕೆ ನಾರಿಕೇರ ಎಂಬ ರೂಪವೂ ದೊರಕುತ್ತದೆ.

**ನಾವಿಲಿಗ, ನಾವಿದಿಗ** ಸಂಸ್ಕೃತದಲ್ಲಿ ನಾಪಿತ ಎಂಬ ಶಬ್ದವಿದೆ. ಇದು ಕನ್ನಡದಲ್ಲಿ ನಾವಿದ ಎಂದಾಗುತ್ತದೆ. ಈ ನಾವಿದ ಜನರ ಬಾಯಿಯಲ್ಲಿ ಅನೇಕ, ಪರ್ಯಾಯ ರೂಪಗಳನ್ನು ಪಡೆದಿದೆ. ನಾಯಿಂದ, ನಾವಿಂದ, ನಾಯಿದ, ನಾವಿಲ. ಶಾಸನಗಳಲ್ಲಿ ನಾದಿಗ ಎಂಬ ರೂಪವೂ ಇದೆ. ಇಗ ಪ್ರತ್ಯಯವನ್ನು ಹಾವಾಡಿಗ ಮುಂತಾದ ಶಬ್ದಗಳ ಸಾಮ್ಯದಲ್ಲೇ ಹಚ್ಚಿರುವುದು ಉಂಟು. ಹಾಗೆ ಆದರೂ ನಾವಿಲ + ಇಗ = ನಾವಿಲಿಗ, ನಾವಿದ + ಇಗ = ನಾವಿದಿಗ ಎಂದು ಆಗಬೇಕು. ನಾವದಿಗ ರೂಪ ತಪ್ಪು. ಆಡುಮಾತಿನಲ್ಲಿ ಆ ರೂಪ ಬಂದಿದ್ದರೆ ಅದನ್ನು ಪ್ರಾದೇಶಿಕ ರೂಪ ಎಂದು ಕರೆಯಬೇಕು.

**ನಾಷ್ಟಾ** ಇದು ಪಾರಸಿಯ ನಾಶ್ತಾ ಎಂಬ ಶಬ್ದದಿಂದ ಬಂದಿದೆ. ಆ ಭಾಷೆಯಲ್ಲಿ ಜಲಪಾನ, ನೀರು ಕುಡಿಯುವುದು ಎಂದರ್ಥ. ಇದು ಆಲಂಕಾರಿಕವಾಗಿ ಉಪಾಹಾರ ಆಗಿದೆ. ಹಿಂದಿಯಲ್ಲಿ ಇದಕ್ಕೆ ಕಲೇವಾ, ಕಲೇವೂ ಎಂಬ ಶಬ್ದವನ್ನು ಅರ್ಥವಾಗಿ ಕೊಡುತ್ತಾರೆ. ಇದಕ್ಕೆ ಪ್ರಾತಃಕಾಲದಲ್ಲಿ ಮಾಡುವ ಲಘುಭೋಜನ, ಉಪಾಹಾರ ಎಂದರ್ಥ. ಮದುವೆಯಲ್ಲಿ ವರನ ಪ್ರಾತಃಕಾಲದ ಜಲಪಾನಕ್ಕೂ ಇದು ವಿಶೇಷವಾಗಿ ಅನ್ವಯಿಸುತ್ತದೆ.

**ನಾಳಿದ್ದು** - ನಾಳೆ ಎಂಬ ಶಬ್ದದಿಂದ ಬಂದ ನಾಳಿದ್ದು ಎಂಬ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ನಾಳೆ ಇದ್ದು ಮುಂದಿನ ದಿನ ಎಂದು ವಿವರಣೆ. ಇದ್ದು = ಬಿಟ್ಟು. ನಾಳಿದೂ, ನಾಡದು, ನಾಡಿದ್ದು, ನಾಳಿದ್ದು ಈ ಎಲ್ಲ ರೂಪಗಳೂ ಸಾಹಿತ್ಯದಲ್ಲಿ ಪ್ರಯೋಗವಾಗಿವೆ. ಹೊಸಗನ್ನಡದಲ್ಲಿ ನಾಳಿದ್ದು ಮತ್ತು ನಾಡಿದ್ದು ಎಂಬವು ಮಾತ್ರ ಸಾಧುವಾಗಿವೆ. ತಮಿಳಿನಲ್ಲಿ ನಾಳೈ ನಿನ್ರು ಎಂಬುದಾಗಿ ಈ ಶಬ್ದದ ಜ್ಞಾತಿ ಶಬ್ದ. ನಾಡಿದು ಎಂಬ ರೂಪ ಹತ್ತನೆ ಶತಮಾನದಿಂದ ಪರಿಚಿತ: **"ಕೂಡುವೆ ನಾಳೆ ನಾಡಿದು ಮಹೋತ್ಸವದಿಂ ಜೀವಿತೇಶನೊಳ್"** (ಆದಿಪುರಾಣ ೩-೫೦).

**ನಿಂಬಜೆ** ನಿಂಬಜಾ ಎಂಬ ದೇವತೆಯು ಮಲ್ಲರ ಎಂದರೆ ಮುಷ್ಟಿಯುದ್ಧ ಮುಂತಾದ ಎಲ್ಲ ಬಗೆಯ ಯುದ್ಧಗಳಲ್ಲಿ ಪರಿಣತರ ಮತ್ತು ಪರಿಣತರಾಗಲು ಬಯಸುವವರ ದೇವತೆ. ಜೆಟ್ಟಿಗಳು ಎಂದು ನಾವು ಕರೆಯುವ, ಕುಸ್ತಿ ಮುಂತಾದ ವ್ಯಾಯಾಮವನ್ನು ಮಾಡಿ ರಾಜರ ಆಶ್ರಯದಲ್ಲಿ ಬೆಳಗುವ ಮಲ್ಲವಂಶದವರ ದೇವತೆ.

ಬ್ರಹ್ಮಾಂಡ ಪುರಾಣದ ನೂರ ನಲವತ್ತೊಂದನೆಯ ಅಧ್ಯಾಯದಿಂದ ಹಿಡಿದು ನೂರ ನಲವತ್ತಮೂರನೆಯ ಅಧ್ಯಾಯದವರೆಗೆ ಮಲ್ಲ ವಂಶದ ಮೂಲಪುರುಷನಾದ ದೇವಮಲ್ಲನು ಏಕವೀರಾ ಎಂಬ ಹೆಸರುಳ್ಳ ನಿಂಬಜೆಯನ್ನು ಒಲಿಸಿ ವಜ್ರದಂತನೆಂಬ ರಾಕ್ಷಸನನ್ನು ನಾಶ ಮಾಡಿದ ಕಥೆಯಿದೆ. ಈ ಕಥೆಯನ್ನು ಅಗಸ್ತ್ಯ ಮುನಿಗೆ ಹಯಗ್ರೀವನು

ಹೇಳಿದಂತೆ ಅಲ್ಲಿ ಉಕ್ತವಾಗಿದೆ. ಬ್ರಹ್ಮನಿಂದ ಸೃಷ್ಟಿಹೊಂದಿದ ದೇವಮಲ್ಲನು ನಾರದ ಮಹರ್ಷಿಯ ಉಪದೇಶದಿಂದ ನಿಂಬಜಾ ದೇವಿಯನ್ನು ಪ್ರಾರ್ಥಿಸಿ ವಜ್ರದಂತನನ್ನು ಸಂಹರಿಸುತ್ತಾನೆ. ನಿಂಬಜಾ ದೇವತೆಯನ್ನು ಸೃಷ್ಟಿಸಿದಾತನು ವಿಷ್ಣು. ಆ ದೇವತೆಯನ್ನು ಸೃಷ್ಟಿಸಿದ ಮೇಲೆ ಆ ದೇವತೆಗೆ ಹೀಗೆ ಹೇಳಿದನು.

*ಆಯಿದೇವಿ ಮಹಾಮಾಯೆ ಪರಮಾಯಾ ಪ್ರಭಂಜನೀ*
*ಏಕವೀರಾ ಸಮಾಖ್ಯೇನ ವನಾಂತರ ಕೃತಸ್ಥಿತೇ.*
*ಪ್ರಾಧಾನ್ಯಂ ಆದಿಶಕ್ತೇಸ್ತ್ವಂ ಭವನಿತ್ಯಂ ಪ್ರಮೋದಿತಾ/*

*ಬೋಧಾಗಮಾದಿವೃಕ್ಷೇಷು*
*ಹೃಷ್ಟೇದುಷ್ಟ ವಿನಾಶಿನಿ*
*ನಿಂಬೇ ನಿವಸತಸ್ವಾತ್ತ್ವಂ*
*ನಿಂಬಜಾ ಸಂಜ್ಞಿಕಾಭವ.*

ಬೋಧ ಆಗಮಾದಿ ವೃಕ್ಷಗಳಲ್ಲಿ ಪ್ರೀತಿಯುಳ್ಳವಳಾಗಿ ಬೇವಿನ ವೃಕ್ಷದಲ್ಲಿ ವಾಸಿಸುತ್ತಾ ನಿಂಬಜಾ ಎಂಬ ಹೆಸರನ್ನು ಹೊಂದು.

ಇಂಥ ಮಹಾದೇವತೆಯನ್ನು ಭಜಿಸಿ ದೇವಮಲ್ಲನು ವಜ್ರದಂತನನ್ನು ನಾಶ ಮಾಡಿ ಮಲ್ಲವಂಶಕ್ಕೆ ಮೂಲಪುರುಷನಾದನು. ಕುಮಾರವ್ಯಾಸನು ತನ್ನ ಕರ್ಣ ಪರ್ವದಲ್ಲಿ (೧೯-೪೧) ಈ ದೇವತೆಯನ್ನು ಹೆಸರಿಸಿದ್ದಾನೆ. **ಬಾಳುಗೆಂದರು ನೆನೆದು ನಿಂಬಜೆಯ.**

**ನಿಗದಿತ** ನಿಗದಿಯಾದ ಎಂದರೆ ನಿರ್ಧಾರವಾದ, ನಿಶ್ಚಯವಾದ ಎಂದರ್ಥ. ಇದು ಹೇಗೆ ಬಂದಿದೆ ಎಂದು ಹೇಳುವುದು ಕಷ್ಟ. ಸಂಸ್ಕೃತದ ನಿಗದಿತ ಶಬ್ದಕ್ಕೆ ಘೋಷಣೆ ಮಾಡುವುದು, ಗಟ್ಟಿಯಾಗಿ ಹೇಳುವುದು. ಗದ್ ಧಾತು ಅದಕ್ಕೆ **ವ್ಯಕ್ತಾಯಾಂವಾಚಿ** ಎಂಬುದು ಸಂಸ್ಕೃತದ ವಿವರಣೆ. ಈ ಮಾತಿನಿಂದಲೇ ಕನ್ನಡದಲ್ಲಿ ನಿರ್ಧಾರ ಮಾಡು, ಸ್ಥಿರಪಡಿಸು ಎಂಬ ಅರ್ಥ ಬರುವುದು ಸಾಧ್ಯ. ಮರಾಠಿಯಲ್ಲಿ ನಿಗದಿತ್ ಎಂಬ ಶಬ್ದವಿದೆ. ಅದಕ್ಕೆ ಸಂಬಂಧಪಟ್ಟ ಎಂಬರ್ಥವಿದೆ. ಇದಕ್ಕೂ ಕನ್ನಡದಲ್ಲಿ ಪ್ರಯೋಗವಾಗುವ ನಿಗದಿ ಮಾಡು ಮುಂತಾದ ಮಾತುಗಳಿಗೂ ಸಂಬಂಧವಿದೆಯೇ ತಿಳಿಯದು. ಆದರೆ ಒಪ್ಪಿತ, ಹೇಳಿತ ಮುಂತಾದ ಶಬ್ದಗಳ ಮಾದರಿಯಲ್ಲಿ ನಿಗದಿತ ಆಗಿರಬಹುದು. ಇದು ವಿಚಾರಣೀಯ.

**ನಿಗೂಢ** ಇದು ಸಂಸ್ಕೃತದ ಶಬ್ದ. ಗುಣವಾಚಕವಾಗಿಯೂ ನಾಮವಾಚಕವಾಗಿಯೂ ಪ್ರಯೋಗವಾಗುತ್ತದೆ. ಅರ್ಥ ರಹಸ್ಯವಾದ ಮತ್ತು ರಹಸ್ಯ; ಗೂಢ ಎಂಬ ಶಬ್ದಕ್ಕೆ ನಿ ಎಂಬ ಉಪಸರ್ಗವು ಸೇರಿ ಆಗಿರುವ ರೂಪ ಇದು. ಗೂಢ ಶಬ್ದಕ್ಕೂ ರಹಸ್ಯ ಎಂದೇ ಅರ್ಥ. ನಿ ಸೇರಿದರೆ ಹೆಚ್ಚು ರಹಸ್ಯ, ತುಂಬ ಗುಟ್ಟು ಎಂಬ ಅರ್ಥ ಬರುತ್ತದೆ. ಮುಚ್ಚಿಟ್ಟ, ಅಡಗಿಸಿರುವ, ಕಣ್ಣಿಗೆ ಕಾಣದ ಎಂಬ ಅರ್ಥಗಳೂ ಬರುತ್ತವೆ.

**ನಿಘಂಟು-ಕೋಶ** ಈ ಶಬ್ದಗಳನ್ನು ಪ್ರಾರಂಭದಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸುತ್ತಿದ್ದರು. ನಿಘಂಟು ಎಂಬುದು ವೇದಗಳ ರಹಸ್ಯಾರ್ಥದ ಶಬ್ದಗಳಿಗೆ ಮಾತ್ರ ಸಂಬಂಧಪಟ್ಟದ್ದೆಂದೂ ಕೋಶ ಇತರ ಎಲ್ಲ ಶಬ್ದಗಳಿಗೂ ಸಂಬಂಧಿಸಿದ್ದೆಂದೂ ಪ್ರಯೋಗವಾಗುತ್ತಿತ್ತು. ಈಗ ಎಲ್ಲ ನಿಘಂಟುಗಳಿಗೂ ಕೋಶ ಎಂಬ ಹೆಸರು ಸಲ್ಲುತ್ತದೆ. ಸಂಸ್ಕೃತದಲ್ಲಿ ಕೋಶ- ಕೋಷ ಎಂಬ ಎರಡು ರೂಪಗಳೂ ಸರಿ. **ಕೋಶ ಓದು ದೇಶ ತಿರುಗು** ಎಂಬುದು ಪ್ರಸಿದ್ಧವಾದ ಗಾದೆ.

**ನಿಘಾತ** ಇದು ಸಂಸ್ಕೃತದ ಶಬ್ದ. ಇದಕ್ಕೆ ೧. ಏಟು, ಪೆಟ್ಟು, ಹೊಡೆತ ೨. ಅನುದಾತ್ತ ಸ್ವರದ ಉಚ್ಚಾರಣೆ ಎಂಬ ಎರಡು ಅರ್ಥಗಳಿವೆ.

**ನಿಜಗುಣ** ನಿಜಗುಣ ಎಂದರೆ ಸತ್ಯಶೀಲನಾದ ವ್ಯಕ್ತಿ. ಸತ್ಯಶೀಲ ಸ್ವಭಾವ ಎಂದೂ ಅರ್ಥವಾಗುತ್ತದೆ. ಆದರೆ ನಿಜ ಶಬ್ದಕ್ಕೆ ಆಳವಾದ ಅರ್ಥವನ್ನು ತುಂಬಿದ್ದಾರೆ ವಚನಕಾರರು. ನಿಜ ಎಂದರೆ The Only Truth. ಪರಮಾತ್ಮ ಶಿವ. ನಿಜವಸ್ತು, ನಿಜಸ್ವರೂಪ, ನಿಜ ಜ್ಞಾನಮೂರ್ತಿ, ನಿಜಲಿಂಗ, ನಿಜೈಕ್ಯಪದ ಮುಂತಾದ ಶಬ್ದಗಳಲ್ಲಿ ನಿಜ ಎಂದರೆ ಪರಮಸತ್ಯ, ಪರಮಾತ್ಮ ಎಂಬುದೇ ಅರ್ಥ. ನಿಜ ಎಂದರೆ ಶಿವಜ್ಞಾನ, ಎಂದು ವಚನಗಳು ಸ್ಪಷ್ಟಪಡಿಸುತ್ತವೆ. ಹೀಗಿರುವುದರಿಂದ ನಿಜಗುಣ ಎಂಬುದೂ ಪರಮಾತ್ಮನೇ. ಇದೆಲ್ಲ ದರ್ಶನಗಳ ಲೋಕ. ಅನೇಕ ಕವಿಗಳು ಸನ್ಯಾಸಿಗಳು ನಿಜಗುಣ ಎಂಬ ಹೆಸರನ್ನು ಹೊಂದಿದ್ದಾರೆ. ಸು. ೧೫೦೦ ರಲ್ಲಿದ್ದ ನಿಜಗುಣ ಶಿವಯೋಗಿಯು ಏಳು ಗ್ರಂಥಗಳನ್ನು ಬರೆದಿದ್ದಾನೆ. ಆತನ ವಿವೇಕ ಚಿಂತಾಮಣಿ ಎಂಬುದು ಬಹು ಪ್ರಸಿದ್ಧವಾದ ಗ್ರಂಥ. ಆ ಕವಿಯು ರಚಿಸಿರುವ **ಜ್ಯೋತಿ ಬೆಳಗುತಿದೆ, ವಿಮಲ ಪರಂಜ್ಯೋತಿ ಬೆಳಗುತಿದೆ** ಎಂಬ ಜನಪ್ರಿಯ ತತ್ತ್ವ ಪದವನ್ನು ಎಲ್ಲರೂ ಕೇಳಿರಬಹುದು.

**ನಿದರ್ಶನ** ನೋಡಿ: ಉದಾಹರಣೆ

**ನಿದಾನ** ನಿದಾನ ಎಂಬ ಶಬ್ದಕ್ಕೆ ವೈದ್ಯಶಾಸ್ತ್ರದಲ್ಲಿ ಪಾರಿಭಾಷಿಕ ಅರ್ಥವಿದೆ. ರೋಗ - ಕಾರಣ ಎಂಬುದು ಮೊದಲ ಅರ್ಥ. ಅದರ ಬಳಿಕ ವ್ಯಾಪಕವಾಗಿ ಪರಿಹಾರೋಪಾಯ ಎಂಬ ಅರ್ಥ ಬರುತ್ತದೆ. ಕುಮಾರವ್ಯಾಸನ ಈ ವಾಕ್ಯವನ್ನು ಗಮನಿಸಿ: **ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು ಇದು ನಿದಾನವು ಕರ್ಣ.** ಯುದ್ಧವು ಎದುರು ನಿಂತಿರುವಾಗ ಅದರ ಪರಿಹಾರಕ್ಕೆ ಇದೊಂದೇ ಪರಿಹಾರೋಪಾಯ, ಎಂದು ಅರ್ಥ. ಇಂಗ್ಲಿಷಿನಲ್ಲಿ ರೋಗ ನಿದಾನ ಎಂಬುದಕ್ಕೆ Diagnosis ಎಂಬ ಶಬ್ದವಿದೆ. ಈ ಶಬ್ದಕ್ಕೆ ರೋಗದ ಬಗ್ಗೆ ಎಲ್ಲ ಬಗೆಯ ಪರಿಶೀಲನೆ ಎಂದೂ ಆ ಪರಿಶೀಲನೆಯಿಂದ ತೆಗೆದುಕೊಂಡ ನಿರ್ಧಾರ ಎಂದೂ ಅರ್ಥವಿದೆ. ಈ ಎರಡು ಶಬ್ದಗಳಿಗೂ ಒಂದೇ ಅರ್ಥ.

**ನಿದ್ರೆ - ನಿದ್ದೆ** ನಿದ್ರಾ ಸಂಸ್ಕೃತ ಶಬ್ದ. ನಿದ್ರೆ, ನಿದ್ದೆ ಎರಡೂ ತದ್ಭವವಾಗುತ್ತದೆ. ಅದನ್ನು ಕ್ರಿಯಾಪದವಾಗಿ ಮಾಡಬಹುದು. ನಿದ್ದೆ ಅಥವಾ ನಿದ್ರೆ + ಇಸು = ನಿದ್ದಿಸು, ನಿದ್ರಿಸು. **ನಿದ್ರೆ, ಮಲಗು, ಮಂಪರು, ಪವಡಿಸು, ಅಡ್ಡಾಗು** ಎಂಬ ಶಬ್ದಗಳನ್ನು ಒಟ್ಟಾಗಿ ಪರಿಶೀಲಿಸೋಣ.

ಒಂದು ಭಾಷೆಯಲ್ಲಿರುವ ಎಲ್ಲ ಶಬ್ದಗಳೂ ಸೂಕ್ತವಾದ ಶಬ್ದಗಳೇ. ಆದರೆ ಅವುಗಳ ಅರ್ಥವನ್ನು ಗಮನಿಸಿ, ಸಮಯಕ್ಕೆ ಸರಿಯಾದುದನ್ನು ಆರಿಸಬೇಕಾದದ್ದು ನಮ್ಮ ಕರ್ತವ್ಯ. ಸಂಸ್ಕೃತದ ನಿದ್ರಾ ಕನ್ನಡದ ನಿದ್ರೆ. ಇದು ನಾಮಪದ. ನಿದ್ದೆ ಎಂಬ ರೂಪವೂ ಇದೆ. ಇಂಗ್ಲಿಷಿನ Sleepಎಂಬುದಕ್ಕೆ ಸಮಾನ. ಆದರೆ Sleepಕ್ರಿಯಾಪದವೂ ಆಗಬಹುದು. ನಿದ್ರೆ ಹಾಗೆ ಉಪಯೋಗಕ್ಕೆ ಬರುವುದಿಲ್ಲ. ಅವನು ನಿದ್ರಿಸುತ್ತಿದ್ದಾನೆ, ಅವನಿಗೆ ನಿದ್ರೆ ಬಂದಿದೆ. ಹೀಗೆ ಉಪಯೋಗಿಸಬೇಕು. ನಿದ್ರೆ ಎಂಬುದಕ್ಕೆ ಆಲಸ್ಯ, ಸೋಮಾರಿತನ, ಸಮಾಧಾನ, ನೆಮ್ಮದಿಯಿಂದ ಇರುವಿಕೆ ಮುಂತಾದ ಅರ್ಥಗಳು ಹೊಮ್ಮುವ ಒಂದು ಸಾಲನ್ನು ಕುವೆಂಪು ಅವರು ರಚಿಸಿದ್ದಾರೆ. ಕಲ್ಕಿ ಕವನದ ಕೊನೆಯ ಎರಡು ಸಾಲನ್ನು ನೋಡಿ. **'ಕನಸೊಡೆದೆದ್ದೆ ಇನ್ನೆಲ್ಲಿಯ ನಿದ್ದೆ'.**

ಮಲಗು, ಪವಡಿಸು ಎಂಬುದನ್ನು ಒಂದೇ ಅರ್ಥದಲ್ಲಿ ಬಳಸಬಹುದು. ಆದರೆ ಮಲಗಿರುವವನಿಗೆ ನಿದ್ರೆ ಬಂದಿರಬೇಕಾಗಿಲ್ಲ. ನೆಲದ ಮೇಲೆ ಕಾಲುಗಳನ್ನು ಚಾಚಿ ನೀಳವಾಗಿ ಇರುವುದಕ್ಕೆ ಮಲಗು ಎಂದು ಹೇಳಬಹುದು. ಹಾಸಿಗೆಯ ಮೇಲೂ ಮಲಗಬಹುದು.

ಪವಡಿಸು ಇದು ಕಾವ್ಯದ ಭಾಷೆಯಲ್ಲಿ ಮಾತ್ರ ಹೆಚ್ಚಾಗಿ ಉಪಯೋಗಿಸುತ್ತಾರೆ. **ಪವಡಿಸು ಪರಮಾತ್ಮನೆ** ಎಂಬ ಹಾಡಿನಲ್ಲಿರುವಂತೆ! ಕಾವ್ಯದಲ್ಲಿ ಮಲಗು ಎಂಬುದನ್ನು, ಒರಗು, ವಾಲು ಎಂಬ ಅರ್ಥದಲ್ಲಿಯೂ ಉಪಯೋಗಿಸಿದ್ದಾರೆ. ಮಲಗು ಶಬ್ದಕ್ಕೆ ಸೊಗಸಾದ ಅರ್ಥ ಬರುವಂತೆ ಬೇಂದ್ರೆಯವರು ಒಂದು ಸಾಲನ್ನು ರಚಿಸಿದ್ದಾರೆ.

**ಬುದ್ಧ ಬುದ್ಧ**
**ಜಗವೆಲ್ಲ ಮಲಗಿರಲು**
**ಅವನೊಬ್ಬನೆದ್ದ.**

ಇಲ್ಲಿ ಮಲಗಿರಲು ಎಂದರೆ ಅಜ್ಞಾನದಲ್ಲಿ ಮುಳುಗಿರಲು ಎಂದರ್ಥ. ಮಂಪರು ಎಂಬುದು ತೂಕಡಿಕೆಯನ್ನು ಸೂಚಿಸುತ್ತದೆ. ಅಡ್ಡಾಗು ಇದು ನಿದ್ದೆ ಮಾಡುವ ಉದ್ದೇಶವಿಲ್ಲದೆ ಸ್ವಲ್ಪ ಹೊತ್ತು ವಿಶ್ರಾಂತಿಗಾಗಿ ಮಲಗುವುದನ್ನು ಸೂಚಿಸುತ್ತದೆ. Rest ಎಂಬ ಶಬ್ದದ ಅರ್ಥ ಅದರಲ್ಲಿದೆ.

ನಿಧನ ನಿಧನ ಎಂಬ ಶಬ್ದಕ್ಕೆ ಎರಡು ಬಗೆಯ ವ್ಯುತ್ಪತ್ತಿ ಇದೆ. ಧನ ಶಬ್ದಕ್ಕೆ ನಿ ಉಪಸರ್ಗವನ್ನು ಸೇರಿಸಿದಾಗ ನಿಧನ ಎಂಬುದಕ್ಕೆ ದರಿದ್ರನಾದ, ಆಸ್ತಿಯಿಲ್ಲದ, ಸಿರಿಯಿಲ್ಲದ ಎಂಬ ಗುಣವಾಚಕದ ಅರ್ಥ ಬರುತ್ತದೆ. ನಿಧನತಾ ಎಂದರೆ ಬಡತನ, ದಾರಿದ್ರ್ಯ ಎಂದು ಅರ್ಥ. ಧಾ ಎಂಬ ಧಾತುವಿನಿಂದ ನಿಧನ ಎಂಬುದನ್ನು ಸಾಧಿಸಬಹುದು. ಆಗ ಆ ಶಬ್ದಕ್ಕೆ ೧. ವಾಸಸ್ಥಳ, ೨. ಪಾತ್ರೆ, ೩. ಮುಕ್ತಾಯ, ೪. ಸಾವು ಮುಂತಾದ ಅರ್ಥಗಳು ಬರುತ್ತವೆ.

ಸಾಮಾನ್ಯವಾಗಿ ಕನ್ನಡದಲ್ಲಿ ನಿಧನ ಎಂಬ ಶಬ್ದವನ್ನು ಸಾವು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ನಿಧನ ಹೊಂದು ಎಂಬುದು ಸರಿಯಾದ ಪದಪುಂಜ. ನಿಧನರಾದರು ಎಂಬುದು ವ್ಯಾಕರಣದ ಪ್ರಕಾರ ತಪ್ಪು. ಇದು ತಿಳಿದಿರಬೇಕು. ನಿಧನ ಕ್ರಿಯೆ ಎಂದರೆ ಉತ್ತರ ಕ್ರಿಯೆ ಎಂಬ ಅರ್ಥವಿದೆ. ಕೇವಲ 'ಧಾ' ಎಂಬ ಧಾತುವಿಗೆ ೧. ಇಡು, ೨. ಉಳಿಸು, ೩. ಕೆಳಗಿಳಿಸು ಮುಂತಾದ ಅರ್ಥಗಳಿವೆ.

ಧನ ಶಬ್ದದಿಂದ ಸಧನ ಎಂಬ ಶಬ್ದವನ್ನು ಸಾಧಿಸಬಹುದು. ಸಿರಿವಂತನಾದ ಎಂಬ ಗುಣವಾಚಕದ ಅರ್ಥ ಬರುತ್ತದೆ.

**ನಿಪ್ಪಯಣ** ಪ್ರಯಾಣ ಮಾಡುವಾಗ ಎಲ್ಲಾದರೂ ಒಂದು ಕಡೆ ಆಯಾಸ ಪರಿಹಾರಕ್ಕಾಗಿ ಸ್ವಲ್ಪ ಕಾಲ ತಂಗುವುದು. ವಿರಾಮ ಪಡೆಯುವುದು. ಇದಕ್ಕೆ ನಿಪ್ಪಯಣ ಎಂದು ಹೆಸರು. ಪ್ರಯಾಣ ಎಂಬ ಸಂಸ್ಕೃತ ಶಬ್ದ ಪಯಣ ಎಂದು ತದ್ಭವವಾಗುತ್ತದೆ. ಅದಕ್ಕೆ ಹಿಂದೆ ನಿಸ್ ಎಂಬ ಉಪಸರ್ಗ ಸೇರಿ ಈ ರೂಪ ಉಂಟಾಗಿದೆ.

**ನಿಬ್ಬೆರಗು** ಅತ್ಯಧಿಕವಾದ ಆಶ್ಚರ್ಯ ನಿಡಿದಾದ +ಬೆರಗು. ಬೆರಗು ಎಂಬುದು ಹಳಗನ್ನಡದ ಬೆಱಗು ಎಂಬ ಶಬ್ದದಿಂದ ಬಂದಿದೆ.

**ನಿಮಿಷಾಂಬ-ಅನಿಮಿಷಾಂಬ** ಅನಿಮಿಷಾಂಬ ಎಂಬುದು ದೇವತೆಯ ಹೆಸರು. ಶ್ರೀರಂಗಪಟ್ಟಣದ ಬಳಿಯ ಗಂಜಾಂ ಎಂಬ ಪ್ರದೇಶದಲ್ಲಿ ಒಂದು ಪ್ರಸಿದ್ಧವಾದ ದೇವಾಲಯವಿದೆ. ಅನಿಮಿಷ ಎಂದರೆ ಕಣ್ಣಿನ ರೆಪ್ಪೆಯನ್ನು ಮಿಟುಕಿಸದಿರುವ ವ್ಯಕ್ತಿ ಎಂದು ಅರ್ಥ. ಅಂದರೆ ದೇವತೆ ಎಂದರ್ಥ. ಸಂಸ್ಕೃತದಲ್ಲಿ ಈ ಶಬ್ದಕ್ಕೆ ಹೀಗೆ ವಿವರಣೆಯಿದೆ. **ನಾಸ್ತಿ ನಿಮಿಷಃ ಚಕ್ಷುಸ್ಪಂದನಂ ಯಸ್ಯ ಅನಿಮಿಷಃ.** ಈ ಶಬ್ದಕ್ಕೆ ವಿಷ್ಣು ಎಂಬ ಅರ್ಥವೂ ಇದೆ. ಅಂಬಾ ಎಂದರೆ ಮಾತೆ. ಅನಿಮಿಷ ಎಂಬ ಹೆಸರಿನ ಮಾತೆ, ದೇವತೆ ಎಂದು ಆ ಶಬ್ದದ ಒಟ್ಟು ಅರ್ಥ. ನಿಮಿಷಾಂಬ ಎಂದರೆ ಕಣ್ಣು ಮುಚ್ಚಿರುವ ದೇವತೆ ಎಂದು ಅರ್ಥ.

**ನಿಯೋಗ ಪುತ್ರ** ವಿಧವೆಯಾದವಳಿಗೆ ಮಕ್ಕಳಿಲ್ಲದಿದ್ದರೆ ಅಂಥವಳಲ್ಲಿ ಪುತ್ರನನ್ನು

ಪಡೆಯುವುದಕ್ಕಾಗಿ ಅವಳ ಪತಿಯ ಸಹೋದರನನ್ನು ಗೊತ್ತುಮಾಡುವುದು ನಿಯೋಗ. ಇದು ಮನುಧರ್ಮಶಾಸ್ತ್ರದ ಮಾತು. ಹಾಗೆ ಹುಟ್ಟಿದ ಮಗ - ನಿಯೋಗ ಪುತ್ರ. ಆ ಉಕ್ತಿ ಹೀಗಿದೆ:

*ದೇವರಾದ್ವಾ ಸಪಿಂಡಾದ್ವಾ ಸ್ತ್ರಿಯಾ ಸಮ್ಯಕ್ ನಿಯುಕ್ತಯಾ*
*ಪ್ರಜೇಪ್ಸಿತಾಧಿಗಂತವ್ಯಾ ಸಂತಾನಸ್ಯ ಪರಿಕ್ಷಯೇ* *ಮನುಸ್ಮೃತಿ ೯-೫೯.*

ನಿಯೋಗದ ಪದ್ಧತಿಯಲ್ಲಿ ಕಾಲಾನುಕ್ರಮದಲ್ಲಿ ವ್ಯತ್ಯಾಸಗಳು ತಲೆದೋರಿವೆ ಎಂಬುದನ್ನು ಸಮಾಜ ಶಾಸ್ತ್ರಜ್ಞರು ಗುರುತಿಸಿದ್ದಾರೆ.

**ನಿರಂಜನ** ಈ ಶಬ್ದವು ಬಹು ಅರ್ಥವುಳ್ಳದ್ದು *೧.* ದೋಷರಹಿತವಾದದ್ದು. *೨.* ಅಜ್ಞಾನರಹಿತನಾದ ಪರಮಾತ್ಮ *೩.* ಶಿವ, ಪರಮೇಶ್ವರ *೪.* ಹುಣ್ಣಿಮೆ *೫.* ದುರ್ಗಾದೇವಿ. ಅಂಜನ ಎಂದರೆ ಅಜ್ಞಾನ. ಈ ಅರ್ಥವಲ್ಲದೆ ಇನ್ನೂ ೧೦-೧೨ ಅರ್ಥಗಳಿವೆ. ಕೆಲವಕ್ಕೆ ಕಳಂಕ, ಕೊಳೆ, ಕತ್ತಲೆ ಇವುಗಳಿಗೆ ಸಂಬಂಧಪಟ್ಟ ಅರ್ಥಗಳಿರುತ್ತವೆ. ಆದುದರಿಂದ ಬೆಳಕು - ಜ್ಞಾನ ಇವುಗಳಿಗೆ ಸಂಬಂಧಿಸಿರುವ ಶಬ್ದ ನಿರಂಜನ. ಅಂದರೆ ಜ್ಞಾನಿ, ಶುಭ್ರನಾದವನು ಮುಂತಾಗಿ ಅರ್ಥ.

**ನಿರಕ್ಷರ ಕುಕ್ಷಿ** ಈ ಸಮಾಸ ಶಬ್ದಕ್ಕೆ ಅಕ್ಷರಜ್ಞಾನವಿಲ್ಲದ ಮನುಷ್ಯ ಎಂದರ್ಥ. ಇದೊಂದು ವಿಚಿತ್ರ ಸಮಾಸ. ಕುಕ್ಷಿ ಎಂಬ ಶಬ್ದಕ್ಕೆ ಮೊದಲ ಅರ್ಥ ಒಂದು ಗವಿ. ಒಬ್ಬ ವ್ಯಕ್ತಿಯ ದೇಹವನ್ನೇ ಒಂದು ಗವಿಯನ್ನಾಗಿ ಕಲ್ಪಿಸಿ ಅಲ್ಲಿ ಎಷ್ಟು ಹುಡುಕಿದರೂ ಒಂದು ಅಕ್ಷರವೂ ಸಿಕ್ಕುವುದಿಲ್ಲ ಎಂದು ಅರ್ಥ ಬರುವಂತೆ ಯಾರೋ ವಿದ್ವಾಂಸರು ಮಾಡಿರುವ ವ್ಯಂಗ್ಯವಾದ ಸಮಾಸ. ಆದರೆ ಅದರಲ್ಲಿ ಎರಡು ಪ್ರಾಸಗಳು ಸೇರಿ ಬಯ್ಯಲು ಬಾಯಿತುಂಬ ಬರುವ ಶಬ್ದ ಇದು. ಸ್ವಾರಸ್ಯವಾದ ಶಬ್ದ.

**ನಿರಪೇಕ್ಷತೆ - ಸಾಪೇಕ್ಷತೆ** ಸಾಹಿತ್ಯ ವಿಮರ್ಶೆಯಲ್ಲಿ ಸಾಪೇಕ್ಷತೆ - ನಿರಪೇಕ್ಷತೆ ಎಂದರೇನು ? ಸಾಹಿತ್ಯ ವಿಮರ್ಶೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ subjective ಮತ್ತು objective ಎಂಬ ಶಬ್ದಗಳನ್ನು ಉಪಯೋಗಿಸುತ್ತಾರೆ. ಮೇಲಿನ ಕನ್ನಡದ ಶಬ್ದಗಳು ಇವುಗಳ ಅನುವಾದದ ಒಂದು ಸ್ವರೂಪ.

ಸಾಪೇಕ್ಷತೆ ಎಂದರೆ ಲೇಖಕ ತನ್ನಲ್ಲಿ ಹೆಚ್ಚು ಆಸಕ್ತಿಯನ್ನೂ ಗಮನವನ್ನು ಕೇಂದ್ರೀಕರಿಸಿರುವುದು. ಸ್ವಂತ ಭಾವನೆಗಳೂ ಅನುಭವಗಳೂ ಹೆಚ್ಚಾಗಿರುವ ಬರಹವನ್ನು ಸಾಪೇಕ್ಷ ಎಂದು ಕರೆಯಬಹುದು. ವಿಮರ್ಶೆಯೂ ಕೂಡ ವೈಯಕ್ತಿಕ ಪ್ರತಿಕ್ರಿಯೆಯನ್ನು ಸೂಚಿಸುವ ಬರಹವಾಗಿರಬಹುದು. ಅದು ಸಾಪೇಕ್ಷ ವಿಮರ್ಶೆ. ಈಚೆಗೆ objective ಶಬ್ದಕ್ಕೆ ವಸ್ತುನಿಷ್ಠ ಎಂಬುದನ್ನು subjective ಶಬ್ದಕ್ಕೆ ವ್ಯಕ್ತಿನಿಷ್ಠ ಶಬ್ದವನ್ನು ಉಪಯೋಗಿಸುತ್ತಿದ್ದಾರೆ. ಸಾಪೇಕ್ಷ ಶಬ್ದ ವಿಜ್ಞಾನದ relative ಶಬ್ದಕ್ಕೆ ಸಮಾನವಾಗುತ್ತಿದೆ. ನಿರಪೇಕ್ಷತೆ ಸ್ವಂತ ಆಲೋಚನೆಗಳನ್ನು ದೂರ ಮಾಡಿ ಹೊರಗಣ ಪ್ರದೇಶದಲ್ಲಿ ನಿಂತು ತನ್ನ ಮನಸ್ಸಿಗೂ ಹೊರಗಾದ ವಸ್ತುಗಳಲ್ಲಿ ಗಮನವನ್ನು ಕೇಂದ್ರೀಕರಿಸಿರುವುದು. ಇದಕ್ಕೆ aesthetic distance ಎಂಬ ಶಬ್ದವನ್ನು ಇಂಗ್ಲಿಷಿನಲ್ಲಿ ಈ ಸಂದರ್ಭದಲ್ಲಿ ಉಪಯೋಗಿಸುತ್ತಾರೆ. ನಿರಪೇಕ್ಷ ಶಬ್ದ ವಿಜ್ಞಾನದ absolute ಶಬ್ದಕ್ಕೆ ಸಮ.

**ನಿರಾಶೆ** ಇದು ಸಂಸ್ಕೃತದ ನಿರಾಶಾ ಶಬ್ದದ ತದ್ಭವ. ಯಾವ ಬಯಕೆಯೂ ನಿರೀಕ್ಷೆಯೂ ಇಲ್ಲದಿರುವಿಕೆ. ಇದರಲ್ಲಿ ಭವಿಷ್ಯದಲ್ಲಿ ಯಾವುದೂ ಒಳ್ಳೆಯದು ಆಗುವುದಿಲ್ಲವೆಂಬ ನಿಶ್ಚಯ ಮನಸ್ಸಿನಲ್ಲಿ ಮೂಡಿರುತ್ತದೆ. ಇದು ದೇಶದಲ್ಲಿರುವ ಜನರಲ್ಲಿ ಹೆಚ್ಚಾದರೆ ದೇಶಕ್ಕೆ ಅಪಾಯ. ಇದರಿಂದ ತಪ್ಪಿಸಿಕೊಳ್ಳುವ ಎಚ್ಚರಿಕೆಯನ್ನು ದೇಶದ ಜನರೇ ಹೊಂದಬೇಕು.

ನಿರಾಳ ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ ಹೆಸರಿಟ್ಟು ಕರೆದವರು ಯಾರೋ? **ಅಕಟಕಟ ಶಬ್ದದ ಲಜ್ಜೆಯ ನೋಡಾ! ಗುಹೇಶ್ವರನರಿಯದ ಅನುಭಾವಿಗಳೆಲ್ಲರ ತರಕಟಗಾಡಿತ್ತು!**

ಈ ವಚನದ ಅರ್ಥ ಹೀಗಿದೆ: ನಿರಾಳ ಎಂಬುದೇನು? ಮಾನವ ಸಂಸಾರದಲ್ಲಿ ಹುಟ್ಟುವ ಮಕ್ಕಳಿಗೆ ಬಾಯಲ್ಲಿ ಬೆಣ್ಣೆಯನ್ನು ಹಾಕಿ ರಕ್ಷಿಸಿ, ಅವುಗಳಿಗೆ ನಾಮಕರಣ ಮಾಡಿ ಹೆಸರು ಹಿಡಿದು ಕರೆಯುವಂತೆ ನಿರಾಳ ಎಂಬುದನ್ನು ಕರೆಯಲು ಬರುತ್ತದೆಯೇ?

ನಿರಾಳ ಇದು ಅನುಭಾವಿಗಳು ಅಪಾರವಾದ ಅರಿವಿನಿಂದ ಪಡೆಯುವ ನಿಶ್ಚಿಂತೆಯ ಸ್ಥಿತಿ. ಆದರೆ ನಿರಾಳ ಶಬ್ದವನ್ನು ಯಾರೂ ವರ್ಣಿಸಲಾರರು. ಭಾಷೆ ಅಲ್ಲಿ ತುಂಬ ದುರ್ಬಲವಾದುದು. ನಿರಾಳವಾಗಿರುವ ಸ್ಥಿತಿ ಅನಿರ್ವಚನೀಯವಾದುದು. ಯಾವ ಅನುಭಾವಿಯೂ ಆ ಸ್ಥಿತಿಯನ್ನು ವರ್ಣಿಸಲಾರ. ಅಂಥ ಪರಮ ಶ್ರೇಷ್ಠವಾದ ಅನುಭವ ಅದು. ಆ ಸ್ಥಿತಿಯನ್ನು ಈ ವಚನದಲ್ಲಿ ಅಲ್ಲಮಪ್ರಭು ಸಶಕ್ತವಾಗಿ ವರ್ಣಿಸಿದ್ದಾನೆ, ಒಂದು ಮಾತಿನ ಮೂಲಕ - ಅದೇ ಶಬ್ದದ ಲಜ್ಜೆ. ಇದು ಬಹು ಪ್ರಸಿದ್ಧವಾದ ಒಂದು ವಚನ. ಚಿಂತಿಸಿದಷ್ಟೂ ಹೆಚ್ಚು ಹೆಚ್ಚು ಅರ್ಥವನ್ನು ನೀಡುವ ಈ ವಚನಕ್ಕೆ ಸಮಾನವಾಗಿರುವ ವಚನವನ್ನು ಇತರ ವಚನಕಾರರ ವಚನಗಳಲ್ಲಿ ಹುಡುಕುವುದು ಸೊಗಸಾದ ರಸಾಸ್ವಾದನ ಯಾತ್ರೆಯಾಗುತ್ತದೆ.

**ನಿರೋಧ – ವಿರೋಧ** ನಿರೋಧ ಎಂದರೆ ಅಡ್ಡಿಪಡಿಸುವುದು, ಹತೋಟಿಯಲ್ಲಿಡುವುದು, ಬಂಧಿಸುವುದು ಮುಂತಾಗಿ ಅರ್ಥಗಳಿವೆ. ವಿರೋಧ ಎಂದರೆ ೧. ವೈರ, ದ್ವೇಷ ೨. ಅಡ್ಡಿ, ನಿರ್ಬಂಧ, ೩. ಕಲಹ, ೪. ನಾಶ ಇತ್ಯಾದಿ ಅರ್ಥಗಳಿವೆ. ಎರಡರಲ್ಲೂ ಸಂಬಂಧ ಉಂಟು.

**ನಿರ್ಘೃಣ** ಈ ಶಬ್ದದಲ್ಲಿ ಘೃಣ ಎಂಬ ಶಬ್ದಕ್ಕೆ ನಿರ್ ಎಂಬ ಉಪಸರ್ಗ ಸೇರಿದೆ. ಘೃಣ ಎಂದರೆ ದಯೆ, ಕನಿಕರ. ನಿರ್ ಎಂಬುದು ಅದರ ನಿಷೇಧವನ್ನು ತಿಳಿಸುತ್ತದೆ **ನಿರ್ಗತಾ ಘೃಣಾ ಯಸ್ಮಾತ್** ಎಂಬುದು ವಿವರಣೆ. ನಿಷ್ಕರುಣೆ, ದಯೆ ಇಲ್ಲದವನು.

**ನಿರ್ಜರ** ದೇವತೆ ಎಂದರ್ಥ. ಜರ ಎಂದರೆ ಮುಪ್ಪು. ಮುಪ್ಪಿಲ್ಲದವರು ದೇವತೆಗಳು. ಅವರು ಅಮರರೂ ಆಗಿರುತ್ತಾರೆ. ಎಂದರೆ ಮರಣವೂ ಅವರಿಗೆ ಇಲ್ಲ. ಇದು ಸಂಸ್ಕೃತ ಶಬ್ದ.

**ನಿರ್ದಿಗಂತ** ದಿಗಂತ ಎಂಬ ಶಬ್ದವು **ದಿಶಾಂ ಅಂತಃ** ಎಂದರೆ ದಿಕ್ಕುಗಳ ಕೊನೆ ಎಂದರ್ಥ ಕೊಡುವ ಸಂಸ್ಕೃತದ ಶಬ್ದ. ಇದಕ್ಕೆ ಕ್ಷಿತಿಜ ಎಂಬ ಬೇರೆಯ ಶಬ್ದವೂ ಇದೆ. ನಿರ್ (ನಿಸ್) ಎಂಬುದು ಒಂದು ಉಪಸರ್ಗ. ನಿರ್ + ದಿಗಂತ = ನಿರ್ದಿಗಂತ ಎಂದರೆ ದಿಗಂತವೇ ಇಲ್ಲದಿರುವಂತೆ ಆಗು. ಇದು ಶ್ರೀ ಪುಟ್ಟಪ್ಪನವರ ಅನಿಕೇತನ ಎಂಬ ಕವನದಲ್ಲಿ ಬರುವ ಸೊಗಸಾದ ಶಬ್ದ.

**ನಿರ್ದೇಶನ** ನಾವು ಯಾವುದನ್ನು ಅರ್ಕಾವೊತ್ತು ಎಂದು ಕರೆಯುತ್ತೇವೋ ಅದು ಅರ್‌ಕಾರದ ಒತ್ತು. ಕನ್ನಡದ ವ್ಯಾಕರಣಕಾರರು ಯಾರೂ ಇದನ್ನು ಕುರಿತು ವಿವರಣೆಯನ್ನು ನೀಡುವುದಿಲ್ಲ. ಪ್ರಸಿದ್ಧ ವೈಯಾಕರಣನಾದ ಕೇಶಿರಾಜನು ರ ಕಾರದ ಒತ್ತಿರುವ ಅಕ್ಷರಗಳಿಗೂ ಅರ್ ಕಾರದ ಗುರುತು ಸೇರಿರುವ ಅಕ್ಷರಗಳಿಗೂ ಒಟ್ಟಿಗೆ **'ಸರೇಫ ಪದಂಗಳ್'** ಎಂದೂ **'ರೇಫ ಸಂಯೋಗಂಗಳ್'** ಎಂದೂ ಹೆಸರು ಹೇಳಿದ್ದಾನೆ. ಈ ೯ ಎಂಬಂತೆ ಬರೆಯುವ ಅರ್‌ಕಾರದೊತ್ತಿನ ಬರಹದ ಅಭ್ಯಾಸವೂ ನಮಗೆ ಸಂಸ್ಕೃತದಿಂದಲೇ ಬಂದುದು. ಕೆಲವರು ಈ ಋ ಅಕ್ಷರ ಕನ್ನಡಕ್ಕೆ ಬೇಕಿಲ್ಲ ಎಂದೂ ಹೇಳುತ್ತಾರೆ. ಆದರೆ ಕನ್ನಡಕ್ಕೆ ಅದು ಬೇಡವೇ ಬೇಡ ಎನ್ನುವಂತಿಲ್ಲ. ಸಂಸ್ಕೃತ ಕನ್ನಡ ವರ್ಣಮಾಲೆಗಳೆರಡಲ್ಲಿಯೂ ಇರುವ ಋಕಾರವು ಶಬ್ದಗಳ ಮಧ್ಯೆ ಬಂದಾಗ ಈ ೯ ಚಿಹ್ನೆಯ ಪ್ರಯೋಜನವಿದೆ. ಉದಾಹರಣೆಗೆ ಹೋತೃ + ಋಕಾರ = ಹೋತೃಕಾರ ಎಂಬ

ಸವರ್ಣ ದೀರ್ಘ ಸಂಧಿಯಲ್ಲಿ ಋ ಪ್ರಯೋಗವು ಕಂಡುಬರುತ್ತದೆ. ಬ್ರಹ್ಮ + ಋಷಿ, ಸಪ್ತ + ಋಷಿಗಳು, ರಾಜ + ಋಷಿ ಎಂಬ ಶಬ್ದಗಳು ಸೇರಿ ಸಂಧಿಯಾದಾಗ ಬ್ರಹ್ಮರ್ಷಿ, ಸಪ್ತರ್ಷಿಗಳು, ರಾಜರ್ಷಿ ಎಂಬ ಶಬ್ದಗಳು ಉಂಟಾಗುತ್ತವೆ. ಇಲ್ಲಿ ಅರ್ ಕಾರವು ರೂಪು ತಳೆದಿರುವುದನ್ನು ನಾವು ಕಾಣಬಹುದು. ಕನ್ನಡದಲ್ಲಿ ರ ಕಾರವನ್ನೇ ಉಪಯೋಗಿಸಿ ಶಬ್ದಗಳನ್ನು ಬರೆದರೆ 'ರ್ಷಿ' ಎಂಬುದಕ್ಕೂ 'ಷಿ' ಎಂಬುದಕ್ಕೂ ವ್ಯತ್ಯಾಸವನ್ನು ಕಂಡುಹಿಡಿಯುವುದು ಬರಹದಲ್ಲಿ ಕಷ್ಟವಾಗುತ್ತದೆ. ಇಂಥ ಸಂದರ್ಭಗಳಲ್ಲಿ ೯ ಸಂಜ್ಞೆ ತುಂಬ ಪ್ರಯೋಜನಕಾರಿಯಾಗಿದೆ.

ನಿರ್ದೇಶನ, ಸೂರ್ಯ, ಮರ್ಯಾದೆ, ಕಾರ್ಯಾಚರಣೆ — ಹೀಗೆ ಶಬ್ದಗಳನ್ನು ಕನ್ನಡದಲ್ಲಿ ಬರೆದುಬಿಡಬಹುದು. ಸಂಸ್ಕೃತದ ಬರಹದಲ್ಲಿ ರ ಕಾರಕ್ಕೆ ್ರ ಒತ್ತನ್ನು ಕೊಟ್ಟು ಬರೆಯುವ ಪದ್ಧತಿ ಗೌರವಿಸಲ್ಪಟ್ಟಿಲ್ಲ. ಸಂಸ್ಕೃತದಲ್ಲಿ, ಇದು ಹಿಂದಿನ ಅರ್‌ಕಾರ. ಕನ್ನಡದಲ್ಲಿ ೯ ಎಂದು ಗುರುತಿಸುವ ಅರ್‌ಕಾರದೊತ್ತನ್ನು ಅಕ್ಷರಗಳ ಕಾಗುಣಿತವೆಲ್ಲ ಪೂರೈಸಿದ ಮೇಲೆ ಕೊನೆಯಲ್ಲಿ ಸೇರಿಸುತ್ತಾರೆ. ಇದು ಸಂಸ್ಕೃತದಲ್ಲಿ ಎಲ್ಲರೂ ಅನುಸರಿಸುವ ಸಂಪ್ರದಾಯ. ಸಂಸ್ಕೃತದಲ್ಲಿ ಬರೆಯುವಂತೆಯೇ ಅನೇಕ ಶಬ್ದಗಳ ಕಾಗುಣಿತವನ್ನು ನಾವು ಕನ್ನಡದಲ್ಲಿಯೂ ಬರೆಯುತ್ತೇವೆ. ಬ್ರಹ್ಮ, ಮಧ್ಯಾಹ್ನ ಎಂಬ ಶಬ್ದಗಳ ಬರಹದ ಸ್ವರೂಪವನ್ನು ಪರಿಶೀಲಿಸಿ. ಸಂಸ್ಕೃತದಲ್ಲಿ ಈ ಪದ್ಧತಿಯೇ ಸರಿ.

ಆದರೆ ಕನ್ನಡದಲ್ಲಿ ಈ ಅರ್ಕಾರದ ಒತ್ತನ್ನು ಕಾಗುಣಿತದ ಮಧ್ಯೆ ಸೇರಿಸುವ ಪರಿಪಾಠ ಬೆಳೆದು ಬಂದಿದೆ. ನಿರ್ದೇಶನ, ಬಹಿರ್ದೇಶ ಮುಂತಾದ ಏತ್ವದ ದೀರ್ಘ ಬರುವ ಕಡೆಗಳಲ್ಲಿ ಹೆಚ್ಚಾಗಿ ಇದು ಕಾಣಬರುತ್ತದೆ. ಕಾರ್ಯಾಚರಣೆ, ಧರ್ಮಾವರ ಮುಂತಾದ ಶಬ್ದಗಳಲ್ಲಿ ದೀರ್ಘಕ್ಕೆ ಹಿಂದೆ ೯ ಚಿಹ್ನೆಯನ್ನು ಬಳಸುವುದಕ್ಕೆ ಆಗುವುದೇ ಇಲ್ಲ. ಹೀಗಿರುವುದರಿಂದ ಈ ಶಬ್ದಗಳನ್ನು ನಿರ್ದೇಶ, ನಿರ್ದೇಶ, ಬಹಿರ್ದೇಶ. ಬಹಿರ್ದೇಶ ಎಂಬಂತೆ ಎರಡು ರೀತಿಗಳಲ್ಲಿ ಬರೆಯುವ ಅವಕಾಶ ಒದಗಿಬಂತು.

ಸಂಸ್ಕೃತದಲ್ಲಿ ನಿರ್ ಎಂಬುದು ಒಂದು ಉಪಸರ್ಗ. ಈ ಉಪಸರ್ಗಕ್ಕೆ ಆದೇಶ ಆಜ್ಞೆ ಎಂಬ ಅರ್ಥಗಳಿವೆ. ದಿಶ್ ಎಂಬ ಧಾತುವಿಗೆ ತೋರಿಸು, ಸಮ್ಮತಿಸು, ಮಾರ್ಗದರ್ಶನ ಮಾಡು ಮುಂತಾದ ಅರ್ಥಗಳಿವೆ. ಆದುದರಿಂದ ನಿರ್ದೇಶನ ಎಂಬ ಶಬ್ದಕ್ಕೆ ಉತ್ತಮವಾಗಿ ಮಾರ್ಗದರ್ಶನದ ಆಜ್ಞೆ ನೀಡುವುದು ಎಂದು ಅರ್ಥ ಬರುತ್ತದೆ. ಈ ನಿರ್ ಎಂಬ ಉಪಸರ್ಗದ ಪ್ರಾಧಾನ್ಯವನ್ನು ಸೂಚಿಸುವುದಕ್ಕೆ ಯಾರಾದರೂ ನಿರ್‌ದೇಶನ ಎಂದೇ ಬರೆಯುವುದಾದರೆ ಯಾವ ತಾಪತ್ರಯವೂ ಇರುವುದಿಲ್ಲ. ಹೀಗಿರುವುದರಿಂದ ಈ ಶಬ್ದವನ್ನು ನಾಲ್ಕು ಬೇರೆ ಬೇರೆ ರೀತಿಗಳಲ್ಲಿ ಬರೆಯುವ ಅವಕಾಶವುಂಟಾಯಿತು. ೧. ನಿರ್ದೇಶನ (ಸಂಸ್ಕೃತ ಸಂಪ್ರದಾಯ) ೨. ನಿರ್ದೇಶನ (ಆಧುನಿಕ ಕನ್ನಡ ಪ್ರಯೋಗ) ೩. ನಿರ್ದ್ದೇಶನ ೪. ನಿರ್‌ದೇಶನ (ಅರ್ಕಾರದೊತ್ತಿಲ್ಲದ ಎರಡು ಬಗೆ). ನಾನು ಕನ್ನಡದಲ್ಲಿ ಈ ನಾಲ್ಕು ರೂಪಗಳನ್ನೂ ಒಪ್ಪುತ್ತೇನೆ. ಆದರೆ **ನಿರ್ದೇಶನ ಎಂಬುದೇ ಉಚಿತವಾದುದು.**

ರೂಢಿಯ ಬಲ ಎಲ್ಲಕ್ಕಿಂತ ಅಧಿಕವಾದುದು. **"ಪ್ರಯೋಗ ಶರಣಾಃ ವೈಯಾಕರಣಾಃ"** ವೈಯಾಕರಣರು ಜನರ ಪ್ರಯೋಗದ ಮರೆ ಹೋಗಬೇಕಾಗುತ್ತದೆ. ಆದರೆ ನೆನಪಿಡಬೇಕು. ನಿರ್, ದುರ್, ಮುಂತಾಗಿ ರಕಾರಾಂತಗಳಾದ ಉಪಸರ್ಗವಿಲ್ಲದ ಶಬ್ದಗಳನ್ನು ಬರೆಯುವಾಗ ಶಬ್ದರೂಪಗಳ ಸಂಖ್ಯೆ ಕಡಮೆಯಾಗುತ್ತದೆ. ಲೆಕ್ಕ ಮಾಡಿ. ಕೆಲವು ಶಬ್ದಗಳನ್ನು ನೀಡಬಹುದು — ಸೂರ್ಯೋದಯ. ಮಾರ್ಗೋಪಾಯ, ಧರ್ಮೀಯ, ಕರ್ಮಾಂತರ.

**ನಿರ್ಭಯ** ಎಂದರೆ ಭಯವಿಲ್ಲದ, ಅಂಜಿಕೆಯಿಲ್ಲದ ಎಂಬ ಗುಣವಾಚಕದ ಅರ್ಥ. ಆದರೆ ಕನ್ನಡದಲ್ಲಿ ಈ ಶಬ್ದವನ್ನು ಅಭಯ ಎಂಬ ಅರ್ಥದಲ್ಲಿಯೂ ಉಪಯೋಗಿಸುತ್ತಾರೆ.

**ನಿರ್ಲಿಪ್ತತೆ** ನಿರ್ಲಿಪ್ತತಾ ಎಂಬ ಸಂಸ್ಕೃತ ಶಬ್ದದ ತದ್ಭವ. ಲಿಪ್ತತೆ ಎಂದರೆ ಯಾವುದಾದರೂ ವಸ್ತುವಿನಿಂದ ಬಳಿಯಲ್ಪಟ್ಟಿರುವುದು ಅಥವಾ ಇತರ ವಸ್ತುವಿನೊಡನೆ ಬೆರೆತಿರುವುದು ಎಂದರ್ಥ. ಹಾಗೆ ಯಾವುದರೊಡನೆಯೂ ಸೇರದೆ ಇರುವುದು ನಿರ್ಲಿಪ್ತತೆ. ಈ ಶಬ್ದವನ್ನು ಹೆಚ್ಚಾಗಿ ವೇದಾಂತದಲ್ಲಿ ಉಪಯೋಗಿಸುತ್ತಾರೆ. Detachment ಎಂಬ ಇಂಗ್ಲಿಷ್ ಶಬ್ದಕ್ಕೆ ಸರಿಯಾದ ಶಬ್ದವಾಗುತ್ತದೆ. ಈ ಬೆರೆತಿರುವುದರ ಪ್ರಮಾಣ, ರೀತಿ ಇತ್ಯಾದಿಗಳ ವಿವರಣೆ ಬಹು ಸೂಕ್ಷ್ಮ, ಹೆಚ್ಚಾಗಿ ಮನಸ್ಸಿಗೆ ಸಂಬಂಧಪಟ್ಟದ್ದು, ಸಾಮಾಜಿಕವಾದದ್ದಲ್ಲ.

**ನಿರ್ವಾಣ** ನೋಡಿ: **ಅವಸರ**

**ನಿಲ್ದಾಣ** ಇದು ಸರಿಯಾದ ಶಬ್ದ. ನಿಲ್ + ತಾಣ = ನಿಲ್ದಾಣ. ಇದಕ್ಕೆ ನಿಲ್ಲುವ ಸ್ಥಳ. ರೈಲು, ಗಾಡಿ, ಬಸ್ಸು, ಜನರು - ಎಲ್ಲಾ ನಿಲ್ಲುವ ಸ್ಥಳ. ತಾಣ ಎನ್ನುವುದು ಸ್ಥಾನ ಎಂಬ ಸಂಸ್ಕೃತ ಶಬ್ದದ ತದ್ಭವ. ತಂಗುದಾಣ ಎಂಬ ಶಬ್ದವಿದೆ. ಜನರು ವಸತಿ ಪಡೆಯುವ ಸ್ಥಳ ಎಂದರ್ಥ.

**ನಿಶಾದಿ** ಇದು ಸಂಸ್ಕೃತದ ಶಬ್ದ. ನಿಶೆಯ ಆದಿ ಎಂದರೆ ರಾತ್ರಿಯಾಗುವುದಕ್ಕೆ ಮುಂಚಿನ ಸಮಯ. ಕೆಂಪು ನಿಶಾದಿ ಎಂದರೆ ಅರುಣವರ್ಣದ ಸಾಯಂಕಾಲ ಎಂದರ್ಥ.

**ನಿಶ್ಚಲ** ಎಂಬುದನ್ನು ಹೆಣ್ಣು ಮಕ್ಕಳಿಗೆ ಹೆಸರಾಗಿ ಇಡಬಹುದೇ ? ನಿಶ್ಚಯವಾಗಿ ಇಡಬಹುದು. ಇದು ಸದ್ಗುಣಗಳ ಸ್ತ್ರೀಯನ್ನು ನಿರ್ದೇಶಿಸುತ್ತದೆ. ಆ ಹೆಣ್ಣು ಹೆಸರಿಗೆ ತಕ್ಕಂತೆ ಬಾಳಿದರೆ ಗಂಡ ಪುಣ್ಯವಂತ. ನಿಶ್ಚಲಾ ಎಂದರೆ ಚಂಚಲ ಸ್ವಭಾವವಿಲ್ಲದ ಎಂದರ್ಥ. ನಿಶ್ಚಲ ಎಂದರೆ ಭೂಮಿ ಎಂದೂ ಅರ್ಥ.

**ನಿಷ್ಪತ್ತಿ** ನೋಡಿ: **ಉತ್ಪತ್ತಿ**

**ನಿಷ್ಪಾಂಡವ** ಎಂದರೆ ಪಾಂಡವರಿಲ್ಲದ ಎಂದರ್ಥ. ಮಹಾಭಾರತದಲ್ಲಿ ಈ ಮಾತು ಬರುತ್ತದೆ. ಅಶ್ವತ್ಥಾಮನು ಕೌರವನ ಅಂತ್ಯವನ್ನು ಕಂಡು ಅವನಿಗೆ ಸಮಾಧಾನ ಮಾಡುವ ಮಾತುಗಳಲ್ಲಿ ಭೂಮಿಯಲ್ಲಿ ಪಾಂಡವರಿಲ್ಲದಂತೆ ಮಾಡುತ್ತೇನೆ ಎನ್ನುತ್ತಾನೆ. ಅಂದರೆ ಅದು ಪಾಂಡವರ ಪುತ್ರರು ಇಲ್ಲದಂತೆ. ಪರಿಣಾಮವಾಗಿ ದುರ್ಯೋಧನನು ತನ್ನ ಅಸುವನ್ನು ನೀಗುತ್ತಾನೆ. ನಿಸ್ ಇದೊಂದು ಉಪಸರ್ಗ. ಅದರ ಅರ್ಥ ನಿಷೇಧವಾದುದು ಎಂದು.

**ನಿಸರ್ಗ** ಎಂಬ ಶಬ್ದವು ಸೃಜ್ ಎಂಬ ಧಾತುವಿನಿಂದ ವ್ಯುತ್ಪನ್ನವಾದದ್ದು. ಇದಕ್ಕೆ ಸ್ವಭಾವ, ಪ್ರಕೃತಿ ಎಂಬ ಅರ್ಥಗಳಿವೆ. ಸಂಸ್ಕೃತದಲ್ಲಿ ಸಂಸಿದ್ಧಿ, ಸ್ವರೂಪ, ಸ್ವಭಾವ, ನಿಸರ್ಗ ಎಂಬ ಈ ಎಲ್ಲ ಶಬ್ದಗಳಿಗೂ ಒಂದೇ ಅರ್ಥವನ್ನು ಹೇಳುತ್ತಾರೆ. ಆದರೆ ಪ್ರಕೃತಿ ಶಬ್ದಕ್ಕೆ ಹೆಚ್ಚು ವ್ಯಾಪಕವಾದ ವಿವಿಧ ಅರ್ಥಗಳಿವೆ. **ಪ್ರಕೃತಿಃ ಪಂಚಭೂತೇಷು ಸ್ವಭಾವೇ ಮೂಲಕಾರಣೇ** ಎಂಬ ವಿವರಣೆಯನ್ನು ನೋಡಿ. ಸಂಸ್ಕೃತ ನಿಘಂಟುಗಳಲ್ಲಿ ಪ್ರಕೃತಿ ಶಬ್ದಕ್ಕೆ ಸುಮಾರು ೨೫ ಅರ್ಥಗಳನ್ನು ಉಲ್ಲೇಖಿಸುತ್ತಾರೆ. ಆದರೂ ಪ್ರಕೃತಿ, ನಿಸರ್ಗ ಎಂಬ ಎರಡು ಶಬ್ದಕ್ಕೂ ಇಂಗ್ಲಿಷಿನ Nature ಎಂಬ ಶಬ್ದಕ್ಕೆ ಸಮಾನವಾಗುವ ಅರ್ಹತೆಯಿದೆ.

**ನಿಸ್ಸಹಾಯಕ** ನೋಡಿ: **ಅಸಹಾಯಕ**

**ನೀರು - ನಿಡಿ** ಇದೊಂದು ಜೋಡುನುಡಿ. ಅದಕ್ಕೆ ಅರ್ಥ ಅನ್ನ ನೀರು. ನೀರು ಎಲ್ಲರಿಗೂ ಗೊತ್ತಿರುವ ಪಾನೀಯ. ನಿಡಿ ಎಂದರೆ ಅಕ್ಕಿಯ ಗಂಜಿ. ಒಂದು ಆಹಾರ. ಈ ಜೋಡು ನುಡಿಯಲ್ಲಿ ಆದಿಪ್ರಾಸದ ಎರಡು ಶಬ್ದಗಳು ಸೇರಿರುವ ಒಂದು ಭಾಷೆಯ ಸೊಗಸಿದೆ. ಅದು ಆಡುನುಡಿಯಲ್ಲಿ ಆಗಾಗ ಕಾಣಿಸಿಕೊಳ್ಳುವ ಸೊಗಸು. ಅದಕ್ಕೆ ಅನ್ನ - ನೀರು ಎಂದೇ ಅರ್ಥ. ಪ್ರೊ. ಎ. ಆರ್. ಕೃಷ್ಣಶಾಸ್ತ್ರೀ ಅವರ ವಚನ ಭಾರತದಲ್ಲಿ ಬರುವ ಈ ವಾಕ್ಯವನ್ನು

ಗಮನಿಸಿ. 'ಅಲ್ಲಿ ಗೆಡ್ಡೆ ಗೆಣಸು, ಹಣ್ಣು ಹಂಪಲು, ನೀರು ನಿಡಿ ಏನೂ ಇರಲಿಲ್ಲ' (ಪು. ೩೬) ಅರಗಿನ ಅರಮನೆಯಿಂದ ಬಂದ ಪಾಂಡವರು ಎಂಥ ಸ್ಥಳಕ್ಕೆ ಬಂದಿದ್ದರು ಎಂಬ ವರ್ಣನೆಯಿದೆ. ನೀರ್ನಿಡಿಯ ನೇಮ ಎಂಬ ಒಂದು ಶಬ್ದ ವೀರಶೈವ ವಚನಗಳಲ್ಲಿ ಬರುತ್ತದೆ. ಅದಕ್ಕೆ ನೀರಾದ ಆಹಾರವನ್ನು ಮಾತ್ರ ಸೇವಿಸುವ ವ್ರತ ಎಂದರ್ಥ.

**ನೀರೆ** ಕನ್ನಡದಲ್ಲಿ ನೀರ್ ಎಂಬ ಶಬ್ದಕ್ಕೆ ಕಾಂತಿ, ಹೊಳಪು, ಪ್ರಕಾಶ ಎಂಬ ಅರ್ಥಗಳಿವೆ. ಮುತ್ತು ಮತ್ತು ವಜ್ರಗಳಲ್ಲಿ ನೀರ್ = ನೀರು ಚೆನ್ನಾಗಿದೆ ಎನ್ನುತ್ತಾರೆ. ಈ ಶಬ್ದವೇ ನೀಱ ನೀಱೆ ಎಂದು ರೂಪುಗೊಂಡಿರಬಹುದು ಎಂಬ ಸಂದೇಹ ಬರುತ್ತದೆ. ನೀಱ, ನೀಱೆ ಎಂಬ ಎರಡು ಶಬ್ದಗಳಲ್ಲಿಯೂ ಱಕಾರ ಇರುವುದರಿಂದ ಈ ಸಂದೇಹ. ಆ ಱಕಾರ ತಪ್ಪು ಎಂದು ಹೇಳುವುದಕ್ಕೆ ಸಾಕಷ್ಟು ಆಧಾರಗಳಿಲ್ಲ. ಪಂಪ ಭಾರತದಲ್ಲಿಯೇ ನೀರ್ ಎಂಬುದು ಕಾಂತಿ ಎಂಬ ಅರ್ಥದಲ್ಲಿ ಉಪಯೋಗವಾಗಿದೆ. (೫-೫೩ ವಚನ ನೋಡಿ). ಅದೇ ಕವಿ ನೀಱ ಎಂಬ ರೂಪವನ್ನೂ ಉಪಯೋಗಿಸಿದ್ದಾನೆ. ನೀಱ ಎಂದರೆ ಸುಂದರ ಎಂದರ್ಥ. ನೀಱ + ಎ = ನೀಱೆ ಸುಂದರಿ. ಈ ಶಬ್ದವೇ ಮುಂದೆ ಕನ್ನಡದಲ್ಲಿ ನೀರೆ ಎಂದು ಪ್ರಯೋಗವಾಗುತ್ತ ಬಂದಿದೆ. ಇದಕ್ಕೆ ಸುಂದರಿ, ಸೊಬಗೆ, ಅಂದಗಾತಿ, ಲಕ್ಷಣವಂತೆ, ಚೆನ್ನೆ ಎಂದೇ ಅರ್ಥ. ತಮಿಳಿನಲ್ಲಿ ನೀರ್ಮೈ ಎಂದರೆ ಸೌಂದರ್ಯ ಎಂದು ಅರ್ಥ. ಆದುದರಿಂದ ನೀರೆ ಶಬ್ದದಲ್ಲಿ ಇರುವುದು ದೈಹಿಕ ಸೌಂದರ್ಯದ ವಿಚಾರವಾದ ವಿವರಣೆ. ಕವಿಗಳಿಗೂ ಯುವಕರಿಗೂ ತುಂಬ ಪ್ರಿಯವಾದ ಶಬ್ದ.

**ನುಂಪಿಡು** ಈ ಶಬ್ದ ನುಣುಪು + ಇಡು ಎಂಬುದರ ಬೇರೆಯ ರೂಪ. ನಯವಾಗಿ ಮಾಡು, ನುಣುಪಾಗಿ ಕಾಣುವಂತೆ ಮಾಡು ಎಂದರ್ಥ. ಹೊಳೆಯುವಂತೆ ಮಾಡು, ಮಿರುಗುವಂತೆ ಮಾಡು ಎಂದೂ ಅರ್ಥವಾಗಬಹುದು. 'ನುಣ್ಪಿಡು' ಆ ಶಬ್ದದ ಪರ್ಯಾಯ ರೂಪ. ಜೈಮಿನಿ ಭಾರತದಲ್ಲಿ ಬರುವ ಈ ಪ್ರಯೋಗವನ್ನು ಗಮನಿಸಿ.

*ದಿಟ್ಟೆಯರದೆಂತೊ ನವಕುಂಕುಮವನೀಗ ನುಂಪಿಟ್ಟರ*
*ಲ್ಲದೆ ಪೋದ ಮಧ್ಯದೊಳದೆಂತು ನಿಲಿಸಿದರೊ*
*ದಿವ್ಯಾಂಬರವನು* (೩೧-೬).

**ನುಡಿಗಟ್ಟುಗಳ ಅರ್ಥ. ಒಂದು ದೃಷ್ಟಾಂತ** ನಾನು ನಿಮ್ಮ ಮನೆಗೆ ಬಂದು ಬಹಳ ದಿನಗಳಾದವು. ನಾನು ನಿಮ್ಮ ಮನೆಗೆ ಬರದೆ ಬಹಳ ದಿನಗಳಾದವು.

ಈ ಎರಡಕ್ಕೂ ಒಂದೇ ಅರ್ಥ ಬರುವುದಿಲ್ಲ. ಹೇಳುವವನ ಧ್ವನಿಯ ಕಾಕುವನ್ನೂ ನಾವು ಗಮನಿಸಬೇಕು. ಬಂದು ಬಹಳ ದಿನಗಳಾದುವು ಎಂಬಲ್ಲಿ ಬರಬೇಕೆಂಬ ಉದ್ದೇಶವಿರುವುದು ಸ್ಪಷ್ಟ. ಬರದೇ ಬಹಳ ದಿನಗಳಾದುವು ಎಂಬಲ್ಲಿ ನಾನು ಬರುವುದನ್ನು ನಿಲ್ಲಿಸಿ ಅನೇಕ ದಿನಗಳಾದುವು. ಇನ್ನು ಮುಂದೆ ಬರುವ ಉದ್ದೇಶವೂ ಇಲ್ಲ ಎಂಬ ಅರ್ಥ ಬರುತ್ತದೆ. ಶಿಷ್ಟವಾದ ಮಾತುಕತೆಯಲ್ಲಿ ಈ ಎರಡನೆಯ ರೀತಿಯ ಉಪಯೋಗ ಕಡಿಮೆ.

**ನೂಪುರ** ಒಂದು ಒಡವೆಯ ಹೆಸರು. ಇದು ಪಾದ ಭೂಷಣ. ಇದಕ್ಕೆ ಇತರ ಹೆಸರುಗಳೂ ಇವೆ. ಪಾದಾಂಗದ, ತುಲಾಕೋಟಿ, ಮಂಜೀರ, ಹಂಸಕ, ಪಾದಕಟಕ, ಕಿಂಕಿಣಿ, ಕ್ಷುದ್ರಘಂಟಿಕಾ. ಇವೆಲ್ಲವೂ ಕಾಲಿನ ಆಭರಣಗಳು ಗೆಜ್ಜೆಯಂತೆ ಶಬ್ದ ಮಾಡುತ್ತವೆ. ನಾಟ್ಯ ಮಾಡುವವರು ಗೆಜ್ಜೆ ಧರಿಸಿದಾಗ ಶಬ್ದವಾಗುವಂತೆ. ನೂ ಅಂದರೆ ಹೊಗಳು, ಪುರ ಮುಂದೆ, ಮುಂಚೆ. ಇಂಥವರು ಬರುತ್ತಿದ್ದಾರೆ ಎಂಬುದನ್ನು ಮುಂಚೆಯೇ ಸೂಚಿಸುವುದರಿಂದ ಅದಕ್ಕೆ ನೂಪುರ ಎಂದು ಹೆಸರು.

**ನೂರು ವರ್ಷ ನೂರಾರು ವರ್ಷ** ನಮ್ಮ ಸಂಪ್ರದಾಯದಲ್ಲಿ ಮಾನವನ ಆಯಸ್ಸು ನೂರು

ವರ್ಷ ಎಂಬ ನಂಬಿಕೆಯಿದೆ. ನೂರಿಪ್ಪತ್ತು ಎಂದು ಇನ್ನೊಂದು ನಂಬಿಕೆ. ಹೇಗೆ ಇದ್ದರೂ ನೂರು ವರ್ಷ ಪೂರ್ಣಾಯುಸ್ಸು ಸಾಕಾಗುತ್ತದೆ. ಆ ವೇಳೆಗೆ ಬದುಕು ಭಾರವಾಗುತ್ತದೆ. ಬಹುಕಾಲ ಸುಖವಾಗಿ ಬಾಳು ಎಂಬುದು ನೂರು ವರ್ಷ, ನೂರಾರು ವರ್ಷ ಎಂಬುದಕ್ಕಿಂತ ಹೆಚ್ಚು ಉಚಿತ. ಸುಖವಿಲ್ಲದ ನೂರಾರು ವರ್ಷ ಏತಕ್ಕೆ ಬೇಕು ?

**ನೃತ್ಯ, ನೃತ್ತ, ನರ್ತನ, ಈ ಶಬ್ದಗಳ ಅರ್ಥದಲ್ಲಿ ವ್ಯತ್ಯಾಸವಿದೆಯೇ ?** ಈ ಎಲ್ಲ ಶಬ್ದಗಳೂ ನಾಟ್ಯ ಶಾಸ್ತ್ರಕ್ಕೆ ಸಂಬಂಧಿಸಿದವು. ಇವುಗಳ ಅರ್ಥದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಎಲ್ಲವೂ ಒಂದೇ ಅರ್ಥದವಲ್ಲ. ಸ್ಥೂಲವಾಗಿ ಹೀಗೆ ಹೇಳಬಹುದು:

**ನೃತ್ತ** ಇದು ತಾಳ ಲಯಗಳಿಗೆ ಹೊಂದಿಕೊಳ್ಳುವಂತೆ ಅಂಗ ಮತ್ತು ಪ್ರತ್ಯಂಗಗಳ ಚಲನೆಯಿಂದ ಸೌಂದರ್ಯಭಾವವನ್ನು ಸ್ಪಷ್ಟಪಡಿಸುವ ಕುಣಿತ. ಇದರಲ್ಲಿ ನವರಸಗಳಲ್ಲಿ ಯಾವುದರ ನಿರೂಪಣೆಯೂ ಇರುವುದಿಲ್ಲ.

**ನೃತ್ಯ** ಇದರಲ್ಲಿ ತಾಳಲಯಗಳಿಗೆ ಹೊಂದಿಸಿ ಅಂಗ ಪ್ರತ್ಯಂಗಗಳ ಚಲನೆಯಿಂದ ನವರಸಗಳನ್ನೂ ನಿರೂಪಿಸುವುದು ಮುಖ್ಯ. ಇದರಲ್ಲಿ ಸೌಂದರ್ಯಭಾವವು ಗೌಣವಾಗಿರುತ್ತದೆ. ರಸ ನಿರೂಪಣೆ ಮುಖ್ಯ.

**ನರ್ತನ** ಇದು ರಂಗದ ಮೇಲೆ ನಡೆಯುವ ನಾಟ್ಯಾಭಿನಯ. ನೃತ್ಯಕ್ಕೆ ಸಮಾನವಾದುದು.

**ನೃಶಂಸ** ಈ ಸಂಸ್ಕೃತ ಶಬ್ದಕ್ಕೆ ಘಾತುಕ, ಕ್ರೂರ ಎಂದರ್ಥ. ಪರಪೀಡೆ ಮಾಡುವವರನ್ನು ಹೊಗಳುತ್ತಾನೆ ಎನ್ನುವುದರಿಂದ ಈ ಹೆಸರು ಬಂದಿದೆಯಂತೆ. **ಪರಪೀಡಕರಾನ್ ಶಂಸತಿ ಇತಿ ನೃಶಂಸಃ** ಎಂಬ ವಿವರಣೆಯಿದೆ.

**ನೆಂಟಸ್ತಿಕೆ ಯಾವ ಸಮಾಸ ?** ನೆಂಟಸ್ತಿಕೆ ಇದು ಸಮಾಸವಲ್ಲ. ನೆಂಟಸ್ತನ, ನೆಂಟತನ, ನೆಂಟು ಎಂಬ ಎಲ್ಲ ಶಬ್ದಗಳಿಗೂ ಒಂದೇ ಅರ್ಥ. ಗೃಹಸ್ಥ ಎಂಬ ಸಂಸ್ಕೃತದ ಶಬ್ದದ ಸಾಮ್ಯದಲ್ಲಿ ಕನ್ನಡ ಮಾತುಗಾರರು ಅನೇಕ ಇಂಥ ಸ್ವರೂಪದ ಶಬ್ದಗಳನ್ನು ಸೃಷ್ಟಿ ಮಾಡಿದ್ದಾರೆ. ನೆಂಟಸ್ತ, ದುಡ್ಡಸ್ತ, ದೊಡ್ಡಸ್ತಿಕೆ ಮುಂತಾದ ಶಬ್ದಗಳೆಲ್ಲ ಹೀಗೆ ಪ್ರಯೋಗಕ್ಕೆ ಬಂದಿವೆ, ಬೇರೂರಿವೆ.

**ನೆಗಳ್ತೆ** ಈ ಕನ್ನಡ ಶಬ್ದಕ್ಕೆ ಪ್ರಸಿದ್ಧಿ, ಕೀರ್ತಿ ಎಂದು ಅರ್ಥ. **'ನೆಗಳ್ತೆ ಎನೆ ಖ್ಯಾತಿಯಕ್ಕುಂ'** ಎಂದು ನಿಘಂಟುಗಳಲ್ಲಿ ಹೇಳಿದೆ.

**ನೆಗೆವಾವು** ಎಂದರೆ ಆಕಾಶದಲ್ಲಿ ಚಲಿಸುವ ಹಾವು. ಅಂದರೆ ರಾಹು ಎಂದರ್ಥ. ಚಂದ್ರನನ್ನು ರಾಹು ಹಿಡಿಯುವ ವರ್ಣನೆಗಳಲ್ಲಿ ಈ ಕನ್ನಡ ಶಬ್ದ ಉಪಯೋಗವಾಗುತ್ತದೆ. ಇದು ಹಳಗನ್ನಡದ ಬಾಟು.

**ನೆಗ್ಗು** ಇದಕ್ಕೆ ನಗ್ಗು ಎಂಬ ಪರ್ಯಾಯ ರೂಪವೂ ಉಂಟು. ಕೆಳಕ್ಕೆ ಬೀಳುವುದರಿಂದ ಪಾತ್ರೆಗಳಲ್ಲಿ ಉಂಟಾಗುವ ತಗ್ಗಿಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ. 'ನಗ್ಗೆತ್ತಿಸಬೇಕು' ಎಂದರೆ ಬಿದ್ದ ಹಳ್ಳವನ್ನು, ತಗ್ಗನ್ನು ಸರಿಪಡಿಸಬೇಕು ಎಂದರ್ಥ.

**ನೆನೆಗುದಿ** ಇದರ ಮೂಲರೂಪ ನನೆಗುದಿ. ನೆನೆಗುದಿ ಎಂಬುದು ಪರ್ಯಾಯ ರೂಪ. ಕೆಲವು ಪದಾರ್ಥಗಳು ನೀರಿನಲ್ಲಿ ನೆನೆದಿದ್ದರೆ ಅವು ಬೇಗ ಬೇಯುವುದಿಲ್ಲ. ಬಹುಕಾಲ ತೆಗೆದುಕೊಳ್ಳುತ್ತದೆ. ಯಾವುದಾದರೂ ವಿಷಯದ ಬಗ್ಗೆ ಬೇಗ ತೀರ್ಮಾನವಾಗದೆ ಚರ್ಚೆಯಲ್ಲಿ ಕಾಲ ವ್ಯಯವಾಗುತ್ತ ಇದ್ದರೆ ಅಂಥ ಸ್ಥಿತಿಗೆ ನೆನೆಗುದಿಗೆ ಬಿದ್ದಿರುವುದು ಎಂಬ ಶಬ್ದ ಅನ್ವಯಿಸುತ್ತದೆ. ನೆನೆ + ಕುದಿ = ನೆನೆಗುದಿ ಆಗಿದೆ.

**ನೆಮ್ಮದಿ - ಸಮಾಧಾನ** ಈ ಎರಡು ಶಬ್ದಗಳಲ್ಲಿ ನೆಮ್ಮದಿ ಕನ್ನಡ. ಸಮಾಧಾನ ಸಂಸ್ಕೃತ. ಬಾಳಲು ಯಾವ ಅಡ್ಡಿ ಆತಂಕಗಳೂ ಇಲ್ಲದೆ ಸ್ವಂತವಾದ ಆಧಾರವನ್ನು ಹೊಂದಿರುವ ಸ್ಥಿತಿ ನೆಮ್ಮದಿ. ಇದು ನೆಮ್ಮುರ್ಜ ಎಂಬ ಶಬ್ದದಿಂದ ಬಂದದ್ದು. ನೆಮ್ಮುರ್ಜ ಶಬ್ದಕ್ಕೆ ಆಧಾರ,

ಆಶ್ರಯ ಎಂಬ ಅರ್ಥಗಳಿವೆ. ಸಮಾಧಾನ ಎನ್ನುವುದು ಚಿತ್ತೈಕಾಗ್ರತೆಗೆ ಸಂಬಂಧಿಸಿದುದು. ಅದಕ್ಕೆ ಮನಸ್ಸಿನ ನೆಮ್ಮದಿ ಎಂಬುದೂ ಒಂದು ಅರ್ಥ.

**ನೆರೆ-ಹೊರೆ** ಇವೆರಡೂ ಕನ್ನಡದ ಶಬ್ದಗಳು. ನೆರೆ ಎಂಬುದು ಕ್ರಿಯಾಪದವಾದರೆ ಜತೆ ಸೇರು ಎಂದರ್ಥ. ನಾಮಪದವಾದರೆ ಪಕ್ಕ, ಪಾರ್ಶ್ವ ಎಂದರ್ಥ. ಹೊರೆ ಶಬ್ದವೂ ಹಾಗೆಯೇ ಕ್ರಿಯಾಪದವಾದರೆ ಜತೆ ಸೇರು ಎಂದರ್ಥ. ನಾಮಪದವಾದರೆ ಪಾರ್ಶ್ವ, ಮಗ್ಗಲು, ಪಕ್ಕ ಎಂದರ್ಥ. ಹೀಗೆ ಎರಡೂ ನಾಮಪದಗಳಾಗಿ ನೆರೆ-ಹೊರೆ ಜೋಡಿ ಶಬ್ದಗಳಾಗಿವೆ. ಅಕ್ಕಪಕ್ಕ ಎಂಬುದನ್ನೇ ನೋಡಿ. ಅದು ಆ ಪಕ್ಕ + ಈ ಪಕ್ಕ ಸೇರಿ ಆಡುಮಾತಿನಲ್ಲಿ ಅಕ್ಕಪಕ್ಕ ಆಗಿದೆ. ಶಬ್ದಗಳ ಬೆಳವಣಿಗೆಯ ವೈಚಿತ್ರ್ಯ ವಿಸ್ಮಯಕರವಾದುದು. ಆದರೂ ಯಾವುದೋ ಒಂದು ನಿಯಮಕ್ಕೆ ಅವು ಒಳಪಡುತ್ತವೆ.

**ನೆಲಪಟ್ಟು** ನೆಲಪಟ್ಟು ಎಂಬುದು ನೆಲಪಡು ಎಂಬ ಶಬ್ದದ ಕೃದಂತ ರೂಪ, ನೆಲಪಡು. ನೆಲಹಿಡಿ ಎರಡಕ್ಕೂ ಒಂದೇ ಅರ್ಥ. ಆರೋಗ್ಯ ತಪ್ಪಿ ಹಾಸಿಗೆಯಲ್ಲಿ ಮಲಗಿರು ಎಂದು ಅರ್ಥ.

**ನೆಲುವು** ನೆಲುವು, ನೆಲು, ನಿಲುವು ಎಂಬ ಶಬ್ದಗಳೆಲ್ಲ ನೇಲು = ಜೋತುಬಿಡು ಎಂಬ ಧಾತುವಿನಿಂದ ಬಂದ ಶಬ್ದಗಳು. ಹಿಂದಿನ ಕಾಲದಲ್ಲಿ ತೊಲೆಯಿಂದ ಕೆಳಗೆ ನೇಲುವಂತೆ ಹಗ್ಗದ ಜಾಳಿಗೆಗಳನ್ನು ಕಟ್ಟುತ್ತಿದ್ದರು. ಅದರಲ್ಲಿ ಬೆಕ್ಕು ಇಲಿಗಳಿಗೆ ಸಿಗದಂತೆ ಮೊಸರು, ಬೆಣ್ಣೆ ಇತ್ಯಾದಿ ಪದಾರ್ಥಗಳನ್ನು ನೇತು ಹಾಕುತ್ತಿದ್ದರು. ಆದರೂ ಬೆಕ್ಕು ಪಾತ್ರೆಗಳನ್ನು ಬೀಳಿಸಿ ಭೋಜನ ಮಾಡುತ್ತಿತ್ತು.

**ನೇತ್ಯಾತ್ಮಕ** ನ + ಇತಿ = ನೇತಿ ಇದು ಸಂಸ್ಕೃತದ ಎರಡು ಭಾಗಗಳು ಸೇರಿ ಆಗಿರುವ ಶಬ್ದ. ಇಲ್ಲದುದು ಎಂದರ್ಥ. ನೇತ್ಯಾತ್ಮಕ ಎಂದರೆ ಇಲ್ಲ ಎಂಬರ್ಥದಿಂದ ಕೂಡಿದ ಎಂದರ್ಥ.

**ನೇಪಥ್ಯ** ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ *೧. ಅಲಂಕಾರ, ಭೂಷಣ, ವೇಷ ಹಾಕಿಕೊಳ್ಳುವುದು, ೨. ಆಭರಣಗಳನ್ನು ಧರಿಸುವುದು ೩. ರಂಗಭೂಮಿಯ ಹಿಂದಣ ಸ್ಥಳ* ಎಂದು ಅರ್ಥಗಳಿವೆ. **ನೇತ್ರಯೋಃ ಪಥ್ಯಂ ನೇಪಥ್ಯಂ** ಎಂದು ಸಂಸ್ಕೃತದ ಟೀಕೆ. ಈಗ ನಾಟಕದಲ್ಲಿ ಅಭಿನಯಿಸುವ ನಟನಟಿಯರು ವೇಷವನ್ನು ಧರಿಸುವ, ಬಣ್ಣ ಹಾಕಿಕೊಳ್ಳುವ ಸ್ಥಳಕ್ಕೆ ನೇಪಥ್ಯ ಎಂದು ಕರೆಯುತ್ತಾರೆ. ಇದೇ ಇಂಗ್ಲಿಷ್ ಭಾಷೆಯ Green Room = a lounge in a theatre for the use of performers.

**ನೇಮಗಲೆ ಎಂದರೇನು ?** ಎಂಬ ಪ್ರಶ್ನೆಗೆ ಸ್ವಲ್ಪ ವಿವರವಾಗಿ ಉತ್ತರ ನೀಡಬೇಕು. ಇದು ಕಾಮಸೂತ್ರಕ್ಕೆ ಸಂಬಂಧಿಸಿದ ಶಬ್ದ. ಸ್ತ್ರೀ - ಪುರುಷರಲ್ಲಿ ಪರಸ್ಪರವಾಗಿ ಕಾಮವನ್ನು ಉದ್ರೇಕಿಸುವ ಕಲಾಸ್ಥಾನಗಳುಂಟು. ಆ ಸ್ಥಾನಗಳನ್ನು ತಾಡನ ಮಾಡುವುದರಿಂದ ಪರಸ್ಪರವಾಗಿ ಕಾಮವು ಉದ್ವೇಗಗೊಳ್ಳುತ್ತದೆ. ಇದು ಕಾಮಶಾಸ್ತ್ರದ ನಿಯಮ. ಇದೇ ನೇಮ. ಈ ನಿಯಮವನ್ನು ತಿಳಿದುಕೊಂಡಿರುವುದೇ ನಿಯಮದ ಕಲೆ = ನೇಮಗಲೆ. ಜೈಮಿನಿ ಭಾರತದಲ್ಲಿ (ಸಂಧಿ ೧೧, ಪದ್ಯ ೨೧) ಸುಧನ್ವನು ತನ್ನ ರಾಣಿಯಾದ ಪ್ರಭಾವತಿಯ ಬಲವಂತಕ್ಕೆ ಒಳಗಾಗಿ, ಹಂಸಧ್ವಜನ ಯುದ್ಧದ ಆಜ್ಞೆ ಮೀರಿ, ಅವಳೊಡನೆ ರಮಿಸಿದ ವರ್ಣನೆಯ ಸಂದರ್ಭದಲ್ಲಿ ಈ ಶಬ್ದವು ಪ್ರಯೋಗವಾಗಿದೆ. ಆ ಭಾಗವನ್ನು ಓದಿ ನೋಡಿ. ಇಂಥ ಅನೇಕ ಶಬ್ದಗಳ ಪರಿಚಯವೂ ಆಗುತ್ತದೆ. ಒಳ್ಳೆಯ ಕಾವ್ಯವನ್ನು ಓದಿದ ಪುಣ್ಯವೂ ಬರುತ್ತದೆ.

**ನೇರಾಳಿ, ನೇರಾಣಿ** ಎಂಬ ಎರಡು ಪರ್ಯಾಯ ರೂಪಗಳಿವೆ ಈ ಶಬ್ದಕ್ಕೆ. ಅದಕ್ಕೆ ಚಿನ್ನ, ಬಂಗಾರ ಎಂದರ್ಥ. ನೇರಾಣಿಯ ಬೊಂಬೆ ಎಂಬುದನ್ನು ಚಿನ್ನದ ಬೊಂಬೆ ಎಂಬರ್ಥದಲ್ಲಿ ಉಪಯೋಗಿಸುತ್ತಾರೆ. ಈ ಶಬ್ದವು ಸಂಸ್ಕೃತದ ಹಿರಣ್ಯ ಶಬ್ದಕ್ಕೆ ಸಂಬಂಧಿಸಿರಬಹುದು

ಎಂದು ಕೆಲವರು ವಿದ್ವಾಂಸರು ಹೇಳುತ್ತಾರೆ. ನೇರಾಣಿಯ ಮುತ್ತು ಎಂಬ ಶಬ್ದವೂ ಇದೆ. ಹಾಗೆಂದರೆ ಅಪರಂಜಿಯಲ್ಲಿ ಮೆಟ್ಟಿರುವ ಮುತ್ತುಗಳ ಆಭರಣ ಎಂದರ್ಥ.

**ನೈಚ್ಯಾನುಸಂಧಾನ** ನೀಚ ಶಬ್ದಕ್ಕೆ ಕೀಳಾದ, ಅಧಮ ಇತ್ಯಾದಿ ಅರ್ಥಗಳಿವೆ. ನೈಚ್ಯ ಎಂದರೆ ಕೀಳಾಗಿರುವಿಕೆ. ನೈಚ್ಯ + ಅನುಸಂಧಾನ ಎರಡೂ ಸೇರಿ ನೈಚ್ಯಾನುಸಂಧಾನ ಎಂಬ ಶಬ್ದವಾಗುತ್ತದೆ. ಅನುಸಂಧಾನ ಎಂದರೆ ಆರೋಪಿಸಿಕೊಳ್ಳುವುದು. ಆದುದರಿಂದ ಒಟ್ಟು ಆ ಸಮಾಸಕ್ಕೆ ಕೀಳ್ತನದ ಸ್ಥಿತಿಯನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದು ಎಂದರ್ಥ.

**ನೈಜ** ಇದು ಸಂಸ್ಕೃತದ ಶಬ್ದ ಇದಕ್ಕೆ ತನಗೆ ಸಂಬಂಧಪಟ್ಟ, ತನ್ನದೇ ಆದ ಎಂದು ವಿಶೇಷಣದ ಅರ್ಥವಿದೆ. ನಿಜಸ್ಯ **ಇದಂ ನೈಜಂ** ಎಂದು ಸಂಸ್ಕೃತದಲ್ಲಿ ವಿವರಣೆ. ನಿಜ ಶಬ್ದಕ್ಕೆ ಮೂರು ಅರ್ಥಗಳಿವೆ. ೧. ತನ್ನದಾದ, ೨. ಸ್ವಭಾವಸಿದ್ಧವಾದ, ೩. ಸ್ಥಿರವಾದ. ಆದ್ದರಿಂದ ನೈಜಶಬ್ದಕ್ಕೆ ಈ ಮೂರೂ ಅರ್ಥಗಳು ಬರುತ್ತವೆ.

**ನೈರುತ್ಯ** ನೈರ್‌ಋತ ಅಥವಾ ನೈರೃತ ಪಶ್ಚಿಮ ಮತ್ತು ದಕ್ಷಿಣಗಳ ನಡುವಣ ಉಪದಿಕ್ಕಿಗೂ ಆ ದಿಕ್ಕಿನ ಪಾಲಕನಿಗೂ ಅನ್ವಯಿಸುತ್ತದೆ. ನೈರುತ್ಯ ಎಂಬುದು ಆ ದಿಕ್ಕಿಗೆ ಮಾತ್ರ ಅನ್ವಯಿಸುತ್ತದೆ. ಕೆಲವರು **ನೈಋತ** ಎಂದೂ ತಪ್ಪಾಗಿ ಬರೆಯುತ್ತಾರೆ. ಆ ಸ್ವರಕ್ಕೆ (ಋ ಗೆ) ಅರ್ಕಾವೊತ್ತನ್ನು ಕೊಟ್ಟಂತೆ ಆಗುತ್ತದೆ. ಕಾಗುಣಿತದಲ್ಲಿ ಇದು ತಪ್ಪೆನ್ನುತ್ತಾರೆ ವಿದ್ವಾಂಸರು.

**ನೈವೇದ್ಯ** ನಿವೇದಿಸುವ ವಸ್ತು. ನಿವೇದನ ಎಂದರೆ ಒಪ್ಪಿಸುವುದು, ಸಮರ್ಪಣೆ ಮಾಡುವುದು. ಅದು ಪ್ರಾರ್ಥನೆ ಆಗಬಹುದು, ವಸ್ತುವೇ ಆಗಬಹುದು. ದೇವರಿಗೆ ಅರ್ಪಿತವಾದ ವಸ್ತು ನೈವೇದ್ಯ. ನಿವೇದನೀಯಂ **ದ್ರವ್ಯಂ ನೈವೇದ್ಯಮಿತಿ ಕಥ್ಯತೇ**– ಸಂಸ್ಕೃತದ ವಿವರಣೆ.

**ನೊಣಗಲಲಿ** ಕುಮಾರವ್ಯಾಸ ಭಾರತದಲ್ಲಿ ಕರ್ಣಪರ್ವದಲ್ಲಿ ಸಂಧಿ ೫. ಪದ್ಯ ೩೩ ರಲ್ಲಿ ಈ ಮಾತು ಬರುತ್ತದೆ. ಆ ಪದ್ಯ ಹೀಗಿದೆ:

> ***ಒಣಗುತಿದೆ ಕುರುವಂಶಲತೆ ಫಲು***
> ***ಗುಣನ ಕೋಪಾನಳನ ನಾಲಗೆ***
> ***ಕೆಣಕುತಿದೆ ಕಕ್ಕುಲಿತೆ ಬಟ್ಟರೆ ಕಾಣೆ ಕಾವವರ***
> ***ಅಣಕಿಸದೆ ಕಾರುಣ್ಯವರ್ಷವ***
> ***ನೊಣಗಲಲಿ ಸುರಿ***

ಇದು ಕೌರವನು ಶಲ್ಯನನ್ನು ಕರ್ಣನ ಸಾರಥಿಯಾಗುವಂತೆ ಬೇಡಿಕೊಳ್ಳುವ ಪ್ರಸಂಗ. ಈ ಪದ್ಯದಲ್ಲಿ ನೊಣಗಲಲಿ ಎಂಬ ಶಬ್ದವೇ ಇಲ್ಲ. ಇರುವ ಶಬ್ದ ಒಣಗಲಲಿ. ಒಣಗಲು ಎಂದರೆ, ಒಣಗುವುದಕ್ಕೆ ಬಂದಿರುವ ಕೌರವ ಸೈನ್ಯ. ವರ್ಷವನು + ಒಣಗಲಲಿ ಎಂದು ಶಬ್ದವನ್ನು ಬಿಡಿಸಿಕೊಳ್ಳಬೇಕು. ಒಣಕಲು = ಒಣಗಲು. ಎರಡೂ ಒಂದೇ ಶಬ್ದ.

**ನೋಂದಾಯಿಸು – ನೊಂದಾಯಿಸು**

ಇದು ನಮಗೆ ಮರಾಠಿಯಿಂದ ಬಂದ ಶಬ್ದ. ಅಲ್ಲಿ ಇದು ನೋಂದಣೆ ಎಂದು ದೀರ್ಘವಾದ ರೂಪದಲ್ಲಿದೆ. ಮಹಾರಾಷ್ಟ್ರದ ಭಾಷೆಯಲ್ಲಿ ನೋಂಧ್, ಹಿಂದಿಯಲ್ಲಿ ನೋಂದ್‌ನಾ, ಸಿಂಧೀ ಭಾಷೆಯಲ್ಲಿ ನುಂಧಣೂಂ, ಗುಜರಾತಿಯಲ್ಲಿ ನೋಂದವೂಂ. ಈ ಶಬ್ದಕ್ಕೆ ಸಂಸ್ಕೃತದ ಮೂಲವೇ ಇರಬೇಕು ಎಂದೂ ಸೂಚಿಸುತ್ತಾರೆ ಕೆಲವರು. ಚರಿತ್ರೆ ಹೀಗಿರುವುದರಿಂದ ನೊಂದಾಯಿಸು ಎಂಬ ರೂಪ ತಪ್ಪು. ಅದನ್ನು ಉಪಯೋಗಿಸಬಾರದು. ನೋಂದಾಯಿಸು ಸರಿ. **ದಾಖಲು ಮಾಡು** ಎಂದರ್ಥ.

**ನೋಟೀಸು** ಎಂಬುದು ಇಂಗ್ಲಿಷಿನಿಂದ ಬಂದ ಶಬ್ದ. Notice ಇದು ನೋಟೀಸು ಆಗಿದೆ.

ಇಂಗ್ಲಿಷ್ ಶಬ್ದಗಳಿಗೆ ಉ ಎಂಬ ಪ್ರತ್ಯಯವನ್ನು ಹತ್ತಿಸಿಬಿಟ್ಟರೆ ಅದು ಕನ್ನಡ ಶಬ್ದ. ನೋಟೀಸು ಎಂದರೆ ಒಂದು ಎಚ್ಚರಿಕೆಯನ್ನೋ ಒಂದು ವಿಚಾರವನ್ನೋ ತಿಳಿಸುವುದು. ಇದು ಬರಹದಲ್ಲಿರಬಹುದು, ಮಾತಿನಲ್ಲಿ ತಿಳಿಸಿರಬಹುದು. ಇದು ಯಾವುದಾದರೂ ಒಪ್ಪಂದದ ಅಂತ್ಯವನ್ನು ತಿಳಿಸಬಹುದು.

**ನ್ಯಗ್ರೋಧ ಪರಿಮಂಡಲೆ** ಈ ಶಬ್ದವು ಹೆಚ್ಚು ವಿವರಣೆಯನ್ನು ನಿರೀಕ್ಷಿಸುತ್ತದೆ. ಶಿಲ್ಪಶಾಸ್ತ್ರದಲ್ಲಿ ವಿಗ್ರಹ ನಿರ್ಮಾಣಕ್ಕೆ ಕೆಲವು ಅಳತೆಗಳನ್ನು ಇಟ್ಟುಕೊಂಡಿರುವುದನ್ನು ನಾವು ತಿಳಿದುಕೊಳ್ಳಬಹುದು. ನ್ಯಗ್ರೋಧ ಪರಿಮಂಡಲ ಎನ್ನುವುದು ಅಂಥ ಒಂದು ಅಳತೆ. ಕೈ ಎರಡನ್ನೂ ಅಡ್ಡಲಾಗಿ ಚಾಚಿ ಒಂದು ಕೈಯಲ್ಲಿನ ಮಧ್ಯದ ಬೆಟ್ಟಿನ ತುದಿಯಿಂದ ಮತ್ತೊಂದು ಕೈಯಿನ ಮಧ್ಯಮದ ತುದಿಯವರೆಗೂ ಒಂದು ಗೆರೆ ಎಳೆದು ತಲೆಯ ತುದಿಯಿಂದ ಕಾಲಿನವರೆಗೆ ಮತ್ತೊಂದು ಗೆರೆ ಎಳೆದು ಆ ನಾಲ್ಕು ತುದಿಗಳು ಸೇರುವಂತೆ ಒಂದು ವೃತ್ತವನ್ನು ರಚಿಸಿದರೆ ಅದು ಪರಿಮಂಡಲ ಎಂಬ ಅಳತೆ. ಇಂಥ ಸ್ವರೂಪವನ್ನು ಹೊಂದಿರುವ ವ್ಯಕ್ತಿ ನ್ಯಗ್ರೋಧ ಪರಿಮಂಡಲದ ಆಕಾರವುಳ್ಳವನು ಎಂಬ ಹೆಸರಿಗೆ ತಕ್ಕವನಾಗುತ್ತಾನೆ.

ನ್ಯಗ್ರೋಧ ಎಂದರೆ ಆಲದ ಮರ. ನ್ಯಕ್ ಎಂದರೆ ಕೆಳಕ್ಕೆ. ರೋಧ ಎಂದರೆ ಬೆಳೆಯುವುದು ಎಂದರ್ಥ. ಆಲವು ಕೆಳಕ್ಕೆ ಬಿಳಿಲು ಬಿಟ್ಟು ಮತ್ತೆ ನೆಲದಲ್ಲಿ ನಿಂತು ಬೆಳೆಯುತ್ತದೆ. ಆದರೆ ಈ ಅಳತೆಗೆ ಆ ಹೆಸರು ಹೇಗೆ ಬಂದಿತು ಎಂಬುದರ ವಿವರ ಸಿಕ್ಕುವುದಿಲ್ಲ. ಒಟ್ಟಿನಲ್ಲಿ ನ್ಯಗ್ರೋಧ ಪರಿಮಂಡಲ ಎಂದರೆ ಸಮರ್ಥನಾದ ಶಿಲ್ಪಿಯು ಕಡೆದಿರುವ ಹಾಗೆ ಸುಂದರಾಕಾರವುಳ್ಳ ವ್ಯಕ್ತಿ ಎಂದರ್ಥ. ನ್ಯಗ್ರೋಧ ಪರಿಮಂಡಲೆ ಎನ್ನುವುದು ಆ ಶಬ್ದದ ಸ್ತ್ರೀಲಿಂಗ. ಸುಂದರ ಶಿಲ್ಪ ವಿಗ್ರಹದಂತೆ ಸಂಪೂರ್ಣ ಸುಂದರಿ ಎಂದರ್ಥ. ಕನ್ನಡ ಸಾಹಿತ್ಯದ ಇತರ ಪುರಾಣಗಳಲ್ಲಿಯೂ ಕೆಲವು ವೇಳೆ ಈ ಶಬ್ದ ಪ್ರಯೋಗವಾಗಿರುವುದುಂಟು. ಪ್ರತಿಮಾ ಕೋಶದಲ್ಲಿ ಬೃಹತ್ಸಂಹಿತೆಯ ಆಧಾರದ ಮೇಲೆ ಈ ಶ್ಲೋಕವನ್ನು ಆಧಾರವಾಗಿ ಕೊಡಲಾಗಿದೆ. **ಉಚ್ಛ್ರಾಯಃ ಪರಿಣಾಹಸ್ತು ಯಸ್ಯಕೃತ್ಯಾ ಶರೀರಿಣಾತು ಸನರಃ ಪಾರ್ಥಿವೋಜ್ಞೇಯೋ ನ್ಯಗ್ರೋಧ ಪರಿಮಂಡಲಃ.** ರಾಮಾಯಣದ ಅರಣ್ಯಕಾಂಡ ೪೭-೩೪.

*ಸರ್ವಲಕ್ಷಣ ಸಂಪನ್ನಂ ನ್ಯಗ್ರೋಧಪರಿಮಂಡಲಂ*
*ಸತ್ಯಸಂಧಂ ಮಹಾಭಾಗಮಹಂ ರಾಮಮನುವ್ರತಾ ॥*

ಸಂಸ್ಕೃತ ಸಾಹಿತ್ಯದಲ್ಲಿ ಇದೇ ಈ ಶಬ್ದದ ಮೊದಲ ಪ್ರಯೋಗವಾಗಿರಬಹುದು.

**ನ್ಯರ್ಬುದ** ೧೦ ಸಾವಿರ ಕೋಟಿಯ ಸಂಖ್ಯೆಗೆ ಇರುವ ಸಂಸ್ಕೃತದ ಹೆಸರು. ಇದೇ ನಿರ್ಬುದ ಎಂಬ ಹೆಸರನ್ನು ಹೊಂದಿದೆ.

**ನ್ಯಾಸ** ಅಸು = ಇಡು ಎಂಬ ಧಾತುವಿನಿಂದಾದ ಶಬ್ದ ಇದು. ಇದಕ್ಕೆ ಅನೇಕ ಅರ್ಥಗಳಿವೆ. *೧. ಇಡುವುದು ೨. ಮತ್ತೊಬ್ಬರ ಬಳಿ ಇಟ್ಟಿರುವ ವಸ್ತು, ಇಡುಗಂಟು ೩. ತ್ಯಜಿಸುವುದು ೪. ಅರ್ಪಣೆ ಮಾಡುವುದು.* ಇದಕ್ಕೆ ಸಂದರ್ಭವನ್ನು ಅನ್ವಯಿಸಿ ಅರ್ಥ ಮಾಡಬೇಕು. ನ್ಯಾಸ ಎಂದರೆ ಕಾದಂಬರಿ ಎಂಬ ಅರ್ಥವೂ ಇದೆ. ಬೇರೆ ಅರ್ಥಗಳಿಲ್ಲದೆ ಮುಟ್ಟುವುದು ಎಂಬ ಅರ್ಥದಲ್ಲಿ ಅಂಗನ್ಯಾಸ ಶಿರನ್ಯಾಸ ಎಂಬ ಪದಗಳಲ್ಲಿ ಉಪಯೋಗವಾಗುತ್ತದೆ. ಮಂತ್ರಗಳನ್ನು ಪಠಿಸುವ ಸಮಯದಲ್ಲಿ ದೇಹದ ಅಂಗಾಂಗಗಳನ್ನು ಹಸ್ತದಿಂದ ಸ್ಪರ್ಶ ಮಾಡುವುದು ಎಂಬ ಅರ್ಥವನ್ನು ಅದು ನೀಡುತ್ತದೆ.

**ನ್ಯಾರಿ** ಇದು ಪಾರಸೀ ಭಾಷೆಯ ನಹಾರ್, ನಹಾರೀ ಎಂಬ ಶಬ್ದದಿಂದ ಬಂದದ್ದು. ಕನ್ನಡಕ್ಕೆ

ಮರಾಠೀ ಭಾಷೆಯ ನ್ಯಾಹರೀ ಶಬ್ದದ ಮೂಲಕ ಬಂದಿದೆ. ಇದಕ್ಕೆ ಬೆಳಗಿನ ಉಪಹಾರ, Breakfast. ನಾಷ್ಟ, ನ್ಯಾರಿ ಶಬ್ದಕ್ಕೆ ನ್ಯಾರೆ, ನೇರೆ, ನ್ಯಾಹರಿ, ನ್ಯಾಹರೆ ಎಂಬ ಪರ್ಯಾಯ ರೂಪಗಳೂ ಇವೆ. ಮರಾಠೀ ಭಾಷೆ ಹೆಚ್ಚಾಗಿರುವ ಕಡೆ ಈ ಶಬ್ದದ ಪ್ರಯೋಗ ಅಧಿಕ.

## ಪ

**ಪಂಕ್ತಿ, ಪಙ್ತಿ ಇವುಗಳಲ್ಲಿ ಯಾವುದು ಸರಿ?** ಈ ಶಬ್ದವನ್ನು ಸಂಸ್ಕೃತದಲ್ಲಿ ಪಙ್ತಿ ಎಂದೂ ಕನ್ನಡದಲ್ಲಿ ಪಂಕ್ತಿ ಎಂದೂ ಬರೆಯುತ್ತಾರೆ. ಹೀಗೆ ವರ್ಗೀಯ ವ್ಯಂಜನಗಳು ಆಯಾ ವರ್ಗದ ಅನುನಾಸಿಕದೊಡನೆ ಸೇರಿರುವುದು ಸಂಸ್ಕೃತದ ಪದ್ಧತಿ. ಇದಕ್ಕೆ ಬದಲಾಗಿ ಕನ್ನಡದಲ್ಲಿ ಎಲ್ಲ ಅನುನಾಸಿಕದ ಸ್ಥಾನದಲ್ಲಿ ಅನುಸ್ವಾರವನ್ನು ಉಪಯೋಗಿಸುತ್ತ ಬಂದಿದ್ದಾರೆ. ಈ ಅಭ್ಯಾಸ ಕಲಿಯಲು ಸರಳ, ಬರೆಯಲು ಸುಲಭ, ಪ್ರಯೋಜನಕಾರಿ.

ನಿಘಂಟುಗಳಲ್ಲಿ ಶಬ್ದಗಳ ಅಕಾರಾದಿಯನ್ನು ಸಿದ್ಧಪಡಿಸುವುದಕ್ಕೆ ಇದೇ ಹೆಚ್ಚು ಸಹಾಯಕ. ಆದುದರಿಂದ ಕನ್ನಡದಲ್ಲಿ ಪಂಕ್ತಿ ಎಂದು ಬರೆಯುವುದು ತಪ್ಪಲ್ಲ; ಅದೇ ಸರಿ. ಮುದ್ರಣದ ಯಾಂತ್ರಿಕ ಬೆಳವಣಿಗೆಯ ಸಹಾಯವನ್ನು ಹೆಚ್ಚಾಗಿ ಪಡೆಯಲು ಇದು ಉಚಿತವಾಗಿದೆ. ಬರಹದಲ್ಲಿ ಕ್ಲಿಷ್ಟತೆಯನ್ನು ತಪ್ಪಿಸಲೂ ಇದು ಉತ್ತಮ ಮಾರ್ಗವಾಗಿದೆ.

**ಪಂಚಪ್ರಾಣ** ಈ ಸಂಸ್ಕೃತದ ಶಬ್ದಕ್ಕೆ ಮಾನವನ ದೇಹದೊಳಗೆ ಇರುವ ಐದು ಪ್ರಾಣವಾಯುಗಳು ಎಂದರ್ಥ. ಈ ಐದು ವಾಯುಗಳ ಹೆಸರುಗಳು ಕ್ರಮವಾಗಿ *೧. ಪ್ರಾಣ, ೨. ಅಪಾನ, ೩. ಸಮಾನ, ೪. ಉದಾನ, ೫. ವ್ಯಾನ.*

ಪ್ರಾಣವಾಯುವು ಹೃದಯದಲ್ಲಿ, ಅಪಾನವು ಗುದ ಪ್ರದೇಶದಲ್ಲಿ, ಸಮಾನವು ಹೊಕ್ಕುಳಲ್ಲಿ, ಉದಾನವು ಕಂಠದಲ್ಲಿ, ವ್ಯಾನವು ಶರೀರದ ಎಲ್ಲ ಭಾಗಗಳಲ್ಲಿಯೂ ಇರುವುವು. ಪ್ರಾಣವಾಯುವಿನಿಂದ ಅನ್ನವು ದೇಹಕ್ಕೆ ಸೇರುವುದು. ಅಪಾನದಿಂದ ಮಲವಿಸರ್ಜನೆಯಾಗುವುದು. ಸಮಾನದಿಂದ ಆಹಾರವು ಜೀರ್ಣವಾಗುವುದು. ಉದಾನದಿಂದ ಮಾತನಾಡುವುದು ಸಾಧ್ಯವಾಗುವುದು. ವ್ಯಾನದಿಂದ ಹೊರಗಿನ ನೋಟವು ಸಾಧ್ಯವಾಗುವುದು. ಇದು ಪಂಚಪ್ರಾಣಗಳ ಸಂಗ್ರಹವಾದ ಪರಿಚಯ. ನನಗೆ ಮಸಾಲೆದೋಸೆಯನ್ನು ಕಂಡರೆ ಪಂಚಪ್ರಾಣ ಎಂದರೆ ಸರ್ವಸ್ವ ಎಂದರ್ಥ. ತಮಗೆ ಅತ್ಯಂತ ಆತ್ಮೀಯರಾದವರಿಗೂ ಆತ್ಮೀಯವಾದ ವಸ್ತುವಿಗೂ ಪಂಚಪ್ರಾಣ ಎಂಬ ಶಬ್ದವನ್ನು ಉಪಯೋಗಿಸುತ್ತಾರೆ.

**ಪಂಚಾಂಗ** ಎಂಬ ಸಂಸ್ಕೃತ ಶಬ್ದಕ್ಕೆ ಅನೇಕ ಅರ್ಥಗಳಿವೆ. ಮೊದಲನೆಯದು ರಾಜನೀತಿಗೆ ಸಂಬಂಧಪಟ್ಟದ್ದು. ಕರ್ಮಾರಂಭೋಪಾಯ = ಕಾರ್ಯವನ್ನು ಮೊದಲು ಮಾಡುವ ಉಪಾಯಗಳ ತಿಳಿವಳಿಕೆ; ಪುರುಷದ್ರವ್ಯ ಸಂಪತ್ತು = ಜನಬಲ, ದ್ರವ್ಯ ಬಲ ಇವುಗಳನ್ನು ಸೇರಿಸಿರುವುದು; ದೇಶ ಕಾಲ ವಿಭಾಗ = ಯಾವ ಪ್ರದೇಶದಲ್ಲಿ ಎಂದು ಕಾರ್ಯ ನಡೆಯಬೇಕೆಂಬ ನಿರ್ಧಾರ; ವಿನಿಪಾತ ಪ್ರತೀಕಾರ = ಸೋತದ್ದಕ್ಕೆ ಪ್ರತಿಯಾಗಿ ಮಾಡುವ ಸಾಧನೆ; ಕಾರ್ಯಸಿದ್ಧಿ = ಕೊನೆಗೆ ಪಡೆಯುವ ಗೆಲುವು. ರಾಜನ ಸಕಲ ಆಡಳಿತದಲ್ಲಿ ಸಹಾಯಕವಾದ ಈ ಮಂತ್ರ ತುಂಬ ಪ್ರಸಿದ್ಧವಾದದ್ದು.

ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದಂತೆ, ಪ್ರತಿದಿನದ ತಿಥಿ, ವಾರ, ನಕ್ಷತ್ರ, ಯೋಗ, ಕರಣ ಎಂಬ ಐದು ಅಂಶಗಳು ಮತ್ತು ಈ ವಿವರಣೆಯನ್ನು ನೀಡುವ ಕೈಪಿಡಿಯಂತಿರುವ ಪುಸ್ತಕ. ಅದೇ ಕ್ಯಾಲೆಂಡರ್.

ಸಾಮಾನ್ಯವಾಗಿ ಪೊಳ್ಳುಹರಟೆಗೂ ಪಂಚಾಂಗ ಎಂದು ಉಪಯೋಗಿಸುತ್ತಾರೆ. ಉದಾ: ನಿನ್ನ ಪಂಚಾಂಗ ಸಾಕು. ಎದ್ದು ನಡಿ. ವೈದ್ಯಶಾಸ್ತ್ರದಲ್ಲಿ ಮರದ ತೊಗಟೆ, ಎಲೆ, ಹೂವು, ಬೇರು, ಹಣ್ಣು ಅಥವಾ ಕಾಯಿ ಇವುಗಳಿಗೆ ಪಂಚಾಂಗ ಎಂಬ ಹೆಸರಿದೆ.

ಇದಲ್ಲದೆ ವಾಸ್ತುಶಿಲ್ಪದಲ್ಲಿ ಮನೆ ಕಟ್ಟುವುದಕ್ಕೆ ಮುಂಚೆ ಮಾಡುವ ಪಂಚ ಶಿಲಾಸ್ಥಾಪನೆಗೆ ಅಂದರೆ ತಳಪಾಯಕ್ಕೆ ಪಂಚಾಂಗ ಎಂಬ ಹೆಸರಿದೆ.

ಪಂಚಾಂಗ ಪ್ರಣಾಮ ಎಂಬ ಒಂದು ಬಗೆಯ ನಮಸ್ಕಾರ ಮಾಡುವುದಿದೆ. ಎರಡು ಕೈ, ಎರಡು ಮಂಡಿ, ತಲೆ, ದೃಷ್ಟಿ ಮತ್ತು ಮಾತು ಎಂಬ ಐದು ಸೇರಿ ಮಾಡುವ ನಮಸ್ಕಾರ. ಸಾಷ್ಟಾಂಗ ಪ್ರಣಾಮದಂತೆ ಇದೂ ಮುಖ್ಯ. ಸ್ತ್ರೀಯರು ಸಾಷ್ಟಾಂಗ ಮಾಡಬಾರದೆಂದು ಒಂದು ಸಂಪ್ರದಾಯವೇ ಇದೆ.

ಪಂಚಾಂಗರಾಯ ಎಂಬ ಐದು ಬಣ್ಣಗಳ ತೋರಣದ ವಿವರಣೆ ಸಾಹಿತ್ಯದಲ್ಲಿ ಬರುತ್ತದೆ. ಇದೊಂದು ಬಗೆಯ ಅಲಂಕಾರವಾದ ತೋರಣ. ಹೀಗೆ ಇದೊಂದು ವಿಸ್ತಾರವಾದ ಪ್ರಪಂಚ.

**ಪಂಚಾಯಿತಿ** ಪಂಚಾಯಿತಿ — ಪಂಚಾಯತಿ ಈ ಎರಡರಲ್ಲಿ ವ್ಯತ್ಯಾಸವೇನು? ಹಿಂದೀ ಭಾಷೆಯಲ್ಲಿ ಪಂಚಾಇತ್ ಎಂಬ ಶಬ್ದದ ಕನ್ನಡದ ಎರಡು ರೂಪಗಳು ಅವು. ಮರಾಠಿಯಲ್ಲಿಯೂ ಈ ಶಬ್ದ ಪ್ರಯೋಗದಲ್ಲಿದೆ. ಗ್ರಾಮದ ಆಡಳಿತವನ್ನು ನಡೆಸುವ ಸ್ಥಳೀಯ ಸಂಸ್ಥೆ ಎಂದು ಇದಕ್ಕೆ ಅರ್ಥ. ಪಂಚಾಯ್ತಿ ಎಂಬ ರೂಪವೂ ಪ್ರಚಾರದಲ್ಲಿದೆ. ಈ ಶಬ್ದಗಳಿಗೆ ಬೇರೆ ಅರ್ಥಗಳೂ ಇವೆ. *೧. ಗೊಂದಲ, ಗೋಜು, ೨. ಜಗಳ, ೩. ಭಿನ್ನಾಭಿಪ್ರಾಯ ೪. ತೀರ್ಮಾನ.* ಪಂಚ ಶಬ್ದಕ್ಕೆ ಸ್ಥಳೀಯ ಸಂಸ್ಥೆಯ ಸದಸ್ಯ ಎಂದರ್ಥ. ಪಂಚರು ಎಂದರೆ ಆ ಸಭೆಯ ಸದಸ್ಯರು ಮತ್ತು ಅವರು ಸೇರುವ ಸಭೆ ಎಂದರ್ಥಗಳಿವೆ.

**ಪಂಚೆ** ಇದು ಗಂಡಸರು ಉಡುವ ಮತ್ತು ಹೊದೆಯುವ ಬಟ್ಟೆ. ಇದು ದೇಶ್ಯ ಶಬ್ದ. ಇದಕ್ಕೆ ಪಂಚ, ಪಂಜ, ಪಂಜೆ ಎಂಬ ಪರ್ಯಾಯ ರೂಪಗಳಿವೆ. ಕನ್ನಡ ದೇಶದ ಬೇರೆ ಬೇರೆ ಕಡೆಗಳಲ್ಲಿ ಇವುಗಳನ್ನು ಆಡುಮಾತಿನಲ್ಲಿ ಪ್ರಯೋಗಿಸುತ್ತಾರೆ. ಸರಿಗೆ ಪಂಚೆ ಎಂದರೆ ಅಂಚಿನಲ್ಲಿ ಕಲಾಪತ್ತು ಇರುವ ಬೆಲೆ ಬಾಳುವ ಪಂಚೆ. ಇದನ್ನು ಹೆಚ್ಚಾಗಿ ಸಿರಿವಂತರು ಉಡುತ್ತಾರೆ. ಒಂದೇ ಪಂಚೆಯನ್ನು ಉಟ್ಟು ಅದರ ಮತ್ತೊಂದು ಭಾಗವನ್ನು ಹೊದೆಯುವ ಕಾಲವೊಂದಿತ್ತು. ಅದು ೯ ಮೊಳದ ಪಂಚೆ. ಈಗೆಲ್ಲ ಒಂಟಿ ಮಡಿಕೆಯ ಪಂಚೆಗಳೇ ಹೆಚ್ಚು. ಪಂಚೆಯನ್ನು ಅನೇಕ ರೀತಿಯಲ್ಲಿ ಉಡುತ್ತಾರೆ. ಕಚ್ಚೆ ಪಂಚೆ ಒಂದು ಬಗೆ. ದಟ್ಟಿಯುಡುವುದು ಮತ್ತೊಂದು. ಇವು ಪ್ರಧಾನ ರೀತಿಗಳು. ಇದು ಪಂಚೆಯ ಕಿರುಚರಿತ್ರೆ.

**ಪಂಜೆ** ಎಂಬುದು ಪ್ರಸಿದ್ಧ ಕನ್ನಡ ಲೇಖಕರಾಗಿದ್ದ ಮಂಗೇಶರಾಯರ ವಂಶದ ಹೆಸರು. ಇವರ ಪೂರ್ವಿಕರು ದಕ್ಷಿಣ ಕನ್ನಡ ಜಿಲ್ಲೆಯ ಪಂಜ ಎಂಬ ಊರಿನಲ್ಲಿ ನೆಲೆಸಿದ್ದುದರಿಂದ ಅವರಿಗೆಲ್ಲ ಪಂಜೆ ಎಂಬ ಹೆಸರು ಬಂತು. ಪಂಜೆ ಮಂಗೇಶರಾಯರು (೧೮೭೪-೧೯೩೭) ದೊಡ್ಡ ವಿದ್ವಾಂಸರು. ಅವರು 'ಕವಿಶಿಷ್ಯ' ಎಂಬ ಕಾವ್ಯನಾಮದಲ್ಲಿ ಕವನಗಳನ್ನೂ ಕತೆಗಳನ್ನೂ ರಚಿಸುತ್ತಿದ್ದರು. ಪಂಜೆ ಎಂಬ ಮತ್ತೊಂದು ಶಬ್ದವಿದೆ. ಇದರ ವ್ಯುತ್ಪತ್ತಿ ಅನಿಶ್ಚಿತ. ಅದಕ್ಕೆ ೧. ಕ್ಷುದ್ರ, ಅಲ್ಪ. ೨. ಬಡ, ೩. ನೀಚ ಮುಂತಾದ ಅರ್ಥಗಳಿವೆ. ಈ ಶಬ್ದ ವ್ಯಾಪಕವಾಗಿ ಪ್ರಯೋಗದಲ್ಲಿಲ್ಲದಿದ್ದರೂ ಕಾವ್ಯಗಳಲ್ಲಿ ಅಲ್ಲಲ್ಲಿ ಕಾಣಬರುತ್ತದೆ.

**ಪಂಟು** ಈ ಶಬ್ದಕ್ಕೆ ಮೂಲ ಸಂದೇಹಾತ್ಮಕವಾಗಿದೆ. ಇದು ಪ್ರಯೋಗವಾಗಿರುವ ಕಡೆಗಳಲ್ಲಿ ಜಂಬದ, ವ್ಯರ್ಥವಾದ ಎಂಬ ಅರ್ಥ ಬರುತ್ತದೆ. ಕೆಲವು ಕಡೆ ಮೋಸ, ವಂಚನೆ ಎಂಬ ಅರ್ಥಗಳು ಬರುತ್ತವೆ. ಇನ್ನೂ ಇತರ ವಿವರಗಳನ್ನು ಹುಡುಕಬೇಕು.

**ಪಂಡಿತ** ಸಂಸ್ಕೃತದಲ್ಲಿ ಪಂಡಾ ಎಂಬುದು ಒಂದು ಶಬ್ದ. ಇದಕ್ಕೆ ಬುದ್ಧಿ, ಜ್ಞಾನ ಎಂದು ಅರ್ಥ. ಪಂಡಿತ ಎಂಬ ಶಬ್ದಕ್ಕೆ ಸಮಾನವಾದ ಇತರ ಶಬ್ದಗಳನ್ನು ಅಮರಕೋಶದಲ್ಲಿ ಕೊಟ್ಟಿದೆ: ವಿದ್ವಾನ್, ವಿಪಶ್ಚಿತ್, ದೋಷಜ್ಞ, ಸುಧೀ, ಕೋವಿದ, ಬುಧ, ಧೀರ, ಮನೀಷೀ, ಜ್ಞ, ಪ್ರಾಜ್ಞ, ಸಂಖ್ಯಾವಾನ್, ಕವಿ — ಈ ಹನ್ನೆರಡು ಶಬ್ದಗಳೂ ಪಂಡಿತ ಎಂಬುದಕ್ಕೆ ಸಮಾನವಾದುದು. ತಿಳಿವಳಿಕೆಯುಳ್ಳ ವಿದ್ವಾಂಸನಿಗೆ ಈ ಮಾತು ಅನ್ವಯಿಸುತ್ತದೆ.

**ಪಕ್ಷಿ** ಈ ಸಂಸ್ಕೃತ ಶಬ್ದಕ್ಕೆ ಕನ್ನಡದಲ್ಲಿ ಹಕ್ಕಿ ಎಂಬ ತದ್ಭವ ರೂಪ ಬರುತ್ತದೆ. *ಹಿಂದಿಯಲ್ಲಿ ಪಂಚಿ ಆದಹಾಗೆ.* ಪಶು ಎಂಬ ಶಬ್ದ ಪಸು ಎಂದಾಗುತ್ತದೆ. ಅದೇ ಮುಂದೆ ಹಸು ಆಗಿದೆ. ಹಾಗೆಯೇ ಪಕ್ಕಿ ಎಂಬುದು ಹಕ್ಕಿ ಎಂದಾಗುತ್ತದೆ. ಪಕ್ಷಿ > ಪಕ್ಕಿ > ಹಕ್ಕಿ.

**ಪಕ್ಷಿನೋಟ** ಎಂದರೇನು? ಈ ಶಬ್ದಪುಂಜವು ನಮಗೆ ಇಂಗ್ಲಿಷ್ ಭಾಷೆಯಿಂದ ಬಂದದ್ದು. ಇಂಗ್ಲಿಷಿನಲ್ಲಿ A bird's eye view ಎಂಬ ಪ್ರಯೋಗವಿದೆ. ಇದೊಂದು ನುಡಿಗಟ್ಟು. ಇದಕ್ಕೆ 'ಮೇಲಿಂದ ಕಾಣುವ ದೃಶ್ಯ, ಹಾರುವ ಹಕ್ಕಿಗೆ ಕಾಣುವ ಒಟ್ಟು ನೋಟ' ಎಂದು ಅರ್ಥ. ಇದನ್ನು ಕನ್ನಡಕ್ಕೆ ಆಮದು ಮಾಡಿಕೊಂಡು 'ಪಕ್ಷಿನೋಟ' ಎಂಬ ಶಬ್ದಪುಂಜವನ್ನು ಟಂಕಿಸಿದ್ದಾರೆ. 'ವಿಹಂಗಮ ದೃಶ್ಯ' ಎಂಬುದೂ ಬಳಕೆಯಲ್ಲಿದೆ. ಚೆನ್ನಾಗಿರುವುದರಿಂದ ಉಳಿದುಕೊಂಡು ಬಂದಿದೆ. ಕನ್ನಡದ ಜಾಯಮಾನಕ್ಕೂ ಹೊಂದಿಕೊಂಡಿರುವುದರಿಂದ ಉಪಯೋಗಿಸಬಹುದು.

**ಪಗರಣ** ಇದು ಸಂಸ್ಕೃತದ ಪ್ರಕರಣ ಎಂಬ ಶಬ್ದದ ತದ್ಭವ. ಸಂಸ್ಕೃತದ ಹತ್ತು ಬಗೆಯ ದೃಶ್ಯಕಾವ್ಯಗಳಲ್ಲಿ ಒಂದು. ಇದು ಶೃಂಗಾರ ಪ್ರಧಾನವಾದ ಕಲ್ಪಿತ ಕಥೆಯಿಂದ ಕೂಡಿರುತ್ತದೆ. ಹಗರಣ, ಹಗಣ, ಹಗರಣೆ, ಹಗರಣೆ ಮುಂತಾದ ಪರ್ಯಾಯ ರೂಪಗಳಿವೆ. ಕನ್ನಡದಲ್ಲಿ ಈ ಶಬ್ದಕ್ಕೆ ನಾಟಕ ಎಂಬುದಲ್ಲದೆ *೧. ಯಕ್ಷಗಾನ, ಬಯಲಾಟ; ೨. ಗಲಾಟೆ, ಅವಾಂತರ, ಗೊಂದಲ; ೩. ವೇಷಧಾರಣೆ; ೪. ಜಗಳ, ಕದನ* ಮುಂತಾದ ಅರ್ಥಗಳೂ ಇವೆ.

**ಪಗಲ್ಮಣಿ** ಎಂಬುದು ಕನ್ನಡದ ಸಮಾಸ. ಹಗಲಿನಲ್ಲಿ ಮಣಿಯಂತೆ ಹೊಳೆಯುವವನು ಎಂದರೆ ಸೂರ್ಯ ಎಂದರ್ಥ. ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾಗಿ ಪ್ರಯೋಗವಾಗಿರುವ ಶಬ್ದ ಇದು. ಅಚ್ಚಗನ್ನಡದಲ್ಲಿ ನೇಸಱ್ - ನೇಸರು ಎಂದು ಉಪಯೋಗವಾಗುವ ಶಬ್ದದ ಅರ್ಥವೇ ಇದಕ್ಕೆ ಹೊಂದುತ್ತದೆ.

**ಪಚ್ಚ** ಎಂಬುದು ಮೂರು ಬಗೆಯಾಗಿ ಅರ್ಥವನ್ನು ನೀಡುತ್ತದೆ. *೧. ಹಸುರು ೨. ಒಡವೆ, ಆಭರಣ ೩. ಪಸು* = ವಿಭಾಗ ಮಾಡು. ಪಚ್ಚ = ಪಾಲು ಮಾಡಿದ. 'ಪಚ್ಚ' ಎಂಬುದು ಪಸುರ್ = ಹಸುರು ಎಂಬ ಅರ್ಥದ ಶಬ್ದದಿಂದ ಬಂದಿದೆ. 'ಹಚ್ಚ ಹಸುರು' ಎಂಬ ರೂಪವನ್ನು ನೋಡಿ. 'ಪಚ್ಚ ಕರ್ಪೂರ' ಎಂಬುದು ಕರ್ಪೂರವೆಂಬ ಮರದ ರಸದಿಂದ ತೆಗೆಯುವ ನಸುಹಸುರು ಬಣ್ಣದ ಸುಗಂಧ ದ್ರವ್ಯ. ಪಚ್ಚ ಬಾಳೆ ಹಸುರು ಬಣ್ಣದ್ದಿರುವಾಗಲೆ ತಿನ್ನಬಹುದಾದ ಬಾಳೆಯ ಹಣ್ಣು. ಎರಡು ಶಬ್ದಗಳೂ ಸರಿಯಾಗಿವೆ. ಹಸುರು, ಹಸರು, ಹಸಿರು ಎಂಬ ಮೂರೂ ರೂಪಗಳಲ್ಲಿ ಪ್ರಯೋಗವಾಗುತ್ತಿದೆ. ಮೂಲ ರೂಪ 'ಪಸುರ್'.

**ಪಟಕಾರ** ಎಂದರೆ ನೆಯಿಗೆಯವನು, ವಸ್ತ್ರವನ್ನು ನೇಯುವವನು ಎಂದರ್ಥ. ಪಟ ಎಂದರೆ ಸಂಸ್ಕೃತದಲ್ಲಿ ಬಟ್ಟೆ. ಕಾರ ಎಂಬುದು ಒಂದು ಪ್ರತ್ಯಯ. ಪಟ + ಕಾರ = ಪಟಕಾರ. ಕುಂಭ + ಕಾರ = ಕುಂಭಕಾರ ಇದ್ದ ಹಾಗೆ. ಇದೇ ಮುಂದೆ ಕನ್ನಡದಲ್ಲಿ ಕುಂಬಾರ ಆಗಿದೆ.

**ಪಟ್ಟಿಸ** ಇದಕ್ಕೆ ಎರಡು ಅರ್ಥಗಳಿವೆ. *೧.* ಮಲ್ಲಯುದ್ಧದಲ್ಲಿ ಅಂದರೆ ಕುಸ್ತಿಯಲ್ಲಿ ಒಂದು ಪಟ್ಟು — *ಒಂದು ಹಿಡಿತ. ಇದು ಕನ್ನಡ ಶಬ್ದ. ೨. ಭರ್ಜಿ, ಈಟಿ.* ಈ ಶಬ್ದ ಸಂಸ್ಕೃತದ ಪಟ್ಟಿಶ ಎನ್ನುವುದರಿಂದ ಬಂದ ಕನ್ನಡದ ಶಬ್ದ, ತದ್ಭವ.

**ಪಟ್ಟಭದ್ರ ಹಿತಾಸಕ್ತಿ** ಪಟ್ಟಭದ್ರ ಎಂದರೆ ಅಧಿಕಾರದಲ್ಲಿರುವವರು ತಳ ಊರಿರುವ ಸ್ಥಿತಿ

ಎಂದರ್ಥ. ಅವರ ಹಿತವನ್ನು ರಕ್ಷಿಸುವುದರಲ್ಲಿ ಆಸಕ್ತಿ ಹೊಂದಿರುವುದು ಎಂದು ಈ ಶಬ್ದಕ್ಕೆ ಅರ್ಥ. ಇದು ಇಂಗ್ಲಿಷಿನ Vested interest ಎಂಬ ಶಬ್ದಕ್ಕೆ ಸರಿಸಮಾನವಾದ ಶಬ್ದ.

**ಪಟ್ಟಾಂಗ** ಇದು ತುಳುಭಾಷೆಯ ಶಬ್ದ. ಇದಕ್ಕೆ ಪಟಂಗ, ಪಟ್ಟಂಗ, ಪಟ್ಟಾಂಗ ಎಂಬ ಮೂರು ಪರ್ಯಾಯ ರೂಪಗಳಿವೆ. ಈ ಶಬ್ದಕ್ಕೆ ಹರಟೆ, ಅರ್ಥವಿಲ್ಲದ ಮಾತುಕತೆ, ಒಣಮಾತು ಎಂಬ ಅರ್ಥವಿದೆ. ಈ ಶಬ್ದ ಹಿಂದೀ ಭಾಷೆಯವರ ಮಾತಿನಲ್ಲಿಯೂ ಕಂಡುಬರುತ್ತದೆ. ಹಾಗಿದ್ದರೆ ಅದು ಈ ಕಡೆಯಿಂದ ಹಿಂದಿಗೆ ಸೇರಿರುವ ಶಬ್ದ. ಪಟ್ಟಾಂಗಕ್ಕೆ ಕುಳಿತು ಪಟ್ಟಾಭಿಷೇಕವನ್ನೇ ಮರೆತ ಎಂಬುದು ಈಚೆಗೆ ನಿರ್ಮಿತವಾದ ಹೊಸ ಗಾದೆ. ಇಲ್ಲಿ ಪಟ್ಟಾಭಿಷೇಕ = ಕ್ಷೌರ. ಮರಾಠಿಯಲ್ಲಿ ಪಟ್ಟಾಂಗಣ = ಹಜಾರದ ತೊಟ್ಟಿ = open space.

**ಪಟ್ಟೆ ಪಟ್ಟ** ಇದು ಕನ್ನಡದ ಪದ. ಇದರಲ್ಲಿ ಅಧಿಕೃತವಾಗಿ ಒಬ್ಬ ವ್ಯಕ್ತಿಗೆ ಸೇರಿದ ಒಂದು ಜಮೀನಿನ ನಿರ್ದಿಷ್ಟ ಅಳತೆ, ಸ್ವಾಮಿತ್ವ, ಕಂದಾಯ ಮುಂತಾದ ಎಲ್ಲ ವಿವರಣೆಗಳೂ ಇರುತ್ತವೆ. ಇದೇ ಅಧಿಕೃತವಾದ ದಾಖಲು, ಸನ್ನದು.

**ಪಟ್ಣ** ಕನ್ನಡದಲ್ಲಿ ಎರಡು ಬಗೆಯ ಪಟ್ಣಗಳಿವೆ. ಸಂಸ್ಕೃತದಲ್ಲಿರುವ ಪತ್ತನ ಎಂಬ ಶಬ್ದವೇ ಕನ್ನಡದಲ್ಲಿ ಪಟ್ಟಣವಾಗಿದೆ. ಸಂಸ್ಕೃತದಲ್ಲಿಯೂ ಇದಕ್ಕೆ ಸಮೀಪವಾದ ಪಟ್ಟನ ಎಂಬ ರೂಪವಿದೆ. ಇದೇ ಆಡುಮಾತಿನಲ್ಲಿ ಪಟ್ಣ ಆಗಿದೆ. ಇದಕ್ಕೆ ನಗರ, ದೊಡ್ಡ ಊರು ಎಂಬ ಅರ್ಥವಿದೆ. ಇದರಿಂದಲೇ ಪಟ್ಟಣಿಗ, ಪಟ್ಟಣವಾಸ ಮುಂತಾದ ಶಬ್ದಗಳು ಸೃಷ್ಟಿಯಾಗಿವೆ. ಇನ್ನೊಂದು ಪೊಟ್ಟಳ, ಪೊಟ್ಟಣ, ಪೊಟ್ಣ, ಪಟ್ಣ ಎಂಬ ಪರ್ಯಾಯ ರೂಪಗಳಿಗೆ ಸಂಬಂಧಪಟ್ಟ ಶಬ್ದ. ಇದು ದೇಶೀಯ ಶಬ್ದ. ಎಲೆ, ಕಾಗದ ಮುಂತಾದುವುಗಳಿಂದ ಕಟ್ಟಿದ ಪುಡಿಕೆಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಬೆಂಕಿಪಟ್ಣ ಎಂಬ ಶಬ್ದದಲ್ಲಿ ಈ ರೂಪ ಸಿಗುತ್ತದೆ. ಹೀಗೆ ಇರುವ ವ್ಯತ್ಯಾಸವನ್ನು ಗಮನಿಸಿ, ಬರಹದಲ್ಲಿ ಪಟ್ಟಣ = ನಗರ ಎಂಬಂತೆಯೂ ಪೊಟ್ಟಣ = ಪುಡಿಕೆ ಎಂಬಂತೆಯೂ ಉಪಯೋಗಿಸುವುದು ಒಳ್ಳೆಯದು. ಶ್ರೀರಂಗಪಟ್ಟಣ ಶಬ್ದ ಸರಿಯಾಗಿದೆ. ಕುಮಾರವ್ಯಾಸ **'ಸಿಡಿಲ ಪೊಟ್ಟಣಗಟ್ಟಿ ಸೇಕವ ಕೊಡುವರೇ'** ಎಂಬ ಪ್ರಯೋಗದಲ್ಲಿ ಪುಡಿಕೆ ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾನೆ.

**ಪಡಪೋಷಿ** ಎಂಬ ಶಬ್ದ ನಮಗೆ ಮರಾಠಿಯ ಮೂಲಕ ಬಂದಿದೆ. ಕನ್ನಡದಲ್ಲಿ ಈ ಶಬ್ದಕ್ಕೆ ಪಡಪೋಶಿ, ಪಡಪೋಸಿ ಎಂಬ ಇನ್ನೂ ಎರಡು ಪರ್ಯಾಯ ರೂಪಗಳಿವೆ. 'ಪ' ಕಾರವನ್ನು 'ಫ' ಎಂದು ಮಹಾಪ್ರಾಣವಾಗಿ ಬರೆಯುವುದೂ ಉಂಟು. ಕನ್ನಡದಲ್ಲಿ ಈ ಶಬ್ದಕ್ಕೆ *೧. ಕೆಲಸಕ್ಕೆ ಬಾರದ, ನಿರುಪಯೋಗಿಯಾದ, ೨. ಅಜಾಗರೂಕತೆಯ, ಲಕ್ಷ್ಯವಿಲ್ಲದ ೩. ಅಯೋಗ್ಯ, ಕೀಳಾದ, ೪. ನಂಬಿಕೆಗೆ ಅರ್ಹವಲ್ಲದ* ಎಂಬ ಅರ್ಥಗಳಿವೆ. ತುಳು ಭಾಷೆಯಲ್ಲಿಯೂ ಈ ಶಬ್ದ ಪ್ರಯೋಗವಾಗುತ್ತಿದೆ. ಮರಾಠಿಯಲ್ಲಿ ಮತ್ತು ಹಿಂದಿಯಲ್ಲಿ ಈ ಶಬ್ದಕ್ಕೆ ನೆರೆಹೊರೆಯವ ಎಂದರ್ಥ. ಈ ಶಬ್ದಕ್ಕೆ ಮೂಲ ಸಂಸ್ಕೃತವೆಂದು ವಿದ್ವಾಂಸರು ತಿಳಿದಿದ್ದಾರೆ. ಪ್ರತಿವೇಶ ಎಂಬ ಸಂಸ್ಕೃತ ಶಬ್ದ ಪ್ರಾಕೃತದಲ್ಲಿ ಪಡಿವಾಸಿ ಎಂದಾಗುತ್ತದೆ. ಇದೆ ಪಡೋಸಿ ಆಗಿ ಪಂಜಾಬಿ, ಹಿಂದೀ, ಸಿಂಧೀ ಭಾಷೆಗಳಲ್ಲಿಯೂ ಪ್ರಚಾರದಲ್ಲಿದೆ. ಇಲ್ಲೆಲ್ಲ ನೆರೆಹೊರೆ ಎಂದೇ ಅರ್ಥ. ಈ ಶಬ್ದ ಯಾವ ಮಾರ್ಗವಾಗಿ ಯಾರ ಪ್ರಯೋಗದ ಮೂಲಕ ಕನ್ನಡಕ್ಕೆ ಬಂತೋ ಅಂತೂ ಇಲ್ಲಿ ಅದರ ಅರ್ಥ ಹೀನಾರ್ಥವಾಗಿ ಬೆಳೆದುಬಿಟ್ಟಿದೆ. ಇದಕ್ಕೆ ಪ್ರಾಚೀನ ಪ್ರಯೋಗಗಳಿಲ್ಲ. ಎಲ್ಲ ಈಚಿನ ಕಾದಂಬರಿಗಳ ಪ್ರಯೋಗಗಳು. ಅಂತೂ ಸ್ವಾರಸ್ಯಕರವಾದ ಜಾತಕದ ಶಬ್ದ.

**ಪಡುಗಲ್** ಶಾಸನದ ಈ ಶಬ್ದದ ಒಟ್ಟು ಅರ್ಥ ಸ್ಪಷ್ಟವಾಗಿದೆ. ರವಿವರ್ಮನು ರಾಜ್ಯಭಾರ ಮಾಡುತ್ತಿದ್ದಾಗ ಮಲ್ಲಿಗೆಯೆಂಬ ಪ್ರದೇಶದ ರಾಜರ ಹಿರಿಯ ಹೆಂಡತಿ ಕಟಿಗುಜ್ಜೆನಿ ಸತ್ತಾಗ

ಹಾಸಿದ ಪಡುಗಲ್ಲು. ಇದನ್ನು ಕೆಡಿಸಿದವರಿಗೆ ಪಂಚ ಮಹಾಪಾತಕಗಳು ಅಂಟುತ್ತವೆ. ಪಡು ಶಬ್ದಕ್ಕೆ ಸಾಯಿ, ಮರಣ ಹೊಂದು ಎಂಬ ಅರ್ಥವೂ ಇದೆ. 'ಪಡು ಮರಣೇ ಶಯನೇಚ' ಎಂದು ಶಬ್ದಮಣಿ ದರ್ಪಣದಲ್ಲಿ ನಿಘಂಟು ಇದೆ. ಪಡುಶಿಲೆ, ಪಡುಸಿಲೆ ಎಂಬ ಶಬ್ದಗಳೂ ಶಾಸನಗಳಲ್ಲಿ ಕಾವ್ಯಗಳಲ್ಲಿ ಸಿಕ್ಕುತ್ತವೆ. ಅಲ್ಲಿ ಪಡುಶಿಲೆ ಮುಂತಾದ ಶಬ್ದಗಳಿಗೆ ಹಾಸುಗಲ್ಲು ವಿಸ್ತಾರವಾಗಿ ಸಮತಟ್ಟಾಗಿರುವ ಕಲ್ಲು ಅಥವಾ ಬಂಡೆಯ ಮೇಲ್ಭಾಗ ಎಂದು ಅರ್ಥ. ಈ ಶಾಸನದಲ್ಲಿ (ಗಲ್) ಎಂಬ ಭಾಗ ಸಂಪಾದಕರ ಊಹೆ. ಇನ್ನೇನಾದರೂ ಬೇರೆ ಇದೆಯೋ ತಿಳಿಯದು ಆದರೆ ಇದೇ ಇದ್ದರೂ ಅದು ಸಮಾಧಿಯ ಮೇಲೆ ಹಾಸಿರುವ ಕಲ್ಲು ಎಂದೇ ಅರ್ಥವಾಗುತ್ತದೆ. ಇಂಥ ಸಂದರ್ಭದಲ್ಲಿ ಕಲ್ಲನ್ನು ನಿಲಿಸುವುದು ಇದ್ದ ಹಾಗೆ ಹಾಸುವುದು ಇದ್ದಿರಬಹುದು. ಆದುದರಿಂದ ಇದು ಹಾಸುಗಲ್ಲು = ಚಪ್ಪಡಿ ಎಂದು ಅರ್ಥವನ್ನು ಕೊಡುತ್ತದೆ ಎಂದು ನನ್ನ ಊಹೆ.

*ಆದಿಕದಂಬರ ಒಂದು ಶಾಸನ ಪಾಠ ಹೀಗಿದೆ:*

*ಸಾಲು ೧. ಸ್ವಸ್ತಿಶ್ರೀ ರವಿವರ್ಮ (ರ್)*
*೨. ನಾಡಾಳೆ ಮಲ್ಲಿಗೆ ಅ*
*೩. ಅರಸರಾ ಪೆರಿಯಾ ಅರಸಿ*
*೪. ಕಟಿ (ಇ) ಗುಜ್ಜೆನಿಯಾ ಪಡು (ಗಲ್)*
*೫. ಇನ್ನಿ (ನ್ನಿ) ದಾನ್ನಟಿಪ್ಪೋರ್ಪ (ಇಪಾ)*
*೬. ದಗ ಸಂಯುಕ್ತರಪ್ಪಾ (ಪ್ಪೊ) (ರ್).*




**ಪತ್ತು** ಇದು ಧಾತುವಾದರೆ ಮೂವತ್ತು ಬೇರೆ ಬೇರೆ ಅರ್ಥಗಳಿವೆ. ಸಂದರ್ಭವನ್ನು ಸೂಚಿಸಿ ಅರ್ಥ ಮಾಡಬೇಕು. ಮುಖ್ಯವಾಗಿ *೧. ಅಂಟು, ೨. ಸೇರು, ೩. ಬೆಸೆ, ೪. ಹೊಂದಿಕೋ, ೫. ಹಿಡಿ, ೬. ತಗಲು, ೭. ಏರು, ಹತ್ತು, ೮. ಬೆಂಕಿ ಹತ್ತಿಕೋ, ೯. ಬೆನ್ನಟ್ಟು ೧೦.* ದೆವ್ವ ಮೆಟ್ಟಿಕೊಳ್ಳು. ನಾಮಪದವಾದರೆ, *೧. ಒಂದು ಅಂಕಿ, ಹತ್ತು, ೨. ನಂಬಿಕೆ,* ವಿಶ್ವಾಸ, *೩.* ಪಂಜು. ಇವುಗಳನ್ನು ಸಮಯ ಸಂದರ್ಭವನ್ನು ನೋಡಿ ಉಪಯೋಗಿಸಬೇಕು. 'ರೈತರ ಪತ್ತಿನ ಸಂಘ' ಎಂಬುದನ್ನು ಗಮನಿಸಿ.

**ಪತ್ರಕರ್ತ** ಪತ್ರಕರ್ತ - ಪತ್ರಿಕೋದ್ಯೋಗಿ - ವರದಿಗಾರ - ಬಾತ್ಮೀದಾರ. ಪತ್ರಕರ್ತ ಎನ್ನುವುದು ಕನ್ನಡದಲ್ಲಿ ಪತ್ರಿಕೋದ್ಯೋಗಿ ಎಂಬ ಶಬ್ದಕ್ಕೆ ಸಮಾನಾರ್ಥವಾಗಿ ಉಪಯೋಗವಾಗುತ್ತಿದೆ. ಶಬ್ದದ ದೃಷ್ಟಿಯಿಂದ ಪರಿಶೀಲಿಸಿದರೆ ಸಂಸ್ಕೃತದ ಈ ಶಬ್ದಕ್ಕೆ ವಾರ್ತಾಪತ್ರ ಎಂಬ ಅರ್ಥ ಬರುವುದಿಲ್ಲ. ಆದುದರಿಂದ ಕನ್ನಡದ ಈ ಪತ್ರ ವಾರ್ತಾಪತ್ರದ ಸಂಕ್ಷಿಪ್ತರೂಪ ಎಂದು ಗ್ರಹಿಸಬೇಕು. ಪತ್ರಕರ್ತರು ನ್ಯಾಯವಾಗಿ ಪತ್ರಿಕೆಯನ್ನು ವ್ಯಾಪಾರದ ಉದ್ಯಮವನ್ನಾಗಿ ಮಾಡಿಕೊಂಡಿರುವ ಬಂಡವಾಳಗಾರರು. ಪತ್ರಿಕೋದ್ಯಮಿ ಎಂಬ ಶಬ್ದಕ್ಕೆ ಸಮೀಪವಾದ ಶಬ್ದ ಪತ್ರಕರ್ತ. ಪತ್ರಿಕೋದ್ಯೋಗಿ ಎಂಬುದು ವಾರ್ತಾಪತ್ರಿಕೆಗಳಲ್ಲಿ ಉದ್ಯೋಗದಲ್ಲಿರುವ ವ್ಯಕ್ತಿ ಎಂದು ಅರ್ಥ. ಆದರೆ ನಮ್ಮ ಪತ್ರಿಕಾ ಪ್ರಪಂಚದಲ್ಲಿ ಈ ಎರಡನ್ನೂ ಒಂದೇ ಅರ್ಥದಲ್ಲಿ ಉಪಯೋಗಿಸುತ್ತಾ ಬಂದಿದ್ದಾರೆ. ಈಗ ಅದರ ಅರ್ಥವನ್ನು ಸಂಕುಚಿತಗೊಳಿಸುವುದು ಸಾಧ್ಯವಿಲ್ಲ.

ವರದಿಗಾರರು ವಾರ್ತೆಗಳನ್ನು ಸಂಗ್ರಹಿಸುವವರು. ಇವರನ್ನೇ ಬಾತ್ಮೀದಾರರು ಎಂದು ಕರೆಯುತ್ತಾರೆ. ಬಾತ್ಮೀ ಎಂಬುದು ಅರಬ್ಬೀ ಶಬ್ದವಾದ ಬಾತಮೀ ಎಂಬುದರಿಂದ ಬಂದುದು. ಕನ್ನಡದಲ್ಲಿ ಬಾತ್ಮೀದಾರ ಎಂದೂ ಮರಾಠಿಯಲ್ಲಿ ಬಾತಮಿದಾರ ಎಂದೂ ಪ್ರಚಾರದಲ್ಲಿದೆ. ಬಾತಮೀ ಶಬ್ದಕ್ಕೆ ಹೊಸ ಸುದ್ದಿಗಳನ್ನು ಹುಡುಕಿ ತೆಗೆಯುವವನು ಎಂಬ ವಿಶೇಷ ಅರ್ಥವಿದೆ. ಕೇವಲ ವರದಿಗಾರನಲ್ಲ. ಆದರೆ ನಮ್ಮಲ್ಲಿ ಆ ವಿಶೇಷಾರ್ಥ ಲುಪ್ತವಾಗಿ

ಹೋಗಿದೆ. ಮರಾಠಿಯಲ್ಲಿ ಬಾತಮೀದಾರ್ ಎಂದರೆ ಗೂಢಚಾರ, ಬೇಹಿನವನು ಎಂಬ ಅರ್ಥವೂ ಇದೆ. ನಮ್ಮಲ್ಲಿ ಅದು ಮರೆತುಹೋಗಿದೆ. ಆದ್ದರಿಂದ ಸದ್ಯ ಸ್ಥಿತಿಯಲ್ಲಿ ಪತ್ರಕರ್ತ, ಪತ್ರಿಕೋದ್ಯೋಗಿ ಎಂಬುದನ್ನು ಒಂದರ್ಥದಲ್ಲಿಯೂ ವರದಿಗಾರ, ಬಾತ್ಮೀದಾರ ಎಂಬುದನ್ನು ಒಂದರ್ಥದಲ್ಲಿಯೂ ಉಪಯೋಗಿಸುತ್ತಾ ಹೋಗುವುದೇ ಸರಿ.

**ಪತ್ರಿಸು,** ಕನ್ನಡದಲ್ಲಿ ಇಸು ಪ್ರತ್ಯಯವನ್ನು ಹತ್ತಿಸಿ ನಾಮಪದಗಳಿಂದ ಕ್ರಿಯಾಪದಗಳನ್ನು ಮಾಡಬಹುದು ಎಂಬ ಸೂತ್ರವಿದೆ. ಆ ಸೂತ್ರಕ್ಕೆ ಕೆಲವು ನಿಯಮಗಳೂ ಉಂಟು. ಈಗೀಗ ಆ ನಿಯಮಗಳನ್ನು ಹೊರದೂಡಿ ಇಸು ಪ್ರತ್ಯಯವನ್ನು ಹತ್ತಿಸುತ್ತಿದ್ದಾರೆ. ಇದರಿಂದ ಶಬ್ದಗಳು ಹೆಚ್ಚಾಗುತ್ತಿವೆ. ಉತ್ತಮ ಪ್ರಯತ್ನ.

ಉದಾಹರಣೆಗೆ: ಸಂಪರ್ಕ + ಇಸು = ಸಂಪರ್ಕಿಸು. ಸ್ಪಂದಿಸು, ಚಿಂತಿಸು, ಚಿತ್ರಿಸು ಇವೆಲ್ಲ ಸಂಸ್ಕೃತ ಶಬ್ದಗಳಿಂದ ಬಂದವು. ದಾಖಲೆ + ಇಸು = ದಾಖಲಿಸು. ಲಗತ್ತಿಸು, ಲಗಾಯಿಸು, ದಬಾಯಿಸು, ಬಡಾಯಿಸು ಇತ್ಯಾದಿ ಅನ್ಯದೇಶ್ಯಗಳು. ಇಂಗ್ಲಿಷ್ ಶಬ್ದಗಳನ್ನು ಹೀಗೆ ಮಾಡುವುದು ಕಷ್ಟ. ಆದರೆ ಇಲ್ಲವೇ ಇಲ್ಲವೆಂದು ಹೇಳುವಂತಿಲ್ಲ. ಉದಾಹರಣೆ "ಕ್ಲಿಕ್ಕಿಸು". ಸ್ವಲ್ಪ ತೊಂದರೆ ಇರುವುದರಿಂದ ಮಾಡು ಎಂಬುದನ್ನು ಇಸು ಪ್ರತ್ಯಯದಂತೆಯೇ ಉಪಯೋಗಿಸುತ್ತಾರೆ. Runಮಾಡು, Driveಮಾಡು, jumpಮಾಡು. ಇತ್ಯಾದಿ. ಆದರೆ sitಮಾಡು goಮಾಡು ಎಂದು ಹೇಳುವುದಕ್ಕಾಗುವುದಿಲ್ಲ. ಇವೆಲ್ಲ ಬೇರೆ ಬೇರೆ ಭಾಷೆಗಳ ಗೌರವಕ್ಕೆ ಸಂಬಂಧಪಟ್ಟದ್ದು. ಪತ್ರಿಸು ಅಂಥ ಶಬ್ದ. ಪತ್ರ + ಇಸು, ಪತ್ರೆ + ಇಸು. ಈ ಎರಡೂ ಪತ್ರಿಸು ಎಂದೇ ಆಗುತ್ತದೆ. ಹೀಗೆ ತೊಂದರೆ ತರುವ ಸಂಧಿಗಳನ್ನು ಮಾಡಬಾರದು. ಉದಾಹರಣೆಗೆ 'ನೀವೂ ಕೂಡ ಬೇಗ ಅಂಚಿಸಿ' ಎಂದು ಪತ್ರ ಬಂದಿದೆ. ಅಂಚೆ + ಇಸು = ಟಪಾಲಿಗೆ ಹಾಕು ಎಂದು ಪ್ರಯತ್ನ ಮಾಡಿ ಶಬ್ದವನ್ನು ಸೃಷ್ಟಿಸಬಹುದು. ಆದರೆ ಅದು ಅಂಚು + ಇಸು = ಅಂಚು ಮಾಡು ಎಂದೂ ಆಗಬಹುದು. ಹೀಗೆ ಅರ್ಥಕ್ಕೆ ಅಡ್ಡಿ ತರುವ ಶಬ್ದಗಳನ್ನು ಉಪಯೋಗಿಸಬಾರದು. ಎಲ್ಲ ಇಂಗ್ಲಿಷ್ ಶಬ್ದಗಳಿಗೆ ಅನ್ಯಭಾಷೆಯ ಎಲ್ಲ ಶಬ್ದಗಳಿಗೆ ಇಸು ಸೇರಿಸುವುದು ಕಷ್ಟವಾಗುತ್ತದೆ. ಕಾಗದ + ಇಸು = ಕಾಗದಿಸು ಎಂದು ಸೃಷ್ಟಿ ಮಾಡುವುದು ಸಾಧ್ಯವೇ? ಆದುದರಿಂದ ನಮ್ಮ ಭಾಷೆಯ ಜಾಯಮಾನಕ್ಕೆ ಹೊಂದಿಕೊಳ್ಳುವ ಶಬ್ದಗಳನ್ನು ಮಾತ್ರ ಉಪಯೋಗಿಸಬೇಕು.

**ಪಥ್ಯ, ಸೇವನೆ ಇವುಗಳ ವ್ಯತ್ಯಾಸವೇನು?** ಪಥ್ಯ ಎಂದರೆ ರೋಗಿಗಳಿಗೆ ಹಿತವಾದ ಆಹಾರ ವಸ್ತುಗಳು ಮತ್ತು ವ್ಯವಹಾರಗಳು. ಇದು ಪಥ = ದಾರಿ ಎಂಬ ಸಂಸ್ಕೃತ ಶಬ್ದದಿಂದ ಬಂದದ್ದು. ಸೇವನೆ ಸೇವಿಸಬೇಕಾದ ಔಷಧಗಳನ್ನು ಸ್ವೀಕರಿಸುವುದು. ಪಥ್ಯಾಪಥ್ಯ ಎಂಬುದು ಬಹು ಪ್ರಸಿದ್ಧವಾದ ದ್ವಂದ್ವ ಸಮಾಸ. ಆರೋಗ್ಯಕ್ಕೆ ಅದು ಹಾದಿ.

**ಪದರುಗುಟ್ಟು** ಹಳಗನ್ನಡದಲ್ಲಿ ಪದಱು ಎಂಬ ಶಬ್ದವಿದೆ. ಅದಕ್ಕೆ ನಡುಗು, ಕಂಪಿಸು ಎಂದರ್ಥ. ಇದು ಪತರು, ಪದರು ಎಂದು ಹೊಸಗನ್ನಡದಲ್ಲಿ ಪ್ರಯೋಗವಾಗುತ್ತದೆ. ಕುಟ್ಟು ಎಂಬುದು ಕ್ರಿಯಾರ್ಥದಲ್ಲಿ ಸೇರುವ ಪ್ರತ್ಯಯ. ಗೊಣಗುಟ್ಟು, ಪಿಸುಗುಟ್ಟು ಗುರುಗುಟ್ಟು ಎಂಬ ಕಡೆ ಕುಟ್ಟು ಎಂಬ ಪ್ರತ್ಯಯ ಸೇರಿದೆ. ಪದರುಗುಟ್ಟು ಎಂಬುದು ಹೀಗೆ ರೂಪವನ್ನು ಪಡೆದಿದೆ. ಅರ್ಥ ನಡಗು, ಹೆದರು. ಇದಕ್ಕೆ ತಮಿಳು ತೆಲುಗುಗಳಲ್ಲಿ ಜ್ಞಾತಿ ಶಬ್ದಗಳಿವೆ.

**ಪರಂಜ್ಯೋತಿ** ಈ ಶಬ್ದ 'ಪರಂಜ್ಯೋತಿಸ್' ಎಂಬ ಸಂಸ್ಕೃತ ಶಬ್ದದ ಕನ್ನಡ ರೂಪ. **'ಪರಂಜೋತಿ'** ಎಂಬ ರೂಪವೂ ಇದೆ. ಇದಕ್ಕೆ ಅರ್ಥ 'ದಿವ್ಯವಾದ ಕಾಂತಿಯಿಂದ ಕೂಡಿರುವವನು, ದೇವರು, ಪರಮಾತ್ಮ' ಎಂದು. ವೈದಿಕ ಗ್ರಂಥಗಳಲ್ಲಿಯೂ

ಜೈನಗ್ರಂಥಗಳಲ್ಲಿಯೂ ಒಂದೇ ಅರ್ಥದಲ್ಲಿ ಪ್ರಯೋಗಿಸುವ ಈ ಶಬ್ದಕ್ಕೆ 'ಪರಮಾತ್ಮ ಅರ್ಹಂತ' ಎಂಬ ಅರ್ಥಗಳು ಬರುತ್ತವೆ.

**ಪರಂಬೋಕು** ನನ್ನ ಟಿಪ್ಪಣಿಯ ಪುಸ್ತಕದಲ್ಲಿ ರೆವೆನ್ಯೂ - ಕಂದಾಯಕ್ಕೆ ಸಂಬಂಧಪಟ್ಟ ಶಬ್ದಗಳ ಪಟ್ಟಿಯಲ್ಲಿ ಈ ಶಬ್ದ ಸಿಕ್ಕಿದೆ. ಅದಕ್ಕೆ ಅರ್ಥ ಸರ್ಕಾರಿ ವಶದಲ್ಲಿರುವ ಜಮೀನು. ಇದು ಬಂಜರಾಗಿರಬಹುದು. ಗೋಮಾಳದಂತೆ ಎಲ್ಲರಿಗೂ ಸೇರಿದ ಸ್ಥಳ ಪರಂಬೋಕು. ಈ ಜಮೀನನ್ನು ಸಾಗುವಳಿ ಮಾಡಬಾರದು. ಕಾಲುದಾರಿ, ದನಗಳು ಓಡಾಡುವ ಜಾಗ ಮುಂತಾದುವಕ್ಕೆ ಈ ಹೆಸರು ಉಪಯೋಗಿಸುತ್ತಾರೆ.

**ಪರಜಿಕಲ್ಲು** ಎಂದರೆ ಸ್ಪರ್ಶಶಿಲೆ. ಈ ಕಲ್ಲಿಗೆ ಕಬ್ಬಿಣ ಮುಂತಾದ ಲೋಹಗಳು ತಗುಲಿದರೆ ಅವೆಲ್ಲ ಚಿನ್ನವಾಗಿಬಿಡುತ್ತವೆ. ಅಂಥ ಶಕ್ತಿ ಇರುವ ಕಲ್ಲು. ಕನ್ನಡದಲ್ಲಿ ಪರುಸ ಎಂಬ ರೂಪವನ್ನು ಪಡೆಯುತ್ತದೆ. ಅದೇ ಪರಜಿಕಲ್ಲು. ಹೀಗೆ ಕಬ್ಬಿಣ ಚಿನ್ನವಾಗುವ ಕಥೆ ಒಂದು ಪರಂಪರೆಯ ನಂಬಿಕೆಯಿಂದ ಬಂದುದು. ಅಷ್ಟೇ.

**ಪರದಾರ** ಎಂದರೆ ಇನ್ನೊಬ್ಬನ ಹೆಂಡತಿ. ವಿದೂರ ಎಂದರೆ ಅವರಿಂದ ದೂರವಾಗಿರುವವನು. ಪರಸ್ತ್ರೀಯರ ಬಗ್ಗೆ ಯಾವ ಆಲೋಚನೆಯನ್ನೂ ಮಾಡದವನು. ಜೈನರಲ್ಲಿ ಇದೊಂದು ವ್ರತ. ರಾವಣನು ಪರಸ್ತ್ರೀ ವಿರತಿ ವ್ರತವನ್ನು ಧರಿಸಿದ್ದನೆಂದು ನಾಗಚಂದ್ರನ ರಾಮಚಂದ್ರಚರಿತ ಪುರಾಣದಲ್ಲಿ ವರ್ಣನೆಯಿದೆ. ಪರದಾರ ಸೋದರ ಎಂಬುದು ಕೆಲವರ ಬಿರುದಾಗಿದ್ದುದು ಕನ್ನಡದ ಸಾಹಿತ್ಯ ಚರಿತ್ರೆಯಲ್ಲಿ ಪ್ರಸಿದ್ಧ.

**ಪರಭಾರೆ** ಈ ರೂಪ ಮರಾಠಿಯಿಂದ ಕನ್ನಡಕ್ಕೆ ಬಂದಿದೆ. ಇದು ನಿಜವಾಗಿ ಸಂಸ್ಕೃತದ ಶಬ್ದ. ಪರಭಾರ = ಮತ್ತೊಬ್ಬರ ಹೊಣೆ. ಆಸ್ತಿಯನ್ನು ಪರಭಾರಿ ಅಥವಾ ಪರಭಾರೆ ಮಾಡುವುದು ಎಂದರೆ ತಮ್ಮ ಹೊಣೆಗಾರಿಕೆಯನ್ನು ತಪ್ಪಿಸಿಕೊಂಡು ಮತ್ತೊಬ್ಬರಿಗೆ ವರ್ಗಾವಣೆ ಮಾಡುವುದು. ಎಂದರೆ ತನ್ನ ಸ್ವಾಮ್ಯವನ್ನು ಕಳೆದುಕೊಂಡು ಮಾರುವುದು ಎಂದರ್ಥ. ಮಾರದೆಯೂ ಪರಭಾರೆ ಮಾಡಬಹುದು. ದಾನ, ದತ್ತಿ, ಬಹುಮಾನಗಳ ಮೂಲಕ.

**ಪರಮೇಶ್ವರಿ ನೋಟು ಎಂದರೇನು?** ಇಂಥ ಶಬ್ದ ನಿಜವಾಗಿ ಅಸ್ತಿತ್ವದಲ್ಲಿಲ್ಲ. ಆದರೆ ಗ್ರಾಮೀಣ ಪ್ರದೇಶದಲ್ಲಿ ಇಂಗ್ಲಿಷ್ ಭಾಷೆಯ ಪರಿಚಯವಿಲ್ಲದ ಜನ ಪ್ರಾಮಿಸರಿ ನೋಟ್ (Promissory Note) ಎಂಬ ಶಬ್ದವನ್ನು ಹಾಗೆ ಉಚ್ಚಾರ ಮಾಡುತ್ತಿರಬಹುದು. 'ತೆಗೆದುಕೊಂಡ ಸಾಲವನ್ನು ಇಂತಿಷ್ಟು ಕಾಲದಲ್ಲಿ ಹಿಂದಿರುಗಿಸುತ್ತೇನೆ' ಎಂದು ಬರೆದು ಕೊಟ್ಟ ಪತ್ರಕ್ಕೆ ಆ ಹೆಸರಿದೆ.

**ಪರವಾಗಿಲ್ಲ** ಇದರಲ್ಲಿ ಎರಡು ಶಬ್ದಗಳಿವೆ. ಪರವಾ +ಇಲ್ಲ = ಪರವಾಯಿಲ್ಲ. ಪರ್ವಾ ಇಲ್ಲ. ಹೀಗಿರಬೇಕಾದದ್ದು ಕನ್ನಡದಲ್ಲಿ ಸಾಮಾನ್ಯವಾಗಿ ಉಪಯೋಗಿಸುವ **ಆಗಿಲ್ಲ** ಎಂಬ ಶಬ್ದದ ಸಾಮ್ಯದಿಂದ ಪರವಾಗಿಲ್ಲ ಎಂದಾಗಿದೆ. ಪರವಾ ಎಂಬುದು ಪಾರಸೀ ಭಾಷೆಯ ಪರ್ವಾ ಎಂಬುದರಿಂದ ಬಂದಿದೆ. ಹಿಂದಿಯಲ್ಲಿ ಪರ್‌ವಾಹ್, ಪರ್ವಾ. ಮರಾಠಿಯಲ್ಲಿ ಪರವ, ಪರ್ವಾ. ಹೀಗೆ ಈ ಶಬ್ದ ಬೇರೆ ಬೇರೆ ಭಾಷೆಗಳಲ್ಲಿ ಉಪಯೋಗವಾಗುತ್ತಿದೆ. ಪಾರಸೀ ಭಾಷೆಯಲ್ಲಿ ಪರ್ವಾ ಎಂಬ ಶಬ್ದಕ್ಕೆ ಗಮನ, ಚಿಂತೆ, ಆದರ, ಹೆದರಿಕೆ, ಕಾಳಜಿ ಮುಂತಾದ ಅರ್ಥಗಳಿವೆ. ಕನ್ನಡದಲ್ಲಿ ಚಿಂತೆ, ಗೊಡವೆ, ಕಾಳಜಿ ಎಂಬ ಅರ್ಥಗಳಿವೆ. ಆದರೆ ಸಾಮಾನ್ಯವಾಗಿ ಪರವಾಗಿಲ್ಲ ಎಂದರೆ ಚಿಂತೆಯಿಲ್ಲ ಎಂಬುದೇ ಮುಖ್ಯಾರ್ಥ.

**ಪರಸೆ** ಈ ಶಬ್ದಕ್ಕೆ ಅನೇಕ ಪರ್ಯಾಯ ರೂಪಗಳಿವೆ. ಪರಿಸೆ, ಪರುಸೆ ಇತ್ಯಾದಿ. ಸಕಾರವಿರುವ ಕಡೆ ಶ, ಷ ಕಾರಗಳನ್ನೂ ಉಪಯೋಗಿಸುತ್ತಾರೆ. ಸಂಸ್ಕೃತದ ಪರಿಷದ್ ಎಂಬ ಶಬ್ದ ಪ್ರಾಕೃತದಲ್ಲಿ ಪರಿಸಾ ಎಂದಾಗುತ್ತದೆ. ಆದ್ದರಿಂದ ಪರಿಸೆ ಎಂಬುದು ಮೊದಲ ಸರಿಯಾದ

ರೂಪ. ಆ ಬಳಿಕ ಇತರ ವ್ಯತ್ಯಾಸಗಳಾಗಿವೆ. ಇದಕ್ಕೆ ಜಾತ್ರೆ ಎಂದೂ ಜಾತ್ರೆಗಳಲ್ಲಿ ಸೇರುವ ಜನರ ಗುಂಪು ಎಂದೂ ಅರ್ಥಗಳಿವೆ. ಬೆಂಗಳೂರಿನ ಕಡಲೆಕಾಯಿ ಪರಿಸೆ ಜ್ಞಾಪಿಸಿಕೊಳ್ಳಿ.

**ಪರಾಕಾಷ್ಠೆ** ಇದು ಸಂಸ್ಕೃತದ ಪರಾಕಾಷ್ಠಾ ಎಂಬ ಶಬ್ದದ ತದ್ಭವ. ಇದಕ್ಕೆ ಕೊಟ್ಟ ಕೊನೆ, ತುತ್ತತುದಿ, ಪರಮಾವಧಿ ಎಂದು ಅರ್ಥ.

**ಪರಿಜು** ಎಂದರೆ ೧. ರೂಪ, ಆಕಾರ ೨. ಚಿತ್ರಪಟ, ೩. ವಿಗ್ರಹ, ಬೊಂಬೆ ಎಂಬ ಅರ್ಥಗಳಿವೆ. ಇದು ಕನ್ನಡ ಶಬ್ದ.

**ಪರಿಣತ** ಎಂಬುದು ಸಂಸ್ಕೃತ ಶಬ್ದ. ಇದಕ್ಕೆ ಚೆನ್ನಾಗಿ ಬಾಗಿರುವ ಎಂದು ಅರ್ಥ. ಇದರಿಂದ ಅರ್ಥವು ಬೆಳೆದು ಈ ಶಬ್ದಕ್ಕೆ ಅನೇಕ ಅರ್ಥಗಳು ಹೊಂದಿಕೊಂಡಿವೆ. ಪರಿಪೂರ್ಣವಾದ, ಜೀರ್ಣವಾದ, ಹಣ್ಣಾದ, ಜ್ಞಾನಿಯಾದ, ಚೆನ್ನಾಗಿ ಬಲಿತಿರುವ, ಸಂಪೂರ್ಣವಾಗಿ ಅಭಿವೃದ್ಧಿ ಹೊಂದಿದ ಮುಂತಾದ ಗುಣವಾಚಕದ ಅರ್ಥಗಳು ಬರುತ್ತವೆ.

**ಪರಿಭವ** 'ಭೂ' ಎಂಬ ಧಾತುವಿಗೆ ಪರಿ ಎಂಬ ಉಪಸರ್ಗ ಸೇರಿ ಪರಿಭವ ಎಂಬ ರೂಪವು ಸಿದ್ಧಿಸಿದೆ. ಇದು ಸಂಸ್ಕೃತ. ಈ ಶಬ್ದಕ್ಕೆ ಅವಮಾನ, ಹೀನಾಯ, ಸೋಲು, ಧಿಕ್ಕಾರ, ಅಪಘಾತ ಮುಂತಾದ ಅರ್ಥಗಳು ಸಮಯಾನುಸಾರ ಉಂಟಾಗುತ್ತವೆ.

**ಪರಿಮಳ** ಪರಿಮಲ ಸಂಸ್ಕೃತ ಶಬ್ದ. ಕನ್ನಡದಲ್ಲಿ ಅದು ಪರಿಮಳ ಎಂದಾಗುತ್ತದೆ. ಇದನ್ನು ಕನ್ನಡದವರು ಸಮಸಂಸ್ಕೃತ ಶಬ್ದ ಎಂದು ಕರೆಯುತ್ತಾರೆ. ಇದಕ್ಕೆ ಕಂಪು ಎಂದರ್ಥ. ಇಂಗ್ಲೀಷಿನ Fragrance ಎಂಬುದಕ್ಕೆ ಸಮಾನವಾದ ಅರ್ಥ. ಕನ್ನಡದ ಕೆಲವು ಕವಿಗಳು ಪರಿಮಳ ಎಂಬ ಶಬ್ದವನ್ನು ಹೂವು, ಪುಷ್ಪ ಎಂಬರ್ಥ ಬರುವ ಹಾಗೆ ಉಪಯೋಗಿಸಿದ್ದಾರೆ. ಹರಿಹರನು ದೇವರಿಗೆ **ಪರಿಮಳವ ಮುಡಿಸಿ** ಎಂದು ವರ್ಣಿಸುತ್ತಾನೆ.

**ಪರಿವರ್ತನೆ** ಈ ಶಬ್ದದಲ್ಲಿ ವರ್ತನ ಶಬ್ದಕ್ಕೆ ಪರಿ ಎಂಬ ಉಪಸರ್ಗ ಸೇರಿದೆ. ಈ ಉಪಸರ್ಗ ಸೇರಿದಾಗ ಅನೇಕ ಅರ್ಥಗಳು ಬರುತ್ತವೆ. ೧. ಬದಲಾವಣೆ, ೨. ಹೊರಳಾಟ, ೩. ತಿರುಗುವಿಕೆ, ೪. ಹಿಂದಿನ ಜಾಗಕ್ಕೆ ಬಂದು ಸೇರುವುದು, ೫. ವಿಪ್ಲವ. ಕನ್ನಡದಲ್ಲಿ ಪರಿವರ್ತನೆ ಎಂಬುದನ್ನು ಬದಲಾವಣೆ, ವ್ಯತ್ಯಾಸ ಅರ್ಥದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ.

**ಪರಿಸರ** ಇದು ಸಂಸ್ಕೃತ ಶಬ್ದ. ಪರಿ + ಸರ ಎಂದು ವ್ಯುತ್ಪತ್ತಿ. '**ಪರಿಸರಃ ಪ್ರಾಂತ ಭೂಃ**' ಎಂದು ಹೇಮಕೋಶವೆಂಬ ನಿಘಂಟಿನಲ್ಲಿದೆ. '**ಪರ್ಯಂತ ಭೂಃ ಪರಿಸರಃ**' ಎಂದೂ ಅಮರದಲ್ಲಿದೆ. ಪರಿತಃ ಸರಂತ್ಯತ್ರ ಎಂದು ಟೀಕೆ. ಸೃ - ಗತೌ ಎಂದು ವಿವರಣೆ.

**ಪರಿಸ್ಥಿತಿ ಗಂಭೀರವಾಗುವುದು** ಎಂದರೆ ಹತೋಟಿಯನ್ನು ತಪ್ಪಿಸುವ ಮಟ್ಟಕ್ಕೆ ಬರುವುದು ಎಂದರ್ಥ. ಗಂಭೀರ ಎಂಬ ಶಬ್ದಕ್ಕೆ ೧. ಆಳವಾದ, ೨. ಮನವನ್ನು ಸೆಳೆಯುವ, ೩. ಗೂಢವಾದ, ೪. ಘನವಾದ ಎಂಬ ಅರ್ಥಗಳಿವೆ. ಮರಾಠಿಯಲ್ಲಿ ಸೂಕ್ಷ್ಮವಾದ Serious ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಮರಾಠಿಯ ಅರ್ಥದಲ್ಲಿ ಉತ್ತರ ಕರ್ನಾಟಕದಲ್ಲಿ ಈ ಅರ್ಥ ಪ್ರಚಾರದಲ್ಲಿದೆ. ಈಗೀಗ ಇಂಗ್ಲಿಷಿನ Serious ಎಂಬ ಶಬ್ದಕ್ಕೆ ಸರಿಸಮಾನವಾಗಿ ಗುಣವಾಚಕದ ಅರ್ಥದಲ್ಲಿ ಉಪಯೋಗಿಸುತ್ತಿದ್ದಾರೆ. Serious ಎಂದರೆ ಘನವಾಗಿ ಯೋಚಿಸಬೇಕಾದ, ವಿನೋದಪರವಲ್ಲದ, ಗಾಢವಾಗಿ ಚಿಂತಿಸಬೇಕಾದ ಎಂದರ್ಥ.

**ಪರೋಕ್ಷ** ಪರೋಕ್ಷ ಎಂದರೆ ಎದುರಿಗೆ ಇಲ್ಲದಿರುವುದು. ಪ್ರತ್ಯಕ್ಷ ಎಂದರೆ ಕಣ್ಣಿನ ಎದುರಿಗೆ ಇರುವುದು. ಈ ಅರ್ಥದಲ್ಲಿಯೇ ಅದನ್ನು ಉಪಯೋಗಿಸುತ್ತಾರೆ. ಪರೋಕ್ಷಕ್ಕೆ

ಅಪ್ರತ್ಯಕ್ಷವಾದ ಜ್ಞಾನ ಎಂಬ ಅರ್ಥವೂ ಇದೆ. ಇದು ಜಿಜ್ಞಾಸುವಿಗೆ ಶ್ರುತಿಗಳಿಂದಲೂ ಆಪ್ತವಚನ ಶ್ರವಣದಿಂದಲೂ ಉಂಟಾಗುವ ಜ್ಞಾನ.

ಅಪರೋಕ್ಷಕ್ಕೆ ಪ್ರತ್ಯಕ್ಷಜ್ಞಾನ ಎಂಬ ಅರ್ಥವೂ ಇದೆ. ಇಂದ್ರಿಯಾರ್ಥ ಸನ್ನಿಕರ್ಷದಿಂದ ದೊರೆಯುವ ಜ್ಞಾನ. ಇದು ಮೂಗು, ನಾಲಗೆ, ಕಿವಿ, ಕಣ್ಣು ಮತ್ತು ಸ್ಪರ್ಶ - ಇವುಗಳಿಂದ ದೊರಕುವ ಅನುಭವ. ಮನೋಗ್ರಾಹ್ಯವಾದ ಸುಖದುಃಖ ಮೊದಲಾದವುಗಳ ಬಗ್ಗೆ ಜ್ಞಾನವು ದೊರಕಿದರೆ ಅದು ಮಾನಸ ಪ್ರತ್ಯಕ್ಷ ಜ್ಞಾನ. **ಅಪರೋಕ್ಷಾನುಭೂತಿ** ಎಂಬ ಗ್ರಂಥವೊಂದನ್ನು ಶಂಕರಾಚಾರ್ಯರು ರಚಿಸಿ ಪ್ರತ್ಯಕ್ಷಜ್ಞಾನದ ವಿವರಣೆಯನ್ನೇ ನೀಡಿದ್ದಾರೆ. ಜ್ಞಾನ ಒಂದೇ ಎಂಬುದು ಮುಖ್ಯ.

**ಪರ್ಸಾನಿಫಿಕೇಷನ್ (Personification)** ಎನ್ನುವುದು ಒಂದು ಅಲಂಕಾರ ಇಂಗ್ಲಿಷ್ ಸಾಹಿತ್ಯದಲ್ಲಿ. ನಿರ್ಜೀವ ವಸ್ತುಗಳಿಗೆ ಜೀವವೂ ಬುದ್ಧಿವಂತಿಕೆಯೂ ಇದೆ ಎಂದು ವರ್ಣಿಸುವುದು ಈ ಅಲಂಕಾರದ ರೀತಿ. ಸಾವು ಎಲ್ಲರನ್ನೂ ನುಂಗಿಬಿಡುತ್ತದೆ ಎಂಬುದು ಉದಾಹರಣೆ. ಕನ್ನಡದಲ್ಲಿ ಇಂಥ ಬರವಣಿಗೆಗೆ ಚೈತನ್ಯಾರೋಪಣೆ ಎಂದು ಕರೆಯುತ್ತಾರೆ.

**ಪಲಿಕ್ನಿ** ಇದೊಂದು ಸಂಸ್ಕೃತ ಶಬ್ದ. ಇದಕ್ಕೆ ಎರಡು ಅರ್ಥಗಳಿವೆ. ೧. ಮುದುಕಿ, ತಲೆಗೂದಲು ನರೆತವಳು ೨. ಮೊದಲು ಗಬ್ಬವಾದ ಹಸು.

**ಪವಣಿಕೆ** ಇದು ಪವಣ್, ಪವಣು ಎಂಬ ಶಬ್ದದ ಭಾವನಾಮ; ಅರ್ಥ, ಜೋಡಣೆ, ಹೊಂದಿಕೆ. ಈ ಶಬ್ದಕ್ಕೆ ವ್ಯಾಪಕವಾದ ಅರ್ಥಗಳೂ ಇವೆ: ಪೋಣಿಸುವುದು, ಉಪಾಯ ಮಾಡುವುದು, ವಂಚನೆ ಮಾಡುವುದು. ಹವಣಿಕೆ ಎಂಬ ಹೊಸಗನ್ನಡ ರೂಪವಿದೆ. ಅರ್ಥವೂ ಅದೇ!

**ಪಶ್ಚಾತ್ತಾಪ** ಇದು ಸಂಸ್ಕೃತ ಶಬ್ದ. ಇದರಲ್ಲಿ ಎರಡು ಭಾಗಗಳಿವೆ. ಪಶ್ಚಾತ್ +ತಾಪ. ಮೊದಲು ತಪ್ಪು ಮಾಡಿ ಆ ಬಳಿಕ ಆ ತಪ್ಪಿಗಾಗಿ ವ್ಯಸನವನ್ನು ಹೊಂದುವುದು, ವಿಷಾದಪಡುವುದು ಎಂದು ಅದಕ್ಕೆ ಅರ್ಥ. ತಾಪ ಎಂದರೆ ಉಷ್ಣ. ಮನಸ್ಸಿಗೆ ವ್ಯಥೆಯಾಗುವುದು.

**ಪಸಾಯಿತ** ಪಸಾಯಿತ ಎಂಬುದು ಕನ್ನಡದಲ್ಲಿ ತುಂಬ ಪ್ರಸಿದ್ಧವಾದ ಶಬ್ದ. ಇದು ಪಸಾಯ ಎಂಬ ಶಬ್ದದಿಂದ ಬಂದದ್ದು. ಪಸಾಯ ಎಂಬುದು ಸಂಸ್ಕೃತದ ಪ್ರಸಾದದಿಂದ ಬಂದದ್ದು ಪ್ರಾಕೃತದ ಮೂಲಕ. ಪ್ರಾಕೃತದಲ್ಲಿ ಪಸಾಯ ಎಂಬ ಶಬ್ದ ಪ್ರಸಿದ್ಧವಾದುದು. ಕನ್ನಡದಲ್ಲಿ ಪಸಾಯ ಎಂಬ ಶಬ್ದಕ್ಕೆ *೧. ಬಹುಮಾನ ೨. ಗೌರವ ೩. ಉಡುಗೊರೆ, ಮುಯ್ಯಿ ಎಂಬುದು ಮೊದಲ ಅರ್ಥ.* ಅದು ಗೌರವದಿಂದ ನೀಡುವಂಥದು. ಆದುದರಿಂದ ಈ ಅರ್ಥ ಪ್ರಸಾದಕ್ಕೆ ಇರುವ ಅನುಗ್ರಹ ಎಂಬ ಅರ್ಥದಿಂದ ಬೆಳೆದುದು. ಈ ಶಬ್ದ ಪಸಾಯಿತ ಎಂಬುದು ಆಪಾದಿತ, ಪ್ರಸಾರಿತ ಮುಂತಾದ ಶಬ್ದಗಳಂತೆ ಸಂಸ್ಕೃತ ಶಬ್ದದಂತೆ ಕಂಡುಬರುತ್ತದೆ. ಆದರೆ ನಿಜವಾಗಿ ಇದು ಪಸಾಯ್ತ ಎಂಬ ಶಬ್ದದ ಪರ್ಯಾಯ ರೂಪ. ಪಸಾಯ +ಆಯ್ತ ಎರಡೂ ಸೇರಿ ಪಸಾಯ್ತ ಎಂದಾಗುತ್ತದೆ. ೧೧೨೫ರ ಬೇಲೂರಿನ ಶಾಸನ ೧೧೮೯ ರ ದಾವಣಗೆರೆಯ ಶಾಸನ ಇವೆಲ್ಲಕ್ಕೂ ಇದೇ ಅರ್ಥ. ರಾಜನ ಮೆಚ್ಚುಗೆಯನ್ನು ಗಳಿಸಿದ ಆಸ್ಥಾನದ ಹಿರಿಯ. ಪಸಾಯ್ತೆ ಎಂಬ ಸ್ತ್ರೀಲಿಂಗ ರೂಪವೂ ಇದೆ. ಇದಕ್ಕೆ ರಾಣಿಯ ಕೃಪೆಗೆ, ಮೆಚ್ಚಿಗೆಗೆ ಪಾತ್ರಳಾದವಳು ಎಂದರ್ಥ.

**ಪಸೆ** ಎಂಬುದು ದ್ರಾವಿಡ ಮೂಲ ಶಬ್ದ. ಇದಕ್ಕೆ ಪಸಿ, ಹಸಿ ಎಂಬ ಪರ್ಯಾಯ ರೂಪಗಳಿವೆ. ಇದಕ್ಕೆ ಹೊಸದು, ತಾಜಾ, ಯಾವ ಕೆಡುಕೂ ಸೇರದ್ದು ಎಂಬ ಅರ್ಥ ಮುಖ್ಯವಾದುದು. ಒದ್ದೆ, ತೇವ, ತೇಮ, ಭೂಮಿಯಲ್ಲಿರುವ ನೀರಿನ ಅಂಶ ಎಂಬ ಇನ್ನೊಂದು ಅರ್ಥವಿದೆ. ಎಳೆಯ ಕಾಳು, ಬಲಿಯದಕಾಳು ಎಂದೂ ಚೆನ್ನಾಗಿ ತಿಳಿವಳಿಕೆಯಿರದ ವಸ್ತು ಎಂದೂ ಇತರ ಅರ್ಥಗಳಿವೆ. ಹಚ್ಚ ಹಸಿ ಎಂಬುದು ಈ ಅರ್ಥವನ್ನು ಪುಷ್ಟಿಗೊಳಿಸುತ್ತದೆ. ಪಸ್ಮೆ

ಎಂಬ ರೂಪವೂ ಕೆಲವು ಪ್ರದೇಶದಲ್ಲಿ ಬಳಕೆಯಲ್ಲಿದೆ. ತಮಿಳಿನಲ್ಲಿ ಗೋಂದು, ಅಂಟು ಎಂಬ ಅರ್ಥವಿರುವ ಶಬ್ದವೂ ಇದೇ! ತುಳುವಿನಲ್ಲಿಯೂ ಈ ಶಬ್ದವಿದೆ.

**ಪಸೆನಿಲ್** ಹಸೆಯ ಮೇಲೆ ನಿಂತು ಮದುವೆಯಾಗು ಎಂದು ಇದರ ಅರ್ಥ. ಈ ಶಬ್ದಕ್ಕೆ ಬೇಕಾದ ಹಾಗೆ ಕಾವ್ಯ ಪ್ರಯೋಗಗಳಿವೆ.

**ಪಹಣಿ** ಇದು ಮರಾಠಿ ಭಾಷೆಯ ಪಾಹಣೀ ಶಬ್ದದಿಂದ ಬಂದಿದೆ. ಇದಕ್ಕೆ ಜಮೀನಿನಲ್ಲಿ ಬೆಳೆದ ಬೆಳೆಯ ಅಂದಾಜನ್ನು ಗುರುತಿಸುವುದು ಎಂದರ್ಥ. ಶಾನುಭೋಗರು ಈ ವಿಚಾರವನ್ನು ದಾಖಲಿಸುವ ಪುಸ್ತಕಕ್ಕೂ ಪಹಣಿ ಎಂದು ಹೆಸರಿದೆ. ಪಾಣಿ ಎಂದೂ ಕರೆಯುತ್ತಾರೆ.

**ಪಳದೆ** ಇದು ಕನ್ನಡದ ಶಬ್ದ. ಇದರ ಸರಿಯಾದ ರೂಪ ಪಳಿದ್ಯ. ಇದಕ್ಕೆ ಪ್ರಾದೇಶಿಕವಾಗಿ ಅನೇಕ ಪರ್ಯಾಯ ರೂಪಗಳಿವೆ. ಪಳದೆ, ಪಳಿದ್ಯ, ಪಳಹ, ಪಳಿದೆ, ಪಳಿಹ, ಫಳಿದ್ಯ. ಮೊಸರಿನಿಂದ ಮಾಡಿದ ಒಂದು ಬಗೆಯ ತಿನ್ನುವ ಪದಾರ್ಥ (ಮೇಲೋಗರ). ಮಜ್ಜಿಗೆ ಪಳಿದ್ಯ ಎಂದೂ ಪ್ರಸಿದ್ಧ. ಇದಕ್ಕೆ ವಿವಿಧವಾದ ತರಕಾರಿಗಳನ್ನು ಹಾಕುತ್ತಾರೆ. ಇದನ್ನೇ ಮಜ್ಜಿಗೆ ಹುಳಿ ಎಂದೂ ಕರೆಯುತ್ತಾರೆ. ಸೊಪ್ಪು, ಬೂದಗುಂಬಳ, ಸೌತೆ, ಪಡುವಲ, ಕೋಸು ಇವು ಮುಖ್ಯವಾದ ತರಕಾರಿಗಳು. ತುಂಬ ರುಚಿಕರವಾದ ಪದಾರ್ಥವೆಂಬುದರಲ್ಲಿ ಅನುಮಾನವೇ ಇಲ್ಲ. ಒಮ್ಮೆ ಒಬ್ಬ ಪರಂಗಿ ಅಧಿಕಾರಿ ಅವನ ಕೈ ಕೆಳಗಿನ ಅಧಿಕಾರಿಯ ಅಜ್ಜಿಯ ತಿಥಿಯಲ್ಲಿ ಮಾಡಿದ ಈ ಪದಾರ್ಥದ ರುಚಿ ನೋಡಿ ಪ್ರತಿನಿತ್ಯವೂ ಅಜ್ಜಿಯ ತಿಥಿ ಮಾಡುವಂತೆ ಪ್ರಾರ್ಥನೆ ಸಲ್ಲಿಸಿದ ಕಥೆ ಹಳೆಯದು.

**ಪಾಂಗಿತ** ಸಂಸ್ಕೃತದಲ್ಲಿ ಪಾಂಕ್ತ ಎಂಬ ಶಬ್ದವಿದೆ. ಅದು ಪಂಕ್ತಿ ಶಬ್ದಕ್ಕೆ ಸಂಬಂಧಿಸಿದುದು. ಪಂಕ್ತಿಗೆ ಅರ್ಹವಾದ ಎಂದರ್ಥ. ಸರ್ವವೂ ಯಾವುದಾದರೂ ವ್ಯವಸ್ಥೆಗೆ ಸರಿಯಾಗಿರತಕ್ಕದ್ದು ಎಂದು ಅದರ ಅರ್ಥ. ಇನ್ನೊಂದು ಅರ್ಥವೂ ಇದೆ. ಐದು ಸಂಖ್ಯೆಯನ್ನುಳ್ಳದ್ದು ಎಂದು ಅರ್ಥ. ಅದನ್ನು ಉಪಯೋಗಿಸುವುದು ಅಪೂರ್ವ. ನಮ್ಮ ಇಂದಿನ ಮಾತಿನಲ್ಲಿ ಸಾಂಗೋಪಾಂಗವಾಗಿ ಎಂದು ಹೇಳಿದರೆ ಸ್ವಲ್ಪ ಸ್ಪಷ್ಟವಾದೀತೇನೋ.

**ಪಾಂಚವಾರ್ಷಿಕ, ಪಂಚವಾರ್ಷಿಕ** ಪಾಂಚವಾರ್ಷಿಕ ಎಂದರೆ ಐದು ವರ್ಷಗಳ ಅವಧಿಗೆ ಅನ್ವಯಿಸುವ ಎಂದರ್ಥ. ಪಂಚವಾರ್ಷಿಕ ಎಂದರೆ ಒಂದೊಂದು ವರ್ಷದ ಅವಧಿಗೆ ಅನ್ವಯಿಸುವ ಐದು ಬೇರೆ ಬೇರೆಯಾದ ಎಂದರ್ಥ. ಎರಡಕ್ಕೂ ಯೋಜನೆ ಎಂಬ ಶಬ್ದವನ್ನು ಸೇರಿಸಿದರೆ ಅರ್ಥ ಸ್ಪಷ್ಟವಾಗುತ್ತದೆ.

**ಪಾಂಡವರು** ನೋಡಿ: ಕೌರವರು

**ಪಾಕುಳಕ್ರಿಯೆ** = ಮಲವಿಸರ್ಜನೆ

**ಪಾಕ್ಕ** ಇದು ಹಿಂದಿಯ ಶಬ್ದ. ಮರಾಠಿಯ ಮೂಲಕ ಕನ್ನಡಕ್ಕೆ ಬಂದಿದೆ. ಇದಕ್ಕೆ ೧. ಜಾಣತನದ, ೨. ಬುದ್ಧಿವಂತ, ೩. ಕಿಲಾಡಿ, ೪. ಅಚ್ಚುಕಟ್ಟಾದ ಎಂಬ ಅರ್ಥಗಳಿವೆ.

**ಪಾಠಕ** ಈ ಶಬ್ದಕ್ಕೆ ಮೊದಲ ಅರ್ಥ ಓದುವವನು, ಅಭ್ಯಾಸ ಮಾಡುವವನು. ಪುರಾಣಾದಿ ಗ್ರಂಥಗಳನ್ನು ಗಟ್ಟಿಯಾಗಿ ಓದುವವನು. ಆ ಬಳಿಕ ಪಾಠ ಓದುವುದನ್ನು ಹೇಳಿಕೊಡುವವನು.

**ಪಾಣ್ಬೆ** = ಸೂಳೆ, ವ್ಯಭಿಚಾರಿಣಿ. ಇದು ಕನ್ನಡ ಶಬ್ದ. ಪಾಣ್ಬ ಎಂದರೆ ಜಾರ, ಸಿತಗ, ಜೋಡ. ಈ ಎಲ್ಲಕ್ಕೂ ವ್ಯಭಿಚಾರಿ, ಹಾದರಿಗ ಎಂದು ಅರ್ಥ. ಪಾಣ್ಬ ಎಂಬ ಶಬ್ದಕ್ಕೆ ಎ ಎಂಬ ಸ್ತ್ರೀಲಿಂಗ ಪ್ರತ್ಯಯ ಸೇರಿ ಪಾಣ್ಬೆ ಆಗಿದೆ. ಪಾಂಬೆ ಎಂಬ ಪರ್ಯಾಯ ರೂಪವೂ ಇದೆ. ಸಂಸ್ಕೃತದ ಪುಂಶ್ಚಲಿ ಸರಿಯಾದ ಶಬ್ದ.

**ಪಾತರಗಿತ್ತಿ** ಈ ಶಬ್ದ ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಪ್ರಚಾರದಲ್ಲಿದೆ. ಇದಕ್ಕೆ ಬಣ್ಣದ ಚಿಟ್ಟೆ

ಎಂದರ್ಥ. **ಪಾತರಗಿತ್ತಿ ಪಕ್ಕ** ಎಂದು ಬಣ್ಣದ ಚಿಟ್ಟೆಯ ರೆಕ್ಕೆಗಳನ್ನು ಕುರಿತು ಬೇಂದ್ರೆಯವರು ಒಳ್ಳೆಯ ಕವನವನ್ನು ರಚಿಸಿದ್ದಾರೆ.

**ಪಾಥೇಯ** ಇದು ಸಂಸ್ಕೃತ ಶಬ್ದ. ಪ್ರಯಾಣಿಕರು ಪ್ರಯಾಣ ಕಾಲದಲ್ಲಿ ದಾರಿಯಲ್ಲಿ ಊಟ ಮಾಡಲು ಕಟ್ಟಿಕೊಂಡು ಹೋಗುವ ಆಹಾರ. ಇದಕ್ಕೆ ಬುತ್ತಿ ಎಂದೂ ಸಂಬಳ ಎಂದೂ ಬೇರೆ ಹೆಸರುಗಳಿವೆ.

**ಪಾನಕ** ಎಂದರೆ ಕುಡಿಯಬಹುದಾದ ವಸ್ತು, ದ್ರವರೂಪದಲ್ಲಿರುವುದು ಎಂದರ್ಥ. ಹಾಲು, ನೀರು, ಕೀರು, ಹಣ್ಣಿನ ಪಾನೀಯಗಳು ಮುಂತಾದುವು. ಇದು ಸಂಸ್ಕೃತ ಶಬ್ದ. ವ್ಯವಹಾರದಲ್ಲಿ ಹಣ್ಣಿನಿಂದ ಮಾಡಿದ ಪಾನೀಯಗಳಿಗೆ ಹೆಚ್ಚಾಗಿ ಉಪಯೋಗದಲ್ಲಿದೆ.

**ಪಾಪಭೀರು** ಅನ್ಯಾಯವನ್ನು ಮಾಡುವುದಕ್ಕೆ ಹೆದರುವವನು ಎಂದರ್ಥ. ಪಂಪಮಹಾಕವಿಯ ಆದಿಪುರಾಣದಲ್ಲಿ ಬರುವ ಈ ಭಾಗವನ್ನು ನೋಡಿ. **'ಅವನಾ ನಿಸ್ತ್ರಿಂಶ ಕರ್ಮಕ್ಕೆ ಕೊಕ್ಕರಿಸಿ ಪಾಪಭೀರುವಪ್ಪುದರಿಂ'** (ಆದಿ ಪು ೨-೧೪ ವಚನ) ಈ ಸಮಾಸದಲ್ಲಿ ಪಾಪ + ಭೀರು ಎಂಬ ಎರಡು ಸಂಸ್ಕೃತ ಶಬ್ದಗಳು ಸೇರಿವೆ.

**ಪಾಪಾಸು** ಪಾರಸಿ ಭಾಷೆಯಲ್ಲಿ ಪಾಪೋಷ್ ಎಂಬ ಶಬ್ದಕ್ಕೆ ಮೇಗಾಲನ್ನು ಮುಚ್ಚುವ ಪಾದರಕ್ಷೆ ಎಂದರ್ಥ. ಈ ಶಬ್ದ ಹಿಂದೀ ಮರಾಠೀ ಭಾಷೆಗಳಲ್ಲಿ ಕೂಡ ಸ್ವಲ್ಪ ವ್ಯತ್ಯಾಸವಾದ ರೂಪಗಳಲ್ಲಿ ಅದೇ ಅರ್ಥದಲ್ಲಿ ಕಂಡುಬರುತ್ತದೆ. ಹಿಂದಿಯಲ್ಲಿ ಪಾಪೋಶ್, ಪಾಯಪೇಶ್, ಮರಾಠಿಯಲ್ಲಿ ಪಾಯಪೇಸ್, ಕನ್ನಡದಲ್ಲಿ ಪಾಪೋಸು, ಪಾಪಾಸು ಎಂಬ ಎರಡು ರೂಪಗಳಿವೆ. ಪಾಪಾಸುಕಳ್ಳಿ ಎಂಬ ಒಂದು ಗಿಡವಿದೆ. ಇದು ಅಂಥ ಎಕ್ಕಡದ ಆಕಾರದಲ್ಲಿರುವ ದಪ್ಪ ಎಲೆಗಳನ್ನು ಹೊಂದಿರುತ್ತದೆ.

**ಪಾರುಪತ್ಯ** ಇದು ದ್ರಾವಿಡ ಶಬ್ದ. ತಮಿಳು ಮಲಯಾಳ ಭಾಷೆಗಳಲ್ಲಿ ಈ ಶಬ್ದಕ್ಕೆ ಜ್ಞಾತಿ ಶಬ್ದಗಳಿವೆ. ಇದಕ್ಕೆ ಮೇಲ್ವಿಚಾರಣೆ ಮಾಡುವುದು, ಮಾಡುವ ಅಧಿಕಾರ ಎಂಬ ಅರ್ಥಗಳಿವೆ. ಪಾರುಪತ್ಯ, ಪಾರಪತ್ಯ, ಪಾರ್ಪತ್ಯ ಎಂಬ ಪರ್ಯಾಯ ರೂಪಗಳಿವೆ. ಈಚೆಗೆ ಈ ಶಬ್ದಕ್ಕೆ ಸಮಾಜದಲ್ಲಿ ದೊಡ್ಡಸ್ತಿಕೆ ಎಂಬ ಅರ್ಥವೂ ಬರುತ್ತಾ ಇದೆ.

**ಪಾರ್ಥಿವ** ಎಂದರೆ ಸಂಸ್ಕೃತದಲ್ಲಿ ಭೂಮಿಗೆ ಸಂಬಂಧಿಸಿದವನು, ರಾಜ. ಕನ್ನಡದಲ್ಲಿಯೂ ಅಷ್ಟೇ ರಾಜ, ದೊರೆ. ಈ ಅರ್ಥ ಬರುವುದಕ್ಕೆ ವಿವರಣೆ ಹೀಗಿದೆ. **ಪೃಥಿವ್ಯಾ ಈಶ್ವರಃ** ಅಂದರೆ ಭೂಮಿಯ ಒಡೆಯ, ಯಜಮಾನ = ರಾಜ.

**ಪಾರ್ಥಿವ ಶರೀರ** ಪೃಥ್ವೀ ಎಂದರೆ ಭೂಮಿ. ಪೃಥು ಎಂಬ ರಾಜನು ಭೂಮಿಯ ಎಲ್ಲ ಪ್ರಜೆಗಳಿಗೂ ಸುಖವನ್ನು ನೀಡುವಂತೆ ಭೂಮಿಯನ್ನು ನಿಗ್ರಹಿಸಿದುದರಿಂದ ಭೂಮಿಗೆ ಪೃಥ್ವೀ ಎಂಬ ಹೆಸರು ಬಂದಿತೆಂದು ಪುರಾಣ ಕಥೆ. ಪೃಥು ಎಂದರೆ ವಿಸ್ತಾರವಾದ, ಅಗಲವಾದ, ದೊಡ್ಡದಾದ ಎಂದು ಅರ್ಥವಿದೆ. ಭೂಮಿಯು ವಿಸ್ತಾರವಾಗಿರುವುದರಿಂದ ಅದಕ್ಕೆ ಪೃಥ್ವೀ ಎಂದು ಹೆಸರು ಬಂದಿದೆ ಎಂದು ನಿಘಂಟುಗಳ ವಿವರಣೆ. ಪೃಥವೀ, ಪೃಥಿವೀ ಎಂಬ ಇತರ ಪರ್ಯಾಯ ರೂಪಗಳೂ ಉಂಟು. ಪೃಥ್ವಿಗೆ ಸಂಬಂಧಪಟ್ಟದ್ದು ಪಾರ್ಥಿವ. ಪಂಚಭೂತಗಳಲ್ಲಿ ಪೃಥ್ವೀ ಮೊದಲನೆಯದು. ಆದ್ದರಿಂದ ಮಣ್ಣಿನ ಎಂಬ ಅರ್ಥ ಬರುತ್ತದೆ. ಪಾರ್ಥಿವ ಶಬ್ದಕ್ಕೆ ರಾಜ ಎಂಬ ಅರ್ಥವೂ ಇದೆ. ಪಾರ್ಥಿವ ಶರೀರ ಎಂದರೆ ಮಣ್ಣಿನ ಶರೀರ ಎಂದರ್ಥ. ಈ ದೇಹವು ಮಣ್ಣುಂಡೆ ಎಂದು ಹೇಳಲು ನಾಚಿ ಸೌಮ್ಯವಾಗಿ ಪಾರ್ಥಿವ ಶರೀರ ಎಂದು ಉಪಯೋಗಿಸಬಹುದು.

**ಪಾರ್ವತೀಶಂಕರೋತ್ಸಂಗ ಖೇಲನೋತ್ಸವ ಲಾಲಸಾಯನಮಃ** ಪಾರ್ವತೀ ಪರಮೇಶ್ವರರ ತೊಡೆಯ ಮೇಲೆ ಮಲಗಿ ಆಟವಾಡುವುದರಿಂದ ಆನಂದ ಹೊಂದಿದ ತಂದೆ ತಾಯಿಯರು ಆಟವಾಡಿಸುತ್ತಿರುವ ಮಗುವಿಗೆ ನಮಸ್ಕಾರ ಎಂದರ್ಥ. ಗಣೇಶನನ್ನು ಕುರಿತ ಸ್ತುತಿ ವಾಕ್ಯ.

**ಪಾಲುಮಾರಿಕೆ** ಇದೊಂದು ವಿಚಿತ್ರ ಶಬ್ದ. ಈ ಶಬ್ದದಲ್ಲಿ ಪಾಲು - ಮಾರಿಕೆ ಎಂಬ ಎರಡು ಶಬ್ದಗಳಿಲ್ಲ. 'ಪಾಲುಮಾರು' ಎಂಬುದೇ ಕ್ರಿಯಾಪದ. ಅದಕ್ಕೆ 'ಇಕೆ' ಸೇರಿ 'ಪಾಲುಮಾರಿಕೆ' ಎಂದು ನಾಮವಾಚಕವಾಗಿದೆ. ಈ 'ಪಾಲುಮಾರು' ಶಬ್ದಕ್ಕೆ ತಮಿಳಿನಲ್ಲಿ ಪಾಲ್ಮಾಱಿ ಎಂದೂ ತೆಲುಗಿನಲ್ಲಿ ಪಾಲುಮಾಲು, ಪಾಲ್ಮಾಱಿ, ಪ್ರಾಲುಮಾಱಿ ಎಂದೂ ಜ್ಞಾತಿ ಶಬ್ದಗಳಿವೆ. ಇದಕ್ಕೆ ಅರ್ಥ ನಡವಳಿಕೆಯಲ್ಲಿ ಸೋಮಾರಿಯಾಗು, ಆಲಸನಾಗು, ಸೋಂಭೇರಿಯಾಗು ಎಂದರ್ಥ. ಕ್ರಿಯಾವಿಮುಖತೆಯನ್ನು ತೋರಿಸುವ ಈ ಗುಣ ಈಗಂತೂ ಸರ್ವತೋಮುಖ ವ್ಯಾಪಕವಾಗಿದೆ.

**ಪಾಲ್ಗೊಂಡರು, ಭಾಗವಹಿಸು** ಪಾಲ್ಗೊಳ್ಳು ಎಂಬುದು ಇಂಗ್ಲಿಷಿನ take part ಎಂಬುದರ ಅನುಚಿತವಾದ ಅನುವಾದ. ಅದನ್ನು ಎಷ್ಟು ಬೇಗ ಬಿಟ್ಟರೆ ಅಷ್ಟು ಒಳ್ಳೆಯದು. ಕನ್ನಡದಲ್ಲಿ ಭಾಗವಹಿಸು ಎಂಬುದು ತುಂಬಾ ಚೆನ್ನಾಗಿ ಹೊಂದಿಕೊಂಡಿರುವ ಶಬ್ದ. ಅದನ್ನು ಗಡಿಪಾರು ಮಾಡಿ ಪಾಲ್ಗೊಳ್ಳುವುದನ್ನು ಸಿಂಹಾಸನಕ್ಕೆ ಏರಿಸುವುದು ಅಷ್ಟು ಉಚಿತವಲ್ಲ. ಕನ್ನಡದ ಇಂಥ ಅನೇಕ ಅನುಚಿತ ಪ್ರಯೋಗಗಳ ಬಗ್ಗೆ ಕನ್ನಡದ ಮಾತುಗಾರರು ಎಚ್ಚರಿಕೆಯಿಂದಿರಬೇಕು. ಬರಹಗಾರರು ಕಣ್ಬಿಟ್ಟು ಇವುಗಳನ್ನು ಗುರುತಿಸಿ, ಬಿಡಬೇಕು.

**ಪಾಶ್ಚಾತ್ಯ, ಪೌರಾತ್ಯ** ಪಾಶ್ಚಾತ್ಯ ಎಂದರೆ ಪಡುವಣದ, ಪಶ್ಚಿಮ ದಿಕ್ಕಿಗೆ ಸೇರಿದ ಎಂದರ್ಥ. ಪಶ್ಚಾತ್ ಶಬ್ದದಿಂದ ಬಂದದ್ದು. ಪೌರಾತ್ಯ ಎಂಬುದು ತಪ್ಪು ಶಬ್ದ. ಅದು ಪೌರಸ್ತ್ಯ ಎಂದಿರಬೇಕು. ಅದಕ್ಕೆ ಪೂರ್ವದಿಕ್ಕಿಗೆ ಸೇರಿದ ಎಂದರ್ಥ. ಕನ್ನಡದಲ್ಲಿ ದಾಕ್ಷಿಣಾತ್ಯ ಎಂಬ ಶಬ್ದವಿದೆ. ಅದು ಸಂಸ್ಕೃತದಿಂದ ಬಂದ ಶಬ್ದ. ಅದಕ್ಕೆ ದಕ್ಷಿಣಕ್ಕೆ ಸಂಬಂಧಿಸಿದ ಎಂದರ್ಥ. ಇದರ ಸಾಮ್ಯದ ಮೇಲೆ ಪಾಶ್ಚಿಮಾತ್ಯ, ಪೌರ್ವಾತ್ಯ ಎಂಬ ರೂಪಗಳು ಪ್ರಚಾರಕ್ಕೆ ಬಂದಿವೆ. ಅವು ವ್ಯಾಕರಣ ಶುದ್ಧವಾಗಿಲ್ಲದಿದ್ದರೂ ಬಹು ಪ್ರಚಾರದಿಂದ ಅವು ಉಳಿದುಕೊಂಡಿವೆ. ಅವುಗಳನ್ನು ಬಿಡುವುದು ಒಳ್ಳೆಯದು.

**ಪಾಷಾಣ** ಇದು ಸಂಸ್ಕೃತ ಶಬ್ದ. ಇದಕ್ಕೆ ೧. ಕಲ್ಲು, ಶಿಲೆ, ೨. ಮಣಿ, ರತ್ನ ೩. ಒಂದು ವಿಷ ಎಂಬ ಮೂರು ಅರ್ಥಗಳಿವೆ. ಪಾಸಾಣ ಎಂಬ ತದ್ಭವ ರೂಪವೂ ಇದೆ. ಇಲಿ ಪಾಷಾಣ ಎಂಬುದನ್ನು ಬೀದಿಯಲ್ಲಿ ಮಾರುವುದಕ್ಕೆ ತರುತ್ತಾರೆ. ಅವನ ಹೃದಯ ಪಾಷಾಣ ಎಂದರೆ ಅವನು ಕಲ್ಲಿನಂಥ ಕಠಿಣ ಹೃದಯವುಳ್ಳವನು ಎಂದರ್ಥ.

**'ಪಾಸ್ತಿ' ಎಂದರೇನು?** ಕೆಲವು ವೇಳೆ ಕೆಲವು ಶಬ್ದಗಳ ಜೊತೆಯಲ್ಲಿ ಅದೇ ಬಗೆಯ ಉಚ್ಚಾರಣೆಯುಳ್ಳ ಅರ್ಥವಿಲ್ಲದ ಜೋಡಿ ಶಬ್ದಗಳು ಉಪಯೋಗವಾಗುತ್ತವೆ. ಪ್ರಾಸದಂತೆ ಇವು ಶಬ್ದಕ್ಕೆ ಸೊಗಸನ್ನು ತಂದುಕೊಡುತ್ತವೆ. ಅಂಥ ಶಬ್ದಗಳಿಗೆ ಬೇರೆ ಏನೂ ಅರ್ಥವಿರುವುದಿಲ್ಲ. ಉದಾ: ಆಸ್ತಿ - ಪಾಸ್ತಿ, ಸಂಬಳ - ಗಿಂಬಳ, ಬಟ್ಟೆ - ಬರೆ, ಪಾತ್ರೆ - ಪರಡಿ, ಕೆಲಸ - ಬೊಗಸೆ, ಅರಿವೆ - ಅಂಚಡಿ. ಇಂಥ ಶಬ್ದಗಳನ್ನು ಜೋಡಿ ಶಬ್ದಗಳು ಎಂದು ಕರೆಯುತ್ತಾರೆ. ಇವು ಪ್ರತಿಧ್ವನಿ ಶಬ್ದಗಳೂ ಆಗಬಹುದು. ಜರಾಸಂಧನ ಮಗಳೂ ಕಂಸನ ಹೆಂಡತಿಯೂ ಆದ ಪ್ರಾಸ್ತಿಯೊಬ್ಬಳಿದ್ದಾಳೆ. ಆ ಶಬ್ದಕ್ಕೂ ಇದಕ್ಕೂ ಸಂಬಂಧವಿಲ್ಲ. ಆದರೆ ಕಾಲ ಬದಲಾದಂತೆ ಅಂಥ ಶಬ್ದಗಳಿಗೂ ಅರ್ಥ ಬಂದುಬಿಡುತ್ತದೆ. ಉದಾ: ಗಿಂಬಳ =ಲಂಚ, ಮೇಲು ಸಂಪಾದನೆ, ಮೇಜಿನ ಕೆಳಗಿನ ಗಳಿಕೆ.

**ಪಿಂಗಳ** ಇದು ಸಂಸ್ಕೃತದ ಶಬ್ದ. ಇದಕ್ಕೆ ತಿಳಿಹಳದಿ ಬಣ್ಣದ್ದು ಎಂದು ಅರ್ಥ. ಈ ಶಬ್ದಕ್ಕೆ ಸಂಸ್ಕೃತದಲ್ಲಿ ೧೨ ಅರ್ಥಗಳಿವೆ. ಕನ್ನಡದಲ್ಲಿ ಆ ಅರ್ಥಗಳಲ್ಲಿ ಉಪಯೋಗಿಸಿರುವುದು ಕಡಮೆ. ಕನ್ನಡದಲ್ಲಿ ತಿಳಿಯಾದ ಕೆಂಪು ಬಣ್ಣಕ್ಕೆ ಹೆಚ್ಚು ಉಪಯೋಗವಾಗುತ್ತದೆ.

**ಪಿಂಜರಾ ಪೋಲು** ಈ ಶಬ್ದಕ್ಕೆ ಅರ್ಥ ಮುದಿಯಾದ ದನಗಳನ್ನು ಧರ್ಮಕ್ಕಾಗಿ ಪಾಲಿಸುವ ಸ್ಥಳ. ಆಲಂಕಾರಿಕವಾಗಿ ಮುದಿಮನುಷ್ಯರೇ ಹೆಚ್ಚಾಗಿರುವ ಕಚೇರಿ ಎಂದು ವರ್ಣನೆಯಿದೆ.

ಈ ಶಬ್ದ ಬಹುಶಃ ಶಿವನ ಹೆಸರಿನಲ್ಲಿ ಮುದ್ರೆಯೊತ್ತಿ ಬಿಟ್ಟ ಬಸವನ ರಕ್ಷಣೆಗೆ ಸಂಬಂಧಿಸಿರಬೇಕು. ಗುಜರಾತಿಯಲ್ಲಿ ಪಿಂಜರ - ಪಂಜರ, ಪೋಲ - ದೇವರಿಗೆ ಬಿಟ್ಟ ಗೂಳಿ - ಬಸವ. ಪಿಂಜರ ಸಂಸ್ಕೃತ ಶಬ್ದ. ಪೋಲ ಗುಜರಾತಿ ಭಾಷೆಯ ಶಬ್ದ. ಹೀಗೆ ಇವೆರಡೂ ಸೇರಿ ಆಗಿರುವ ಬಹು ಅಪೂರ್ವವಾದ ಶಬ್ದ ಇದು. ಪಿಂಜರಾ ಪೋಲು. ಮೈಸೂರು ಸರಕಾರದಲ್ಲಿ ಹಿಂದೆ ಒಂದು ಇಲಾಖೆಯೇ ಈ ಹೆಸರಿನಲ್ಲಿತ್ತು.

**ಪಿತ್ರಾರ್ಜಿತ** ಈ ಸಂಸ್ಕೃತ ಶಬ್ದಕ್ಕೆ ತಂದೆ ಸಂಪಾದಿಸಿದ ಗಳಿಸಿದ ಎಂದರ್ಥ. ವಂಶದ ಪೂರ್ವಿಕರು ಸಂಪಾದಿಸಿದ ಆಸ್ತಿ ಎಂದೂ ಅರ್ಥವಿದೆ. ಹಿಂದೆ ಇದು ಗಂಡು ಮಕ್ಕಳಿಗೆ ಮಾತ್ರ ಭಾಗವಾಗುತ್ತಿತ್ತು. ಈಗ ಹೆಣ್ಣು ಮಕ್ಕಳಿಗೂ ಸಮಾನವಾಗಿ ಹಂಚಬೇಕೆಂದು ನ್ಯಾಯಾಲಯದ ತೀರ್ಮಾನವಿದೆ.

**ಪಿಶುನ** ಇದು ಸಂಸ್ಕೃತ ಶಬ್ದ. ಇದಕ್ಕೆ ಚಾಡಿಕೋರ ಎಂದರ್ಥ.

**ಪಿಷ್ಟಪೇಷಣ** ನೋಡಿ: **ಚರ್ವಿತಚರ್ವಣ**

**ಪೀತಪತ್ರಿಕೆ** ಎಂದರೇನು? ವರ್ತಮಾನ ಪತ್ರಿಕೆಗಳಲ್ಲಿ ಅನೇಕ ಬಗೆಗಳಿವೆ. ಕೆಲವು ಅತಿರಂಜಕವಾದ ರೋಮಾಂಚಕಾರಕ ವರ್ತಮಾನಗಳನ್ನು ಪ್ರಕಟಿಸುವ ಪತ್ರಿಕೆಗಳು. ಇಂಗ್ಲಿಷಿನಲ್ಲಿ Sensational news ಎಂದು ಇದನ್ನು ಕರೆಯುತ್ತಾರೆ. ಇಂಥ ಪತ್ರಿಕೆಗಳು ಕೆಲವು ವೇಳೆ ಅಸಭ್ಯವಾಗಿಯೂ ಅಪ್ರಾಮಾಣಿಕವಾಗಿಯೂ ನಡೆದುಕೊಳ್ಳಬಹುದೆಂದು ನಿರೀಕ್ಷಿಸಬಹುದು. ಇವನ್ನು yellow press ಎನ್ನುತ್ತಾರೆ ಇಂಗ್ಲಿಷಿನಲ್ಲಿ. ಓದಿದವರಿಗೆ ಉದ್ರೇಕವನ್ನುಂಟು ಮಾಡುವ ವರ್ತಮಾನಗಳನ್ನೂ ಬರಹಗಳನ್ನೂ ಹೊಂದಿರುವ ಪತ್ರಿಕೆ. ವ್ಯಕ್ತಿ ವಿಷಯಗಳಲ್ಲಿ ಸಿರಿವಂತರಿಗೆ ಸಂಬಂಧಿಸಿದ ಹೆದರಿಸುವಂಥ ಗುಟ್ಟನ್ನು ರಟ್ಟು ಮಾಡುವ, ಬೆದರಿಕೆ ಹಾಕುವ ಪತ್ರಿಕೆ. ಸಾರ್ವಜನಿಕರಿಗೆ ಪ್ರತಿನಿತ್ಯ ಬಾಯಿಮಾತಿನ ಚಾಪಲ್ಯಕ್ಕೆ ಚೈತನ್ಯವನ್ನು ಕೊಡುವ ಪತ್ರಿಕೆ.

**ಪುಂಡ** ಪುಂಡ ಎಂದರೆ ತುಂಟ, ದುಷ್ಟ ಎಂದರ್ಥ. ಆದರೆ ಅದು ವ್ಯಾಪಕವಾಗಿ ನೀತಿಯಿಲ್ಲದವನು, ಪೋಲಿ ಅರ್ಥದಲ್ಲಿಯೂ ಉಪಯೋಗವಿದೆ. ಕನ್ನಡದ ಶಬ್ದ. ದ್ರಾವಿಡ ಭಾಷೆಗಳಲ್ಲಿಯೂ ಮರಾಠೀ ಭಾಷೆಯಲ್ಲಿಯೂ ಉಪಯೋಗದಲ್ಲಿದೆ.

**ಪುಗಸಟ್ಟೆ** ಪುಗಸಟ್ಟೆ ಎಂಬ ಶಬ್ದ ಅನೇಕ ರೂಪಗಳನ್ನು ಪಡೆದಿದೆ. ಪುಕ್ಕಟ್ಟೆ, ಪುಕ್ಕಟೆ, ಪುಗಸಾಟೆ, ಪುಕ್ಸಟ್ಟೆ ಇತ್ಯಾದಿ. ಇದಕ್ಕೆ ಅರ್ಥ ಬಿಟ್ಟಿ, ಏನೂ ಇಲ್ಲದೆ, ಯಾವ ಬೆಲೆಯೂ ಇಲ್ಲದೆ, ಯಾವ ಖರ್ಚೂ ಇಲ್ಲದೆ. ಇದು ಮರಾಠಿಯ ಪುಕಟ, ಪುಕಟಾ, ಪುಕಟ್ಟಾ ಮುಂತಾದ ರೂಪಗಳ ಶಬ್ದದ ಪ್ರಭಾವ ಇರಬಹುದು. ಇದು ಹೆಚ್ಚಾಗಿ ಮರಾಠಿಯನ್ನಾಡುವ ಸ್ಥಳದಿಂದ ಆಮದಾದ ಪದ. ಇಷ್ಟನ್ನು ಮಾತ್ರ ಹೇಳಬಹುದು.

**ಪುಟ** ಇದು ಸಂಸ್ಕೃತದ ಪೃಷ್ಠ ಎಂಬ ಶಬ್ದದ ತದ್ಭವ. ಒಂದು ವಸ್ತುವಿನ ಒಂದು ಮುಖ. ಮುಂಭಾಗ ಅಥವಾ ಹಿಂಭಾಗ. ಕನ್ನಡದಲ್ಲಿ ಕಾಗದದ ಒಂದು ಹಾಳೆಯ ಯಾವುದಾದರೂ ಒಂದು ಮುಖ. ಇಂಗ್ಲಿಷಿನ page ಎಂಬ ಶಬ್ದಕ್ಕೆ ಸಮಾನ. Sheet ಎಂದರೆ ಒಂದು ಹಾಳೆ. ದಸ್ತು ಎಂದರೆ ೨೪ ಹಾಳೆಗಳ ಕಟ್ಟು. ಇಂಗ್ಲಿಷಿನ quire. ಮುದ್ರಣಶಾಸ್ತ್ರದಲ್ಲಿ ಈ ಬಗ್ಗೆ ಇತರ ಅನೇಕ ವಿವರಗಳು ದೊರಕುತ್ತವೆ.

**ಪುಢಾರಿ** ಪುಢಾರಿ ಎಂಬುದು ಮರಾಠೀ ಭಾಷೆಯ ಪುಢಾರಿ ಪುಢಾಕಾರೀ ಎಂಬ ಶಬ್ದಗಳಿಂದ ಬಂದುದು. ಆ ಶಬ್ದಕ್ಕೆ ಮುಂದಾಳು, ನಾಯಕ, leader ಎಂಬ ಅರ್ಥಗಳಿವೆ. ಆದರೆ ಕನ್ನಡದಲ್ಲಿ ಈಗ ಈ ಶಬ್ದಕ್ಕೆ ಅಂಥ ಗೌರವಯುತವಾದ ಅರ್ಥವಿಲ್ಲ. ರಾಜಕೀಯದ ಪುಂಡಾಟದಲ್ಲಿ ಸೇರುವ ಜನಕ್ಕೆ ಈ ಶಬ್ದವನ್ನು ಸಾಮಾನ್ಯವಾಗಿ ಉಪಯೋಗಿಸುತ್ತಾರೆ.

ಪುದುವೊಟ್ಟು ಶಬ್ದವನ್ನು ಹೆಚ್ಚಾಗಿ ಠೇವಣಿ ಎಂಬರ್ಥದಲ್ಲಿ ಹಣದ ಮೊತ್ತಕ್ಕೆ ಅಥವಾ ಹಣ ಬರುವಂತೆ ಮಾಡಿದ ಏರ್ಪಾಟಿಗೆ ಅನ್ವಯಿಸುವುದು ಒಳ್ಳೆಯದು. ನೋಡಿ: **ಪ್ರತಿಷ್ಠಾನ**

**ಪುನಃಸ್ಕಾರ, ಪುನಸ್ಕಾರ** ಎರಡೂ ಅಬದ್ಧ ರೂಪಗಳು. ಸರಿಯಾದ ರೂಪ ಪುರಸ್ಕಾರ. ಪುರಸ್ಕಾರ ಎಂದರೆ ಮುಂದೆ, ಗೌರವ ಸ್ಥಾನದಲ್ಲಿ ಇಡುವುದು. ಎಂದರೆ ಗೌರವ, ಪೂಜೆ, ಮನ್ನಣೆ ಎಂದರ್ಥ. ಪೂಜೆ ಪುರಸ್ಕಾರ ಎಂಬುದನ್ನು ಉಚ್ಚಾರ ಮಾಡುವಲ್ಲಿ ತಪ್ಪಾಗಿ ಪುನಸ್ಕಾರ ಎಂಬುದು ಹುಟ್ಟಿಕೊಂಡಿದೆ. ಅದನ್ನು ಬಿಡುವುದು ಒಳ್ಳೆಯದು. ಪೂಜೆ ಪುರಸ್ಕಾರ ಎಂಬುವ ಜೋಡಿ ಶಬ್ದಗಳು ಮಾನಮರ್ಯಾದೆ ಇದ್ದ ಹಾಗೆ.

**ಪುನರವಲೋಕನ** ಪುನರವಲೋಕನ, ಪುನರವತಾರ ಎಂಬ ರೂಪಗಳು ಸರಿ. ಪುನರಾವಲೋಕನ, ಪುನರಾವತಾರ ತಪ್ಪು. ಉಪಯೋಗಿಸಬಾರದು.

**ಪುನರುಜ್ಜೀವನ** ಇದು ಸಂಸ್ಕೃತದ ಶಬ್ದ. ಉಜ್ಜೀವನ ಎಂದರೆ ಬದುಕಿಸುವುದು, ಸಾಯುತ್ತಿರುವವನು ಬದುಕುವುದು, ಪುನಃ ಎಂದರೆ ಮತ್ತೆ ಮತ್ತೆ ಬದುಕುವಂತೆ ಮಾಡುವುದು. ಈ ಶಬ್ದದಲ್ಲಿ ಮತ್ತೆ ಎಂಬರ್ಥ ಎರಡು ಸಲ ಬರುತ್ತದೆ ಎಂಬುದು ನೆನಪಿರಬೇಕು. ನಾಶವಾಗುತ್ತಿರುವುದನ್ನು ಉದ್ಧಾರ ಮಾಡುವುದಕ್ಕೂ ಈ ಶಬ್ದವನ್ನು ಉಪಯೋಗಿಸುತ್ತಾರೆ. ದೇವಾಲಯ, ಪ್ರಾಚೀನ ಸ್ಮಾರಕಗಳು ಇವುಗಳು ಬೀಳುವಂತಾದಾಗ ಅವುಗಳನ್ನು ಸರಿಪಡಿಸಿ ಮೊದಲಿನಂತೆ ಮಾಡುವುದಕ್ಕೆ ಈ ಮಾತು ಸರಿಯಾಗಿದೆ.

**ಪುರಂ, ಸರಸ್ವತೀಪುರಂ, ಮಲ್ಲೇಶ್ವರಂ** ಬಡಾವಣೆಗೆ ಹೆಸರನ್ನು ನೀಡುವಾಗ ಹೆಸರಿನ ಕೊನೆಯಲ್ಲಿ ಅನುಸ್ವಾರವನ್ನು ಏಕೆ ಸೇರಿಸುತ್ತಾರೆ ?

ಇದು ಒಳ್ಳೆಯ ಪ್ರತಿಭಟನೆಯ ಪ್ರಶ್ನೆ. ಈ ಮಾತಿನಲ್ಲಿ ಅಡಗಿರುವ ನೋವು ಸುವ್ಯಕ್ತವಾಗುತ್ತದೆ. ಯಾವ ತಮಿಳು ಅಧಿಕಾರಿ ಈ ತಪ್ಪು ಮಾಡಿದ್ದು ಯಾವಾಗಲೋ ತಿಳಿಯದು. ಆದರೆ ಈ ತಪ್ಪು ಮುಂದುವರಿಯುತ್ತಿರುವುದು ತುಂಬ ವ್ಯಥೆಯನ್ನು ಉಂಟುಮಾಡುತ್ತಿದೆ. ದೊಡ್ಡ ದೊಡ್ಡ ಫಲಕಗಳಲ್ಲಿ ಈ ತಮಿಳು ಅಂತ್ಯವನ್ನು ಕಂಡಾಗಲೆಲ್ಲ ಕನ್ನಡಿಗರು ಅದನ್ನು ಸಹಿಸುತ್ತಿರುವುದಕ್ಕೆ ಏನು ಹೇಳಬೇಕೋ ತಿಳಿಯದಾಗಿದೆ. ಒಂದು ವೇಳೆ ಹೆಸರಿನ ಬದಲಾವಣೆಗೆ ಬೇರೆ ಆಂದೋಳನವೇ ಆಗಬೇಕೋ ಏನೋ! ಪುರ ಸಾಕು. ಮಲ್ಲೇಶ್ವರ, ವಿಶ್ವೇಶ್ವರಪುರ, ಸುಬ್ರಹ್ಮಣ್ಯಪುರ ಸಾಕು.

**ಪುರಪಿತೃ, ರಾಷ್ಟ್ರಪತಿ** ಇವರ ಸ್ಥಾನಕ್ಕೆ ಮಹಿಳೆಯರು ಆಯ್ಕೆಯಾದರೆ ಅವರನ್ನು ಏನೆಂದು ಕರೆಯಬೇಕು ? ಪುರಮಾತೆ, ರಾಷ್ಟ್ರಪತ್ನಿ ಎಂದಂತೂ ಕರೆಯಲಾಗುವುದಿಲ್ಲವೆಂಬುದು ಸ್ಪಷ್ಟ. ಇಂಗ್ಲಿಷಿನ city father ಎಂಬುದರ ಅನುವಾದ ಪುರಪಿತೃ. ಪಿತೃ ಎನ್ನುವುದಕ್ಕೆ ಬೇರೆ ಅರ್ಥಗಳೂ ಇವೆ. ಪುರಪಿತೃ ಎಂಬ ಶಬ್ದವೇ ನಮ್ಮ ನಾಗರಿಕತೆಗೆ ಹೊಂದುವುದಿಲ್ಲ. ನಗರಪಾಲಕ ಎಂದೋ ಪುರಪಾಲಕ ಎಂದೋ ಕರೆಯಬಹುದು. ಸ್ವಲ್ಪ ಚರ್ಚಿಸಿದರೆ ಇನ್ನೂ ಬೇರೆಯ ಶಬ್ದಗಳು ಹೊಳೆಯುತ್ತವೆ. ಆಗ ನಗರಪಾಲಕಿ ಎಂದು ಅಥವಾ ನಗರಪಾಲಿಕೆ ಎಂದು ಕರೆಯಬಹುದು. ರಾಷ್ಟ್ರಾಧ್ಯಕ್ಷ ಎನ್ನುವುದು ಪ್ರಚಾರದಲ್ಲಿದೆ. ರಾಷ್ಟ್ರಾಧ್ಯಕ್ಷೆ ಎನ್ನುವುದು ಸ್ತ್ರೀಲಿಂಗವಾಗುತ್ತದೆ. ಇದು ತೊಂದರೆ ಕೊಡುವ ಶಬ್ದವಲ್ಲ. ಅಧ್ಯಕ್ಷಿಣಿ ಎನ್ನುವುದು ಸರಿಯಾದ ರೂಪವಲ್ಲ.

**ಪುರವಣಿ** ಇದು ಮರಾಠಿಯ ಪುರವಣೀ ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಪೂರಕಪತ್ರ, ಅನುಬಂಧ ಎಂದರ್ಥ. ಯಾವುದಾದರೂ ಮುಖ್ಯವಾದ ಪ್ರಕಟಣೆಗೆ ಸೇರದ ಮತ್ತು ಅದರ ಜೊತೆಯಲ್ಲಿಯೇ ಪ್ರಕಟವಾಗುವ ಭಾಗ. ಉದಾ: ಸಾಹಿತ್ಯ ಪುರವಣಿ, ಸಿನಿಮಾ ಪುರವಣಿ, ಈ ಶಬ್ದವನ್ನು ನಾವು ಮರಾಠಿಯಿಂದ ಆಮದು ಮಾಡಿಕೊಂಡಿದ್ದೇವೆ.

**ಪುರಸೊತ್ತು** ಇದು ಅರಬ್ಬಿ ಭಾಷೆಯ ಪುರಸತ್ ಅಥವಾ ಪುರ್ಸತ್ ಎಂಬ ಶಬ್ದ. ಕನ್ನಡದಲ್ಲಿ

ಪುರಸತ್ತು, ಪುರುಸತ್ತು, ಪುರುಸೊತ್ತು ಎಂಬ ಇತರ ರೂಪಗಳೂ ಇವೆ. ಬಿಡುವು, ವಿರಾಮ, ವಿಶ್ರಾಂತಿ ಎಂದು ಅರ್ಥ. ಯಾವ ಕೆಲಸವೂ ಇಲ್ಲದೆ ಕಾಲವನ್ನು ಯಾವ ಕೆಲಸಕ್ಕೆ ಬೇಕಾದರೂ ಉಪಯೋಗಿಸಬಹುದಾದ ಸ್ಥಿತಿ. ಇಂಗ್ಲಿಷಿನ Leisureಗೆ ಸಮಾನವಾದುದು.

**ಪುರುಡು** ಕನ್ನಡ ಶಬ್ದ, 'ಸೂತಕ' ಸಂಸ್ಕೃತ ಶಬ್ದ. ಸೂತಕ ಶಬ್ದದ ಚರಿತ್ರೆ ವಿಚಿತ್ರವಾಗಿದೆ. ಸೂತಕ ಎಂದರೆ ಹುಟ್ಟುವುದು, ಜನ್ಮ ಪಡೆಯುವುದು, ಜನನ. ಸಂಸಾರದಲ್ಲಿ ಶಿಶು ಜನಿಸಿದಾಗ ಜ್ಞಾತಿಗಳಿಗೆ, ಅಂದರೆ ದಾಯಾದಿಗಳಿಗೆ ಒಂದು ಮೈಲಿಗೆ ಬರುತ್ತದೆ. ಇದನ್ನು ಸಂಸ್ಕೃತದಲ್ಲಿ 'ಆಶೌಚ' ಎಂದು ಕರೆಯುತ್ತಾರೆ. ಇದು ಅಶುಚಿಯೆಂಬ ಭಾವವನ್ನು ಸೂಚಿಸುತ್ತದೆ. ಇದೇ ಮೈಲಿಗೆ. ಆಶೌಚವು ಎರಡು ಬಗೆಯಾಗಿದೆ. ಒಂದು 'ಜನನಾಶೌಚ'. ಇನ್ನೊಂದು 'ಮೃತಾಶೌಚ'. ಹತ್ತಿರದ ದಾಯಾದಿಗಳು ಹತ್ತು ದಿನಗಳ ತನಕ ಮೈಲಿಗೆಯಲ್ಲಿರಬೇಕು. ಪುರುಡು = ಜನನಾಶೌಚ; ಇದಕ್ಕೆ ತುಳುವಿನಲ್ಲಿ **ಅಮೆ** ಎಂದು ಕರೆಯುತ್ತಾರೆ.

**ಪುರೋಹಿತ** ದೇವತೆಗಳಿಗೆ ಸಂಬಂಧಿಸಿದಂತೆ ಮಾನವನ ಕೆಲವು ಕರ್ತವ್ಯಗಳಿವೆ. ಅಂಥ ವೈದಿಕ ಕಾರ್ಯಗಳನ್ನು ಆ ಕರ್ತವ್ಯ ಮಾಡುವವನ ಮುಂದೆ ನಿಂತು ಮಾರ್ಗದರ್ಶನ ಮಾಡುವವನು ಪುರೋಹಿತ. ಅವನು ವೇದ ವೇದಾಂಗಗಳನ್ನು ಚೆನ್ನಾಗಿ ತಿಳಿದವನು. ಜಪ, ಹೋಮ ಪರಾಯಣನಾಗಿದ್ದು ತನ್ನನ್ನು ಬಲ್ಲವರಿಗೆ ಆಶೀರ್ವಾದಗಳನ್ನು ಮಾಡಿ ಹಿರಿಯನಂತೆ ನಡೆಸಿಕೊಳ್ಳುವವನು. ಇಂಥವನನ್ನೇ ರಾಜಪುರೋಹಿತನೆಂದೂ ಕರೆಯುತ್ತಿದ್ದರು. ಪುರೋಹಿತನ ಗುಣಗಳನ್ನು ಸ್ಮೃತಿಗಳಲ್ಲಿ ವಿವರಿಸಿದ್ದಾರೆ. ಆತನು ಹಿತಕಾರಿ. ವೇದ ಸ್ಮೃತಿಗಳನ್ನು ತಿಳಿದಿರಬೇಕು. ವಿಮಲವಾದ ಆಚಾರವುಳ್ಳವನಾಗಿ ಶುಚಿಯಾಗಿರಬೇಕು. ಆಪತ್ತು ಬಂದಾಗ ಅದು ನಿವಾರಣೆಯಾಗುವ ಉಪಾಯಗಳನ್ನು ಹೇಳಿಕೊಡುವವನು, ತನ್ನ ಜೀವನದಲ್ಲಿ ಪ್ರಾಮಾಣಿಕವಾಗಿ ಬಾಳುವವನಾಗಿರಬೇಕು. ಇಂಥ ವ್ಯಕ್ತಿಗಳ ಕಾರ್ಯವನ್ನು ಪೌರೋಹಿತ್ಯ ಎಂದು ಕರೆಯುತ್ತಾರೆ. ಪುರೋಹಿತ ಶಾಹಿ ಎಂಬುದು ಈಚೀಚೆಗೆ ಸೃಷ್ಟಿಯಾದ ಶಬ್ದ. ಪೌರೋಹಿತ್ಯವನ್ನು ಮಾಡಿಸುವ ಜನರ ಪ್ರಾಧಾನ್ಯವನ್ನು ಕುರಿತು ಆಧುನಿಕ ಚಿಂತನೆ ಮಾಡಿ ಸಾಮ್ರಾಜ್ಯ ಶಾಹಿಯಿಂದ ಸಮಾಜಕ್ಕೆ ತೊಂದರೆಯಾಗಿರುವಂತೆ ಪುರೋಹಿತ ಶಾಹಿಯೂ ಸಮಾಜದ ಅಭಿವೃದ್ಧಿಗೆ ಅಡ್ಡಿಯೆಂದು ಪ್ರಚಾರ ಮಾಡುವ ಸಂದರ್ಭದಲ್ಲಿ ಉಪಯೋಗವಾದ ಶಬ್ದ. ಇದು ಬ್ರಾಹ್ಮಣ ವರ್ಗಕ್ಕೆ ಸಮಾಜದಲ್ಲಿದ್ದ ಪ್ರಾಧಾನ್ಯವನ್ನು ವಿವರಿಸುವ ಶಬ್ದ. ಪಂಚತಂತ್ರದಲ್ಲಿ ಪೌರೋಹಿತ್ಯದ ಬಗ್ಗೆ ವ್ಯಂಗ್ಯವಾದ ಒಂದು ಮಾತು ಬರುತ್ತದೆ. **ನರಕಾಯ ಮತಿಸ್ತೇ ಚೇತ್ ಪೌರೋಹಿತ್ಯಂ ಸಮಾಚರ.** ಇದರ ಅರ್ಥ 'ನಿನಗೆ ನರಕಕ್ಕೆ ಹೋಗಬೇಕೆಂಬ ಬುದ್ಧಿ ಇದ್ದರೆ, ಪೌರೋಹಿತ್ಯವನ್ನು ಮಾಡು. ನಿನ್ನ ನಿರೀಕ್ಷೆ ಫಲಿಸುತ್ತದೆ.' (ಪಂಚತಂತ್ರ ೩-೮೦).

**ಪುಷ್ಕರ, ಪುಷ್ಕರೋಕ್ಷಿಪ್ತ** ಈ ಎರಡೂ ಸಂಸ್ಕೃತ ಶಬ್ದಗಳು. ಪುಷ್ಕರ ಎಂಬುದಕ್ಕೆ ೧. ಕಮಲ *೨. ಒಂದು ಸಸ್ಯ, ೩. ಆನೆಯ ಸೊಂಡಿಲ ತುದಿ ೪. ಡಮರುಗ, ೫. ಕೊಕ್ಕರೆ, ೬. ಕೊಳ, ೭. ಕತ್ತಿಯ ಅಲಗು, ೮. ಸೂರ್ಯ ಇತ್ಯಾದಿಯಾಗಿ ಮೂವತ್ತು ಅರ್ಥಗಳಿವೆ.* ಪುಷ್ಕರೋಕ್ಷಿಪ್ತ ಎಂದರೆ ಪುಷ್ಕರದಿಂದ ಎತ್ತಿ ಹಾಕಲ್ಪಟ್ಟ ಎಂದರ್ಥ. ಈ ಶಬ್ದ ಯಾವ ಸಂದರ್ಭದಲ್ಲಿ ಬಂದಿದೆ ಎಂದು ಗೊತ್ತಾದರೆ ಆಗ ಅದರ ಸ್ಪಷ್ಟ ಅರ್ಥ ಹೇಳಬಹುದು.

**ಪುಸ್ತಕ - ಹೊತ್ತಿಗೆ** ಸಂಸ್ಕೃತದಲ್ಲಿ ಪುಸ್ತ, ಪುಸ್ತಕ, ಪುಸ್ತಿಕೆ ಎಂಬ ಶಬ್ದಗಳಿಗೆ ಗ್ರಂಥ, ಓಲೆಗರಿಯ ಕವಳಿಗೆ ಎಂಬ ಅರ್ಥವಿದೆ. ಪುಸ್ತಕ-ಹೊತ್ತಗೆ ಎಂದೂ ಪುಸ್ತಿಕ - ಹೊತ್ತಿಗೆ ಎಂದೂ ಬೇರೆ ಬೇರೆ ರೂಪಗಳನ್ನು ಪಡೆಯುತ್ತವೆ. ಕನ್ನಡದಲ್ಲಿ ಈ ಶಬ್ದಗಳು ೧೩ನೆಯ ಶತಮಾನದಿಂದಲೂ ಪ್ರಯೋಗದಲ್ಲಿವೆ. ಸಂಸ್ಕೃತದಲ್ಲಿ ಪುಸ್ತ ಎಂಬ ಶಬ್ದ ಪುಸ್ತಕ ಎಂಬ

ರೂಪವನ್ನು ಪಡೆಯುತ್ತದೆ. ಪುಸ್ತಿಕಾ ಎಂಬ ರೂಪವನ್ನು ನಿಘಂಟುಗಳಲ್ಲಿ ಕಾಣಲಾಗುವುದಿಲ್ಲ. ಇದನ್ನು ಕನ್ನಡದ ವಿದ್ವಾಂಸರು ಅಲ್ಲಲ್ಲಿ ಉಪಯೋಗಿಸಿದ್ದಾರೆ. ವ್ಯಾಕರಣದ ಸೂತ್ರಗಳ ಪ್ರಕಾರ ಈ ಶಬ್ದವನ್ನು ಸೃಷ್ಟಿಸಬಹುದು. ಇದು ಹೊತ್ತಿಗೆಗೆ ಸಂಸ್ಕೃತವನ್ನು ಹುಡುಕುವ ಪ್ರಯತ್ನ ಅಷ್ಟೆ.

**ಪೂರ್ಣಿಮಾ** ಇದು ಸಂಸ್ಕೃತ. ಹುಣ್ಣಿಮೆ ಕನ್ನಡ ತದ್ಭವ. ಶುಕ್ಲಪಕ್ಷದ ಹದಿನೈದನೆಯ ದಿನ. ಚಂದ್ರನು ಪೂರ್ಣಚಂದ್ರನಾಗಿರುವ ದಿನ. **ಪೂರ್ಣಮಸಃ ಚಂದ್ರಸ್ಯ ಇಯಂ ಪೌರ್ಣಮಾಸೀ** ಎಂದು ಟೀಕೆ. ರಾಕಾ ಚಂದ್ರ ಎಂದೂ ಪೂರ್ಣಚಂದ್ರನಿಗೆ ಇನ್ನೊಂದು ಹೆಸರು.

**ಪೂರ್ವಗ್ರಹ-ಪೂರ್ವಾಗ್ರಹ** ಈ ಎರಡೂ ವ್ಯಾಕರಣ ಶುದ್ಧವಾದ ರೂಪಗಳು. ಆದರೆ Prejudice ಎಂಬ ಶಬ್ದದ ಅರ್ಥಕ್ಕೆ ಸರಿಯಾಗಿ ನಾವು ಉಪಯೋಗಿಸಬೇಕಾದ ಶಬ್ದ ಯಾವುದು ಎಂದು ನಿರ್ಧರಿಸಬೇಕು. ಈ Prejudice ಎಂಬ ಶಬ್ದಕ್ಕೆ ಇಂಗ್ಲಿಷಿನಲ್ಲಿರುವ ಅರ್ಥವನ್ನು ನಾವು ಕನ್ನಡದಲ್ಲಿ ಯಾವ ಶಬ್ದದ ಮೂಲಕ ಸರಿಯಾಗಿ ತಿಳಿಸಬಹುದು ಎಂಬುದು ಮುಖ್ಯ ಪ್ರಶ್ನೆ. Prejudiceಎಂಬ ಶಬ್ದಕ್ಕೆ ಇರುವ ಅರ್ಥ ಇದು. Unfavourable opinion formed beforehand or without knowledge ಅರ್ಥದಲ್ಲಿ ಪೂರ್ವ + ಆಗ್ರಹ ಎಂಬ ಶಬ್ದವನ್ನು ಉಪಯೋಗಿಸುವುದು ಸರಿಯಾದುದಲ್ಲ. ಏಕೆಂದರೆ ಅಲ್ಲಿ ಯಾವ ಆಗ್ರಹವೂ ಇಲ್ಲ. ಆಗ್ರಹ ಎಂಬ ಸಂಸ್ಕೃತ ಶಬ್ದಕ್ಕೆ ಆವೇಶ, ದೃಢ ನಿರ್ಧಾರ, ಹಠ ಎಂಬ ಅರ್ಥಗಳಿವೆ. ಆಕ್ರಮಣ, ದತ್ತು ಸ್ವೀಕಾರ, ದಯೆ ಮುಂತಾದ ಅರ್ಥಗಳೂ ಇವೆ. Prejudiceಶಬ್ದಕ್ಕೆ ಈ ಅರ್ಥಗಳು ಸರಿ ಹೊಂದುವುದಿಲ್ಲ. ಗ್ರಹ ಎಂಬುದಕ್ಕೆ ತೆಗೆದುಕೋ, ತಿಳಿದಿರು, ಹಿಡಿದುಕೊ, ಅಂಗೀಕರಿಸು ಎಂಬ ಅರ್ಥಗಳಿವೆ. ಇವು ಸರಿ ಹೊಂದುವ ಅರ್ಥಗಳು. ಆದುದರಿಂದ ಪೂರ್ವಗ್ರಹ ಎಂಬುದು ಸರಿಯಾಗುತ್ತದೆ ಎಂಬುದು ನನ್ನ ಅಭಿಪ್ರಾಯ. ಹೊಸ ಶಬ್ದವನ್ನು ಪ್ರಯೋಗಕ್ಕೆ ತರುವಾಗ ಸ್ವಲ್ಪ ಸ್ಪಷ್ಟವಾದ ರೂಪಗಳನ್ನು ತರುವುದು ಪ್ರಯೋಜನಕರ. ಹಿಂದಿನಿಂದ ಇದ್ದ ಹಠ ಎಂಬ ಅರ್ಥದಲ್ಲಿ ಪೂರ್ವಾಗ್ರಹ ಎಂಬುದನ್ನು ಉಪಯೋಗಿಸಿದರೆ ನನ್ನ ಅಭ್ಯಂತರವೇನೂ ಇಲ್ಲ. ಆದರೆ ಈ ಶಬ್ದ Prejudice ಶಬ್ದಕ್ಕೆ ತುಂಬ ದುಬಾರಿಯಾದುದಾಗುತ್ತದೆ.

**ಪೆಟ್ಲುಪ್ಪು** ಪೆಟಲು, ಪೆಟ್ಲು ಎಂಬ ಹೆಸರಿನ ಒಂದು ಯುದ್ಧಸಾಧನವಿದೆ. ಇದು ತುಪಾಕಿಯಂಥ ಆಯುಧ. ಇದಕ್ಕೆ ಹಾಕುವ ಮದ್ದು, ಸಿಡಿಮದ್ದು, ಪೆಟ್ಲುಪ್ಪು, ಪೆಟಲುಪ್ಪು ಕುಮಾರ ರಾಮನ ಸಾಂಗತ್ಯದಲ್ಲಿ ಬರುವ ಈ ವಾಕ್ಯವನ್ನು ಗಮನಿಸಿ: **ಪೆಟಲ ಬೆಣೆಯ ಬಂಡಿ, ಪೆಟಲುಪ್ಪಿನ ಬಂಡಿ ಕಟಕದೊಳೆಯ್ದಿದುವು.** (೯೦-೪೯). ಒಂದು ಬಗೆಯ ಔಷಧಕ್ಕೂ ಈ ಹೆಸರಿದೆ. ವೈದ್ಯ ಗ್ರಂಥಗಳಲ್ಲಿ ಅದರ ಪ್ರಯೋಗವಿದೆ - ಪೆಟಲುಪ್ಪನ್ನು ಸಣ್ಣದಾಗಿ ಪುಡಿ ಮಾಡಿ, ನಿಂಬೆ ಹುಳಿಯನ್ನು ಬಿಟ್ಟು ಕಲಸಿಕೊಂಡು ನುಂಗುವುದು (ವಿವಿಧ ವೈದ್ಯ ವಿಷಯಗಳು ಎಂಬ ಗ್ರಂಥ, ೯೯ನೇ ಪುಟ).

**ಪೆಡಂಭೂತ** ಪೆಡಂ ಎಂಬ ಶಬ್ದ ಸಮಾಸಗಳಲ್ಲಿ ಪೆಱಗು ಎಂಬ ಶಬ್ದಕ್ಕೆ ಆದೇಶವಾಗಿ ಬರುತ್ತದೆ. ಪೆಱಗು ಎಂದರೆ ಹಿಂದೆ ಎಂದರ್ಥ. ಪ್ರಾಚೀನ ಕಾಲದಲ್ಲಿದ್ದ ದೊಡ್ಡ ದೊಡ್ಡ ಪ್ರಾಣಿಗಳು. ಭೂತಕಾಲದ ಪ್ರಾಣಿಗಳು, ಭಯಂಕರವಾದ ಪ್ರಾಣಿಗಳು ಎಂದರ್ಥ. ಅಂಥ ಪ್ರಾಣಿ ರೂಪದ ಭೂತ ಎಂದೂ ಅರ್ಥವಾಗಬಹುದು.

**ಪೆರ್ಗಡೆ - ಹೆಗ್ಗಡೆ** ಪೆರ್ಗಡೆ ಎಂಬುದು ಈ ಶಬ್ದದ ಮೊದಲ ರೂಪ. ಪಿರಿದು +ಕಡೆ =ಪೆರ್ಗಡೆ. ಕಡೆ ಎಂಬ ಶಬ್ದಕ್ಕೆ ರಾಜ್ಯದ ಸೆರಗು, ಅಂಚು ಎಂಬ ಅರ್ಥವಿದೆ. ಹಿಂದೆ ವಿಸ್ತಾರವಾಗಿದ್ದ ರಾಜ್ಯದ ರಕ್ಷಣೆಯನ್ನು ಬಲಪಡಿಸಲು ರಾಜ್ಯದ ಎಲ್ಲೆ ಗಡಿಗಳಲ್ಲಿ ರಾಜನು ತನ್ನ

ಪ್ರತಿನಿಧಿಯಾಗಿರುವ ಅಧಿಕಾರವನ್ನು ವಹಿಸಿ ಪೆರ್ಗಡೆಗಳನ್ನು ನೇಮಿಸುತ್ತಿದ್ದರು. ಅಂಥ ಅಧಿಕಾರವನ್ನು ಪಡೆದವನು ಪೆರ್ಗಡೆಯೇ. ಬಲ್ಲಾಳ, ಸಾವಂತ, ಮಾನವಂತ, ಮನ್ನೆಯ ಮುಂತಾದ ಹೆಸರುಗಳಲ್ಲಿ ಇಂಥ ಅಧಿಕಾರಿಗಳ ಪ್ರಾಮುಖ್ಯವು ನಿರ್ಧಾರವಾಗುತ್ತಿತ್ತು. ಕ್ರಮವಾಗಿ ಪೆರ್ಗಡೆ ಎಂಬ ಶಬ್ದಕ್ಕೆ ಪೆಗ್ಗಡೆ, ವೆಗ್ಗಡೆ, ಹೆಗ್ಗಡೆ, ಹೆಗಡೆ, ಹೆಗ್ಡೆ ಎಂಬ ಪರ್ಯಾಯ ರೂಪಗಳು ಹುಟ್ಟಿಕೊಂಡುವು. ಹಾಗೆಯೇ ರಾಜ್ಯದ ಭಾಗದ ಅಧಿಕಾರಿಯಾಗಿದ್ದವನು ಅರಮನೆಯ ಪೆರ್ಗಡೆಯೂ ಆದನು. ಸ್ತ್ರೀಲಿಂಗದಲ್ಲಿ ಈ ಶಬ್ದಕ್ಕೆ ಪೆರ್ಗಡಿತಿ, ಹೆಗ್ಗಡತಿ, ಹೆಗ್ಗಡಿತಿ ಎಂಬ ರೂಪಗಳಿವೆ. ಈಗ ಹೆಗ್ಗಡೆ ಎಂದರೆ ಮುಖ್ಯಸ್ಥ ಎಂಬುದೇ ಮುಖ್ಯಾರ್ಥ.

**ಪೆರ್ವಿಡಿ** ಕನ್ನಡದ ಎರಡು ಶಬ್ದಗಳು ಸೇರಿ ಆದ ಸಮಾಸಪದ. ಪಿರಿದು + ಪಿಡಿ = ಪೆರ್ವಿಡಿ ದೊಡ್ಡ ಹೆಣ್ಣಾನೆ. ಪಂಪ ಭಾರತದಲ್ಲಿ ಪಂಪನು ಈ ಶಬ್ದವನ್ನು ೧೦ನೆಯ ಶತಮಾನದಲ್ಲಿಯೇ ಪ್ರಯೋಗಿಸಿದ್ದಾನೆ. **ಏಜೆದ ಪೊನ್ನಪಣ್ಣುಗೆಯ ಪೆರ್ವಿಡಿ ಕಟ್ಟದಿರಾಗೆ** (೯-೧೦೦). ಸವಾರನು ಹತ್ತಿ ಕುಳಿತಿದ್ದ ಸಾಲಂಕಾರವಾದ ಹೆಣ್ಣಾನೆಯು ಎದುರಾಗಲು ಎಂದರ್ಥ.

**ಪೇಟೆ** ಇದಕ್ಕೆ ಹಿಂದಿ ಭಾಷೆ ಮೂಲ. ಪೇಠ, ಪೈಠ ಇದು ಮರಾಠಿಯಲ್ಲೂ ಇದೆ. ತಮಿಳಿನಲ್ಲಿ ಪೇಟ್ಟೈ. ಇದಕ್ಕೆ ಹಿಂದೆ ಕೋಟೆಗಳಿದ್ದ ನಗರಗಳ ಆಸುಪಾಸಿನಲ್ಲಿ ಇದ್ದ ಅಂಗಡಿ ಬೀದಿ ಸಾಲು ಎಂದರ್ಥ. ಸಂತೆಯಂತೆ ಮಾರಾಟವಾಗುವ ಊರು ಸಹಿತ ಆಗಬಹುದು. ಉದಾಹರಣೆಗೆ ಶ್ರೀರಂಗಪಟ್ಟಣವು ಕೋಟೆಯೆಂದೂ ಅದರ ಬಳಿಯಿರುವ ಗಂಜಾಂ ಎಂಬ ಊರು ಪೇಟೆಯೆಂಬ ಹೆಸರನ್ನು ಪಡೆದಿತ್ತು. ಕೆಲವು ವೇಳೆ ಇಂಥ ಪೇಟೆಗಳಿಗೂ ಕೋಟೆಯನ್ನು ಕಟ್ಟುತ್ತಿದ್ದರು. ಈ ಶಬ್ದ ಹಿಂದಿನ ದಕ್ಷಿಣ ಭಾರತದ ಚರಿತ್ರೆಯಲ್ಲಿ ಅನೇಕ ಸಲ ಕಾಣಿಸಿಕೊಳ್ಳುತ್ತದೆ. ೧೬೩೦ ರಲ್ಲಿ ಇದರ ಮೊದಲ ಉಲ್ಲೇಖವಿದೆ, ಚಾರಿತ್ರಿಕವಾಗಿ. ಆದರೆ ಕಾವ್ಯದಲ್ಲಿ ಕನ್ನಡದಲ್ಲಿ ಇನ್ನೂ ಹಿಂದಿನಿಂದ ಕಂಡುಬರುತ್ತದೆ. ಕುಮಾರವ್ಯಾಸ ಭಾರತದಲ್ಲಿ ಕರ್ಣಪರ್ವ (೧೦-೨೮) ದಲ್ಲಿ **ಉರಿಯ ಪೇಟೆಗಳಲಿ ಪತಂಗದ ಸರಕು ಮಾರದೆ ಮರಳುವುದೆ ?** ಎಂಬ ಪ್ರಯೋಗವಿದೆ. ಹೀಗೆ ಪ್ರಭಾವಶಾಲಿಯಾದ ಶಬ್ದ ಇದು.

**ಪೇಲವ** ಇದು ಸಂಸ್ಕೃತ ಶಬ್ದ. ಇದಕ್ಕೆ ೧. ಮುಟ್ಟಲು ಯೋಗ್ಯವಲ್ಲದ ೨. ಕೋಮಲವಾದ, ಸುಕುಮಾರವಾದ ೩. ಕೃಶವಾಗಿರುವ, ತೆಳ್ಳಗಿರುವ ಎಂದರ್ಥ. ಆರೋಗ್ಯವು ಸರಿಯಿರದ ವ್ಯಕ್ತಿಗಳನ್ನು ಕುರಿತೂ ಈ ಶಬ್ದವನ್ನು ಉಪಯೋಗಿಸುತ್ತಾರೆ. ಕನ್ನಡದಲ್ಲಿ ದೇಹದ ಬಣ್ಣ ಬಿಳಿಚಿಕೊಂಡಿರುವಿಕೆಗೆ ಇದನ್ನು ಹೆಚ್ಚಾಗಿ ಅನ್ವಯಿಸುತ್ತಾರೆ.

**ಪೈಸರ** ಇದು ಮಲ್ಲ ಯುದ್ಧದಲ್ಲಿ ಅಂದರೆ ಕುಸ್ತಿಯಲ್ಲಿ, ದ್ವಂದ್ವ ಯುದ್ಧದಲ್ಲಿ ಪ್ರಯೋಗವಾಗುವ ಒಂದು ಪಟ್ಟು. A Kind of Lock. ಇತರ ಅನೇಕ ಅರ್ಥಗಳಿದ್ದರೂ ನುಣುಚಿಕೊಳ್ಳುವುದು, ಹಿಡಿತದಿಂದ ತಪ್ಪಿಸಿಕೊಳ್ಳುವುದು ಮುಖ್ಯವಾದ ಅರ್ಥ.

**ಪೊಗದಸ್ತು** ಇದು ಮರಾಠಿಯ ಪಗದಸ್ತ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ೧. ಸಮೃದ್ಧವಾದುದು, ಅಚ್ಚು ಕಟ್ಟಾದುದು, ಅಣಿಯಾದುದು. ೨. ಕಟ್ಟುಮಸ್ತು, ದಷ್ಟಪುಷ್ಟವಾದುದು ಎಂದು ಅರ್ಥ. ಉಡುಪು, ಅಲಂಕಾರ, ಮಾತುಕತೆ ಬರಹ ಮುಂತಾದ ಎಲ್ಲಕ್ಕೂ ಇದನ್ನು ಉಪಯೋಗಿಸುತ್ತಾರೆ.

**ಪೊಲೀಸ್, ಹೋಟೇಲ್ –** ಈ ಶಬ್ದಗಳ ಉಚ್ಚಾರಣೆಯ ಬಗ್ಗೆ. ಇಂಗ್ಲಿಷ್‌ನಲ್ಲಿ ಶಬ್ದಗಳನ್ನು ಕನ್ನಡಕ್ಕೆ ಬರಮಾಡಿಕೊಂಡಾಗ ಆ ಭಾಷೆಯಲ್ಲಿರುವ ಉಚ್ಚಾರಣೆ ಎಷ್ಟು ಹತ್ತಿರ ಇರುವುದು ಸಾಧ್ಯವೋ ಹಾಗೆಯೇ ಉಚ್ಚಾರಣೆ ಮಾಡುವುದು ಸರಿಯಾದ ಮಾರ್ಗ. ಆದರೆ ನಮ್ಮ ದೇಶದಲ್ಲಿ ವಿದ್ಯಾವಂತರ ಬಾಯಿಂದ ಹೊರಟ ಶಬ್ದವು ತಿಳಿವಳಿಕೆಯಿಲ್ಲದವರ

ಉಪಯೋಗಕ್ಕೆ ಬಂದಾಗ ಬೇರೆ ಬೇರೆ ಉಚ್ಚಾರಣೆಗಳು ಕೇಳ ಸಿಗುತ್ತವೆ. ಉದಾಹರಣೆಗೆ: Superintendent ಮತ್ತು temporary ಎಂಬ ಎರಡು ಶಬ್ದಗಳನ್ನು ನಮ್ಮ ಜನ ಉಪಯೋಗಿಸುವುದನ್ನು ಗಮನಿಸಿ. ಸೂಪರಿಂಟೆಂಡೆಂಟ್, ಸೂಪ್ರೆಂಟ್, ಟೆಂಪರರಿ ಟೆಂಪರ್ವರಿ ಎಂಬುದೇ ಸಾಮಾನ್ಯ. forward=ಮುಂದಕ್ಕೆ ಕಳುಹಿಸು. 'ಆ ಅಧಿಕಾರಿಯು ಪತ್ರವನ್ನು (ಫಾರ್‌ವರ್ಡ್) forward ಮಾಡಿದನು. ಇಲ್ಲಿರುವ ಶಬ್ದವನ್ನು ಫರ್‌ವಾರ್ಡ್ ಎಂದೇ ಉಪಯೋಗಿಸುತ್ತಾರೆ. ಆದರೂ ಸರಿಯಾದ ಉಚ್ಚಾರಣೆ ಯಾವುದೆಂದು ತಿಳಿದಿರುವುದು ಉತ್ತಮ. Hotel ಎಂಬುದನ್ನು ಸಾಮಾನ್ಯವಾಗಿ ಹೋಟೆಲ್ ಎಂದು ಉಚ್ಚರಿಸಿದರೆ ಸರಿ. Police ಎಂಬುದನ್ನು ಪೊಲೀಸ್ ಎಂದು ಉಚ್ಚರಿಸಿದರೆ ಸರಿ, ಇದು ಇಂಗ್ಲಿಷ್ ಭಾಷೆಯ ಉಚ್ಚಾರಣೆಗೆ ಸಮೀಪವಾದದ್ದು.

**ಪೊಳ್ಳು** ಎಂಬ ಕನ್ನಡ ಶಬ್ದಕ್ಕೆ ಜೊಳ್ಳು, ಸತ್ವಹೀನವಾದುದು, ಸಾಮರ್ಥ್ಯವಿಲ್ಲದುದು ಎಂದರ್ಥ. ಇದಕ್ಕೆ ತೌಡು, ಹೊಟ್ಟು, ಹುಳುಬಿದ್ದ ಕಾಳು, ಡೊಗರು, ಹೇಡಿ, ನಿಷ್ಫಲವಾದುದು ಎಂದೂ ಅರ್ಥಗಳಿವೆ. ಕನ್ನಡ ಕಾವ್ಯಗಳಲ್ಲಿ ಈ ಶಬ್ದದ ಪ್ರಯೋಗ ಅಪಾರವಾಗಿದೆ. ಒಂದು ಉದಾಹರಣೆ: **ಹುಸಿಯನಾಡಿ ಲಿಂಗವ ಪೂಜಿಸಿದಡೆ ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ** (ಮಹಾದೇವಿಯಕ್ಕನ ವಚನ). ಇಲ್ಲಿರುವ ಹೊಳ್ಳು ಎಂಬ ಶಬ್ದ ಪೊಳ್ಳು ಎಂಬ ಹಳಗನ್ನಡ ಶಬ್ದದ ಹೊಸಗನ್ನಡ ರೂಪ.

**ಪೋತಿ** ಇದು ಅರಬ್ಬಿ ಶಬ್ದ ಫಾತ್. ಇದಕ್ಕೆ ಅರ್ಥ ಸಾವು, ಮರಣ. ಕನ್ನಡದಲ್ಲಿ ಪೋತಿ ಶಬ್ದಕ್ಕೆ ಪವುತಿ, ಪೌತಿ, ಫೋತಿ ಎಂಬ ಬೇರೆ ಪರ್ಯಾಯ ಶಬ್ದಗಳಿವೆ. ಮರಣ ಹೊಂದಿರುವ, ಸತ್ತ, ತೀರಿಕೊಂಡ ಎಂಬ ಅರ್ಥದಲ್ಲಿ ಪ್ರಯೋಗವಾಗಬಹುದು.

**ಪೋಲಿ** ಈ ಶಬ್ದವು ಪೋಕರಿ ಎಂಬ ಅರ್ಥವನ್ನು ಕೊಡುತ್ತದೆ. ದ್ರಾವಿಡ ಭಾಷೆಗಳಲ್ಲೆಲ್ಲ ಪೋಕರಿತನ ಎಂಬ ಶಬ್ದವು ಪ್ರಯೋಗದಲ್ಲಿದೆ. ಇದಕ್ಕೆ ಅರ್ಥ ಸ್ತ್ರೀಯರ ವಿಷಯದಲ್ಲಿ ಸ್ವಲ್ಪವೂ ನಾಚಿಕೆಯಿಲ್ಲದೆ ಅನೀತಿಯಿಂದ ಕೂಡಿದ ಅವಗುಣ. ಹಾಗೆಯೇ ಪೋಲಿ ಶಬ್ದವೂ ಕೂಡ ದ್ರಾವಿಡ ಮೂಲದ್ದು. ತೆಲುಗು ಭಾಷೆಯಲ್ಲಿ ಪೋಲೆ ಮತ್ತು ತಮಿಳಿನಲ್ಲಿ ಪೋಲಿ ಎಂಬ ಜ್ಞಾತಿಶಬ್ದಗಳಿವೆ. ನೋಡಿ: **ಅಪಾಪೋಲಿ.**

**ಪೋಷಾಕು** ಇದು ಪಾರಸೀ ಭಾಷೆಯ **ಪೋಶಾಕ್** ಎಂಬ ಶಬ್ದದ ಕನ್ನಡ ರೂಪ. ಇದು ಎರವಲು ಪದ. ಉಡುಗೆ-ತೊಡುಗೆ, ಉಡುಪು ಎಂದು ಅರ್ಥ. ಆದರೆ ಸಾಮಾನ್ಯವಾಗಿ ಈ ಶಬ್ದವನ್ನು ಇತರ ದೇಶದ ಜನರು ಧರಿಸುವ ಉಡುಪಿಗೆ ಹೆಚ್ಚಾಗಿ ಅನ್ವಯಿಸುತ್ತಾರೆ. ನಮ್ಮ ಪುರೋಹಿತರು ಧರಿಸುವ ಉಡುಪಿಗೆ ಇದನ್ನು ಅನ್ವಯಿಸುವುದಿಲ್ಲ. ಸ್ತ್ರೀಯರು ಧರಿಸುವ ಸೀರೆ ಕುಪ್ಪಸದ ಉಡುಪಿಗೆ ಅನ್ವಯಿಸುವುದು ಕಷ್ಟವಾಗುತ್ತದೆ. ಯಾವುದಾದರೂ ಸಂದರ್ಭಕ್ಕೆ ಉಚಿತವಾದುದು ಪೋಷಾಕು. ಕಚೇರಿಯ ಉಡುಪು ದರ್ಬಾರ್‌ಗೆ ಹೋಗುವ ಉಡುಪು, ನಟರ ವೇಷ ಇತ್ಯಾದಿ. ಮೂಲದಲ್ಲಿ ಅದಕ್ಕೆ ಉಡುಪು ಎಂಬ ಅಷ್ಟೇ ಅರ್ಥವಿದ್ದರೂ ನಮ್ಮಲ್ಲಿ ವಿಶೇಷವಾಗಿ ಸಂದರ್ಭಕ್ಕೆ ತಕ್ಕ ಉಡುಪಿಗೆ ಅನ್ವಯಿಸುತ್ತದೆ.

**ಪೌದನ ಎಂದರೇನು? ಇದನ್ನು ಮನೆಗೆ ಹೆಸರಾಗಿ ಇಡಬಹುದೆ?** ಜೈನರ ಗ್ರಂಥವಾದ ಆದಿಪುರಾಣದಲ್ಲಿ ಭರತ ಚಕ್ರವರ್ತಿಯ ಮತ್ತು ಆತನ ತಮ್ಮನಾದ ಬಾಹುಬಲಿಯ ಕಥೆ ಬರುತ್ತದೆ. ಆದಿತೀರ್ಥಂಕರನು ತನ್ನ ರಾಜ್ಯವನ್ನು ಮಕ್ಕಳಿಗೆ ಹಂಚಿಕೊಟ್ಟಾಗ ಹಿರಿಯ ಮಗನಾದ ಭರತನು ಅಯೋಧ್ಯೆಯಲ್ಲಿಯೂ ಬಾಹುಬಲಿಯು ಪೌದನಪುರದಲ್ಲಿಯೂ ರಾಜ್ಯಭಾರ ಮಾಡಲು ಮೊದಲು ಮಾಡಿದರು. ಭರತನು ತನ್ನ ಆಯುಧಾಗಾರದಲ್ಲಿ ಉದ್ಭವವಾದ ಚಕ್ರರತ್ನದ ಸಹಾಯದಿಂದ ಲೋಕವನ್ನೆಲ್ಲ ಗೆದ್ದು, ದೇವಲೋಕವನ್ನು ಸ್ವಾಧೀನಪಡಿಸಿಕೊಂಡು ಸೈನ್ಯ ಸಮೇತನಾಗಿ ತನ್ನ ರಾಜಧಾನಿಗೆ ಹಿಂದಿರುಗಿದನು. ಆದರೆ

ಚಕ್ರರತ್ನವು ಅಯೋಧ್ಯೆಯ ಒಳಕ್ಕೆ ಪ್ರವೇಶಿಸದೆ ಕೋಟೆಯ ಹೊರಗೇ ನಿಂತಿತು. ಆಗ ಭರತನಿಗೆ ತನ್ನ ತಮ್ಮಂದಿರು ತನಗೆ ಅಧೀನರಾಗಿಲ್ಲವೆಂಬ ಅಂಶವು ತಿಳಿದು ಅವರನ್ನು ಅಧೀನರನ್ನಾಗಿ ಮಾಡಲು ಪ್ರಯತ್ನಪಟ್ಟನು. ಆ ಸಂದರ್ಭದಲ್ಲಿ ಬಾಹುಬಲಿಯು ಪೌದನಪುರದಲ್ಲಿ ಇದ್ದ ವೈಭವದ ವರ್ಣನೆ ಆದಿಪುರಾಣದಲ್ಲಿದೆ. ಅದೇ ಪೌದನ, ಬಾಹುಬಲಿಯ ರಾಜಧಾನಿ. ಇದನ್ನು ಮನೆಯ ಹೆಸರಾಗಿ ಇಡಬಹುದು.

**ಪ್ರಕಟಣೆ** ಸಂಸ್ಕೃತದ ಪ್ರಕಟನ ಎಂದರೆ ಪ್ರಸಿದ್ಧಿಪಡಿಸುವುದು. ಅದು ಕನ್ನಡಕ್ಕೆ ಬಂದಾಗ ಪ್ರಕಟಣೆ ಎಂದಾಗುತ್ತದೆ. ಸಂಸ್ಕೃತದ ನ — ಣ ಆಗುವುದು ಕನ್ನಡದಲ್ಲಿ ಸಾಮಾನ್ಯ. ಉದಾ: ಕಠಿನ — ಕಠಿಣ. ಕನ್ನಡದಲ್ಲಿ ಇದೇ ಶಬ್ದದ ಅರ್ಥವನ್ನು ಪ್ರಕಾಶನ ಎಂಬ ಶಬ್ದವೂ ಚೆನ್ನಾಗಿ ಪ್ರಕಟಿಸುತ್ತದೆ. ಉದಾಹರಣೆಗೆ ಗ್ರಂಥಪ್ರಕಟಣೆಯ ಕ್ಷೇತ್ರದಲ್ಲಿ ಪ್ರಸಿದ್ಧವಾಗಿರುವ ನವಕರ್ನಾಟಕ ಪ್ರಕಾಶನ ಎಂಬ ಹೆಸರನ್ನು ಪರಿಶೀಲಿಸಿ.

**ಪ್ರಕೃತಿ** ಎಂದರೆ *೧. ಸ್ವಭಾವ, ಹುಟ್ಟುಗುಣ ೨. ಪಂಚಮಹಾಭೂತಗಳ ಸೃಷ್ಟಿ ೩. ಹೆಂಗಸು, ೪. ಪ್ರಜೆಗಳು. ೫. ವೇದಾಂತದಲ್ಲಿ ಮಾಯೆ ಇತ್ಯಾದಿ ಅನೇಕ ಅರ್ಥಗಳಿವೆ. ನಿಸರ್ಗ ಎಂದರೆ ೧. ಸ್ವಭಾವ, ಪ್ರಕೃತಿ ೨. ಸೃಷ್ಟಿ, ಸುತ್ತಣ ಪ್ರಪಂಚ ೩. ದಾನ.* ಹೀಗೆ ನಿಸರ್ಗ, ಪ್ರಕೃತಿ ಎಂಬ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳಿದ್ದರೂ ಸ್ವಭಾವ, ಹುಟ್ಟುಗುಣ, ಸೃಷ್ಟಿ ಎಂಬರ್ಥಗಳು ಉಭಯ ಸಾಧಾರಣ. ಆದ್ದರಿಂದ ಆ ಅರ್ಥದಲ್ಲಿ ಈ ಎರಡು ಶಬ್ದಗಳನ್ನು ಹೆಚ್ಚಾಗಿ ವಿದ್ವಾಂಸರು ಉಪಯೋಗಿಸುತ್ತಾರೆ.

**ಪ್ರಕ್ರಿಯೆ-ಪ್ರತಿಕ್ರಿಯೆ** ಈ ಎರಡೂ ಸಂಸ್ಕೃತ ಶಬ್ದಗಳು. ಪ್ರಕ್ರಿಯೆ ಎಂದರೆ ಅಧಿಕಾರ ಮತ್ತು ಅದರ ಲಾಂಛನ. ವ್ಯಾಕರಣದಲ್ಲಿ ಪ್ರಕ್ರಿಯೆ ಎಂದರೆ ಪದಗಳ ಸ್ವರೂಪವನ್ನು ನಿರ್ಧರಿಸುವ ಸೂತ್ರ ಎಂದರ್ಥ. **ಪ್ರಕ್ರಿಯಾಸರ್ವಸ್ವ** ಎಂಬ ಬಹು ಪ್ರಸಿದ್ಧವಾದ ಗ್ರಂಥವನ್ನು ೧೭ನೇ ಶತಮಾನದ ಮೊದಲ ಭಾಗದಲ್ಲಿ ಕೇರಳದ ನಾರಾಯಣಭಟ್ಟ ಎಂಬ ಮಹಾವಿದ್ವಾಂಸನು ರಚಿಸಿದ್ದಾನೆ (೧೫೬೦-೧೬೬೬) ಪಾಣಿನಿಯ ಅಷ್ಟಾಧ್ಯಾಯಿಯ ಎಲ್ಲ ಸೂತ್ರಗಳನ್ನು ಕುರಿತ ವಿವರಣೆಯುಳ್ಳ ಉದ್ಗ್ರಂಥವಿದು.

ಈಚಿನ ಆಧುನಿಕ ಕನ್ನಡದಲ್ಲಿ ಪ್ರಕ್ರಿಯೆ ಎಂಬುದನ್ನು ಕಾರ್ಯತಂತ್ರ, ಕಾರ್ಯವಿಧಾನ, ಎಂಬರ್ಥದಲ್ಲಿ ಇಂಗ್ಲಿಷಿನ process, technique ಎಂಬ ಶಬ್ದಗಳಿಗೆ ಸಮಾನವಾಗಿ ಉಪಯೋಗಿಸುತ್ತಿದ್ದಾರೆ. ಈ ಅರ್ಥವೇ ಈಗ ಪ್ರಮುಖವಾಗ ತೊಡಗಿದೆ. ಇದನ್ನು ಇಂಗ್ಲಿಷ್‌ನಲ್ಲಿ Practical application of knowledge ಎಂದು ವಿವರಿಸುತ್ತಾರೆ. ಈ ಶಬ್ದದ ಈ ಪಾರಿಭಾಷಿಕ ಅರ್ಥ ಹೆಚ್ಚು ಪ್ರಭಾವಯುತವಾಗಿ, ವ್ಯಾಪಕವಾಗಿ ಬಳಕೆಯಾಗುತ್ತಿದೆ.

ಪ್ರತಿಕ್ರಿಯೆ ಶಬ್ದಕ್ಕೆ ಸೇಡು ತೀರಿಸಿಕೊಳ್ಳುವುದು ಎಂದೂ, ರೋಗನಿವಾರಣೆಗೆ ಚಿಕಿತ್ಸೆ ಎಂದೂ ಅರ್ಥ. ಆದರೆ ಈಗ ಆ ಶಬ್ದಕ್ಕೂ ವಿಸ್ತಾರವಾದ ಅರ್ಥ ಸೇರಿಕೊಂಡಿದೆ. ಯಾವುದಾದರೂ ಕಾರ್ಯದ ವಿರುದ್ಧವಾಗಿ ನಡೆಯುವ ಎದುರು ವ್ಯವಹಾರವನ್ನು ಪ್ರತಿಕ್ರಿಯೆ ಎಂದು ಕರೆಯುತ್ತಾರೆ. ನವೋದಯ ಕಾವ್ಯಕ್ಕೆ ನವ್ಯಕಾವ್ಯವು ಪ್ರತಿಕ್ರಿಯೆಯಾಗಿ ತಲೆದೋರಿತು ಎಂಬ ವಾಕ್ಯವನ್ನು ಪರಿಭಾವಿಸಿ. ಒಬ್ಬನು ಬೈದರೆ ಮತ್ತೊಬ್ಬನು ಹೊಡೆಯುವುದು ಪ್ರತಿಕ್ರಿಯೆಯಾಗಬಹುದು.

ನಮ್ಮ ದೇಶದಲ್ಲಿ ಭಯೋತ್ಪಾದಕರು ಮಾಡುತ್ತಿರುವ ಹಾವಳಿಯು ಯಾವುದೋ ರಾಜಕೀಯ ಕ್ರಿಯೆಗೆ ಪ್ರತಿಕ್ರಿಯೆಯಾಗಿದೆ. Action and reaction are always equal and opposite ಎಂಬ ತತ್ವ ಇಲ್ಲಿಗೆ ಅನ್ವಯಿಸುವುದಿಲ್ಲ.

**ಪ್ರಜಾಸತ್ತಾತ್ಮಕ** ಎಂದರೆ ಜನತೆಯಲ್ಲಿ ರಾಜ್ಯಾಡಳಿತದ ಎಲ್ಲ ಅಧಿಕಾರವೂ ನೆಲಸಿರುವ ಮತ್ತು

ಅವರಿಂದ ಪಡೆಯುವ ಆಡಳಿತವಿರುವ ಎಂದರ್ಥ, Democratic ಎಂಬ ಶಬ್ದಕ್ಕೆ ಸಮಾನವಾದ ಅರ್ಥ ಈ ಸಂಸ್ಕೃತ ಶಬ್ದಕ್ಕೆ ಇದೆ.

**ಪ್ರಜ್ಞಾ ಪಾರಮಿತಾ** ಬೌದ್ಧಮತ ಗ್ರಂಥ. 'ಅತ್ಯಂತ ಶ್ರೇಷ್ಠವಾದ ಜ್ಞಾನ' ಎಂದರ್ಥ.

**ಪ್ರತಿಕ್ರಿಯಿಸು** ಶಬ್ದವನ್ನು ಹೇಗೆ ವ್ಯುತ್ಪತ್ತಿ ಮಾಡುವುದು? ಸಂಸ್ಕೃತದ ಪ್ರತಿಕ್ರಿಯಾ ಶಬ್ದ ತದ್ಭವವಾದಾಗ ಪ್ರತಿಕ್ರಿಯೆ ಎಂದಾಗುತ್ತದೆ. ಪ್ರತಿಕ್ರಿಯೆ +ಇಸು =ಪ್ರತಿಕ್ರಿಯಿಸು - ಇದು ವ್ಯಾಕರಣ ಪ್ರಕ್ರಿಯೆ. ಪ್ರತಿಕ್ರಯಿಸು ಎಂಬ ರೂಪ ಸರಿಯಾದುದಲ್ಲ.

**ಪ್ರತಿಭಾ** ಭಾ =ಪ್ರಕಾಶ, ಕಾಂತಿ ಎಂಬ ಅರ್ಥವುಳ್ಳ ಶಬ್ದಕ್ಕೆ ಪ್ರತಿ ಎಂಬ ಉಪಸರ್ಗ ಸೇರಿ ಆ ರೂಪವಾಗಿದೆ. ಇದಕ್ಕೆ ಜ್ಞಾನ, ಅರಿವು, ತಿಳಿವಳಿಕೆ ಎಂಬ ಅರ್ಥಗಳಿವೆ. ಕಾವ್ಯಕ್ಕೆ ಸಂಬಂಧಪಟ್ಟಂತೆ ಪ್ರತಿಭೆ ಎಂಬ ಶಬ್ದಕ್ಕೆ ಪಾರಿಭಾಷಿಕವಾದ ಅರ್ಥವಿದೆ. ಕಾವ್ಯರಚನೆಗೆ ಕಾರಣವಾದ ಈ ಶಕ್ತಿಯನ್ನು ಪ್ರತಿಭೆ ಎಂದು ಕರೆಯುತ್ತಾರೆ. ಅದನ್ನೇ ಅಂತಃಸ್ಫೂರ್ತಿ ಎಂದೂ ಕರೆಯಬಹುದು. ಈ ಎರಡೂ ಯಾವ ಸಿದ್ಧತೆ ಇಲ್ಲದೆ, ಇದ್ದಕ್ಕಿದ್ದಂತೆ ಕಗ್ಗತ್ತಲಲ್ಲಿ ಬೆಳಕು ಚಿಮ್ಮಿದಂತೆ ಸುಂದರ ಭಾವಗಳನ್ನು ನೀಡುವ ಶಬ್ದಗಳ ಪ್ರಯೋಗಕ್ಕೆ ಅನ್ವಯಿಸುತ್ತದೆ. ಕವಿಗಳ ಸತ್ವ ಈ ಶಕ್ತಿಯಿಂದ ಪ್ರಕಾಶಗೊಳ್ಳುತ್ತದೆ.

**ಪ್ರತಿಷ್ಠಾನ** 'ಪ್ರತಿಷ್ಠಾನ' ಸಂಸ್ಕೃತ ಶಬ್ದ. ಇಂಗ್ಲಿಷಿನ foundation ಎಂಬ ಶಬ್ದಕ್ಕೆ ಸರಿಯಾದ ಸಂಸ್ಕೃತ ಶಬ್ದ. ಇದಕ್ಕೆ ಗಟ್ಟಿಯಾಗಿ ನಿಲ್ಲುವ ಸ್ಥಳ, ಚೆನ್ನಾಗಿ ಸ್ಥಾಪಿತವಾಗಿರುವ ಸಂಸ್ಥೆ ಇತ್ಯಾದಿ ಅರ್ಥಗಳಿವೆ. ಪುದುವೊಟ್ಟು ಶಬ್ದ ಬೇರೆಯ ಅರ್ಥವುಳ್ಳದ್ದು. ದೇವಾಲಯ, ಕೆರೆ, ಛತ್ರ, ವಿದ್ಯಾಸಂಸ್ಥೆಗಳನ್ನು ಸಾರೋದ್ಧಾರವಾಗಿ ನಡೆಸಿಕೊಂಡು ಹೋಗಲು ಕೂಡಿಟ್ಟ ಹಣ. ಪ್ರತಿಷ್ಠಾನ ಯಾವುದಾದರೂ ತತ್ವದ ವಿಚಾರವಾಗಿ ಮಾಡುವ ಸಂಶೋಧನೆ, ಪ್ರಚಾರ, ಗ್ರಂಥರಚನೆಗಳಿಗೆ ಮೀಸಲಾದ ಸಂಸ್ಥೆ. ಅದರ ಹಣ ಇಂಥ ಕೆಲಸಕ್ಕೇ ಖರ್ಚಾಗುತ್ತದೆ.

**ಪ್ರತಿಷ್ಠಿತ** ಪ್ರತಿಷ್ಠಾ ಶಬ್ದದ ಕೃದಂತ ರೂಪ. ಪ್ರತಿಷ್ಠಿತ ಎಂದರೆ ಭದ್ರಪಡಿಸಿದ, ಸ್ಥಾಪಿಸಿದ, ಅಲ್ಲಾಡದಂತೆ ನೆಟ್ಟ ಮುಂತಾದ ಅರ್ಥಗಳಿವೆ. ಗೌರವವುಳ್ಳ ಸ್ಥಾನದಲ್ಲಿ ಇರುವ ಎಂಬ ಅರ್ಥವೂ ಇದೆ. ಸಮಾಜದಲ್ಲಿ ಆತನು ಪ್ರತಿಷ್ಠಿತ ವ್ಯಕ್ತಿ ಎಂದು ಹೆಸರು ಪಡೆದಿದ್ದಾನೆ - ಎಂದು ಹೇಳಬಹುದು. ಪ್ರತಿಷ್ಟಿತ ಅಶುದ್ಧ ರೂಪ.

**ಪ್ರತಿಷ್ಠೆ, ಪ್ರತಿಷ್ಠಾಪನೆ** ಎಂಬ ಎರಡು ಶಬ್ದಗಳಲ್ಲಿ ಮೂರ್ತಿಯನ್ನು ಸ್ಥಾಪಿಸುವಾಗ ಯಾವುದು ಸರಿಯಾದ ಶಬ್ದ? ಸಂಸ್ಕೃತದ ಪ್ರತಿಷ್ಠಾ ಮತ್ತು ಪ್ರತಿಷ್ಠಾಪನಾ ಎಂಬ ಎರಡು ಶಬ್ದಗಳೂ ಶುದ್ಧ ರೂಪಗಳು. ಆದುದರಿಂದ ಕನ್ನಡದಲ್ಲಿ ಪ್ರತಿಷ್ಠೆ ಮತ್ತು ಪ್ರತಿಷ್ಠಾಪನೆ ಎಂಬ ಎರಡೂ ಸರಿ. **'ನ ಮಂತ್ರಂ ವಿನಾ ಪ್ರತಿಷ್ಠಾ'** ಎಂಬುದು ಒಂದು ಪ್ರಯೋಗ.

**ಪ್ರತ್ಯೂಷ** ಎಂಬ ಸಂಸ್ಕೃತ ಶಬ್ದಕ್ಕೆ ಮುಂಜಾವು, ಬೆಳಗಿನ ಸಮಯ, ಪ್ರಭಾತ ಎಂದರ್ಥ.

**ಪ್ರಥಮ** ಪ್ರಥಮ ಎಂದರೆ ೧. ಮೊದಲನೆಯ, ೨. ಪ್ರಧಾನ, ಮುಖ್ಯ, ೩. ಅತ್ಯುತ್ತಮ ೪. ವ್ಯಾಕರಣದಲ್ಲಿ ಪ್ರಥಮ ಪುರುಷ ಅವನು ಎಂಬುದು ೫. ಕೇರಳದೇಶದಲ್ಲಿ ತಯಾರಿಸುವ ರುಚಿಕರವಾದ ಒಂದು ಬಗೆಯ ಪಾಯಸ.

**ಪ್ರದ್ಯುಮ್ನ** ಇದು ಒಬ್ಬನ ಹೆಸರು. ದ್ಯುಮ್ನ ಎಂದರೆ ಬಲ, ಶಕ್ತಿ. ಪ್ರಕೃಷ್ಟವಾದ ಎಂದರೆ ಅತಿಶಯವಾದ ಶಕ್ತಿಯುಳ್ಳವನು ಎಂದರ್ಥ. ಶ್ರೀಕೃಷ್ಣ ಮತ್ತು ರುಕ್ಮಿಣಿಯರ ಮಗ. ಮನ್ಮಥನ ಅವತಾರವೆಂದು ಕರೆಯುತ್ತಾರೆ. ಇವನೇ ಶಂಬರಾಸುರನನ್ನು ಕೊಂದವನು.

**ಪ್ರಧಾನ ಮಂತ್ರಿ ಮುಖ್ಯಮಂತ್ರಿ ಎಂದರೆ ಏನು ವ್ಯತ್ಯಾಸ?** ಆಡಳಿತದಲ್ಲಿ ಬೇರೆ ಬೇರೆ ಕಡೆಗಳಲ್ಲಿ ಮುಖ್ಯರಾದವರು ಇರುತ್ತಾರೆ. ಎಲ್ಲರಿಗೂ ಅವರು ಮುಖ್ಯರೆಂಬುದನ್ನು ತಿಳಿಸುವ ಅಗತ್ಯವಿದೆ. ನಮ್ಮ ದೇಶದ ಚರಿತ್ರೆಯಲ್ಲಿ ರಾಜನಿಗೆ ಮುಖ್ಯ ಸಹಾಯಕನಾಗಿದ್ದ ಅಧಿಕಾರಿಗೆ ಪ್ರಧಾನ ಎಂಬ ಹೆಸರಿತ್ತು. ಮಹಾಮಾತ್ರ ಎಂಬುದೂ ಅದೇ. ಈಗ ರಾಜರೇ

ಇಲ್ಲದಿರುವಾಗ ಒಟ್ಟು ದೇಶದಲ್ಲಿ ಎಲ್ಲರಿಗಿಂತ ಮೊದಲ ಸ್ಥಾನದ ಅಧಿಕಾರದಲ್ಲಿರುವವರಿಗೆ ಪ್ರಧಾನಿ ಎಂತಲೂ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಮುಖ್ಯ ಮಂತ್ರಿ ಎಂದೂ ಅನುಕೂಲಕ್ಕಾಗಿ ಮಾಡಿಕೊಂಡಿರುವ ಏರ್ಪಾಟು. ಇದು ಮುಂದೆ ರಾಜಕಾರಣದಲ್ಲಿ ಪಾರಿಭಾಷಿಕ ಶಬ್ದವಾಗುತ್ತದೆ. ಪ್ರಧಾನ ಎಂಬುದೇ ಸಂಸ್ಕೃತದಲ್ಲಿ ಸರಿಯಾದ ಶಬ್ದ. ಹಿಂದೀ ಭಾಷೆಯಲ್ಲಿ ಪ್ರಧಾನೀ ಎಂದು ಮಾಡಿಕೊಂಡಿದ್ದಾರೆ.

**ಪ್ರಪತ್ತಿ** ಆತ್ಮರಕ್ಷಣೆಗಾಗಿ ಸಮರ್ಥರಾದವರನ್ನು ಮೊರೆ ಹೋಗುವುದಕ್ಕೆ 'ಪ್ರಪತ್ತಿ' ಎಂದು ಹೆಸರು. ಮುಖ್ಯವಾಗಿ ಶರಣಾಗತಿ ತತ್ವವನ್ನು ಇದು ತಿಳಿಸುತ್ತದೆ. ಪರಮಾತ್ಮನನ್ನು ರಕ್ಷಕನನ್ನಾಗಿ ಸ್ವೀಕರಿಸಿ ಮೊರೆಹೊಕ್ಕರೆ ಆಗ ಮೋಕ್ಷ ದೊರಕುತ್ತದೆ. ಉದಾಹರಣೆಗೆ ವಿಭೀಷಣನು ರಾಮಚಂದ್ರನನ್ನು ಆಶ್ರಯಿಸಿದಂತೆ ಆಶ್ರಯಿಸಬೇಕು. ಪರಮಾತ್ಮನಲ್ಲಿ ಪ್ರಪತ್ತಿಯನ್ನು ನಿರೀಕ್ಷಿಸಬೇಕಾದರೆ ಅದಕ್ಕೆ ಐದು ಅಂಗಗಳಿವೆ. *೧. ಭಗವಂತನಿಗೆ ಬೇಕಾದ ಕಾರ್ಯಗಳನ್ನು ಮಾಡುವ ಸಂಕಲ್ಪ ೨. ಅವನಿಗೆ ಬೇಡದ ಕಾರ್ಯಗಳನ್ನು ಬಿಡುವುದು ೩. ಗಾಢವಾದ ನಂಬಿಕೆ, ಶ್ರದ್ಧೆ ೪. ತನ್ನ ಅಸಾಮರ್ಥ್ಯವನ್ನು ದೇವರಲ್ಲಿ ಹೇಳಿಕೊಳ್ಳುವ ವಿನಯ ೫. ನೀನೊಬ್ಬನೇ ರಕ್ಷಕನೆಂದು ಯಾಚಿಸುವುದು. ಇಂಥ ಶರಣಾಗತಿಯಿಂದ ಮೋಕ್ಷವೂ, ಐಹಿಕವಾದ ಅಪೇಕ್ಷೆಗಳೂ ದೊರಕುತ್ತವೆಂಬ ನಂಬಿಕೆಯಿದೆ.*

**ಪ್ರಪ್ರಥಮ** ಪ್ರಥಮ ಎಂದರೆ ಮೊದಲನೆಯದು. ಅದನ್ನು ಒತ್ತಿ ಹೇಳುವುದಕ್ಕೋಸ್ಕರ ಕೆಲವರು ಪ್ರ ಎಂಬುದನ್ನು ಇನ್ನೊಂದು ಸಲ ಸೇರಿಸುತ್ತಾರೆ. ಇದು ಅನಗತ್ಯ.

**ಪ್ರಭಾತ್‌ಫೇರಿ** ಪ್ರಭಾತ ಸಂಸ್ಕೃತ; ಫೇರಿ ಪಾರಸಿ. ಈ ಎರಡೂ ಸೇರಿ ಹಿಂದಿಯಲ್ಲಿ ಪ್ರಭಾತ್ ಫೇರಿ ಆಗಿದೆ. ಬೆಳಗಿನ ಹೊತ್ತು ಮೆರವಣಿಗೆಯಲ್ಲಿ ಸುತ್ತಾಡುವುದು ಎಂದು ಅರ್ಥ.

**ಪ್ರಭುಲಿಂಗ ಲೀಲೆಯ** ಒಂದು ಪದ್ಯದ ಅರ್ಥ ವಿವರ. ಆ ಪದ್ಯ ಹೀಗಿದೆ:

***ನೂಲ ಸಂಕಲೆಗಡಿದು ಕನಕದ***
***ಕೋಳವನು ಕಾಲಿಂಗೆ ಕೀಲಿಪ***
***ಕಾಳುಮತಿಯವನಂತೆ. ಸತಿ ಸುತ ಕೂಟ ಭಯವೆಂದು***
***ಬಾಳಿಕೆಯನತಿಗಳೆದು ಮರಳಿಯು***
***ಬೋಳುಮಂಡೆಯ ಕೀರ್ತಿಗೋಸುಗ***
***ಕೋಳು ಹೋದನೆ ರಾಮನೆನುತಲ್ಲಮನು ಬೆಱಗಾದ.*** *೧೩-೫*

ಇದು ಸಿದ್ಧರಾಮನ ದೇಗುಲ ನಿರ್ಮಾಣದ ಬಗ್ಗೆ ಅಲ್ಲಮನು ಆಡುವ ಮಾತು. ಸಿದ್ಧರಾಮನು ಸಂಸಾರದ ಜಂಜಾಟ ಬೇಡವೆಂದು ಸಂನ್ಯಾಸಿಯಾಗಿ ಶಿಷ್ಯರೊಡಗೂಡಿ, ದೇವಸ್ಥಾನ, ಕೆರೆ ಮುಂತಾದವನ್ನು ಕಟ್ಟಿಸುವ ಕೆಲಸದಲ್ಲಿ ನಿರತನಾಗಿದ್ದನು. ಸಂಸಾರವನ್ನು ಬಿಟ್ಟರೂ ಇನ್ನೊಂದು ಬಂಧನವನ್ನು ಸಿದ್ಧರಾಮ ಕಟ್ಟಿಕೊಂಡಿದ್ದಾನೆ ಎಂಬುದು ಅಲ್ಲಮನ ಭಾವ. ಅತ್ಯುತ್ತಮವಾದ ಉಪಮಾನದ ಮೂಲಕ ಅಲ್ಲಮ ವಿವರಿಸುತ್ತಿದ್ದಾನೆ.

ಸಿದ್ಧರಾಮನಿಗೆ ಸಂಸಾರವೆಂಬುದು ನೂಲಿನಿಂದ ಮಾಡಿದ ಶೃಂಖಲೆಯಾಗಿತ್ತು. ಅದನ್ನು ಬಿಡಿಸಿಕೊಂಡು ಒಳ್ಳೆಯ ಕೆಲಸ ಮಾಡಿದ. ಆದರೆ ಸಂನ್ಯಾಸಿಯಾದ ಮೇಲೆ ದೇಗುಲ ನಿರ್ಮಾಣ, ಕೆರೆಯ ನಿರ್ಮಾಣ ಎಂಬ ಚಿನ್ನದ ಶೃಂಖಲೆಯನ್ನು ಕಾಲಿಗೆ ಬಿಗಿದುಕೊಂಡಿದ್ದಾನೆ. ಈಗ ಸಂನ್ಯಾಸಿ = ಬೋಳು ಮಂಡೆಯವನು, ಆದರೂ ದೇಗುಲವನ್ನು ನಿರ್ಮಿಸುತ್ತಾನೆ ಎಂಬ ಕೀರ್ತಿಯ ಸಂಕೋಲೆ ಅವನಿಗೆ ಬೇಕಾಗಿದೆ. ಇದೇ ವೈಪರೀತ್ಯ. ಅಯ್ಯೋ ಸಿದ್ಧರಾಮ ಎಂಥ ಸಾಧಕ! ಅವನಿಗೂ ಈ ಮರುಳತನ ಬಂತೆ!

ಎಂದು ಅಲ್ಲಮು ಮರುಗುತ್ತಾನೆ. ಹಾಗಾದರೆ ಸಿದ್ಧರಾಮನು ಏನು ಮಾಡಬೇಕಾಗಿತ್ತು ಪ್ರಶ್ನೆಗೆ ಅಲ್ಲಮನೆ ೩೮೯ನೆಯ ಪದ್ಯದಲ್ಲಿ ಉತ್ತರ ನೀಡಿದ್ದಾನೆ. ಅದನ್ನು ಓದಿ ತಿಳಿಯಿರಿ.

**ಪ್ರಭೃತಿ** ಇದು ಸಂಸ್ಕೃತದಲ್ಲಿ ವಿಶೇಷಣವಾಗಿ ಪ್ರಯೋಗವಾಗುತ್ತದೆ. ಸಮಾಸಗಳಲ್ಲಿ ಇಂದ್ರ ಪ್ರಭೃತಿಗಳು ಎಂಬಂತೆ ಉಪಯೋಗವಾದಾಗ ಅದಕ್ಕೆ ಇಂದ್ರನೇ ಮೊದಲಾದ ಎಂದು ಅರ್ಥ. ಇದು ಅವ್ಯಯವಾಗಿ ಪ್ರಯೋಗವಾಗುವುದೂ ಉಂಟು. ಆಗ ಅದಕ್ಕೆ ಮೊದಲ್ಗೊಂಡು ಎಂದು ಅರ್ಥ. ಕೆಲವರು ರಾಮನೇ ಮೊದಲಾದ ಪ್ರಭೃತಿಗಳು ಎಂದು ತಲೆಶಿರೋಭಾರವಾಗಿ ಉಪಯೋಗಿಸುತ್ತಾರೆ. ಅದು ತಪ್ಪು. ಸರಸ್ವತಿಯನ್ನು ಪ್ರಾರ್ಥಿಸುವಾಗ **'ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿಃ ದೇವೈಃಸದಾ ಪೂಜಿತಾ.....'** ಇದಕ್ಕೆ ಯಾರು ಬ್ರಹ್ಮವಿಷ್ಣು ಮಹೇಶ್ವರರೇ ಮೊದಲಾದ ದೇವತೆಗಳಿಂದ ಪೂಜಿಸಲ್ಪಡುತ್ತಾರೊ.... ಎಂದು ಅರ್ಥ.

**ಪ್ರಮಥ** ಪ್ರಮಥ ಎಂದರೆ ೧. ಶಿವನ ಅನುಚರರು ೨. ಕುದುರೆ ೩. ಅಳಲೆಗಿಡ. ಶಿವಭಕ್ತರನ್ನು ವೀರಶೈವರಲ್ಲಿ ಪ್ರಮಥರೆನ್ನುತ್ತಾರೆ. ಶಿವಶರಣರು ಅವರು. ಪ್ರಮಥನಾಥ = ಶಿವ.

**ಪ್ರಮದಾ** ಈ ಸಂಸ್ಕೃತ ಶಬ್ದವು ತದ್ಭವವಾದಾಗ ಪ್ರಮದೆ ಎಂದಾಗುತ್ತದೆ. ಈ ಶಬ್ದಕ್ಕೆ ಹೆಂಡತಿ, ಸುಂದರಿ, ಹೆಂಗಸು ಎಂಬ ಅರ್ಥಗಳಿವೆ. ಸ್ತ್ರೀ, ಹೆಣ್ಣು ಎಂದು ಅರ್ಥ ಬರುವ ೨೮ ಶಬ್ದಗಳನ್ನು ಇದರೊಡನೆ ತಿಳಿಸಿ ಬಿಡುತ್ತೇನೆ. ನೆನಪಿಗೆ ಅನುಕೂಲ. ರಾಮಾ, ವಾಮಾ, ವಾಮನೇತ್ರೆ, ಪುರಂಧ್ರೀ, ನಾರಿ, ಭೀರು, ಭಾಮಿನೀ, ಕಾಮಿನಿ, ಯೋಷಾ, ಯೋಷಿತೆ, ವಾಸಿತೆ, ವರ್ಣಿನಿ, ಸ್ತ್ರೀ, ಸೀಮಂತಿನಿ, ಅಂಗನೆ, ಸುಂದರಿ, ಅಬಲೆ, ಮಹಿಳೆ, ಲಲನೆ, ಪ್ರಮದೆ, ರಮಣಿ, ವನಿತೆ, ದಯಿತೆ, ಪ್ರತೀಪದರ್ಶಿನಿ, ವಧು, ವಶೀ, ಯುವತಿ. ಪ್ರಮದ ಎಂಬ ಶಬ್ದವೂ ಸಂಸ್ಕೃತದಲ್ಲಿದೆ. ಅದು ಪುಲ್ಲಿಂಗ ಶಬ್ದ. ಅದಕ್ಕೆ ೧. ಸಂತೋಷ ೨. ಮದಿಸಿದ ಮನುಷ್ಯ ೩. ದತ್ತೂರಿಗಿಡ ಎಂಬ ಅರ್ಥಗಳಿವೆ.

**ಪ್ರಮೃಷ್ಟ** ಎಂದರೆ ಶುದ್ಧ ಮಾಡಿದ, ತೊಳೆಯಲ್ಪಟ್ಟ ಎಂದರ್ಥ. ಇದು ಮೃಜೂಷ್ ಎಂಬ ಧಾತುವಿನಿಂದ ಬಂದದ್ದು. ಪ್ರಮುಷ್ಟ ಎಂಬ ಶಬ್ದವು ಪ್ರೇತಶಬ್ದ (Ghost word). ಅಂಥ ಶಬ್ದವಿಲ್ಲ. ಅದು ಪ್ರಮೃಷ್ಟ ಎಂದಿರಬೇಕು. ಹೀಗೆ ಅರ್ಥ ಮಾಡಿ ಕಾವ್ಯವನ್ನು ಓದಿ. ಆಗ ಅರ್ಥ ಸ್ಪಷ್ಟವಾಗುತ್ತದೆ.

**ಪ್ರಯತ್ನ-ಯತ್ನ, ಪೂರ್ಣ - ಸಂಪೂರ್ಣ** ಪ್ರ ಎಂಬುದು ಒಂದು ಅವ್ಯಯ. ಇದು, ನಾಮ ವಿಶೇಷಣ ಮತ್ತು ಕ್ರಿಯಾಪದಗಳಿಗೆ ಉಪಸರ್ಗವಾಗಿ ಸೇರುತ್ತದೆ. ಆಗ ಅದಕ್ಕೆ ೧. ಅತಿಶಯ ೨. ಪ್ರಾರಂಭ ೩. ಸ್ಪಷ್ಟ ಮುಂತಾಗಿ ಅರ್ಥ ಬರುತ್ತದೆ. ೨೦ ಮುಖ್ಯ ಉಪಸರ್ಗಗಳಲ್ಲಿ ಪ್ರ ಎಂಬುದು ಮೊದಲನೆಯದು ಎಂದು ವ್ಯಾಕರಣಕಾರರು ಒಪ್ಪಿದ್ದಾರೆ. ಹೀಗಿರುವುದರಿಂದ ಪ್ರಯತ್ನ ಎಂದರೆ ವಿಶೇಷ ಯತ್ನ ಎಂದರ್ಥ. ಹೀಗೆಯೇ ಸಮ್ ಎಂಬುದೂ ಒಂದು ಉಪಸರ್ಗ. ಇದು ೧. ಮಂಗಳ ೨. ಸುಖ, ೩. ಉತ್ತಮ ೪. ಮೊದಲಿಂದ ಕೊನೆಯವರೆಗೆ ಎಂಬ ಅರ್ಥದಲ್ಲಿ ಸೇರುತ್ತದೆ. ಇಲ್ಲಿಯೂ ವಿಶೇಷಾರ್ಥವಾಗುತ್ತದೆ. ಪೂರ್ಣ ಸಂಪೂರ್ಣವಾಗುತ್ತದೆ.

**ಪ್ರವರ** ಎಂದರೆ ಸಂತತಿ, ಮನೆತನ, ವಂಶ. ಒಂದು ಸಂತತಿಯ ಮೂಲಪುರುಷರ ಗಣಕ್ಕೆ ಕೂಡ ಈ ಶಬ್ದ ಅನ್ವಯವಾಗುತ್ತದೆ. ಹೀಗೆ ಮೂಲಪುರುಷರಿಂದ ಋಷಿಗಳ ಬಗ್ಗೆ ವಿವರಣೆಯಿದೆ. ಭಾರದ್ವಾಜ ಗೋತ್ರದವರಿಗೆ ಭಾರದ್ವಾಜ, ಆಂಗೀರಸ ಮತ್ತು ಬಾರ್ಹಸ್ಪತ್ಯ, ವಿಶ್ವಾಮಿತ್ರ ಗೋತ್ರಕ್ಕೆ ವಿಶ್ವಾಮಿತ್ರ, ಮರೀಚಿ ಮತ್ತು ಕೌಶಿಕ. ಅತ್ರಿಗೋತ್ರಕ್ಕೆ ಅತ್ರಿ, ಆತ್ರೇಯ ಮತ್ತು ಶಾತಾತಪ. ಗೋತಮ ಗೋತ್ರಕ್ಕೆ.ಗೌತಮ, ವಸಿಷ್ಠ ಮತ್ತು ಬಾರ್ಹಸ್ಪತ್ಯ,

ವಸಿಷ್ಠ ಗೋತ್ರಕ್ಕೆ ವಸಿಷ್ಠ ಇತ್ಯಾದಿಯಾಗಿ ವಿವರಗಳೂ ದೊರಕುತ್ತವೆ. ಇವುಗಳಲ್ಲಿ ಆಗಿರುವ ವ್ಯತ್ಯಾಸಗಳೂ ಹಲವುಂಟು. ಈ ಬಗ್ಗೆ ಸಂಸ್ಕೃತದಲ್ಲಿ ಗ್ರಂಥಗಳುಂಟು.

**ಪ್ರವರ್ತನೆ - ಪರಿವರ್ತನೆ** ಈ ಎರಡು ಶಬ್ದಗಳಲ್ಲಿಯೂ ವರ್ತನೆ ಎಂಬುದೇ ಮೂಲಶಬ್ದ. ಸಂಸ್ಕೃತದಲ್ಲಿ ಅದು ವರ್ತನ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಜೀವನೋಪಾಯದ ವೃತ್ತಿ, ಕಸುಬು ೨. ನೂಲು ತೆಗೆಯುವ ಕದಿರಿನ ತಳದ ಭಾರ ನೀಡುವ ಸಾಧನ ೩. ಜೀವನ, ಬಾಳು ೪. ವಾಸಮಾಡುವಿಕೆ. ಪ್ರ ಎಂಬುದು ಒಂದು ಉಪಸರ್ಗ. ಅದು ಸೇರಿ ಪ್ರವರ್ತನ ಎಂದಾದಾಗ ಆ ಶಬ್ದಕ್ಕೆ ೧. ಮುನ್ನಡೆ, ಅಭಿವೃದ್ಧಿ ಹೊಂದುವುದು. ೨. ಮೊದಲು ಮಾಡುವುದು ೩. ಯಾವುದಾದರೂ ಕಾರ್ಯದಲ್ಲಿ ತೊಡಗಿಕೊಳ್ಳುವುದು ಎಂಬ ಅರ್ಥಗಳು ಬರುತ್ತವೆ. ಸಾಮಾನ್ಯವಾಗಿ ಮೊದಲು ಮಾಡುವುದು ಎಂಬ ಅರ್ಥದಲ್ಲಿ ಆ ಶಬ್ದವನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಪರಿವರ್ತನೆ = ವ್ಯತ್ಯಾಸ, ಬದಲಾವಣೆ.

**ಪ್ರಶಸ್ತಿ** ಎಂಬ ಸಂಸ್ಕೃತ ಶಬ್ದಕ್ಕೆ ಹೊಗಳಿಕೆ ಎಂಬ ಅರ್ಥವಿದೆ. ಪ್ರ ಎಂಬುದು ಉಪಸರ್ಗ. ಶಂಸಾ ಶಬ್ದಕ್ಕೆ ಸ್ತುತಿ ಎಂದರ್ಥ. ಇವೆರಡೂ ಸೇರಿ ಪ್ರಶಸ್ತಿ ಎಂಬ ರೂಪವು ಸಾಧಿತವಾಗುತ್ತದೆ. ರಾಜರು ತಮ್ಮ ಬಾಳಿನ ಸಾಧನೆಗಳನ್ನು ಪ್ರಶಸ್ತಿ ಪದ್ಯಮಾಲಿಕೆಗಳಲ್ಲಿ ರಚಿತವಾಗುವಂತೆ ಮಾಡಿ ಅವುಗಳನ್ನು ಶಾಸನಗಳಲ್ಲಿ ಪ್ರಕಟಪಡಿಸುತ್ತಿದ್ದರು. ಈಚೆಗೆ ಸರಕಾರಗಳೂ ಸಂಸ್ಥೆಗಳೂ ತಮ್ಮ ಗೌರವಕ್ಕೆ ಪಾತ್ರರಾದವರಿಗೆ ಪ್ರಶಸ್ತಿಗಳನ್ನು ನೀಡುತ್ತವೆ.

**ಪ್ರಸಾದ** ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಶುಚಿಯಾಗಿರುವುದು ೨. ಕೃಪೆಯನ್ನು ತೋರಿಸುವುದು ೩. ಕಾವ್ಯದಲ್ಲಿರುವ ಒಂದು ಗುಣ ೪. ದೇವರು ನೀಡುವುದು. ೫. ದೇವರಿಗೆ ನೀಡಿದ ವಸ್ತು ೬. ದೇವರಿಗೆ ನೀಡಿದ ವಸ್ತುವನ್ನು ದೇವರೇ ಇತರರಿಗೆ ಹಂಚಿದರೆಂದು ಸ್ವೀಕರಿಸುವ ವಸ್ತು.

**ಪ್ರಸಾದ ಗುಣ** ಎಂಬುದು ಕಾವ್ಯ ವಿಮರ್ಶೆಗೆ ಸಂಬಂಧಪಟ್ಟ ಪಾರಿಭಾಷಿಕ ಶಬ್ದ. ಕೇಳಿಸಿಕೊಂಡ ಕೂಡಲೇ ಕಾವ್ಯಭಾಗದ ಅರ್ಥವು ಹೊಳೆಯುವಂತೆ ರಚಿತವಾಗಿರುವ ಕಾವ್ಯದ ಒಂದು ಗುಣ. ಸಂಸ್ಕೃತ ಶಬ್ದ.

**ಪ್ರಸ್ಥಾನಂ ಗೆಯ್** ಇದಕ್ಕೆ ಪ್ರಯಾಣ ಮಾಡು ಎಂದರ್ಥ. ಪ್ರಸ್ಥಾನ = ಪ್ರಯಾಣ– ಇದು ಸಂಸ್ಕೃತ. ಗೆಯ್ = ಮಾಡು– ಇದು ಕನ್ನಡ. ಎರಡೂ ಸೇರಿವೆ. ಯುದ್ಧ ಸಮಯವಾದರೆ ಇದೇ ಶಬ್ದಕ್ಕೆ ದಂಡಯಾತ್ರೆ ಮಾಡು ಎಂದರ್ಥ.

**ಪ್ರಸ್ತುತ-ಪ್ರಸಕ್ತ** ಎಂಬುವುಗಳಿಗೆ ಇರುವ ವ್ಯತ್ಯಾಸವೇನು ? ಪ್ರಸ್ತುತ ಶಬ್ದಕ್ಕೆ ಚೆನ್ನಾಗಿ ಸ್ತೋತ್ರ ಮಾಡಲ್ಪಟ್ಟ ಎಂದರ್ಥ. **ಪ್ರಕರ್ಷೇಣ ಸ್ತುತಃ** ಎಂಬುದು ಸಂಸ್ಕೃತದ ವಿವರಣೆ. ಪ್ರಾರಂಭವಾದ, ಮೊದಲು ಮಾಡಿದ ಎಂಬ ಇನ್ನೊಂದು ಅರ್ಥವೂ ಇದೆ. ಇದಕ್ಕೆ ನಾಮಪದದ ಅರ್ಥವೂ ಉಂಟು. ಹೊಗಳಿಕೆ, ಪ್ರಾರಂಭ ಎಂದು. ಪ್ರಸಕ್ತ ಎಂದರೆ ೧. ಚೆನ್ನಾಗಿ ಹೊಂದಿಕೊಂಡಿರುವ ೨. ಸತತವಾದ, ಅವಿಚ್ಛಿನ್ನವಾದ ಎಂದೂ ಅರ್ಥ. ಈ ಎರಡೂ ಶಬ್ದಗಳಲ್ಲಿ ಪ್ರ ಎಂಬುದು ಉಪಸರ್ಗ. ಆ ಉಪಸರ್ಗಕ್ಕೆ ಅತಿಶಯತೆಯನ್ನು ಸೂಚಿಸುವ ಅನೇಕಾರ್ಥಗಳಿವೆ. ೧. ಪ್ರಾರಂಭ, ೨. ಉತ್ಕರ್ಷ ೩. ಆಧಿಕ್ಯ, ೪. ಪ್ರಕಾಶ, ೫. ಸ್ಪಷ್ಟತೆ ಇತ್ಯಾದಿ. ಸಂದರ್ಭವನ್ನು ನೋಡಿ ಅರ್ಥ ಮಾಡಬೇಕು.

**ಪ್ರಹಸನ** ಸಂಸ್ಕೃತದ ನಾಟಕಗಳಲ್ಲಿ ರೂಪಕಗಳು ಮತ್ತು ಉಪರೂಪಕಗಳು ಎಂದು ಎರಡು ಭೇದಗಳಿವೆ. ರೂಪಕಗಳು ಹತ್ತು. ಅವುಗಳಲ್ಲಿ ಪ್ರಹಸನ ಎಂಬುದು ನಾಲ್ಕನೆಯದು. ಇದರ ವಸ್ತು ಪ್ರಸಿದ್ಧವಲ್ಲ, ಕಲ್ಪಿತ. ಇದು ಹಾಸ್ಯ ಪ್ರಧಾನವಾದ ಆದರೆ ಅತಿ ಸಾಮಾನ್ಯ ಜನರ ಕಥೆ. ಹಾಸ್ಯಪ್ರಧಾನವಾದ ವಿಷಯವನ್ನು ನೆನಪಿನಲ್ಲಿಟ್ಟು ಕನ್ನಡದಲ್ಲಿ ಎಲ್ಲ ಹಾಸ್ಯ ಪ್ರಧಾನ ನಾಟಕಗಳನ್ನೂ ಪ್ರಹಸನ ಎಂದೇ ಈಗ ಕರೆಯುತ್ತಿದ್ದಾರೆ.

**ಪ್ರಳಯ** ಲಯ ಶಬ್ದಕ್ಕೆ ಪ್ರ ಎಂಬ ಉಪಸರ್ಗ ಸೇರಿದರೆ ಸಂಸ್ಕೃತದಲ್ಲಿ ಪ್ರಲಯ ಎಂದಾಗುತ್ತದೆ. ಅದೇ ಕನ್ನಡದಲ್ಲಿ ಪ್ರಳಯ. ಇದಕ್ಕೆ ನಾಶ, ಅಳಿವು, ಹಾಳಾಗುವುದು ಎಂದು ಅರ್ಥ. ಇದೇ ಶಬ್ದ ಅನೇಕ ಯುಗಗಳ ಕೊನೆಯಲ್ಲಿ ಜಗತ್ತಿನ ನಾಶವಾಗುವುದನ್ನೂ ಸೂಚಿಸುತ್ತದೆ.

**ಪ್ರಾಂಗಣ** ಇದು ಸಂಸ್ಕೃತ ಶಬ್ದ. ಅದಕ್ಕೆ ಅಂಗಳ, ಮನೆಯ ಒಳಭಾಗದ ಅಂಗಳ ಎಂದು ಅರ್ಥ. courtyard ಎಂಬುದು ಇಂಗ್ಲಿಷ್ ಶಬ್ದ.

**ಪ್ರಾಂಜಲಿ** ಎಂಬ ಸಂಸ್ಕೃತ ಶಬ್ದಕ್ಕೆ ಎರಡು ಕೈಗಳನ್ನೂ ಜೋಡಿಸಿಕೊಂಡಿರುವ, ಅಂಜಲಿಬದ್ಧನಾದ ಎಂದು ಅರ್ಥ. ಈ ಬಗೆಯ ಸ್ಥಿತಿ ಮತ್ತೊಬ್ಬರಿಗೆ ಗೌರವವನ್ನು ತೋರಿಸುವುದಕ್ಕೂ ಏನನ್ನಾದರೂ ಬೇಡಿಕೊಳ್ಳುವುದಕ್ಕೂ ಉಪಯೋಗವಾಗುವ ವ್ಯಕ್ತಿಯ ನಡವಳಿಕೆ. ಆತನು ದೇವರೆದುರಿಗೆ ಪ್ರಾಂಜಲಿಯಾಗಿ ನಿಂತು ಪ್ರಾರ್ಥನೆ ಮಾಡಿದನು ಎಂಬ ವಾಕ್ಯವನ್ನು ನೋಡಿ. ಪ್ರಾಂಜಲಿ ಎಂದರೆ ೧. ಮನೋಹರವಾದ, ೨. ನೇರವಾದ, ಸರಳವಾದ ಎಂಬ ಅರ್ಥಗಳಿವೆ. ಅದನ್ನೇ ನಾಮಪದವಾಗಿ ಉಪಯೋಗಿಸಿದರೆ ಅದು ಗೌರವಾರ್ಹ ವ್ಯಕ್ತಿಯನ್ನು ಸೂಚಿಸುತ್ತದೆ.

**ಪ್ರಾಂಶುಪಾಲ** ಇದೊಂದು ವಿಚಿತ್ರವಾದ ಶಬ್ದ. ಇಂಗ್ಲಿಷ್ ಶಬ್ದಗಳನ್ನು ಕನ್ನಡಕ್ಕೆ ಅದೇ ಉಚ್ಚಾರಣೆ ಇರುವಂತೆ ಅನುವಾದ ಮಾಡುವ ಗೀಳು ಬಹಳ ಹಳೆಯದು. ಷೇಕ್ಸ್‌ಪಿಯರನ Merchant of Venice ನಾಟಕವನ್ನು ಅನುವಾದ ಮಾಡಿದ ಹಿಂದಿನ ಕನ್ನಡಿಗರು ಹೀಗೆ ಮಾಡಿದ್ದಾರೆ: Portia - ಪಾಂಚಾಲಿ, Nerissa - ನೀರಜಾಕ್ಷಿ, Jessica - ಜಲಜಾಕ್ಷಿ. ಈ ಶಬ್ದವೂ ಅಂಥದೇ. ಸಂಸ್ಕೃತದಲ್ಲಿ ಪ್ರಾಂಶು = ಎತ್ತರವಾದ ಮನುಷ್ಯ. ದೈಹಿಕವಾಗಿ ಉನ್ನತವಾದವನು. ಆ ಶಬ್ದಕ್ಕೆ ಪಾಲ ಸೇರಿಸಿದರೆ ಎತ್ತರವಾದವರನ್ನು ರಕ್ಷಿಸುವವನು ಎಂದು ಅರ್ಥವಾಗಬೇಕು. ಹೀಗಿದ್ದರೂ ಪ್ರಾಂಶುಪಾಲ = Principal ಶಬ್ದ ಕರ್ನಾಟಕದಲ್ಲಿ ಬೇರೂರಿ ನಿಂತುಬಿಟ್ಟಿದೆ—ಇದನ್ನು ಯಾರು ಟಂಕಿಸಿದರೋ ಅವರ ಜಾತಕ ಬಲದಿಂದ.

**ಪ್ರಾಕಾರ** ಇದು ಸಂಸ್ಕೃತ ಶಬ್ದ. ಅದಕ್ಕೆ ದೇವಾಲಯದ ಅಥವಾ ಊರಿನ ಸುತ್ತಣ ಗೋಡೆ ಎಂದರ್ಥ. enclosure, compound ಎಂಬುದು ಸರಿಯಾದ ಇಂಗ್ಲಿಷ್ ಶಬ್ದ. ಆದರೆ ನಿಮಗೆ ಆಶ್ಚರ್ಯವಾಗಬಹುದು - ಇಂಗ್ಲಿಷಿನಲ್ಲಿ compound ಎಂಬ ಶಬ್ದಕ್ಕೆ ಈ ಅರ್ಥವಿಲ್ಲ. ಭಾರತದಲ್ಲಿಯೂ ಇತರ ಅನೇಕ ದೇಶಗಳಲ್ಲಿಯೂ ಉಪಯೋಗಿಸುವ compound ಎಂಬ ಶಬ್ದ ಮಲೆಯಾ ಭಾಷೆಯಿಂದ ಬಂದದ್ದು.

**ಪ್ರಾಗಲ್ಭ್ಯ** ಪ್ರಗಲ್ಭ ಎಂದರೆ ಸಂಸ್ಕೃತದಲ್ಲಿ ಪ್ರತಿಭಾಶಾಲಿ, ಪಂಡಿತ, ಧೈರ್ಯಶಾಲಿ, ನಿಪುಣ, ಬುದ್ಧಿವಂತ ಮುಂತಾದ ಅರ್ಥಗಳಿವೆ. ಇಂಥವನ ಭಾವ ಪ್ರಾಗಲ್ಭ್ಯ. **ಚಿತ್ರಕನ ಚಿತ್ರವಿದ್ಯಾ ಪ್ರಾಗಲ್ಭ್ಯಮಂ ಅವಲೋಕಿಸಿ** (ಮಲ್ಲಿನಾಥ ಪುರಾಣ ೫.೪೫) ಎಂಬ ವಾಕ್ಯವನ್ನು ಗಮನಿಸಿದರೆ ಅರ್ಥ ಸ್ಪಷ್ಟವಾಗುತ್ತದೆ.

**ಪ್ರಾಚೀನ** ಎಂದರೆ ಹಿಂದಿನ ಕಾಲದ ಎಂದರ್ಥ. ಈಗಿನ ಕಾಲ ಇತ್ತೀಚಿನ ಕಾಲ ಎಂಬುದಕ್ಕೆ ಅರ್ವಾಚೀನ ಎಂಬುದು ಸರಿ. ನವೀನ ಎಂದರೆ ಹೊಸದು. ಪುರಾಣ ಎಂದರೆ ಹಳೆಯದು. ಕಾಳಿದಾಸನೇ ಈ ವಿರುದ್ಧ ಪದವನ್ನು ಉಪಯೋಗಿಸಿದ್ದಾನೆ. **ಪುರಾಣಮಿತ್ಯೇವ ನ ಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ.**

**ಪ್ರಾಜ್ಞ** ಇದೊಂದು ಸಂಸ್ಕೃತ ಶಬ್ದ. ಇದಕ್ಕೆ ಪಂಡಿತ, ವಿದ್ವಾಂಸ, ಜ್ಞಾನಿ ಎಂದು ಅರ್ಥ. ತಿಳಿವಳಿಕೆಯುಳ್ಳವನು, ಜಾಣ, ಬುದ್ಧಿವಂತ, ವಿವೇಕಿ ಎಂಬ ಅರ್ಥಗಳೂ ಬರುತ್ತವೆ.

**ಪ್ರಾತಃಸ್ಮರಣೀಯ** ಬೆಳಗ್ಗೆ ಎದ್ದ ಕೂಡಲೆ ದೇವತೆಗಳನ್ನು ನೆನೆಯಬೇಕೆಂದು ಪೂರ್ವಿಕರು ಮಕ್ಕಳಿಗೆ ಶ್ಲೋಕಗಳನ್ನು ಹೇಳಿಕೊಡುತ್ತಿದ್ದರು. **ಕರಾಗ್ರೇ ವಸತೇ ಲಕ್ಷ್ಮೀ** ಎಂದು ಮೊದಲಾಗುವ ಶ್ಲೋಕ ಇಂಥ ಶ್ಲೋಕಗಳಲ್ಲಿ ಒಂದು. ಅಂಥವರ ಹೆಸರನ್ನು ಬೆಳಗ್ಗೆ ಎದ್ದ

ಕೂಡಲೇ ನೆನೆದರೆ ದಿನ ಪೂರ್ತಿ ನಾವೂ ಅಂಥ ಬಾಳನ್ನು ಬಾಳಬೇಕು ಎನ್ನಿಸುತ್ತದೆ. ನಮ್ಮ ಬಾಳು ಒಳ್ಳೆಯದಾಗಿರುತ್ತದೆ. ಹಾಗೆ ಬಾಳಿದ ಎಲ್ಲರೂ ನಮಗೆ ಪ್ರಾತಃಸ್ಮರಣೀಯರು.

**ಪ್ರಾದೇಶಿಕ ಗಾದೆಗಳು** ೧. ಹೆಣ ಹೊರುವುದಕ್ಕೆ ಹೋಗು ೨. ಬಪ್ಪನಾಡಿಗೆ ಡೋಲು ಗುದ್ದುಕ್ಕೆ ಹೋಗು ೩. ಕುಟ್ಟಿ ಕುಂದಾಪುರಕ್ಕೆ ಹೋಗುವುದು. ೪. ಕುಕ್ಕೆಹಳ್ಳಿ ಕೊರಾಜೆ.

ಈ ಮಾತುಗಳನ್ನು ನಾನೂ ಕೇಳಿದ್ದೇನೆ. ಇವುಗಳಲ್ಲಿ ಮೊದಲೆರಡು ಒಂದೇ ಅರ್ಥದವು. ಬ್ರಾಹ್ಮಣನಾದವನು ವೇದಾಧ್ಯಯನ, ಪೌರೋಹಿತ್ಯ, ಸಂಸ್ಕೃತ ವ್ಯಾಸಂಗ ಇತ್ಯಾದಿಗಳಲ್ಲಿ ಯಾವುದನ್ನೂ ಮಾಡಲಾಗದವನಾಗಿದ್ದರೆ ಅಂಥವನನ್ನು ಹೆಣ ಹೊರುವುದಕ್ಕೆ ಲಾಯಕ್ಕು ಎನ್ನುತ್ತಾರೆ. ಹೆಣ ಹೊರುವುದಕ್ಕೆ ಬರುವ ಬಾಡಿಗೆ = ಕೂಲಿಯಿಂದ ಅವನು ಜೀವನ ನಡೆಸಬೇಕು. ಬಪ್ಪನಾಡಿನಲ್ಲಿ ದೇವಾಲಯದಲ್ಲಿ ನಗಾರಿಗಳನ್ನು ಬಡಿಯುವುದಕ್ಕೆ ಹೋಗುವವರೂ ಇಂಥವರೇ. ಮಣ್ಣು ಹೊರುವುದಕ್ಕೆ ಹೋಗು ಎಂಬುದೂ ಇದೇ ಅರ್ಥದ್ದೇ. ಅದನ್ನು ಯಾವುದಕ್ಕೂ ಯೋಗ್ಯರಲ್ಲದವರ ಬಗ್ಗೆ ಉಪಯೋಗಿಸುತ್ತಾರೆ. ಕುಟ್ಟಿ ಕುಂದಾಪುರಕ್ಕೆ ಹೋದ ಹಾಗೆ ಎಂಬುದು ದಕ್ಷಿಣ ಕನ್ನಡದ ಗಾದೆಯಾದರೆ ಅದಕ್ಕೆ ಸಮಾನವಾದ ಗಾದೆ ಮೈಸೂರಿನ ಕಡೆ ಹೀಗಿದೆ: ಮಾನಬಾಯಿ ಮದ್ದೂರಿಗೆ ಹೋದ ಹಾಗೆ. ಇದು ಒಂದು ಘಟನೆಯನ್ನು ಸೂಚಿಸುತ್ತದೆ. ಮಾನಬಾಯಿ ಒಬ್ಬರ ಮನೆಯ ಸೇವಕ. ರಾತ್ರೆ ಯಜಮಾನ ಮತ್ತು ಯಜಮಾನತಿ ಮಾತನಾಡುತ್ತ ಮಾನಬಾಯಿಯನ್ನು ಬೆಳಗ್ಗೆ ಮದ್ದೂರಿಗೆ ಕಳಿಸಬೇಕು ಎಂದು ತೀರ್ಮಾನ ಮಾಡಿದರು. ಈ ಮಾತು ಹೊರಗಿದ್ದ ಸೇವಕ ಮಾನಬಾಯಿಗೆ ಕೇಳಿಸಿತು. ಮಾರನೆಯ ದಿನ ಮದ್ದೂರಿನ ಸಂತೆಯಲ್ಲಿ ಮಾನಬಾಯಿಯ ಕೈಲಿ ಬೆಣ್ಣೆಯನ್ನು ತರಿಸಬೇಕೆಂದು ಆ ಯಜಮಾನ ಯಜಮಾನತಿಯರ ತೀರ್ಮಾನ. ಅವರು ಬೆಳಿಗ್ಗೆ ಎದ್ದರೆ ಸೇವಕ ಕಣ್ಣಿಗೆ ಬೀಳಲಿಲ್ಲ. ಸಂಜೆಗೆ ಬಂದ. 'ಎಲ್ಲೋ ಕಾಣಲಿಲ್ಲ' ಎಂದು ಯಜಮಾನರು ಕೇಳಿದರೆ ಅವನು ಉತ್ತರಿಸಿದ: "ನೀವು ನನ್ನನ್ನು ಮದ್ದೂರಿಗೆ ಕಳಿಸಬೇಕೆಂದು ಮಾತನಾಡಿಕೊಳ್ಳುತ್ತಿದ್ದಿರಲ್ಲ ಅದಕ್ಕೆ ನಾನೇ ಬೇಗ ಎದ್ದು ಅಲ್ಲಿಗೆ ಹೋಗಿಬಂದೆ!" ಇಂಥ ಮೂರ್ಖತನವನ್ನು ತಿಳಿಸುವ ಗಾದೆಯಿದು.

'ಕುಕ್ಕೆ ಹಳ್ಳಿ ಕೊರಾಜೆ' ೧. ಈ ಹಿಂದೆ ಉಡುಪಿ ತಾಲ್ಲೂಕಿನ ಕುಕ್ಕೆಹಳ್ಳಿ ಎಂಬಲ್ಲಿ ರಾತ್ರಿಯ ಹೊತ್ತಿನಲ್ಲಿ ಒಬ್ಬನು ಅಡ್ಡ ಕಸುಬು (ಕೊಲೆ, ಸುಲಿಗೆ, ದರೋಡೆ ಇತ್ಯಾದಿ) ಮಾಡಿ ಹಗಲು ಹೊತ್ತಿನಲ್ಲಿ ಸಂಭಾವಿತನಂತೆ ಅಡ್ಡಾಡುತ್ತಿದ್ದನಂತೆ. ಆದ್ದರಿಂದ ಕೊರಾಜೆ = ನಯವಂಚಕ, ಮೋಸಗಾರ, ಎಲ್ಲ ಬಿಟ್ಟವ ಎಂದರ್ಥ. ಈಗಲೂ ಉಡುಪಿಯ ಕುಂದಾಪುರದ ಕಡೆ ಇಂತಹ ವ್ಯಕ್ತಿಗಳಿಗೆ 'ಕುಕ್ಕೆ ಹಳ್ಳಿ ಕೊರಾಜೆ' ಎನ್ನುತ್ತಾರೆ.

೨. ಕುಕ್ಕೆಹಳ್ಳಿ ಕೊರಾಜೆ ಎಂಬುದು 'ಕುಕ್ಕೆಹಳ್ಳಿ ಕೊರಜ್ಜ' ಎಂದಾಗಬೇಕು. ಕುಕ್ಕೆಹಳ್ಳಿ ಎಂಬುದು ಉಡುಪಿ ತಾಲ್ಲೂಕಿನಲ್ಲಿರುವ ಒಂದು ಹಳ್ಳಿಯ ಹೆಸರು. ಹಿರಿಯಡ್ಕದಿಂದ ಮೂರು ಮೈಲಿ ಆಗುತ್ತದೆ. ಕುಕ್ಕೆಹಳ್ಳಿಯು ಸುಮಾರು ಮೂವತ್ತು ವರ್ಷಗಳ ಹಿಂದೆ ದಟ್ಟವಾದ ಕಾಡಿನ ಪ್ರದೇಶವಾಗಿತ್ತಂತೆ. ಅಲ್ಲಿ ಮಂಗಗಳ ಜಾತಿಗೆ ಸೇರಿದ ಕೊರಜ್ಜು ಎಂಬ ಪ್ರಾಣಿಗಳು ಬಹಳವಾಗಿ ಕಂಡುಬರುತ್ತಿದ್ದವು. ಮಂಗಗಳಿಗಿಂತಲೂ ದೊಡ್ಡದಾಗಿದ್ದು ಕಪ್ಪಗಿದ್ದ ಈ ಪ್ರಾಣಿಯನ್ನು ಅಲ್ಲಿನ ಪ್ರಾದೇಶಿಕ ಭಾಷೆಯಾದ ತುಳುವಿನಲ್ಲಿ ಕುರಜ್ಜು ಅಥವಾ ಕೊರಜ್ಜು ಎಂದು ಕರೆಯುತ್ತಾರೆ. ಕಾಲಕ್ರಮೇಣ ಕಾಡು ಕಡಿಮೆಯಾಗಿ ಕೊರಜ್ಜುಗಳು ಕಡಿಮೆಯಾದರೂ ಕೊರಜ್ಜು ಎಂಬ ಶಬ್ದ ರೂಢಿಯಲ್ಲಿ ಉಳಿಯಿತು. ದಕ್ಷಿಣ ಕನ್ನಡದವರಿಗೆ ಈ ಶಬ್ದ ಪರಿಚಿತ. ಕುಕ್ಕೆಹಳ್ಳಿ ಕೊರಜ್ಜು ಎಂದರೆ ದೊಡ್ಡ ಹುಂಬ,

ಕೊಳಕ ಎಂಬ ಅರ್ಥದಲ್ಲಿ, ಮೂರ್ಖತನ ಪ್ರದರ್ಶಿತವಾದಾಗ ಹೇಳುತ್ತಾರೆ. ತುಳು ಭಾಷೆಯನ್ನಾಡುವವರ ಮಾತಿನಲ್ಲಿ ಇದು ಸಾಮಾನ್ಯವಾಗಿ ಕಂಡುಬರುವುದು.

**ಪ್ರಾಪಿಣ** ಇದು ಸಂಸ್ಕೃತದ 'ಪ್ರಾಪಣ' ಎಂಬ ಶಬ್ದದ ತಪ್ಪು ಪ್ರಯೋಗ. ಈ ಶಬ್ದಕ್ಕೆ ಹೊಂದುವುದು, ಪಡೆಯುವುದು, ದೊರಕಿದ್ದು, ಪ್ರಾಪ್ತಿ ಎಂದೇ ಅರ್ಥ.

**ಪ್ರಾಮುಖ್ಯತೆ, ಪ್ರಾಧಾನ್ಯತೆ ಮತ್ತು ಪ್ರಾವೀಣ್ಯತೆ - ಈ ಶಬ್ದಗಳ ಸಾಧುತ್ವ.** ಈ ಮೂರು ಶಬ್ದಗಳೂ ಸಂಸ್ಕೃತ ಮೂಲದವು. ಈ ಮೂರೂ ಶಬ್ದಗಳು ವ್ಯಾಕರಣದ ದೃಷ್ಟಿಯಲ್ಲಿ ಅಶುದ್ಧವಾದವು. ಕನ್ನಡದ ಬರಹಗಾರರೂ ಇಂಥ ಅನೇಕ ಅಶುದ್ಧ ಶಬ್ದಗಳನ್ನು ಕನ್ನಡದ ಶಬ್ದ ಭಂಡಾರಕ್ಕೆ ಸೇರಿಸುತ್ತಿದ್ದಾರೆ. ನಾವೀನ್ಯತೆ, ಸೌಹಾರ್ದತೆ, ವೈವಿಧ್ಯತೆ, ಸೌಂದರ್ಯತೆ, ಸೌಕುಮಾರ್ಯತೆ. ಮಾತಾಡುವಾಗ ಕೇಳುಗರ ಮೇಲೆ ಅಪಾರ ಪ್ರಭಾವವನ್ನು ಬೀರಿ 'ಮತ' ಗಿಟ್ಟಿಸಲು ಎಲ್ಲ ಉಪಾಯಗಳನ್ನೂ ಹೂಡುವ, ಭಾಷೆಯ ಪರಿಜ್ಞಾನವಿಲ್ಲದ ಜನ ಇಂಥ ಶಬ್ದಗಳನ್ನು ಸಮಯೋಪಾಯಕ್ಕಾಗಿ ಉಪಯೋಗಿಸುತ್ತಾರೆ. ಅಂಥವರಲ್ಲಿಯೇ ಪ್ರಚಾರದಲ್ಲಿರುವ ಶಬ್ದಗಳಿವು. ಇವುಗಳ ಶುದ್ಧ ರೂಪಗಳು ಹೀಗಿವೆ: ಪ್ರಾಮುಖ್ಯ, ಪ್ರಾಧಾನ್ಯ, ಪ್ರಾವೀಣ್ಯ, ನಾವೀನ್ಯ, ಸೌಹಾರ್ದ, ವೈವಿಧ್ಯ, ಸೌಂದರ್ಯ, ಸೌಕುಮಾರ್ಯ. ಆದರೆ ಹಿಂದೆ ಸೂಚಿಸಿರುವ ಅಪಶಬ್ದಗಳು ಎಷ್ಟು 'ಪ್ರಾಮುಖ್ಯತೆ' ಯನ್ನು ಗಳಿಸಿವೆಯೆಂದರೆ ಕನ್ನಡ ಶಬ್ದಕೋಶದಿಂದ ಅವುಗಳನ್ನು ತೆಗೆದು ಹಾಕುವುದೇ ಕಷ್ಟವಾದೀತು! ಪ್ರಮುಖತೆ, ಪ್ರಧಾನತೆ ಎಂಬ ರೂಪಗಳು ಸರಿಯಲ್ಲವೇ? ಎಂದು ಕೇಳಬಹುದು. ಅವು ಸರಿಯಾದ ರೂಪಗಳೇ. ಆದರೆ ಅವು ಪ್ರಮುಖ, ಪ್ರಧಾನ ಎಂಬ ಶಬ್ದಗಳಿಂದ ಬಂದುವಲ್ಲ. ಪ್ರಮುಖತಾ, ಪ್ರಧಾನತಾ ಎಂಬ ಸಂಸ್ಕೃತ ಶಬ್ದಗಳ ಮೂಲಕ ಕನ್ನಡಕ್ಕೆ ಬಂದ ತತ್ಸಮ ಶಬ್ದಗಳು. ಅವುಗಳನ್ನು ಉಪಯೋಗಿಸಬಾರದೆಂದು ಯಾರೂ ಹೇಳುವುದಕ್ಕಾಗುವುದಿಲ್ಲ.

**ಪ್ರಾಯಃ** ಸಂಸ್ಕೃತದಲ್ಲಿ ಪ್ರಾಯಸ್, ಪ್ರಾಯಶಸ್ ಎರಡೂ ಅವ್ಯಯಗಳು. ಇವೇ ಪ್ರಾಯಃ, ಪ್ರಾಯಶಃ ಎಂಬ ರೂಪಕವನ್ನು ಪಡೆಯುತ್ತಿವೆ ಉಪಯೋಗದಲ್ಲಿ. ಉದಾಹರಣೆಗೆ ಕಾಳಿದಾಸನ ವಾಕ್ಯಗಳನ್ನೇ ಗಮನಿಸಿ. **'ಪ್ರಾಯಃ ಪ್ರತ್ಯಯಮಾದತ್ತೇ ಸ್ವಗುಣೇಷೂತ್ತಮಾದರಃ'** (ಕುಮಾರ ಸಂಭವ ೬-೨೦) **ಆಶಾಬಂಧಃ ಕುಸುಮಸದೃಶಂ ಪ್ರಾಯಶೋಪ್ಯಂಗನಾನಾಂ ಸದ್ಯಃಪಾತಿ ಪ್ರಣಯಿ ಹೃದಯಂ ವಿಪ್ರಯೋಗೇ ಋಣದ್ಧಿ. ಮೇಘದೂತ** (ಪೂರ್ವ-೧೦). ಕನ್ನಡದಲ್ಲಿಯೂ ಈ ಎರಡು ರೂಪಗಳೂ ಸರಿಯಾದುವೇ.

**ಪ್ರಾಯೋಪವೇಶ** ಇದು ಒಂದು ಜೈನ ಪಾರಿಭಾಷಿಕ ಶಬ್ದ. ಇದು ಒಂದು ವ್ರತವನ್ನು ಸೂಚಿಸುತ್ತದೆ. ಉಪವಾಸದಿಂದ ಮರಣ ಹೊಂದುವುದು ಈ ವ್ರತದ ರೀತಿ. ಇದಕ್ಕೆ ಪ್ರಾಯೋಪಗಮನ ಎಂಬ ಇನ್ನೊಂದು ಹೆಸರೂ ಇದೆ.

**ಪ್ರಾರಂಭ** ಆರಂಭ ಎಂಬುದು ಸಂಸ್ಕೃತ ಶಬ್ದ. ಇದಕ್ಕೆ ಮೊದಲು, ಉಪಕ್ರಮ, ಎಂಬುದು ಮುಖ್ಯವಾದ ಅರ್ಥ. ಪ್ರಯತ್ನ, ವ್ಯಾಪಾರ, ಕಾರ್ಯ, ಪ್ರಸ್ತಾವನೆ, ಅಹಂಕಾರ, ಕೊಲ್ಲುವುದು ಎಂಬ ಇತರ ಅರ್ಥಗಳೂ ಇವೆ. ಆರಂಭಣ ಎಂಬ ಶಬ್ದವೂ ಇದೆ. ಪ್ರ ಎಂಬುದು ಸಂಸ್ಕೃತದ ಉಪಸರ್ಗಗಳಲ್ಲಿ ಒಂದು. ಚೆನ್ನಾಗಿ, ಅತಿಶಯವಾಗಿ, ಸ್ಪಷ್ಟವಾಗಿ, ಸೊಗಸಾಗಿ ಎಂಬರ್ಥದಲ್ಲಿ ಶಬ್ದಗಳ ಪ್ರಾರಂಭದಲ್ಲಿ ಸೇರುತ್ತದೆ. ಪ್ರ +ಆರಂಭ =ಪ್ರಾರಂಭ.

**ಪ್ರಾರಬ್ಧ** ಇದು ಒಂದು ವಿಶೇಷಣ ಶಬ್ದ. ಇದಕ್ಕೆ ಮೊದಲು ಮಾಡಿದ, ಆರಂಭಗೊಳಿಸಿದ, ಪ್ರಾರಂಭಿಸಿದ, ಉಪಕ್ರಮ ಮಾಡಿದ ಎಂದು ಅರ್ಥ. ಇದು ಮೊದಲ ಅರ್ಥ. ಎರಡನೆಯ ಅರ್ಥ ಪ್ರಾರಬ್ಧ ಕರ್ಮ ಎಂದು. ಜನ್ಮಾಂತರಗಳಲ್ಲಿ ನಾವು ಏನೇನು ಪಾಪಕರ್ಮಗಳನ್ನು

ಮಾಡಿರುತ್ತೇವೆಯೋ ಅವುಗಳ ಪರಿಣಾಮವನ್ನು ನಾವು ಅನುಭವಿಸುವುದಕ್ಕೆ ಮೊದಲು ಮಾಡಿದಾಗ ಆ ಕರ್ಮಗಳಿಗೆ ಪ್ರಾರಬ್ಧಕರ್ಮ ಎಂದು ಹೆಸರು ಬರುತ್ತದೆ. ಕರ್ಮವನ್ನು ಎರಡು ರೀತಿಯಾಗಿ ವಿಂಗಡಿಸುತ್ತಾರೆ: ಒಂದು — ಸಂಚಿತ ಕರ್ಮ. ಎರಡು — ಪ್ರಾರಬ್ಧ ಕರ್ಮ. ಇದು ಪರಿಣಾಮ ಬೀರಲು ತೊಡಗಿದ ಕರ್ಮ. ಕರ್ಮವು ನಾಶವಾಗಬೇಕಾದರೆ ಜ್ಞಾನ, ಪ್ರಾಯಶ್ಚಿತ್ತ ಮತ್ತು ಪುಣ್ಯಕಾರ್ಯ ಎಂಬ ಮೂರು ದಾರಿಗಳಿವೆ.

ಭಗವದ್ಗೀತೆಯಲ್ಲಿ "**ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪ ಕೋಟಿ ಶತೈರಪಿ**" ಎಂದು ಹೇಳಲಾಗಿದೆ. ಇದಕ್ಕೆ ಅರ್ಥ ಹೀಗೆ: ನಾವು ಮಾಡಿದ ಪಾಪಕರ್ಮದ ಪರಿಣಾಮವನ್ನು ನಾವೇ ಅನುಭವಿಸದೆ ನೂರು ಕೋಟಿ ಕಲ್ಪಗಳು ಕಳೆದರೂ ಅದು ನಶಿಸುವುದು ಸಾಧ್ಯವಿಲ್ಲ. ಈ ಅರ್ಥವನ್ನು ಸಾಮಾನ್ಯ ಜನರು ತಿಳಿದಿರುವುದಿಲ್ಲ. ಆದ್ದರಿಂದಲೇ ಅವರು ಮಾತನಾಡುವಾಗ 'ಒಳ್ಳೆ ಪ್ರಾರಬ್ಧ ಬಂತಲ್ಲ' ಎಂದಾಗ ಅದು ಏನೋ ಪಿಶಾಚಿಯೋ ಭೂತವೋ ಇರಬೇಕೆಂಬ ಭಾವನೆ ಬರುತ್ತದೆ. ಮಕ್ಕಳನ್ನೇ ಕೆಲವರು ಪ್ರಾರಬ್ಧ ಎಂದು ಬೈಯುತ್ತಾರೆ. ಒಂದು ದೃಷ್ಟಿಯಲ್ಲಿ ಆ ಮಕ್ಕಳು ಅವರ ಕರ್ಮ ತಾನೇ!

**ಪ್ರಿನ್ಸಿಪಾಲ್** ಇಂಗ್ಲಿಷಿನ Principal ಶಬ್ದ ಲ್ಯಾಟಿನ್ ಭಾಷೆಯಿಂದ ಇಂಗ್ಲಿಷಿಗೆ ಬಂದಿದೆ. ಅದಕ್ಕೆ first in rank, importance and authority ಎಂಬರ್ಥ ಮೂಲದಲ್ಲಿಯೇ ಇದೆ. ಇಂಗ್ಲಿಷಿನಲ್ಲಿ ಯಾವುದಾದರೂ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸುವವರಿಗೆ Subordinate ಎಂಬುದಕ್ಕೆ ವಿರುದ್ಧವಾದ ಅರ್ಥವಿದೆ. ಅಲ್ಲದೆ Oxford ವಿಶ್ವವಿದ್ಯಾನಿಲಯದ ಅನೇಕ ಕಾಲೇಜುಗಳ ಪ್ರಧಾನ ಅಧಿಕಾರಿಗೆ Principal ಎಂದೇ ಕರೆಯುತ್ತಾರೆ. Lady Principal ಎಂಬುದು ಅನೇಕ ಮಹಿಳೆಯರ ಕಾಲೇಜುಗಳ ಪ್ರಮುಖರಿಗೆ Oxford ಮತ್ತು Cambridge ಗಳಲ್ಲಿ ಸಲ್ಲುತ್ತದೆ. ಸ್ಕಾಟ್ಲೆಂಡ್ ಇಂಗ್ಲೆಂಡ್‌ಗಳ ವಿಶ್ವವಿದ್ಯಾನಿಲಯದ ಕಾಲೇಜುಗಳಲ್ಲಿಯೂ ಇದೇ ಮಾದರಿ ಇದೆ. ಕನ್ನಡದಲ್ಲಿ ಪರ್ಯಾಯವಾಗಿ ಪ್ರಾಂಶುಪಾಲ ಎಂಬ ಪದ ಬಳಕೆಗೆ ಬಂದಿದೆ. ನಾವು ಇಂಗ್ಲೆಂಡಿನಿಂದಲೇ Principal ಹೆಸರನ್ನು ಆಮದು ಮಾಡಿಕೊಂಡಿದ್ದೇವೆ. ಆ ಬಗ್ಗೆ ಅನುಮಾನವಿಲ್ಲ. ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಎಲ್ಲ ಶಾಲೆಗಳ ಮತ್ತು ಅಕಾಡೆಮಿಗಳ ಮುಖ್ಯರಿಗೆ ಮಾತ್ರ ಈ ಹೆಸರು ಸಲ್ಲುತ್ತದೆ. ಇತರ ಕ್ಷೇತ್ರಗಳಲ್ಲಿ Principal ಪದಕ್ಕೆ ಬೇರೆ ಬೇರೆ ಅರ್ಥಗಳಿವೆ.

**ಪ್ರಿಯಾಂಕ** ಇದೊಂದು ವಿಚಿತ್ರವಾದ ಶಬ್ದ. ಪ್ರಿಯ + ಅಂಕ = ಪ್ರಿಯಾಂಕ. ಪ್ರಿಯ ಎಂಬ ಗುರುತುಳ್ಳವನು. ಇದು ಗಂಡಸಿಗೆ ಹೆಸರಾಗಬಹುದು. ಪ್ರಿಯಾ + ಅಂಕ = ಪ್ರಿಯಾಂಕ - ಪ್ರಿಯಾ ಎಂಬ ಗುರುತುಳ್ಳವಳು. ಇಲ್ಲಿರುವ ಸವರ್ಣ ದೀರ್ಘ ಸಂಧಿಯಿಂದ ಹೀಗೆ ಎರಡು ಅರ್ಥಗಳೂ ಬರುತ್ತವೆ.

**ಪ್ರೇತಲೇಖಕ** ಈ ಶಬ್ದಕ್ಕೆ ಬೇರೊಬ್ಬರ ಹೆಸರಿನಲ್ಲಿ ಪ್ರಕಟವಾಗಿರುವ ಗ್ರಂಥದ ನಿಜವಾದ ಬರಹಗಾರ ಎಂದರ್ಥ. ಇದು ತುಂಬ ವ್ಯಂಗ್ಯದಿಂದ ಕೂಡಿದ ಪದ. ಹೆಸರೊಬ್ಬರಿಗೆ ಬಸುರೊಬ್ಬರಿಗೆ ಎಂಬ ಗಾದೆಯಿದೆ. ಅದು ಈ ಸನ್ನಿವೇಶಕ್ಕೆ ಹೊಂದಿಕೊಳ್ಳುವ ಗಾದೆ. ಹಿಂದೆ ಈ ಶಬ್ದಕ್ಕೆ ಲೇಖಕಮಿಂಡ ಅಥವಾ ಮಿಂಡಲೇಖಕ ಎಂಬ ಸೂಚನೆ ಬಂದಿತ್ತು. ಆದರೆ ಮಿಂಡ ಶಬ್ದದ ಘಾಟು ಹೆಚ್ಚಾದ್ದರಿಂದ ಆ ಶಬ್ದ ಒಪ್ಪಿಗೆ ಪಡೆಯಲಿಲ್ಲ. Ghost word ಎಂಬ ಶಬ್ದಕ್ಕೆ ಶಬ್ದ ಪ್ರೇತ ಅಥವಾ ಪ್ರೇತಶಬ್ದ ಎನ್ನುವುದನ್ನು ವಿದ್ವಾಂಸರು ಒಪ್ಪಿರುವ ಹಾಗೆಯೇ ಪ್ರೇತಲೇಖಕ ಎಂದು ನಾವು ಉಪಯೋಗಿಸಬಹುದು ಎಂದು ಕಾಣುತ್ತದೆ.

**ಪ್ರೇರಕ** ಈ ಸಂಸ್ಕೃತ ಶಬ್ದಕ್ಕೆ ಏನನ್ನಾದರೂ ಮಾಡುವಂತೆ ಪ್ರೇರಣೆ ಮಾಡುವವನು ಎಂದರ್ಥ. ತಾರಕ ಎಂದರೆ ಕಷ್ಟ ಬಂದಾಗ ನಮ್ಮನ್ನು ಕಷ್ಟದಿಂದ ಪಾರು ಮಾಡುವವನು. ಮಾರಕ

ಎಂದರೆ ನಮ್ಮ ಸಾವನ್ನು ತರುವವನು. ದೇವರೆ ನಮ್ಮನ್ನು ಈ ರೀತಿಯಲ್ಲಿ ನಡೆಸಿಕೊಳ್ಳುತ್ತಾನೆ ಎಂದು ಜನರಲ್ಲಿ ನಂಬಿಕೆ ಇದೆ.

**ಪ್ರೇರಣೆ, ಪ್ರೇರೇಪಣೆ ಯಾವುದು ಸರಿ?** 'ಪ್ರೇರಣೆ' ಎಂಬುದೇ ಸರಿಯಾದ ಶಬ್ದ. ಸಂಸ್ಕೃತದಲ್ಲಿ 'ಪ್ರೇರಕ, ಪ್ರೇರಣ, ಪ್ರೇರಣೀಯ, ಪ್ರೇರಿಕ' ಎಂದು ಶಬ್ದಗಳ ಪ್ರಯೋಗಗಳಿವೆ. ಪ್ರೇರಣೆ ಎಂಬುದು ಕನ್ನಡದ ರೂಪ. 'ಪ್ರೇರೇಪಣೆ' ಎಂಬುದು ಅಶುದ್ಧ ರೂಪ. 'ಆರೋಪಣೆ' ಶಬ್ದ ಸಾಮ್ಯದ ಮೇಲೆ ಆ ಶಬ್ದ ಉತ್ಪತ್ತಿಯಾದಂತೆ ಕಂಡುಬರುತ್ತದೆ. ಬೇರೆಯ ರೀತಿಯಲ್ಲಿ ಆ ಶಬ್ದವನ್ನು ಸಾಧಿಸುವುದು ಕಷ್ಟ. ಆದುದರಿಂದ ಅದನ್ನು ಉಪಯೋಗಿಸದಿರುವುದೇ ಮೇಲು. ಆದರೆ ಮೈಸೂರು ಬೆಂಗಳೂರು ಜಿಲ್ಲೆಗಳಲ್ಲಿಯೂ ಅವುಗಳ ಸುತ್ತಮುತ್ತಲೂ ಈ 'ಪ್ರೇರೇಪಣೆ' ತುಂಬ ವ್ಯಾಪಕವಾಗಿ ಪ್ರಯೋಗವಾಗುತ್ತಿರುವ ಶಬ್ದ ಎಂಬುದನ್ನು ನೆನಪಿಡಬೇಕು.

**ಪ್ಲಾಸ್ಟಿಕ್ ಇದಕ್ಕೆ ಕನ್ನಡ ಪದವೇನು?** ಇದರ ರೂಪಾಂತರ ಪ್ಲಾಸ್ಟಿಕ್ಕು. ಇಂಥ ಹೊಸ ಶಬ್ದಗಳು ನಮಗೆ ದೊರಕಿದಾಗ ಕನ್ನಡ ಜಾಯಮಾನವೇನೆಂದರೆ ಅದಕ್ಕೆ ಉ ಎಂಬ ಪ್ರತ್ಯಯವನ್ನು ಹಚ್ಚಿ ನಮ್ಮದನ್ನಾಗಿ ಮಾಡಿಕೊಳ್ಳಬೇಕು. ಇದೊಂದೇ ಮಾರ್ಗ. ನೋಡಿ ಸ್ಲೇಟು, ಕೋರ್ಟು, ರೈಲು ಸಾಲದೆ?

## ಫ

**ಫ ಎಂಬ ಅಕ್ಷರ ಇದೆಯೇ?** ನಾಲಗೆಯು ಉಚ್ಚರಿಸಬಹುದಾದ ಎಲ್ಲ ಧ್ವನಿಗಳಿಗೂ ಕನ್ನಡ ಭಾಷೆಯಲ್ಲಿ ಅಕ್ಷರಗಳಿಲ್ಲ. ಆದುದರಿಂದ ಇಂಗ್ಲಿಷ್‌ನಲ್ಲಿರುವ F ಮತ್ತು Z ಎಂಬ ಅಕ್ಷರಗಳ ಉಚ್ಚಾರಣೆಯನ್ನು ಸೂಚಿಸಲು ಕನ್ನಡದ ಬರಹದಲ್ಲಿ ಎರಡು ಹೊಸ ಲಿಪಿಗಳನ್ನು ಸೃಷ್ಟಿಮಾಡಿಕೊಂಡಿದ್ದಾರೆ. 'ಫ' ಎಂಬುದು 'F' ಅಕ್ಷರದ ಉಚ್ಚಾರಣೆಗೆ 'ಜ' ಎಂಬುದು 'Z' ಅಕ್ಷರದ ಉಚ್ಚಾರಣೆಗೆ. ಇನ್ನೂ ಇದು ಸಾರ್ವಜನಿಕವಾಗಿ ಪ್ರಯೋಗಕ್ಕೆ ಬಂದಿಲ್ಲ. ಬಂದರೆ ಉತ್ತಮ. ಇಂಗ್ಲಿಷ್‌ನ ಅನೇಕ ಶಬ್ದಗಳನ್ನು ಕನ್ನಡದಲ್ಲಿ ನಾವೆಲ್ಲರೂ ಉಪಯೋಗಿಸುತ್ತೇವೆ. ಆದುದರಿಂದ ಈ ಎರಡು ಚಿಹ್ನೆಗಳನ್ನು ಉಪಯೋಗಿಸುವುದು ಪ್ರಯೋಜನಕರ. ಉದಾ: Father, Zoo.

**ಫಟಿಂಗ** ವೈದಿಕ ಸಂಸ್ಕೃತದಲ್ಲಿ ಫಟ್ ಎನ್ನುವುದು ಒಂದು ಬೈಗಳು. ಅದರಿಂದ ಬೆಳೆದು ಬಂದ ಶಬ್ದ. ಸಾಂಸಾರಿಕ ಸಂಬಂಧವೇ ಇಲ್ಲದವನು ಉಂಡಾಡಿ ಎಂದರ್ಥ. ನಮಗೆ ಮರಾಠಿಯ ಮೂಲಕ ಬಂದಿದೆ. ಕನ್ನಡದಲ್ಲಿ ಇದಕ್ಕೆ ಪೋಕರಿ, ಉಡಾಳ ಎಂದರ್ಥ.

**ಫಲುಗುಣ** ಇದು ಮಹಾಭಾರತದಲ್ಲಿ ಬರುವ ಪಾಂಡವರಲ್ಲಿ ಒಬ್ಬನ ಹೆಸರು. ಭೀಮನಾದ ಮೇಲೆ ಹುಟ್ಟಿದವನು. ಕುಂತಿಯ ಮಕ್ಕಳಲ್ಲಿ ಕೊನೆಯವನು ಅರ್ಜುನ. ಇವನು ಉತ್ತರಾನಕ್ಷತ್ರದಲ್ಲಿ ಹುಟ್ಟಿದುದರಿಂದ ಅವನಿಗೆ ಫಲ್ಗುನ ಎಂದು ಹೆಸರು ಬಂತು. ಫಲ್ಗುನೀ ಎಂಬುದು ಉತ್ತರಾನಕ್ಷತ್ರದ ಇನ್ನೊಂದು ಹೆಸರು. ಫಲ್ಗುನದ ತದ್ಭವ ಫಲುಗುಣ.

**ಫೀನಿಕ್ಸ್ ಎಂದರೇನು?** Phoenix ಎನ್ನುವುದು ಈಜಿಪ್ಟ್ ದೇಶದ ಒಂದು ಪೌರಾಣಿಕ ಪಕ್ಷಿ. ಗ್ರೀಸ್ ದೇಶದ ಒಂದು ಪೌರಾಣಿಕ ಕಥೆಯ ಪ್ರಕಾರ ಈ ಪಕ್ಷಿಯು ಕೆಲವು ವರ್ಷಗಳು ಬದುಕಿ ಆ ಸಮಯದ ಕೊನೆಯಲ್ಲಿ ಪರಿಮಳ ದ್ರವ್ಯಗಳನ್ನು ಒಂದು ಕಡೆ ರಾಶಿ ಹಾಕಿ, ಅದರ ಮುಂದೆ ತನ್ನ ರೆಕ್ಕೆಗಳಿಂದ ಗಾಳಿ ಬೀಸುತ್ತಿತ್ತಂತೆ. ಆ ಗಾಳಿಯಿಂದ ಆ ಪರಿಮಳ ದ್ರವ್ಯಗಳು ಬೆಂಕಿ ಹತ್ತಿ ಉರಿದಾಗ ಪಕ್ಷಿಯೂ ಅದರಲ್ಲಿ ಬಿದ್ದು ಬೂದಿಯಾಗಿ

ಹೋಗುತ್ತಿತ್ತಂತೆ. ಬಳಿಕ ಆ ಬೂದಿಯ ರಾಶಿಯಿಂದಲೇ ಹೊಸ ಚೈತನ್ಯವನ್ನು ಪಡೆದು ಜೀವ ತಳೆಯುತ್ತಿತ್ತಂತೆ. ಈ ಪಕ್ಷಿಯನ್ನು ಅನೇಕ ಕವಿಗಳು ಪುನರುತ್ಥಾನದ ಪ್ರತೀಕವಾಗಿ ಉಪಯೋಗಿಸಿಕೊಂಡಿದ್ದಾರೆ. ಪುನರುತ್ಥಾನ = Resurrection.

**'ಫ್ರೆಂಚ್ ಲೀವ್' ಎಂದರೇನು ?** ಈ ಶಬ್ದವು ಫ್ರೆಂಚ್ ಭಾಷೆಯಿಂದ ಇಂಗ್ಲಿಷಿಗೆ ಬಂದಿದೆ. ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ಈ ಶಬ್ದವು ಪ್ರಯೋಗವಾಗಿರುವುದು ಇಂಗ್ಲಿಷ್ ಭಾಷೆಯಲ್ಲಿ ಕಂಡುಬರುತ್ತದೆ. ಇದಕ್ಕೆ ಫ್ರಾನ್ಸ್ ದೇಶದಲ್ಲಿ ಯಾವುದಾದರೂ ನೃತ್ಯಪ್ರದರ್ಶನ, ಭೋಜನಕೂಟ ಅಥವಾ ಅಂಥ ಇತರ ಸಂಭ್ರಮದ ಉತ್ಸವಗಳಿಗೆ ಆಹ್ವಾನವನ್ನು ಪಡೆದ ಅತಿಥಿಯು ಕಾರ್ಯಕ್ರಮವಾದ ಮೇಲೆ ಆಹ್ವಾನವನ್ನು ನೀಡಿದವರಿಗೆ ತಿಳಿಸದೆ ಹೊರಟುಹೋಗುವುದು ಎಂದು ಅರ್ಥವಿದ್ದಿತು. ಬರಬರುತ್ತಾ ಯಾರ ಅಪ್ಪಣೆಯೂ ಇಲ್ಲದೆ ಹೊರಟುಹೋಗುವುದಕ್ಕೆ ಈ ಶಬ್ದದ ಪ್ರಯೋಗವಾಗುತ್ತಾ ಇದೆ. ಈ ಪ್ರವೃತ್ತಿಯೂ ಬೆಳೆಯುತ್ತಿರುವುದರಿಂದ ಈ ಶಬ್ದದ ಪ್ರಸಿದ್ಧಿ, ಜನಪ್ರಿಯತೆ ಹೆಚ್ಚಾಗಿದೆ.

# ಬ

**ಬಂಡಲ್ (Bundle)** ಇದು ಕಟ್ಟು ಎಂಬ ಕನ್ನಡಕ್ಕೆ ಸರಿಯಾದ ಅರ್ಥವನ್ನು ಕೊಡುತ್ತದೆ. ಇಂಗ್ಲಿಷಿನಲ್ಲಿಯೂ ಕನ್ನಡದಲ್ಲಿಯೂ ಈ ಎರಡು ಶಬ್ದಗಳಿಗೆ ನಾಮಪದದ ಕ್ರಿಯಾಪದದ ಅರ್ಥಗಳಿರುವುದರಿಂದ ಇವೆರಡನ್ನೂ ಸಮಾನಾರ್ಥ ಪದಗಳೆಂದು ತಿಳಿಯಬಹುದು. ಗಂಟುಕಟ್ಟು, ಕಟ್ಟು ಬಿಚ್ಚು ಎಂಬ ಶಬ್ದಗಳನ್ನು ನೋಡಿ.

**ಬಂಡುಕೋರ** ಬಂಡು ಎಂದರೆ ದಂಗೆ, ಬಂಡಾಯ. ದಂಗೆ ಮಾಡುವವನು ಬಂಡುಕೋರ ಬಂಡು +ಕೋರ. ಮರಾಠಿಯಲ್ಲಿ ಬಂಡು ಖೋರ್ ಆಗಿದೆ. ಕೆಲವು ಸಲ ಕನ್ನಡದಲ್ಲಿಯೂ ಬಂಡುಖೋರ ಎಂಬ ಶಬ್ದ ಪ್ರಯೋಗವಾಗಿರುವುದುಂಟು.

**ಬಂದಾರಭ್ಯ - ಹೋದಾರಭ್ಯ** ಬಂದ +ಆರಭ್ಯ, ಹೋದ +ಆರಭ್ಯ ಎಂಬುದು ಈ ಶಬ್ದಗಳು ಬಂದ ರೀತಿ. ಆರಭ್ಯ ಎಂದರೆ ಆರಂಭದಿಂದ ಎಂದರ್ಥ. ಅಲ್ಲಿಂದ ಮೊದಲ್ಗೊಂಡು ಎಂದು ವಿವರವಾದ ಅರ್ಥ. ಅದು ಸಂಸ್ಕೃತ ಶಬ್ದವಾದುದರಿಂದ ಹಿಂದೆ ವಿದ್ವಾಂಸರ ಮನೆತನಗಳಲ್ಲಿ ಉಪಯೋಗವಾಗುತ್ತಿತ್ತು. ಆ ಮನೆತನದ ಹಿರಿಯರಲ್ಲಿ ಇನ್ನೂ ತಲೆಹಾಕುತ್ತಾ ಇದೆ. ಇನ್ನು ಕೆಲವು ದಿನಗಳ ಮೇಲೆ ಮರೆಯಾಗುವ ಶಬ್ದಗಳು ಅವು.

**ಬಕಗ್ರೀವ "......" ಮತ್ತು '.....'** ಈ ಉದ್ಧರಣ ಚಿಹ್ನೆಗೆ ಯಾರೋ ಹಿರಿಯರೊಬ್ಬರು ಬಕಗ್ರೀವ ಎಂದು ಹೆಸರಿಟ್ಟರು. ಅದು ಸೂಕ್ತವಾಗಿತ್ತು. ಆದರೆ ಪ್ರಯೋಗದಲ್ಲಿ ಬರಲಿಲ್ಲ. ಅದಿರಲಿ.

ಎರಡೆರಡು ಚಿಹ್ನೆಗಳುಳ್ಳ ಮೊದಲನೆಯ ಉದ್ಧರಣ ಚಿಹ್ನೆಯನ್ನು ಬೇರೆಡೆಯಿಂದ ಉದ್ಧರಿಸಿದ ವಾಕ್ಯ ಅಥವಾ ವಾಕ್ಯ ಭಾಗಗಳನ್ನು ಬೇರ್ಪಡಿಸಿ ತೋರಿಸುವುದಕ್ಕಾಗಿ ಉಪಯೋಗಿಸಬೇಕು. ಇನ್ನೊಬ್ಬರು ಹೇಳಿದ ಅಥವಾ ಬರೆದ ಪದಗಳು, ಪದಪುಂಜಗಳು, ವಾಕ್ಯಗಳು, ವಾಕ್ಯವೃಂದಗಳು, ಕಾವ್ಯದ ಪದ್ಯಗಳು - ಇವುಗಳಲ್ಲಿ ಯಾವ ವ್ಯತ್ಯಾಸವನ್ನೂ ಮಾಡದೆ ಇದ್ದದ್ದು ಇದ್ದ ಹಾಗೇ ಎತ್ತಿ ತೋರಿಸಬೇಕಾದಾಗ ಇಂಥ ವಿರಾಮ ಚಿಹ್ನೆಗಳನ್ನು ಉಪಯೋಗಿಸಬೇಕು. ಉದಾ: "**ಅಮಿತ ತೇಜೋಮಯನೆ ಅಜ್ಞಾನ ತಿಮಿರದಿಂ ಕುರುಡಾದೆನಗೆ ನೀ ಕಣ್ಣ ನೀಡೈ**" ಎಂದು ಡಿ.ವಿ.ಜಿ.ಯವರು ದೇವರಿಗೆ ಪ್ರಾರ್ಥನೆಯನ್ನು ಸಲ್ಲಿಸಿದ್ದಾರೆ. "**ಇಲ್ಲಿ ಹುಗಲಲ್ಲಿ ಓ ಬಿಯದ ಇದು ಪಕ್ಷಿಕಾಶಿ**" ಎಂದು ಕುವೆಂಪು

ಎಚ್ಚರಿಸಿದ್ದಾರೆ. ‘ ’ ಎಂಬ ಒಂದೊಂದೇ ವಿರಾಮ ಚಿಹ್ನೆಯುಳ್ಳ ಉದ್ಧರಣ ಚಿಹ್ನೆಯನ್ನು ಒಂದು ಉದ್ಧಾರ ವಾಕ್ಯದೊಳಗೆ ಬರುವ ಬೇರೆ ಉದ್ಧಾರವಾಕ್ಯ ಅಥವಾ ಪದ ಮುಂತಾದುವುಗಳಿಗೆ ಬಳಸಬೇಕು.

**ಬಕಾಳಾ ಭಾತು** ಇದು ಮೊಸರನ್ನ ಎಂಬ ವಿಶೇಷದಿಂದ ಅರ್ಥವನ್ನು ಪಡೆದಿದೆ. ಅರಬ್ಬಿಯಲ್ಲಿ ಬಕಾಲ್ ಎಂದರೆ ಅಂಗಡಿಯಲ್ಲಿ ಮಾರಾಟ ಮಾಡುವುದು. ಹಾಗೆ ಅಂಗಡಿಯಲ್ಲಿ ದೊರಕುತ್ತಿದ್ದ ಮೊಸರನ್ನಕ್ಕೆ ಮರಾಠಿಯಲ್ಲಿ ಬಕಾಳಾ ಬಾತು ಎಂದು ಹೆಸರು. ಇದರ ಮೂಲ ಅರಬ್ಬಿ, ಆ ಬಳಿಕ ಮರಾಠಿ, ಆಮೇಲೆ ಕನ್ನಡ. ಅದಕ್ಕೆ ಸರಿಯಾದ ಅರ್ಥ ಅಂಗಡಿಯ ಮೊಸರನ್ನ.

**ಬಕುಲ** ಇದು ಒಂದು ಹೂವಿನ ಗಿಡದ ಹೆಸರು. ಸಂಸ್ಕೃತದಲ್ಲಿ ವಕುಲ — ತದ್ಭವ ಬಕುಲ, ಬಕುಳ. ಇದನ್ನು ಹವಳದ ಗಿಡ ಎಂದೂ ಕರೆಯುತ್ತಾರೆ. ಈ ಹೂವಿನ ಬಣ್ಣ ಕೆಂಪು.

**ಬಕ್ಕಣ** ಎಂದರೆ ಸಂಚಿ. ಸೊಂಟಕ್ಕೆ ಸಿಕ್ಕಿಸಿಕೊಳ್ಳುವ ಚೀಲ. ಕುದುರೆಗೆ ಹುರುಳಿಯನ್ನು ತಿನ್ನಿಸಲು ಹಾಕುವ ಚೀಲಕ್ಕೂ ಈ ಹೆಸರಿದೆ. ಇದು ಸಂಸ್ಕೃತದ ಬೋಕ್ಕಾಣ ಎಂಬ ಶಬ್ದದ ತದ್ಭವ.

**ಬಕ್ಕೊಳ** ಇದು ಬಕ್ಕಳ ಎಂಬ ಶಬ್ದದ ಪರ್ಯಾಯ ರೂಪ. ಇದಕ್ಕೆ ಬಹಳ, ಅಧಿಕ, ಹೆಚ್ಚು, ತುಂಬ ಎಂದು ಅರ್ಥ. ಇದು ಕನ್ನಡದ ಶಬ್ದ ಇದ್ದಂತಿದೆ.

**ಬಕ್ಷೀಸು** ಬಕ್ಷೀಸು ಹಿಂದೀ ಭಾಷೆಯ ಶಬ್ದ. ಇದಕ್ಕೆ ತಮಗಿಂತ ಕೆಳಗಿನ ದರ್ಜೆಯವರಿಗೆ ನೀಡುವ ಹಣ, ಬಹುಮಾನ, ಪ್ರತಿಫಲ ಎಂಬ ಅರ್ಥಗಳಿವೆ. ಇದು ಟರ್ಕಿ ಭಾಷೆಗೂ ಹೋಗಿ ಸೇರಿದೆ. ಭಕ್ಷೀಸು ರೂಪ ತಪ್ಪು.

**ಬಗರ್ ಹುಕುಂ** ಇದು ಹಿಂದೀ ಬಗಾರ್ ಎಂಬ ಶಬ್ದಕ್ಕೆ ವಿನಾ, ಇಲ್ಲದೆ ಎಂಬ ಅರ್ಥವಿದೆ. ಇದು ಒಂದು ಅವ್ಯಯ. ಬಗಾರ್ ಎಂಬುದು ಕನ್ನಡದಲ್ಲಿ ಬಗರ್ ಎಂದು ಉಪಯೋಗವಾಗುತ್ತದೆ. ಬಗರ್ ಹುಕುಂ ಈ ಶಬ್ದದಲ್ಲಿ ಹುಕುಂ ಎನ್ನುವುದು ಅರಬ್ಬಿ ಶಬ್ದ. ಈ ಶಬ್ದಕ್ಕೆ ಅಪ್ಪಣೆ, ಆಜ್ಞೆ, ಎಂದರ್ಥ. ಆದ್ದರಿಂದ ಬಗರ್ ಹುಕುಂ = ಅಪ್ಪಣೆ ಇಲ್ಲದ್ದು. ಗ್ರಾಮ್ಯದಲ್ಲಿ ಬಗೈರ್ ಹುಕುಂ ಎಂಬ ಪ್ರಯೋಗವೂ ಉಂಟು.

**ಬಗ್ಗಣೆ** ಕನ್ನಡದಲ್ಲಿ ಬಗ್ಗಿಸು ಎಂಬ ಒಂದು ಶಬ್ದವಿದೆ. ಇದಕ್ಕೆ ಕೋಗಿಲೆಯ ಕೂಗು ಎಂದು ಕ್ರಿಯಾಪದದ ಅರ್ಥ. ಅದು ನಾಮಪದವಾದಾಗ ಬಗ್ಗು-ಬಗ್ಗಣೆ ಎಂಬ ರೂಪಗಳಾಗುತ್ತವೆ. ಬಗ್ಗು +ಅಣೆ ಪ್ರತ್ಯಯ = ಬಗ್ಗಣೆ. **ಕೋಗಿಲೆಯ ಬಗ್ಗಣೆ, ತುಂಬಿಯ ಗೇಯಮೆಂಬಿವಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ** (ಮಲ್ಲಿನಾಥ ಪುರಾಣ -೧-೪೪)

**ಬಜಾವು - ಬಚಾವು** ಬಡಿಯುವುದು, ಬಜಾಯಿಸುವುದು, ನಗಾರಿ ಮುಂತಾದ ಚರ್ಮ ವಾದ್ಯಗಳನ್ನು ಬಡಿಯುವುದು. ಬಚಾವು ಎಂಬುದು ಒಂದು ಶಬ್ದ. ಅದಕ್ಕೆ ತಪ್ಪಿಸಿಕೊಳ್ಳುವುದು, ರಕ್ಷಣೆ ಪಡೆಯುವುದು ಎಂದು ಅರ್ಥ. ಬಜಾವ್ ಎಂಬುದು ಸಂಸ್ಕೃತದ ವಾದ್ಯ ಎಂಬ ಶಬ್ದದಿಂದ ಬಂದಿದೆ. ಬಚಾವ್ ಎಂಬುದು ಹಿಂದೀ ಬಚಾನಾದಿಂದ ಬಂದಿದೆ.

**ಬಟವಾಡೆ** ಇದು ಮರಾಠೀ ಶಬ್ದ. ಇದಕ್ಕೆ ಮೂಲರೂಪ ಬಟವಡಾ. ಹಂಚುವುದು ವಿತರಣೆ ಮಾಡುವುದು, ಅವರವರಿಗೆ ತಲುಪಿಸುವುದು ಎಂದರ್ಥ. ಕೂಲಿಯನ್ನು ಬಟವಾಡೆ ಮಾಡುತ್ತಾರೆ. ತಿಂಗಳ ಸಂಬಳವನ್ನು ಮೊದಲನೆ ತಾರೀಖಿನಲ್ಲಿ ಬಟವಾಡೆ ಮಾಡುತ್ತಾರೆ ಎಂಬ ವಾಕ್ಯವನ್ನು ಗಮನಿಸಿ. ಬಟವಾಡೆ ಸಂಬಳವಲ್ಲ. ಅದು ಕೂಲಿಯೂ ಅಲ್ಲ. ಅಂಚೆಯನ್ನು ಬಟವಾಡೆ ಮಾಡುತ್ತಾರೆ. ಆದ್ದರಿಂದ ಅದಕ್ಕೆ ಅರ್ಥ ವಿತರಣೆ.

**ಬಟ್ಟೆ** ಎಂಬ ಶಬ್ದಕ್ಕೆ ದಾರಿ, ಹಾದಿ ಎಂಬ ಅರ್ಥವಿದೆ. ಈ ಶಬ್ದ ಸಂಸ್ಕೃತದ ವರ್ತ್ಮನ್ ಎಂಬ ಶಬ್ದದಿಂದ ಬಂದ ತದ್ಭವ. ಇನ್ನೊಂದು ಬಟ್ಟೆ ಇದೆ. ಇದಕ್ಕೆ ವಸ್ತ್ರ ಎಂದರ್ಥ. ಇದೂ

ಕೂಡ ಸಂಸ್ಕೃತದ ಪಟ್ಟ ಎಂಬುದರಿಂದ ಬಂದುದು. ಈ ಶಬ್ದದ ಅರ್ಥವು ವ್ಯಾಪಕವಾಗಿ ಋತುಸ್ರಾವ ಎಂಬ ಇನ್ನೊಂದು ಅರ್ಥವನ್ನೂ ಕೊಡುತ್ತದೆ.

**ಬಡವನ ಕೋಪ ದವಡೆಗೆ ಮೃತ್ಯು** ಎಂಬ ಗಾದೆ ಬಡವನು ಕೋಪ ಮಾಡಿಕೊಂಡರೆ ಅವನ ಮೇಲೆಯೇ ಆಗುವ ಪರಿಣಾಮವನ್ನು ತಿಳಿಸುತ್ತದೆ. ಬಡವ ಸಾಮಾನ್ಯವಾಗಿ ದುರ್ಬಲ. ಜನಬಲ, ಧನಬಲ, ಸ್ಥಾನಬಲ, ಪ್ರಭಾವಬಲ ಯಾವುದೂ ಇಲ್ಲದವನು. ಹೀಗಿರುವುದರಿಂದ ಅವನು ಕೋಪ ಮಾಡಿಕೊಂಡರೆ, ಕೋಪದ ಪರಿಣಾಮವಾಗಿ ಇತರರ ಮೇಲೆ ಮಾತಿನ ಅಪಚಾರ ಮಾಡಿದರೂ ಸಾಕು, ತನ್ನ ಬಾಳಿಗೇ ಕೆಡುಕನ್ನು ತಂದುಕೊಳ್ಳುತ್ತಾನೆ. ದವಡೆ ಆಹಾರವನ್ನು ಅಗಿದು ತಿನ್ನಲು ಸಹಾಯ ಮಾಡುವ ಅಂಗ. ಅದಕ್ಕೆ ಮೃತ್ಯು ಎಂದರೆ ? ಆಹಾರವೇ ಸಿಗದೆ, ಇದ್ದ ಸಂಪಾದನೆಯನ್ನು ಕಳೆದುಕೊಂಡು ಉಪವಾಸವಿರಬೇಕಾದೀತು ! ಅಥವಾ ಇನ್ನೂ ಹೆಚ್ಚು ಪರಿಣಾಮಕಾರಿಯಾದರೆ ದವಡೆಯ ಹಲ್ಲು ಉದುರಿಹೋದಾವು. ಇದು ಗಾದೆಯ ಅರ್ಥ.

**ಬಡಿಸು - ನೀಡು - ಎಡೆ ಮಾಡು** ಊಟಕ್ಕೆ ಕುಳಿತವರಿಗೆ ಅವರ ಎಲೆಗೋ ತಟ್ಟೆಗೋ ಆಹಾರ ಪದಾರ್ಥಗಳನ್ನು ತಂದು ಇಡುವುದು, ಹಾಕುವುದು. ಇದು ಬಡಿಸುವುದು. ನೀಡು ಎಂಬ ಶಬ್ದಕ್ಕೆ ಕೊಡು ಎಂದು ಮೊದಲು ಅರ್ಥ. ಹಿರಿಯರಿಗೆ ಕೊಡುವಾಗ ನೀಡು ಎನ್ನುತ್ತಾರೆ. ಈ ಶಬ್ದದಲ್ಲಿ ಕೊಡಲ್ಪಟ್ಟವರು ಸ್ವೀಕರಿಸಿದರೆ ಅದು ಕೊಟ್ಟವರಿಗೆ ಗೌರವ ಎಂಬ ಸೂಚನೆಯಿದೆ. ಎಡೆ ಮಾಡು ಶಬ್ದಕ್ಕೆ ಎಲೆಯನ್ನು ಹಾಕಿ ಅದಕ್ಕೆ ಬೇಕಾದ ಪರಿಕರಗಳನ್ನೆಲ್ಲ ಬಡಿಸಿ ಸಿದ್ಧಪಡಿಸಿರು ಎಂಬುದು ಪ್ರಯೋಗದಲ್ಲಿರುವ ಅರ್ಥ. ಉದಾಹರಣೆಗೆ ದೇವರ ಪೂಜೆ ಮಾಡುವಾಗ ನೈವೇದ್ಯಕ್ಕೆ ಎಡೆಮಾಡು ಎನ್ನುತ್ತೇವೆ. ಎಡೆ ಶಬ್ದಕ್ಕೆ ಬೇರೆ ಬೇರೆ ಅರ್ಥಗಳೂ ಇವೆ. ನಾನಿರುವ ಪ್ರದೇಶದಲ್ಲಿ ನಮ್ಮ ಪರಿಸರದ ಸಂಪ್ರದಾಯದಲ್ಲಿ ಈ ಹೇಳಿರುವ ಅರ್ಥದಲ್ಲಿ ಈ ಶಬ್ದಗಳು ಪ್ರಯೋಗವಾಗುತ್ತಿವೆ.

**ಬಡ್ಡಿಮಗ** ಸಂಸ್ಕೃತದ ವೃದ್ಧಿ ಎಂಬುದು ಸಾಲ ಕೊಟ್ಟು ಪಡೆಯುವ ಅಧಿಕ ಹಣದ ಹೆಸರು. ಈ ಶಬ್ದವೇ ಕನ್ನಡದಲ್ಲಿ ತದ್ಭವವಾದಾಗ ಬಡ್ಡಿ ಎಂದಾಗುತ್ತದೆ. ಲೇವಾದೇವಿ ಮಾಡುವವನನ್ನು ವೃದ್ಧ್ಯಾಜೀವ =ಬಡ್ಡಿಯಿಂದ ಬದುಕುವವನು ಎಂದು ಕರೆಯುತ್ತಾರೆ. ಕುಸೀದ, ಕುಸೀದಕ, ಎಂಬ ಹೆಸರುಗಳೂ ಅವನಿಗೆ ಇವೆ. ಬಡ್ಡಿ ತೀರಿಸು, ಬಡ್ಡಿಗೆ ಕೊಡು ಮುಂತಾದ ಶಬ್ದಗಳು ಸಾಮಾನ್ಯರ ಪ್ರಯೋಗದಲ್ಲಿದೆ. ಇದು ಒಂದು ಬಡ್ಡಿ. ಇನ್ನೊಂದು **ಬಡ್ಡಿ** ಶಬ್ದವಿದೆ. ಅದು **ಬೊಡ್ಡಿ** ಎಂಬ ಶಬ್ದದ ಪರ್ಯಾಯ ರೂಪ. ಬೊಡ್ಡಿ ಎಂದರೆ ವೇಶ್ಯೆ, ಸೂಳೆ, ಕುಲಟೆ, **ಓಡಿ ಹೋಗುವ ಬಡ್ಡಿ ಹಾಲಿಗೆ ಹೆಪ್ಪು ಹಾಕ್ಯಾಳೆ** ಎಂದು ಗಾದೆ. ಈ ಬಡ್ಡಿಗಳ ಬಗ್ಗೆ ಅನೇಕ ಗಾದೆಗಳಿವೆ. ಸಣ್ಣ ಹುಡುಗಿಯರು ಚಲ್ಲಾಟವಾಡಿದರೆ ನೋಡಿದವರು ಹೇಳುತ್ತಾರೆ: ಬಡ್ಡಿಯ ಹಾಗೆ ಕುಣಿಯುವವಳು ಹರೆಯ ಬಂದರೆ ಬಿಟ್ಟಾಳೆ ? ಬಡ್ಡಿಮಗ ಎಂಬ ಶಬ್ದ ಈ ಬಡ್ಡಿಯ ಮಗನನ್ನು ಕುರಿತ ಬೈಗಳು. ಪ್ರೀತಿಗೂ ತಂದೆ ಮಗನನ್ನು ಬಡ್ಡಿಮಗ ಎನ್ನುವುದುಂಟು. ನ್ಯಾಯವಾಗಿ ಪರಿಶೀಲಿಸಿದರೆ ಹಾಗೆ ಬೈಯುವುದು ಅವನ ಅಮ್ಮನ ಸೌಂದರ್ಯವನ್ನು ಕುರಿತ ಪ್ರಶಂಸೆ.

**ಬದುಕು, ಕೆಲಸ, ದಗದು, ಕಸಬು,** ಬದುಕು ಅಂದರೆ ಜೀವನೋಪಾಯಕ್ಕೆ ಬೇಕಾದ ಉದ್ಯೋಗ ಇತ್ಯಾದಿ. ಆಸ್ತಿಪಾಸ್ತಿಗೂ ಅನ್ವಯಿಸುತ್ತದೆ. ಬದುಕು ಎಂಬ ಶಬ್ದ ಕ್ರಿಯಾಪದವಾದರೆ ಅದಕ್ಕೆ ೧. ಪ್ರಾಣ ಹೋಗುವ ಸ್ಥಿತಿಗೆ ಬಂದಿದ್ದವನು ಆರೋಗ್ಯ ಪಡೆದ ಸ್ಥಿತಿಯನ್ನು ವರ್ಣಿಸುವ ಶಕ್ತಿ ಬರುತ್ತದೆ. ಸದ್ಯ ಅಪಘಾತಕ್ಕೆ ಸಿಕ್ಕಿಯೂ ಬದುಕಿದ ಎಂಬುದನ್ನು ಗಮನಿಸಿ. ೨. ಚೆನ್ನಾಗಿ ಬಾಳು, ಸ್ಥಿತಿವಂತನಾಗಿರು ಎಂದು ಅರ್ಥ. ಅವರ

ಮಕ್ಕಳು ಚೆನ್ನಾಗಿ ಬದುಕುತ್ತಾ ಇದ್ದಾರೆ ಎಂಬುದು ಉದಾಹರಣೆ. 'ಅವರ ಬದುಕು ಚೆನ್ನಾಗಿದೆ' ಎಂದರೆ ಅವರು ಬಾಳುವ ರೀತಿ ಚೆನ್ನಾಗಿದೆ ಎಂದರ್ಥ.

**ಕೆಲಸ** ಇದು ಯಾವ ಕಾರ್ಯ ಬೇಕಾದರೂ ಆಗಬಹುದು. ಉದ್ಯೋಗವೂ ಆಗಬಹುದು. 'ಅವನಿಗೆ ಇನ್ನೂ 'ಕೆಲಸ' ಸಿಕ್ಕಿಲ್ಲ' ಎಂಬ ವಾಕ್ಯವನ್ನು ನೋಡಿ.

**ದಗದು** ಇದು ಮರಾಠಿಯ ಶಬ್ದ. ಇದಕ್ಕೂ ಕೆಲಸ ಎಂದೇ ಅರ್ಥ.

**ಕಸಬು** ಇದು ಅರಬ್ಬೀ ಭಾಷೆಯಿಂದ ಬಂದ ಶಬ್ದ. ಅದಕ್ಕೆ ವೃತ್ತಿ ಎಂದರ್ಥ.

ಶಾಲೆಯಲ್ಲಿ ಕಲಿಸುವುದೇ ಅವನ ಕಸುಬಾಯಿತು ಎಂಬ ವಾಕ್ಯವನ್ನು ನೋಡಿ. ವ್ಯಂಗ್ಯವಾಗಿ ಮಾತನಾಡುವಾಗ ಕಸಬು ಎಂದರೆ ಸೂಳೆಗಾರಿಕೆ ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಇದೂ ಸಾಮಾನ್ಯವಾಗಿದೆ.

**ಬನಾವಟ್** ಎಂಬುದು ಹಿಂದೀ ಶಬ್ದ. ಇದಕ್ಕೆ ಜೋಡಿಸುವಿಕೆ, ಕಟ್ಟಡ, ಕೂಡಿಸುವಿಕೆ, ನೇಯ್ಗೆ ಮುಂತಾದ ಅರ್ಥಗಳಿವೆ. ಬನಾವಟೀ ಎಂದರೆ ಕೃತ್ರಿಮವಾದ ಅಂದರೆ artificialಎಂದರ್ಥ.

**ಬರಖಾಸ್ತು** ಇದು ಪಾರಸೀ ಭಾಷೆಯ ಶಬ್ದ. ಇದಕ್ಕೆ ಮುಗಿದ, ಕೊನೆಯಾದ, ಪೂರೈಸಿದ ಎಂದರ್ಥ. ಹಿಂದಿಯಲ್ಲಿ ಕೆಲಸದಿಂದ ತೆಗೆದ, dismiss ಮಾಡಿದ ಎಂದರ್ಥ. ಕನ್ನಡದಲ್ಲಿ ಸಭೆ, ಕಚೇರಿ ಮುಂತಾದುವು ಪೂರೈಸುವ ವಿಷಯವನ್ನು ತಿಳಿಸುತ್ತದೆ. ಸಭೆ ಬರ್‌ಖಾಸ್ತ್ ಆಯಿತು ಎಂಬಂತೆ. ಪಾರಸೀ ಭಾಷೆಯಲ್ಲಿ ಇದೇ ಅರ್ಥದಲ್ಲಿ ಬರಖವಾಸ್ ಎಂಬ ರೂಪವೂ ಇದೆ. ಅರಬ್ಬೀ ಭಾಷೆಯ ಬರಕತ್‌ಗೂ ಇದಕ್ಕೂ ಸಂಬಂಧವಿರಬೇಕು.

**ಬರಹ, ಬರೆಹ** ಬರೆ ಎಂದರೆ ಲೇಖನ ಮಾಡು. ಲಿಖಿಸು ಎಂದರ್ಥ. ಪ ಎನ್ನುವುದು ನಾಮಪದವನ್ನು ಮಾಡುವುದಕ್ಕೆಂದು ಹತ್ತಿಸುವ ಪ್ರತ್ಯಯ. ಬರೆ + ಪ = ಬರೆಪ ಎಂದಾಗುತ್ತದೆ. ಇದೇ ಬರಪ ಎಂಬ ರೂಪವನ್ನೂ ಪಡೆಯುತ್ತದೆ. ಕೇಶಿರಾಜನ ವ್ಯಾಕರಣ ಗ್ರಂಥದಲ್ಲಿಯೇ **ಬರೆಪಂಬೊಕುಚ್ಚರಿಸಲ್ಬಾರದುವಕ್ಕರಮಲ್ತವು ಘನಸ್ವನಾದಿ ಧ್ವನಿಗಳ್** ಎಂಬಲ್ಲಿ ಬರೆಪ ಶಬ್ದವನ್ನು ಉಪಯೋಗಿಸಿದ್ದಾನೆ. (ಶಬ್ದಮಣಿದರ್ಪಣ ೧೨) ಬರೆಪ ಎನ್ನುವುದು ಹೊಸಗನ್ನಡಕ್ಕೆ ಬರುವ ವೇಳೆಗೆ ಬರೆಹ ಮತ್ತು ಬರಹ ಎಂಬ ಎರಡೂ ರೂಪಗಳನ್ನು ಪಡೆದಿದೆ. ಪ್ರತ್ಯಯಗಳು ಸೇರಿದಾಗ ಹೊಸಗನ್ನಡದಲ್ಲಿ ಧಾತುವಿನ ಎಕಾರ ಲೋಪ ಸಾಮಾನ್ಯ. ಎರಡು ರೂಪಗಳೂ ಸರಿ. ಬರಹ ಹೆಚ್ಚು ಆಧುನಿಕ ರೂಪ.

**ಬರೋಬ್ಬರಿ** ಇದು ಪಾರಸೀ ಭಾಷೆಯ ಬರೋಬರ್ ಎಂಬ ಶಬ್ದದಿಂದ ಬಂದದ್ದು. ಕನ್ನಡದಲ್ಲಿ ಈ ಶಬ್ದಕ್ಕೆ ಬರಾಬರಿ, ಬರಾಬ್ಬರಿ, ಬರೇಬರಿ, ಬರೋಬ್ಬರಿ ಎಂಬ ಪರ್ಯಾಯ ರೂಪಗಳಿವೆ. ಈ ಶಬ್ದಕ್ಕೆ ಸಮಾನವಾಗಿ, ಸರಿಯಾಗಿ, ಅಚ್ಚುಕಟ್ಟಾಗಿ ಎಂದರ್ಥ. ಇದು ಔಚಿತ್ಯವನ್ನು ಕುರಿತು ಆಡುವ ಮಾತು. ಬ ಎಂಬ ಅಕ್ಷರವನ್ನು ಒತ್ತಕ್ಷರವಾಗಿ ಉಚ್ಚಾರಣೆ ಮಾಡುವುದು ಅವಧಾರಣೆಗಾಗಿ ಎಂದು ತಿಳಿಯಬೇಕು.

**ಬರ್ಬರ** ಇದು ಸಂಸ್ಕೃತದ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. *೧. ಅನಾಗರಿಕ. ಸುಸಂಸ್ಕೃತನಲ್ಲದ ವ್ಯಕ್ತಿ. ೨. ಅಸ್ಪಷ್ಟವಾದ ವಿಷಯ ೩. ಒಂದು ಬಗೆಯ ಪರಿಮಳ ೪. ಬೊಬ್ಬುಲಿ ಗಿಡ ೫. ಆರ್ಯರಲ್ಲದ ಒಂದು ಜನಾಂಗ ೬. ನೀಚ ೭. ದಡ್ಡ.* ಸಾಮಾನ್ಯವಾಗಿ ಅಸಂಸ್ಕೃತ ಶಬ್ದವನ್ನು ವ್ಯಕ್ತಿಗೂ ಅನಾಗರಿಕ, ಬರ್ಬರ ಶಬ್ದವನ್ನು ಕ್ರಿಯೆಗೂ ಹೆಚ್ಚಾಗಿ ಅನ್ವಯಿಸುತ್ತಾರೆ. ಕಾಶ್ಮೀರದಲ್ಲಿ ಭಯೋತ್ಪಾದಕರು ನರಮೇಧದಂಥ ಬರ್ಬರ ಕೃತ್ಯ ಎಸಗುತ್ತಿದ್ದಾರೆ ಎಂಬ ವಾಕ್ಯ ಗಮನಿಸಿ. ಬರ್ಬರ ಈ ಶಬ್ದಕ್ಕೆ ಸಂಸ್ಕೃತದಲ್ಲಿ ಪಾಮರ, ನೀಚ ಎಂದು ಮೊದಲ ಅರ್ಥ. ಸಂಸ್ಕೃತದ ವೈಜಯಂತೀ ಕೋಶದಲ್ಲಿ ಈ ಶಬ್ದಕ್ಕೆ ವಿವರವಾದ ಅರ್ಥವನ್ನು ನೀಡಿದ್ದಾನೆ. ಯವನ ಎಂದರೆ ಪರದೇಶದವನು. ಅವನಿಗೆ ತೀವರಿಯಲ್ಲಿ ಹುಟ್ಟಿದವನು ಬರ್ಬರ. ತೀವರಿ ಎಂದರೆ ಬೆಸ್ತ ಹೆಂಗಸಿಗೆ ಬ್ರಾಹ್ಮಣನಿಂದ

ಹುಟ್ಟಿದವಳು. ಈ ವಿವರಣೆ ನಿಘಂಟುಗಳಲ್ಲಿ ಇರಬಹುದು. ಆದರೆ ನಿರ್ಧರಿಸುವುದು ಕಷ್ಟ. ಬರ್ಬರ ಶಬ್ದಕ್ಕೆ ಮುಂಗುರುಳು, ಗುಂಗುರು ಕೂದಲು ಎಂಬ ಅರ್ಥವೂ ಇದೆ.

**ಬಲವಂತ ಮಾಘ ಸ್ನಾನ** ಮಾಘ ಎನ್ನುವುದು ಚಾಂದ್ರಮಾನದ ಒಂದು ಮಾಸದ ಹೆಸರು. ಯಾವ ಮಾಸದಲ್ಲಿ ಮಘಾ ನಕ್ಷತ್ರದಿಂದ ಕೂಡಿದ ಹುಣ್ಣಿಮೆ ಬರುತ್ತದೋ ಅದು ಮಾಘ ಮಾಸ. ಈ ತಿಂಗಳಿನಲ್ಲಿ ತೀರ್ಥ ಕ್ಷೇತ್ರಗಳಲ್ಲಿ ನದೀಸ್ನಾನ ಮಾಡುವುದು ತುಂಬ ಪುಣ್ಯದಾಯಕವೆಂದು ನಂಬಿಕೆಯಿದೆ. ಇದು ಸಾಮಾನ್ಯವಾಗಿ ಜನವರಿ ಅಥವಾ ಫೆಬ್ರುವರಿ ತಿಂಗಳುಗಳಲ್ಲಿ ಬರುವುದರಿಂದ ಇನ್ನೂ ಚಳಿ ಹೆಚ್ಚಾಗಿರುತ್ತದೆ. ಆಗ ನದಿಯಲ್ಲಿ ಮುಳುಗಿ ಸ್ನಾನ ಮಾಡಬೇಕಾದರೆ ಗಾಢವಾದ ನಂಬಿಕೆ, ಶ್ರದ್ಧೆ ಇರಬೇಕು. ಅಂಥವರು ಮಾಡುವ ಸ್ನಾನದಿಂದ ಪುಣ್ಯ ಬರಬಹುದು. ಆದರೆ ಅಂಥ ನಂಬಿಕೆಯಿಲ್ಲದವರನ್ನು ಎಳೆದುಕೊಂಡು ಹೋಗಿ ಒತ್ತಾಯದಿಂದ ಸ್ನಾನ ಮಾಡಿಸಿದರೂ ಏನೂ ಪ್ರಯೋಜನವಾಗುವುದಿಲ್ಲ. ಎಳೆದುಕೊಂಡು ಹೋದವರಿಗೂ ಪುಣ್ಯವಿಲ್ಲ. ಹಾಗೆ ಬಲವಂತಕ್ಕೆ ಮಣಿದು ಸ್ನಾನ ಮಾಡಿದವರಿಗೂ ಪುಣ್ಯ ಬರುವುದಿಲ್ಲ. ಹೀಗಿರುವುದರಿಂದ ಬಲವಂತ ಮಾಘಸ್ನಾನ ಎನ್ನುವುದಕ್ಕೆ ವ್ಯರ್ಥವಾದ ಕಾರ್ಯ, ಫಲವಿಲ್ಲದ ಕೆಲಸ ಎಂಬ ಅರ್ಥ ಬಂದು ಬಿಟ್ಟಿದೆ. ಹಿಂದೂ ಜನರಲ್ಲಿ ಮಾಘಸ್ನಾನಕ್ಕೆ ಬಹಳ ಪ್ರಾಧಾನ್ಯವಿದೆ ಎನ್ನುವುದಕ್ಕೆ **ಮಾಘ ಸ್ನಾನ ವಿಧಿ, ಮಾಘೋದ್ಯಾಪನಾ** ಎಂಬ ಸಂಸ್ಕೃತ ಗ್ರಂಥಗಳಿರುವುದೇ ಸಾಕ್ಷಿ.

**ಬಲಾಹಕ** ಇದಕ್ಕೆ ಮೋಡ ಎಂದರ್ಥ. ಅಭ್ರ, ಮೇಘ, ವಾರಿವಾಹ ಮುಂತಾಗಿ ೧೫ ಇತರ ಹೆಸರುಗಳಿವೆ. ಜೊತೆಗೆ ಇತರ ಶಬ್ದಗಳನ್ನೂ ರಚಿಸಬಹುದು. ಬಲಾಹಕ ಎನ್ನುವ ಶಬ್ದಕ್ಕೆ ನೀರನ್ನು ಹೊಂದಿರುವುದು ಎಂದು ಅರ್ಥ. ಬಲಾಹ ಎಂಬುದಕ್ಕೆ ನೀರು ಎಂದು ಅರ್ಥವಿದೆ. ಬಲಹಕ ಎಂಬುದು ತಪ್ಪು ಶಬ್ದ.

**ಬಲಿದಾನ** ಇದು ಸಂಸ್ಕೃತ ಶಬ್ದ. ಇದಕ್ಕೆ ಅರ್ಥ, ತಮ್ಮ ಅಪೇಕ್ಷೆಯನ್ನು ಸಾಧನೆ ಮಾಡಲು ದೇವತೆಗಳಿಗೆ ಪ್ರಾಣಿಗಳನ್ನು ಕೊಂದು ಅರ್ಪಿಸುವುದು ಎಂದು ಅರ್ಥ. ಇದರಿಂದ ಪಾಪವೂ ಬರುತ್ತದೆ. ಭಾರತದ ಸ್ವಾತಂತ್ರ್ಯ ಸಮರದ ಚರಿತ್ರೆಯಲ್ಲಿ ಈ ಶಬ್ದಕ್ಕೆ ಆತ್ಮಾಹುತಿ ಎಂಬ ಅರ್ಥವೂ ಬಂದು ಸೇರಿಕೊಂಡಿತು.

**ಬಸದಿ** ಇದು ಜೈನರ ದೇವಾಲಯಗಳಿಗೆ ಅನ್ವಯಿಸುವ ಶಬ್ದ. ಸಂಸ್ಕೃತದ **ವಸತಿ** ಪ್ರಾಕೃತದಲ್ಲಿ ವಸಇ ಎಂದಾಗುತ್ತದೆ. ಅಲ್ಲಿಂದ ಕನ್ನಡದಲ್ಲಿ ಬಸದಿ ಎಂದು ತದ್ಭವವಾಗಿದೆ.

**ಬಸವಣ್ಣನವರು** ಈ ಬಗ್ಗೆ ಮಾದರಿಗಾಗಿ ಒಂದು ಕಿರು ಪ್ರಬಂಧವನ್ನು ರಚಿಸಿಕೊಡಿ ಎಂಬುದಕ್ಕೆ ಉತ್ತರ.

ಕಾಯಕವೇ ಕೈಲಾಸವೆಂದು ಸಾರಿದ ಮಹಾವ್ಯಕ್ತಿಯ ಜೀವನದಲ್ಲಿ ಆ ಮಾತಿನ ದೃಷ್ಟಾಂತವೇ ನಿರ್ಮಾಣವಾಯಿತು. ಕಾಯಕವನ್ನು ಅರಿಯದ, ಅದರ ಅರ್ಥವನ್ನು ಅರಿಯದ ಸಾಮಾನ್ಯರು ತಮ್ಮ ಜನ್ಮಬಲ, ಅಧಿಕಾರಬಲ, ಐಶ್ವರ್ಯ ಬಲಗಳಿಂದ ನಾಡಿನ ಪ್ರಗತಿಗೆ ಅಡ್ಡಿಯಾಗಿದ್ದಾಗ ಬಸವಣ್ಣನವರು ಈ ತತ್ವವನ್ನು ಸಾರಿದರು. ಇದರಿಂದ ನಿಜವಾಗಿ ದುಡಿಮೆಯನ್ನೇ ದೇವರೆಂದು ನಂಬಿದ್ದ ಅನೇಕರ ಬದುಕಿಗೆ ಆಸರೆ ಸಿಕ್ಕಿತು. ಶ್ರಮಪಡುವುದು ಕೀಳಲ್ಲವೆಂಬ ಭಾವನೆಯೂ ಯಾವ ದುಡಿಮೆಯೂ ಕಡಿಮೆಯಲ್ಲವೆಂಬ ತಿಳಿವೂ ಜನರಲ್ಲಿ ಬೇರೂರಿತು. ಬಾಳು ಸಮೃದ್ಧವಾಯಿತು. ಸ್ತ್ರೀ ಪುರುಷಸಮಾನತೆಯನ್ನು ಸಾರಿ ಬಸವಣ್ಣನವರು ಬೇರೊಂದು ಯುಗವನ್ನೇ ಪ್ರಾರಂಭಿಸಿದರು. ಸಂಸಾರದ ಆಗುಹೋಗುಗಳಿಗೆ ಸಮಾನ ಕರ್ತವ್ಯವನ್ನೂ ಬಾಧ್ಯತೆಯನ್ನೂ ಹಂಚಿದುದರಿಂದ ಕುಟುಂಬದ ತೇರು ಹೆಚ್ಚು ಸುಗಮವಾಗಿ ಸರಿಯಲಾರಂಭಿಸಿತು. ಸಕಲಜಾತಿಗಳ ಸಮಾನತೆಯನ್ನು ಬೋಧಿಸಿ ಬಸವಣ್ಣನವರು ಮತ್ತೂ ಒಂದು ಸತ್ವವನ್ನು

ಸಾಕ್ಷಾತ್ಕರಿಸಿಕೊಟ್ಟರು. ಅನುಭವ ಮಂಟಪದಲ್ಲಿ ಎಲ್ಲ ಕಾಯಕದ ಎಲ್ಲ ಜಾತಿಯ ಸ್ತ್ರೀ ಪುರುಷರು ಅವರವರ ಭಕ್ತಿಪಾರವಶ್ಯವನ್ನು ಮೆರೆದು ಲೋಕಕಲ್ಯಾಣವನ್ನು ಸಾಧಿಸಿದರು. ಕಲ್ಯಾಣವು ಕರ್ನಾಟಕದ ಕಲ್ಯಾಣಕ್ಕೆ ಬುನಾದಿಯನ್ನು ಹಾಕಿತು. ಇದಲ್ಲದೆ ಮಾನವನ ಬಾಳಿಗೆ ಬೇಕಾದ ಇತರ ಅನೇಕ ಮಾರ್ಗದರ್ಶನವನ್ನು ಬಸವಣ್ಣನವರು ತಮ್ಮ ವಚನಗಳ ಮೂಲಕ ನಾಡಿಗೆ ಬಿಟ್ಟು ಹೋಗಿದ್ದಾರೆ. ಸಾಹಿತ್ಯದ ದೃಷ್ಟಿಯಿಂದ ಈ ವಚನಗಳು ಕನ್ನಡದ ಗದ್ಯದ ಬೆಳವಣಿಗೆಗೆ ಭಾಷೆಯ ಅಭಿವೃದ್ಧಿಗೆ ಅಪಾರವಾದ ಸಹಾಯವನ್ನು ಒದಗಿಸಿದುವು. ವಚನಗಳನ್ನು ಕೇವಲ ಶಾಸ್ತ್ರವೆಂದು ಕರೆದುಬಿಟ್ಟರೆ ಅವುಗಳ ಪ್ರಯೋಜನ ಸೀಮಿತ. ಸಾಹಿತ್ಯವೆಂದು ಕರೆದು ಆ ಅರ್ಥದಲ್ಲಿ ಓದಿದರೆ ಪ್ರಯೋಜನ ಅಧಿಕ.

ಬಸವಣ್ಣನವರು ಒಂದು ಪಂಥಕ್ಕೆ ಸೇರಿದ ವ್ಯಕ್ತಿಯಲ್ಲ, ಒಟ್ಟು ನಾಡಿನ ಪುಣ್ಯ. ಯಾರಾದರೂ ಅವರನ್ನು ತಮಗೆ ಮಾತ್ರ ಅಳವಡಿಸಿಕೊಳ್ಳಲು ಪ್ರಯತ್ನ ಪಟ್ಟರೆ ಅವರನ್ನು ನಾವು ಸ್ವಾರ್ಥಿಗಳೆಂದು ಕರೆಯಬೇಕು. ಮತ್ತಾರಾದರೂ ಬಸವಣ್ಣನವರು ನಮಗೆ ಸೇರಿದವರಲ್ಲವೆಂದರೆ ಅವರನ್ನು ಆತ್ಮ ವಂಚಕರೆಂದು ಕರೆಯಬೇಕು.

ವಿಶ್ವಮಾನವರಾಗಿ ಬಾಳಿದ ಬಸವಣ್ಣನವರ ವಾಣಿ ಕನ್ನಡ ಭಾಷೆಯಲ್ಲಿರುವುದೇ ನಮಗೊಂದು ಹೆಮ್ಮೆ; ಅದನ್ನು ಓದಿ ಪವಿತ್ರಾತ್ಮರಾಗಿ ಬಾಳುವುದು ನಮ್ಮ ಜನರ ಆದ್ಯ ಕರ್ತವ್ಯ.

ಇದು ಒಂದು ಪ್ರಯತ್ನ ಅಷ್ಟೆ! ಹೀಗೆ ಆಗಾಗ ಸಂಗ್ರಹವಾಗಿ ಬರೆಯುವ ಪ್ರಯತ್ನಗಳನ್ನು ಮಾಡಿ ಸತ್ವವನ್ನು ಬೆಳೆಸಿಕೊಳ್ಳಬೇಕು. ಹೀಗೆ ಬರೆಯಲು ಪ್ರಯತ್ನ ಪಡುವ ಮೊದಲು ಆ ಮಹಾಚೇತನಗಳ ಕಾರ್ಯ ಸಾಧನೆಗಳನ್ನು ತಿಳಿಯಬೇಕು. ಅವರ ಸಾಹಿತ್ಯವನ್ನು ಓದಿ ಅರ್ಥಮಾಡಿಕೊಳ್ಳಬೇಕು; ಆಗ ಅವರ ಸತ್ವ ಮನದಟ್ಟಾಗಿ ಅವರ ಬಗ್ಗೆ ಬರೆಯಲು ಅನುಕೂಲವಾಗುತ್ತದೆ. ಬರೆದದ್ದನ್ನು ಓದಿ, ತಿದ್ದುವುದರಿಂದ ಬರವಣಿಗೆಗೆ ಬಿಗಿ ಬರುತ್ತದೆ.

**ಬಹಲ - ಜಾಸ್ತಿ** ಬಹಲ—ಬಹಳ ಎರಡೂ ಸಂಸ್ಕೃತ ಶಬ್ದಗಳು. ಅರ್ಥಗಳು: *೧. ಹೇರಳವಾದ, ಅಧಿಕವಾದ ೨. ದಪ್ಪವಾದ, ಗಾತ್ರವಾದ ೩. ಕರ್ಕಶವಾದ ೪. ದೃಢವಾದ.* ಇದು ಗುಣವಾಚಕ. ಇಷ್ಟನ್ನು ತಿಳಿದು ಈ ಶಬ್ದವನ್ನು ಉಪಯೋಗಿಸಬೇಕು. ಬಹುಳದಿಂದ ಬಹಳ ಬಂದಿದೆ. ಅದು ಸಂಸ್ಕೃತ ಶಬ್ದ. ಜಾಸ್ತಿ ಹಿಂದೀ ಶಬ್ದ. ಇದು ಸಂಸ್ಕೃತದ ಜ್ಯೇಷ್ಠದಿಂದ ಬಂದಿದೆ ಎನ್ನುತ್ತಾರೆ. ಅದಕ್ಕೂ ಬಹಳ ಎಂದೇ ಅರ್ಥ. ಬಹಳ ಜಾಸ್ತಿ ಎಂದೂ ಹೇಳುವುದುಂಟು. ತುಂಬ ಹೆಚ್ಚು ಎಂದಂತೆ. ಒಂದು ವಿಧವಾದ ದ್ವಿರುಕ್ತಿ. ಅವುಗಳಲ್ಲಿ ಸರಿ ತಪ್ಪುಗಳನ್ನು ಹುಡುಕುವುದಕ್ಕಿಂತ ಪ್ರಯೋಗದಲ್ಲಿರುವ ಪ್ರಯೋಜನಗಳನ್ನು ತಿಳಿದುಕೊಳ್ಳಬೇಕು.

**ಬಹಳಷ್ಟು** ಈ ಶಬ್ದ ಬಹಳವಾಗಿ ಪ್ರಯೋಗದಲ್ಲಿದೆ. ಇದು ಪ್ರಯೋಗಕ್ಕೆ ಬಂದು ನಿಂತಿರುವುದು ಭಾಷೆಯಲ್ಲಿ ನಡೆಯುವ ವಿಚಿತ್ರ ವ್ಯವಹಾರದ ಒಂದು ದೃಷ್ಟಾಂತ. ಸ್ವಲ್ಪಷ್ಟು, ಕೆಲವಷ್ಟು, ಹಲವಷ್ಟು ಎಂಬ ಶಬ್ದಗಳು ಪ್ರಯೋಗದಲ್ಲಿಲ್ಲ. ಆದರೆ ಇನ್ನಷ್ಟು, ಮತ್ತಷ್ಟು, ಅಷ್ಟಿಷ್ಟು ಮುಂತಾದುವು ಪ್ರಯೋಗದಲ್ಲಿವೆ. ಯಾವಾಗಲೋ ಬಹಳವಾಗಿ ಎಂದು ಪ್ರಯೋಗಿಸುವ ಬದಲು ಈ ಬಹಳಷ್ಟು ಎಂಬುದನ್ನೇ ಪ್ರಯೋಗ ಮಾಡಿರಬೇಕು. ಅದರ ಹೊಸತನದಿಂದಲೇ ಅದು ಬದುಕಿದೆ. ಅದು ತಪ್ಪು ಶಬ್ದ.

**ಬಹಿರ್ದೆಸೆ** ಈ ಶಬ್ದವು ಸಂಸ್ಕೃತದ ಬಹಿರ್ದಿಶಾ ಎಂಬ ಶಬ್ದದ ತದ್ಭವ. ಶಬ್ದಕ್ಕೆ ಅರ್ಥ ಹೊರಭಾಗ, ಹೊರಗಿನ ಸ್ಥಳ ಎಂದು. ಆದರೆ ಇದನ್ನು ಮಲಮೂತ್ರ ವಿಸರ್ಜನೆಯ ಕಾರ್ಯಕ್ಕೆ ಅನ್ವಯಿಸಲು ಉಪಯೋಗಿಸುತ್ತಾರೆ. ಅವನು ಹೊರಕ್ಕೆ ಹೋಗಿದ್ದಾನೆ. ಮಗು

ಹೊರಕ್ಕೆ ಹೋಗಿದೆ ಎಂದು ಹೇಳಿದಾಗಲು ಇದೇ ಅರ್ಥ. ಮಲವಿಸರ್ಜನೆ, ಪಾಯಿಖಾನೆ ಮಾಡು ಎಂಬ ಮಾತುಗಳನ್ನು ಉಪಯೋಗಿಸುವುದು ಅಷ್ಟು ಮರ್ಯಾದೆಯಲ್ಲವೆಂದು ಹೀಗೆ ಭಾಷೆಯಲ್ಲಿ ಬೇರೆ ಶಬ್ದಗಳನ್ನು ಉಪಯೋಗಿಸುತ್ತಾರೆ. ಬಹಿರ್ದೇಶ ಎಂದರೂ ಇದೇ ಅರ್ಥ. ಹೀಗೆ ಹೇಳುವುದು ಒರಟು ಮಾತಿಗೆ, ಅತಿ ಗ್ರಾಮ್ಯ ಪ್ರಯೋಗಕ್ಕೆ ವಿರುದ್ಧವಾದುದು. ಅವನು ಸತ್ತ ಎಂಬುದನ್ನು ತಿಳಿಸಬೇಕಾದರೆ ಸಾಮಾನ್ಯವಾಗಿ ಸ್ವರ್ಗಸ್ಥನಾದ, ವೈಕುಂಠವಾಸಿಯಾದ, ಕೊನೆಯುಸಿರೆಳೆದ, ತೀರಿಕೊಂಡ, ದೇವರ ಕರೆಗೆ ಓಗೊಟ್ಟ ಎನ್ನುತ್ತಾರೆ. ಹಾಗಿಲ್ಲದೆ ಒರಟಾಗಿ ಗೋತ ಹೊಡೆದ, ನೆಗೆದುಬಿದ್ದ, ಕಂತೆ ಒಗೆದ, ಮಣ್ಣು ತಿಂದ ಎಂದೂ ಹೇಳುವುದುಂಟು. ಈ ಎರಡು ಬಗೆಯ ಮಾತುಗಳಿಗೆ ಇಂಗ್ಲಿಷಿನಲ್ಲಿ ಎರಡು ಬೇರೆ ಬೇರೆ ಹೆಸರುಗಳಿವೆ. ಮೊದಲನೆಯದು ಒಳ್ಳೆಯ ಅರ್ಥವುಳ್ಳ ಶಬ್ದಗಳ ಪ್ರಯೋಗ. ಇದೇ Euphemism. ಕನ್ನಡದಲ್ಲಿ ಇದನ್ನು ಸೌವ್ಯೋಕ್ತಿ ಎಂದು ಕರೆಯುತ್ತಾರೆ. ರಾಬರ್ಟ್ ಬ್ರೌನಿಂಗ್ ಕವಿಯ ಪರಮ ಸ್ನೇಹಿತನೊಬ್ಬನು ಭ್ರಮೆ ಹೊಂದಿದಾಗ ಅವನು ಹೇಳಿದ ಮಾತು ''Discord fell on the music of his soul; the sweet sounds and wandering lights departed from him.'' ಮೈಸೂರಿನ ಮಹಾರಾಜರಾಗಿದ್ದ ಚಾಮರಾಜ ಒಡೆಯರು ತೀರಿಕೊಂಡಾಗ ಎಸ್.ಜಿ. ನರಸಿಂಹಾಚಾರ್ಯರು ಬರೆದ ಪದ್ಯಗಳಲ್ಲಿ ಒಂದು ಹೀಗಿದೆ:

*ವೀಣೆಗಳು ಮುಸುಕಿಟ್ಟು ಮೌನದಿ*
*ಕೋಣೆಯೊಳಗಡಗಿದುವು ಬನ್ನನೆ*
*ಜಾಣಳಿದು ನಾಟಕಗಳುಳಿದುವು ತೆರೆಯ ಮರೆಯೊಳಗೆ*
*ವಾಣಿ ಮೈಗರೆದಳು ಕವೀಂದ್ರರ*
*ಗೋಣನೆಡೆಯೊಳು ತನಗೆ ನಿಲವನು*
*ಕಾಣದಕಟಾ ರಾಜ್ಯಲಕ್ಷ್ಮಿಯು ಮರುಗಿ ಕೊರಗಿದಳು.*

ಹೀಗೆ ಹೇಳುವುದಕ್ಕೆ ಬದಲಾಗಿ ಒರಟೊರಟಾಗಿ ಹೇಳುವುದಕ್ಕೆ ಇಂಗ್ಲಿಷಿನಲ್ಲಿ Parrhesia ಎಂದು ಕರೆಯುತ್ತಾರೆ. ಅದನ್ನು ಪರುಷೋಕ್ತಿ ಎನ್ನಬಹುದು.

**ಬಹಿಷ್ಕಾರ** ಬಹಿಷ್ಕಾರ ಎಂದರೆ ಧಾರ್ಮಿಕ ದೃಷ್ಟಿಯಿಂದ ತಪ್ಪು ಮಾಡಿದವರನ್ನು ಜಾತಿ, ಮತ, ದೇಶ ಮುಂತಾದುವುಗಳಿಂದ ಹೊರಕ್ಕೆ ಓಡಿಸುವುದು. ಇದು ವಿಶೇಷವಾದ ಶಿಕ್ಷೆ.

**ಬಹುಶಃ** ಎನ್ನುವ ಶಬ್ದಕ್ಕೆ ಕೊನೆಯಲ್ಲಿ ವಿಸರ್ಗದ ಬದಲು ಹ ಎಂದೇಕೆ ಬರೆಯಬಾರದು? ಸಂಸ್ಕೃತದ ಅವ್ಯಯಗಳಲ್ಲಿ ನಿಶ್ಚಿತ ರೂಪಗಳಿರುತ್ತವೆ. ಅವನ್ನು ಬದಲಾಯಿಸಿ ಬರೆಯಲಾಗುವುದಿಲ್ಲ. ಹಾಗೆ ಬರೆದರೆ ಅದು ತಪ್ಪು. ಉಭಯತಃ, ಕುತಃ, ಪರಿತಃ, ಪ್ರಾಯಃ, ಬಹಿಃ, ಸರ್ವತಃ, ಪುನಃ ಇವುಗಳ ಹಾಗೆ ಬಹುಶಃ. ಹಾಗೆಯೇ ವಿನಾ ಎಂಬುದು ಆಕಾರಾಂತವಾದುದು, ಅದನ್ನು ವಿನಹ ಎಂದು ಬರೆಯಬಾರದು. ಈ ಶಬ್ದಗಳಿಂದ ತದ್ಭವಗಳನ್ನು ಮಾಡಲಾಗುವುದಿಲ್ಲ. ಬೇಕಾದರೆ ಈ ಶಬ್ದಗಳ ಪ್ರಯೋಗ ಬಿಡಬಹುದು.

**ಬಳಕೆ** ಎನ್ನುವುದು ಕನ್ನಡದ ಶಬ್ದ. ಬಳಸು ಎಂದರೆ ಯಾವುದಾದರೂ ಕೆಲಸಕ್ಕೆ ಬರುವಂತೆ ಹೊಂದಿಸು, ಸಾಧನವಾಗಿಸು, ಭೋಗಿಸು, ಅನುಭವಿಸು ಎಂಬ ಅರ್ಥಗಳು ಬರುತ್ತವೆ. ಬಳಸು ಹೊಸಗನ್ನಡ ಶಬ್ದ. ಇದು ಹಳಗನ್ನಡದ ಬೞಸು ಎಂಬುದರ ಪರ್ಯಾಯ ರೂಪ. ಬಳಸು ಎಂಬುದು ನಾಮಪದವಾಗಿಯೂ ಪ್ರಯೋಗವಾಗುತ್ತದೆ. ಆಗ ಅದಕ್ಕೆ ಉಪಯೋಗ ಎಂದೇ ಅರ್ಥ.

**ಬಳಲ್ವ** ಆಯಾಸ ಪಡುವ ಎಂದರ್ಥ. ಬಳಲು = ಆಯಾಸಪಡು. ಹಳಗನ್ನಡ ಬೞಲ್ ಎಂಬ

ಶಬ್ದದಿಂದ ಇದು ಬಂದಿದೆ. ರನ್ನನ ಗದಾಯುದ್ಧದಲ್ಲಿ ರವಿಸುತ ಮಱಿವಿಂದಿರ್ದಪೆಯೋ ಬೞಲ್ದಿರ್ದಪೆಯೋ ಎಂಬ ಪ್ರಯೋಗ ಬರುತ್ತದೆ. ಓದಿ ನೋಡಿ.

**ಬಳೆದು, ಬೆಳೆದು** ಹಳಗನ್ನಡದಲ್ಲಿ ಬಳೆ ಬೆಳೆ ಎಂಬ ಎರಡು ಧಾತುಗಳಿಗೆ ಅರ್ಥದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಮಾನವರು, ಪಶು, ಪಕ್ಷಿ ಮುಂತಾದುವು ವೃದ್ಧಿ ಹೊಂದುವುದಕ್ಕೆ ಬಳೆ ಎಂದೂ, ಸಸ್ಯಗಳಿಗೆ ಬೆಳೆಯೆಂದೂ ಉಪಯೋಗಿಸಬೇಕೆಂದು ಕೇಶಿರಾಜನೆಂಬ ವೈಯಾಕರಣನು ಹೇಳಿದ್ದಾನೆ. ಆದರೆ ಬಹು ಹಿಂದೆ ಇದ್ದ ಈ ವ್ಯತ್ಯಾಸ ಈಗ ಮಾಯವಾಗಿದೆ. ಅಲ್ಲದೆ ಬಳೆ ಎಂಬ ಧಾತುರೂಪದ ಉಪಯೋಗವೇ ಈಗೀಗ ಕಾಣದಾಗುತ್ತಿದೆ. ಎಲ್ಲ ಕಡೆಗಳಲ್ಲಿ ಬೆಳೆ ಎಂಬ ಧಾತುವನ್ನೇ ಉಪಯೋಗಿಸಲಾಗುತ್ತಿದೆ.

**ಬಾಗಿನ** ಮದುವೆ, ಹಬ್ಬ, ವ್ರತ, ದೇವಕಾರ್ಯಾದಿಗಳು ನೆರವೇರಿದಾಗ ದಂಪತಿಗೂ ಮುತ್ತೈದೆ ಬ್ರಾಹ್ಮಣರಿಗೂ ಆಹಾರ ಪದಾರ್ಥ ಮುಂತಾದುವುಗಳನ್ನು ದಾನವಾಗಿ ಕೊಡುವುದು. ಈ ಶಬ್ದಕ್ಕೆ ಬಾಯಿನ, ಬಾಯನ ಎಂಬ ಪರ್ಯಾಯ ಶಬ್ದಗಳಿವೆ. ಇದು ಸಂಸ್ಕೃತದ ವಾಯನ ಎಂಬ ಶಬ್ದದ ತದ್ಭವ.

**ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ** ಇದು ತುಂಬ ಸೊಗಸಾದ ಕೀರ್ತನೆ. ಇಲ್ಲಿ ಉಡುಪಿಯ ಕೃಷ್ಣ ಬಾಗಿಲ ಹಿಂದೆ ಕುಳಿತಿದ್ದಾನೆ. ಅವನಿಗೆ ಸೇವೆ ಮಾಡುವುದು ಕನಕದಾಸರಿಗೆ ಅಸಾಧ್ಯವಾಗಿದೆ. ಸೇವೆ ಎಂಬುದಕ್ಕೆ ಮೂಲ ಸಂಸ್ಕೃತದ ಸೇವಾ. ಇದಕ್ಕೆ ಅರ್ಥ ೧. ಉಪಚಾರ, ಶುಶ್ರೂಷೆ ೨. ಸ್ತೋತ್ರ. ಆದುದರಿಂದ ದೇವರಿಗೆ ಸೇವೆ ಮಾಡುವುದನ್ನು ಸಾಧ್ಯವಾಗಿ ಮಾಡಬೇಕೆಂದು ಕನಕದಾಸರ ಆಸೆ. ಸೇವೆಯನು ಕೊಡು ಎಂದರೆ ಸೇವಾವಕಾಶವನ್ನು ಮಾಡಿಕೊಡು. ನನಗೂ ನಿನಗೂ ಮಧ್ಯೆ ಇರುವ ಈ ಬಾಗಿಲ ಕದವನ್ನು ತೆಗೆ, ಇರದಂತೆ ಮಾಡು ಎಂದೇ ಅದರ ಅರ್ಥ. ಸಂಪ್ರದಾಯದಲ್ಲಿ ಕೂಡ ಈ ಕೀರ್ತನೆಯನ್ನು ಹಾಡಿದ ಮೇಲೆಯೇ ಕನಕನಿಗೆ ದೇವರ ದರ್ಶನವಾದದ್ದು ಎಂಬ ನಂಬಿಕೆಯಿದೆ. **ಕೊಡು** ಎಂಬ ಶಬ್ದಕ್ಕೆ **ತೆಗೆದುಕೋ** ಎಂಬ ಅರ್ಥ ಬರುವಂತೆ ರಚಿಸಿರುವ ಈ ಕೀರ್ತನೆಯ ಸ್ವಾರಸ್ಯ ತುಂಬ ರಮ್ಯವಾದುದು.

**ಬಾಜಂತ್ರಿ** ಇದು ಮರಾಠಿಯ ವಾಜಂತ್ರಿ ಶಬ್ದದ ಕನ್ನಡ ರೂಪ. ಈ ಎರಡೂ ಸಂಸ್ಕೃತದ ವಾದಿತ್ರ ಶಬ್ದದ ತದ್ಭವಗಳು. ವಾದಿತ್ರ ಎಂದರೆ ವಾದನ ಮಾಡುವ ಸಂಗೀತದ ವಾದ್ಯ, ಬಾಜಿಸುವ ವಾದ್ಯ ಅಥವಾ ಬಾರಿಸುವ ವಾದ್ಯ. ಇದು ಕನ್ನಡದಲ್ಲಿ ಬಜಂತ್ರಿ ಎಂದಾಗಿದೆ, ಬಾಜಾಬಜಂತ್ರಿ ಎಂಬಂತೆಯೂ ಉಪಯೋಗವಾಗುತ್ತಿದೆ. ಬಾಜಿಸುತ್ತಿರುವ = ಶಬ್ದ ಮಾಡುತ್ತಿರುವ, ಬಾಜಿಸುವ ವಾದ್ಯಗಳು ಎಂದರ್ಥ.

**ಬಾಜನೆಗಬ್ಬ** ಇದು ವಾದ್ಯಗಳಲ್ಲಿ ಒಂದನ್ನೋ ಎರಡನ್ನೋ ಹಿಮ್ಮೇಳವಾಗಿ ನುಡಿಸುತ್ತ ಬಾಯಿಯಲ್ಲಿ ಹೇಳುವ ಕಾವ್ಯ. ಇದೊಂದು ಜಾನಪದ ಕಾವ್ಯ ಪ್ರಕಾರ.

**ಬಾಜೂ** ಈ ಶಬ್ದ ಪಾರಸೀ ಭಾಷೆಯ ಬಾಝುೞ್ =ಒಂದು ಪಕ್ಕ ಎಂಬ ಶಬ್ದದಿಂದ ಬಂದಿದೆ. ಇದಕ್ಕೂ ಸಂಸ್ಕೃತದ ಬಾಹು ಶಬ್ದಕ್ಕೂ ಸಂಬಂಧವಿದೆ ಎನ್ನುತ್ತಾರೆ. ಗಾಡಿ ಹೊಡೆಯುವ ಮುಸಲ್ಮಾನರೂ ಅವರನ್ನು ಅನುಸರಿಸಿ ಇತರರೂ ಅಡ್ಡಲಾಗಿ ಬರುವವರಿಗೆ ಎಚ್ಚರಿಕೆ ನೀಡಲು ಬಾಜೂ ಎಂದು ಗಟ್ಟಿಯಾಗಿ ಕಿರುಚುವುದನ್ನು ಎಲ್ಲರೂ ಕೇಳಿರಬಹುದು. ಒಂದು ಕಡೆಗೆ ಹೋಗಿ, ಆ ಪಕ್ಕ ಹೋಗಿ ಎಂದರ್ಥ.

**ಬಾಣಸ ವಿದ್ಯೆ** ಸಂಸ್ಕೃತದಲ್ಲಿ ಮಹಾನಸ ಎಂಬ ಶಬ್ದವಿದೆ. ಅದಕ್ಕೆ ದೊಡ್ಡ ಪಾಕಶಾಲೆ ಅಥವಾ ಅಡುಗೆಯ ಮನೆ ಎಂದರ್ಥ. ಅದರ ತದ್ಭವ ಬಾಣಸ. ಬಾಣಸ ವಿದ್ಯೆ ಎಂದರೆ ಅಡುಗೆಯನ್ನು ಮಾಡುವ ವಿಧಾನವನ್ನು ಕಲಿಸುವ ಶಾಸ್ತ್ರ, ಪಾಕಶಾಸ್ತ್ರ. ಬಾಣಸು ಎಂಬ ಶಬ್ದವು ಕನ್ನಡ ಕಾವ್ಯಗಳಲ್ಲಿ ಪ್ರಯೋಗವಾಗಿದೆ. ಇದಕ್ಕೆ ಅಡುಗೆಯ ಮನೆ ಎಂದೇ ಅರ್ಥ.

ಜನ್ನನ ಯಶೋಧರ ಚರಿತೆಯಲ್ಲಿ **ಪಸಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ** ಎಂಬ ಪ್ರಯೋಗವನ್ನು ಗಮನಿಸಿ. ಬಾಣಸಿಗ ಎಂದರೆ ಅಡುಗೆಯವನು. ಭೀಮನು ವಿರಾಟರಾಜನ ಅರಮನೆಯಲ್ಲಿ ಬಾಣಸಿಗನಾಗಿದ್ದನು ಎಂಬ ವಾಕ್ಯ ಗಮನಿಸಿ.

**ಬಾದರಾಯಣ ಸಂಬಂಧ** ಎಲ್ಲಿ ಯಾವ ಸಂಬಂಧವೂ ಇಲ್ಲವೋ ಅಥವಾ ಎಲ್ಲಿ ಸಂಬಂಧ ಸ್ಪಷ್ಟವಾಗಿಲ್ಲವೋ ಅದನ್ನು ವರ್ಣಿಸಲು ಈ ಶಬ್ದವನ್ನು ಉಪಯೋಗಿಸುತ್ತಾರೆ. ಬಾದರಾಯಣ ಎಂದರೆ ವ್ಯಾಸಮಹರ್ಷಿ ಎಂಬ ಒಂದು ಅರ್ಥವಿದೆ. ವ್ಯಾಸಮಹರ್ಷಿಗೂ ಈ ಬಾದರಾಯಣ ಸಂಬಂಧಕ್ಕೂ ಯಾವ ಸಂಬಂಧವೂ ಇಲ್ಲ. ಈ ನುಡಿಗಟ್ಟಿಗೆ ಸಂಬಂಧಿಸಿದಂತೆ ಒಂದು ಸಂಸ್ಕೃತ ಶ್ಲೋಕವಿದೆ.

***ಅಸ್ಮಾಕಂ ಬದರೀವೇತ್ರಂ ಯುಷ್ಮಾಕಂ ಬದರೀ ತರುಃ***
***ಬಾದರಾಯಣ ಸಂಬಂಧಂ ಯೂಯಂ ಯೂಯಂ ವಯಂ ವಯಂ 11***

ಇದರ ಅರ್ಥ ಹೀಗಿದೆ: ನಮ್ಮದು ಎಲಚೀಮರದ ಬೆತ್ತ. ನಿಮ್ಮ ಮನೆಯ ಹಿತ್ತಲಿನಲ್ಲಿರುವುದು ಎಲಚೀಮರ. ಇದೇ ಬಾದರಾಯಣ ಸಂಬಂಧ. ನೀವು ನೀವೇ. ನಾವು ನಾವೇ. ಬಾದರ ಎಂದರೆ ಎಲಚೀಗಿಡ. ಯಾವುದೋ ಎಲಚೀಗಿಡದ ಕೋಲು ಮತ್ತೆ ಇನ್ನಾವುದೋ ಎಲಚೀಗಿಡ. ಇವುಗಳಿಗೆ ಹೇಗೆ ಸಂಬಂಧವಿಲ್ಲವೋ ಹಾಗೆ ನಮಗೂ ನಿಮಗೂ ಯಾವ ಸಂಬಂಧವೂ ಇಲ್ಲ. ಇದೇ ಇದರ ಅರ್ಥ. ಈ ವಿಷಯವನ್ನು ಕುರಿತು ಪ್ರಸಿದ್ಧ ಕಲಾವಿದ ದಿ. ಎ.ಎನ್. ಸುಬ್ಬರಾಯರು **ಬಾದರಾಯಣ ಸಂಬಂಧ** ಎಂಬ ಹೆಸರಿನ ಒಂದು ಸೊಗಸಾದ ವಿನೋದ ನಾಟಕವನ್ನು ರಚಿಸಿದ್ದಾರೆ.

**ಬಾನ** ಇದು ಸಂಸ್ಕೃತದ ಭೋಜನ ಶಬ್ದದ ಕನ್ನಡ ರೂಪ. ತದ್ಭವ ರೂಪ. ಇದಕ್ಕೂ ಊಟ, ಆಹಾರ, ಅನ್ನ ಎಂದು ಅರ್ಥಗಳು. ಪಾಯಸ ಎಂದೂ ಕೆಲವರು ಅರ್ಥವನ್ನು ನೀಡುತ್ತಾರೆ. ನವಣಕ್ಕಿ ಬಾನ, ಜೋಳದ ನುಚ್ಚಿನ ಬಾನ ಎಂಬ ಕಡೆ ಮೃಷ್ಟಾನ್ನದ ಅರ್ಥ ಕೊಡುತ್ತದೆ.

**'ಬಾಬು'** "ಇವನಿಗೆ ಸುಮ್ನೆ ಕೂತ್ಕೊಂಡಿರೋ ಬಾಬೇ ಇಲ್ಲ' ಎಂಬ ವಾಕ್ಯದಲ್ಲಿ ಬರುವ 'ಬಾಬೇ' ಶಬ್ದದ ಅರ್ಥ. ಅರಬ್ಬೀ ಭಾಷೆಯಲ್ಲಿ 'ಬಾಬತ್' ಎಂಬ ಶಬ್ದವಿದೆ. ಹಿಂದೀ ಅಥವಾ ಮರಾಠೀ ಭಾಷೆಯ ಮೂಲಕ ಇದು ಕನ್ನಡಕ್ಕೆ ಬಂದು 'ಬಾಬು' ಎಂಬ ರೂಪವನ್ನು ತಳೆದಿದೆ. 'ಬಾಬು' ಎಂದರೆ ವಿಷಯ, ವಿಚಾರ, itemಎಂಬ ಅರ್ಥ. 'ಬಾಬು' ಶಬ್ದಕ್ಕೆ 'ಏ' ಎಂಬ ಅವಧಾರಣೆಯ ಪ್ರತ್ಯಯ ಸೇರಿ 'ಬಾಬೇ' ಆಗಿದೆ. ಇಲ್ಲಿರುವ ಶಬ್ದ ಬಾಬು. 'ಬಾಬೇ ಇಲ್ಲ' ಎಂದರೆ ವಿಚಾರವೇ ಇಲ್ಲ ಎಂದರ್ಥ.

**ಬಾಯಿಯಲ್ಲಿ ಅಕ್ಕೀಕಾಳು ಹಾಕಿಕೊಂಡಿದ್ದೆ, ಎಂದರೇನು?** ಬಾಯಿಯಲ್ಲಿ ಅಕ್ಕೀಕಾಳು ಹಾಕಿಕೊಂಡಿದ್ದೆ ಎಂದು ಹೇಳುವ ವ್ಯಕ್ತಿಯ ಜೀವನದಲ್ಲಿ ಯಾವುದೋ ಸಂಕಷ್ಟದ ಪರಿಸ್ಥಿತಿ ಒದಗಿರುತ್ತದೆ. ಅದು ಅವರಿಗೆ ಸಾವು - ಬಾಳಿನ ಪ್ರಶ್ನೆಯಾಗಿರುತ್ತದೆ. ಸಾವಿಗೂ ಸಿದ್ಧವಾಗಿದ್ದ ಪರಿಸ್ಥಿತಿಯನ್ನು ಈ ಮಾತು ತಿಳಿಸುತ್ತದೆ. ಮನೆಗಳಲ್ಲಿ ಯಾರಾದರೂ ಸತ್ತರೆ ಹೆಣವನ್ನು ಶ್ಮಶಾನಕ್ಕೆ ಸಾಗಿಸುವುದಕ್ಕೆ ಮುಂಚೆ ಸತ್ತವನ ಸಂಬಂಧ ಇಂದಿಗೆ ಕಡಿಯಿತು - ಋಣ ತೀರಿತು ಎಂದು ತಿಳಿಸಲು ಹೆಣದ ಬಾಯಿಗೆ ಅಕ್ಕಿಯ ಕಾಳನ್ನು ಹಾಕುವ ಪದ್ಧತಿಯಿದೆ. ಈ ಪದ್ಧತಿಯನ್ನು ಮೇಲಿನ ವಾಕ್ಯ ನೆನಪಿಗೆ ತರುತ್ತದೆ. ಅದರ ಅರ್ಥ ಆಗ ಹೀಗೆಂದು ತಿಳಿಯಬೇಕು. ಇತರರು ನನ್ನ ಬಾಯಿಗೆ ಅಕ್ಕಿಯ ಕಾಳನ್ನು ಹಾಕಬೇಕಾದ ಪ್ರಸಂಗವಿರುತ್ತಿರಲಿಲ್ಲ. ನಾನೇ ಸಾಯಲು, ಆತ್ಮಹತ್ಯೆ ಮಾಡಿಕೊಳ್ಳಲು ಕೂಡ ಸಿದ್ಧನಾಗಿದ್ದೆ. ಇದು ಬಹು ಪ್ರಚಾರದಲ್ಲಿರುವುದರಿಂದ ಇಷ್ಟೊಂದು ಅರ್ಥ ಇದೆ ಎಂಬುದನ್ನು ತಿಳಿಯದೆ

ನನಗೆ ತುಂಬ ಕಷ್ಟ ಎಂಬರ್ಥದಲ್ಲಿ ಮಾತ್ರ ಜನ ಉಪಯೋಗಿಸುತ್ತಾರೆ. ಈ ಗಾದೆ ಮಾತು ಈಗ ತನ್ನ ಮೊನಚನ್ನು ಕಳೆದುಕೊಂಡು ಬಿಟ್ಟಿದೆ.

**ಬಾರಾ ಖೂನ್ ಮಾಫ್ ಎಂದರೇನು?** ಹನ್ನೆರಡು ಪ್ರಾಣಹತ್ಯೆ ಮಾಡಿದರೂ ಕ್ಷಮಾಪಣೆ ಯುಂಟು ಎಂದು ಆ ಮಾತಿಗೆ ಅರ್ಥ. ಇದು ಉರ್ದು ಮಾತನಾಡುವವರಲ್ಲಿ ತುಂಬ ಪ್ರಚಾರದಲ್ಲಿದೆ. ಹಿಂದಿಯಲ್ಲಿ ಕೂಡ ಪ್ರಯೋಗದಲ್ಲುಂಟು. ಅಧಿಕಾರದಲ್ಲಿರುವವರು ಸ್ವಜನ ಪಕ್ಷಪಾತದಿಂದಲೋ ಲಂಚದ ಆಸೆಯಿಂದಲೋ ಭಯಂಕರ ಅಪರಾಧಿಗಳನ್ನು ಕೆಲವು ವೇಳೆ ಕ್ಷಮಿಸಿ ಬಿಡುತ್ತಾರೆ. ಅಂಥ ಸನ್ನಿವೇಶವನ್ನು ಈ ಮಾತು ಚಿತ್ರಿಸುತ್ತದೆ.

**ಬಾಲ ಬಿಚ್ಚುವುದು ಎಂದರೇನು?** ಮಾನವರು ತಮ್ಮ ನಡವಳಿಕೆಯನ್ನು ಕೆಲವು ಸಲ ತಮ್ಮ ಸಮೀಪದಲ್ಲಿ ಓಡಾಡುವ ಪ್ರಾಣಿಗಳ ವ್ಯವಹಾರದ ರೂಪಕದಿಂದ ವರ್ಣಿಸುತ್ತಾರೆ. ಅಂಥ ಸಂದರ್ಭಗಳಲ್ಲಿ ಈ ಬಗೆಯ ಮಾತುಗಳು ಉತ್ಪತ್ತಿಯಾಗುತ್ತವೆ. ಈ ಮಾತು ನಾಯಿಯ ವರ್ತನೆಗೆ ಸಂಬಂಧಿಸಿದುದು. ಒಂದು ನಾಯಿ ತನ್ನ ಸಲಿಗೆಯನ್ನು ಪ್ರದರ್ಶಿಸಬೇಕಾದರೆ ಅದರ ಬಾಲವನ್ನು ಅಲ್ಲಾಡಿಸುತ್ತದೆ. ಅದಕ್ಕೆ ನೀವು ತಿನ್ನುತ್ತಿರುವ ಆಹಾರ ಬೇಕಾದರೆ ನಿಮ್ಮ ಮುಂದೆಯೇ ನಿಂತು ಬಾಲವನ್ನು ಅಲ್ಲಾಡಿಸುತ್ತ ಇರುತ್ತದೆ. ಇದು ಸದರ, ಸಲಿಗೆಯನ್ನು ಪ್ರದರ್ಶಿಸಿ ತುಂಬ ಸ್ವಾತಂತ್ರ್ಯ ವಹಿಸುವುದರ ಸೂಚನೆ. ಹೀಗೆ ಯಾರಾದರೂ ನಿಮ್ಮ ಜೊತೆಯಲ್ಲಿ ಹದ್ದು ಮೀರಿ ಮಾತನಾಡಿದರೆ ಆಗ ನೀವು ಈ ಮಾತನ್ನು ಉಪಯೋಗಿಸುತ್ತೀರಿ. **'ನನ್ನೆದುರಿಗೆ ಬಾಲ ಬಿಚ್ಚಬೇಡ'**. ಈ ಮಾತಿಗೆ ವಿರುದ್ಧವಾದ ಮಾತು. **'ಬಾಲ ಮುದುರಿಕೊಂಡು ಹೋಗು'**. ನಾಯಿಗೆ ಒಂದು ಬೆತ್ತದ ಏಟು ಬಿದ್ದರೆ ನೋಡಿ ಹೇಗೆ ಬಾಲವನ್ನು ಮುದುರಿಕೊಂಡು ಓಡುತ್ತದೆ. ಇದು ಕೆಲವು ವೇಳೆ ಇನ್ನೂ ವ್ಯಾಪಕವಾದ ಆಲಂಕಾರಿಕ ಅರ್ಥದಲ್ಲಿಯೂ ಉಪಯೋಗವಾಗುತ್ತದೆ.

ಇನ್ನೂ ಸ್ಪಷ್ಟವಾಗಬೇಕಾದರೆ ನಾವು ಉಪಯೋಗಿಸುವ ಇನ್ನೊಂದು ನುಡಿಯ ಸಮೂಹವನ್ನು ಪರಿಶೀಲಿಸಿ. 'ಆತ 'ಕಾಲು ಕೆರೆದುಕೊಂಡು ಬರುತ್ತಾನೆ.' ಇದೂ ಕೂಡ ನಾಯಿಯ ನಡವಳಿಯ ರೂಪಕ. ನಾಯಿ ಜಗಳಕ್ಕೆ ನಿಲ್ಲಬೇಕಾದರೆ ತನ್ನ ಕಾಲುಗಳಿಂದ ಭೂಮಿಯ ಮಣ್ಣನ್ನು ಹಿಂದಕ್ಕೆ ಕೆದರುತ್ತದೆ. ಟಗರು ಕೂಡ ಕಾಳಗಕ್ಕೆ ನಿಂತಾಗ ಹೀಗೆ ಕಾಲಿನಿಂದ ಮಣ್ಣನ್ನು ಕೆರೆಯುತ್ತದೆ. ಅದೂ ಕೂಡ ಜಗಳದ ಉತ್ಸಾಹ. ಇದೇ ಕಾಲಿನಿಂದ ಕೆರೆಯುವುದು. ಜಗಳಗಂಟರನ್ನು ಹೀಗೆ ಕರೆದರೂ ಒಂದೇ. 'ನೀನು ನಾಯಿ' ಎಂದು ನೇರವಾಗಿ ಹೇಳಿದರೂ ಒಂದೇ! ಈ ವಿಚಾರದಲ್ಲೂ ನಾವೆಲ್ಲರೂ ಒಂದೇ! ಇಂದು, ಮುಂದೆ, ಎಂದೆಂದೂ ಒಂದೇ!

**ಬಾಲಕಿ** ಇದು ವ್ಯಾಕರಣದ ಪ್ರಕಾರ ಬಾಲಿಕೆ ಎಂದಾಗಬೇಕು ಸಂಸ್ಕೃತದಲ್ಲಿ. ಬಾಲಿಕಾ > ಬಾಲಿಕೆ. ನಾವು ಕನ್ನಡಿಗರು ಬಾಲಕ + ಇ (ಸ್ತ್ರೀಲಿಂಗ ಪ್ರತ್ಯಯ ಕನ್ನಡದಲ್ಲಿ) = ಬಾಲಕಿ ಎಂದು ಮಾಡಿಕೊಂಡಿದ್ದೇವೆ. ಇನ್ನೂ ಚಿಕ್ಕ ಹುಡುಗಿ ಎಂದರ್ಥ.

**ಬಾಲಕಿಯರ ಹೆಸರುಗಳು ಸ್ತ್ರೀ ಪ್ರತ್ಯಯಗಳು** ಕನ್ನಡದ ಜನ ಈಚೆಗೆ ಹೆಣ್ಣು ಮಕ್ಕಳಿಗೆ ಹೆಸರಿಡುವುದರಲ್ಲಿ ಬಂಗಾಳಿಗಳನ್ನು ಮೀರಿಸಿದ್ದಾರೆ. ಕನ್ನಡಕ್ಕೆ ಅನುವಾದಗೊಂಡ ಬಂಗಾಳಿ ಕಾದಂಬರಿಗಳಲ್ಲಿ ಕಾಣಿಸುವ ಎಲ್ಲ ಚಂದದ ಹೆಸರುಗಳನ್ನು ಸೃಷ್ಟಿಸಿದ ಬಳಿಕ ಅಖಿಲ ಭಾರತದ ವ್ಯಾಪ್ತಿಗೆ ಒಳಪಡುವ ಹೆಸರುಗಳು ಈಚೆಗೆ ಕೇಳಿಬರುತ್ತಿವೆ. ಇವುಗಳನ್ನು ಕುರಿತ ಅಭಿಪ್ರಾಯದಲ್ಲಿ ಬೇರೆ ಬೇರೆ ದೃಷ್ಟಿಗಳಿವೆಯೇ? ಇವುಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚುವುದು ಹೇಗೆ ಎಂಬುದು ಪ್ರಶ್ನೆ.

ಅಂಕಿತನಾಮಗಳು ಒಬ್ಬೊಬ್ಬರನ್ನೂ ಬೇರೊಬ್ಬರಿಂದ ಬೇರ್ಪಡಿಸಿ ಗುರುತಿಸುವುದಕ್ಕಾಗಿ ಜನತೆ ಕಂಡುಕೊಂಡಿರುವ ಉಪಾಯ. ಅವರು ಯಾವ ಹೆಸರನ್ನು

ಬೇಕಾದರೂ ಇಡಬಹುದು. ಸಾಮಾನ್ಯವಾಗಿ ಒಳ್ಳೆಯ ಅರ್ಥವಿರುವ ಹೆಸರನ್ನೇ ಆರಿಸಿ ಇಡುತ್ತಾರೆ. ಈ ಹೆಸರುಗಳನ್ನು ಸಂಸ್ಕೃತ ಶಬ್ದಗಳಾಗಿದ್ದರೆ ಅವುಗಳ ಸ್ವರೂಪದ ಬಗೆಗೆ ಖಚಿತವಾಗಿ ಅಭಿಪ್ರಾಯವನ್ನು ತಿಳಿಸಬಹುದು. ಕೆಲವು ಹೆಸರುಗಳನ್ನು ಪರಿಶೀಲಿಸೋಣ: ಲಲಿತಾ, ಸ್ಮಿತಾ, ಗುಣಕ್ರೀತಾ, ಸಾಮಿಧೇನೀ, ಉಷಾ, ವಿದ್ಯಾ, ಇತ್ಯಾದಿ. ಇವುಗಳು ಸಾಮಾನ್ಯವಾಗಿ ಲಲಿತೆ, ಸ್ಮಿತೆ, ಗುಣಕ್ರೀತೆ, ಸಾಮಿಧೇನಿ, ಉಷೆ, ವಿದ್ಯೆ ಎಂದು ತದ್ಭವಗಳಾದರೆ ಅವುಗಳ ಉಪಯೋಗ ಕನ್ನಡದಲ್ಲಿ ಸುಲಭ.

ಆದರೆ ಅವುಗಳನ್ನು ಸಂಸ್ಕೃತ ಸ್ವರೂಪದಲ್ಲಿಯೇ ಕನ್ನಡ ವಾಕ್ಯಗಳಲ್ಲಿ ಪ್ರಯೋಗಿಸುವಾಗ ಕೆಲವು ತೊಂದರೆಗಳು ಕಾಡುತ್ತವೆ. ಅಥವಾ 'ಅ' ಕಾರಾಂತವಾಗಿದ್ದರೆ ಅವುಗಳನ್ನು ಬರೆಯುವಾಗ ಯಾವ ವಿಭಕ್ತಿ ಪ್ರತ್ಯಯವನ್ನು ಹತ್ತಿಸಿಬೇಕಾದರೂ ಲಲಿತಳನ್ನು, ಲಲಿತಳಿಗೆ, ಲಲಿತಳಿಂದ ಎಂದೂ ಬರೆಯಬಹುದು. ಆದರೆ ಕನ್ನಡದ ಶಬ್ದವೇ ಹೆಸರಾದರೆ ಚೆನ್ನಮ್ಮನ್ನು, ಚೆನ್ನಮ್ಮನಿಂದ, ಚೆನ್ನಮ್ಮನಿಗೆ ಎಂದೇ ಬರೆಯಬಹುದು. ಚೆನ್ನಮ್ಮಳು ಎಂಬುದು ಶ್ರವ್ಯತೆಗೆ ದೂರ. 'ಇ' ಕಾರಾಂತವಾದ ಹೆಸರಾದರೆ ಚಾರುಮತಿಯು, ಚಾರುಮತಿಯಿಂದ, ಚಾರುಮತಿಗೆ ಇತ್ಯಾದಿ ಬರೆಯಬಹುದು. ಗೌರಿ, ಲಕ್ಷ್ಮೀ ಎಂಬ ಹೆಸರುಗಳು ಹೀಗೆಯೇ ವಿಭಕ್ತಿಗಳನ್ನು ಪಡೆಯುತ್ತವೆ.

ಆದರೆ ಸಭಾಪತಿಯು ಸ್ತ್ರೀ ಆದಾಗ, ಅವಳು ಅಧ್ಯಕ್ಷೆಯಾದಾಗ, ರಾಷ್ಟ್ರಪತಿಯಾದಾಗ "Chairman" ಆದಾಗ ಬರುವ ಕಷ್ಟವನ್ನು ಗಮನಿಸಿ. ಇಂಗ್ಲಿಷ್ ಭಾಷೆಯಲ್ಲಿ ಇಂಡಿಯಾ ದೇಶದಲ್ಲಿ ಇದನ್ನು 'Chair Person' ಎಂದು ತಿದ್ದಿ ಕಷ್ಟವನ್ನು ಪರಿಹರಿಸಿಕೊಂಡರು ಇಂಗ್ಲಿಷ್‌ನ 'President' ಸ್ತ್ರೀಲಿಂಗಕ್ಕೂ ಪುಲ್ಲಿಂಗಕ್ಕೂ ಅನ್ವಯಿಸುತ್ತದೆ. 'ಸಭಾಪತಿ', 'ರಾಷ್ಟ್ರಪತಿ' ಶಬ್ದಗಳ ಗತಿಯೇನು ? ಅವು ಹಾಗೆಯೇ ಇರಬೇಕಾಗಬಹುದು.

ಸ್ತ್ರೀಯರ ಹೆಸರಿಗೆ ಗೌರವಕ್ಕಾಗಿ ಬಹುವಚನವನ್ನು ಉಪಯೋಗಿಸಬೇಕಾದಾಗಲೂ ಹೀಗೆಯೇ ಕಷ್ಟವನ್ನು ಪರಿಹಾರ ಮಾಡಿಕೊಳ್ಳಬಹುದು. ಲಲಿತಗಳು, ಲಲಿತರು ಎಂದು ಹೇಳಲಾಗುವುದಿಲ್ಲ. ಲಲಿತ ಅವರು ಎಂದು ಉಪಾಯಾಂತರದಿಂದ ಬಹುವಚನವನ್ನು ಪ್ರಯೋಗಿಸಬಹುದು. 'ಅವರು' ಎಂಬುದಕ್ಕೆ ಬದಲಾಗಿ ಕೆಲವರು 'ರವರು' ಎಂದೇ ಉಪಯೋಗಿಸುತ್ತಿದ್ದಾರೆ. ಇದು ತಪ್ಪು. ಉದಾಹರಣೆಗೆ 'ಕೃಷ್ಣಯ್ಯ' ಎಂಬುವರನ್ನು ಗೌರವದಿಂದ ಕರೆಯುವುದು ಕೃಷ್ಣಯ್ಯರವರು ಎಂದರೆ ಆ ಗೌರವಸ್ಥರ ಹೆಸರು 'ಕೃಷ್ಣಯ್ಯರ್' ಆಗುತ್ತದೆ. ಈ 'ರವರು' ಪ್ರತ್ಯಯವನ್ನು ಸೃಷ್ಟಿ ಮಾಡಿದವರು ಬೇರೆ ಯಾರೂ ಇಲ್ಲ. ನರಸಿಂಹಾಚಾರ್ಯರು ಎಂಬುದಕ್ಕೆ **ಅವರು** ಎಂಬ ಇನ್ನೊಂದು ಗೌರವ ಬಹುವಚನವನ್ನು ಸೇರಿಸಿದಾಗ 'ನರಸಿಂಹಾಚಾರ್ಯರವರು' ಎಂಬುದು ಸಾಧ್ಯ. ಇಂಥ ಶಬ್ದ ರೂಪಗಳ ಸಾಮ್ಯದಿಂದ ಈ 'ರವರು' ಭೂತ ಎದ್ದು ಕೂತಿದೆ. ವ್ಯಾಪಕವಾಗಿ ಪ್ರಭಾವ ಪಡೆಯುತ್ತಿದೆ. ಇದರ ಸತ್ವವನ್ನು ಕಾದು ನೋಡಬೇಕು.

ಹೀಗೆಯೇ ಕೆಲವು ಕನ್ನಡ ಪುಲ್ಲಿಂಗದ ಶಬ್ದಗಳನ್ನು ಸ್ತ್ರೀಲಿಂಗಕ್ಕೆ ವ್ಯತ್ಯಾಸವನ್ನು ಮಾಡಬೇಕಾದಾಗ ನಾವು ಎದುರಿಸಬೇಕಾದ ಸಮಸ್ಯೆಗಳಿವೆ. **ಪೆದ್ದ, ಹೆಡ್ಡ, ಕಳ್ಳ** ಎಂಬ ಕೆಲವು ಶಬ್ದಗಳನ್ನು ಪರಿಶೀಲಿಸೋಣ. ಕನ್ನಡದ ಪ್ರಾಚೀನ ಕನ್ನಡ ಗ್ರಂಥಗಳು ಎರಡು ಬಗೆಯ ಪ್ರತ್ಯಯಗಳನ್ನು ಸೂಚಿಸುತ್ತವೆ. ಒಂದು 'ಇ' ಇನ್ನೊಂದು 'ಎ'. ಮೇಲೆ ಕಾಣಸಿಗುವ ಶಬ್ದಗಳಿಗೆ 'ಎ' ಎಂಬುದನ್ನೇ ಹಚ್ಚಬೇಕೆಂಬುದು ವ್ಯಾಕರಣಕಾರರ ಅಭಿಪ್ರಾಯ. 'ಇ' ಕಾರ ಎಂದೇ ಸರಿ ಎಂಬುದು ಜನ ಸಾಮಾನ್ಯರ ಅಭಿಪ್ರಾಯ. ವಿದ್ವಾಂಸರಾದ ಲೇಖಕರು **ಪೆದ್ದೆ, ಹೆಡ್ಡೆ, ಕಳ್ಳೆ** ಎಂದೇ ಬರೆಯುತ್ತಾರೆ. **ಪೆದ್ದಿ, ಹೆಡ್ಡಿ, ಕಳ್ಳಿ** ಎಂಬುದು ಸಾಮಾನ್ಯ ಜನರು ದಿನನಿತ್ಯವೂ ಉಪಯೋಗಿಸುತ್ತಿರುವ ರೂಪಗಳು.

ಕೊನೆಗೆ ಗೆಲ್ಲುವುದು ಪ್ರಜಾಪ್ರಭುತ್ವದಲ್ಲಿರುವಂತೆ ಜನಾಭಿಪ್ರಾಯವೇ!

**ಬಾಲಿಶತನ** ಬಾಲಿಶ ಎಂಬುದು ಸಂಸ್ಕೃತದಲ್ಲಿ ಪುಲ್ಲಿಂಗದ ಶಬ್ದ. ಇದಕ್ಕೆ ಎಳೆಯ ಮಗು ಸಣ್ಣ ಕೂಸು ಎಂದು ಅರ್ಥ. ಈ ಅರ್ಥದ ಜೊತೆಗೆ ಮೂರ್ಖ, ದಡ್ಡ ಎಂಬುದೂ ಇನ್ನೆರಡು ಅರ್ಥಗಳು. ಈ ಶಬ್ದಕ್ಕೆ ಕನ್ನಡದ ತನ ಎಂಬ ಪ್ರತ್ಯಯ ಸೇರಿದೆ. ಆದ್ದರಿಂದ ಮಗುವಾಗಿರುವಿಕೆ, ಹುಡುಗು, ತಿಳಿವಳಿಕೆ ಇಲ್ಲದಿರುವಿಕೆ ಎಂದರ್ಥ ಆ ಶಬ್ದಕ್ಕೆ.

**ಬಾವಲಿ** ಇದು ಕನ್ನಡದ ಶಬ್ದ. ಇದಕ್ಕೆ ಕಾಲಿಗೆ ಹಾಕುವ ಆಭರಣ ಎಂದು ಅರ್ಥ. ಇದಕ್ಕೆ ಕಾಲ್ಗಡಗ, ಪೆಂಡೆಯ ಎಂಬ ಹೆಸರುಗಳೂ ಇವೆ. ಹಿಂದೆ ರಾಜರು ಅವರ ನೆಚ್ಚಿನ ಪ್ರಜೆಗಳಿಗೆ, ಸೇನಾನಾಯಕರಿಗೆ ಇಂಥ ಆಭರಣವನ್ನು ಗೌರವ ಪೂರ್ವಕವಾಗಿ ನೀಡುತ್ತಿದ್ದರು. ಹೆಂಗಸರು ಕಿವಿಗೆ ಹಾಕುವ ಆಭರಣಕ್ಕೂ ಬಾವುಲಿ, ಬಾವಲಿ ಎಂಬ ಹೆಸರಿದೆ. ಬಾವಲಿಗೆ ಬಾವುಲಿ, ಬಾಹುಲಿ ಎಂಬ ಪರ್ಯಾಯ ಶಬ್ದಗಳೂ ಉಂಟು.

**ಬಾಹ್ಯ** ಎಂದರೆ, ಹೊರಗಡೆ ಇರುವ, ಹೊರಗಿನದಾದ, ಅಂತರಂಗದಿಂದ ಹೊರಕ್ಕೆ ಅಟ್ಟಿದ ಎಂದರ್ಥ; ಬಹಿರಂಗ, ಹೊರಗಡೆ ಎಂಬ ನಾಮಪದದ ಅರ್ಥವೂ ಉಂಟು. ಬಾಹ್ಯ ಪ್ರಪಂಚ, ಬಾಹ್ಯ ಸೌಂದರ್ಯ ಮುಂತಾದ ಶಬ್ದಗಳನ್ನು ಪರಿಶೀಲಿಸಿ. ಬಾಹ್ಯ ಸ್ನೇಹ ಎಂಬ ಶಬ್ದ ಈಚೀಚೆಗೆ ಚಲಾವಣೆಗೆ ಬರುತ್ತಿದೆ. ಈ ಸಂಸ್ಕೃತ ಶಬ್ದದ ವ್ಯಾಪ್ತಿ ಅಧಿಕವಾಗಿದೆ.

**ಬಿಂಕ - ವೈಯಾರ, ಬಿನ್ನಾಣ** ಇದು ಕನ್ನಡದ ಶಬ್ದ. ಇದಕ್ಕೆ ಗರ್ವ, ಜಂಭ ಎಂಬುದು ಮುಖ್ಯ ಅರ್ಥವಾದರೂ ಠೀವಿ, ಬೂಟಾಟಿಕೆ, ವಿಲಾಸ, ಅಟ್ಟಹಾಸ, ಸ್ವಾಭಿಮಾನ ಇತ್ಯಾದಿ ಇತರ ಅರ್ಥಗಳೂ ಇವೆ. ಗದಾಯುದ್ಧದಲ್ಲಿ '**ಸ್ಮರ ಸಂಜೀವಿನಿ ಕೃಷ್ಣೆ ಪೂ ಮುಡಿದಳ್ ... ಆ ಬಿಂಕಂ ಆ ವಿಳಾಸಂ**' ಎಂದು ಬರುತ್ತದೆ. ಇದು ವೈಯಾರ. ಪುರಂದರದಾಸರು '**ಬಿಡೆ ನಿನ್ನ ಪಾದವ ಬಿಂಕವಿನ್ನೇಕೊ**' ಎನ್ನುತ್ತಾರೆ. ಇಲ್ಲಿ ಸ್ವಾಭಿಮಾನ. ವೈಯಾರ ಎಂಬುದು ವಿಹಾರದ ತದ್ಭವ ಎನ್ನುತ್ತಾರೆ. ಇದಕ್ಕೆ ಠೀವಿ, ವಿಲಾಸ ಎಂಬ ಅರ್ಥಗಳಿವೆ. ಬಿನ್ನಾಣ ಎಂಬುದು ಸಂಸ್ಕೃತದ ವಿಜ್ಞಾನದ ತದ್ಭವ. ಇದಕ್ಕೆ ಕನ್ನಡದಲ್ಲಿ ತಿಳಿವಳಿಕೆ, ಜಾಣ್ಮೆ ಕೌಶಲ, ಅಂದ, ಸೊಬಗು, ವೈಯಾರ, ವಿನೋದ, ಹಾಸ್ಯ, ಭ್ರಮೆ ಮುಂತಾದ ಅರ್ಥಗಳೂ ಇವೆ.

ಪಂಪಭಾರತದಲ್ಲಿ ವಿರಾಟ ಮಹಾರಾಜನು '**ನಿನ್ನ ಬಿನ್ನಾಣಮೇನೆಂದು ಬೆಸಗೊಳೆ**' (ಪಂಪಭಾರತ ೮: ೫೩) ಎಂದು ಬರುತ್ತದೆ. ಇಲ್ಲಿ ತಿಳಿವಳಿಕೆ ವಿದ್ಯೆ ಎಂದರ್ಥ. '**ಹೆದರುವೆನು ನಾನಿನ್ನ ಬಿನ್ನಾಣಕೆಲೆ ಹೆಣ್ಣೆ**' ಎಂದು ಬಿ.ಎಂ. ಶ್ರೀಯವರ ಇಂಗ್ಲಿಷ್ ಗೀತಗಳಲ್ಲಿ ಬರುತ್ತದೆ. ಇಲ್ಲಿ ಒನಪು, ವೈಯಾರ ಎಂದರ್ಥ. ಹೀಗೆ ಇದರ ಅರ್ಥ ವಿಸ್ತಾರ.

**ಬಿಎಲ್., ಎಲ್ಎಲ್.ಬಿ.,** ನಮ್ಮ ಕಾನೂನು ಪಂಡಿತರು ತಮ್ಮ ಹೆಸರಿನ ಮುಂದೆ BL., LL.B ಎಂದು ಉಪಯೋಗಿಸುವ ಪದವಿ ತಿಳಿಸುವ ಚಿಹ್ನೆಗಳಲ್ಲಿ LL ಎಂದು ಆ ಅಕ್ಷರವನ್ನು ಎರಡು ಸಲ ಬಳಸುವುದು ಏಕೆ? BL ಎಂದರೆ Legum Baccalaris ಎಂದರೆ Bachelor of law., LL.B. ಎಂದರೆ Bachelor of Laws. ಎರಡು LL ಗಳನ್ನು ಉಪಯೋಗಿಸಿದರೆ ಅದು ಬಹುವಚನ ಎಂದು ಅರ್ಥ. LL. JJ ಎಂದರೆ Lords, Justices ಎಂದು ಅರ್ಥ.

**ಬಿಕನಾಶಿ** ಇದು ಸಂಸ್ಕೃತದ ಭಿಕ್ಷಾಶಿನ್ = ಭಿಕ್ಷೆ ಮಾಡಿ ಬದುಕುವವನು ಎಂಬರ್ಥದ ಶಬ್ದದ ತದ್ಭವ. ತಿರುಪೆ ಬೇಡಿ ಆಹಾರವನ್ನು ಪಡೆಯುವವನು, ಕ್ಷುದ್ರವ್ಯಕ್ತಿ ಎಂದರ್ಥ. ಕೆಲವು ವೇಳೆ ತುಂಬ ಜಿಪುಣನಾದ ವ್ಯಕ್ತಿಗೆ ಈ ಶಬ್ದವನ್ನು ಆಲಂಕಾರಿಕವಾಗಿ ಉಪಯೋಗಿಸುತ್ತಾರೆ.

**ಬಿಕೋ,** ಬಣಬಣ ತುಂಬಿದ ಮನೆಯಲ್ಲಿ ಇದ್ದವರಲ್ಲಿ ಅದರಲ್ಲಿಯೂ ಕುಣಿದು ಕುಪ್ಪಳಿಸುವ ಮಕ್ಕಳಿದ್ದ ಕಡೆ ಅವರೆಲ್ಲ ಬೇರೆಯ ಊರಿಗೆ ಹೋದಾಗ ಮನೆಯಲ್ಲಿ ಹಿಂದೆ ನಿಂತವರು ಈ ಮಾತನ್ನು ಉಪಯೋಗಿಸುತ್ತಾರೆ. ಬಿಕೋ ಎನ್ನುತ್ತಿದೆ ಮನೆ. ಮನೆ ಬಣ ಬಣ

ಎನ್ನುತ್ತಿದೆ. ಕೆಲವರು ಭಣಭಣ ಎಂದು ಮಹಾಪ್ರಾಣವನ್ನೂ ಉಪಯೋಗಿಸುತ್ತಾರೆ. ಹೀಗೆ ಮನೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದವರು ತೀರಿಕೊಂಡರೆ ಆಗಲೂ ಇದೇ ಮಾತು ಪ್ರಯೋಗಕ್ಕೆ ಬರುತ್ತದೆ. ಒಂದು ಸಾನ್ನಿಧ್ಯದ ಅರಕೆಯನ್ನು ಆ ಮಾತುಗಳು ವಿಸ್ತರಿಸುತ್ತವೆ.

**ಬಿಜ್ಜಳ** ಎಂಬುದು ಸರಿಯಾದ ರೂಪ. ಆದರೆ ಸಂಸ್ಕೃತದಲ್ಲಿ 'ಲಳಯೋರಭೇದಃ' ಎಂಬ ಸೂತ್ರವನ್ನು ವ್ಯಾಕರಣಕಾರರು ಉಲ್ಲೇಖಿಸುತ್ತಾರೆ. ಅದನ್ನು ಅನುಸರಿಸಿ ಕಾವ್ಯಗಳಲ್ಲಿ ಬಿಜ್ಜಳ ಶಬ್ದದ ಸ್ಥಾನದಲ್ಲಿ ಬಿಜ್ಜಲ ಎಂದೂ ಉಪಯೋಗಿಸಿರಬಹುದು.

**ಬಿದಿಗೆ** ಎಂಬುದು ಸಂಸ್ಕೃತದ ದ್ವಿತೀಯಾ ಶಬ್ದದ ತದ್ಭವ. ಪಕ್ಷದ ಎರಡನೆಯ ದಿನ ಅದು.

**ಬಿನ್** ಇದು ಅರಬ್ಬೀ ಭಾಷೆಯ ಶಬ್ದ. ಇದಕ್ಕೆ ಮಗು, ಸಂತಾನ ಎಂಬ ಅರ್ಥವಿದೆ. ಹಿಂದೆ ಕೋರ್ಟು ವ್ಯವಹಾರದ ಕಾಗದ ಪತ್ರಗಳ ಬರವಣಿಗೆಯಲ್ಲಿ ಇಂಥವರ ಮಗ ಎಂದು ತಿಳಿಸಲು ಬಿನ್ ಶಬ್ದವನ್ನು ಉಪಯೋಗಿಸುತ್ತಿದ್ದರು. ಈಚೆಗೆ ತಪ್ಪಿಹೋಗಿದೆ.

**ಬಿನ್ನವತ್ತಳೆ** ಶಬ್ದದಲ್ಲಿ ಬಿನ್ನಪ + ಪತ್ತಳೆ ಎಂಬ ಎರಡು ಶಬ್ದಗಳಿವೆ. ಬಿನ್ನಪ ಎಂಬುದು ವಿಜ್ಞಾಪನ ಎಂಬ ಶಬ್ದದಿಂದ ಬಂದ ತದ್ಭವ. ಅದಕ್ಕೆ ವಿನಂತಿ, ಅರಿಕೆ, ಮನವಿ ಎಂದರ್ಥ. ಪತ್ತಳೆ ಎಂಬುದು ಸಂಸ್ಕೃತದ ಪತ್ರ. ಪ್ರಾಕೃತದಲ್ಲಿ ಪತ್ತಲ ಆಗಿ ಕನ್ನಡದಲ್ಲಿ ಪತ್ತಳೆ ಆಗಿದೆ. ಅದಕ್ಕೆ ಕಾಗದ, ಪತ್ರ, ಎಲೆ, ಅಧಿಕಾರದ ಪತ್ರ ಮುಂತಾದ ಅರ್ಥಗಳಿವೆ. ಈ ಎರಡೂ ಶಬ್ದಗಳು ಸೇರಿ ಕನ್ನಡದಲ್ಲಿ, ಯಾರಿಗಾದರೂ ಹಿರಿಯರಿಗೆ ಸನ್ಮಾನ ಮಾಡುವ ಸಂದರ್ಭದಲ್ಲಿ ನೀಡುವ ವಿಜ್ಞಾಪನಾ ಪತ್ರ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತಿದೆ.

**ಬಿಮ್ಮನಸೆ** ಈ ಪದವು ಹೆಚ್ಚಾಗಿ ಜಾನಪದ ಭಾಷೆಯಲ್ಲಿ ಪ್ರಯೋಗವಾಗಿದೆ. ಇದಕ್ಕೆ ಬಸುರಿ, ಗರ್ಭಿಣಿ ಎಂದರ್ಥ. ಬಿಮ್ಮಾನಿಸೆ ಎಂಬ ಗ್ರಾಮ್ಯ ರೂಪವೂ ಇದೆ. ಬಿಮ್ಮು ಶಬ್ದಕ್ಕೆ ಬಿಗಿತ, ಬಿಗಿ ಎಂಬ ಅರ್ಥಗಳಿವೆ. ಬಿಗಿದಿರುವ ಮನಸೆ =ಮನುಷ್ಯ ಬಿಮ್ಮನಸೆ. ಅಂದರೆ ದೇಹವೆಲ್ಲ ಬಿಗಿಯಾಗಿರುವಂತೆ ಮೈತುಂಬಿಕೊಂಡಿರುವ ಹೆಂಗಸು. ತುಂಬ ಅರ್ಥವತ್ತಾದ ಶಬ್ದ.

**ಬಿರುದು-ಬಾವಲಿ** ಇವೆರಡೂ ಬೇರೆ ಬೇರೆ ಶಬ್ದಗಳು. ಬಿರುದು ಕನ್ನಡದ ಶಬ್ದ. ಇದಕ್ಕೆ ಮರ್ಯಾದೆಯ ಸೂಚಕವಾಗಿ ಕೊಡುವ ಹೆಸರು ಅಥವಾ ಪ್ರಶಸ್ತಿಯ ಸೂಚಕವಾಗಿ ನೀಡುವ ಅಲಂಕಾರ ಸಾಧನ. ಸರಕಾರವೂ ಮಠಾದಿ ಸಂಸ್ಥೆಗಳೂ ಇವನ್ನು ನೀಡುತ್ತವೆ. ಕೆಲವು ವೇಳೆ ಇವುಗಳಿಗೆ ಅರ್ಥವೇ ಇರುವುದಿಲ್ಲ. ಉದಾ: ಪದ್ಮಶ್ರೀ. ಅರ್ಥವನ್ನು ಆಗ ಆರೋಪ ಮಾಡಬೇಕಾಗುತ್ತದೆ.

**ಬಿಲ್‌ಕುಲ್** ಎಂಬುದು ಅರಬ್ಬಿ ಭಾಷೆಯ ಶಬ್ದ. ಸಂಪೂರ್ಣವಾಗಿ, ಎಲ್ಲವೂ ಸೇರಿ ಎಂದು ಅವ್ಯಯದ ಅರ್ಥ. ಕನ್ನಡದಲ್ಲಿ ಖಂಡಿತವಾಗಿ ಎಂಬರ್ಥದಲ್ಲಿ ಹೆಚ್ಚಾಗಿ ಉಪಯೋಗ.

**ಬಿಸಿ, ಕಾವು, ಶಾಖ** ಈ ಮೂರು ಶಬ್ದಗಳಲ್ಲಿ ಮೊದಲ ಎರಡು ಶಬ್ದಗಳು ಕನ್ನಡದವು.

ಬಿಸಿ ಒಂದು ವಸ್ತುವಿನ ಉಷ್ಣತೆಗೆ ಸಂಬಂಧಿಸಿದ ಗುಣವನ್ನು ತಿಳಿಸುತ್ತದೆ. ನೀರು ಬಿಸಿಯಾಗಿದೆ. ಮೈ ಬಿಸಿಯಾಗಿದೆ. ಅಡಿಗೆ ಬಿಸಿಯಾಗಿದೆ.

ಕಾವು ಬೆಂಕಿಯ ಸ್ಪರ್ಶದಿಂದ ಉಂಟಾಗುವ ಅನುಭವ. ಕಾವು ಬಿಸಿಯನ್ನುಂಟು ಮಾಡುತ್ತದೆ. ನೀರು ಕಾದಿದೆ ಎಂದರೆ ಕಾವಿನಿಂದ ಬಂದ ಗುಣವನ್ನು ಹೊಂದಿದೆ ಎಂದರ್ಥ. ಮೈ ಕಾದಿದೆ ಎಂದರೆ ಜ್ವರದ ತಾಪದಿಂದ ದೇಹದ ಉಷ್ಣ ಹೆಚ್ಚಾಗಿದೆ ಎಂದರ್ಥ. ಬಿಸಿ ನಾಮಪದ. ಕಾವು ಎಂಬುದು ಕಾಯ್ ಎಂಬ ಧಾತುವಿನಿಂದ ಬಂದ ನಾಮಪದ. ಕಾಯ್ ಧಾತುವಿಗೆ ಅರ್ಥ ಬಿಸಿಯಾಗು.

ಶಾಖ ಎಂಬ ಮೂರನೆಯ ಶಬ್ದ ಒಂದು ವಿಚಿತ್ರ ಶಬ್ದ. ಇದು ಸಂಸ್ಕೃತ ಶಬ್ದವಲ್ಲ. ಸಂಸ್ಕೃತದಲ್ಲಿ 'ಶಾಖಾ' ಎಂಬ ಶಬ್ದವಿದೆ. ಇದಕ್ಕೆ ೧. ಮರದ ಕೊಂಬೆ ೨. ವೇದದ ಭಾಗ ೩. ಪ್ರಕಾರ, ವಿಧ ೪. ಬಾಹು, ತೋಳು ೫. ಒಂದು ಪಂಗಡ ಇತ್ಯಾದಿ ಅರ್ಥಗಳಿವೆ.

**'ಆರುಹ್ಯ ಕವಿತಾ ಶಾಖಾಂ'** ಎಂಬ ವಾಲ್ಮೀಕಿಯ ವರ್ಣನೆಯನ್ನು ನೆನಪು ಮಾಡಿಕೊಳ್ಳಿ. ಕುಮಾರವ್ಯಾಸನ ಒಂದು ಪದ್ಯ ನೆನಪಿಗೆ ಬರುತ್ತದೆ. **"ಬೇರು ನೀರುಂಡಾಗ ತಣಿಯವೆ ಭೂರುಹದ ಶಾಖೋಪಶಾಖೆಗಳು"** (ಅರಣ್ಯ ಪರ್ವ ೧೬-೪೮). ಪರಮಾತ್ಮನನ್ನು ಪ್ರಪಂಚವೆಂಬ ಮರಕ್ಕೆ ಹೋಲಿಸಿ ಎಲ್ಲ ಜೀವಿಗಳನ್ನೂ ಶಾಖೆ ಉಪಶಾಖೆಗಳಾಗಿ ವರ್ಣಿಸಿರುವುದರ ಔಚಿತ್ಯವನ್ನು ಗಮನಿಸಿ. ಶಾಖಾಚರ, ಶಾಖಾಮೃಗ ಎಂದರೆ ಕೊಂಬೆಯಿಂದ ಕೊಂಬೆಗೆ ಹಾರಿ ಮರದ ಮೇಲೆಯೇ ಓಡಾಡುವ ಕಪಿ, ಕೋತಿ. ಸಂಸ್ಕೃತದಲ್ಲಿ ಬಹು ಅಪೂರ್ವವಾಗಿ ಉಪಯೋಗಿಸುವ ಶಾಖ ಶಬ್ದಕ್ಕೆ ಕಾರ್ತಿಕೇಯ, ಸ್ಕಂದ ಎಂದು ಅಂಕಿತನಾಮದ ಅರ್ಥವಿದೆ. **ಶಾಕ** ಎಂಬ ರೂಪದ ಎರಡು ಶಬ್ದಗಳಿವೆ ಕನ್ನಡದಲ್ಲಿ. ಒಂದು ಸಂಸ್ಕೃತದ ಶಾಕ - ತರಕಾರಿ, ಕಾಯಿಪಲ್ಯ, ಸೊಪ್ಪು ಇತ್ಯಾದಿ. ಶಾಕಾಹಾರ, ಶಾಕಾಹಾರಿ ಎಂಬ ಶಬ್ದಗಳನ್ನು ನೋಡಿ. ಶಾಕಾಹಾರ ಮಾಂಸಾಹಾರಕ್ಕೆ ವಿರುದ್ಧವಾದುದು. ಯಾರನ್ನಾದರೂ ನೀವು 'ನಿಮಗೆ ಉಪವೃತ್ತಿಯ ಮೇಲು ಸಂಪಾದನೆ ಎಷ್ಟಿದೆ' ಎಂದು ಕೇಳಿದರೆ ಹಿಂದಿನ ಕಾಲದ ಜನ ಹೇಳುತ್ತಿದ್ದರು - 'ಶಾಕಾಯ ಲವಣಾಯ' ಎಂದರೆ ತರಕಾರಿ ಮತ್ತು ಉಪ್ಪು ಇಷ್ಟಕ್ಕೆ ಸಾಕಾಗುತ್ತದೆ ಎಂದು.

ಎರಡನೆಯದು ಮರಾಠಿಯ ಶೇಕ್ ಎಂಬ ಶಬ್ದದಿಂದ ಬಂದುದು. ಇದಕ್ಕೆ ಕಾವು ಕೊಡುವಿಕೆ ಬಿಸಿಮಾಡುವಿಕೆ ಎಂದರ್ಥ. ಮೈಕೈಗಳಿಗೆ ಯಾವಾಗಲಾದರೂ ಊತ ಉಂಟಾದರೆ ವೈದ್ಯರು ಸ್ವಲ್ಪ ಶಾಕ ಕೊಡಿ, ವಾಸಿಯಾಗುತ್ತದೆ ಎನ್ನುತ್ತಾರೆ. ಮನೆಗಳಲ್ಲಿ ಶಾಕ ಕೊಡು ಎಂಬ ನುಡಿಗಟ್ಟು ತುಂಬ ಸಾಮಾನ್ಯವಾದುದು. ಈ ಶಬ್ದವನ್ನು ಕುಮಾರವ್ಯಾಸನು ಸೇಕ ಎಂಬ ರೂಪದಲ್ಲಿ ಉಪಯೋಗಿಸಿದ್ದಾನೆ. **'ಸಿಡಿಲ ಪೊಟ್ಟಣಗಟ್ಟ ಸೇಕವ ಕೊಡುವಿರೇ'** (ಸಭಾಪರ್ವ ೧೪-೩೭). ದ್ರೌಪದಿಯ ಮಾನಭಂಗಕ್ಕೆ ಪ್ರಯತ್ನಪಟ್ಟ ಕೌರವರಿಗೆ ವಿದುರನು ಹೇಳುವ ಬುದ್ಧಿವಾದದಲ್ಲಿ ಈ ಮಾತು ಬರುತ್ತದೆ. ಪೊಟ್ಟಣದೊಳಗೆ ಸಿಡಿಲನ್ನು ಹಿಡಿದಿಟ್ಟು ಅದರಿಂದ ಮೈಕೈಗಳಿಗೆ ಶಾಕವನ್ನು ಕೊಡುತ್ತಾರೆಯೇ ಎಂಬ ಮಾತಿನ ವ್ಯಾಪಕವಾದ ಅರ್ಥವನ್ನು ಗಮನಿಸಿ. ಪಂಪ ಭಾರತದಲ್ಲಿ (೫-೭) **ಕೆಂದಳಿರ್ವಾಸು ಸೇಕದ ತೊವಲ್ಗೆಣೆಯಾಯ್ತು** ಎಂಬ ಪ್ರಯೋಗ ಬರುತ್ತದೆ. ಸುಭದ್ರೆಯ ವಿರಹ ಸಂತಾಪವನ್ನು ಕಡಿಮೆ ಮಾಡಲು ಹಾಸಿದ ಕೆಂದಳಿರ ಹಾಸುಗೆ ಅವಳ ಮೈ ತಾಪದಿಂದ ಬೆಂಕಿಗೆ ಹಿಡಿದ ಸೊಪ್ಪಿನಂತೆ ಬಾಡಿಹೋಯಿತು ಎಂದರ್ಥ. ಈ ಶಬ್ದವೂ ಮೇಲೆ ತಿಳಿಸಿರುವ ಶೇಕ್‌ಗೆ ಸಂಬಂಧಪಟ್ಟದ್ದು. ಈ ಶಾಕ ಎಂಬ ಶಬ್ದವನ್ನು ಕೆಲವರು ಶಾಖ ಎಂಬಂತೆ ಮಹಾಪ್ರಾಣ ಸಹಿತವಾಗಿ ಉಪಯೋಗಿಸುವುದೂ ಉಂಟು. ಆದರೂ ಇದು ಸಂಸ್ಕೃತದ ಶಬ್ದವಲ್ಲ. ಸಂಸ್ಕೃತದಲ್ಲಿ ಉಷ್ಣ ಎಂಬರ್ಥದಲ್ಲಿ ಶಾಖ ಎಂಬ ಶಬ್ದವಿಲ್ಲ. ಅದು ಸಂಸ್ಕೃತದ ಶಬ್ದವಿರಬೇಕೆಂಬ ಭ್ರಮೆಯಿಂದ ಟಂಕಿಸಿದ ಹೊಸ ಶಬ್ದಗಳು **ಶಾಖೋತ್ಪನ್ನ**, **ಶಾಖಾವರಣ**. ಅವು ಉಳಿದುಕೊಂಡುಬಿಟ್ಟಿವೆ. ಆದರೆ ಬರಹಗಾರರಿಗೆ ಈ ವಿವರಗಳು ತಿಳಿದಿದ್ದರೆ ಒಳ್ಳೆಯದು.

**ಬಿಳಿಯಾನೆ** ಎಂದರೇನು ? ನಮ್ಮ ಪುರಾಣದ ಪ್ರಕಾರ ಬಿಳಿಯಾನೆ ಐರಾವತ. ಅದು ಇಂದ್ರನ ಆನೆ. ಆದರೆ ನಮ್ಮ ಕಾವ್ಯಗಳಲ್ಲಿ ಅದನ್ನು ಬಿಳಿಯಾನೆ ಎಂದು ಹೆಚ್ಚಾಗಿ ನಿರ್ದೇಶಿಸುವುದಿಲ್ಲ.

ಸಯಾಂ ದೇಶದ ಆನೆ ಸ್ವಲ್ಪ ಬಿಳಿಚಿರುತ್ತದೆ. ಅಂಥ ಆನೆಗೆ ಈ ಹೆಸರು ಸಲ್ಲುತ್ತದೆ. ಇಂಗ್ಲಿಷಿನಲ್ಲಿ White Elephant ಎಂಬುದಕ್ಕೆ ರಕ್ಷಿಸುವುದಕ್ಕಾಗದ ಬಹು ದುಬಾರಿಯಾದ ವಸ್ತು ಎಂದು ಅರ್ಥವಿದೆ. ಇದಕ್ಕೆ ಕಾರಣ ಸಯಾಂ ದೇಶದ ಒಂದು ಕಥೆ. ಸಯಾಂ ದೇಶದ ಒಬ್ಬ ರಾಜನು ತನ್ನ ಮಂತ್ರಿಗಳಲ್ಲಿ ಯಾರನ್ನಾದರೂ ದುರ್ಬಲನನ್ನಾಗಿ ಮಾಡಬೇಕಾದರೆ ಅವನಿಗೆ ಒಂದು ಆನೆಯನ್ನು ಬಹುಮಾನವಾಗಿ ಕೊಡುತ್ತಿದ್ದನಂತೆ.

ಅವನು ಅದನ್ನು ಸಾಕುವುದಕ್ಕೇ ತನ್ನ ಆಸ್ತಿಯನ್ನೆಲ್ಲ ಕಳೆದು ದರಿದ್ರನಾಗುತ್ತಿದ್ದನಂತೆ. ಈ ಕಥೆಯಿಂದ ಇಂಗ್ಲಿಷಿನಲ್ಲಿ ಆ ಅರ್ಥ ಬಂದಿದೆ.

**ಬೀಗ** ಈ ಶಬ್ದಕ್ಕೆ ಮೂಲ ಬೀಯಗ; ಬಿಯಗ ಎಂಬ ರೂಪವೂ ಉಂಟು. ತೆಲುಗಿನಲ್ಲಿ ಇದಕ್ಕೆ ವಿಯ್ಯ ಎಂಬ ಜ್ಞಾತಿ ಶಬ್ದವಿದೆ. ವೈವಾಹಿಕ ಸಂಬಂಧವನ್ನು ಬೆಳೆಸುವುದಕ್ಕೆ **ವಿಯ್ಯಮುಚೇಯು** ಎನ್ನುತ್ತಾರೆ. ಆದುದರಿಂದ ಈ ಬೀಯಗ, ಬಿಯಗ, ಬೀಗ ಶಬ್ದಗಳಿಗೂ ಮೂಲದಲ್ಲಿ ಸಂಬಂಧ ಬೆಳೆಸುವ ಅರ್ಥದ ಒಂದು ರೂಪವಿದ್ದಿರಬಹುದು. ಅದು ಈಗ ಪ್ರಯೋಗದಲ್ಲಿ ಲುಪ್ತವಾಗಿದೆ. ಇದು ತಮಿಳಿನ ಸಂಬಂಧಿ ಎಂಬುದಕ್ಕೆ ಸಮಾನವಾದುದು. ಅದಕ್ಕೂ ಬೀಗ ಎಂದೇ ಅರ್ಥ. ಆದರೆ ಅದು ಸಂಸ್ಕೃತ ಶಬ್ದ. ಬೀಗ ಶಬ್ದದ ಸ್ತ್ರೀಲಿಂಗದ ರೂಪ ಬೀಗಿತ್ತಿ; ಬೀಗಿತಿ. ಎರಡು ರೂಪವೂ ಉಂಟು. ಒಂದಕ್ಕೆ ಇತ್ತಿ ಎಂಬ ಪ್ರತ್ಯಯವೂ ಇನ್ನೊಂದಕ್ಕೆ ಇತಿ ಪ್ರತ್ಯಯವೂ ಹತ್ತಿದೆ. ಇವು ಸಂಸ್ಕೃತದ ಸ್ತ್ರೀಗೆ ಸಮಾನವಾದುವು.

ಕೀಲಿ ಎಂಬರ್ಥದ ಬೀಗ ಎಂಬುದು ಒಂದಿದೆ. ಅದಕ್ಕೂ ಬಿಯಗ, ಬೀಯಗ ಎಂಬ ಪರ್ಯಾಯ ರೂಪಗಳಿವೆ. ಕೀಲಿ ಎಂಬ ಅರ್ಥ ಇರುವ ಶಬ್ದವೂ ದ್ರಾವಿಡ ಮೂಲದ್ದೇ. ಅದಕ್ಕೆ ತಮಿಳಿನಲ್ಲಿ ಪೀಕಮ್, ವೀಕಮ್ ಎಂದೂ ಮಲಯಾಳದಲ್ಲಿ ವೀಕಮ್ ಎಂದೂ ತೆಲುಗಿನಲ್ಲಿ ಬೀಗಮು ಎಂದೂ ಜ್ಞಾತಿ ಶಬ್ದಗಳಿವೆ. ಅರ್ಥವನ್ನು ಅನುಸರಿಸಿ ಈ ಶಬ್ದಗಳ ಮೂಲವನ್ನು ನಿರ್ಧರಿಸಬೇಕು. ಕುಮಾರವ್ಯಾಸನ **ತರಣಿತೆಗೆದನು ತಾವರೆಯ ಬಾಗಿಲಿನ ಬೀಯಗವ** (ವಿರಾಟ ಪರ್ವ ೩.೭೩) ಎಂಬ ಪ್ರಯೋಗವನ್ನು ಗಮನಿಸಿ. ಅಂತೂ ಈ ಎರಡು ಶಬ್ದಗಳ ಸ್ವರೂಪ ಸಂಬಂಧಗಳು ವಿಚಿತ್ರವಾಗಿವೆ.

**ಬೀದಿ** ನೋಡಿ: **ಓಣಿ**

**ಬುಡ, ಬೊಡ್ಡೆ** 'ಬುಡ' ಯಾವುದರ ತಳಭಾಗವೂ ಆಗಬಹುದು. ಮರದ ಬುಡ, ನದಿಯ ಬುಡ. ಬಾವಿಯ ಬುಡ, ಪಾತ್ರೆಯ ಬುಡ ಇತ್ಯಾದಿ. ಇದು ಮರದ ಕಾಂಡದ ಕೆಳಭಾಗಕ್ಕೂ ಅನ್ವಯಿಸುತ್ತದೆ. ಅವರು ಮರದ ಬುಡದಲ್ಲಿಯೇ ಮಧ್ಯಾಹ್ನವನ್ನು ಕಳೆದರು ಎಂದಾಗ ಬುಡ ಎಂದರೆ ಮರದ ಕೆಳಗಿನ ನೆರಳಿನಲ್ಲಿ ಎಂದು ಅರ್ಥವಾಗುತ್ತದೆ. ಬೊಡ್ಡೆ - ಮರದಲ್ಲಿ ಕೊಂಬೆಗಳಿರಲಿ ಇಲ್ಲದಿರಲಿ - ಕಾಂಡದ ಕೆಳಭಾಗಕ್ಕೆ ಅನ್ವಯಿಸುತ್ತದೆ.

**ಬುತ್ತಿ ಚಿಗುರು** ಬುತ್ತಿ ಎಂಬುದು ಸಂಸ್ಕೃತದ ಭುಕ್ತಿ ಎಂಬುದರಿಂದ ಬಂದುದು. ಭುಕ್ತಿ ಎಂದರೆ ಭೋಜನ, ಊಟ. ಆದರೆ ಕನ್ನಡದಲ್ಲಿ ಅದು ಪ್ರಯಾಣಕ್ಕೆಂದು ಕಟ್ಟಿಕೊಳ್ಳುವ ಊಟದ ಗಂಟು. ಬುತ್ತಿ ಚಿಗುರು ಇದು ಮೈಸೂರಿನಲ್ಲಿ ಬೆಳೆಯುವ ಬಹು ಸವಿಯಾದ ವೀಳೆಯದೆಲೆಯ ಚಿಗುರು. ಈ ಬಗೆಯ ವೀಳೆಯದೆಲೆ ಬೇರೆ ಕಡೆ ದೊರೆಯುವುದಿಲ್ಲ. ಇದು ವಿಶೇಷವಾಗಿ ಊಟ ಮಾಡಿದ ಬಳಿಕ ಸಿರಿವಂತರ ಮನೆಗಳಲ್ಲಿ ಪತಿಪತ್ನಿಯರು ಜೊತೆಜೊತೆಯಾಗಿ ಕುಳಿತು ಮಾಡುವ ತಾಂಬೂಲ ಚರ್ವಣಕ್ಕೆ ಮಾತ್ರ ದೊರಕತಕ್ಕದ್ದು. ಇದಕ್ಕೆ ಇನ್ನೂ ವಿಸ್ತಾರವಾದ ಪರಿವೇಷವುಂಟು. ಹಿಂದೆ ಮೈಸೂರು ಅರಮನೆಯ ಸುತ್ತಣ ಕಲಾರಾಧಕರ ಜೀವನದಲ್ಲಿ ಇದೊಂದು ರಮ್ಯ ಪ್ರಪಂಚವನ್ನು ನಿರ್ಮಾಣ ಮಾಡಿತ್ತು. ಈಗ ನಮ್ಮ ಕರ್ನಾಟಕದ ನಗರ ಜೀವನದಲ್ಲಿ ಕಲ್ಕತ್ತಾಪಾನ್, ಬನಾರ್ಸಿ ಪಾನ್, ರಾಂಪ್ಯಾರೆ ಮುಂತಾದುವು ಬೇರೆಯ ಪ್ರದೇಶದವರು ಈ ವೃತ್ತಿಗೆ ಇಳಿದಿರುವುದರ ಸಂಕೇತವಾಗಿದೆ. ಮೈಸೂರಿನಲ್ಲಿಯೇ ಬುತ್ತಿ ಚಿಗುರು, ರಸಬಾಳೆಗಳು ಮಾಯವಾಗುತ್ತಿವೆ. ನೆನೆದವರ ಮನದಲ್ಲಿ ಮಾತ್ರ ಅವು ಮನೆ ಮಾಡಿವೆ. ಮೈಸೂರಿನಲ್ಲಿ ಹಿಂದೆ ಬುತ್ತಿ ಚಿಗುರು ಎಂಬುದು ಒಂದು ರಮ್ಯವಾದ ರಸಿಕ ಪ್ರಪಂಚದ ಸಂಕೇತವಾಗಿತ್ತು.

**ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ** ಎಂಬ ವಾಕ್ಯಗಳು ಬೌದ್ಧ ಮತದಲ್ಲಿ ಬರುವ ಮೂರು ವಾಕ್ಯಗಳಲ್ಲಿ ಎರಡು; ಅರ್ಥ: ನಾನು ಬುದ್ಧನಿಗೆ

ಶರಣಾಗುತ್ತೇನೆ; ನಾನು ಬುದ್ಧ ಧರ್ಮಕ್ಕೆ ಶರಣಾಗುತ್ತೇನೆ. ಇದರ ಜೊತೆಗೆ ಮತ್ತೊಂದು ಮಾತು ಇದೆ. ಸಂಘಂ **ಶರಣಂ ಗಚ್ಛಾಮಿ**. ಬೌದ್ಧ ಸಂಘಕ್ಕೆ ಶರಣಾಗುತ್ತೇನೆ. ಇದು ಬೌದ್ಧ ಧರ್ಮದ ಮೂರು ನಮಸ್ಕಾರಗಳು.

**ಬುದ್ಧಿ** ಬುಧ್ ಎಂಬ ಸಂಸ್ಕೃತ ಧಾತುವಿನಿಂದ ವ್ಯುತ್ಪತ್ತಿ ಹೊಂದುವುದು ಈ ಶಬ್ದ. ಅನೇಕ ಅರ್ಥಗಳಿವೆ; ಈ ಧಾತುವಿಗೆ. ೧. ಎಚ್ಚರಗೊಳ್ಳು ೨. ತಿಳಿ ೩. ಗುರುತಿಸು ೪. ಕಂಡುಕೊಳ್ಳು ಇತ್ಯಾದಿ. ಈ ಎಲ್ಲಕ್ಕೂ ಮೂಲವಾದ ಶಕ್ತಿಗೆ, ಚೈತನ್ಯಕ್ಕೆ ಬುದ್ಧಿ ಎಂದು ಹೆಸರು. ಇದಕ್ಕೆ ವಿರುದ್ಧ ಶಬ್ದ ನಿರ್ಬುದ್ಧಿ. ಕನ್ನಡದಲ್ಲಿ ನಿಬುದ್ಧಿ ಎಂಬ ಶಬ್ದವೂ ಪ್ರಯೋಗದಲ್ಲಿದೆ. ಬುದ್ಧಿ ಇಲ್ಲದಿರುವುದು ಎಂದು ಆ ಶಬ್ದಕ್ಕೆ ಅರ್ಥ. ಮೌಢ್ಯ ಎಂಬ ಶಬ್ದವನ್ನೂ ಉಪಯೋಗಿಸಬಹುದು.

**ಬುದ್ಧಿ ಮಂಡಿಯ ಕೆಳಗೆ** ಈ ಮಾತಿನ ಪೂರ್ಣರೂಪ—**ಹೆಂಗಸರ ಬುದ್ಧಿ ಮಂಡಿ ಕೆಳಗೆ.** ಈಗಂತೂ ಇದನ್ನು ಗಾದೆಯಾಗಿ ಉಪಯೋಗಿಸುವವರೂ ಇದ್ದಾರೆ. ಇದನ್ನು ಸೃಷ್ಟಿ ಮಾಡಿದ ಮಹಾವ್ಯಕ್ತಿ ಒಬ್ಬ ಗಂಡಸೇ ಆಗಿರಬೇಕೆಂಬುದರಲ್ಲಿ ಅನುಮಾನವಿಲ್ಲ. ಸ್ತ್ರೀಯರಿಗೆ ಐಹಿಕ ವಿಷಯಗಳಲ್ಲಿ ಅಂದರೆ ಇಹದ ಆಸಕ್ತಿ ಹೆಚ್ಚೆಂದೂ, ಪುರುಷರಲ್ಲಿ ಪರದ ಕಡೆಗೆ ಅಂದರೆ ಆಮುಷ್ಮಿಕದ ಕಡೆಗೆ ಆಸಕ್ತಿ ಇರುವವರು ಹೆಚ್ಚೆಂದು ಹೇಳುವ ಉದ್ದೇಶದಿಂದ ಹುಟ್ಟಿರುವ ಮಾತು ಇದು. ಮಂಡಿಯ ಕೆಳಗೆ ಇರುವುದು ಪಾದ. ಆ ಬಳಿಕ ನೆಲ. ಭೂಮಿಗೆ ಸಂಬಂಧಿಸಿದ ಅಂದರೆ ಸಾಂಸಾರಿಕವಾದ ವಿಷಯಗಳಲ್ಲಿ ಸ್ತ್ರೀಯರ ಆಸಕ್ತಿ ಹೆಚ್ಚು. ಪುರುಷರು ಸಂಸಾರವನ್ನು ಮೀರಿದ ವಿಷಯಗಳಲ್ಲಿ ಕಾವ್ಯ, ಪುರಾಣ, ತರ್ಕ, ವೇದಾಂತ ವಿಷಯಗಳಲ್ಲಿ ಹೆಚ್ಚು ಆಸಕ್ತರೆಂದೂ ಆ ಮಾತಿನ ಅರ್ಥವೆಂದು ಒಬ್ಬ ಹರಿಕಥೆಯ ದಾಸರು ವ್ಯಾಖ್ಯಾನಿಸಿದ್ದರು. ಇದಕ್ಕೆ ಕೂಡ ಆಧಾರ ಸಾಲದು. ಇದು ಚಮತ್ಕಾರವಾದ ಮಾತಾದುದರಿಂದ ಇದಕ್ಕೆ ಚಮತ್ಕಾರದ ಅರ್ಥಗಳನ್ನು ಹೇಳುವುದು ಸಾಧ್ಯ. ಚಮತ್ಕಾರ ವೈಯಕ್ತಿಕವಾದದ್ದಾದುದರಿಂದ ಇದನ್ನು ಅವರವರಿಗೆ ಬಿಡಬೇಕು.

**ಬೂರ್ಜ್ವಾ** ಇದು ಇಂಗ್ಲಿಷಿನ bourg = ನಗರ ಎಂಬ ಪದದಿಂದ ಬಂದ Bourgeois ಶಬ್ದದ ಕನ್ನಡ ರೂಪ. ಇಂಗ್ಲಿಷಿನಲ್ಲಿಯೂ ಆ ಶಬ್ದವನ್ನು ಕನ್ನಡದಲ್ಲಿ ಬರೆದಿರುವ ಹಾಗೆಯೇ ಉಚ್ಚಾರಣೆ ಮಾಡುತ್ತಾರೆ. ಈ ಶಬ್ದಕ್ಕೆ ಮಧ್ಯಮ ವರ್ಗಕ್ಕೆ ಸೇರಿದ ನಗರವಾಸಿ ಜನಸಮೂಹ ಎಂದು ಅರ್ಥ. ಆ ಸಮೂಹದ ಒಬ್ಬೊಬ್ಬರಿಗೂ ಈ ಮಾತನ್ನು ಅನ್ವಯಿಸಬಹುದು. ಅಲ್ಲದೆ ಇದನ್ನು ಗುಣವಾಚಕವನ್ನಾಗಿಯೂ ಉಪಯೋಗಿಸಬಹುದು. ಈ ಶಬ್ದ ಫ್ರೆಂಚ್ ಭಾಷೆಯಿಂದ ಬಂದುದು. ಇದನ್ನು ಮಧ್ಯಮ ವರ್ಗದ ಸ್ವಾರ್ಥಪರರೂ ಆರ್ಥಿಕ ಗಳಿಕೆಯ ಕಡೆಗೆ ಗಮನವುಳ್ಳವರೂ ಆದ ಜನರಿಗೆ ಮಾತ್ರ ಅನ್ವಯಿಸುತ್ತಾರೆ. ಇವರು ಧ್ಯೇಯವಾದಿಗಳಿಗೂ, ಬುದ್ಧಿಜೀವಿಗಳಿಗೂ ತುಂಬ ದೂರವಾದ ಜನ.

**ಬೃಂದಾವನ - ವೃಂದಾವನ** ವೃಂದಾವನ ಸಂಸ್ಕೃತ. ಬೃಂದಾವನ - ತದ್ಭವ. ಎರಡೂ ಸರಿ. ಅರ್ಥ ೧. ತುಳಸೀಕಟ್ಟೆ. ೨. ಯಮುನಾ ನದಿಯ ದಡದ ಒಂದು ಉದ್ಯಾನವನ.

**ಬೃಹನ್, ಬೃಹತ್, ಬೃಹದ್** ಈ ಮೂರು ರೂಪಗಳಿಗೂ ಸಂಬಂಧವಿದೆ. ಬೃಹತ್ ಎಂಬುದು ಮೂಲರೂಪ. ಈ ಶಬ್ದದ ಮುಂದೆ ವ್ಯಂಜನ, ಅನುನಾಸಿಕ ಮುಂತಾದುವು ಬಂದಾಗ ಬೇರೆ ಬೇರೆ ಸಂಧಿಗಳಾಗುತ್ತವೆ. ದೊಡ್ಡ ಎಂದರ್ಥ.

೧. ಬೃಹತ್ + ಸಮಾಗಮ = ಬೃಹತ್ಸಮಾಗಮ. ೨. ಬೃಹತ್ + ನಾಟಕ = ಬೃಹನ್ನಾಟಕ ೩. ಬೃಹತ್ + ಶಿರ = ಬೃಹಚ್ಛಿರ. ಹೀಗೆ ವಿವರಗಳಿವೆ. ಬೃಹತ್ ಎಂಬುದೇ ಮೂಲ.

**ಬೃಹಸ್ಪತಿ** ಇದು ದೇವಗುರುವಿನ ಹೆಸರು. **ಬೃಹತಾಂ ವೇದಮಂತ್ರಾಣಾಂ ಪತಿಃ** ಎಂದು ಈ ಶಬ್ದದ ನಿರುಕ್ತ. ಅತಿಶಯವಾದ ವೇದ ಮಂತ್ರಗಳಿಗೆ ಒಡೆಯ ಎಂದರೆ

ಅಧಿಕಾರಿಯಾಗಿರುವವನು ಎಂದರ್ಥ. ವೇದಮಂತ್ರಗಳನ್ನು ಚೆನ್ನಾಗಿ ತಿಳಿದು, ಹೇಳಿಕೊಡಬಲ್ಲವನು ಎಂದರ್ಥ. ಗೀಷ್ಪತಿ, ವಾಚಸ್ಪತಿ ಮುಂತಾದ ಶಬ್ದಗಳೂ ಆ ಗುರುವಿಗೆ ಅನ್ವಯಿಸುತ್ತವೆ. ಅಂಗೀರಸ ಋಷಿಯ ಮಗನಾದ ಈತನಿಗೆ ಎಲ್ಲ ವಿದ್ಯೆಗಳೂ ಅಧೀನವಾಗಿದ್ದುವು ಎಂಬುದು ಪ್ರಸಿದ್ಧವಾದ ನಂಬಿಕೆ.

**ಬೆಂಕಿಯನ್ನು ಬೆಂಕಿಯಿಂದಲೇ ನಂದಿಸಬೇಕು** ಎಂಬುದು ಸರಿಯೇ? ಇದೊಂದು ಪ್ರಕೃತಿಯ ಸತ್ಯವಲ್ಲವೇ! ಕಾಡಿನ ಬೆಂಕಿಯನ್ನು ಆರಿಸಬೇಕಾದರೆ ಬೆಂಕಿಯು ಎದುರಿಗಿರುವ ಮರಗಳನ್ನು ಕಡಿದು ಬೆಂಕಿ ಹಾಕಿ ಎರಡು ಬೆಂಕಿಗಳು ಸೇರುವ ಹಾಗೆ ಮಾಡಿ ಕಾಡಿನ ಕಿಚ್ಚನ್ನು ನಂದಿಸುತ್ತಾರೆ. ಈ ಪ್ರಕೃತಿ ಸ್ವರೂಪವನ್ನು ಅರಿತೇ ಆಯುರ್ವೇದದಲ್ಲಿ **'ಉಷ್ಣಂ ಉಷ್ಣೇನ ಶಾಮ್ಯತಿ'** ಎಂಬ ತತ್ವದ ಔಷಧ ಪ್ರಯೋಗವೂ ಪ್ರಸಿದ್ಧವಾಗಿದೆ.

**ಬೆಂಗಳೂರು** ಎಂಬುದರ ಮೂಲ ರೂಪ **ವೇಂಗಡೂರು** ಎಂದಿರಬೇಕೆಂದು ನಾನು ತುಂಬ ಚಿಕ್ಕವನಾಗಿದ್ದಾಗ ವಿದ್ವಾಂಸರು ಚರ್ಚೆ ಮಾಡುತ್ತಿದ್ದುದನ್ನು ಕೇಳಿದ ನೆನಪು ಚೆನ್ನಾಗಿದೆ. ಅವರು ಯಾರೂ ಬೆಂದಕಾಳೂರು ಎಂಬ ರೂಪಕ್ಕೆ ಸಂಬಂಧಿಸಿದ ಕಥೆಯನ್ನಾಗಲೀ ಆ ರೂಪವನ್ನಾಗಲೀ ಒಪ್ಪಲು ಸಿದ್ಧರಿರಲಿಲ್ಲ. ಭಾಷಾಶಾಸ್ತ್ರದ ರೀತಿಯಿಂದ ವೇಂಗಡೂರು ಸಾಧ್ಯ. ಆದರೆ ಇದಕ್ಕೆ ಯಾವುದೋ ಶಾಸನದ ಆಧಾರವಿದೆಯೆಂದು ಹಿಂದೆ ದಿ. ತಿರುಮಲೆ ತಾತಾಚಾರ್ಯ ಶರ್ಮರು ನನಗೆ ಹೇಳಿದ್ದ ನೆನಪು. ಆದರೆ ನನಗೆ ಆ ಆಧಾರ ಸಿಕ್ಕಿಲ್ಲ. ಇದು ವಿದ್ವಾಂಸರ ನಿರ್ಧಾರಕ್ಕೆ ಇನ್ನೂ ಸಿಕ್ಕಿಲ್ಲ. ೯ನೆಯ ಶತಮಾನದ ಒಂದು ವೀರಗಲ್ಲಿನಲ್ಲಿ ಬೆಂಗಳೂರು ಎಂಬ ಹೆಸರೇ ಇದೆ. ಶ್ರೀಮತ್ ನಾಗತರನ ಮನೆವಗ ತಿಪ್ಪೊರ್ವೊಣಶೆಟ್ಟಿ ಬೆಂಗಳೂರ ಕಾಳಗದೊಳೆ ನಾಗತರನ ಮಗಂ **ಬುಟ್ಟಣ ಪತಿ ಸತ್ತಂ**. ಬೆಂದಕಾಳೂರಿನ ಕತೆ ೧೧ನೆಯ ಶತಮಾನದ್ದು. ಇವುಗಳನ್ನು ಹೋಲಿಸಿ ನೋಡಿ.

**ಬೆಂಡೆತ್ತು** ಈಚೀಚೆಗೆ ಹೊಸ ಬೈಗಳನ್ನು ಸೃಷ್ಟಿ ಮಾಡುತ್ತಿದ್ದಾರೆ. ಛತ್ರಿ, ಕಪ್ಪೆ, ಇಂಕ್‌ಬಾಟಲ್ಲು ಹೀಗೆ. ಇವುಗಳಲ್ಲೆಲ್ಲ ಸ್ವಲ್ಪ ಅಶ್ಲೀಲಾರ್ಥ ಇರುವಂತೆ ಇದೆ. ನಾನು ಮೊದಲು ಬೆಂಡೆತ್ತು ಎಂಬುದಕ್ಕೆ ಚರ್ಮ ಸುಲಿ ಎಂಬ ಅರ್ಥವಿದೆ ಎಂದು ತಿಳಿದುಕೊಂಡಿದ್ದೆ. ಈಚೆಗೆ ಅದನ್ನು ಉಪಯೋಗಿಸುವ ನನ್ನ ಯುವಕ ವಿದ್ಯಾರ್ಥಿಗಳೂ ಅದರಲ್ಲಿ ಅಶ್ಲೀಲಾರ್ಥವಿದೆ ಎಂದು ತಿಳಿಸಿದ್ದಾರೆ. ಆದರೆ ಒಂದು ವಿಶೇಷ ವಿಚಾರವಿದೆ. ಕೆಲವರು ಬೆಂಡೆತ್ತು ಶಬ್ದದಲ್ಲಿ ಇಂಗ್ಲೀಷಿನ bend ಶಬ್ದವಿದೆ ಎನ್ನುತ್ತಾರೆ. ಕಬ್ಬಿಣದ ಸರಳು bend ಆಗಿದ್ದಾಗ ಅದನ್ನು ನೇರ ಮಾಡುವುದೇ bend ಎತ್ತುವುದು. ಅಂದರೆ ಕಬ್ಬಿಣದ ಸುತ್ತಿಗೆಯಿಂದ ಚಚ್ಚುವುದು. ಅಷ್ಟು ಕಠಿಣವಾಗಿ ಶಿಕ್ಷಿಸುವುದು ಎಂದರ್ಥ. ಹೀಗೆ ಅದು ಬಂದಿರುವುದೂ ಸಾಧ್ಯ. ಏಕೆಂದರೆ ಕಬ್ಬಿಣದ ಸರಳನ್ನು ನೇರ ಮಾಡುವವರೆಲ್ಲ **ಬೆಂಡೆತ್ತು** ಎಂಬ ಶಬ್ದವನ್ನೇ ಉಪಯೋಗಿಸುತ್ತಾರೆ.

**ಬೆಕ್ಕಿಗೆ ಜ್ವರ ಬರುವ ಮಾತು** ಎಂಬ ಪದಸಮುಚ್ಚಯವನ್ನು ಅನೇಕ ಸಲ ಕೇಳಿದ್ದೇವೆ. ಅದಕ್ಕೆ ಅರ್ಥವೇನೆಂಬುದು ನಮಗೆ ಗೊತ್ತು. ಯಾವುದಾದರೂ ಸಲ್ಲದ ಮಾತಿಗೆ, ವ್ಯರ್ಥವಾದ ಹೇಳಿಕೆಗೆ, ಸಾಧ್ಯವಿಲ್ಲದ ವಿಷಯಕ್ಕೆ ಈ ಪದಸಮುಚ್ಚಯ ಅನ್ವಯವಾಗುತ್ತದೆ. ವೈಜ್ಞಾನಿಕವಾಗಿ ವಿಚಾರ ಮಾಡಿದಾಗ ಈ ಮಾತಿಗೆ ಅರ್ಥವೇ ಇಲ್ಲ. ಪ್ರಾಣಿಗಳಿಗೆ ಜ್ವರ ಬರುವುದಿಲ್ಲವೆ? ಬೆಕ್ಕು ಒಂದು ಪ್ರಾಣಿ ತಾನೆ! ಆಯುರ್ವೇದ ಶಾಸ್ತ್ರದಲ್ಲಿ ಪ್ರಾಣಿಗಳಿಗೆ ಜ್ವರ ಬರುತ್ತದೆ ಎಂಬುದನ್ನು ಗಮನಿಸಿ ಅಂಥ ಜ್ವರಗಳಿಗೆ ಬೇರೆ ಬೇರೆ ಹೆಸರುಗಳನ್ನು ಹೇಳಿದ್ದಾರೆ. ಆನೆಯ ಜ್ವರಕ್ಕೆ **ಕಾಕಲ** ಎಂದು ಹೆಸರು. ಕುದುರೆಯ ಜ್ವರಕ್ಕೆ **ಅಭಿತಾಪ** ಎಂದು ಹೆಸರು; ಹಸುವಿನ ಜ್ವರಕ್ಕೆ **ಗೋಕರ್ಣ** ಎಂದು ಹೆಸರು; ಆಡಿನ ಜ್ವರಕ್ಕೆ **ಪುಲಾಪ**; ಪಕ್ಷಿಗೆ **ಮಕರ**; ಸರ್ಪಕ್ಕೆ **ಅಕ್ಷಿಕ**; ನಾಯಿಗೆ **ಅಲರ್ಕ**; ಹೀಗೆ ಬೇರೆ ಬೇರೆ ಪ್ರಾಣಿ ಪಕ್ಷಿಗಳಿಗೆ

ಬರುವ ಜ್ವರಕ್ಕೆ ಬೇರೆ ಬೇರೆ ಹೆಸರುಗಳಿವೆ. ಆದುದರಿಂದ 'ಬೆಕ್ಕಿಗೆ ಜ್ವರ ಬರುವುದಿಲ್ಲ' ಎಂಬ ಮಾತು ಅರ್ಥವಿಲ್ಲದ್ದು.

ಹಾಗಾದರೆ ಈಗಿನ ಇಷ್ಟೊಂದು ಜನ ಉಪಯೋಗ ಮಾಡುವ ಈ ಪದಸಮುಚ್ಚಯಕ್ಕೆ ಅರ್ಥವೇ ಇಲ್ಲವೆ ? ಎಂದು ಕೇಳಬಹುದು. ಎಷ್ಟೋ ವೇಳೆ ಬಹು ಹಿಂದೆ ಅರ್ಥವತ್ತಾಗಿದ್ದ ಪದಸಮುಚ್ಚಯವು ಜನರ ಬಾಯಿಗೆ ಸಿಕ್ಕಿ ಬದಲಾವಣೆಗಳಾಗಿರುವ ಸಾಧ್ಯತೆಯಿದೆ. ಇದಕ್ಕೆ ನಮ್ಮ ಇಂದಿನ ಭಾಷೆಯಲ್ಲಿ ಬೇಕಾದಷ್ಟು ಉದಾಹರಣೆಗಳು ಸಿಕ್ಕುತ್ತವೆ. ಇಲ್ಲಿಯೂ ಅಂಥ ಯಾವುದಾದರೂ ಭಾಷಾ ಸಂಬಂಧಿಯಾದ ಬದಲಾವಣೆ ಆಗಿರುವುದು ಸಾಧ್ಯ.

ಮಾತಿನ ರೀತಿಯಿಂದ ಶಬ್ದಗಳ ಉಚ್ಚಾರಣೆಯಲ್ಲಿ ಕೆಲವು ವೇಳೆ ಯಾವುದಾದರೂ ಒಂದು ಭಾಗ ಲೋಪವಾಗಬಹುದು. ಹೀಗೆ ಲೋಪವಾದಾಗ ಆ ಲೋಪವನ್ನು ಸರಿ ತೂಗುವುದಕ್ಕೆಂದು ಮತ್ತೊಂದು ಕಡೆ ಯಾವುದಾದರೂ ಭಾಗವನ್ನು ಅಧಿಕಗೊಳಿಸುವ ಸಮತಾ ನಿರ್ಮಾಣ ಕ್ರಿಯೆಯೊಂದಿದೆ. ಇದಕ್ಕೆ ಭಾಷಾ ಶಾಸ್ತ್ರದಲ್ಲಿ 'ಪರಿಹಾರ' ಎಂಬ ಅರ್ಥವುಳ್ಳ "Compensation" ಎಂಬ ಶಬ್ದವನ್ನು ಆಂಗ್ಲ ಭಾಷೆಯಲ್ಲಿ ಉಪಯೋಗಿಸುತ್ತಾರೆ. ಬೆಕ್ಕಿಗೆ ಜ್ವರ ಬರುವ ಮಾತು ಎಂಬ ಶಬ್ದ ಸಮುಚ್ಚಯದಲ್ಲಿ ಅಂಥ ಒಂದು ಕ್ರಿಯೆ ನಡೆದಿದೆ. ಇಲ್ಲಿ ಇರಬೇಕಾದ ಶಬ್ದ 'ಬೆಕ್ಕಿಗೆ' ಅಲ್ಲ; ಅದು ಬೆಂಕಿಗೆ. ಬೆಂಕಿಗೆ ಜ್ವರ ಬರುವ ಮಾತು ಎಂದರೆ ಆಗ ಅದು ಅಸಾಧ್ಯವಾದ ಮಾತು ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಇದು ಭಾಷಾಶಾಸ್ತ್ರದ ಪರಿಚಯದ ಸಹಾಯದಿಂದ ಮಾತ್ರ ಮಾಡಿದ ಸೂಚನೆಯಲ್ಲ. ನನ್ನ ಅಭಿಪ್ರಾಯಕ್ಕೆ ಕನ್ನಡ ಕಾವ್ಯಗಳಲ್ಲಿ ಸಾಕಷ್ಟು ಆಧಾರವಿದೆ.

ಹರಿಹರ ಹದಿಮೂರನೆಯ ಶತಮಾನದಲ್ಲಿದ್ದ ವೀರಶೈವಕವಿ. ಆತನ ಅನೇಕ ರಗಳೆಗಳಲ್ಲಿ 'ರುದ್ರ ಪಶುಪತಿ ರಗಳೆ' ಎಂಬುದು ತುಂಬ ಸ್ವಾರಸ್ಯವಾದ ಕಾವ್ಯಭಾಗಗಳನ್ನು ಹೊಂದಿದೆ. ಅದರಲ್ಲಿ ಬರುವ ಮೂರು ಸಾಲುಗಳನ್ನು ಓದುಗರ ಗಮನಕ್ಕೆಂದು ಇಲ್ಲಿ ಉದ್ಧಾರ ಮಾಡುತ್ತೇನೆ:

***'ಜ್ವಲನಂ ಜ್ವರಂಗೊಂಡನೆಂದು ಮಂತ್ರಿಸುವಂತೆ***
***ಜಲಕೆ ಶೀತಂಬಂದುದೆಂದು ಭಾವಿಸುವಂತೆ***
***ಮಾರುತಂ ಗುರಿ ಎತ್ತಿತೆಂದು ಮಾಣಿಸುವಂತೆ'***

ಇತ್ಯಾದಿ.

ಇಲ್ಲಿ ಜ್ವಲನ ಎಂದರೆ ಬೆಂಕಿ ಎಂದರ್ಥ. ಬೆಂಕಿಗೆ ಜ್ವರ ಬಂದಿದೆ ಎಂದು ಬೆಂಕಿಗೆ ಮಂತ್ರ ಹಾಕುವ ಹಾಗೆ ಎಂಬ ಮಾತನ್ನು ಗಮನಿಸಿ. ಹಾಗೆಯೇ ಅದಕ್ಕೆ ಸಂವಾದಿಯಾದ ನೀರಿಗೆ ಶೀತ ಬಂತು ಎಂದು ತಿಳಿಯುವಂತೆ ಎಂಬುದೂ ಅರ್ಥವತ್ತಾಗಿದೆ. ಬೆಂಕಿಗೆ ಎನ್ನುವುದು ಜನರ ಮಾತಿನ ಭರದಲ್ಲಿ ಬೆಕ್ಕಿಗೆ ಎಂದಾಗಿದೆ. ಹೀಗಾಗಿ ಒಂದು ಅರ್ಥವಿಲ್ಲದ ಮಾತು ರೂಢಿಗೆ ಬಂದುಬಿಟ್ಟಿದೆ. **ಬೆಂಕಿಗೆ ಜ್ವರ ಬರುವ ಮಾತು** ಎಂಬ ಪದಸಮುಚ್ಚಯದ ಅರ್ಥವಿಸ್ತಾರ ಸಾಧ್ಯ. ಅಂಥ ಅರ್ಥದ ಸಾರ್ಥಕ್ಯ ಈಗಿರುವ ಶಬ್ದ ಸಮುಚ್ಚಯದಲ್ಲಿ ಇಲ್ಲ ಎಂಬುದು ಸ್ಪಷ್ಟ. ಹಿಂದೆ ಇಪ್ಪಾರಿನ ಮನೆಗಳನ್ನು ಕಟ್ಟುವಂತೆ ಮನೆ ಕಟ್ಟುವಾಗ, ಇಪ್ಪಾರಿನ ತುದಿಗಳೆರಡರಲ್ಲಿಯೂ ಒಂದೊಂದು **ಬೆಕ್ಕಿನ ಕಿಂಡಿ**ಗಳನ್ನು ಇಡಿಸಬೇಕು ಎನ್ನುತ್ತಿದ್ದರು. ಎರಡು ಪಾರುಗಳು ಸೇರುವ ಭಾಗದಲ್ಲಿ ಗೋಡೆಯಲ್ಲಿ ಇಂಥ ಕಿಂಡಿಗಳನ್ನು ಇಡಿಸುತ್ತಿದ್ದರು. ಆದರೆ ಬೆಕ್ಕು ಬರಲೇಬೇಕೆಂದು ಯಾರು ತಾನೇ ಕಿಂಡಿಗಳನ್ನು ಇಡುತ್ತಾರೆ. ಅದು **'ಬೆಳಕಿನ ಕಿಂಡಿ'**. ಅದು ಸಾಮಾನ್ಯರ ಉಚ್ಚಾರಣೆಯಲ್ಲಿ ಬೆಕ್ಕಿನ ಕಿಂಡಿ ಆಗಿತ್ತು. ಈಗ ಅಂಥ ಮನೆಗಳೇ ಇಲ್ಲದಿರುವುದರಿಂದ ಈ ಶಬ್ದ ಮಾತಿನಲ್ಲಿ ನಗರಗಳಲ್ಲಿ

ಮಾಯವಾಗಿದೆ. ಹಳ್ಳಿಗಳಲ್ಲಿ ಈಗಲೂ ಬೆಕ್ಕಿನ ಕಿಂಡಿಯ ಮಾತನ್ನು ಕೇಳಬಹುದು. ಬಿಜಾಪುರದ ಕಡೆ ಇದೇ ಬಗೆಯ ಒಂದು ಗಾದೆ ಮಾತನ್ನು ಉಪಯೋಗಿಸುವುದನ್ನು ನಾನು ಕೇಳಿದ್ದೇನೆ. **ಕತ್ತೆಗೆ ಚಳಿ ಬಂದಂತೆ** ಎಂಬುದು ಆ ಮಾತು. ಇದನ್ನು ನಾನು ಅನೇಕ ಸಲ ಕೇಳಿದ್ದೇನೆ. ಇಲ್ಲಿ ಯಾವ ಭಾಷಾ ವ್ಯತ್ಯಾಸವೂ ಆಗಿಲ್ಲ. ಕತ್ತೆ ಎಂದರೆ ಯಾವುದನ್ನೂ ಗಮನಿಸದ (unfeeling) ಎಂಬ ಅರ್ಥ ಅಷ್ಟೇ, ಎಂದು ಕೆಲವರು ತಿಳಿದಂತಿದೆ. ಆದರೆ ಅದು ಅಷ್ಟು ಸುಲಭವಾಗಿ ತೀರ್ಮಾನ ಮಾಡುವ ವಿಷಯವಲ್ಲ. ಅದು ಸರಿಯಾಗಿ **'ಕಂಥೆಗೆ ಚಳಿ ಬರುವ ಮಾತು'** ಎಂದಿರಬೇಕು. ಕಂಥೆ = ಕಂತೆ ಸಂನ್ಯಾಸಿಗಳು ಹೊದೆಯಲು ಉಪಯೋಗಿಸುವ ಬಟ್ಟೆ. ಅಂದರೆ ಚಳಿಯನ್ನು ಹೋಗಲಾಡಿಸಲು ಉಪಯೋಗಿಸುವ, ದಪ್ಪನಾಗಿ ದಾರದಿಂದ ಹೊಲಿದ ಬಟ್ಟೆ. ಅದು ಚಳಿಯನ್ನು ಹೋಗಲಾಡಿಸುವ ಸಾಧನ. ಅದಕ್ಕೇ ಚಳಿ ಬರುವುದು ಸಾಧ್ಯವೇ ? ಈ ಅರ್ಥ ಚಮತ್ಕಾರವನ್ನು ಆ ಪದ ಸಮುಚ್ಚಯದಲ್ಲಿ ತುಂಬಿಡಲಾಗಿದೆ. ಈ ಪದ ಸಮುಚ್ಚಯದಲ್ಲಿ ಕತ್ತೆಯನ್ನು ತಂದು ಅದಕ್ಕೆ ಅವಮಾನ ಮಾಡಬೇಕಾಗಿಲ್ಲ. ಕಾಲಕ್ರಮದಲ್ಲಿ ಭಾಷಾ ಪ್ರಯೋಗದಲ್ಲಿ ಎಂಥೆಂಥ ಚಮತ್ಕಾರಗಳು ನಡೆದು ಹೋಗಿರುತ್ತವೆ ಎಂಬುದಕ್ಕೆ ಇವೆರಡೂ ಒಳ್ಳೆಯ ಉದಾಹರಣೆಗಳಾಗಿವೆ. ನಾವಾಡುವ ಮಾತಿನ ಕಡೆಗೆ ಸದಾ ಗಮನವಿಟ್ಟು ಪರಿಶೀಲಿಸುವುದಾದರೆ ನಮ್ಮ ಓದುಗರು ಇಂಥ ಅನೇಕ ಉದಾಹರಣೆಗಳನ್ನು ಪಟ್ಟಿ ಮಾಡುವುದು ಸಾಧ್ಯ.

**ಬೆಚ್ಚೀಳು** ಈ ಶಬ್ದ ಎಲ್ಲೋ ಪ್ರಾದೇಶಿಕವಾಗಿ ಪ್ರಯೋಗವಾಗಿರಬಹುದು. ಅಷ್ಟೇ!! ಬೆಚ್ಚಿಬಿದ್ದನು ಎನ್ನುವ ಹಾಗೆ 'ಬೆಚ್ಚಿ ಎದ್ದನು' ಎಂದರೆ ತಪ್ಪೇನೂ ಆಗುವುದಿಲ್ಲ. 'ಬೆಚ್ಚಿ ಬೀಳು' ಶಬ್ದಕ್ಕೆ ನೆಲದ ಮೇಲೆ ಬೀಳುವ ಅರ್ಥವಿಲ್ಲವೆಂಬುದು ನೆನಪಿನಲ್ಲಿರಬೇಕು. ಬೀಳದೆ ಬೆಚ್ಚಿ ಬೀಳಬಹುದು!

**ಬೆಡಂಗು** ಶಬ್ದದಿಂದ ಬೆಡಗು ಬರುತ್ತದೆ. ಬೆಡಂಗು ಮೂಲ. ಇದು ಮೂಲ ದ್ರಾವಿಡ ಭಾಷೆಯ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. *೧. ಅಂದ, ಸೌಂದರ್ಯ ೨. ವಿಲಾಸ, ವೈಯಾರ. ೩. ನೈಪುಣ್ಯ ೪. ಚಮತ್ಕಾರ ೫. ಆಶ್ಚರ್ಯ ೬. ಗುಟ್ಟು, ರಹಸ್ಯ ೭. ಒಗಟು.* ಬೆಡಗಿನ ವಚನಗಳು ಎಂದು ವಚನಕಾರರ ವಚನಗಳಲ್ಲಿ ಕೆಲವನ್ನು ಗುರುತಿಸುತ್ತಾರೆ. ಈ ವಚನಗಳಲ್ಲಿ ಏನೋ ರಹಸ್ಯಾರ್ಥವಿರುತ್ತದೆ. ಮೊದಲ ಓದಿಗೆ ಆ ಅರ್ಥ ಹೊಳೆಯುವುದಿಲ್ಲ. ಮಹಾದೇವಿಯಕ್ಕನ **'ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ'** ಎಂದು ಮೊದಲಾಗುವ ವಚನವನ್ನು ಪರಿಶೀಲಿಸಿ.

**ಬೆಡಗಿನ ವಚನ** ವೀರಶೈವ ವಚನಕಾರರಲ್ಲಿ ಅನೇಕರು ಬೆಡಗಿನ ವಚನಗಳನ್ನು ರಚಿಸಿದ್ದಾರೆ. ಅವುಗಳಿಗೆ ಬೆಡಗಿನ ವಚನ ಎಂದು ಹೆಸರಿರುವುದೇ ಅವುಗಳ ಅರ್ಥ ಸ್ಫುಟವಾಗದಿರುವುದರಿಂದ. ಎಲ್ಲ ವಚನಕಾರರೂ ಒಂದೇ ಬಗೆಯಾದ ರೂಪಕ ಉಪಮಾನಾದಿಗಳ ಮೂಲಕ, ಶಬ್ದ ವೈಚಿತ್ರ್ಯದ ಮೂಲಕ, ಪ್ರತಿಮಾ ಪ್ರತಿಕೃತಿಗಳ ಮೂಲಕ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರೆ ಅರ್ಥಗ್ರಹಿಕೆ ಸುಲಭವಾಗಿತ್ತು. ಒಂದು ತಂತ್ರ ರೂಪಿತವಾಗುತ್ತಿತ್ತು. ಅದಿಲ್ಲದೆ ಇಂಥ ಬೆಡಗಿನ ವಚನಗಳನ್ನು ಎಲ್ಲರೂ ಒಪ್ಪುವಂತೆ ಬಿಡಿಸುವುದು ಅಸಾಧ್ಯ. ಇದನ್ನು ತಿಳಿದೂ ಸಮಸ್ಯೆಯನ್ನು ಪರಿಹರಿಸಲು ಮಾಡುವ ಪ್ರಯತ್ನ ಕೆಲವು ವೇಳೆ ಫಲದಾಯಕವಾಗುತ್ತದೆ. ನೋಡಿ: **ಅಂಬಿಗ.**

**ಬೆದಕು** ಈ ಕನ್ನಡ ಶಬ್ದಕ್ಕೆ ಅನ್ವೇಷಣೆ ಮಾಡುವುದು, ಹುಡುಕುವುದು, ಶೋಧಿಸುವುದು ಎಂದರ್ಥ. ಈ ಅರ್ಥವಲ್ಲದೆ ಎತ್ತು, ಕೆದಕು, ಕೆದರು, ಮೇಲಕ್ಕೆ ಎಬ್ಬಿಸು, ವಿವೇಚನೆ ಮಾಡು, ಆಲೋಚಿಸು ಎಂಬ ಅರ್ಥಗಳೂ ಬರುತ್ತವೆ. ಈ ಅರ್ಥಗಳಿಗೆಲ್ಲ ಕಾವ್ಯಗಳಲ್ಲಿ

ಪ್ರಯೋಗಗಳಿವೆ. ಇದನ್ನು ನಾಮಪದವಾಗಿಯೂ ಉಪಯೋಗಿಸಬಹುದು. ಕುಮಾರವ್ಯಾಸನ ಪ್ರಯೋಗವೊಂದರಲ್ಲಿ ಎರಡು ಬಗೆಯ ರೂಪವನ್ನೂ ಕಾಣಬಹುದು.

*ದ್ಯೂತದಲಿ ಮಧ್ಯದಲಿ ಘನ ಕಂಡೂತಿಯಲಿ...*
*ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ*
*ಬೆಳೆವುದು ಬೆದಕ ಬೆದಕಲು ರಾಯಕೇಳೆಂದ*

*(ಕುಮಾರವ್ಯಾಸ - ಉದ್ಯೋಗ ಪರ್ವ ೪-೯೫)*

ಇಲ್ಲಿ ನಾಮಪದ ಕ್ರಿಯಾಪದ ಎರಡೂ ಪ್ರಯೋಗವಾಗಿವೆ.

**ಬೆನ್ನೀರು ಇದರ ವಿಗ್ರಹವಾಕ್ಯ ಏನು?** ಬಿಸಿಯಾದ + ನೀರು = ಬೆನ್ನೀರು. ಇದು ಕರ್ಮಧಾರಯ ಸಮಾಸ.

**ಬೆಸ್ತ** ಇದಕ್ಕೆ ಬೆಸದ ಎಂಬ ಮತ್ತೊಂದು ರೂಪವೂ ಇದೆ. ಇದಕ್ಕೆ ಮೀನು ಹಿಡಿಯುವವನು ಎಂದು ಅರ್ಥ. ಇದು ಬೆಸೆದವ =ಕೆಲಸ ಮಾಡುವವನು, ಕೆಲಸಕ್ಕೆ ಕರೆಯಬೇಕಾದವನು, a workman ಎಂಬ ಅರ್ಥವಿದೆ. ಅದರಿಂದಲೇ ಬೆಸ್ತ ಎಂಬ ರೂಪವೂ ಸಿದ್ಧಿಸಿರಬೇಕು. ಬೆಸ್ತ ಎಂದರೆ ಮೀನು ಹಿಡಿಯುವವನು. ಅವನೇ ಇತರರ ಬೆಸದವನೂ ಆಗಿದ್ದಿರಬಹುದಾದ ಸಂದರ್ಭದ ಸೂಚನೆಯಿದೆ.

**ಬೆಳಕು - ಬೆಳಗು** ಈ ಎರಡು ಶಬ್ದಗಳಲ್ಲಿ ಬೆಳಗು ಎಂಬುದೇ ಮೂಲ. ಬೆಳಕು ಎಂಬುದು ಪರ್ಯಾಯ ರೂಪ. ಬೆಳಗು ಎಂಬ ಶಬ್ದಕ್ಕೆ ಕ್ರಿಯಾರ್ಥವೂ ಇದೆ. ನಾಮಾರ್ಥವೂ ಇದೆ. ಮಗು ಮನೆಯನ್ನು ಬೆಳಗುತ್ತದೆ. (ಕ್ರಿ), ಬೆಳಗಾಗು, ಬೆಳಕು ಬರು. (ನಾ), **ಸೊಡರು ಬೀದಿಗೆ ಸುಳಿಯಲೆಲ್ಲಿಯ ಬೆಳಗು** (ಕುಮಾರ ವ್ಯಾಸ ದ್ರೋ. ೧೩-೪೭) ಇಲ್ಲಿ ದೀಪ ಎಂಬರ್ಥ. ಬೆಳಕು ಎಂಬ ಶಬ್ದವನ್ನು ಕ್ರಿಯಾರ್ಥದಲ್ಲಿ ಸಾಮಾನ್ಯವಾಗಿ ಉಪಯೋಗಿಸುವುದಿಲ್ಲ. ಹಳೆಯ ಕನ್ನಡದಲ್ಲಿ ಅಪೂರ್ವವಾಗಿ ದೃಷ್ಟಾಂತಗಳು ದೊರೆಯುತ್ತವೆ. ಆದರೆ ಬೆಳಗು + ಇಸು = ಬೆಳಗಿಸು ಎಂಬಂತೆ ಪ್ರಯೋಗಿಸುವುದು ಸಾಧ್ಯ.

**ಬೆಳಗ್ಗೆ - ಮುಂಜಾನೆ** ಬೆಳಿಗ್ಗೆ ತುಂಬ ಪ್ರಚಾರದಲ್ಲಿದ್ದರೂ ಸರಿಯಾದ ಶಬ್ದದ ರೂಪ ಬೆಳಗ್ಗೆ. ಇದು ಬೆಳಗಿಗೆ ಅಥವಾ ಬೆಳಗಾಗೆ ಎಂಬ ಶಬ್ದಗಳ ಸಂಕ್ಷಿಪ್ತರೂಪ. ಬೆಳಗು ಇದರ ಮೂಲ ರೂಪ. ಇದು ಕ್ರಿಯಾಪದವೂ, ನಾಮಪದವೂ ಆಗುತ್ತದೆ. ಬೆಳಗಾಗುವುದು ಎಂದರೆ ಸೂರ್ಯೋದಯವಾಗುವುದು ಎಂದು ಅರ್ಥ. **ಬೆಳಗಾಗ ನಾನೆದ್ದು ಯಾರ್ಯಾರ ನೆನೆಯಲಿ** ಎಂದು ಜಾನಪದ ಗೀತದ ಸಾಲನ್ನು ಗಮನಿಸಿ.

ಮುಂಜಾನೆ: ಇದು ವಿಚಿತ್ರ ಶಬ್ದ. ಮುಂಜಾವ ಎಲ್ಲರಿಗೂ ಗೊತ್ತಿರುವ ಶಬ್ದ. ಮುಂದು + ಜಾವ = ಮುಂಜಾವ. ಇದಕ್ಕೆ ದಿನಕ್ಕೆ ಮೊದಲಿನ ಜಾವ ಅಂದರೆ ಸೂರ್ಯೋದಯಕ್ಕೆ ಮುಂಚೆ ಎಂದರ್ಥ. **ಮುಂಜಾವದಲ್ಲಿ ಹೆಗ್ಗಾಳೆ ಮೊಳಗಿದವು** ಎಂದು ಕುಮಾರವ್ಯಾಸನ ಭೀಷ್ಮಪರ್ವದ ಪ್ರಯೋಗ (೮-೧). ಜಾವ ಎನ್ನುವುದು ಯಾಮ ಎಂಬ ಸಂಸ್ಕೃತ ಶಬ್ದದ ತದ್ಭವ. ಈ ಶಬ್ದವೇ ಮುಂಜಾನೆ ಎಂಬ ರೂಪವನ್ನು ಪಡೆದಿದೆ. ಅದರ ಸ್ವರೂಪ ಬಂದಿರುವುದು ಹೀಗೆ. ಕನ್ನಡದಲ್ಲಿ ಎ, ಏ, ಎಂಬ ಅವಧಾರಣೆಯ ಪ್ರತ್ಯಯಗಳಿವೆ. ಅವಧಾರಣೆ ಎಂದರೆ ನಿಶ್ಚಯ, ನಿರ್ಧಾರ. ಅವನು ಬೆಳಗ್ಗೆಯೇ ಊರಿಗೆ ಹೊರಟನು ಎಂಬ ವಾಕ್ಯವನ್ನು ಗಮನಿಸಿ. ಬೆಳಗ್ಗೆ + ಏ = ಬೆಳಗ್ಗೆಯೇ. ಇಲ್ಲಿ ನಿರ್ಧಾರದ ಅರ್ಥ ಪ್ರತ್ಯಯವನ್ನು ಸೇರಿಸಿದೆ. ಬೆಳಗ್ಗೆಯೇ ಎಂಬುದರ ಬದಲು ಬೆಳಗ್ಗೆನೇ ಎಂಬ ರೂಪವನ್ನು ಆಡುಮಾತಿನಲ್ಲಿ ಪಡೆಯುತ್ತದೆ. ಅನೇಕ ಉದಾಹರಣೆಗಳನ್ನು ಕೊಡಬಹುದು. ಹೀಗೆಯೇ

- ಹೀಗೇನೇ, ಹಾಗೇನೇ, ತಂದೇನೇ, ತಾಯೀನೇ, ಮಗಳೇನೇ, ಇತ್ಯಾದಿ. ಮುಂಜಾವ + ಏ = ಮುಂಜಾವೇ ಅಥವಾ ಮುಂಜಾವವೇ. ಇದೇ ಮುಂಜಾನೇ, ಮುಂಜಾನೆಯೇ. ಮುಂಜಾನು ಎಂಬ ಶಬ್ದವೂ ಕೂಡ ಕೆಲವು ಕಡೆಗಳಲ್ಲಿ ಪ್ರಯೋಗದಲ್ಲಿದೆ.

ಈ ಎ, ಏ, ಎಂಬ ಅವಧಾರಣೆಯ ಪ್ರತ್ಯಯಗಳನ್ನು ಅನೇಕ ಸಲ ಅವಾಂತರದಿಂದ ಬಳಸಿ ಕನ್ನಡದಲ್ಲಿ ಕೆಲವು ಶಬ್ದಗಳ ವಿಚಿತ್ರ ರೂಪಗಳ ಸೃಷ್ಟಿಯಾಗಿದೆ. ಉದಾ: ಅವನು +ಎ =ಅವನೆ +ಏ =ಅವನೇನೆ, ಅವನೇನೆ +ಎ =(ವೆ) ಅವನೇನೇವೆ +ಏ =ಅವನೇನೇವೇ + ಎ = ಅವನೇನೇವೆಯೆ. ಹೀಗೆ ಅನೇಕ ಅವಧಾರಣೆಗಳನ್ನು ಆಡುಮಾತಿನಲ್ಲಿ ಜನ ಪ್ರಯೋಗಿಸುತ್ತಾರೆ. ಅದು ಬರಹದಲ್ಲಿ ತಪ್ಪಾಗುತ್ತದೆ.

**ಬೇಕುಪ್ಪ** ಪಾರಸೀ ಭಾಷೆಯ **ಬೇವಕೂಫ್** ಎಂಬ ಶಬ್ದದಿಂದ ಬಂದದ್ದು. ಹಿಂದಿಯಲ್ಲಿ ಮೂಲರೂಪವೂ ಜೊತೆಗೆ ಬೇಕೂಫ್ ಎಂಬ ಪರ್ಯಾಯ ರೂಪವೂ ಇದೆ. ಈ ಶಬ್ದಕ್ಕೆ ವಿವೇಕವಿಲ್ಲದ ವ್ಯಕ್ತಿ, ತಿಳಿಗೇಡಿ, ದಡ್ಡ, ಮೂಢ ಎಂಬ ಅರ್ಥಗಳಿವೆ. ಆಧುನಿಕ ಕನ್ನಡದಲ್ಲಿ ಯಾರೂ ಈ ರೂಪವನ್ನು ಉಪಯೋಗಿಸುವುದಿಲ್ಲ. ಬೇಕೂಫ ಎಂಬುದೇ ಪ್ರಚಾರದಲ್ಲಿರುವ ಬೈಗುಳು.

**ಬೇಜಾನ್** ಇದು ಹಿಂದೀ ಶಬ್ದ. ಇದಕ್ಕೆ ಜ್ಞಾನವಿಲ್ಲದಿರುವಿಕೆ, ಪ್ರಾಣವಿಲ್ಲದಿರುವಿಕೆ, ನಿರ್ಜೀವ ಎಂದರ್ಥ. ಬೇ ಎಂಬುದು ಪಾರಸೀ ಭಾಷೆಯ ನಿಷೇಧಾರ್ಥಕ ಪ್ರತ್ಯಯ. ಜಾನ್ ಎಂಬುದು ಹಿಂದೀ ಶಬ್ದ. ಜಾನ್ ಎಂದರೆ ಪ್ರಾಣ, ತ್ರಾಣ ಎಂಬ ಅರ್ಥಗಳಿವೆ. ಬೇಜಾನ್ ಎಂದರೆ ಅರಿವಿಗೆ ಸಿಗದ, ಲೆಕ್ಕಕ್ಕೆ ಸಿಗದ ಎಂಬ ಅರ್ಥವೂ ಇದೆ. ಆದುದರಿಂದಲೇ ಅತ್ಯಧಿಕವಾದ ಎಂಬ ತಾತ್ಪರ್ಯಾರ್ಥವೂ ಬರುತ್ತದೆ. ಮಾವಿನ ಗಿಡದಲ್ಲಿ ಬೇಜಾನ್ ಕಾಯಿಗಳಿವೆ ಎಂಬುದು ರೂಢಿಯ ಪ್ರಯೋಗ. ಬೇದರದ್ =ದಯೆಯಿಲ್ಲದ, ಬೇದಪ್ =ದಣಿದ. ಈ ಶಬ್ದಗಳನ್ನೂ ಗಮನಿಸಿ.

**ಬೇಡಿಕೊಳ್ಳುತ್ತೇನೆ** ಬೇಡಿಕೊಳ್ಳು, ಪ್ರಾರ್ಥಿಸಿಕೊಳ್ಳು, ಕೇಳಿಕೊಳ್ಳು ಎಂಬ ಶಬ್ದಗಳು ಒಂದು ಬಗೆಯ ಸಂಯುಕ್ತ ಕ್ರಿಯಾಪದಗಳೆಂದು ಹೇಳಬಹುದು. ಬೇಡುವುದು ಒಂದು ಕ್ರಿಯೆ. ಕೊಳ್ಳುವುದು ಮತ್ತೊಂದು ಕ್ರಿಯೆ. ನಾನು ಕೇವಲ ಬೇಡುವುದಿಲ್ಲ; ವಿನಯದಿಂದ ನಾನು ಬೇಡಿದುದನ್ನು ತಾವು ನೀಡಿದಾಗ ಸ್ವೀಕರಿಸುತ್ತೇನೆ ಎಂದು ಅರ್ಥ. ಇದೊಂದು ರೀತಿಯ ಗೌರವ ಸೂಚಕವಾದ ಮಾತಿನ ಧಾಟಿ. ಈ ಕ್ರಿಯಾಪದದ ಎರಡನೇ ಭಾಗವಿಲ್ಲದಿದ್ದರೆ ಅದರಲ್ಲಿ ಏನೋ ಒಂದು ಕೊರತೆ, ವಿನಯರಾಹಿತ್ಯ ಇದೆ ಎನ್ನಿಸುತ್ತದೆ. ಬೇಕಾದರೆ ಅದನ್ನು ಪ್ರಯೋಗಿಸಿ ನೋಡಿ. ಇದು ನನ್ನ ವೈಯಕ್ತಿಕ ವಿವರಣೆ. ಇದಕ್ಕೆ ಯಾವ ವ್ಯಾಕರಣದ ಆಧಾರವೂ ಇಲ್ಲ. ಶಬ್ದಾರ್ಥದ ವ್ಯಂಜಕತೆಯ ವಿವರಣೆಗೆ ಸಂಬಂಧಪಟ್ಟ ಮಾತು ಅಷ್ಟೇ!

**ಬೇತು** ಇದು ಹಿಂದಿ ಮತ್ತು ಮರಾಠಿ ಶಬ್ದ. ಇದಕ್ಕೆ ಉಪಾಯ, ಹಂಚಿಕೆ, ಯೋಜನೆ, ಕ್ರಮ ಇತ್ಯಾದಿ ಅರ್ಥಗಳಿವೆ.

**ಬೇಬಾಕ್ ಬೇಬಾಕಿ** ಇದಕ್ಕೆ ಅರಬ್ಬಿ ಮೂಲ. ಯಾವ ಶಿಲ್ಕೂ ಉಳಿಯದಂತೆ, ಬೇ ಎಂಬುದು ಒಂದು ಪ್ರತ್ಯಯ. ಅದಕ್ಕೆ ಇಲ್ಲದಂತೆ ಎಂದರ್ಥ. ಬೇಬಾಕಿ =ಬಾಕಿಯಿಲ್ಲದಂತೆ ಎಂದರ್ಥ.

**ಬೇರೀಜು** ಇದು ಪಾರಸೀ ಭಾಷೆಯ ಶಬ್ದ. ಅಲ್ಲಿ ಇದು ಬರೀಜ್ ಎಂದಿದೆ. ಅಲ್ಲಿ ಅದಕ್ಕೆ ಸಂಕಲನ, ಕೂಡಿಸುವಿಕೆ ಎಂದರ್ಥ. ಕನ್ನಡದಲ್ಲಿ ಒಂದು ಮೊತ್ತ. ಒಂದು ಹಳ್ಳಿಯ ಜಮೀನಿನ ಮೊತ್ತ; ಇಷ್ಟು ಸಾವಿರ ಎಕರೆ ಮುಂತಾಗಿ ಹೇಳುವಾಗ ಈ ಮಾತನ್ನು ಉಪಯೋಗಿಸುತ್ತಾರೆ. ಒಂದು ತಾಲ್ಲೂಕಿನ ಕಂದಾಯದ ಬೇರೀಜು ೭೦,೦೦೦ ರೂಪಾಯಿ ಎಂದರೆ ಒಟ್ಟು ಮೊತ್ತ ಎಂದರ್ಥ. ಸುಮ್ಮನೆ ಬೇರೀಜು ಎಂದರೂ ಕಂದಾಯದ ಮೊತ್ತ ಎಂಬರ್ಥದಲ್ಲಿ ಸರಕಾರದಲ್ಲಿ ಉಪಯೋಗವಿದೆ.

**ಬೇವಾರ್ಸಿ** ಅರಬ್ಬಿ ಭಾಷೆಯಲ್ಲಿ ವರ್ಸಾ ಎಂಬ ಶಬ್ದವಿದೆ. ಅದಕ್ಕೆ ಹಕ್ಕುದಾರ ಎಂದರ್ಥ. ಬೇ ಎಂಬುದು ನಿಷೇಧವನ್ನು ಸೂಚಿಸುವ ಉಪಸರ್ಗ. ಆದುದರಿಂದ ಬೇವಾರ್ಸಿ ಎಂದರೆ ಹೇಳುವವರು ಕೇಳುವವರು ಯಾರೂ ಇಲ್ಲದ ವ್ಯಕ್ತಿ, ದಿಕ್ಕಿಲ್ಲದವನು ಎಂದರ್ಥ. ಇದು ಕನಿಕರಕ್ಕೆ ಅವಕಾಶ ನೀಡುವ ಶಬ್ದವಾಗಬೇಕು. ಆದರೆ ಕನ್ನಡದಲ್ಲಿ ಇದು ಬಹು ಪ್ರಸಿದ್ಧವಾದ ಬೈಗುಳ ಮಾತಾಗಿದೆ.

**ಬೇಶಿಸ್ತು - ಅಶಿಸ್ತು** ಬೇ ಅನ್ನುವುದು ಪಾರಸೀ ಭಾಷೆಯ ನಿಷೇಧಾರ್ಥಕ ಅನ್ವಯ. ಬೇ ಇಮಾನ್ = ಪ್ರಾಮಾಣಿಕನಲ್ಲದವನು ಬೇ ಇಲಾಜ್ = ನಿರುಪಾಯ, ಬೇಕಾರ್ = ನಿರುದ್ಯೋಗಿ, ಬೇ ಕಾಯದಾ = ಕಾನೂನಿಗೆ ಸಂಬಂಧವಿಲ್ಲದ. ಅ ಎಂಬುದು ಸಂಸ್ಕೃತದ ನಿಷೇಧಾರ್ಥಕವಾದ ಉಪಸರ್ಗ. ಅ + ಏಕ = ಅನೇಕ, ಅ + ಭಾವ = ಅಭಾವ, ಅ + ದೃಷ್ಟ = ಅದೃಷ್ಟ, ಅ + ದೂರ = ಅದೂರ ಇತ್ಯಾದಿ.

ಶಿಸ್ತ್ ಎಂಬ ಪಾರಸೀ ಭಾಷೆಯ ಶಬ್ದ ಕನ್ನಡದಲ್ಲಿ ಶಿಸ್ತು ಆಗಿದೆ. ಇದಕ್ಕೆ ೧. ಅಲಂಕಾರ ೨. ನಿಯಮ ೩. ಕ್ರಮ ೪. ಗುರಿ ೫. ತೆರಿಗೆ ೬. ಸುಂದರವಾದ, ಇತ್ಯಾದಿ ಅರ್ಥಗಳಿವೆ ಪಾರಸೀ ಭಾಷೆಯಲ್ಲಿ. ಆದ್ದರಿಂದ ಬೇಶಿಸ್ತು ಎನ್ನುವ ಅರ್ಥವೇ ಅಶಿಸ್ತು ಶಬ್ದಕ್ಕೂ ಇದೆ. ಆದರೆ ಅಶಿಸ್ತು ಇನ್ನೂ ಒಪ್ಪಿಗೆಗೆ ಬಂದಿಲ್ಲ, ಬರುತ್ತಾ ಇದೆ.

**ಬೇಷರತ್ತು** ಷರತ್ತು ಎಂಬ ಶಬ್ದಕ್ಕೆ ಬೇ ಎಂಬ ಪ್ರತ್ಯಯವು ಪ್ರಾರಂಭದಲ್ಲಿ ಸೇರಿ ರೂಪುಗೊಂಡಿದೆ. ಷರತ್ತು ಎಂಬುದು ಅರಬ್ಬಿ ಭಾಷೆಯ ಶರ್ತ್ ಎಂಬ ಶಬ್ದದಿಂದ ಬಂದುದು. ಇದಕ್ಕೆ ೧. ಕರಾರು, ನಿಯಮ ಎಂದೂ ೨. ಪಂದ್ಯ, ಜೂಜು, ಸ್ಪರ್ಧೆ ಎಂದೂ ಎರಡು ಅರ್ಥಗಳಿವೆ. ಬೇಷರತ್ ಅಥವಾ ಬೇಶರತ್ ಎಂದರೆ ಯಾವ ನಿಯಮ, ಕರಾರು ಇಲ್ಲದೆ ಎಂದರ್ಥ. ಬೇ ಎಂಬುದು ಯಾವುದೂ ಇಲ್ಲದೆ ಎಂಬ ಅರ್ಥವನ್ನು ಕೊಡುತ್ತದೆ. ಬೇವಾರ್ಸಿ, ಬೇನಾಮಿ, ಬೇಬಾಕಿ ಶಬ್ದಗಳನ್ನು ಹೋಲಿಸಿ. ನೋಡಿ: ಬೇಶಿಸ್ತು.

**ಬೇಸ್ತವಾರ** ಬೇಸ್ತವಾರ ಇದು ಬೃಹಸ್ಪತಿವಾರ ಎಂಬುದರ ಗ್ರಾಮ್ಯ ರೂಪ. ಈ ಶಬ್ದವನ್ನು ಬರವಣಿಗೆಯಲ್ಲಿ ಇನ್ನೂ ಹೆಚ್ಚಾಗಿ ಉಪಯೋಗ ಮಾಡುತ್ತಿಲ್ಲ. ಬೃಹಸ್ಪತಿ ದೇವತೆಗಳ ಗುರು. ಆದುದರಿಂದ ಈ ವಾರಕ್ಕೆ ಗುರುವಾರ ಎಂಬುದು ಮತ್ತೊಂದು ಹೆಸರು. ಸುಲಭವಾಗಿರುವ ಈ ಹೆಸರನ್ನೇ ಹೆಚ್ಚಾಗಿ ಉಪಯೋಗ ಮಾಡುತ್ತಾರೆ.

**ಬೊಂಬಾಟ್** ಇದನ್ನು ಯುವಕರು ಅದರಲ್ಲೂ ವಿದ್ಯಾರ್ಥಿಗಳು ಹೆಚ್ಚಾಗಿ ಉಪಯೋಗಿಸುತ್ತಾರೆ. ಇದು ಎಲ್ಲಿಂದ ಬಂತು ಎಂದು ನನಗೆ ಗೊತ್ತಿಲ್ಲ. ಇದು, ಒಂದು ಅನುಕರಣವಿದ್ದಂತಿದೆ. ಮುಖ್ಯವಾಗಿ ಸಿನಿಮಾಗಳಿಗೂ ಔತಣಕೂಟಗಳಿಗೂ ಪಾನ ಗೋಷ್ಠಿಗಳಿಗೂ ಈ ಶಬ್ದವನ್ನು ಗುಣಸೂಚಕವಾಗಿ ಉಪಯೋಗಿಸುತ್ತಾರೆ. ಬಹಳ ಮಜವಾಗಿತ್ತು. ತುಂಬ ಖುಷಿ ಕೊಟ್ಟಿತು ಎಂಬ ಅರ್ಥದಲ್ಲಿ. ಇಂಥ ಶಬ್ದಗಳು ಶಾಶ್ವತವಾಗಿ ನಿಲ್ಲತಕ್ಕವಲ್ಲ. ಕೆಲವು ಕಾಲ ಇದ್ದು ಮರೆಯಾಗುತ್ತವೆ. ಹಿಂದೆ ನಾವು ವಿದ್ಯಾರ್ಥಿಗಳಾಗಿದ್ದಾಗ ಕಮಾಯಿಸು ಎಂಬ ಶಬ್ದವನ್ನು ಸರ್ವಾರ್ಥಸಿದ್ಧಿಗಾಗಿ ಉಪಯೋಗಿಸುತ್ತಿದ್ದೆವು. ಸಿಗರೇಟು ಸೇದುವುದಕ್ಕೆ, ಊಟ ಮಾಡುವುದಕ್ಕೆ, ಕಾಫಿ ಕುಡಿಯುವುದಕ್ಕೆ, ಭಾಷಣ ಮಾಡುವುದಕ್ಕೆ ಎಲ್ಲಕ್ಕೂ ಒಂದೇ ಕ್ರಿಯಾಪದ ಕಮಾಯಿಸು. ಈ ಶಬ್ದ ಈಗ ವಿದ್ಯಾರ್ಥಿ ವೃಂದದಿಂದ ಮಾಯವಾಗಿದೆ.

**ಬೊಂಬಾಯಿ ಬೋಂಡ** ಬೊಂಬಾಯಿ ಬೋಂಡ, ಬೊಂಬಾಯಿ ಹಲ್ವ ಇವುಗಳನ್ನು ತಯಾರಿಸುವುದನ್ನು ನಮ್ಮ ಕಡೆಯ ಜನ ಬೊಂಬಾಯಿನ ಕಡೆಯವರಿಂದ ಕಲಿತರು. ಅದಕ್ಕಾಗಿ ಬೊಂಬಾಯಿಯ ಹೆಸರು ಅಂಟಿ ಬಂದಿದೆ. ಮದ್ದೂರು ವಡೆ ಇದ್ದ ಹಾಗೆ ಅಷ್ಟೆ! ಈಚೆಗೆ ಬೊಂಬಾಯಿ ಚಟ್ನಿಯೂ ಬಂದಿದೆ. ಇನ್ನೂ ಏನೇನು ಬರುತ್ತದೋ ನೋಡೋಣ!

**ಬೊಂಬೆ - ಗೊಂಬೆ** ಬೊಂಬೆ ಕರ್ನಾಟಕದಲ್ಲಿ ತುಂಗಭದ್ರಾ ನದಿಯ ದಕ್ಷಿಣಕ್ಕೆ ಹೆಚ್ಚು ಪ್ರಚಾರದಲ್ಲಿದೆ. ಗೊಂಬೆ ಉಡುಪಿ, ಕಾರವಾರ, ಧಾರವಾಡ ಮುಂತಾದ ಕಡೆಗಳಲ್ಲಿ ಹೆಚ್ಚು ಪ್ರಚಾರದಲ್ಲಿದೆ. ಎರಡೂ ಸರಿಯಾದ ಶಬ್ದಗಳೇ. ಅರ್ಥ ಸ್ಪಷ್ಟ. ಸುಂದರವಾದ ವಸ್ತುಗಳ ಮನುಷ್ಯರ, ಪ್ರಾಣಿಗಳ ಪ್ರತಿಕೃತಿ.

**ಬೊಡ್ಡಿ** ಹಳಗನ್ನಡದಲ್ಲಿ ಪೊಡ್ಡಿ ಎಂಬ ಶಬ್ದವಿದೆ ಆ ಶಬ್ದಕ್ಕೆ ವೇಶ್ಯೆ, ಸೂಳೆ ಎಂದರ್ಥ. ಅದೇ ಬೊಡ್ಡಿ ಎಂದಾಗಿದೆ ಈಚಿನ ಕನ್ನಡದಲ್ಲಿ. ಹಿಂದಿನ ಕಾಲದಲ್ಲಿ ಪೊಡ್ಡಿ ಎಂಬುದು ಸ್ತ್ರೀಯರು ಗೌರವದಿಂದ ಸ್ವೀಕರಿಸುತ್ತಿದ್ದ ಹೆಸರಾಗಿತ್ತು. ಬೊಡ್ಡಿ ದಪ್ಪಗಿರುವವಳು. ಕಡ್ಡಿ ಸಣ್ಣಗಿರುವವಳು.

**ಬೊಮ್ಮ** ಎಂಬುದು ಮರಾಠಿಯ ಬೋಂಬ್ ಎಂಬ ಶಬ್ದದಿಂದ ಬಂದಿದೆ. ದುಃಖಾತಿಶಯವಾದಾಗ, ಹೆಚ್ಚಾಗಿ ಸಾವು ಸಮನಿಸಿದಾಗ ಬಾಯಿ ಬಡಿದುಕೊಂಡು ಅಳುವುದಕ್ಕೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಬೊಮ್ಮಡ, ಬೊಮ್ಮಡಿ, ಬೊಮ್ಬಡ, ಬೊಮ್ಬಡಿ ಎಂಬ ರೂಪಗಳೂ ಉಂಟು. ತೆಲುಗಿನಲ್ಲಿ ಬೊಮ್ಮಡಿ ಎಂಬ ಒಂದು ವಾದ್ಯವಿದೆ. ಕನ್ನಡದಲ್ಲಿ ಶಂಖವಾದ್ಯ ಎಂದು ಆಲಂಕಾರಿಕವಾಗಿ ಈ ವರ್ತನೆಗೆ ಉಪಯೋಗ ಮಾಡುತ್ತಾರೆ. ಅದು ಕೇವಲ ಆಲಂಕಾರಿಕ.

**ಬೋಣಿ** ದಿನದಲ್ಲಿ ಮೊದಲು ಆಗುವ ವ್ಯಾಪಾರಕ್ಕೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಮೊದಲು ಬರುವ ಗಿರಾಕಿಗೂ ಈ ಶಬ್ದ ಅನ್ವಯಿಸುತ್ತದೆ. ಮರಾಠೀ ಭಾಷೆಯಲ್ಲಿ ಈ ಶಬ್ದದ ಜೊತೆಗೆ ಭವಾನಿ ಎಂದು ಇದೇ ಅರ್ಥದಲ್ಲಿ ಉಪಯೋಗಿಸುತ್ತಾರೆ. ಭವಾನಿ ದೇವತೆಯ ಹೆಸರು ಪಾರ್ವತಿ. ಈ ಭವಾನಿಯೇ ಬೋಣಿ ಎಂಬುದಾಗಿ ಮಾರ್ಪಾಡು ಆಗಿರುವ ಸಾಧ್ಯತೆ ಇದೆ. ಕನ್ನಡದಲ್ಲಿ ಬೋಣಿ, ಬೋಣಿಗೆ ಎಂಬ ಎರಡೂ ಶಬ್ದಗಳಿವೆ.

**ಬೋಧಕ** ತಿಳಿವಳಿಕೆಯನ್ನು ಉಂಟು ಮಾಡುವವನು. ಜ್ಞಾನವನ್ನು ಹೆಚ್ಚಿಸುವವನು. ಎಚ್ಚರವನ್ನು ಉಂಟು ಮಾಡುವವನು. ಬುದ್ಧಿ ಹೆಚ್ಚುವಂತೆ ಮಾಡುವವನು.

**ಬೋರ್ಲು** ಇದರ ಸರಿಯಾದ ರೂಪ ಬೋರಲು. ಇದಕ್ಕೆ ಅರ್ಥ ತಲೆಕೆಳಗು ಮಾಡು, ಮಗುಚಿ ಹಾಕು. **'ಆ ಕೊಳಗದಪ್ಪಲೆಯನ್ನು ಬೋರಲು ಹಾಕು'** ಎಂಬ ವಾಕ್ಯವನ್ನೇ ನೋಡಿ. ಬೋರಲಿಡು ಎಂಬ ಶಬ್ದವೂ ಇದೆ. ಇದಕ್ಕೆ 'ಮಗುಚು' ಎಂದೇ ಅರ್ಥ. **'ಮಗು ಬೋರಲು ಬತ್ತು'** ಎಂಬ ವಾಕ್ಯವನ್ನು ಕೇಳಿರಬೇಕಲ್ಲ?

**ಬೋಸಿ** ಇದಕ್ಕೆ ಅಗಲವಾದ ಬಾಯುಳ್ಳ ಲೋಹದ ಪಾತ್ರೆ ಎಂದರ್ಥ. ಇದು ಪ್ರಾಚೀನ ಕನ್ನಡದಲ್ಲಿ ಪ್ರಯೋಗದಲ್ಲಿಲ್ಲ. ಈಚೆಗೆ ಹಳೆಯ ಮೈಸೂರು ಪ್ರಾಂತದಲ್ಲಿ ವ್ಯಾಪಕವಾಗಿ ಪ್ರಚಾರಕ್ಕೆ ಬಂದ ಶಬ್ದ. ಸುಮಾರು ನೂರು ವರ್ಷಗಳ ಈಚೆಗೆ ಬಂದದ್ದು. ಇದು ಇಂಗ್ಲೀಷಿನ Basin ಶಬ್ದಕ್ಕೆ ಸಂಬಂಧಿಸಿದೆ ಎನ್ನುತ್ತಾರೆ. ಆದರೆ ಆ ಶಬ್ದ ಇಂಗ್ಲಿಷಿಗೆ ಫ್ರೆಂಚ್ ಭಾಷೆಯಿಂದ ಬಂದಿದೆ. ಹಿಂದಿಯಲ್ಲಿ ಬಾಸನ್ ಎಂಬ ಶಬ್ದವಿದೆ. ಅದಕ್ಕೆ ಅಗಲವಾದ ಬಾಯುಳ್ಳ ತಟ್ಟೆ ಎಂಬ ಅರ್ಥವಿದೆ. ಈ ಶಬ್ದದಿಂದ ಬಂದಿದ್ದರೂ ಬಂದಿರಬಹುದು. ಪೋರ್ಚುಗೀಸ್ ಭಾಷೆಯಲ್ಲಿ ಬಸಿಯ (Basia) ಎಂಬ ಶಬ್ದವಿದೆ. ಅದಕ್ಕೂ ಇದೇ ಅರ್ಥ. ಇದನ್ನು ನಿರ್ಧಾರವಾಗಿ ಹೇಳಬೇಕಾದರೆ ಇನ್ನೂ ಸ್ವಲ್ಪ ಸಂಶೋಧನೆ ಅಗತ್ಯವಾಗಿದೆ.

**ಬೋೞಿಯ** ಈ ಶಬ್ದ ಹಳಗನ್ನಡದಲ್ಲಿ ಬಹುವಾಗಿ ಪ್ರಯೋಗವಾಗಿದೆ. ಇದಕ್ಕೆ ದೇವತೆ ಎಂದರ್ಥ. ಬೋಳಿಯರ್ ಬಹುವಚನ. ಇದು ಕನ್ನಡದ ಶಬ್ದ. ಮೂಲದಲ್ಲಿ ಇದು **ಬೋೞಿಯ** ಎಂಬ ರೂಪದಲ್ಲಿ ಟಕಾರ ಯುಕ್ತವಾದದ್ದು. **ಬೋೞಿಯರರಸ** ಎಂದರೆ ಇಂದ್ರ. **ಬೋೞಿಯರೋಜ** ಎಂದರೆ ಬೃಹಸ್ಪತಿ.

**ಬ್ರಹ್ಮಜಿಜ್ಞಾಸೆ** ಇದು ಬಹು ವಿಸ್ತಾರವಾದ ಅಭ್ಯಾಸವನ್ನು ನಿರೀಕ್ಷಿಸುವ ಶಬ್ದ. ಬ್ರಹ್ಮಸೂತ್ರಗಳಲ್ಲಿ

ಮೊದಲನೆಯ ಮಾತು ಹೀಗಿದೆ: **ಅಥಾತೋ ಬ್ರಹ್ಮ ಜಿಜ್ಞಾಸಾ.** ಜಿಜ್ಞಾಸೆ ಎಂದರೆ ತಿಳಿದುಕೊಳ್ಳಬೇಕೆಂಬ ಆಸೆ, ಅಪೇಕ್ಷೆ. ಬ್ರಹ್ಮ ಎಂದರೆ ಏನೆಂದು ತಿಳಿದುಕೊಳ್ಳುವ ಇಚ್ಛೆ. ಇಷ್ಟು ಮಾತ್ರ ಹೇಳಿ ಸಿಲ್ಲಿಸುತ್ತೇನೆ. ಅಪೇಕ್ಷೆಯನ್ನು ಸಾರ್ಥಕಪಡಿಸಬೇಕು.

**ಬ್ರಹ್ಮವರ್ಷ** ೪೩೨೦೦೦೦ ಮಾನವ ವರ್ಷಗಳು ಕಳೆದರೆ ಒಂದು ಸಲ ನಾಲ್ಕು ಯುಗಗಳು ಕಳೆದಂತೆ. ಇಂಥ ೧೦೦೦ ಚತುರ್ಯುಗಗಳು ಕಳೆದರೆ ಬ್ರಹ್ಮನಿಗೆ ಒಂದು ಹಗಲು. ಈ ಲೆಕ್ಕದಲ್ಲಿ ಬ್ರಹ್ಮನು ೧೦೦ ವರ್ಷಗಳ ಕಾಲ ಇರುತ್ತಾನೆ ಎಂದು ಪುರಾಣಗಳ ಲೆಕ್ಕ. ಈ ಲೆಕ್ಕದಲ್ಲಿ ಒಂದು ವರ್ಷವೇ ಬ್ರಹ್ಮವರ್ಷ.

**ಬ್ಲಫ್ = bluff =** ಶಿವನಸಮುದ್ರ ಶಿವನ ಸಮುದ್ರವನ್ನು bluff ಎಂದು ಕರೆಯುತ್ತಾರೆ; ನಿಜ. ಒಂದು ಕತೆಯಿದೆ. ನಿಜವಾಗಿ ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡದೆ ಜನತೆಗೆ ತಪ್ಪು ದಾರಿಯನ್ನು ತೋರಿಸುತ್ತಿದ್ದಾರೆ ಎಂದು ಇದಕ್ಕೆ ಬ್ಲಫ್ ಎಂದು ಹೆಸರು ಬಂದಿದೆ ಎಂದು ತಮಾಷೆಗೆ ಹೇಳುತ್ತಾರೆ. ನಿಜವಾಗಿ ಅದಲ್ಲ ಕಾರಣ. bluff ಎಂದರೆ ತುಂಬ ಇಳಿಜಾರಾದ ಎತ್ತರವಾದ ಒಂದು ಬಂಡೆ. ಇದು ಅಗಲವಾಗಿದ್ದರೆ ಅದಕ್ಕೆ ಈ ಹೆಸರು ಸಲ್ಲುತ್ತದೆ. ಇಂಗ್ಲಿಷ್ ಭಾಷೆಗೆ ಈ ಶಬ್ದ ಹೇಗೆ ಬಂದಿತು ಎಂಬುದು ಇನ್ನೂ ನಿಶ್ಚಿತವಾಗಿಲ್ಲ. ಶಿವನ ಸಮುದ್ರದಲ್ಲಿ ಇಂಥ ಎತ್ತರದ ಇಳಿಜಾರಾದ ಬಂಡೆಯಿದೆ. ಅದರ ಮೇಲೆ ಟ್ರಾಲಿ ಓಡಾಡುತ್ತದೆ. ಆದ್ದರಿಂದ ಆ ಹೆಸರು ಬಂದಿದೆ ಎಂದು ನನ್ನ ತಿಳಿವಳಿಕೆ.

**ಬ್ಲಾಕ್ ಮೇಲ್** ಎಂಬುದು ಇಂಗ್ಲೀಷಿನ Blackmail ಎಂಬ ಶಬ್ದ. ಇದಕ್ಕೆ 'ಹೆದರಿಸಿ ಹಣ ಕೀಳುವುದು' ಎಂದು ಮುಖ್ಯವಾದ ಅರ್ಥ. ಒಬ್ಬ ವ್ಯಕ್ತಿಯು ಏನಾದರೂ ಅಪರಾಧವನ್ನೋ, ಅನ್ಯಾಯವನ್ನೋ, ಅನೈತಿಕ ಕಾರ್ಯವನ್ನೋ ಮಾಡಿದ್ದರೆ ಅದನ್ನು ಕಣ್ಣಾರ ಕಂಡು ಪ್ರಕಟಿಸುವ ಆಧಾರವುಳ್ಳವನು, ಆ ಪ್ರಕಟಣೆಯ ಹೆದರಿಕೆಯನ್ನು ಒಡ್ಡಿ ಅಂಥವರಿಂದ ತನ್ನ ಕೆಲಸವನ್ನು ಸಾಧಿಸಿಕೊಳ್ಳುವುದು. Black ಎಂಬುದು ಕಳಂಕಕ್ಕೆ ಹೊಂದುತ್ತದೆ. Mail ಎಂಬುದು ಹಿಂದೆ ಕಪ್ಪ, ಕಾಣಿಕೆಯೆಂಬ ಅರ್ಥವನ್ನು ಹೊಂದಿತ್ತಂತೆ. ಆ ಅರ್ಥ ಈ ಶಬ್ದದಲ್ಲಿ ಉಳಿದುಬಂದಿದೆ. ಅದು Middle English ಶಬ್ದ.

## ಭ

**ಭಂಡಾರಿ** ಸಂಸ್ಕೃತದಲ್ಲಿ ಭಂಡಾರ ಎಂದರೆ ಕೋಶ. ಭಂಡಾರಿನ್ ಎಂದರೆ ಕೋಶದ ಅಧಿಕಾರಿ. ಕನ್ನಡ ನಾಡಿನಲ್ಲಿ ಭಂಡಾರಿ ಎನ್ನುವುದು ಒಂದು ಜಾತಿಯ ಹೆಸರು. ಇದು ಭಾಂಡ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಸಂಸ್ಕೃತದಲ್ಲಿ ದೋಣಿ, ಜಹಜು, ಹಡಗು ಎಂದರ್ಥ. ಅದರ ಕೆಲಸಕ್ಕೆ ಸಂಬಂಧಿಸಿದವರು ಭಂಡಾರಿಗಳು. ಹಡಗಿನ ಕೆಲಸ ಬಂದರು ಇರುವ ಪ್ರದೇಶದಲ್ಲಿ ಹೆಚ್ಚು. ಈ ಗುಂಪಿಗೆ ಸೇರುವ ಜನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿದ್ದಾರೆ.

**ಭಕ್ಕರಿ** ಇದು ಮರಾಠಿಯ ಭಾಕರ್ ಎಂಬ ಶಬ್ದದಿಂದ ಬಂದದ್ದು. ಅಲ್ಲಿ ಈ ಶಬ್ದಕ್ಕೆ ರೊಟ್ಟಿ ಎಂದೇ ಅರ್ಥ. ಅದೇ ಬಳಿಕ ಬಕ್ಕರಿ ಎಂಬ ರೂಪವನ್ನು ಪಡೆದಿದೆ. ಮುಖ್ಯವಾಗಿ ಇದು ಜೋಳದ ರೊಟ್ಟಿ. ದ್ವಿಭಾಷಾ ವಲಯಗಳಲ್ಲಿ ಈ ಶಬ್ದದ ಪ್ರಭಾವ ಹೆಚ್ಚು.

**ಭಕ್ತಿಭಾವ, ಪರವಶತೆ** ಮಾನವನ ಮನಸ್ಸಿನಲ್ಲಿ ಅನೇಕ ಭಾವಗಳು ಹೊರಹೊಮ್ಮುತ್ತವೆ. ಅವು ಅವನ ಚಿಂತನೆಯ ಪ್ರಭಾವವಾಗಿ ಮೂಡುವ ಸ್ಥಿತಿಯನ್ನು ಸೂಚಿಸುತ್ತವೆ. ಯಾವ ಭಾವವೇ ಆಗಲಿ. ಅದು ಬೀಸಿ ಹೋದ ಗಾಳಿಯಂತಿರಬಹುದು. ಕಂಪು ಹೊತ್ತ ಮಂದಾನಿಲವಾಗಿರಬಹುದು. ಸ್ಥಿರವಾಗಿ ನಿಂತು ಅಸ್ಥಿರತೆಯನ್ನುಂಟು ಮಾಡುವ ಬಿರುಗಾಳಿ

ಸುಂಟರಗಾಳಿಗಳಾಗಿರಬಹುದು. ಅಂಥ ಗಾಳಿಗಳ ಪ್ರಭಾವವನ್ನು ಪಡೆದುಕೊಳ್ಳುವ ಶಕ್ತಿ ಎಲ್ಲರಿಗೂ ಒಂದೇ ಬಗೆಯಾಗಿರುವುದಿಲ್ಲ. ಭಕ್ತಿ ಇಂಥ ಒಂದು ಭಾವ. ಅದು ಆಳವಾಗಿ ಬೇರೂರಿದಾಗ ಭಾವಪರವಶತೆ ಆಗಬಹುದು. ಅಂಥ ಸಮಯದಲ್ಲಿ ಆ ವ್ಯಕ್ತಿಗೆ ತನ್ನ ಮೈಮೇಲಿನ ಎಚ್ಚರ ತಪ್ಪಿ ಬೇರೆ ಚೈತನ್ಯದ ಅಧೀನದಲ್ಲಿರುವಂತೆ ತೋರುತ್ತಾನೆ. ಪರವಶತೆಯನ್ನು ತಾಳುವ ಚೈತನ್ಯ ನಿಜವಾಗಿ ಸಮರ್ಥವಾದ ಮಾನಸಿಕ ಶಕ್ತಿಯುಳ್ಳದ್ದು. ಅಂಥ ಅನುಭವವನ್ನು ಪಡೆಯುವ ಜೀವ ನಿಜವಾಗಿ ಪುಣ್ಯಜೀವ. ಇದು ಸಾಮಾನ್ಯರಿಗೆ ಅಸಾಧ್ಯ ಮತ್ತು ಅರ್ಥವಾಗದ ವಿಷಯ.

**ಭಗವಚ್ಚಿಂತನ ಎಂಬ ಶಬ್ದವನ್ನು ಬಿಡಿಸುವುದು ಹೇಗೆ?** ಭಗವತ್ + ಚಿಂತನ = ಭಗವಚ್ಚಿಂತನ. ಇದು ತಕಾರಕ್ಕೆ ಚ ವರ್ಗದ ಅಕ್ಷರಗಳು ಸೇರಿದಾಗ ತಕಾರವು ಚಕಾರವಾಗುತ್ತದೆ. ಇದು ಶ್ಚುತ್ವ ಸಂಧಿ.

**ಭಗ್ನ** ಎಂದರೆ ಮುರಿದ, ಒಡೆದ, ಬೇರೆಯಾದ ಎಂದು ಅರ್ಥ. ಇದು ಸಂಸ್ಕೃತದ ಭಂಜ್ ಧಾತುವಿನಿಂದ ಬಂದದ್ದು. ಇದಕ್ಕೆ ಹರಿದುದು, ಚೂರು ಚೂರಾದುದು ಎಂದೂ ಅರ್ಥವಾಗಬಹುದು. ಈ ವಾಕ್ಯವನ್ನು ನೋಡಿ: ರಕ್ಕಸತಂಗಡಿಯ ಯುದ್ಧವು ವೈಭವದ ವಿಜಯನಗರ ಸಾಮ್ರಾಜ್ಯವನ್ನು ಒಡೆದು ಸಂಪದ್ಭರಿತ ನಗರವನ್ನು ಹಾಳು ಹಂಪೆಯನ್ನಾಗಿ ಭಗ್ನಾವಶೇಷಗಳ ರಾಶಿಯನ್ನಾಗಿ ಮಾಡಿತು.

**ಭಯ, ಭೀತಿ, ಅಂಜಿಕೆ, ಹೆದರಿಕೆ.** ಭಯ, ಭೀತಿ ಇವು ಸಂಸ್ಕೃತ ಶಬ್ದಗಳು. ಅಂಜಿಕೆ, ಹೆದರಿಕೆ, ಅಳುಕು ಕನ್ನಡ ಶಬ್ದಗಳು. ಇವುಗಳಿಗೆಲ್ಲ ಒಂದೇ ಅರ್ಥ. ಭಯ, ಭೀತಿ ಎಂಬ ಎರಡು ಶಬ್ದಗಳೂ ಭೀ ಎಂಬ ಧಾತುವಿನಿಂದ ರೂಪವನ್ನು ಪಡೆಯುತ್ತವೆ. ಅರ್ಥ ಒಂದೇ. ಅಂಜು =ಹೆದರು ಎರಡಕ್ಕೂ ಒಂದೇ ಅರ್ಥ. ಅವುಗಳಿಗೆ ಇಕೆ ಪ್ರತ್ಯಯ ಸೇರಿ ಅಂಜಿಕೆ, ಹೆದರಿಕೆ ಎಂದಾಗಿದೆ. ಅರ್ಥ ಅಲ್ಲಿಯೂ ಒಂದೇ. ಅಳುಕು ಶಬ್ದ ಬೇರೆ. ಇದು ಹಳಗನ್ನಡದ ಅಳ್ಕು ಶಬ್ದದಿಂದ ಬೆಳೆದು ಬಂದದ್ದು. ಇದಕ್ಕೆ ಅನೇಕ ಅರ್ಥಗಳಿವೆ. ಹಿಂಜರಿ, ಶಕ್ತಿಯಿಲ್ಲದಿರು, ಹೆದರು, ನಡುಗು, ಉದಾಸೀನನಾಗಿರು ಇತ್ಯಾದಿ. ಸಂದರ್ಭಕ್ಕೆ ಅನುಸಾರವಾಗಿ ಉಪಯೋಗಿಸಬೇಕು. ಹಿಂಜರಿ ಎಂಬ ಅರ್ಥ ಮುಖ್ಯವಾದುದು.

**ಭಯಭಕ್ತಿ** ಇದು ಎರಡು ಶಬ್ದಗಳು ಸೇರಿರುವ ದ್ವಂದ್ವ ಸಮಾಸ. ಶ್ರದ್ಧಾಭಕ್ತಿ ಎಂಬಂತೆ. ಭಯವೇ ಬೇರೆ, ಭಕ್ತಿಯೇ ಬೇರೆ. ಭಯವೂ ಭಕ್ತಿಯೂ ಇರುವುದು ಭಯಭಕ್ತಿ.

**ಭರತ್, ಶರದ್, ಪ್ರಶಾಂತ್, ಶ್ರೀಕಾಂತ್** ಈ ಎಲ್ಲ ಶಬ್ದಗಳ ರೂಪಗಳು, ಸಂಸ್ಕೃತವೂ ಅಲ್ಲ, ಕನ್ನಡವೂ ಅಲ್ಲ. ಭರತ, ಶರದ, ಪ್ರಶಾಂತ =ಅಧಿಕ ಶಾಂತಿಯುತ. ಶ್ರೀಕಾಂತ = ಲಕ್ಷ್ಮೀಪತಿ, ಎಂಬುವು ಸರಿಯಾದ ರೂಪಗಳು. ತಮಿಳರು ರಾಮನ್, ಭರತನ್ ಮುಂತಾಗಿ ಹೆಸರಿಟ್ಟುಕೊಳ್ಳುವುದನ್ನೂ ಪಾಶ್ಚಾತ್ಯರಲ್ಲಿರುವ ಅರ್ಧಾಕ್ಷರದಿಂದ ಕೊನೆಗಾಣುವ ಹೆಸರುಗಳನ್ನೂ ನೋಡಿ ಅವುಗಳ ರೂಪದಿಂದ ಆಕರ್ಷಿತರಾಗಿ ತಮ್ಮ ಹೆಸರಿನಲ್ಲಿ ಸ್ವರವನ್ನು ಲೋಪ ಮಾಡಿಕೊಂಡಿರುವ ರೂಪಗಳು ಇವು. ಇದೊಂದು fashion ಅಷ್ಟೇ! ನಮ್ಮ ಊರುಗಳ ಬಡಾವಣೆಗಳ ಹೆಸರನ್ನೂ ಹೀಗೆಯೇ ಮಾಡುತ್ತಾರೆ. ನೋಡಿ ಲಕ್ಷ್ಮೀಪುರಂ, ಮಲ್ಲೇಶ್ವರಂ, ಇಂದಿರಾನಗರ್. ಜೀವನ್ ಭೀಮಾನಗರ್, ಜಯನಗರ್, ಗಿರಿನಗರ್. ಈ ರೋಗ ವಾಸಿಯಾಗಬೇಕಾದರೆ ಸ್ವಲ್ಪ ಕಾಲ ಬೇಕಾಗುತ್ತದೆ.

**ಭರವಸೆ – ಆಶ್ವಾಸನೆ** 'ಆಶ್ವಾಸನೆ' ಎಂಬುದು ಸಂಸ್ಕೃತದ 'ಆಶ್ವಾಸನ' ಎಂಬುದರ ತದ್ಭವ ರೂಪ. ಇದಕ್ಕೆ ಸಮಾಧಾನಗೊಳಿಸು, ರಕ್ಷಣೆಯ ನಂಬಿಕೆ ನೀಡು ಎಂದರ್ಥ. 'ಭರವಸೆ' ಹಿಂದಿಯ 'ಭರೋಸ' ಎಂಬ ಶಬ್ದದಿಂದ ಬಂದುದು. ಇದಕ್ಕೆ 'ಆಶ್ವಾಸನೆ' ಎಂಬುದೇ ಅರ್ಥ. ಆದರೆ ಅದು ಸಂಸ್ಕೃತದ ಶಬ್ದವಲ್ಲ.

**ಭರ್ತಾರ** ಭರ್ತೃ ಎನ್ನುವ ಸಂಸ್ಕೃತ ಶಬ್ದ ಕನ್ನಡದಲ್ಲಿ ಭರ್ತಾರ ಎಂದಾಗುತ್ತದೆ. ಇದಕ್ಕೆ ಗಂಡ, ಪತಿ ಎಂದರ್ಥ. ಒಡೆಯು, ಪಾಲಕ, ಪೋಷಕ ಎಂಬ ಅರ್ಥವೂ ಬರಬಹುದು. ಕನ್ನಡದಲ್ಲಿ ಭರ್ತ ಎಂಬ ರೂಪವೂ ಉಂಟು; ಭರ್ತಾ ಎಂಬ ರೂಪ ತಪ್ಪು.

**ಭಾತು** ಮರಾಠಿ ಭಾಷೆಯಲ್ಲಿ ಇದು ಭಾತ್ ಎಂಬ ಶಬ್ದ. ಇದು ಸಂಸ್ಕೃತದ ಭಕ್ತ ಎಂಬ ಶಬ್ದದಿಂದ ಬಂದದ್ದು. ಕನ್ನಡದಲ್ಲಿ ಮತ್ತು ಪ್ರಾಕೃತದಲ್ಲಿ ಭತ್ತ - ಇದಕ್ಕೆ ೧. ನೆಲ್ಲು, ೨. ಕುದುಪಲ ಅಕ್ಕಿ ೩. ಅನ್ನ, ಬೋನ ಎಂಬ ಅರ್ಥಗಳಿವೆ.

**ಭಾನಗಡಿ** ಇದು ಮರಾಠಿಯ ಭಾನಗಡ್ ಎಂಬ ಶಬ್ದದ ಕನ್ನಡ ರೂಪ. ಭಾನಗಡ್ ಎಂದರೆ ಕುಚೋದ್ಯದಿಂದ ಉಂಟಾದ ಇಕ್ಕಟ್ಟು, ತೊಂದರೆ, ಗೊಂದಲ, ಪೀಕಲಾಟ. ಈ ಶಬ್ದ ಮರಾಠೀ ಭಾಷೆಯ ಜನರ ಆಸುಪಾಸಿನಲ್ಲಿರುವವರಿಗೆ ಹೆಚ್ಚು ಪರಿಚಿತ.

**ಭಾರತೀಯ, ಭಾರತೇಯ** ಎರಡೂ ಶಬ್ದಗಳು ಸರಿಯಾದ ಶಬ್ದಗಳೇ. ಭಾರತೀಯ ಎಂದರೆ ಭಾರತಕ್ಕೆ ಸಂಬಂಧಿಸಿದ ಎಂದು ಗುಣವಾಚಕದ ಅರ್ಥ. ಭಾರತೇಯ ಭರತ ಖಂಡದಲ್ಲಿ ಜನಿಸಿದವನು. ಭಾರತ ರಾಷ್ಟ್ರದ ಪ್ರಜೆ. ಈಗೀಗ ಭಾರತೀಯ ಎಂಬ ಶಬ್ದವನ್ನೂ ಭಾರತದ ಪ್ರಜೆ ಎಂಬ ಸಾಮಾರ್ಥದಲ್ಲಿಯೂ ಉಪಯೋಗಿಸುತ್ತಿದ್ದಾರೆ.

**ಭಾವ-ಬಾವ** ಎಂಬುವು ಪರಸ್ಪರ ಸಂಬಂಧವುಳ್ಳ ಶಬ್ದಗಳು. ಸಂಸ್ಕೃತದ ಭಾಮ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ಸೂರ್ಯ ೨. ಪ್ರಕಾಶ ೩. ಕೋಪ ೪. ಸಹೋದರಿಯ ಗಂಡ.* ಕನ್ನಡ ಭಾವ = ಸಹೋದರಿಯ ಗಂಡ ಎಂಬ ಶಬ್ದ ಭಾಮದ ತದ್ಭವ. ಅಲ್ಲಿಂದ ಮುಂದೆ ಅದು ಅಲ್ಪಪ್ರಾಣದ ಬಾವ ಆಗಿ ಬೆಳವಣಿಗೆ ಹೊಂದಿದೆ. ಸಂಸ್ಕೃತದಲ್ಲಿಯೇ ಇರುವ ಭಾವ ಎಂಬುದು **ಭೂ ಸತ್ತಾಯಾಂ** ಎಂಬ ಧಾತುವಿನಿಂದ ಆದುದು. ಆ ಶಬ್ದಕ್ಕೆ ೧. ಭಾವನೆ *೨. ಇರುವಿಕೆ ೩. ತಾತ್ಪರ್ಯ· ೪. ಚಲನೆ ಇತ್ಯಾದಿ ಇತರ ಅರ್ಥಗಳೂ ಇವೆ.* ಸಂಸ್ಕೃತ ನಾಟಕಗಳಲ್ಲಿ ಸೂತ್ರಧಾರನನ್ನು ಭಾವ ಎಂದು ಕರೆಯುವ ಸಂಪ್ರದಾಯವಿದೆ. ವ್ಯವಹಾರದಲ್ಲಿ ಅದರ ಪ್ರಯೋಗ ವ್ಯಾಪಕವಾಗಿರಬಹುದಾದ ಸಾಧ್ಯತೆಯೂ ಇಲ್ಲದಿಲ್ಲ.

**ಭಾವ, ವಿಭಾವ, ಅನುಭಾವ** ಕಾವ್ಯದ ದೃಷ್ಟಿಯಿಂದ ಮಾತ್ರ ಈ ಶಬ್ದಗಳನ್ನು ವಿವರಿಸಿದ್ದೇನೆ. ಇತರ ಕ್ಷೇತ್ರಕ್ಕೆ ಸಂಬಂಧಪಟ್ಟ ಅರ್ಥಗಳನ್ನು ವಿವರಿಸಲು ಹೊರಟರೆ ಅದೇ ಒಂದು ಲೇಖನವಾಗಿಬಿಡುತ್ತದೆ. ಭಾವ ಎನ್ನುವುದು ಮಾನವರ ಮನಸ್ಸಿನಲ್ಲಿ ಆಗಾಗ ತೋರುವ ವಿವಿಧವಾದ ವ್ಯಾಪಾರ. ಉತ್ಸಾಹ, ಆಶ್ಚರ್ಯ, ಅನುಮಾನ, ಲಜ್ಜೆ ಇತ್ಯಾದಿ ವಿಕಾರಗಳೇ ಭಾವಗಳು. ಯಾವುದೋ ಒಂದು ಕಾರಣದಿಂದ ಈ ಒಂದೊಂದು ಭಾವಗಳೂ ಮನಸ್ಸಿನಲ್ಲಿ ತಲೆದೋರುತ್ತವೆ. ಆ ಕಾರಣವೇ ವಿಭಾವ. ಭಾವದ ದೆಸೆಯಿಂದ ನಾವು ಮಾಡುವ ಕಾರ್ಯವೇ ಅನುಭಾವ. ಭಯ ಎಂಬ ಭಾವಕ್ಕೆ ಪಿಶಾಚಿಯ ಕಥೆಯನ್ನು ಒಬ್ಬನೇ ಇದ್ದಾಗ ಓದುವುದೇ ಕಾರಣವಾಗಬಹುದು. ಕೂಡಲೇ ಆ ಸ್ಥಳವನ್ನು ಬಿಡುವುದಕ್ಕೂ ಧೈರ್ಯವಿಲ್ಲದೆ ಕೂಗಿಕೊಳ್ಳುವುದು ಅನುಭಾವವಾಗಬಹುದು.

**ಭಾವಚಿತ್ರ** ಇದು Portrait ಶಬ್ದಕ್ಕೆ ಸರಿಯಾದ ಕನ್ನಡ ಶಬ್ದ. ಒಬ್ಬ ವ್ಯಕ್ತಿಯ ಮುಖದ ಪ್ರತಿಕ್ರಿಯೆಯನ್ನು ಚಿತ್ರದಲ್ಲಿ ಸೆರೆ ಹಿಡಿದಿರುವುದು. ಇದು ಚಿತ್ರಕಲೆಯಿಂದ ಆಗಬಹುದು ಅಥವಾ photography ಯಿಂದ ಆಗಬಹುದು.

**ಭಾಷಣ** ಸಂಸ್ಕೃತದ ಈ ಶಬ್ದಕ್ಕೆ ಮಾತನಾಡುವುದು ಎಂದರ್ಥ. ಒಬ್ಬನು ಒಂದು ಸಭೆಯ ಮುಂದೆ ನಿಂತು ಮಾತನಾಡುವುದು. ಉಪನ್ಯಾಸ ಮಾಡುವುದು. ತನ್ನ ಅಭಿಪ್ರಾಯಗಳನ್ನು ಬಿತ್ತರಿಸುವುದು. ಈ ಶಬ್ದವನ್ನು ಎಚ್ಚರದಿಂದ ಉಪಯೋಗಿಸಬೇಕು. ತಪ್ಪಾಗಿ ಭಷಣ ಎಂದು ಹೇಳಿದರೆ ಅಪಾರ್ಥವಾಗುತ್ತದೆ. ಭಷಣ ಶಬ್ದಕ್ಕೆ ೧. ನಾಯಿ, ೨. ಬಗುಳುವುದು ಎಂಬ ಅರ್ಥಗಳಿವೆ.

**ಭಾಷಾಂತರ** ಭಾಷಾಂತರ ಎಂದರೆ ಬೇರೆಯ ಭಾಷೆ. ಬೇರೆಯ ಭಾಷೆಗೆ ಪರಿವರ್ತಿಸುವುದನ್ನು ಭಾಷಾಂತರೀಕರಣ ಎನ್ನಬೇಕು. ಆದರೆ ಆ ದೊಡ್ಡ ಶಬ್ದ ಸಂಕ್ಷಿಪ್ತಗೊಂಡು ಭಾಷಾಂತರ ಆಗಿ, ಅದಕ್ಕೂ ಅದೇ ಅರ್ಥವು ಈಗ ಹೊಂದಿಕೊಂಡಿದೆ. ನೋಡಿ: ಅನುವಾದ.

**ಭಿಕ್ಷೆ** ಭಿಕ್ಷಾ ಎಂಬುದು ಸಂಸ್ಕೃತ ಶಬ್ದ. ಅದು ಕನ್ನಡದಲ್ಲಿ ಭಿಕ್ಷೆ ಎಂದಾಗುತ್ತದೆ. ತದ್ಭವವಾದರೆ ಬಿಕ್ಕೆ ಎಂದಾಗುತ್ತದೆ.

**ಭುಜಗ ಶಬ್ದವು ಸಮಾಸವೇ?** ಭುಜಗ ಎಂದರೆ ಹಾವು; ವಕ್ರವಾಗಿ, ಕುಟಿಲವಾಗಿ ಹರಿದು ಹೋಗುತ್ತದೆಯಾದುದರಿಂದ ಭುಜಗ. ಹಾವು ನೇರವಾಗಿ ಸರಿಯುವುದಿಲ್ಲ. **ಭುಜಂ ಕುಟಿಲಂ ಗಚ್ಛತಿ ಇತಿ ಭುಜಗಃ** ಎಂಬುದು ಅಮರದ ಒಂದು ಟೀಕೆ. ಯಾವುದು ವಕ್ರವಾಗಿ ಹರಿದು ಹೋಗುತ್ತದೋ ಅದು ಎಂದು ಬಹುವ್ರೀಹಿ ಸಮಾಸವಾಗುತ್ತದೆ.

**ಭೂದಾನ, ಮತದಾನ, ಮೈದಾನ** ಎಂಬುದರಲ್ಲಿ ಇರುವ ಎರಡು ಶಬ್ದಗಳನ್ನು ಗಮನಿಸಿ. ಭೂ + ದಾನ, ಮತ + ದಾನ. ದಾನ ಎಂದರೆ ಕೊಡುವುದು. ಅದು ಧಾರ್ಮಿಕವಾಗಬಹುದು. ವ್ಯಾವಹಾರಿಕವಾಗಬಹುದು. ಮೈದಾನ ಎಂಬುದು ಪಾರಸಿ ಭಾಷೆಯ **ಮಾಇದಾನ್** ಎಂಬ ಶಬ್ದದಿಂದ ಬಂದಿದೆ. ಪ್ರಶಸ್ತವಾದ ಭೂಮಿ ಎಂದು ಅಲ್ಲಿ ಅರ್ಥ. ನಮ್ಮಲ್ಲಿ ಬಯಲು ಎಂದರ್ಥ. ಇದರಲ್ಲಿ ಯಾವ ದಾನವೂ ಇಲ್ಲ.

**ಭೂಮಾ** ಮದುವೆಯಲ್ಲಿ ವಧೂವರರನ್ನು ಒಟ್ಟಿಗೆ ಕೂರಿಸಿ ಊಟಕ್ಕೆ ಬಡಿಸುವ ಉಪಚಾರದ ಕಾರ್ಯಕ್ಕೂ ಆ ಊಟಕ್ಕೂ ಬೂವ, ಬುವ್ವ ಎಂಬ ಶಬ್ದಗಳನ್ನು ಉಪಯೋಗಿಸುತ್ತಿದ್ದರು. ನಮ್ಮ ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನದ ಕೊನೆಯ ಭಾಗದಲ್ಲಿ ನೇಮಿಚಂದ್ರನು ರಚಿಸಿದ **ಲೀಲಾವತೀ ಪ್ರಬಂಧಂ** ಎಂಬ ಕಾವ್ಯದಲ್ಲಿ ಈ ಶಬ್ದದ ಮೊದಲನೆಯ ಪ್ರಯೋಗ ದೊರಕಿದೆ. ಅಲ್ಲಿಯೂ ಇದು ವಿವಾಹದ ಸಂದರ್ಭದಲ್ಲಿಯೇ ಉಪಯೋಗವಾಗಿರುವ ಮಾತು. **'ತದನಂತರಂ ಬೂವಮನರ್ಪಿಸಿ ದಿಂಬಟೆಯಮರಸನನರಲ ಸೆಜ್ಜೆವನೆಯೊಳಿರಿಸಿ'** (೧೩-೪) ವಚನ ಎಂಬ ವಾಕ್ಯಭಾಗವನ್ನು ಗಮನಿಸಿ. ಇದು ಬೂವ, ಬುವ್ವ ಎಂಬ ರೂಪದಲ್ಲಿ ಪ್ರಚಾರದಲ್ಲಿತ್ತು. ತೆಲುಗಿನಲ್ಲಿ ಕೂಡ ಬುವ್ವ ಎಂಬುದೇ ರೂಪ. ಭೂಮ ಎಂಬುದು ಬೂವ ಎಂಬ ಶಬ್ದರೂಪಕ್ಕೆ ಸಂಸ್ಕೃತೀಕರಣ ನೀಡಿರುವ ರೂಪ. Hyper correction ಆಗಿರುವ ರೂಪ. ಮಕ್ಕಳಿಗೆ ಊಟ ಮಾಡಿಸುವಾಗ ಕೂಡ ತಾಯಿ ಈಗಲೂ 'ಬುವ್ವ ಕೊಡುತ್ತೇನೆ' ಎಂದೋ 'ಬುವಾ ತಿನ್ನು ಬಾ' ಎಂದೋ ಕರೆಯುತ್ತಾಳೆ. ಇದು ದ್ರಾವಿಡ ಸಂಸ್ಕೃತಿಯ ಸೂಚಕವಾದ ಬಹುಪ್ರಸಿದ್ಧವಾದ ಶಬ್ದ.

**ಭೂಮಿ ತೂಕದವನು** ತುಂಬಾ ಗೌರವಾರ್ಹನಾದವನು, ನೈತಿಕ ಜೀವನವನ್ನು ನಡೆಸುತ್ತಾ ಹಿರಿಯ ಧ್ಯೇಯಗಳನ್ನು ಆಧರಿಸಿ ಬಾಳುವವನು. ಭೂಮಿಯ ಮೇಲೆ ಭೂಮಿಯ ತೂಕಕ್ಕಿಂತ ಹೆಚ್ಚು ತೂಕವುಳ್ಳ ಯಾವುದೇ ವಸ್ತು ಇರಲಾರದು. ಆದುದರಿಂದ ಈ ಸಂದರ್ಭದಲ್ಲಿ ತೂಕ ಎಂಬ ಶಬ್ದಕ್ಕೆ ಗೌರವ, ಮರ್ಯಾದೆ ಎಂದರ್ಥ. ಹಗುರವಾದದ್ದು, ಗಾಳಿಗೆ ಹಾರಿ ಹೋಗುವಷ್ಟು ಲಘುವಾದದ್ದು ಎಂಬುದಕ್ಕೆ ವಿರುದ್ಧವಾದ ವಸ್ತು. ತುಂಬ ಯೋಗ್ಯ ಎಂದು ಒಟ್ಟಿನ ಅರ್ಥ.

**ಭೂಮಿ, ಪೃಥ್ವೀ, ಧರಣೀ** ಇವುಗಳಲ್ಲಿ ಯಾವುದು ಸಮಂಜಸವಾದ ಶಬ್ದ?

ಈ ಮೂರೂ ಸರಿಯಾದ ಶಬ್ದಗಳೇ. ಅನುಮಾನವೇಕೆ? **ಭವಂತಿ ಅಸ್ಯಾಂ ಭೂತಾನಿ** ಎಂದರೆ ಇದರಲ್ಲಿ ಇವೆಲ್ಲವೂ ಉಂಟಾಗುತ್ತವೆ ಎಂಬ ಅರ್ಥದಲ್ಲಿ ಭೂಮಿ ಶಬ್ದ ಬರುತ್ತದೆ. ರಾಜರೆಲ್ಲರನ್ನೂ ಬಲ್ಲದ್ದು ಇದು ಎಂದು ಪೃಥ್ವೀ. ವಿಶ್ವವನ್ನೇ ಧರಿಸುತ್ತದೆ ಎಂದು ಧರಣೀ. ಹೀಗೆ ಸ್ವಾರಸ್ಯವಾದ ಅರ್ಥವಾದ ಈ ಎಲ್ಲ ಶಬ್ದಗಳನ್ನೂ ಭೂಮಿಗೆ ಅನ್ವಯಿಸಬಹುದು.

ಇವಲ್ಲದೆ ಇನ್ನೂ ಅನೇಕ ಶಬ್ದಗಳಿಗೆ ಭೂಮಿ ಎಂಬ ಅರ್ಥ ಬರುತ್ತದೆ. ರತ್ನಾಗರ್ಭಾ ವಸುಂಧರಾ ಎಂಬ ವಾಕ್ಯವನ್ನು ನೋಡಿ. ಇವು ಕನ್ನಡದಲ್ಲಿ ಪ್ರಸ್ತಾಂತವಾಗಿರುತ್ತದೆ; ಪೃಥ್ವಿ, ಧರಣಿ ಎಂದು.

**ಭೂರಿ** ಭೋಜನ ಭೂರಿ ಇದು ಸಂಸ್ಕೃತ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. *೧. ಅಧಿಕ, ಹೆಚ್ಚು, ೨. ವಿಶಾಲವಾದುದು ೩. ಚಿನ್ನ ೪. ವಿಷ್ಣು, ಶಿವ, ಬ್ರಹ್ಮ ಇಂದ್ರ ಎಂಬ ದೇವತೆಗಳು, ೫. ಬಹು ಜನಕ್ಕೆ ನೀಡುವ ದಕ್ಷಿಣೆ ೬. ಗಣಿತದಲ್ಲಿ ಒಂದು ದೊಡ್ಡ ಸಂಖ್ಯೆ.* ಒಂದರಿಂದ ಹದಿನೆಂಟರವರೆಗಿನ ಸ್ಥಾನಗಳಾದ ಮೇಲೆ ಬರುವ ಸ್ಥಾನ, ಇತ್ಯಾದಿ. ಆದರೆ ಭೂರಿ ಭೋಜನ ಎಂಬಲ್ಲಿ ಸಂಖ್ಯೆಯ ಲೆಕ್ಕಾಚಾರವಿಲ್ಲ. ಅಸಂಖ್ಯಾತರಿಗೆ ಎಂದಷ್ಟೇ ಅರ್ಥ.

**ಭೂಲಾಯಿಪದ** ಎನ್ನುವ ಜಾನಪದ ಹಾಡುಗಳು ಬೀದರ್ ಜಿಲ್ಲೆಯಲ್ಲಿ ಮಾತ್ರ ಹೆಚ್ಚಾಗಿ ಕೇಳಿಬರುತ್ತವೆ. ಬೀದರ್ ಜಿಲ್ಲೆ ಹಿಂದಿ, ಮರಾಠಿ, ಉರ್ದು ಮುಂತಾದ ಭಾಷೆಗಳು ವ್ಯಾಪಕವಾಗಿ ಉಪಯೋಗದಲ್ಲಿರುವ ಪ್ರದೇಶ. ಆದುದರಿಂದ ಈ ಹಾಡುಗಳು ಆ ಎಲ್ಲ ಭಾಷೆಗಳ ಶಬ್ದಗಳಿಂದ ತುಂಬಿವೆ. ತೆಲುಗು ಶಬ್ದಗಳೂ ಒಂದು ಮೂಲೆಯಿಂದ ಬಂದಿರಬಹುದು. ಈ ಹಾಡುಗಳನ್ನು ಹಳೆಯ ಮೈಸೂರಿನ ಜನ ಕೇಳಿದರೆ ಅವರಿಗೆ ಅರ್ಥವೇ ಆಗುವುದಿಲ್ಲ. ಈ ಹಾಡುಗಳನ್ನು ನಾಗರ ಪಂಚಮಿಯ ಹಬ್ಬದಲ್ಲಿ ಹೆಚ್ಚಾಗಿ ಹಾಡುತ್ತಾರೆ. ಸಾಮಾನ್ಯವಾಗಿ ಹದಿವಯಸ್ಸಿನ ಹೆಣ್ಣುಮಕ್ಕಳು ಹಾಡುತ್ತಾರೆ. ವರ್ತುಲಾಕಾರವಾಗಿ ನಿಂತು ಹಾಡುವ ಈ ಪದಗಳು ಬಹು ಇಂಪಾಗಿರುತ್ತವೆ. ದೀರ್ಘವಾದ ಕಥೆಗಳು ಈ ಹಾಡುಗಳಲ್ಲಿ ಅಡಕವಾಗಿವೆ. ಮಹಮ್ಮದೀಯರ ಹಾಡುಗಳೂ ಕಥೆಗಳೂ ಸೇರಿರುತ್ತವೆ. ಈ ಹಾಡುಗಳಲ್ಲಿ ಸಾಹಿತ್ಯಿಕ ಮೌಲ್ಯವೂ ಭಾಷಾ ಮೌಲ್ಯವೂ ನೈಪುಣ್ಯ ಸೂಚಿಸುವಂತೆ ಹೆಣೆದುಕೊಂಡಿರುತ್ತವೆ ಎಂದು ಜಾನಪದ ವಿದ್ವಾಂಸರು ಹೇಳುತ್ತಾರೆ.

**ಭೇದಿ** ಭೇದಿ ಸರಿಯಾದ ರೂಪ. ಇದಕ್ಕೆ ಒಡೆಯುವುದು, ಸೀಳುವುದು, ಹರಿಯುವುದು, ವಿಭಾಗ ಮಾಡುವುದು ಮುಂತಾದ ಅರ್ಥಗಳಿವೆ. ವಿರೇಚನ ಎಂಬ ಅರ್ಥವೂ ಉಂಟು. ಭಿದ್ ಎಂಬ ಧಾತುವಿನಿಂದ ಬಂದ ರೂಪ ಭೇದಿ. ಭೇದ ಶಬ್ದವೂ ಹೀಗೆಯೇ ಬಂದುದು. ಬೇಧಿ ಎಂಬ ಶಬ್ದ ರೂಪ ತಪ್ಪು.

**ಭೋಗ** ಎಂದರೆ *೧. ಭುಜಿಸುವುದು, ತಿನ್ನುವುದು. ಈ ಅರ್ಥದಿಂದ ವ್ಯಾಪಕವಾಗಿ ಈ ಶಬ್ದಕ್ಕೆ ಸುಮಾರು ಇಪ್ಪತ್ತು ಅರ್ಥಗಳು ಬರುತ್ತವೆ. ೨. ಸುಖ, ೩. ಧನ, ಸಂಪತ್ತು, ೪. ದೇವತಾ ಮೂರ್ತಿಗೆ ದೇವಸ್ಥಾನಗಳಲ್ಲಿ ಮಾಡಿಸುವ ಸ್ನಾನಾದಿಗಳು, ೫. ಹಾವಿನ ಹೆಡೆ, ೬. ವಿಷಯ ಸುಖ, ೭. ಸೈನ್ಯ ಇತ್ಯಾದಿ.*

ಅಷ್ಟಭೋಗಗಳ ಹೆಸರುಗಳು ಹೀಗಿವೆ: *೧. ಸ್ನಾನ, ೨. ಭೋಜನ, ೩. ವಸ್ತ್ರ ೪. ಗಂಧ ೫. ಪುಷ್ಪ ೬. ತಾಂಬೂಲ, ೭. ಶಯ್ಯಾ, ೮. ಅಲಂಕಾರ.*

**ಭೋಗಾಭಿಲಾಷೆ** ಭೋಗದ +ಅಭಿಲಾಷೆ ಎಂಬುದು ವಿಗ್ರಹವಾಕ್ಯ. ಇದು ಷಷ್ಠೀ ತತ್ಪುರುಷ ಸಮಾಸ. ಅರ್ಥ ಭೋಗಕ್ಕೆ ಸಂಬಂಧಿಸಿದ ಅಭಿಲಾಷೆ ಎಂದು ಮಾಡಬೇಕು. ಏಕೆಂದರೆ ಭೋಗಕ್ಕೆ ಅಭಿಲಾಷೆ ಇಲ್ಲ. ಅದು ಮನುಷ್ಯನಿಗೆ ಇರುವ ಅಭಿಲಾಷೆ. ಸ್ವ ಸ್ವಾಮಿಭಾವಾದಿ ಸಂಬಂಧಗಳು ಇದ್ದರೆ ಅದನ್ನು ಷಷ್ಠೀ ತತ್ಪುರುಷ ಸಮಾಸ ಎಂದು ಕರೆಯುತ್ತಾರೆ.

**ಭೋಗ್ಯ** ಈ ಶಬ್ದ ಸಂಸ್ಕೃತದ್ದು. ಇದು ಭುಜ್ ಎಂಬ ಧಾತುವಿನಿಂದ ಬಂದಿದೆ. ಇದಕ್ಕೆ ಅನೇಕ ಅರ್ಥಗಳಿವೆ. *೧. ಹಣ, ಸಂಪತ್ತು ೨. ದವಸ, ಧಾನ್ಯ.* ಇದು ಗುಣವಾಚಕವಾದರೆ *೧. ಅನುಭವಿಸಲ್ಪಡುವ ೨. ಅನುಭವಿಸಲು ಯೋಗ್ಯವಾದ, ಅರ್ಹವಾದ.* ಇದೇ ಶಬ್ದ ಸ್ತ್ರೀಲಿಂಗವಾಗಿ ಭೋಗ್ಯಾ ಎಂದಾದರೆ ಅದಕ್ಕೆ ವೇಶ್ಯೆ, ಸೂಳೆ ಎಂಬರ್ಥವೂ ಬರುತ್ತದೆ.

ಕನ್ನಡದಲ್ಲಿ ಭೋಗ್ಯಕ್ಕೆ ಕೊಡು, ಭೋಗ್ಯಕ್ಕೆ ಮಾಡಿಕೋ ಎಂಬ ನುಡಿಕಟ್ಟು ಇದೆ. ಅದಕ್ಕೆ ಯಾವುದಾದರೂ ಆಸ್ತಿಯನ್ನು ಕೆಲವು ಕಾಲ ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕಾಗಿ ಹಣವನ್ನು ಕೊಡು ಎಂದು ಅರ್ಥ ಬರುತ್ತದೆ. ಇಂಗ್ಲಿಷಿನ mortgage ಎಂಬ ಶಬ್ದಕ್ಕೆ ಸಮಾನವಾದುದು.

**ಭೋಳೆಶಂಕರ** ಇದು ಮರಾಠಿಯ ಮೂಲಕ ಪ್ರಚಾರಕ್ಕೆ ಬಂದ ಶಬ್ದ. ಮರಾಠಿಯಲ್ಲಿ ಭೋಳಾ ಎಂಬ ಶಬ್ದವಿದೆ. ಸುಲಭವಾಗಿ ಮೋಸ ಹೋಗುವ ಸ್ವಭಾವ ಎಂದು ಆ ಶಬ್ದಕ್ಕೆ ಅರ್ಥ. ಶಂಕರ ಎಂಬುದು ಯಾವುದೇ ಒಂದು ಹೆಸರು ಅಷ್ಟೆ. ಕನ್ನಡದ ಗೂಬೆ ಶಂಕರಿ ಇದ್ದಹಾಗೆ. ನೇಪಾಳಿಯಲ್ಲಿ ಭೋಲೋ ಎಂದರೆ ಮೂರ್ಖ ಎಂದು ಅರ್ಥವಂತೆ. ಗುಜರಾತಿಯಲ್ಲಿಯೂ ಭೋಳ ಶಬ್ದವಿದೆ. ಕೆಲವರು ವಿದ್ವಾಂಸರು ಈ ಶಬ್ದವನ್ನು ಸಂಸ್ಕೃತದ ಭ್ರಮ್ ಎಂಬ ಧಾತುವಿನಿಂದ, ಪ್ರಾಕೃತ ಭೋಲ್ ಮೂಲಕ ಬಂದಿದೆ ಎನ್ನುತ್ತಾರೆ. ಅಂತೂ ಇವನು ಕ್ಷಿಪ್ರ ವಿಶ್ವಾಸಿ, ಬೇಗ ನಂಬುವವನು, ಮೋಸ ಹೋಗುವವನು. ಕನ್ನಡದ ಕೂಚಂಭಟ್ಟನಂತೆ.

**ಭ್ರಾತೃತ್ವ** ಭ್ರಾತೃತ್ವ ಎಂಬುದು ಸರಿಯಾದುದು. ಭ್ರಾತೃ ಎಂದರೆ ಸಹೋದರ ಎಂದರ್ಥ. ಸಹೋದರನ ಭಾವ, ಭ್ರಾತೃತ್ವ. Brotherhood ಇಂಗ್ಲಿಷ್ ಶಬ್ದಕ್ಕೆ ಸಮಾನವಾದ ಶಬ್ದ ಅದು.

## ಮ

**ಮಂಗಣ್ಣ** ಈ ಕನ್ನಡ ಶಬ್ದಕ್ಕೆ ಸ್ತ್ರೀ ಲಿಂಗ ಏನು ? ಕಪಿ, ಕೋತಿ, ಮರ್ಕಟ, ಎಂಬ ಅರ್ಥವೇ ಇದ್ದರೂ ಅದರ ಉಪಯೋಗದಲ್ಲಿ ಒಂದು ಪ್ರೀತಿಯಿದೆ. ಬಾ ಬಾ ಮಂಗಣ್ಣ ಎಂದು ಆಟಕ್ಕಾಗಿ ಕರೆಯುವಾಗ ಈ ಶಬ್ದವನ್ನು ಉಪಯೋಗಿಸುತ್ತಾರೆ. ಅವನೊಬ್ಬ ಮಂಗಣ್ಣ ಎಂದರೆ ಪೆದ್ದ ಎಂಬ ಅರ್ಥವೂ ಇದೆ. ಅಪ್ಪಣ್ಣ ಶಬ್ದಕ್ಕೆ ಸ್ತ್ರೀ ಲಿಂಗ ಅಮ್ಮಣ್ಣಿ ಅಲ್ಲವೆ ? ಹಾಗೆ ಮಂಗಣ್ಣಿ ಎಂದು ಉಪಯೋಗಿಸಿದರೆ ತಪ್ಪಾಗುವುದಿಲ್ಲ. ಅಷ್ಟು ಪ್ರೀತಿ ಇಲ್ಲದಿದ್ದರೆ ಮಂಗಮ್ಮ ಎನ್ನಿ ಸಾಕು ಅದು ಹೆಣ್ಣು ಕಪಿಯಾಗಿದ್ದರೆ.

**ಮಂಜರಿ** ಮಂಜರೀ ಎಂಬುದು ಸಂಸ್ಕೃತದ ಶಬ್ದ. ಕನ್ನಡದಲ್ಲಿ ಮಂಜರಿ ಎಂದಾಗುತ್ತದೆ. ಇದಕ್ಕೆ ಗೊಂಚಲು, ಗುಚ್ಛ ಎಂದರ್ಥ. ಕನ್ನಡದಲ್ಲಿ ಕುಚ್ಚು ಇದ್ದಂತೆ. ಇತರ ಅರ್ಥಗಳೂ ಇವೆ. ದಪ್ಪ ಮುತ್ತು ; ತುಳಸಿ; ಬಳ್ಳಿ ಇತ್ಯಾದಿ. ಪುಷ್ಪಮಂಜರಿ ಎಂಬ ಪದವನ್ನು ನೋಡಿ. ಚಿತ್ರ ಮಂಜರಿ ಎನ್ನುವಾಗ ಚಿತ್ರಗಳ ಗುಂಪು ಎಂದು ಅರ್ಥವಾಗುತ್ತದೆ.

**ಮಂಜೂರಾತಿ** ಇದು ಮಂಜೂರ್ ಎಂಬ ಅರಬ್ಬಿ ಶಬ್ದದಿಂದ ಬಂದದ್ದು. ಮಂಜೂರ್ ಎಂದರೆ ಒಪ್ಪಿದ, ಸಮ್ಮತಿ ಕೊಟ್ಟ. ಗುಣ ವಾಚಕದ ಅರ್ಥ ಮಂಜೂರಾತಿ ಎಂದರೆ ಒಪ್ಪಿಗೆ, ಅಪ್ಪಣೆ.

**ಮಂಜೂಷಾ** ಇದು ಸಂಸ್ಕೃತ ಶಬ್ದ. ಇದರ ಅರ್ಥ ಪೆಟ್ಟಿಗೆ, ಬುಟ್ಟಿ, ಕುಕ್ಕೆ ಇತ್ಯಾದಿ. ಕೆಲವು ಸಂಸ್ಕೃತ ಗ್ರಂಥಗಳನ್ನು ಕರೆಯುವಾಗ ಮಂಜೂಷಾ ಎಂದು ಸೇರಿಸಿ ಹೆಸರಿಡುತ್ತಾರೆ. ಉದಾ: ನ್ಯಾಯ ಮಂಜೂಷಾ, ಇದು ಸ್ತ್ರೀಲಿಂಗದ ಶಬ್ದ. ತದ್ಭವವಾದಾಗ ಮಂಜೂಷೆ, ಮಂಜೂಷ, ಆಗುತ್ತದೆ. ಕೆಂಪು ನಾರಾಯಣನು ನಡುಗನ್ನಡದಲ್ಲಿ ರಚಿಸಿರುವ ಮುದ್ರಾ ಮಂಜೂಷಾ ಎಂಬ ಕಾವ್ಯವಿದೆ. ಅಲ್ಲಿ ಅದು ಮುದ್ರಿಕೆಯುಂಗುರವಿರುವ ಪೆಟ್ಟಿಗೆ.

**ಮಂಟಪ** ಎನ್ನುವುದು ಸಂಸ್ಕೃತದ ಮಂಡಪ ಎಂಬುದರ ತದ್ಭವ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ಮುಖ್ಯವಾಗಿ ಇದು ಗೋಡೆಗಳಿಲ್ಲದೆ ಕಂಬಗಳ ಮೇಲೆ ಛಾವಣಿಯಂತೆ

ಹಾಸಿರುವ ಕಲ್ಲು ಅಥವಾ ತಡಿಕೆ ಮುಂತಾದುವುಗಳ ಕಟ್ಟಡ. ಇದು ಹಂಗಾಮಿಯಾದುದಾಗಿರಬಹುದು. ಶಾಶ್ವತವಾಗಿರುವಂತೆ ಕಟ್ಟಿದ್ದು ಆಗಬಹುದು. ದೇವರ ಉತ್ಸವ, ಮದುವೆ ಮುಂಜಿ, ಯಾಗಯಜ್ಞ ಸಮ್ಮೇಳನ ಸಮಾವೇಶ, ಸಭೆ ಸಮಾರಂಭಗಳಿಗೆಂದು ನಿರ್ಮಿತವಾದದ್ದು. ಬಳ್ಳಿಯನ್ನು ಹಬ್ಬಿಸಲು ಮಾಡಿದುದೂ ಆಗಬಹುದು. ಪ್ರಾಕೃತದಲ್ಲಿ ಮಂಡಪ. ಕನ್ನಡದಲ್ಲಿಯೂ ಆ ರೂಪದ ಪ್ರಯೋಗಗಳಿವೆ.

**ಮಂಡೂಕ** ಇದಕ್ಕೆ ಕಪ್ಪೆ ಎಂದರ್ಥ. ಕೆರೆಕಟ್ಟೆ ಸರೋವರಗಳ ದಡದಲ್ಲಿ ಶೋಭಾಯಮಾನವಾಗಿರುತ್ತವೆ ಎಂದರ್ಥ. **ಮಂಡಕೇ ಕಟಕಾದೌ ಶೋಭತೇ ಇತಿ ಮಂಡೂಕಃ.** ಇದು ಸಂಸ್ಕೃತ ಟೀಕಾಕಾರರು ನೀಡಿರುವ ವಿವರಣೆ.

**ಮಂಥನ** ಶಬ್ದಕ್ಕೆ ಮಂತು, ಕಡೆಗೋಲು ಮತ್ತು ಕಡೆಯುವುದು ಎಂದೂ ಅರ್ಥಗಳುಂಟು.

**ಮಂದಿರ** ಎನ್ನುವುದು ಸಂಸ್ಕೃತ ಶಬ್ದ. ಅದಕ್ಕೆ *೧. ಸಮುದ್ರ ೨. ಗೃಹ ೩. ದೇಹ ೪. ವಾಸಸ್ಥಳ ಮುಂತಾದ ಅರ್ಥಗಳಿವೆ.* ದಕ್ಷಿಣ ಭಾರತದಲ್ಲಿ ಈ ಅರ್ಥಗಳಲ್ಲಿಯೇ ಮಂದಿರ ಶಬ್ದವು ಪ್ರಯೋಗವಾಗಿದೆ. ಆದರೆ ಹಿಂದೀ ಭಾಷೆಯಲ್ಲಿ ಮಾತ್ರ ಮಂದಿರ ಎಂದರೆ ದೇವಸ್ಥಾನ ಎಂಬ ಹೊಸ ಅರ್ಥ ಸೇರಿದೆ. ಉತ್ತರ ಭಾರತದಲ್ಲಿ ಈ ಅರ್ಥ ವ್ಯಾಪಕವಾಗಿದೆ.

**ಮಗಂದಿರು** ಈ ಶಬ್ದ ವ್ಯಾಕರಣದ ದೃಷ್ಟಿಯಿಂದ ಸರಿ. ಮಕ್ಕಳು ಎಂಬ ಅರ್ಥದಲ್ಲಿ ಇದು ಉಪಯೋಗವಾಗಬಹುದು. ಕನ್ನಡದಲ್ಲಿ ಬಹುವಚನವನ್ನು ಸೂಚಿಸುವುದಕ್ಕಾಗಿ ಇರ್, ಅರ್, ದಿರ್, ವಿರ್, ಗಳ್ ಎಂಬ ಪ್ರತ್ಯಯಗಳಲ್ಲಿ ಯಾವುದನ್ನಾದರೂ ಸೇರಿಸುತ್ತಾರೆ. ಅಕ್ಕಂದಿರ್, ಅಣ್ಣಂದಿರ್ ಇದ್ದಹಾಗೆ. ಆದರೆ ಮಗಂದಿರ್ ಎಂಬ ಶಬ್ದದ ಪ್ರಯೋಗಗಳು ಕಡಿಮೆ. ಅಲ್ಲದೆ ಹೆಣ್ಣು ಮಕ್ಕಳು ಎಂಬರ್ಥದಲ್ಲಿ ಪ್ರಾದೇಶಿಕವಾಗಿ ಕೆಲವು ಕಡೆ ಮಗಂದಿರ್ ಎಂಬುದನ್ನು ಉಪಯೋಗಿಸುತ್ತಾರೆ. ಇದು ಸಾರ್ವತ್ರಿಕವಾಗಿ ಪ್ರಯೋಗದಲ್ಲಿಲ್ಲ. ಮಗ ಎಂಬ ಶಬ್ದವನ್ನು ಕೆಲವು ಪ್ರದೇಶಗಳ ಗ್ರಾಮೀಣರು ಎರಡು ಬಗೆಯಾಗಿ ಉಚ್ಚರಿಸುತ್ತಾರೆ. ಈ ಉಚ್ಚಾರಣೆಯ ಭೇದದಿಂದ ಸೂಚಿತ ವ್ಯಕ್ತಿಯ ಲಿಂಗವೂ ಸೂಚಕವಾಗುತ್ತದೆ.

**ಮಗುಚು** ಈ ಶಬ್ದ ಸರಿಯಾಗಿದೆ. ಮಗುಚ್ಚು ಎಂಬುದು ಹಳಗನ್ನಡದ ರೂಪ. ಆದ್ದರಿಂದ ಮಗುಚು ಎಂಬುದೇ ಸರಿ. ಮುಗುಚು ತಪ್ಪು. ಮಗುಚಿ ಬೀಳು - ತಳಮೇಲಾಗಿ ಬೀಳು, ಕಾಲುಮೇಲಾಗಿ ಅಥವಾ ಬೆನ್ನು ಮೇಲಾಗಿ ಬೀಳು.

**ಮಚ್ಚು** ಎಂಬ ಕನ್ನಡ ಶಬ್ದಕ್ಕೆ ಅನೇಕ ಅರ್ಥಗಳಿವೆ. ಮೆಚ್ಚಿಕೊಳ್ಳು, ಕಟ್ಟಡಗಳ ಮೇಲ್ಭಾಗ, ಬಿಸಿಲು ಮಚ್ಚು, ಮೋಸ, ವಂಚನೆ; ಗಿಡ, ಮರ, ಸೌದೆ ಮುಂತಾದುವನ್ನು ಕತ್ತರಿಸಲು ಉಪಯೋಗಿಸುವ ಹರಿತವಾದ ಕಬ್ಬಿಣದ ಆಯುಧ. ಮಚ್ಚುಗತ್ತಿ ಎಂದೂ ಕರೆಯುತ್ತಾರೆ.

**ಮಜಕೂರು** ಇದು ಅರಬ್ಬಿ ಭಾಷೆಯ ಮಝುಕೂರ್ ಎಂಬ ಶಬ್ದದಿಂದ ಬಂದಿದೆ. ಹಿಂದೀ ಮತ್ತು ಮರಾಠಿ ಭಾಷೆಗಳಲ್ಲಿ ಪ್ರಯೋಗವಾಗುತ್ತ ಇದೆ. ಇದಕ್ಕೆ ಕಾಗದ ಪತ್ರಗಳಲ್ಲಿರುವ ವಿಷಯಗಳು ಮತ್ತು ಸಾಕ್ಷಿಗಳು ಹೇಳುವ ವಿಷಯಗಳು ಎಂದರ್ಥ. ಮಾಹಿತಿ, ಹಕೀಕತ್ತು, ಆಲೋಚಿತ ವಿಷಯ ಎಂದು ವ್ಯಾಪಕವಾದ ಅರ್ಥ. ನ್ಯಾಯಸ್ಥಾನದ ಮೊಕದ್ದಮೆಯಾದರೆ ಅದಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳು ಎಂದರ್ಥ.

**ಮಟಚಿ** ಇದು ಸಂಸ್ಕೃತವಾದರೆ ಮಳೆಗಾಲದಲ್ಲಿ ಆಕಾಶದಿಂದ ಬೀಳುವ ಆಲಿಕಲ್ಲು ಎಂದರ್ಥ. ಕನ್ನಡವಾದರೆ ಮಿಡಿಚೆ ಎಂಬ ಚಿಟ್ಟೆ ಎಂದರ್ಥ. ಈ ಬಗೆಯ ಮಿಡಿಚೆಯ ಸಹಾಯದಿಂದ ಗೆಲುವನ್ನು ಸಾಧಿಸಿದ ಮಿಡಿಚಂಭಟ್ಟನ ಕಥೆ ಪ್ರಸಿದ್ಧ. ಈ ಕಥೆ ಒಂದೊಂದು ಕಡೆ ಒಂದೊಂದು ಬಗೆ. ಬಲ್ಲವರು ತಿಳಿಸಿದರೆ ಮೂಲ ಕಥೆಯನ್ನು ನಿರ್ಮಾಣ ಮಾಡಬಹುದು.

**ಮಟಮಟ** ಇದೊಂದು ಅನುಕರಣಶಬ್ದ. ಇದನ್ನು ಮಟಮಟ ಮಧ್ಯಾಹ್ನ ಎಂಬ ಶಬ್ದಪುಂಜದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ಅದಕ್ಕೆ ಆಗ ಸರಿಯಾಗಿ ಸೂರ್ಯನು

ಆಕಾಶದ ಮಧ್ಯಕ್ಕೆ ಬಂದಕಾಲ ಎಂದರ್ಥ. ಮಕಾರ ಪ್ರಾಸವು ಅದರ ಪ್ರಯೋಗದಲ್ಲಿ ಮುಖ್ಯ. ಮಟಮಟ ಮಂಗಳವಾರ ಎನ್ನುವುದರಲ್ಲಿಯೂ ಎಲ್ಲ ವಾರಗಳನ್ನೂ ಬಿಟ್ಟು ಮಂಗಳವಾರದಲ್ಲಿ ಶುಭಕಾರ್ಯ ಮಾಡುತ್ತೀಯೆ ? ಎಂದು ಪ್ರಶ್ನಿಸುವ ರೀತಿ. ಈ ಎರಡು ಪ್ರಯೋಗಗಳಲ್ಲಿಯೂ ಅಶುಭದ, ತೊಂದರೆಯ ಸೂಚನೆ ಇದೆ.

**ಮಡದಿ ಎಂಬ ಶಬ್ದಕ್ಕೆ ವಿರುದ್ಧವಾದ ಶಬ್ದ ಇಲ್ಲವೆ?** ಎಲ್ಲ ಶಬ್ದಗಳಿಗೂ ವಿರುದ್ಧ ಶಬ್ದಗಳು ಇರಲೇಬೇಕೆಂಬ ಭ್ರಮೆ, ಅನೇಕ ಇಂಥ ಪ್ರಶ್ನೆಗಳನ್ನು ಉಂಟು ಮಾಡುತ್ತದೆ. ಈ ಊಟ, ತಿನ್ನು ಎಂಬ ಶಬ್ದಗಳನ್ನೇ ತೆಗೆದುಕೊಳ್ಳಿ. ಬಹು ಸಾಮಾನ್ಯವಾಗಿ ಉಪಯೋಗಿಸುವ ಈ ಶಬ್ದಗಳಿಗೆ ವಿರುದ್ಧ ಶಬ್ದಗಳನ್ನು ಹುಡುಕುವುದು ಹೇಗೆ? ಉಪವಾಸ, ಕುಡಿ ಎಂಬ ಶಬ್ದಗಳನ್ನು ವಿರುದ್ಧ ಶಬ್ದಗಳೆಂದು ಕೆಲವು ಶಾಲೆಗಳಲ್ಲಿ ಹೇಳಿದ್ದಾರಂತೆ. ಹಾಗೆಯೇ ಗಂಡ ಶಬ್ದಕ್ಕೆ ಹೆಂಡತಿ ವಿರುದ್ಧ ಶಬ್ದವೆಂದೂ ತಂದೆಗೆ ತಾಯಿ ವಿರುದ್ಧ ಶಬ್ದವೆಂದೂ ಕೆಲವರು ತಿಳಿದಿದ್ದಾರೆ. ಈ ವಿಚಾರವನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳಬೇಕು.

ಉಪವಾಸ ಎಂದರೆ ಊಟ ಮಾಡದೆ ಇರುವುದು. ಊಟ ಎಂದರೆ ತಿನ್ನುವ ಆಹಾರ. ಊಟ ಮಾಡಿರುವ ಸ್ಥಿತಿ ಅಲ್ಲ. ಒಂದು ಸ್ಥಿತಿಗೆ ಮತ್ತೊಂದು ವಿರುದ್ಧ ಸ್ಥಿತಿಯಾಗುತ್ತದೆ. ತಿನ್ನುವುದಕ್ಕೆ ತಿನ್ನದೆ ಇರುವುದು ವಿರುದ್ಧ, ಕುಡಿಯುವುದು ಹೇಗೆ ವಿರುದ್ಧವಾಗುತ್ತದೆ ? ಗಂಡ ಪುಲ್ಲಿಂಗ ಶಬ್ದ, ಹೆಂಡತಿ ಸ್ತ್ರೀಲಿಂಗ ಅಷ್ಟೆ. ಅವು ವಿರುದ್ಧ ಶಬ್ದಗಳಲ್ಲ. ದೂರ ಶಬ್ದಕ್ಕೆ ಹತ್ತಿರ, ದುಃಖ - ಸುಖ, ವ್ಯವಸ್ಥೆ - ಅವ್ಯವಸ್ಥೆ, ಸುವ್ಯವಸ್ಥೆ - ದುರ್ವ್ಯವಸ್ಥೆ, ಜುಗುಪ್ಸೆ - ವಿಶ್ವಾಸ, ಕಹಿ- ಸಿಹಿ, ಸ್ನೇಹ - ದ್ವೇಷ, ಸಟೆ - ದಿಟ, ಬೆಳಕು - ಕತ್ತಲೆ ಹೀಗೆ ಒಂದು ಪಟ್ಟಿಯನ್ನೇ ಸಿದ್ಧಪಡಿಸಬೇಕು. ಆ ಬಳಿಕ ವಿದ್ಯಾರ್ಥಿಗಳ ಮೂಲಕ ಆ ಶಬ್ದಗಳನ್ನು ವಿರುದ್ಧಾರ್ಥ ಬರುವಂತೆ ವಾಕ್ಯಗಳಲ್ಲಿ ಪ್ರಯೋಗಿಸಬೇಕು. ಇದೊಂದು ತುಂಬ ಪ್ರಯೋಜನಕಾರಿಯಾದ ಅಭ್ಯಾಸ.

**ಮಡಿ** ಈ ಶಬ್ದ ಅಚ್ಚಗನ್ನಡ ಶಬ್ದ. ಇದನ್ನು ಕ್ರಿಯಾಪದವಾಗಿಯೂ ನಾಮಪದವಾಗಿಯೂ ಉಪಯೋಗಿಸಬಹುದು. ಕ್ರಿಯಾಪದವಾದರೆ *೧. ಮಡಿಸು ೨. ಬಾಗಿಸು ೩. ಬಾಗು ೪. ಕುಗ್ಗು ೫. ಮುಚ್ಚಿಕೊಳ್ಳು ೬. ಸಾಯು ೭. ಕೊನೆಯಾಗು* ಎಂದು ಅರ್ಥಗಳು ಬರುತ್ತವೆ. ನಾಮಪದವಾದರೆ *೧. ಮಡಿಕೆ ೨. ಸರಿ ೩. ಬಾರಿ ೪. ಪರಿಶುದ್ಧತೆ ೪. ಒಗೆದ ಬಟ್ಟೆ ೫. ಮಡಿಸಿದ ಬಟ್ಟೆ ೬. ರೇಷ್ಮೆ ವಸ್ತ್ರ ೭. ಗಿಡಗಳ ಪಾತಿ ೮. ನಿಯಮ, ಆಚಾರ ೯. ನಾಟಿ ಹಾಕಿರುವ ಜಾಗ ೧೦. ಒಂದು ಬಗೆಯ ಕಾಯಿ.* ಈ ಎಲ್ಲ ಅರ್ಥಗಳಲ್ಲಿಯೂ ಸಮಯಾನುಸಾರ ಈ ಶಬ್ದವನ್ನು ಉಪಯೋಗಿಸಬಹುದು. ನೋಡಿ: ತೆರೆ

**ಮಡೆ** ಇದು ಕನ್ನಡದ ಶಬ್ದ. ತಮಿಳಿನಲ್ಲಿಯೂ, ತೆಲುಗು, ತುಳು ಭಾಷೆಗಳಲ್ಲಿಯೂ ಜ್ಞಾತಿಶಬ್ದಗಳಿವೆ. ಇದಕ್ಕೆ ಅನೇಕ ಅರ್ಥಗಳಿವೆ. ೧. ದೇವಸ್ಥಾನದ ದೇವತೆಗಳಿಗೆ ಅರ್ಪಿಸುವ *ನೈವೇದ್ಯ ೨. ದೇವರ ಸೇವೆಗೆಂದು ದತ್ತಿಯಾಗಿ ಬಿಟ್ಟ ಗದ್ದೆ ೩. ವ್ಯವಸಾಯಕ್ಕಾಗಿ ನದಿ, ತೊರೆ ಮುಂತಾದವುಗಳಿಗೆ ಕಟ್ಟಿರುವ ಒಡ್ಡು-ಅಡ್ಡಗಟ್ಟೆ.* ಕರಾವಳಿಯಲ್ಲಿ ಮಡೆ ಎಂದರೆ ಹುಲ್ಲಿನಿಂದ ಮಾಡಿದ ಹಗ್ಗ. ಮಡೆ ಹೊರಳು ಎನ್ನುವುದು ಒಂದು ವ್ರತ. ದೇವಸ್ಥಾನಗಳಲ್ಲಿ ಭಕ್ತರು ಊಟ ಮಾಡಿದ ಎಂಜಲೆಲೆಗಳ ಮೇಲೆ ಮಲಗಿ ಹೊರಳುತ್ತಾ ಪ್ರದಕ್ಷಿಣೆ ಹಾಕುವುದು.

**ಮಣಿಪ್ರವಾಳ** ಇದು ಒಂದು ಬಗೆಯ ಭಾಷಾಶೈಲಿ. ಇದರಲ್ಲಿ ಸಂಸ್ಕೃತ ಭಾಷೆಯ ಶಬ್ದಗಳೂ ವಾಕ್ಯಗಳೂ ಸೇರಿಕೊಂಡಿರುವ ದೇಶೀಯ ಭಾಷಾ ಶೈಲಿ ಕಂಡುಬರುತ್ತದೆ. ಹಿಂದಿನ ಕಾವ್ಯಗಳಲ್ಲಿ ಈ ಬಗೆಯ ಬರಹ ಉಂಟು. ಮಲಯಾಳದಲ್ಲಿ ಈ ಬಗೆಯ ರಚನೆ ಹೆಚ್ಚು. ಪಂಪನ ಈ ವಾಕ್ಯವನ್ನು ಗಮನಿಸಿ: **ಕಃಕೇನಾರ್ಥೀ ಕೋದರಿದ್ರಃ** ಎನುತುಮನಿತುಮಂ

ಧರ್ಮಜಂ ಸೂರೆಗೊಟ್ಟಂ (ಪಂಪ ಭಾರತ ೬-೪೦) ಯಾರಿಂದ ಏನು ಯಾಚನೆಗೊಂಡಿದೆ? ಯಾರು ದರಿದ್ರರು? ಎಂಬ ಅರ್ಥದ ಭಾಗ ಸಂಸ್ಕೃತದಲ್ಲಿದೆ. ಮಣಿಪ್ರವಾಳದಲ್ಲಿ ರತ್ನ ಮತ್ತು ಹವಳ ಎಂಬ ಅರ್ಥ ಬರುವ ಎರಡು ಶಬ್ದಗಳು ಸೇರಿವೆ.

**ಮಣ್ಣಾಂಗಟ್ಟಿ** ಈ ಶಬ್ದ ಮಣ್ಣಂಗಟ್ಟಿ ಎಂಬ ರೂಪದಲ್ಲಿ ಹೆಚ್ಚು ಪ್ರಯೋಗದಲ್ಲಿದೆ. ಮಣ್ಣಾಂಗಟ್ಟಿ ಎಂಬುದು ತಮಿಳರಲ್ಲಿ ವ್ಯಾಪಕವಾಗಿರುವ ರೂಪ. ಈ ಶಬ್ದಕ್ಕೆ ಮಣ್ಣಿನ ಉಂಡೆ ಎಂದು ಅರ್ಥ. ಆಲಂಕಾರಿಕವಾಗಿ ನಿಷ್ಪ್ರಯೋಜಕವಾದ, ನಿಷ್ಫಲವಾದ, ವ್ಯರ್ಥ ವಸ್ತು ಎಂದು ಅರ್ಥ. 'ಆ ವ್ಯಾಪಾರದಲ್ಲಿ ನಿನಗೇನು ಸಿಗುತ್ತದೆ? ಮಣ್ಣಂಗಟ್ಟಿ' ಎಂಬುದು ರೂಢಿಯ ಪ್ರಯೋಗ. ಮಣ್ಣಂಗಟ್ಟೆ ಎಂಬ ರೂಪವೂ ಉಂಟು.

**ಮತದಾನ** ಈ ಶಬ್ದ ಈಚಿನ ೫೦ ವರ್ಷಗಳಲ್ಲಿ ಹೆಚ್ಚು ಪ್ರಚಾರಕ್ಕೆ ಬಂದಿದೆ. ಇದಕ್ಕೆ 'ಓಟು ಹಾಕುವುದು' ಎಂದರ್ಥ. ನಮ್ಮ ಊರಿನಲ್ಲಿ, ೨೦ ನೆಯ ತಾರೀಖು 'ಮತದಾನ' ನಡೆಯುತ್ತದೆ ಎಂದಾಗ ಇದರ ಅರ್ಥ ಸ್ಪಷ್ಟ. ಇಂಗ್ಲಿಷಿನ 'Voting' ಶಬ್ದಕ್ಕೆ ಸಂವಾದಿಯಾದುದು ಈ ಶಬ್ದ. 'ಮತದಾನ' ಎಂಬ ಶಬ್ದಕ್ಕೆ 'ಮತ ಚಲಾಯಿಸುವ ಹಕ್ಕು' ಎಂಬ ಅರ್ಥ ಬರುವುದಿಲ್ಲ. ಆ ಅರ್ಥದಲ್ಲಿ ಅದನ್ನು ಉಪಯೋಗಿಸಬಾರದು.

**ಮತಾಂಧ** ತಾನು ಯಾವ ಮತಕ್ಕೆ ಸೇರಿದ್ದೇನೋ ಆ ಮತವೇ ಶ್ರೇಷ್ಠ ಮಿಕ್ಕ ಎಲ್ಲ ಮತಗಳೂ ಅದಕ್ಕಿಂತ ಕೀಳು ಎಂದು ನಂಬುವವನೇ ಮತಾಂಧ. ಇಂಗ್ಲಿಷಿನ Fundamentalist ಎಂಬ ಶಬ್ದಕ್ಕೆ ಸರಿಸಮಾನವಾದ ಶಬ್ದ. ಮತಾಂಧನಾದವನು ಯಾವ ಒಂದು ಮತಕ್ಕೆ ಸೇರಿದವನಾದರೂ ಇರಬಹುದು. Fundamentalism ಶಬ್ದ ಮೊದಲು ಪ್ರಯೋಗವಾದುದು ಇಂಗ್ಲಿಷಿನಲ್ಲಿ. ಅದು ಪ್ರಾಟೆಸ್ಟೆಂಟ್ ಪಂಗಡದವರು 'ಬೈಬಲ್ ಗ್ರಂಥದ ಪ್ರತಿಯೊಂದು ಶಬ್ದವನ್ನೂ ದೇವರೇ ಸ್ಫೂರ್ತಿ ನೀಡಿ ಬರೆಸಿರುವ ದಾಖಲೆ' ಎಂದು ನಂಬಿರುವುದನ್ನು ತಿಳಿಸುವ ಶಬ್ದ. ಆದರೆ ಮತಾಂಧರು ಅದಕ್ಕಿಂತ ಮುಂಚಿನಿಂದಲೂ ಅನೇಕ ದೇಶಗಳಲ್ಲಿ ಖ್ಯಾತರಾಗಿದ್ದರು. Religious begot ಎಂಬ ಶಬ್ದವೂ ಇದನ್ನೇ ತಿಳಿಸತಕ್ಕದ್ದು. One who is intolerant of any religion other than his own ಎಂಬುದು ಅದರ ಅರ್ಥ.

**ಮತ್ತು ಇಂಗ್ಲಿಷಿನ & ಎಂಬ ಚಿಹ್ನೆಯನ್ನು ಕನ್ನಡದಲ್ಲಿಯೂ ಏತಕ್ಕೆ ಉಪಯೋಗಿಸಬಾರದು?**

ಇಂಗ್ಲಿಷಿನಲ್ಲಿ And ಎಂಬ ಶಬ್ದವನ್ನು ಸೂಚಿಸುವ ಎರಡು ಚಿಹ್ನೆಗಳಿವೆ & ಮತ್ತು *&*. ಇವುಗಳಿಗೆ Ampersand ಎಂದು ಹೆಸರು. This symbol stands by itself for and ಎಂದು ಅದಕ್ಕೆ ಅರ್ಥ. ಕನ್ನಡದಲ್ಲಿ ಇಲ್ಲದೆ ಇದ್ದ ಅನುಕೂಲಗಳನ್ನು ಇತರ ಕಡೆಗಳಿಂದ ಆಮದು ಮಾಡಬಹುದು. ಇರುವ ಅನುಕೂಲಗಳನ್ನು ಏಕೆ ಬಿಡಬೇಕು. ನಮ್ಮಲ್ಲಿ ಮತ್ತೂ, ಮತ್ತು, ಹಾಗೂ, ಹಾಗು ಎಂಬ ರೂಪಗಳು ಈ ಕೆಲಸವನ್ನು ಮಾಡುತ್ತಿವೆ. ಅಲ್ಲದೆ ಎರಡು ಶಬ್ದಗಳನ್ನು ಅದೂ ಇದೂ ಎಂಬಂತೆ ಊ ಎಂಬ ಪ್ರತ್ಯಯವೇ ಆ ಕೆಲಸವನ್ನು ಮಾಡುತ್ತದೆ. ಆದುದರಿಂದ ಕನ್ನಡ ವಾಕ್ಯಗಳ ನಡುವೆ ಇಂಗ್ಲಿಷ್ ಚಿಹ್ನೆಯನ್ನು ಬಳಸಬೇಕಾದ ಅಗತ್ಯವಿಲ್ಲ. ಪಂಜೆ ಮಂಗೇಶರಾಯರ ಒಂದು ಪ್ರಬಂಧದ ಹೆಸರು ಹೀಗಿದೆ: ಪ್ರಾಣಿಗಳೂ, ಪ್ರದೇಶಗಳೂ. ನೋಡಿ: ಓಕೆ.

**ಮತ್ತೊಮ್ಮೆ, ಮಗದೊಮ್ಮೆ, ಇನ್ನೊಮ್ಮೆ** ಈ ಮೂರು ಶಬ್ದಗಳಲ್ಲಿ ಒಮ್ಮೆ ಎಂಬ ಭಾಗವನ್ನು ತೆಗೆದರೆ ಉಳಿಯುವ ಭಾಗಗಳು ಇವು: ಮತ್ತು ಅಥವಾ ಮತ್ತೆ, ಮಗದು, ಇನ್ನು. ಈ ಮೂರರಲ್ಲಿ ಮತ್ತೆ +ಒಮ್ಮೆ, ಇನ್ನು +ಒಮ್ಮೆ ಎಂಬ ಶಬ್ದಗಳು ಮತ್ತೊಮ್ಮೆ ಇನ್ನೊಮ್ಮೆ ಎಂದಾಗುತ್ತವೆ. ಎರಡಕ್ಕೂ ಅರ್ಥ ಒಂದೇ ತಾನೆ! ಮತ್ತೆ ಒಂದು ಸಲ - ಇನ್ನೂ ಒಂದು

ಸಲ ಎಂದು ತಾನೆ ಅರ್ಥ. ಮಗದೊಮ್ಮೆಯ ಬಗ್ಗೆ ಸ್ವಲ್ಪ ವಿವರ ಬೇಕು. ನಿಜವಾಗಿ ಅದು ಮುಗುದೊಮ್ಮೆ. ಹಳಗನ್ನಡದಲ್ಲಿ **ಮುಗುೞ್**ಎಂಬ ಧಾತುವಿದೆ. ಇದಕ್ಕೆ ಹಿಂದಿರುಗು, ಮರಳು ಎಂಬ ಅರ್ಥವಿದೆ. ಆದ್ದರಿಂದ ಈ ಧಾತು ಭೂತ ನ್ಯೂನ ರೂಪದಲ್ಲಿ ಮುಗುೞ್ದು ಎಂದಾಗಿ ಅದಕ್ಕೆ ಒಮ್ಮೆ ಸೇರಿದಾಗ **ಮುಗುೞ್ದೊಮ್ಮೆ** ಎಂಬ ರೂಪ ಸಾಧಿತವಾಗುತ್ತದೆ. ಈ ಶಬ್ದವೇ ಮುಂದೆ ಮುಗುದೊಮ್ಮೆ ಎಂದಾಗುತ್ತದೆ.

ಈ ಶಬ್ದ ಇತ್ತೀಚಿನ ಕನ್ನಡದಲ್ಲಿ ಮಗದೊಮ್ಮೆ ಎಂಬ ರೂಪವನ್ನು ಪಡೆದಿದೆ. ಆ ಶಬ್ದಕ್ಕೂ ಮಿಕ್ಕ ಎರಡು ಶಬ್ದಗಳಂತೆಯೇ ಅರ್ಥ. ವ್ಯುತ್ಪತ್ತಿ ಬೇರೆ. ಅರ್ಥ ಒಂದೇ.

**ಮಥನ** ಶಬ್ದಕ್ಕೆ ಉಜ್ಜುವುದು, ಕಡೆಯುವುದು, ಕಲಕುವುದು, ನಾಶ ಮಾಡುವುದು, ಕೊಲ್ಲುವುದು ಮುಂತಾದ ಅರ್ಥಗಳು ವ್ಯಾಪಕವಾಗಿ ಕ್ರಮವಾಗಿ ಬೆಳೆದಿವೆ. ಸಂಸ್ಕೃತದ ಮಂಥನ ಎಂಬ ಶಬ್ದಕ್ಕೆ ಕಡೆಯುವುದು ಎಂದೂ ಕಡೆಗೋಲು ಎಂದೂ ಅರ್ಥಗಳಿವೆ. ಇವೆರಡೂ ಬೇರೆ ಬೇರೆ ಧಾತುಗಳಿಂದ ಬಂದವು.

**ಮದನೆ** ಈ ಶಬ್ದ ಕನ್ನಡದಲ್ಲಿಲ್ಲ. ಸಂಸ್ಕೃತದಲ್ಲಿ ಮದನ =ಮನ್ಮಥ ಎಂಬ ಶಬ್ದವಿದೆ. ಮದನಾ ಎಂದರೆ ಹೆಂಡ; ಮದ್ಯ. ಅದರ ನೆನಪಿನಿಂದ ಈ ಶಬ್ದವನ್ನು ಯಾರೋ ಸೃಷ್ಟಿ ಮಾಡಿರಬೇಕು. ಕನ್ನಡದಲ್ಲಿ ಆ ಶಬ್ದ ಇಲ್ಲ. **'ಮನದನ್ನೆ'** ಎಂಬ ಶಬ್ದವಿದೆ.

**ಮದುವೆ, ವಿವಾಹ, ಕಲ್ಯಾಣ, ಲಗ್ನ ಎಂಬ ಶಬ್ದಗಳ ವ್ಯತ್ಯಾಸ.** ಈ ಎಲ್ಲ ಶಬ್ದಗಳಿಗೂ ಗಂಡು - ಹೆಣ್ಣು ಇಬ್ಬರೂ ಸೇರಿ ದಂಪತಿಗಳಾಗುವ ಧಾರ್ಮಿಕ ಸಮಾರಂಭ ಎಂಬ ಅರ್ಥವೇ ನಿಜ. ಆದರೂ ಆ ಶಬ್ದಗಳಿಗೆ ಬೇರೆ ಅರ್ಥಗಳಿವೆ.

ಮದುವೆ, ಮದಿವೆ, ಮದವೆ ಎಂಬ ಎಲ್ಲ ರೂಪಗಳಲ್ಲಿಯೂ ಈ ಶಬ್ದ ಕನ್ನಡದಲ್ಲಿ ಹಿಂದಿನಿಂದ ಪ್ರಯೋಗವಾಗುತ್ತ ಬಂದಿದೆ. ಇದು ಕನ್ಯೆ ಮತ್ತು ವರ ಇಬ್ಬರೂ ಒಂದಾಗುವ ಧರ್ಮ ಕಾರ್ಯ. ಇದು ಕನ್ನಡ ಶಬ್ದ. ಇದಕ್ಕೆ ಜ್ಞಾತಿ ಶಬ್ದಗಳು ಇಲ್ಲದಿರುವುದು ಆಶ್ಚರ್ಯ. ಆದರೆ ಮದುಮಗ, ಮದುಮಗಳು ಇತ್ಯಾದಿ ಶಬ್ದಗಳು ದ್ರಾವಿಡ ಭಾಷೆಗಳಲ್ಲಿ ಪ್ರಯೋಗದಲ್ಲಿವೆ. ಈ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕು.

ಮಿಕ್ಕ ಎಲ್ಲ ಶಬ್ದಗಳೂ ಸಂಸ್ಕೃತ ಶಬ್ದಗಳು. ನೋಡಿ : **ಕಲ್ಯಾಣ**

**ಮಧುಸೂದನ** 'ಮಧುಸೂದನ' ಎಂಬುದು ಸರಿ. ಮಧು ಒಬ್ಬ ರಾಕ್ಷಸ. ಅವನನ್ನು ಸೂದನ =ನಾಶಪಡಿಸಿದವನು =ಮಧುಸೂದನ, ವಿಷ್ಣು; ದುಂಬಿ ಎಂದೂ ಅರ್ಥ. 'ಮಧುಸೂಧನ' ತಪ್ಪು.

**ಮಧ್ಯಗೇಹ** ಎಂದರೆ ನಡುಮನೆ. ಶ್ರೀ ಮಧ್ವಾಚಾರ್ಯರ ತಂದೆಗೆ ಪುರಾಣಿಕ ನಡುಮನೆ ಅನಂತ ಭಟ್ಟ ಎಂದು ಹೆಸರು. ಇದನ್ನೇ ಸಂಸ್ಕೃತದಲ್ಲಿ **ಮಧ್ಯಗೇಹ ಭಟ್ಟ** ಎಂದು ಅನುವಾದ ಮಾಡಿ ಹೇಳುತ್ತಾರೆ.

**ಮಧ್ಯಾಂತರ** ಎಂಬುದು ಸರಿಯಾದ ಶಬ್ದ. ಆದರೆ ಅದನ್ನು ಯಾರೂ ಉಪಯೋಗಿಸುವುದಿಲ್ಲ. ಮಧ್ಯಂತರ ಎಂಬುದು ಈಗ ಸರ್ವವ್ಯಾಪಿಯಾಗಿದೆ. ಯಾವುದಾದರೂ ಕಾರ್ಯಕ್ರಮದ ನಡುವೆ ನೀಡುವ ಬಿಡುವಿಗೆ ಈ ಹೆಸರಿದೆ. ಇದನ್ನು ಮೊದಲು ಉಪಯೋಗಿಸಿದವರು ಮಧ್ಯೆ +ಅಂತರ ಎಂಬ ಎರಡು ಶಬ್ದಗಳನ್ನೂ ಕನ್ನಡದಂತೆ ಭಾವಿಸಿ ಲೋಪಸಂಧಿಯನ್ನು ಮಾಡಿದ್ದಾರೆ. ಈಗ ಇದು ಉಳಿದುಬಿಟ್ಟಿದೆ. ಶುದ್ಧ ಪ್ರಯೋಗವಾಗಿದೆ.

**ಮಧ್ಯಪ್ರಾಚ್ಯ** ಎಂಬುದು ಇಂಗ್ಲಿಷಿನ middle east ಎಂಬುದರ ಕನ್ನಡ ಅನುವಾದ. ಇದರಲ್ಲಿ ಏಷಿಯಾ ಖಂಡದ ನೈರುತ್ಯ ದೇಶಗಳೂ ಆಫ್ರಿಕಾ ಖಂಡದ ಈಶಾನ್ಯ ಪ್ರದೇಶಗಳೂ ಸೇರುತ್ತವೆ. ಅಂದರೆ ತುರ್ಕಿ, ಇರಾನ್, ಇರಾಕ್, ಅರೇಬಿಯ, ಸೂಡಾನ್ ಮುಂತಾದ ದೇಶಗಳು, ಈ ದೇಶಗಳಿಗೆ ಸಂಬಂಧಿಸಿದ ವಿಷಯ, ಜನ ಇತ್ಯಾದಿ ಇದರಲ್ಲಿ ಸೇರಿರುತ್ತವೆ.

**ಮನದನ್ನೆ** ಮನದ + ಅನ್ನೆ ಅಂದರೆ ಮನಸ್ಸಿನಂತೆ ಇರುವವಳು ಎಂದರ್ಥ. ವ್ಯಾಪ್ತವಾಗಿ ಆತ್ಮೀಯಳು, ಹೆಂಡತಿ ಎಂಬ ಅರ್ಥ ಬರುತ್ತದೆ. ಕಾಲೇಜುಗಳ ಪ್ರೇಮಪತ್ರಗಳಲ್ಲಿ ಬಹುವಾಗಿ ಕಾಣಬರುವ ಶಬ್ದ ಇದು. ಪ್ರಾಚಾರ್ಯರ ತಲೆನೋವಿಗೆ ಕಾರಣ.

**ಮನರಂಜನೆ** ಎಂಬ ರೂಪ ಸಂಸ್ಕೃತದ ವ್ಯಾಕರಣದ ಪ್ರಕಾರ ಅಶುದ್ಧವಾದ ಶಬ್ದ. ಮನಸ್ + ರಂಜನ ಎಂಬ ಶಬ್ದಗಳು ಸಂಧಿಯಾದರೆ ಮನೋರಂಜನ ಎಂದು ರೂಪವನ್ನು ಪಡೆಯುತ್ತದೆ. ಆದರೆ ಕನ್ನಡಕ್ಕೆ ಮನಸ್ ಶಬ್ದವು ತದ್ಭವವಾಗಿ ಬಂದಾಗ ಮನ ಎಂದಾಗುತ್ತದೆ. ಹಾಗೆಯೇ ರಂಜನ ಎಂಬುದು ತದ್ಭವವಾದಾಗ ರಂಜನೆ ಎಂದೇ ಆಗುತ್ತದೆ. ಈ ಎರಡು ತದ್ಭವ ಶಬ್ದಗಳನ್ನು ಸೇರಿಸಿ ಮನರಂಜನೆ ಎಂಬ ಸಮಾಸವನ್ನು ಮಾಡಬಹುದು. ಭಾಷೆಗಳ ಬೆಳವಣಿಗೆಯ ಕಾಲದಲ್ಲಿ ಇಂಥ ಅನೇಕ ವ್ಯತ್ಯಾಸಗಳಾಗುತ್ತವೆ. ಬಹುಶಃ ಕಾಲಕ್ರಮದಲ್ಲಿ ನಮ್ಮ ವ್ಯಾಕರಣಗಳಲ್ಲಿ ಹೊಸ ಸೂತ್ರಗಳನ್ನೇ ನಿರ್ಮಾಣ ಮಾಡಬೇಕಾಗುತ್ತದೆ. ಇಂಥ ವಿಷಯಗಳನ್ನು ಪರಿಶೀಲಿಸುವ ಲೇಖನಗಳು ಈಗಾಗಲೇ ಹಲವು ಪ್ರಕಟವಾಗಿವೆ. ಆದರೆ, ಒಟ್ಟು ಭಾಷೆಯ ದೃಷ್ಟಿಯಿಂದ ಇಂಥ ವ್ಯಾಪಕ ಪರಿಷ್ಕರಣ ಕಾರ್ಯ ಇನ್ನೂ ನಡೆದಿಲ್ಲ.

**ಮನಸ್ಸು ಕಲ್ಲಾಗುವುದು** ಕಷ್ಟಗಳನ್ನು ಎದುರಿಸುವುದಕ್ಕೆ ಸಿದ್ಧರಾಗುವುದು. ಕಷ್ಟ ಬಂತೆಂದು ಕೈಚೆಲ್ಲಿ ಕೂಡುವುದಲ್ಲ. ಇದು ಒಂದು ಅರ್ಥ. ಮಂಕುತಿಮ್ಮನ ಈ ಕಾವ್ಯವನ್ನು ಗಮನಿಸಿ.

*ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು*
*ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ*

ಇಲ್ಲಿ ಈ ಅರ್ಥವಿದೆ. ನನ್ನ ವಿಚಾರದಲ್ಲಿ ಅವನ ಮನಸ್ಸು ಕಲ್ಲಾಗಿದೆ ಎಂದರೆ ನನ್ನ ಬಗೆಗೆ ಅವನು ಕರುಣೆಯನ್ನು ತೋರಿಸುವುದಿಲ್ಲ ಎಂದರ್ಥ.

**ಮನಾಯಿ** ಇದು ಹಿಂದಿ ಶಬ್ದ **ಮನಾಈ** ಎಂಬುದರಿಂದ ಬಂದದ್ದು. ಮರಾಠಿಯಲ್ಲಿಯೂ ಮನಾಈ ಎಂದೇ ಪ್ರಯೋಗವಾಗುತ್ತದೆ. ಇದಕ್ಕೆ ಅಡ್ಡಿ, ತಡೆ ಎಂದರ್ಥ. ನಿಷೇಧವೋ, ವಿರೋಧವೋ ಇದ್ದ ಕಡೆ ಈ ಶಬ್ದವನ್ನು ಉಪಯೋಗಿಸುತ್ತಾರೆ.

**ಮನು** ಈ ಶಬ್ದ ಮನಸ್ಸಿಗೆ ಸಂಬಂಧಪಟ್ಟದ್ದು. ಮನ್ ಎಂಬ ಧಾತುವಿನಿಂದ ಬೆಳೆದುದು. ಈ ಶಬ್ದಕ್ಕೆ ಬುದ್ಧಿವಂತ, ವಿವೇಕಿ ಎಂಬುದು ಮೊದಲ ಅರ್ಥ. ಆ ಬಳಿಕ ಎಲ್ಲ ಮಾನವರ ಮೂಲಪುರುಷ ಎಂಬ ಅರ್ಥ ಬಂತು. ೩೧ ದೇವತೆಗಳಲ್ಲಿ ಈತನೂ ಒಬ್ಬ ದೇವತೆ. ೧೪ ಮನ್ವಂತರಗಳ ಬಗ್ಗೆ ವಿವರ ಬಂದಾಗ ಸ್ವಾಯಂಭುವಮನು ಮೊದಲನೆಯವನೆಂದೂ ಬಳಿಕ ಮಿಕ್ಕವರು ಹುಟ್ಟಿದರೆಂದೂ ಕಥೆ ಇದೆ. ಎಲ್ಲ ಮಹರ್ಷಿಗಳ ತಂದೆ ಸ್ವಾಯಂಭುವ ಮನು. ಮರೀಚಿಯೇ ಮೊದಲ ಮಹರ್ಷಿ. ಮರೀಚಿ ಎಂದರೆ ಬೆಳಕು ಎಂದರ್ಥ. ಎಲ್ಲ ಮಾನವರಿಗೂ ಇವನೇ ಮೂಲ. ಅಂದರೆ ತಿಳಿವು ಬೆಳೆದುದೇ ಇವನಿಂದ ಎಂದರ್ಥ.

**ಮನೂತಿ** ಇದೊಂದು ಮರಾಠಿ ಶಬ್ದ. ಮನೋತೀ ಎಂಬುದು ಅದರ ಸರಿಯಾದ ರೂಪ. ಯಾರಾದರೂ ಕೋಪಗೊಂಡರೆ ಅಥವಾ ಆಗಬೇಕಾಗಿರುವ ಅಗತ್ಯ ಕಾರ್ಯಕ್ಕೆ ಅಡ್ಡಿ ತರುವುದಾದರೆ ಅಂಥ ಸಂದರ್ಭದಲ್ಲಿ ಅಂಥವರಿಗೆ ಸಮಾಧಾನ ತರಲು ಅನೇಕ ಆಸೆ ಆಕಾಂಕ್ಷೆಗಳು ತೀರಬಹುದೆಂಬ ಸೂಚನೆಗಳನ್ನು ಕೊಟ್ಟು ಸಮಾಧಾನ ಮಾಡುವ ಮಾತಿನ ಉಪಾಯ. ಮದುವೆಗಳಲ್ಲಿ ಹೆಚ್ಚು ಅಗತ್ಯವಾಗುತ್ತದೆ; ಮುನಿಸು ತಿಳಿಸುವ ಮಾರ್ಗ.

**ಮನೋಜ್ಞ** ಇದು ಬಹು ಜನಪ್ರಿಯವಾದ ಸಂಸ್ಕೃತ ಶಬ್ದ. ಮನೋಹರವಾದ, ಸುಂದರವಾದ, ಚೆಲುವಾದ, ಆಕರ್ಷಕವಾದ, ರಮಣೀಯವಾದ, ಎಂಬ ಎಲ್ಲ ಅರ್ಥಗಳೂ ಬರುತ್ತವೆ. ಮನಸ್ಸಿನಿಂದ ತಿಳಿಯಬಹುದಾದುದು ಇದು. **ಮನಸಾ ಜಾನಾತಿ** ಎಂದು ಸಂಸ್ಕೃತದ

ವಿವರಣೆ. ಶಾಕುಂತಲ ನಾಟಕದಲ್ಲಿ ಬರುವ ಈ ವಾಕ್ಯವನ್ನು ನೆನಪಿಗೆ ತಂದುಕೊಳ್ಳಿ: **ಇಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವೀ ಕಿಮಿವಹಿ ಮಧುರಾಣಾಂ ಮಂಡನಂ ನಾಕೃತೀನಾಂ.** ಈ ಪದ್ಯವನ್ನು ಬಸವಪ್ಪ ಶಾಸ್ತ್ರಿಗಳು ಹೀಗೆ ಅನುವಾದ ಮಾಡಿದ್ದಾರೆ. ಕನ್ನಡದಲ್ಲಿ: **ವಲ್ಕಲದಿಂದಿವಳ್ ಪ್ರಾವೃತೆಯಾದೊಡಂ ಬಹು ಮನೋಜ್ಞೆ. ಮನೋಹರ ರೂಪುಗಳ್ಗಾವುದು ತಾನೆ ತಾಳಿದೊಡೆ ಭೂಷಣ ಮಾಗದೆ ಪೋಪುದುರ್ವಿಯೊಳ್.**

**ಮನ್ವಂತರ** ಹದಿನಾಲ್ಕು ಮನುಗಳಿದ್ದಾರೆ ಎಂದೂ ಒಬ್ಬೊಬ್ಬ ಮನು ರಾಜ್ಯಭಾರ ಮಾಡುವ ಕಾಲಕ್ಕೆ ಮನ್ವಂತರ ಎಂದು ಹೆಸರು ಎಂದೂ ನಮ್ಮ ಪುರಾಣಗಳು ಹೇಳುತ್ತವೆ. ಪ್ರತಿಯೊಬ್ಬ ಮನುವೂ ಬ್ರಹ್ಮನ ಬದುಕಿನ ಒಂದು ದಿನದಷ್ಟು ಕಾಲ ರಾಜ್ಯಭಾರ ಮಾಡುತ್ತಾವೆ. ನೋಡಿ: **ಬ್ರಹ್ಮವರ್ಷ.**

**ಮಯ** ಎಂಬುದು ಒಬ್ಬನ ಹೆಸರು. ಆತನು ಅಸುರರ ಶಿಲ್ಪಿ. ಇಂದ್ರಜಾಲ, ಜ್ಯೋತಿಶ್ಶಾಸ್ತ್ರ ಯುದ್ಧ ವಿದ್ಯೆಗಳಿಗೆ ಈತನೇ ಮೂಲಪುರುಷ.

**ಮರೀಚಿಕೆ–ಅಭಿಸಾರಿಕೆ** ಈ ಎರಡು ಶಬ್ದಗಳೂ ಅಂತ್ಯ ಪ್ರಾಸಕ್ಕೆ ಹೊಂದುತ್ತವೆ. ಆದರೆ ಅರ್ಥ ತುಂಬ ದೂರ. ಮರೀಚಿಕೆ ಎಂದರೆ ಬಿಸಿಲು ಕುದುರೆ. ಸೂರ್ಯನ ಕಿರಣಗಳಲ್ಲಿ ಕಾಣುವ, ನೀರಿದೆಯೆಂಬ ಭ್ರಮೆ. ಅಭಿಸಾರಿಕೆ ಎಂದರೆ ತನ್ನ ಪ್ರಿಯನನ್ನು ಕೂಡಲು ಸಂಕೇತದ ಸ್ಥಾನಕ್ಕೆ ಹೋಗುವ ಸ್ತ್ರೀ. **ಇರುಳೆನ್ನದೆ ಕಟ್ಟಲೆ ಕಡುವಿರಿದೆನ್ನದೆ ದುರ್ಗಮೆನ್ನದೆ ಓಪನೊಳೆತ್ತಂ ನೆರೆಯಲ್ಪರಿದೆಯ್ದುವ ಸುಂದರಿ ಅಭಿಸಾರಿಕೆ ಎನಿಪ್ಪ ಪೆಸರಂ ತಳೆಗುಂ.** ಹೀಗೆ ಶೃಂಗಾರ ರತ್ನಾಕರದಲ್ಲಿ ಕವಿ ಕಾಮನು ವರ್ಣಿಸಿದ್ದಾನೆ.

**ಮರೆ** ನೋಡಿ: ತೆರೆ. ಇದಕ್ಕೆ ಮೂಲ ಮಱೆ' ಎಂಬ ಶಬ್ದ.

**ಮರ್ಜಿ** ಮರ್ಜಿ ಎಂಬುದು ಅರಬ್ಬಿ ಶಬ್ದ. ಇದಕ್ಕೆ ದಯೆ, ಅಪೇಕ್ಷೆ, ಅನುಗ್ರಹ ಎಂಬ ಅರ್ಥಗಳಿವೆ. ಕನ್ನಡದಲ್ಲಿ **ರಾಜೇಂದ್ರನಾಮೆ** ಎಂಬ ಪುಸ್ತಕದಲ್ಲಿ ಇದರ ಮೊದಲ ಪ್ರಯೋಗ ಕಂಡುಬಂದಿದೆ. ಅಧಿಕಾರಿಗಳ ಮರ್ಜಿಗೆ ಕಾಯಬೇಕು ಎಂದರೆ ಅನುಗ್ರಹಕ್ಕಾಗಿ ಕಾಯಬೇಕು ಎಂದರ್ಥ. ಸಂದರ್ಭಾನುಸಾರ ಈ ಶಬ್ದಕ್ಕೆ ವ್ಯಾಪಕವಾಗಿ ಆಲೋಚನೆ, ಉದ್ದೇಶ ಮುಂತಾದ ಅರ್ಥಗಳೂ ಬರುತ್ತವೆ.

**ಮಲಗು–ಆದರಿಸಿ ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ** (ಕುವ್ಯಾಸ. ಕರ್ಣಪರ್ವ - ೧೬-೧೦) ಕನ್ನಡದಲ್ಲಿ ಮಲಂಗು, ಮಲಗು ಎಂಬ ಎರಡೂ ಪರ್ಯಾಯ ಶಬ್ದಗಳು. ಈ ಶಬ್ದಕ್ಕೆ ಎರಡು ಮುಖ್ಯವಾದ ಅರ್ಥಗಳಿವೆ. ೧. ಒರಗು, ನೆಮ್ಮು, ಆನು ೨. ಶಯನಿಸು, ಹಾಸಿಗೆಯ ಮೇಲೆ ಮೈ ಚಾಚು. ಮೇಲೆ ತಿಳಿಸಿರುವ ಕುಮಾರವ್ಯಾಸನ ಪದ್ಯದಲ್ಲಿ ಮಾನಿನಿಯ ಮಲಗಿ ಎಂದರೆ ತನ್ನ ಹೆಂಡತಿಯಾದ ದ್ರೌಪದಿಯನ್ನು ಒರಗಿಕೊಂಡು ಎಂದು ಅರ್ಥ. ಇದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದರೆ ೧೬ ನೇ ಸಂಧಿಯ ೬ನೆಯ ಪದ್ಯದಲ್ಲಿರುವ ಭಾಗವನ್ನು ಓದಬೇಕು. **ದ್ರೌಪದಿಯ ತುದಿವೆರಳುಗುರುವೆರಸಿದ ಸಿರಿಮುಡಿಯ ಬಲು ದುಗುಡ ಭರದಲಿ ಕುಸಿದ ಭೂಪನ ಕಂಡನಾ ಪಾರ್ಥ** ಎಂಬ ಭಾಗವನ್ನು ಜೊತೆಯಾಗಿ ಓದಿ ತಿಳಿದುಕೊಳ್ಳಬೇಕು. ಮಲಂಗು, ಮಲಗು ಎಂಬ ಪರ್ಯಾಯ ರೂಪಗಳಿಗೆ ನಾಮಪದದ ಅರ್ಥವೂ ಇದೆ. ಅವುಗಳಿಗೆ ಒರಗು ದಿಂಬು, ಲೋಡು ಎಂಬ ಅರ್ಥಗಳೂ ಇವೆ ಎಂಬುದು ನೆನಪಿಗೆ ಬಂದರೆ ಇನ್ನೂ ಸೂಕ್ತವಾಗಿ ಕಾವ್ಯ ಅರ್ಥವಾಗುತ್ತದೆ. ಮರಾಠಿಯಲ್ಲಿ ಲೋಡ = BOLSTER = ಒರಗುದಿಂಬು.

**ಮಲೇರು, ಮಾಲೇರು** ದಕ್ಷಿಣ ಕನ್ನಡ ಪ್ರದೇಶದ ದೇವಾಲಯಗಳಲ್ಲಿ ದೇವರ ಪೂಜೆಗೆ

ಹೂವಿನ ಮಾಲೆಗಳನ್ನು ಸಿದ್ಧಪಡಿಸುತ್ತಿದ್ದ ಒಂದು ಗುಂಪಿನ ಜನರಿಗೆ 'ಮಾಲೆಯರು' ಎಂಬ ಹೆಸರು ಇದ್ದಿತು. ರಾಮಾಶ್ವಮೇಧವನ್ನು ಬರೆದ ಮುದ್ದಣ ಕವಿ ಈ ಗುಂಪಿಗೆ ಸೇರಿದದವನು. ಮಾಲೇರು, ಮಲೇರು ಆ ಶಬ್ದದ ಪರ್ಯಾಯ ರೂಪಗಳು. ಬ್ರಾಹ್ಮಣ ಗಂಡಸು ಶೂದ್ರ ಹೆಂಗಸು - ಇವರಿಗೆ ಮಕ್ಕಳಾದರೆ ಅವರಿಗೆ ಮಾಲೇರು ಎಂದು ಕರೆಯುತ್ತಾರೆ. ಇದು ಬೇರೆಯ ಶಬ್ದವಿರಬೇಕು. **ಮಲೇರು** ಶಿವಮೊಗ್ಗದ ಸಾಗರ ತಾಲ್ಲೂಕಿನ ಸುತ್ತಮುತ್ತ ವಾಸಿಸುವ ಹವ್ಯಕರಲ್ಲಿ ಮಾಲೇರು ಎಂಬ ಶಬ್ದಕ್ಕೆ ಬೇರೆ ಅರ್ಥವಿದೆಯಂತೆ. ಹವ್ಯಕರಲ್ಲಿ ವಿಧವೆಯಾದವಳು ಹೆತ್ತ ಮಕ್ಕಳಿಗೆ ಮಾಲೇರು ಎಂದು ಕರೆಯುತ್ತಾರಂತೆ. ಇಂಥವರಿಗೆ ಅವರಲ್ಲಿ ಹೆಣ್ಣು ಕೊಟ್ಟು ತಂದು ಮಾಡುವ ಸಂಪ್ರದಾಯ ಇಲ್ಲವೆಂದು ತಿಳಿದು ಬಂದಿದೆ.

**ಮಲ್ಲಿಕಾರ್ಜುನ, ನಾಗಾರ್ಜುನ** ಶ್ರೀ ಶೈಲದ ಆರಾಧ್ಯ ದೈವವು ಮಲ್ಲಿಕಾರ್ಜುನ. ಒಬ್ಬ ಬೌದ್ಧ ಮಹಾವಿದ್ವಾಂಸ ನಾಗಾರ್ಜುನ. ಈ ಎರಡು ಹೆಸರುಗಳ ಬಗ್ಗೆ ಅನೇಕ ಚರ್ಚೆಗಳು ನಡೆದಿವೆ. ಮಲ್ಲಿಕ ಎಂಬ ಶಬ್ದಕ್ಕೂ ಅರ್ಜುನ ಎಂಬ ಶಬ್ದಕ್ಕೂ ಅನೇಕ ಬೇರೆ ಬೇರೆ ಅರ್ಥಗಳಿವೆ. ಇಲ್ಲಿಯವರೆಗೆ ಆಗಿರುವ ಎಲ್ಲ ಊಹೆಗಳೂ ಊಹೆಗಳಾಗಿಯೇ ಇವೆ. ನಿರ್ಧಾರವಾಗಿ ಹೇಳುವುದು ಕಷ್ಟ.

**ಮಶಕಾರಿ** ಇದು **ಮಶಕಹರೀ** ಎಂಬ ಸಂಸ್ಕೃತ ಶಬ್ದದ ಅಪಭ್ರಂಶ. ಅರ್ಥ ಸೊಳ್ಳೆಪರದೆ.

**ಮಷ್ಕಿರಿ** ಹಿಂದೀ ಭಾಷೆಯಲ್ಲಿ ಮಸ್ಖರೀ ಎಂದರೆ ವಿನೋದ, ಹಾಸ್ಯ. ಅದೇ ಕನ್ನಡಕ್ಕೆ ಬಂದು ಮಷ್ಕಿರಿ ಆಗಿದೆ. ಅಧಿಕವಾದ ವಿನೋದ ಎಂಬುದೇ ಸರಿಯಾದ ಅರ್ಥದ ಉಪಯೋಗ.

**ಮಸುಳಿಸು** ಕನ್ನಡ ಶಬ್ದ. ಮಂಕಾಗಿಸು, ಕಾಂತಿಗುಂದಿಸು, ಹೊಳಪನ್ನು ಕಡಿಮೆ ಮಾಡು ಎಂದರ್ಥ.

**ಮಸೂಟ** ವಧೂವರರನ್ನು ಕರೆದುಕೊಂಡು ದೇವರಿಗೆ ಹೋಗಿ ಬರುವಾಗ ಹೆಣ್ಣಿನ ಕಡೆಯ ಬೀಗರು ಸಿಹಿ ತಿಂಡಿ ತಿನಿಸು ಮುಂತಾದ ಆಹಾರ ವಸ್ತುಗಳನ್ನು ಬುಟ್ಟಿಗಳಲ್ಲಿಟ್ಟು ಮುಸುಕು ಹಾಕಿ ತರುತ್ತಾರೆ. ಕೆಲವು ಕಡೆಗಳಲ್ಲಿ ಮಣ್ಣಿನ ಹೊಸ ಮಡಿಕೆ-ಕುಡಿಕೆಗಳಲ್ಲಿ ಹುಗ್ಗಿ ಮತ್ತು ಬೆಲ್ಲವನ್ನು ಮುಚ್ಚಿಟ್ಟು ಬೇರೊಂದು ಮನೆಯಲ್ಲಿ ಇರಿಸಿರುತ್ತಾರೆ. ಮದುಮಗನಿಗೆ ಇದರಿಂದಲೇ ಊಟ ಮಾಡಿಸುವುದು ಸಂಪ್ರದಾಯ. ಮತ್ತೆ ಕೆಲವು ಕಡೆ ವರ, ಅವನ ತಂದೆತಾಯಿಗಳಿಗೆ ಊಟವನ್ನು ಬೀಗರ ಮನೆಯಿಂದ ತರುತ್ತಾರೆ. ಮೊದಲ ಊಟವನ್ನು ಬೀಗರ ಮನೆಯಲ್ಲಿ ಮಾಡುವ ಹಾಗಿಲ್ಲ. ಆದುದರಿಂದ ಇದು ಮುಸುಕಿನಲ್ಲಿ ಬರುವ ಊಟ. ಮುಸುಕಿನ ಊಟ ಎಂಬುದು ಕ್ರಮವಾಗಿ ಮುಸುಕೂಟ, ಮುಸೂಟ, ಮಸೂಟ ಎಂದು ಬದಲಾವಣೆಯಾಗಿದೆ. ಇದು ಮೊದಲು ಮಾಡುವ ಊಟ. **ಕಳೂಟ** ಎಂಬುದು ಕಳುಹು ಊಟ. ಬೀಗರನ್ನು ಹಿಂದಕ್ಕೆ ಕಳುಹಿಸುವಾಗ ನೀಡುವ ಔತಣ. ಕಳುಹು ಊಟವೇ ಕಳೂಟ ಆಗಿದೆ. ಹೀಗೆ ಮಸೂಟಕ್ಕೂ ಕಳೂಟಕ್ಕೂ ಸಂಬಂಧವಿದೆ. ಇದು ಮದುವೆ ಮನೆಯಲ್ಲಿ ಕೊನೆಯ ಊಟ. ಇವೆರಡೂ ಊಟಗಳೆಂಬುದರಲ್ಲಿ ಸಂದೇಹವಿಲ್ಲ.

**ಮಸ್ತಕ** ಎಂದರೆ ತಲೆ ಎಂದೇ ಅರ್ಥ. ಮಸ್ತಕ ಜ್ವರ ಎಂದರೆ ತಲೆನೋವು. ಮಸ್ತಕ ಪಿಂಡಕ ಎಂದರೆ ಆನೆಯ ತಲೆ ಮೇಲಿರುವ ಕುಂಭಗಳು. ಹಣೆ ಎಂಬ ಶಬ್ದದ ಅರ್ಥವೂ ದೂರವಾಗಿ ಬರಬಹುದು. ಮಹಾಮಸ್ತಕಾಭಿಷೇಕ ಎಂಬ ಸಮಾಸದಲ್ಲಿ ಮಹಾ ಎನ್ನುವುದು ತಲೆಗೆ ಅನ್ವಯಿಸುವುದಿಲ್ಲ. ಅಭಿಷೇಕಕ್ಕೆ ಅನ್ವಯಿಸುತ್ತದೆ. ನಿಜವಾಗಿ ಅದು ಬಾಹುಬಲಿಯ ಶಿರಸ್ಸಿನ ಮೇಲೆ ಮಾಡುವ ಮಹಾ ಅಭಿಷೇಕ.

**ಮಹಾಕಲ್ಪ** ಇದು ಅತಿದೀರ್ಘವಾದ ಒಂದು ಕಾಲಚಕ್ರ. ಬ್ರಹ್ಮನ ಆಯುಸ್ಸಿನ ಒಂದು ನೂರು

ವರ್ಷಗಳು. ನಮ್ಮ ನಾಲ್ಕು ಯುಗಗಳು ಸಾವಿರ ಸಲ ಬಂದು ಹೋದರೆ ಅದು ಬ್ರಹ್ಮನಿಗೆ ಒಂದು ದಿನ. ಹೀಗೆ ಅವನು ನೂರುವರ್ಷ ಕಳೆದರೆ ಅದು ಮಹಾಕಲ್ಪ.

**ಮಹಾಛಂದಸ್ಸು** ಕುವೆಂಪು ಅವರು ರಚಿಸಿದ ಮಹಾಕಾವ್ಯದ ಛಂದೋರೂಪವನ್ನು ಅವರು ಮಹಾಛಂದಸ್ಸು ಎಂದು ಕರೆದಿದ್ದಾರೆ. ಹಳಗನ್ನಡದಲ್ಲಿ ಅನೇಕ ಬಗೆಯ ರಗಳೆಗಳನ್ನು ಕವಿಗಳು ಉಪಯೋಗಿಸಿದ್ದಾರೆ. ಅವುಗಳಲ್ಲಿ ಲಲಿತರಗಳೆ ಎಂಬ ಒಂದು ಬಗೆಯಿದೆ. ಹರಿಹರನ ಸೊಗಸಾದ ಗ್ರಂಥ ನಂಬಿಯಣ್ಣನ ರಗಳೆಯ ಕೆಲವು ಭಾಗ ಲಲಿತ ರಗಳೆಯಲ್ಲಿದೆ. ಈ ಕಾವ್ಯದಲ್ಲಿ ಆದಿಪ್ರಾಸ ಮತ್ತು ಅಂತ್ಯಪ್ರಾಸ ಎಂಬ ಎರಡೂ ಆವಶ್ಯಕವಾಗಿ ಇದ್ದೇ ತೀರಬೇಕು. ಅಲ್ಲದೆ ಅದು ದ್ವಿಪಾದದ ಘಟಕ ಉಳ್ಳದ್ದು.

ಹೊಸಗನ್ನಡದಲ್ಲಿ ಛಂದಸ್ಸಿನ ಬಿಗಿಯನ್ನು ಕಡಿಮೆ ಮಾಡಿ ಇನ್ನೂ ಸರಳವಾಗಿ ಹೊಸಕವನಗಳನ್ನು ರಚಿಸಲು ಅನುಕೂಲ ಮಾಡಿಕೊಡುವ ಉದ್ದೇಶದಿಂದ ಸರಳ ರಗಳೆಯೆಂಬ ಹೆಸರಿನಿಂದ ಒಂದು ಛಂದೋರೂಪ ಪ್ರಚಾರಕ್ಕೆ ಬಂತು. ಇದು ಮುಖ್ಯವಾಗಿ ಪ್ರತಿಸಾಲಿನಲ್ಲಿ ನಾಲ್ಕು ಪಂಚಮಾತ್ರಾ ಗಣಗಳು ಇರುವ ಸ್ವರೂಪದ್ದು. ಇದು ಬಹು ಜನಪ್ರಿಯವಾದ ಛಂದೋರೂಪವಾಯಿತು. ಇದಲ್ಲದೆ ಇತರ ಅನೇಕ ಛಂದೋರೂಪಗಳೂ ಹುಲುಸಾಗಿ ಬೆಳೆದು ಬಂದವು. ಈ ಸರಳ ರಗಳೆಯೇ ಮುಂದೆ ಮಹಾಛಂದಸ್ಸಾಗಿ ರೂಪುಗೊಂಡಿದೆ. ಸರಳ ರಗಳೆಯ ನಿಯಮದಲ್ಲಿ ಒಂದು ಕಟ್ಟುಪಾಡಿರುವುದರಿಂದ ಅದರಲ್ಲಿ ಒಂದು ಏಕತಾನತೆ ಬರುವ ಅನನುಕೂಲವು ಹೊಂದಿಕೊಂಡುಬಿಟ್ಟಿದೆ. ಅದನ್ನು ಆ ನಿಯಮಗಳಿಂದ ಬಿಡುಗಡೆ ಮಾಡಿ ಅಧಿಕವಾದ ಸ್ವಚ್ಛಂದತೆಯನ್ನು ಉಪಯೋಗಿಸಿದರೂ ಬಹು ವಿಧವಾದ ಗಣಗಳ ಪರಿವೃತ್ತಿಯನ್ನೂ, ಒಂದು ಸಾಲಿನಲ್ಲಿ ಬರುವ ಅಕ್ಷರಗಳ ಪರಿಮಿತಿಗೆ ವ್ಯತ್ಯಾಸಗಳನ್ನೂ, ಕಥಾನಕದ ಬೆಳವಣಿಗೆಗೆ ಬೇಕಾದ ಕಡೆ ಸಾಲುಗಳನ್ನೂ ಪೂರ್ಣಗೊಳಿಸದೆ, ಬೇಕಾದ ಕಡೆ ನಿಲ್ಲಿಸುವ ಸ್ವಾತಂತ್ರ್ಯವನ್ನೂ ಕವಿಗೆ ನೀಡಿರುವುದು ಈ ಮಹಾ ಛಂದಸ್ಸಿನ ಮುಖ್ಯ ಅಂಶ. ಇದರಿಂದ ಮಹಾಕಾವ್ಯದ ವಾಚನಕ್ಕೆ ಏಕತಾನತೆ ತಪ್ಪಿ ಸೊಗಸಾದ ಅನುಕೂಲ ದೊರಕಿದಂತಾಗಿದೆ. ಗಮಕಕ್ಕೂ ಇದು ಹೊಂದಿಕೊಳ್ಳುತ್ತದೆ. ಇದೇ ಮಹಾಛಂದಸ್ಸಿನ ಪ್ರಯೋಗದ ಪ್ರಯೋಜನ.

**ಮಹಾವಿಷ್ಣು ನಯನವೇರಿಸಿದ ಎಂಬ ಮಾತಿನ ಅರ್ಥವೇನು?** ನಮ್ಮ ಪುರಾಣಗಳು ಅನೇಕವಾಗಿವೆ. ಅವುಗಳಲ್ಲಿ ಬರುವ ಕಥೆಗಳೂ ಬಹು ವಿಧವಾಗಿ ವ್ಯತ್ಯಾಸಗಳನ್ನು ತಿಳಿಸುತ್ತವೆ. ಶಿವಪರವಾದ ಪುರಾಣಗಳಲ್ಲಿ ವಿಷ್ಣುವನ್ನು ಶಿವನಿಗೆ ಭಕ್ತನನ್ನಾಗಿ ಮಾಡುತ್ತಾರೆ. ವಿಷ್ಣು ಪುರಾಣದಲ್ಲಿ ಶಿವನು ಆ ಸ್ಥಾನವನ್ನು ಪಡೆಯುತ್ತಾನೆ. ಶಿವಪುರಾಣದಲ್ಲಿ ಲಿಂಗ ಪುರಾಣದಲ್ಲಿ ಶಿವನು ವಿಷ್ಣುವಿಗೆ ವರವನ್ನು ನೀಡಿದ ಕಥೆಗಳು ಬರುತ್ತವೆ. ಅಂಥ ಕಥೆಗಳಲ್ಲಿ ವಿಷ್ಣುವು ತನ್ನ ಕಣ್ಣುಗಳನ್ನು ಕಿತ್ತು ಶಿವನ ಪಾದಗಳಿಗೆ ಅರ್ಪಿಸಿದ ಕಥೆಗಳು ಬರುತ್ತವೆ. ಮೇಲಿನ ಮಾತು ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಬರುತ್ತದೆ. ಶಿವಭಕ್ತನಾದ ರಾಘವಾಂಕನು ಈ ಕಥೆಯನ್ನು ಈ ಸಾಲಿನಲ್ಲಿ ಸೂಚಿಸಿದ್ದಾನೆ. ಆ ವಾಕ್ಯ ಪೂರ್ತಿಯಾಗಿ ಹೀಗಿದೆ: **ಮಹಾವಿಷ್ಣು ನಯನವೇರಿಸಿದ ಮೆಲ್ಲಡಿಯ ಕಾಶೀರಮಣ ವಿಶ್ವನಾಥಂ!** ನೋಡಿ: ಸುದರ್ಶನ ಚಕ್ರ.

**ಮಹಿಳಾ ಲೇಖಕಿ** ಆ ಶಬ್ದ ತಪ್ಪಾದುದು. ಲೇಖಕಿ ಎಂಬುದೇ ಸಾಕು. ಸಂಸ್ಕೃತದಲ್ಲಿ ಲೇಖಿಕಾ ಎಂದಿರುವ ಶಬ್ದ ಕನ್ನಡದಲ್ಲಿ ಲೇಖಿಕೆ ಎಂದೇ ಆಗಬೇಕು. ಆದರೆ ಲೇಖಕ ಶಬ್ದಕ್ಕೆ ಕನ್ನಡದ ಸ್ತ್ರೀ ಪ್ರತ್ಯಯವಾದ 'ಇ' ಸೇರಿಸಿ ಲೇಖಕಿ ಎಂದು ಮಾಡಿಕೊಳ್ಳಬಹುದು. ಮಹಿಳಾ ಲೇಖಕಿ ಯಾಕೆ ತಪ್ಪು ಎಂದರೆ ಪುರುಷ ಲೇಖಕಿ ಇಲ್ಲ - ಅದರಿಂದ.

**ಮಳೆಗಾಲ** ಎಂಬುದು ಸಂಧಿಯೂ ಆಗಬಹುದು. ಸಮಾಸವೂ ಆಗಬಹುದು. ಮಳೆ + ಕಾಲ = ಮಳೆಗಾಲ. ಇದು ಗಕಾರಾದೇಶ ಸಂಧಿ. ಮಳೆಯ + ಕಾಲ. ತತ್ಪುರುಷ ಸಮಾಸ.

**ಮಳ್ಳಿ** ಇದು 'ಮರುಳಿ' ಎಂಬ ಶಬ್ದದ ಗ್ರಾಮ್ಯ ರೂಪ. ಈ ಶಬ್ದಕ್ಕೆ ಎರಡು ಮುಖ್ಯವಾದ ಅರ್ಥಗಳಿವೆ. ೧. ಅವಿವೇಕಿ, ಬುದ್ಧಿಗೇಡಿ ೨. ಜಾಣೆಯಾಗಿದ್ದೂ ದಡ್ಡಳಂತೆ ನಟನೆ ಮಾಡುವವಳು. ಸಾಮಾನ್ಯ ಜನರು ಎರಡನೆಯ ಅರ್ಥದಲ್ಲಿಯೇ ಹೆಚ್ಚಾಗಿ ಉಪಯೋಗಿಸುತ್ತಾರೆ. ಕೆಲವು ವೇಳೆ ೩. ಮರುಳಾದವಳು, ಮೋಹಗೊಂಡವಳು ಎಂಬ ಅರ್ಥದಲ್ಲಿಯೂ ಕವಿಗಳು ಉಪಯೋಗಿಸಿದ್ದಾರೆ. ನೋಡಿ: ಪ್ರವೇಶ ಸಿದ್ಧತೆ.

**ಮಾಂಡವಿ** ಭರತನ ಹೆಂಡತಿಯ ಹೆಸರು ಮಾಂಡವಿ. ಈಕೆ ಜನಕನ ತಮ್ಮನಾದ ಕುಶಧ್ವಜನ ಮಗಳು. ಈಗ ಮಾಂಡವಿ ಎಂಬುದು ಒಂದು ನದಿಯ ಹೆಸರೂ ಆಗಿದೆ.

**ಮಾಜಿ, ನಿವೃತ್ತ** ಯಾವ ಹುದ್ದೆಯೂ ಖಾಯಂ ಆಗಿದ್ದರೂ ಅದು ಹುದ್ದೆಯ ಹೆಸರಿಗೆ ಅನ್ವಯಿಸುತ್ತದೆ. ತಹಸೀಲ್ದಾರ್ ಗಿರಿ, ಅಮಲ್ದಾರ್ ಗಿರಿ, ಉಪಾಧ್ಯಾಯ ವೃತ್ತಿ ಇತ್ಯಾದಿ. ಆದರೆ ಆ ಹುದ್ದೆಯಲ್ಲಿ ಕೆಲಸ ಮಾಡುವವರೆಲ್ಲರೂ ತಾತ್ಕಾಲಿಕರಾದವರೇ ಅಲ್ಲವೇ? ಅವರೇನೂ ಖಾಯಂ ತಹಸೀಲ್ದಾರರಲ್ಲ. ಯಾರನ್ನೂ ಸಾಯುವ ತನಕ ಹುದ್ದೆಗೆ ನೇಮಿಸುವುದಿಲ್ಲ ತಾನೇ?

ಮಾಜಿ ಎನ್ನುವ ಶಬ್ದ ಅರಬ್ಬೀ ಭಾಷೆಯಿಂದ ಬಂದದ್ದು. ಅದಕ್ಕೆ ಗತಕಾಲದ, ಹಿಂದಿನ, ಕಳೆದ, ಹೋದ ಎಂಬರ್ಥಗಳಿವೆ. ನಿವೃತ್ತಿ ಎಂಬ ಶಬ್ದಕ್ಕೆ ಹಿಂದಿರುಗುವುದು, ಕೊನೆಯಾಗುವುದು, ವಿರಾಮ ಹೊಂದುವುದು, ಇತ್ಯಾದಿ ಅರ್ಥಗಳಿವೆ. ಮಾಜಿ ಅಧ್ಯಕ್ಷ ಎಂದರೆ ಹಿಂದೆ ಅಧ್ಯಕ್ಷನಾಗಿದ್ದವನು ಎಂದರ್ಥ. ಮಾಜಿ ಉಪಾಧ್ಯಾಯ, ನಿವೃತ್ತ ಉಪಾಧ್ಯಾಯ ಎಂದರೆ ಉಪಾಧ್ಯಾಯ ವೃತ್ತಿಯಿಂದ ವಿಶ್ರಾಂತಿ ಪಡೆದಿರುವವನು ಎಂದರ್ಥ. ಈ ಶಬ್ದಗಳನ್ನು ಸರಿಯಾಗಿ ಉಪಯೋಗಿಸಲಾಗುತ್ತಿದೆ.

**ಮಾಡಿದ್ದೀರಷ್ಟೆ! ಕೇಳಿದ್ದೀರಷ್ಟೆ!** ಕೇಳಿದ್ದೀರಷ್ಟೆ ಎಂಬುದನ್ನು ಉಚ್ಚಾರಣೆ ಮಾಡುವಾಗ ಉಪಯೋಗಿಸುವ ಕಾಕುವಿನಿಂದ, ಅಂದರೆ ಧ್ವನಿಯ ರೀತಿಯಿಂದ ಅದು ಎರಡು ಬಗೆಯ ಬೇರೆ ಬೇರೆ ಅರ್ಥವನ್ನು ನೀಡುತ್ತದೆ. ಒಂದು ಹೇಳಿಕೆ. ಇನ್ನೊಂದು ಪ್ರಶ್ನೆ. ಈ ಎರಡರಲ್ಲಿಯೂ ಅವಧಾರಣೆಯ ಉದ್ದೇಶವಿದೆ. ಅಲ್ಲವೆ, ತಾನೇ ಎಂಬರ್ಥವಿದೆ. ಇದಕ್ಕೆ ಇಂಗ್ಲಿಷ್‌ನಲ್ಲಿ to beg the question ಎಂಬ ಮಾತು ಅನ್ವಯಿಸುತ್ತದೆ. ಇದೇ ಲ್ಯಾಟಿನ್ ಭಾಷೆಯಲ್ಲಿ Petitio principii. ಇದು ಭಾಷೆಯ ಪ್ರಯೋಗದಲ್ಲಿ ಒಂದು ಬಗೆ.

**ಮಾತು** ಇದು ಕನ್ನಡದ ಶಬ್ದ. ಒಂದು ಭಾಷೆಯ ಅರ್ಥಪೂರ್ಣವಾದ ಧ್ವನಿಗಳನ್ನು ಉತ್ಪತ್ತಿ ಮಾಡುವುದೇ ಮಾತು. ಇದು ಮಾನವನ ವಿಶಿಷ್ಟ ಸಾಮರ್ಥ್ಯಗಳಲ್ಲಿ ಮುಖ್ಯವಾದುದು. ಈ ಧ್ವನಿಗಳನ್ನು ಬಾಯಿಯಲ್ಲಿರುವ ನಾಲಿಗೆಯ ಸಹಾಯದಿಂದ ಉಂಟು ಮಾಡುವುದು ಅವನಿಗೆ ಇರುವ ಸಾಮರ್ಥ್ಯ. ಸನ್ನೆಗಳಿಂದಲೂ ಸೂಚಿಸಬಹುದು. ಅದು ಮಾತಾಗುವುದಿಲ್ಲ.

**ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು** – ಈ ಗಾದೆಯ ಬಗ್ಗೆ ವಿವರ. ಇದು ಮಾನವ ಸ್ವಭಾವದ ಅತಿ ಮಾತುಗಾರಿಕೆ ಅಥವಾ ಪೊಳ್ಳು ಹರಟೆಯ ಪರಿಣಾಮವನ್ನು ತಿಳಿಸುವ ಗಾದೆ. ಮಾತು ಹೆಚ್ಚಾದರೆ ಮೊದಲನೆಯದಾಗಿ ಕಾಲಹರಣ. ಎರಡನೆಯದಾಗಿ ಇತರರ ಗುಣಾವಗುಣಗಳ ಬಗ್ಗೆ ಟೀಕೆ. ಮೂರನೆಯದಾಗಿ ಆ ಟೀಕೆಗಳನ್ನು ಕೇಳಿ ಬೆಳೆಯುವ ದ್ವೇಷ ಇತ್ಯಾದಿಗಳಿಂದ ಮನೆಯಲ್ಲಿದ್ದ ಸುಖ ನಾಶವಾಗಿ ಹೋಗುತ್ತದೆ. ಹೇಗೆಂದರೆ ಅಡಿಗೆಯ ಮನೆಯಲ್ಲಿ ಒಲೆಗೆ ಬೆಂಕಿಯನ್ನು ಹತ್ತಿಸಿ ಎಸರಿಗೆ ಇಡುವಾಗ

ಪಾತ್ರೆಯಲ್ಲಿ ತೂತಿದ್ದರೆ ಒಲೆಯ ಬೆಂಕಿಯೇ ಆರಿ ಹೋಗುವ ಹಾಗೆ ಎಂದು ಅರ್ಥ. ಈ ಗಾದೆಯಲ್ಲಿ ಅವಹೇಳನಕರವಾದುದು ಏನೂ ಇಲ್ಲ.

**ಮಾತೃಕೆ** ಎಂಬುದು ಮಾತೃಕಾ ಎಂಬ ಸಂಸ್ಕೃತ ಶಬ್ದದಿಂದ ಬಂದಿದೆ. ಅದಕ್ಕೆ ೧. ತಾಯಿ ೨. ದಾದಿ ೩. ಬ್ರಾಹ್ಮೀ ಮೊದಲಾದ ಏಳು ಮಾತೃಗಳು ೪. ವರ್ಣಮಾಲೆ ಮುಂತಾದ ಅರ್ಥಗಳಿವೆ. ಗ್ರಂಥ ಸಂಪಾದನ ಶಾಸ್ತ್ರದಲ್ಲಿ ಮೂಲ ಹಸ್ತಪ್ರತಿಗೆ 'ಮಾತೃಕೆ' ಎಂಬ ಹೆಸರನ್ನು ಅನ್ವಯಿಸುತ್ತಾರೆ. ಒಂದು ಕಾವ್ಯದ ಅನೇಕ ಹಸ್ತಪ್ರತಿಗಳು ಸಿಕ್ಕಿದಾಗ ಅವುಗಳಿಗೆಲ್ಲ ಮೂಲವಾದವನ್ನು ಮಾತೃಕೆ ಎಂದು ಕರೆಯುತ್ತಾರೆ. ಕವಿಯ ಹಸ್ತಪ್ರತಿಯೇ ಸಿಕ್ಕಿದರೆ ಅದೇ ಮೂಲ ಮಾತೃಕೆ. ಮುದ್ರಣಕ್ಕೆ ಸಹಾಯವಾಗುವಂತೆ ಅಕ್ಷರಗಳ ಮೊಳೆಗಳನ್ನು ಸಿದ್ಧ ಮಾಡಲು ಮೂಲ ಅಚ್ಚನ್ನು ತಯಾರಿಸುತ್ತಾರೆ. ಅದೇ Matrix. ಇದನ್ನು ಈಗ ಮಾತೃಕೆ ಎಂದು ಕರೆಯುತ್ತಾರೆ. ಇದರ ಉಪಯೋಗ ಇನ್ನೂ ವಿಸ್ತಾರವಾಗಬಹುದು.

**ಮಾತೃಚ್ಛಾಯ** ಮಾತೃ +ಛಾಯಾ ಎಂಬ ಎರಡು ಸಂಸ್ಕೃತ ಶಬ್ದಗಳು ಸೇರಿ ಸಂಧಿಯಾದಾಗ ಮಾತೃಚ್ಛಾಯಾ ಎಂಬ ರೂಪವನ್ನು ಪಡೆಯುತ್ತವೆ. ಇದು ಕನ್ನಡವಾದರೆ ಮಾತೃಚ್ಛಾಯೆ ತಾಯಿಯ ಆಶ್ರಯ ಎಂದಾಗುತ್ತದೆ.

**ಮಾದಳ** ಇದು ಒಂದು ಬಗೆಯ ಹಣ್ಣು. ಇದು ಮಾವು ಅಲ್ಲ. ಅದು ಅಡಿಗೆಗೆ ಉಪಯೋಗಿಸುವ ಎಳೆಯ ಹಲಸಿನ ಕಾಯಿಯ ಆಕಾರದಲ್ಲಿರುತ್ತದೆ. ಮೈಮೇಲೆ ಮುಳ್ಳಿರುವುದಿಲ್ಲ. ಒಳಗೆ ಚಕ್ಕೋತದ ರೀತಿಯ ಕುಸುಮವು ಚಿಕ್ಕದಾಗಿರುತ್ತದೆ. ಆದರೆ ಸಿಪ್ಪೆಗೂ ಕುಸುಮಕ್ಕೂ ನಡುವೆ ಇರುವ ಭಾಗವೇ ತಿನ್ನಲು ತುಂಬ ರುಚಿಕರವಾಗಿರುತ್ತದೆ. ಹಣ್ಣಿಗೆ ಒಳ್ಳೆಯ ಸುವಾಸನೆ ಕೂಡ ಇರುತ್ತದೆ. ಮಾತುಲ(ಲು)ಂಗ ಸಂಸ್ಕೃತದ ಹೆಸರು.

**ಮಾನವ, ಮನುಷ್ಯ, ನರ ಎಂಬ ಶಬ್ದಗಳ ವ್ಯತ್ಯಾಸವೇನು?** ಅಮರದಲ್ಲಿರುವ ಒಂದು ಪದ್ಯಭಾಗ ಹೀಗಿದೆ: ಮನುಷ್ಯಾ, ಮಾನುಷಾ, ಮರ್ತ್ಯಾ, ಮನುಜಾ, ಮಾನವಾ, ನರಾಃ. ಈ ಎಲ್ಲ ಶಬ್ದಗಳಿಗೂ ಒಂದೇ ಅರ್ಥ ಮಾನವ ಎಂದು. ಮನುವಿನ ಮಕ್ಕಳು, ಮನುಷ್ಯರು, ಮಾನುಷರು, ಮನುಜರು, ಮಾನವರು. ಮನು ಮಹರ್ಷಿಯು ಮನುಧರ್ಮ ಶಾಸ್ತ್ರವನ್ನು ರಚಿಸಿದವನು. ಅವನ ವಂಶದಲ್ಲಿ ಸಂಜಾತರಾದವರಿಗೆಲ್ಲ ಈ ಹೆಸರು ಹೊಂದಿಕೊಳ್ಳುತ್ತದೆ. ಭೂಲೋಕದಲ್ಲಿ ಹುಟ್ಟುವುದರಿಂದ ಸಾವು = ಮೃತಿ ಉಳ್ಳವರು ಮರ್ತ್ಯರು. ನರ ಎಂದರೆ ಎಲ್ಲವನ್ನೂ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ ಎಂದು ಅರ್ಥ. ಟೀಕಾಕಾರರು ಹೇಳುತ್ತಾರೆ — **ನೃಣಂತಿ, ನಯಂತಿ ಸರ್ವಂ ಸ್ವವಶಂ ಇತಿ ನರಾಃ.** ಹೀಗೆ ಅರ್ಥ ವಿವರಗಳಿವೆ. ಒಟ್ಟಿನಲ್ಲಿ ಎಲ್ಲರೂ ಭೂಮಿಯಲ್ಲಿರುವ ಜನರೇ.

**ಮಾನ್ಯರೆ, ಮಾನ್ಯರೇ – ಇವುಗಳಲ್ಲಿ ಯಾವುದು ಸರಿ?** ಕನ್ನಡದಲ್ಲಿ ಸಂಬೋಧನಾ ವಿಭಕ್ತಿಯ ಪ್ರತ್ಯಯವಾಗಿ ಆ, ಈ ಮತ್ತು ಏ ಎಂಬ ಮೂರು ಪ್ರತ್ಯಯಗಳನ್ನು ಉಪಯೋಗಿಸುತ್ತಾರೆ. ರಾಮಾ, ಅರಗಿಣೀ, ಅರಗಿಣಿಯೇ ಎಂಬುವು ದೃಷ್ಟಾಂತಗಳು. ಕಾವ್ಯಗಳಲ್ಲಿಯೂ ಈ ಬಗೆಯ ಪ್ರಯೋಗಗಳು ಸಿಕ್ಕುತ್ತವೆ. **ಹಾ ರಾಮಾ ಎಂದು ಸೀತೆ ಬಾಯಟೆದಲ್ತಳ್** (ಶಬ್ದಮಣಿದರ್ಪಣ - ೨೦ ಸೂತ್ರ). **ತಳಿರೇ, ತಾವರೆಯೇ, ಮದಾಳಿಕುಲಮೇ, ಕನ್ನೈದಿಲೇ ಮತ್ತಕೋಕಿಲಮೇ** (ಪಂಪ ರಾಮಾಯಣ ೯-೧೧೮ ಪದ್ಯ). ಹೀಗೆಯೇ ಆಡುಮಾತಿನಲ್ಲಿ, ಭಿಕ್ಷ ನೀಡಿ ತಾಯೀ; ಪುಟ್ಟೀ ಊಟಕ್ಕೆ ಬಾ. ಮರೀ ಆಟಕ್ಕೆ ಹೋಗು; ಎಂಬ ಕಡೆಗಳಲ್ಲಿ ಈ ಕಾರದ ಪ್ರಯೋಗವಿದೆ. ಹ್ರಸ್ವದ ಪ್ರಯೋಗವಿಲ್ಲ. ಆದುದರಿಂದ ಮಾನ್ಯರೇ ಎಂಬುದೇ ಸರಿ. ಮಾನ್ಯರೇ ಎಂಬುದು ಬಹುವಚನದಲ್ಲಿ ಸ್ತ್ರೀಯರಿಗೂ ಅನ್ವಯವಾಗುತ್ತದೆ.

**ಮಾನ್ಸೂನ್** ಇಂಗ್ಲಿಷಿನ Monsoon ಎಂಬ ಶಬ್ದದಲ್ಲಿ Moon ಮತ್ತು Sun ಎಂಬ ಇಂಗ್ಲಿಷ್ ಶಬ್ದಗಳ ಸಂಬಂಧವಿದೆಯೇ ?

ನಿಮಗೆ ಆಶ್ಚರ್ಯವಾಗಬಹುದು. ಈ Monsoon ಎಂಬ ಶಬ್ದಕ್ಕೆ ಮೂಲ ಅರಬ್ಬಿ ಭಾಷೆಯ ಮೌಸಿಂ (Mausim) ಎಂಬುದು. ಅದಕ್ಕೆ ಋತು ಎಂದರ್ಥ. ಡಚ್ ಭಾಷೆಯಲ್ಲಿ ಅದು Monssoen ಎಂದೂ ಪೋರ್ಚುಗೀಸ್ ಭಾಷೆಯಲ್ಲಿ Monsao ಎಂದೂ ಇದೆ. ಇದು ಭೂಮಿಯ ಸುತ್ತ ಮಾರುತ ಚಲನೆಯಲ್ಲಿ ಇದ್ದಕ್ಕಿದ್ದಂತೆ ವಿರುದ್ಧ ಚಲನೆಯುಂಟಾಗುವ ಸ್ಥಿತಿ. ಇದಕ್ಕೆ ಕಾರಣ ಭೂಮಿಯ ಮೇಲೆಯೂ ಸಮುದ್ರದ ಮೇಲೆಯೂ ಉಂಟಾಗುವ ತಾಪಮಾನದ ವ್ಯತ್ಯಾಸ. ಏಷಿಯಾ ಖಂಡದ ದಕ್ಷಿಣ ಭಾಗದಲ್ಲಿ ಇದರ ಪ್ರಭಾವ ಹೆಚ್ಚು. ಹಿಂದೀ ಭಾಷೆಯ ಮೌಸಮ್ ಶಬ್ದವನ್ನು ಗಮನಿಸಿ.

**ಮಾಬುದೆ** ಇದು ಒಂದು ಕ್ರಿಯಾಪದದ ಪ್ರಶ್ನಾರ್ಥಕ ರೂಪ. ಮಾಣ್ ಎಂಬುದು ಮಾಣ್ಬುದೆ ಎಂಬ ರೂಪವನ್ನು ಪಡೆಯುತ್ತದೆ. ಮಾಣ್ ಎಂದರೆ ಸುಮ್ಮನಿರು, ನಿಲ್ಲಿಸು, ಹಾಗೆ ಮಾಡಬೇಡ ಎಂದರ್ಥ. ಮಾಣ್ಬುದೆ ಎಂದರೆ ಸುಮ್ಮನಿರುತ್ತದೆಯೇ ? ಎಂದು ಪ್ರಶ್ನಾರ್ಥ. ಈ ಮಾಣ್ಬುದೆ ಎಂಬುದರ ಮುಂದಿನ ರೂಪ ಮಾಬುದೆ. ಇದು ಈ ಶಬ್ದದ ನಡುಗನ್ನಡ ರೂಪ. ಅಲ್ಲಮನ ವಚನವೊಂದನ್ನು ನೋಡಿ: **ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೆ; ಶರೀರ ಉಳ್ಳನ್ನಕ್ಕರ ವಿಕಾರ ಮಾಬುದೆ?** ಅಲ್ಲಮ ವಚನ ಚಂದ್ರಿಕೆ - (ಪುಟ - ೧೦೭ - ೪೮೭).

**ಮಾರಾಮಾರಿ** ಇದು ಹಿಂದೀಭಾಷೆಯ ಶಬ್ದ. ಇದಕ್ಕೆ ತುಂಬ ಆತುರದಲ್ಲಿ ಉಂಟಾಗುವ ಗೊಂದಲ ಎಂದರ್ಥ. ಮರಾಠಿಯಲ್ಲಿ ಇದೇ ಶಬ್ದಕ್ಕೆ ಹೊಡೆದಾಟ — ಕಾದಾಟ ಎಂಬ ಅರ್ಥವಿದೆ. ಕನ್ನಡಕ್ಕೆ ಮರಾಠಿಯ ಅರ್ಥ ಬಂದು ಸೇರಿಕೊಂಡಿದೆ. ಇದರಲ್ಲಿರುವ ಮಾರಿ ಕನ್ನಡದ ಮಾರಿ ಅಲ್ಲ. ಮಾರಾ ಉರ್ದುವಿನ ಮಾರೋ = ಹೊಡೆ ಅಲ್ಲ.

**ಮಾರಿ** ಎಂಬುದು ಮೋರೆ ಎಂಬ ಶಬ್ದವು ಆಡುಮಾತಿನಲ್ಲಿ ಪಡೆಯುವ ರೂಪ ಅಷ್ಟೆ. ಮಾರಿ ತೊಳಕೊಂಡು ಬಾ ಎಂದರೆ ಮುಖವನ್ನು ತೊಳೆದುಕೊಂಡು ಬಾ ಎಂದರ್ಥ. ಮಾರಿ ಎಂಬ ಕ್ಷುದ್ರದೇವತೆಯ ಹೆಸರು ಬೇರೆ ಇದೆ. '**ಬೀದಿಯಲ್ಲಿ ಹೋಗುವ ಮಾರಿ ಬಾ ನಮ್ಮ ಮನೆ ಹೊಕ್ಕು ಹೋಗು**' ಎಂಬ ಗಾದೆ ಇದೆ. ಈಚೆಗೆ ಮಾರಿ ಬಿಸ್ಕತ್ತು ಬೇರೆ ಬಂದಿದೆ. ಅದು Marie ಎಂಬ ಇಂಗ್ಲಿಷ್ ಮಾರಿ. ಇದು Mary ಎಂಬ ಶಬ್ದದ ಫ್ರೆಂಚ್ ಕಾಗುಣಿತ.

**ಮಾರಿಫತ್ತು** ಇದು ಅರಬ್ಬಿಯ ಶಬ್ದ. ಅಲ್ಲಿ ಅದರ ರೂಪ ಮುಅರಫತ್. ಇದಕ್ಕೆ ಅವ್ಯಯದ ಅರ್ಥವಿದೆ. ಮೂಲಕವಾಗಿ, ಮುಖಾಂತರ. ಕನ್ನಡದಲ್ಲಿ ಈ ಶಬ್ದಕ್ಕೆ ಕಾಗುಣಿತಗಳಲ್ಲಿ ಬದಲಾವಣೆಯಾಗಿ ೧೨ ಬೇರೆ ಬೇರೆ ರೂಪಗಳಿವೆ. ಎಲ್ಲ ರೂಪಗಳಿಗೂ ದೃಷ್ಟಾಂತಗಳಿವೆ. ಮಾರಿಫತಿ, ಮಾರಿಪತ, ಮಾರ್ಫತು ಇತ್ಯಾದಿ.

**ಮಾರುಕಟ್ಟೆ - ಮಾರುಪೇಟೆ** ಎರಡಕ್ಕೂ ಒಂದೇ ಅರ್ಥ = ಮಾರುವ ಸ್ಥಳ. ಅದರಿಂದ ಎರಡನ್ನೂ ಉಪಯೋಗಿಸಬಹುದು. ಅದು ದೇಶದ ಒಳಗಿನದೂ ಆಗಬಹುದು, ಹೊರಗಿನದೂ ಆಗಬಹುದು. ಕೆಲವು ವೇಳೆ ಒಂದೇ ಅರ್ಥಕ್ಕೆ ಅನೇಕ ಶಬ್ದಗಳುಂಟಲ್ಲವೇ ?

**ಮಾರ್ಕಂಡೇಯ, ಮಾರ್ಕಾಂಡೆಯ - ಇವುಗಳಲ್ಲಿ ಸರಿ ಯಾವುದು ?** ಮೃಕಂಡು ಮುನಿಯ ಮಗ ಮಾರ್ಕಂಡೇಯ ಎಂಬುದೇ ಸರಿ. **ಮೃಕಂಡೋರಪತ್ಯಂ ಪುಮಾನ್** ಎಂದು ವಿಗ್ರಹವಾಕ್ಯ.

**ಮಾರ್ಕೆಟ್** ಮಾರ್ಕೆಟ್‌ಗೆ ಸರಿಯಾದ ಶಬ್ದ ಸಂತೆ. ಸಂತೆಯು ಹಳ್ಳಿಯ ಪರಿಸರಕ್ಕೆ

ಹೊಂದಿಕೊಂಡದ್ದರಿಂದ ನಾವು ಇಂಗ್ಲಿಷಿನ ಮಾರ್ಕೆಟ್ ಎಂಬುದಕ್ಕೆ ಉಚ್ಚಾರಣೆಯಲ್ಲಿಯೂ ಹತ್ತಿರವಾಗುವ ಮಾರುಕಟ್ಟೆಯನ್ನು ಸೃಷ್ಟಿಮಾಡಿಕೊಂಡೆವು. ಅದು ಚೆನ್ನಾಗಿಯೇ ಇದೆ. ಶಾಸ್ತ್ರಸಾಹಿತ್ಯದಲ್ಲಿಯೂ ಈಗೀಗ ಅದನ್ನೇ ಉಪಯೋಗಿಸುತ್ತಿದ್ದಾರೆ. 'ಯುರೋಪಿನ ಮಾರುಕಟ್ಟೆಯಲ್ಲಿ ಇದಕ್ಕೆ ಬೆಲೆಯಿಲ್ಲ' ಎಂಬಂಥ ವಾಕ್ಯಗಳಲ್ಲಿ ಆ ಶಬ್ದಕ್ಕೆ ವ್ಯಾಪಕವಾದ ಅರ್ಥವೇ ಬರುತ್ತದೆ. ಇಂಗ್ಲಿಷಿನ Market ಗೆ ಇರುವಂತೆ ಇನ್ನೊಂದು ಶಬ್ದವನ್ನು ಹುಡುಕುವ ಆವಶ್ಯಕತೆಯಿಲ್ಲ.

**ಮಾರ್ಜಿನ್** ಬಿಡು ಅಂಚು ಎಂದಾಗಲೀ ಅಂಚುಕಟ್ಟು ಎಂದಾಗಲೀ ಉಪಯೋಗಿಸುತ್ತ ಬಂದರೆ ಅದೇ ಅಭ್ಯಾಸವಾಗುತ್ತದೆ. ಇಂಥ ಸಮಯಗಳಲ್ಲಿ ಹೊಸ ಶಬ್ದಗಳನ್ನು ಈಗ ನಾನು ಮಾಡಿರುವಂತೆ ಸೃಷ್ಟಿಸಬೇಕಾಗುತ್ತದೆ.

**ಮಾಲ್ಕಿ** ಎಂದರೆ ಒಡೆತನ, ಸ್ವಾಮಿತ್ವ. ಇದು ಪಾರಸೀ ಭಾಷೆಯ ಮಾಲಿಕ್ ಎಂಬುದರಿಂದ ಬಂದದ್ದು. ಹಿಂದಿಯಲ್ಲಿ ಮರಾಠಿಯಲ್ಲಿ ಮಾಲಿಕ್, ಮಾಲೀಕ್ ಎಂಬ ರೂಪಗಳಲ್ಲಿ ಉಪಯೋಗವಾಗುತ್ತದೆ. ದ್ವಿಭಾಷಾ ಪ್ರದೇಶಗಳಲ್ಲಿ ಇದರ ಉಪಯೋಗ ಸಾಮಾನ್ಯ. ಒಡೆಯ, ಸ್ವಾಮಿ ಎಂದು ಅರ್ಥ.

**ಮಾವ** ಇದು ಅನೇಕ ಭಾಷೆಗಳಲ್ಲಿ ಪ್ರಯೋಗದಲ್ಲಿದೆ. ಮಾಮಾ ಎಂಬುದೂ ಮಾಮನ್ ಎಂಬುದೂ ತಮಿಳು ರೂಪ. ಆದುದರಿಂದ ಇದು ದ್ರಾವಿಡ ಶಬ್ದ. ತಾಯಿಯ ಅಣ್ಣ ತಮ್ಮಂದಿರು ಸೋದರಮಾವಂದಿರಾದರೆ, ಹೆಣ್ಣು ಕೊಟ್ಟವನು ನಿಜವಾದ ಮಾವ.

**ಮಿಟಕಲಾಡಿ** ಎಂದರೆ ವೈಯಾರಿ, ಥಳಕುಬಳುಕಿನವಳು. ತನ್ನ ಸೌಂದರ್ಯವನ್ನು ವಿನಾಕಾರಣ ಪ್ರದರ್ಶಿಸುವುದರಲ್ಲಿ ನಿರತಳಾದವಳು, ಎಂದರ್ಥ. ಇದು ಮಿಟುಕು ಎಂಬ ಶಬ್ದಕ್ಕೆ ಸಂಬಂಧಪಟ್ಟದ್ದು. ತೆಲುಗಿನಲ್ಲೂ ಮಿಟುಕುಲಾಂಡಿ ಎಂಬ ಶಬ್ದವಿದೆ. ಇದೇ ಅರ್ಥ. ಸೋಗಲಾಡಿ ಎಂಬುದೂ ಇದೆ. ಕನ್ನಡದಲ್ಲಿ ಮಿಠಾರಿ ಎಂಬ ಮತ್ತೊಂದು ಶಬ್ದವಿದೆ. ಇದು ತೆಲುಗಿನ ಮಿಟಾರಿ =ಸುಂದರಿ ಎಂಬ ಶಬ್ದದಿಂದ ಬಂದುದು. ಮಿಟುಕು ಎಂಬ ಶಬ್ದಕ್ಕೆ ಕಣ್ಣಿನ ರೆಪ್ಪೆಯನ್ನು ಚಲಿಯಿಸು ಎಂದರ್ಥ. ಈ ಮಿಟುಕಿಸುವ ಕ್ರಿಯೆಗೆ ಅನೇಕ ಅರ್ಥಗಳಿವೆ. *೧. ಹಾಸ್ಯ ೨. ಶೃಂಗಾರದ ಆಹ್ವಾನ ೩. ವೈಯಾರ ೪. ಗುಟ್ಟು* ಇತ್ಯಾದಿ. ಮಿಟಕಲಾಡಿಯಲ್ಲಿರುವ ಮಿಟುಕಿಗೆ ಈ ಎಲ್ಲಅರ್ಥಗಳೂ ಇವೆ. ಆ ಶಬ್ದದಲ್ಲಿರುವ ಲಕಾರ ತೆಲುಗಿನ ಪ್ರಭಾವದಿಂದ ಬಂದದ್ದು.

**ಮಿಳ್ಳಿರಿ** ಬಹು ಅಪೂರ್ವವಾದ ಶಬ್ದ. ಅದಕ್ಕೆ *೧. ಅಲುಗಾಡು, ೨. ಹಬ್ಬು, ೩. ಅಧಿಕವಾಗು* ಎಂಬ ಅರ್ಥಗಳಿವೆ. ಮೊದಲನೆಯ ಅರ್ಥಕ್ಕೆ ಕೋಪಗೊಂಡ ಸಿಂಹದ ವರ್ಣನೆ ಇದೆ. ನೋಡಿ: **'ಕುಡಿವಾಲಂ ನೆತ್ತಿಯೊಳ್ ಮಿಳ್ಳಿಜೆಯೆ'** (ಶಬರ ಶಂಕರ ವಿಲಾಸದ ಪದ್ಯ ಇದು. ೩-೬೨).

ಹಳಗನ್ನಡದಲ್ಲಿ ಮಿಳ್ಳಿಜೆ ಎಂದಿದ್ದದ್ದು ನಡುಗನ್ನಡದಲ್ಲಿ ಮಿಳ್ಳಿರಿ ಎಂದಾಗಿದೆ. ಹೊಸಗನ್ನಡದಲ್ಲಿ ಈ ಶಬ್ದದ ಪ್ರಯೋಗ ಅಷ್ಟಾಗಿ ಕಾಣಬರುತ್ತಿಲ್ಲ.

**ಮೀಂಗುಲಿಗ ಈ ಸಮಾಸವನ್ನು ಬಿಡಿಸುವುದು ಹೇಗೆ?** ಮೀನ್ ಎಂದರೆ ಮೀನು, ಮತ್ಸ್ಯ - ಕುಲಿ ಎನ್ನುವುದು ಒಂದು ಪ್ರತ್ಯಯ. ಅದಕ್ಕೆ ಕೊಲ್ಲುವವನು ಎಂದರ್ಥ. ಮೀನ್ ಶಬ್ದಕ್ಕೆ ಆ ಪ್ರತ್ಯಯ ಸೇರಿದರೆ ಮೀಂಗುಲಿ ಎಂದಾಗುತ್ತದೆ. -ಗ ಎನ್ನುವುದು ಇನ್ನೊಂದು ಪ್ರತ್ಯಯ. ಇದಕ್ಕೆ ಈ ಕೆಲಸದಲ್ಲಿ ವರ್ತಿಸುವವನು ಎಂದು ಅರ್ಥ. ಮೀಂಗುಲಿ ಶಬ್ದಕ್ಕೆ ಎರಡನೆಯ ಪ್ರತ್ಯಯ ಅನಾವಶ್ಯಕವಾಗಿದ್ದರೂ ಯಾರೋ ಕೆಲವರು ಕವಿಗಳು ಅದನ್ನು ಉಪಯೋಗಿಸಿದ್ದಾರೆ. ಅದರಿಂದ ಅರ್ಥವೇನೂ ವ್ಯತ್ಯಾಸವಾಗುವುದಿಲ್ಲ. ೧೧ನೆಯ ಶತಮಾನದಿಂದಲೂ ಈ ಶಬ್ದ ಕನ್ನಡ ಸಾಹಿತ್ಯದಲ್ಲಿ ಪ್ರಯೋಗದಲ್ಲಿದ್ದು ಪ್ರಸಿದ್ಧವಾಗಿದೆ.

ಅಶ್ವತ್ಥಾಮನು ಕರ್ಣನನ್ನು ಕುರಿತು ಹೇಳುವ ಮಾತು ಇದು - '**ಎಮ್ಮಯ್ಯನ ಗಂಡವಾತಂ ಈ ಮೀಂಗುಲಿಗಂ ಮೆಚ್ಚನ್**' (ಪಂಪಭಾ ೧೨-೪೧ ವಚನ) ಇಲ್ಲಿ ಮೀಂಗುಲಿಗ ಎಂದರೆ ಕರ್ಣ. ಮೀಂಗುಲಿಗೆ, ಮೀಂಗುಲಿತಿ ಎಂಬ ರೂಪಗಳು ಬೆಸ್ತರ ಹೆಂಗಸಿಗೆ ಅನ್ವಯಿಸುತ್ತದೆ. ಮೀಂಬುಲಿಗ ಎಂಬ ಒಂದು ಸಂದೇಹಾಸ್ಪದ ಶಬ್ದವೂ ಇದೇ ಅರ್ಥದಲ್ಲಿ ಕೆಲವು ಕಾವ್ಯಗಳಲ್ಲಿ ದೊರಕುತ್ತದೆ. ಇದರ ವ್ಯುತ್ಪತ್ತಿ ಅರ್ಥ ಎರಡೂ ಸಂದಿಗ್ಧ. ಇದು ಅಪಪಾಠವಿದ್ದರೂ ಇರಬಹುದು. ಮೀಂಗುಲಿಗ, ಮೀಂಬುಲಿಗ ಎಂಬ ಎರಡು ಶಬ್ದಗಳಿಗೆ ಒಂದು ಪಕ್ಷಿ ಎಂಬ ಅರ್ಥವೂ ಇದೆ. ಈ ಪಕ್ಷಿ ಮೀನನ್ನು ಕೊಕ್ಕಿನಿಂದ ಕಚ್ಚಿ ಸಾಯಿಸುವುದರಿಂದ ಈ ಶಬ್ದದ ಪ್ರಯೋಗವಿರಬಹುದು. ಮೀಂಚುಳ್ಳಿ ಎಂಬುದು ನಮಗೆಲ್ಲ ಪರಿಚಿತವಾದ ಪಕ್ಷಿ.

*ಮೀಂಗುಲಿಗನೆನಾಗಿಯುಮಣಮಾಂ ಗುಣಮನೆ ಬಿಸುಟೆನಿಲ್ಲ*

*(ಪಂಪಭಾರತದ ಈ ವಾಕ್ಯವನ್ನು ಗಮನಿಸಿ ೯-೮೫.)*

**ಮೀನಮೇಷ** ಒಂದು ವೃತ್ತಿಯ ಅಭ್ಯಾಸ ವ್ಯಾಪಕವಾಗಿ ಜನತೆಯ ಮೇಲೆ ಹೇಗೆ ಪ್ರಭಾವವನ್ನು ಬೀರುತ್ತದೆ ಎಂಬುದಕ್ಕೆ ಇದು ಒಂದು ದೃಷ್ಟಾಂತ. ಜ್ಯೋತಿಷ ಎಂಬ ಶಾಸ್ತ್ರವು ಸೂರ್ಯನೇ ಮೊದಲಾದ ಗ್ರಹಗಳ ಚಲನ ವಲನಗಳನ್ನು ವಿವರಿಸುವ ಶಾಸ್ತ್ರ. ಆರು ವೇದಾಂಗಗಳಲ್ಲಿ ಐದನೆಯದು. ಈ ಶಾಸ್ತ್ರವನ್ನು ತಿಳಿದವನು ಜ್ಯೋತಿಷಿ, ದೈವಜ್ಞ, ಜೋಯಿಸ. ತಿಥಿ, ನಕ್ಷತ್ರ ಮೊದಲಾದ ಕಾಲವನ್ನು ನಿರ್ಧರಿಸಲು ಪಂಚಾಂಗವನ್ನು ಉಪಯೋಗಿಸುತ್ತಾರೆ. ಪಂಚಾಂಗ ಎಂದರೆ ವಾರ, ತಿಥಿ, ನಕ್ಷತ್ರ, ಯೋಗ, ಕರಣ ಎಂಬ ಐದು ಅಂಗಗಳು. ೨೭ ನಕ್ಷತ್ರಗಳಿವೆ. ಅಶ್ವಿನಿಯಿಂದ ಹಿಡಿದು ರೇವತಿಯವರೆಗೆ. ಈ ನಕ್ಷತ್ರಗಳನ್ನು ೧೨ ರಾಶಿಗಳಾಗಿ ವಿಂಗಡಿಸಿದ್ದಾರೆ. ಮೊದಲನೆಯದು ಮೇಷರಾಶಿ. ಕೊನೆಯದು ಮೀನರಾಶಿ. ಯಾವುದಾದರೂ ಶುಭಕಾರ್ಯಕ್ಕೆ ಮುಹೂರ್ತವನ್ನು ನಿರ್ಧರಿಸಬೇಕಾದರೆ ಜೋಯಿಸರು ಈ ಮೀನ ಈ ಮೇಷ ಮುಂತಾದ ರಾಶಿಗಳ ಗುಣಾವಗುಣಗಳನ್ನು ಲೆಕ್ಕಹಾಕಿ ನಿರ್ಧರಿಸುತ್ತಾರೆ. ಅದಕ್ಕೆ ಸೂಕ್ತವಾದ ಒಂದು ಕ್ರಮವಿದೆ. ಅದನ್ನು ಲೆಕ್ಕಾಚಾರ ಮಾಡದೆ ಹೇಳಲಾಗುವುದಿಲ್ಲ. ಆದುದರಿಂದ ತಡವಾಗುತ್ತದೆ. ಹೀಗೆ ತಡವಾಗುವುದಕ್ಕೆ ಮೀನ ಮೇಷ ಎಣಿಸುವುದು ಎಂದು ಪರ್ಯಾಯವಾಗಿ ಜನ ಉಪಯೋಗಿಸುತ್ತಾರೆ. ಯಾವುದಕ್ಕೂ ಬೇಗ ನಿರ್ಧಾರ ಮಾಡದಿರುವುದಕ್ಕೆ ಮೀನ ಮೇಷ ಎಣಿಸುವುದು ಎಂಬುದು ರೂಢಿ.

**ಮೀನಾಕ್ಷಿ** ಮೀನಿನ ಆಕಾರದ ಕಣ್ಣುಳ್ಳವಳು ಎಂದರ್ಥ. ಈ ಆಕಾರದ ಕಣ್ಣು ಸೌಂದರ್ಯವರ್ಧಕ ಎಂದು ಸೌಂದರ್ಯಾರಾಧಕರ ನಂಬಿಕೆ.

**ಮೀನು** ಇವರಲ್ಲಿ ಅನೇಕರಿಗೆ 'ಮೀನು' ಶಬ್ದವನ್ನು ಬರೆಯುವುದಕ್ಕೆ ಯಾವ ರೀತಿ ಸರಿ ಎನ್ನುವುದು ಬೇಕಾಗಿದೆ. ಇದು ಕಾಗುಣಿತದ ಕ್ರಮಕ್ಕೆ ಸೇರಿದ ಪ್ರಶ್ನೆ. ಈ ಶಬ್ದವನ್ನು ಕೆಲವರು 'ಮಿಾ' ಎಂದೂ ಬರೆಯುತ್ತಾರೆ. ಹೀಗೆ ಬರೆಯುವುದು 'ಇಳಿ' ಎಂದು ಕರೆಯುವ 'ಆತ್ವ' ದ ಗುರುತು. ಆದರೆ 'ಮ' ಕಾರಕ್ಕೆ ನಾವು ಸೇರಿಸಬೇಕಾಗಿರುವುದು 'ಈತ್ವ' ದ ಗುರುತು. 'ಈ' ತ್ವಕ್ಕೆ ಇರುವುದು 'ೀ' ಎಂಬ ಗುರುತು. ಇದು 'ಈ', 'ಏ', 'ಓ' ಎಂಬ ಮೂರು ಸ್ವರಗಳು ವ್ಯಂಜನಗಳಿಗೆ ಸೇರುವಾಗಲೂ ಉಪಯೋಗಿಸಲ್ಪಡಬೇಕು. ಆದುದರಿಂದ 'ಮೀನ', 'ಮೀನು' ಎಂಬುದು ಸರಿಯಾದ ರೂಪ.

**ಮೀಮಾಂಸ** ಎಂಬ ಸಂಸ್ಕೃತ ಶಬ್ದಕ್ಕೆ ಆಳವಾಗಿ, ಗಾಢವಾಗಿ ವಿಚಾರ ಮಾಡುವುದು, ಪರಿಶೀಲಿಸುವುದು, ಜಿಜ್ಞಾಸೆ ಮಾಡುವುದು ಎಂದು ಅರ್ಥ. ಹಲಾಯುಧನ ನಿಘಂಟಿನಲ್ಲಿ,

'ಮೀಮಾಂಸಾ ಸ್ಯಾದ್ ವಿಚಾರಣಾ' ಎಂಬ ಶಬ್ದ ವಿವರಣೆಯಿದೆ. ಸಂಸ್ಕೃತದಲ್ಲಿ ಈ ಶಬ್ದದ ರೂಪ ಮೀಮಾಂಸಾ. ಇದಕ್ಕೂ ಮೀನಿನ ಮಾಂಸಕ್ಕೂ ಯಾವ ಸಂಬಂಧವೂ ಇಲ್ಲ.

**ಮುಂಗಟ್ಟು** ಅಂಗಡಿಯಲ್ಲಿ ಮಾರುವ ವಸ್ತುಗಳು ಕಾಣುವಂತೆ ಮಾಡುವುದಕ್ಕಾಗಿ ಅಂಗಡಿಯ ಮುಂಭಾಗದಲ್ಲಿ ಕಟ್ಟುವ ಇಟ್ಟಿಗೆ ಅಥವಾ ಮರದ ಕಟ್ಟಡಕ್ಕೆ ಮುಂಗಟ್ಟು ಎಂದು ಹೆಸರು. ಮುಂದೆ + ಕಟ್ಟು = ಮುಂಗಟ್ಟು ಎಂದಾಗುತ್ತದೆ.

**ಮುಂಚೂಣಿ** ಕನ್ನಡದಲ್ಲಿ ಚೂಳಿ, ಚೂಣಿ ಎಂಬ ಪರ್ಯಾಯ ರೂಪಗಳುಳ್ಳ ಒಂದು ಶಬ್ದವಿದೆ. ಇದಕ್ಕೆ ಮುಂಭಾಗ ಎಂದು ಅರ್ಥ. ಮುಂ ಎಂಬುದು ಮುನ್ ಮೊದಲು ಎಂಬರ್ಥದ ಶಬ್ದ. ಒಂದೇ ಅರ್ಥದ ಎರಡು ಶಬ್ದಗಳು ಸೇರಿರುವ ಶಬ್ದ ಮುಂಚೂಣಿ. ಯುದ್ಧದಲ್ಲಿ ಸೈನ್ಯದ ಮುಂಭಾಗದಲ್ಲಿ ಅಗ್ರಸ್ಥಾನವನ್ನು ಸೂಚಿಸುವುದಕ್ಕೆ ಈ ಶಬ್ದವನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಚೂಳಿ ಎಂಬುದೇ ಮೊದಲ ರೂಪ. **ಕರ್ಣನು ಮುಂಚೂಣಿಯಿಂದ ಹಿಂದಕ್ಕೆ ಹೋಗಿಬಿಟ್ಟನು** ಎನ್ನುವುದು ವಚನಭಾರತದ ಮಾತು.

**ಮುಂಡಾಸು, ಮುಂಡುಪಂಚೆ, ಮುಂಡ, ರುಂಡ** – ಈ ಎರಡು ಶಬ್ದಗಳಿಗೂ ಗೊಂದಲವುಂಟಾಗಿ ಕನ್ನಡದಲ್ಲಿ ತಲೆ, ತಲೆಯಿಲ್ಲದ ಅಟ್ಟೆ ಎಂಬ ಎರಡು ಅರ್ಥಗಳೂ ಬೆಳೆದು ಬಂದಿವೆ. ಮುಂಡ ಎಂಬುದಕ್ಕೆ ತಲೆ ಎಂಬ ಅರ್ಥವಂತೂ ಸಂಸ್ಕೃತದಲ್ಲಿ ಇದ್ದೇ ಇದೆಯಲ್ಲ! ಮುಂಡನ ಎಂದರೆ ತಲೆಯನ್ನು ಬೋಳಿಸುವುದು. ಮುಂಡು ಎಂದರೆ ತಲೆ ಸುತ್ತುವ ಬಟ್ಟೆ ಎಂದೂ ಸೊಂಟಕ್ಕೆ ಸುತ್ತುವ ಪಂಚೆ ಎಂದೂ ಎರಡೂ ಅರ್ಥ. ಮುಂಡಾಸು ಎಂಬುದು ಮರಾಠಿ ಮತ್ತು ಹಿಂದೀ ಭಾಷೆಗಳಲ್ಲಿ ಪ್ರಸಿದ್ಧ. ಅದೇ ಕನ್ನಡಕ್ಕೂ ಮರಾಠಿಯ ಮೂಲಕ ಬಂದಿದೆ.

ಮುಂಡಾಡು = ಮುದ್ದಾಡು. ಮಗುವಿನ ತಲೆ ಮುಖಗಳಿಗೆ ಮುದ್ದಿಡುವುದು. ಈ ಅರ್ಥದ ಮುಂಡ - ಶಿರಸ್ಸು ಎಂಬುದರಿಂದಲೇ ಬೆಳೆದು ಬಂದಿದೆ. ಯಕ್ಷಗಾನದ ಮುಂಡಾಸು ತಲೆಗೆ ಧರಿಸುವ ಸಾಧನ. ಕೆಲವು ಶಬ್ದಗಳಿಗೆ ಭಾಷೆಯಲ್ಲಿ ಹೀಗೆ ಗೊಂದಲವಾಗಿರುವ ಇತರ ಉದಾಹರಣೆಗಳೂ ಇವೆ. ಅಗ್ಗ-ತಗ್ಗು ಈ ಶಬ್ದಗಳನ್ನು ಪರಿಶೀಲಿಸುವುದಾದರೆ ನಾನು ಹೇಳುವ ಭಾಷಾ ವ್ಯವಹಾರದ ಪರಿಚಯವಾಗುತ್ತದೆ.

**ಮುಂತಾಗಿ** ಇದು ಓದುಗರಿಗೆ ಸ್ವಲ್ಪ ಕ್ಲಿಷ್ಟತೆಯ ಪದವಾಗಿ ಜೈಮಿನಿ ಭಾರತದ (೧೯-೪) ಪದ್ಯದಲ್ಲಿ ಸೇರಿಕೊಂಡಿದೆ. ಈ ಶಬ್ದ ಅಷ್ಟೇನೂ ತೊಂದರೆ ಕೊಡಬೇಕಾಗಿಲ್ಲ. ಈ ಪದ್ಯದಲ್ಲಿ ಅನ್ವಯ **ಮುನ್ನೀರು ಮುಂತಾಗಿ ಪರಿವ ಬೆಳ್ನೊನಲ್ ತೋರಿತು** ಎಂದು ನಿರ್ಧಾರ ಮಾಡಿದರೆ ಅರ್ಥ ಸುಲಭ. ಗಂಗೆಯು ಮುಂದೆ ಸೇರಬೇಕಾದ ಸ್ಥಾನವಾದ ಸಮುದ್ರವು ಮುಂತು + ಆಗಿ = ಮುಂದಿರಲು ಎಂದು ಅರ್ಥಮಾಡಿಕೊಳ್ಳಬೇಕು.

**ಮುಂದೊರೆಯಿತು, ಮಾಡಲೆತ್ನಿಸು, ಅಷ್ಟೊತ್ತಿಗೆ** ಇತ್ಯಾದಿ ಬರಹಗಳಲ್ಲಿ ತಪ್ಪಿರುವುದು ಸ್ವಯಂಸ್ಪಷ್ಟ. ಮುಂದುವರಿಯಿತು ಎಂಬುದು ಸರಿ. ಮುಂದು + ಪರಿ = ಮುಂದುವರಿ. ಹಾಗೆಯೇ ಮಾಡಲು + ಯತ್ನಿಸು = ಮಾಡಲು ಯತ್ನಿಸು. ಮಾಡಲೆತ್ನಿಸು ಎಂಬುದು ತಪ್ಪು. ಅಲ್ಲಿರುವ ಯತ್ನಿಸು ಎಂಬುದು ಶಬ್ದವೇ ಹೊರತು ಎತ್ನಿಸು ಅಲ್ಲ. ಹಾಗೆಯೇ ಅಷ್ಟು + ಹೊತ್ತಿಗೆ ಎಂಬುದನ್ನು ಸೇರಿಸುವುದಕ್ಕಾಗುವುದಿಲ್ಲ. ಹೊ ಎಂಬುದನ್ನು ಒ ಎಂಬ ಸ್ವರವನ್ನಾಗಿ ಮಾಡಿಕೊಂಡು ಆಡುಮಾತಿನಲ್ಲಿ ಉಪಯೋಗಿಸುತ್ತಾರೆ. ಆಡುಮಾತಿನ ರೀತಿಯನ್ನು ಬರಹಕ್ಕೆ ಇಳಿಸುವುದು ಭಾಷೆಯ ಮರ್ಯಾದೆಗೆ ಕುಂದು.

**ಮುಂಬಾಗಿಲು - ಹಿಂಬಾಗಿಲು** ಇದು ಅಂಶಿ ಸಮಾಸವೇ? ಈ ಪ್ರಶ್ನೆ ಬೋಧನದಲ್ಲಿ ಆಸಕ್ತಿಯಿರುವ ಶಿಕ್ಷಕನಿಗೆ ಮಾತ್ರ ಹೊಳೆಯಬಹುದಾದುದು. ಯಾರೋ ಹಿಂದೆ ಹೇಳಿದ್ದನ್ನೇ ಸುಮ್ಮನೇ ಪಾಠ ಮಾಡಿ ಪಾರಾಗುವವರಿಗೆ ಇಂಥ ಪ್ರಶ್ನೆಗಳು ಹೊಳೆಯುವುದೇ

ಇಲ್ಲ. ಈ ಸಮಾಸದ ಕಥೆ ಬಹು ಹಳೆಯದು. ಕೇಶಿರಾಜನು ಇಂಥ ಸಮಾಸಗಳನ್ನು ಅವ್ಯಯೀಭಾವ ಎಂದು ಕರೆಯುತ್ತಾನೆ. ಶಬ್ದಾನುಶಾಸನದಲ್ಲಿ ಭಟ್ಟಾಕಳಂಕನು ೧೧೬ನೆಯ ಸೂತ್ರದ ವ್ಯಾಖ್ಯಾನದಲ್ಲಿ ಇಂಥ ಸಮಾಸಗಳ ಬಗ್ಗೆ ವಿದ್ವಾಂಸರಲ್ಲಿದ್ದ ಅಭಿಪ್ರಾಯ ಭೇದವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಭಾಷೆಯ ನಿರೂಪಣೆಯಲ್ಲಿ ಶಬ್ದಗಳ ವ್ಯುತ್ಪನ್ನವನ್ನು ನಿರ್ಣಯಿಸುವಾಗ ಮುಂಬಾಗಿಲು ಎಂಬುದನ್ನು ಮುಂದು + ಬಾಗಿಲು ಎಂದೂ, ಹಿಂಬಾಗಿಲು ಎಂಬುದನ್ನು ಹಿಂದು + ಬಾಗಿಲು ಎಂದೂ ವಿಗ್ರಹ ವಾಕ್ಯವನ್ನು ಬಿಡಿಸಬಹುದು. ಆಗ ಮುಂದು + ಬಾಗಿಲು = ಮುಂಬಾಗಿಲು ಎಂಬುದಕ್ಕೆ ಮನೆಯ ಮುಂಬಾಗಿಲು ಎಂದೂ ಹಿಂಬಾಗಿಲು ಎಂಬುದಕ್ಕೆ ಮನೆಯ ಹಿಂಬಾಗಿಲು ಎಂದೂ ಅರ್ಥವನ್ನು ಹೇಳಬೇಕಾಗುತ್ತದೆ. ಕೆಳಗು + ತುಟಿ = ಕೆಳದುಟಿ ಎಂಬುದು ಅಂಶಿ ಸಮಾಸವಲ್ಲ. ಏಕೆಂದರೆ ಎರಡು ತುಟಿಗಳಲ್ಲಿ ಕೆಳಗಿನದು ಕೆಳದುಟಿ; ಹೀಗೆ ಈ ವಿಚಾರದಲ್ಲಿ ಬೇರೆ ಬೇರೆ ಅಭಿಪ್ರಾಯಗಳು ಈಗಲೂ ವಿದ್ವಾಂಸರಲ್ಲಿ ಚರ್ಚೆಯಾಗುತ್ತಿವೆ. ಅಂಗೈ ಎಂಬುದನ್ನು ಅಗಂ + ಕೈ ಎಂದು ವಿಗ್ರಹವಾಕ್ಯವಾಗಿ ಬಿಡಿಸುತ್ತಾರೆ. ಮುಂಬಾಗಿಲು ಎಂಬುದನ್ನು ಬಾಗಿಲ + ಮುಂದು ಎಂದು ಬಿಡಿಸಿದರೆ ಅದು ಅಂಶಿ ಸಮಾಸವಾಗುವುದಿಲ್ಲ. ಏಕೆಂದರೆ ಬಾಗಿಲು ಎಂಬ ಶಬ್ದಕ್ಕೆ ಮುಂದು ಎಂಬುದು ಅಂಶಿಯಾಗುವುದಿಲ್ಲ. ಆ ಬಳಿಕ ಬಾಗಿಲು ಎಂದರೆ ಕದವೋ ಬಾಗಿಲವಾಡವೋ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದೆಲ್ಲ ಭಾಷಾಶಾಸ್ತ್ರದ ಕ್ಲಿಷ್ಟ ಪ್ರಶ್ನೆಗಳು. ಇವುಗಳನ್ನು ವಿವರವಾಗಿ ಗ್ರಂಥಗಳಿಂದ ಓದಿ ತಿಳಿಯಬೇಕು. ನಾನು ಈ ಸಮಸ್ಯೆಯ ಬೇರೆ ಬೇರೆ ಮುಖಗಳನ್ನು ಸೂಚಿಸಿದ್ದೇನೆ ಅಷ್ಟೆ. ವಿದ್ಯಾರ್ಥಿಗಳು ಪರಿಹಾರಕ್ಕೆಂದು ಪಠ್ಯಪುಸ್ತಕಗಳನ್ನು ಮೊರೆ ಹೋಗಬೇಕು, ಬೇರೆ ದಾರಿಯಿಲ್ಲದೆ, ಪರೀಕ್ಷೆಯ ದೃಷ್ಟಿಯಿಂದ.

**ಮುಕ್ಕಣ್ಣ** ಮೂರು ಕಣ್ಣು ಇರುವವನು, ಮುಕ್ಕಣ್ಣ ಎಂದರೂ ಅದು ವಿಗ್ರಹವಾಕ್ಯವೇ. ಮುಖ್ಯವಾಗಿ ತಿಳಿದಿರಬೇಕಾದುದು ಇದು: ಬಹುವ್ರೀಹಿಯಲ್ಲಿ ಪೂರ್ವಪದ = ಹಿಂದಿನ ಪದ, ಉತ್ತರ ಪದ = ಮುಂದಿನ ಪದ ಈ ಎರಡೂ ಮುಖ್ಯವಾಗದೆ ಅವೆರಡೂ ಸಂಬಂಧ ಹೊಂದಿರುವ ಮೂರನೆಯ ಪದದ ಅರ್ಥವೇ ಮುಖ್ಯವಾಗುವುದು. ಆದ್ದರಿಂದ ಮೂರು ಕಣ್ಣು ಇರುವವನು ಮುಕ್ಕಣ್ಣ. ಹಣೆಯಲ್ಲಿ ಕಣ್ಣು ಇರುವವನು ಹಣೆಗಣ್ಣ. ಎಂದು ಹೇಳಿದರೂ ಅದು ವಿಗ್ರಹವಾಕ್ಯವೇ ಆಗುತ್ತದೆ. ಸಂಸ್ಕೃತ ಭಾಷೆಯ ವಾಕ್ಯಪದ್ಧತಿಯನ್ನೇ ಕನ್ನಡದಲ್ಲಿಯೂ ತರಬೇಕಾಗಿಲ್ಲ. ಎಷ್ಟೋ ವೇಳೆ ಆ ಕ್ರಮ ಕನ್ನಡಕ್ಕೆ ಪರಕೀಯವಾಗಿ ಕಾಣುತ್ತದೆ. ಇದು ಎರಡು ಬೇರೆ ಬೇರೆ ವ್ಯಾಕರಣಗಳ ವ್ಯತ್ಯಾಸದಿಂದ ಕಾಣಬರುವ ಅನುಭವ. ತ್ರೀಣಿ ನಯನಾನಿ ಯಸ್ಯ ಎಂಬ ವಾಕ್ಯದಲ್ಲಿರುವ ಯಾರಿಗೆ ಮೂರು ಕಣ್ಣು ಇವೆಯೋ ಅವನು ಎಂಬುದು ಕನ್ನಡದಲ್ಲಿ ಮಾತನಾಡುವ ರೀತಿಯಲ್ಲ. ಹಾಗೆಯೇ ಹೇಳಬೇಕಾದುದು ಅಗತ್ಯವಲ್ಲ.

**ಮುಕ್ತಾಯ** ಸಂಸ್ಕೃತದಲ್ಲಿ ಮುಚ್ ಎಂಬ ಧಾತುವಿದೆ. ಇದರಿಂದ ಬಂದುದು ಮುಕ್ತ ಎಂಬ ಕೃದಂತ ರೂಪ. ಇದಕ್ಕೆ ಬಿಡುಗಡೆ ಹೊಂದಿದ, ಅಳ್ಳಕವಾದ, ಸ್ವಾತಂತ್ರ್ಯವನ್ನು ಪಡೆದ, ತ್ಯಜಿಸಿದ ಇತ್ಯಾದಿ ಸಂದರ್ಭಾನುಸಾರವಾಗಿ ಅರ್ಥಗಳುಂಟು.

ಮುಕ್ತಾ ಎಂಬ ಮತ್ತೊಂದು ಶಬ್ದವಿದೆ. ಇದು ಸ್ತ್ರೀಲಿಂಗ ಶಬ್ದ. ಅದಕ್ಕೆ ಮುತ್ತು ಎಂದು ಅರ್ಥ. ಹಾರಾದಿಗಳನ್ನು ಮಾಡುವ ಬೆಲೆ ಬಾಳುವ ವಸ್ತು. The pearl. ಮುಕ್ತಿ = ಮೋಕ್ಷ ಈ ಶಬ್ದವೇ ಬೇರೆ. ಆದರೆ ಸಂಸ್ಕೃತದಲ್ಲಿ ಮುಕ್ತಾಯ ಎಂಬ ಶಬ್ದವಿಲ್ಲ. ಆಯ ಎಂಬ ಶಬ್ದವೇನೋ ಇದೆ. ಮುಕ್ತಾ ಅಥವಾ ಮುಕ್ತ + ಆಯ ಎಂಬ ಸಂಧಿಯನ್ನು ಮಾಡಬಹುದು. ಆದರೆ ಹಾಗೆ ಸಂಧಿ ಮಾಡಿದ ಪ್ರಯೋಗಗಳು ನಮ್ಮ ಗಮನಕ್ಕೆ ಬಂದಿಲ್ಲ.

ಸಂಸ್ಕೃತ ನಿಘಂಟುಗಳು ಕೂಡ ಈ ಶಬ್ದವನ್ನು ಉಲ್ಲೇಖಿಸಿಲ್ಲ. ಕನ್ನಡದಲ್ಲಿ ಮುಗಿ ಎಂಬ ಧಾತುವಿದೆ. ಇದಕ್ಕೆ ಕೊನೆಗಾಣು. ಕೊನೆಯಾಗು ಎಂಬ ಅರ್ಥವಿದೆ. ಅದಲ್ಲದೆ ಇನ್ನೂ ೮-೧೦ ಅರ್ಥಗಳಿವೆ. ಮುಗಿತ ಎಂಬ ಶಬ್ದಕ್ಕೆ ಪೂರೈಸುವಿಕೆ, ಕೊನೆಯಾಗುವಿಕೆ ಎಂಬ ಅರ್ಥವಿದೆ. ಮುಗಿತಾಯಕ್ಕೆ ಗಾಯನದ ಕೊನೆಯ ಅವಸ್ಥೆ ಎಂದು ಕನ್ನಡದ ಪ್ರಸಿದ್ಧ ಗ್ರಂಥಗಳಲ್ಲಿ ಹೇಳಿದೆ. ವಿವೇಕ ಚೂಡಾಮಣಿ ಗ್ರಂಥವು ಈ ವಿಷಯವನ್ನು ಹೇಳಿದೆ. ಸಂಗೀತ ಪಾರಿಭಾಷಿಕ ಕೋಶವೆಂಬ ಇತ್ತೀಚಿನ ನಿಘಂಟಿನಲ್ಲಿ ಮುಕ್ತಾಯ ಎಂಬ ಶಬ್ದವನ್ನು ಕೊಟ್ಟಿದ್ದಾರೆ. ಅದು ರಾಗಾಲಾಪನೆಯ ಕೊನೆಯ ಭಾಗವೆಂದೂ ಅಲ್ಲಿ ರಾಗಾಲಾಪದ ಮೂರ್ಛನ ಪ್ರಸ್ತಾರ ಅಥವಾ ಬಿರ್ಕಾಗಳನ್ನು ಹಾಡುತ್ತಾರೆಂದೂ ಹೇಳಿದೆ. ಇದು ನಿಜವಾಗಿ ಮುಕ್ತಾಯವೆ. ಇದಕ್ಕೆ ವಿದಾಯ ಎಂಬ ಬೇರೆ ಹೆಸರಿದೆ.

ಹೀಗಿರುವುದರಿಂದ **ಮುಗಿತಾಯ** ಎಂಬ ಶಬ್ದವೇ **ಮುಕ್ತಾಯ** ಆಗಿದೆ. ಇದು ಕನ್ನಡ ಶಬ್ದ. ಇಳಿತಾಯ, ಉಳಿತಾಯ ಎಂಬಂತೆ ಮುಗಿತಾಯ. ಮುಗಿತಾಯ ಶಬ್ದವನ್ನು ಬೇಗ ಹೇಳಿದರೆ ಅದು ಮುಕ್ತಾಯವಾಗುತ್ತದೆ.

**ಮುಖಾಂತರ** ನೋಡಿ: ಮೂಲಕ

**ಮುಖೇನ** ಮುಖ ಎಂಬ ಸಂಸ್ಕೃತ ಶಬ್ದಕ್ಕೆ ೧೫-೧೬ ಅರ್ಥಗಳಿವೆ. *೧. ಮೋರೆ ೨. ಬಾಯಿ ಎಂಬುವು ಮೊದಲ ಅರ್ಥಗಳು. ೩. ಮೂತಿ ೪. ತುದಿ ೫. ಮುಖಂಡ ೬. ಶಬ್ದ* ಇತ್ಯಾದಿ ಇತರ ಅರ್ಥಗಳು. ಮುಖೇನ ಎಂಬುದು ಮುಖ ಎನ್ನುವ ಶಬ್ದದ ತೃತೀಯಾ ವಿಭಕ್ತಿಯ ರೂಪ. ಮುಖದಿಂದ ಎಂದು ಅರ್ಥ. ಅದಕ್ಕೆ ಮೂಲಕವಾಗಿ ಎಂಬ ಬೇರೊಂದು ಅರ್ಥವೂ ಬರುತ್ತದೆ. ಪ್ರಾಣಗಳು ಮುಖವನ್ನು = (ಮೂತಿ) ತೊಳೆದುಕೊಳ್ಳುವುದಿಲ್ಲ, ಎಂಬ ವಾಕ್ಯವನ್ನು ನೋಡಿ. ನಾನು ನಮ್ಮ ಉಪಾಧ್ಯಾಯರ ಮುಖೇನ ಈ ವಿಷಯವನ್ನು ತಿಳಿದುಕೊಂಡೆ. ಈ ವಾಕ್ಯವನ್ನೂ ನೋಡಿ. ಹೀಗೆ ಸಂದರ್ಭಕ್ಕೆ ತಕ್ಕ ಹಾಗೆ ಈ ಶಬ್ದವನ್ನು ಉಪಯೋಗಿಸಬಹುದು.

**ಮುಖ್ಯ ಅತಿಥಿ** ಇಂಗ್ಲಿಷ್ ಭಾಷೆಯ guest ಎಂಬ ಶಬ್ದಕ್ಕೆ 'ಒಬ್ಬ ವ್ಯಕ್ತಿಯ ಅಥವಾ ಸಂಸ್ಥೆಯ ಆತಿಥ್ಯವನ್ನು ಪಡೆಯುವ ವ್ಯಕ್ತಿ' ಎಂಬ ಅರ್ಥವಿದೆ. ಸಭೆ ಸಮಾರಂಭಗಳಿಗೆ 'Chief guest' ಗಳನ್ನು ಕರೆಯುವ ಸಂಪ್ರದಾಯವನ್ನು ಕನ್ನಡ ಸಮಾರಂಭಗಳು ಅನುಸರಿಸಲು ತೊಡಗಿದಾಗ ಕನ್ನಡದಲ್ಲಿ 'ಮುಖ್ಯ ಅತಿಥಿ' ಶಬ್ದದ ಪ್ರಯೋಗ ಪ್ರಾರಂಭವಾಯಿತು. ಈಗ ಅದು ಸರ್ವವ್ಯಾಪಿಯಾಗಿದೆ.

**ಮುಗಿಯಿತು =ತೀರಿತು** ಸರಿಯೆ ? ಮುಗಿ ಧಾತುವಿಗೆ ಈ ಅರ್ಥಗಳಿವೆ: - *೧. ಹೂವಿನ ದಳಗಳು ಮುಚ್ಚಿಕೊಳ್ಳು, **'ದಿನಪನಪರಾಂಬುಧಿಯನೈದಲು ವನಜ ಮುಗಿದವು'** (ಕುಮಾರವ್ಯಾಸ. ಅರಣ್ಯ ೩-೬). ಎಂಬ ಪ್ರಯೋಗವನ್ನು ನೋಡಿ. ೨. ಕಣ್ಣಿನ ರೆಪ್ಪೆ ಮುಚ್ಚು. **'ನಸು ಮುಗಿದ ಕಣ್'** (ಹರಿಶ್ಚಂದ್ರ ಕಾವ್ಯ ೫-೨೭). ೩. ಕೈಗಳನ್ನು ಜೋಡಿಸು. **'ಕೈಯ ಮುಗಿದುದು ನಿಖಿಳ ಪರಿವಾರ'** (ಕುಮಾರವ್ಯಾಸ, ದ್ರೋಣ ೧-೩೮) ೪. ಮುಕ್ತಾಯವಾಗು, ಕೊನೆಗೊಳ್ಳು. **'ಮದುವೆ ಮುಗಿದರೂ ಮದುಮಗನ್ನ ನೋಡಲಿಲ್ಲ'.*** ಗಾದೆ.

ಹೀಗೆಯೇ ತೀರು ಧಾತುವಿಗೂ ಅನೇಕ ಅರ್ಥಗಳಿವೆ. *೧. ತೀರ್ಮಾನವಾಗು ೨. ಮುಕ್ತಾಯವಾಗು ೩. ಸಾಲ ಮುಂತಾದವು ಕೊನೆಗೊಳ್ಳು.* ಈ ಅರ್ಥಗಳಲ್ಲಿ ಬೇರೆ ಬೇರೆ ಅಭಿಪ್ರಾಯವನ್ನು ಸೂಚಿಸುವ ಅವಕಾಶಗಳಿವೆ. ಆದುದರಿಂದ ಪ್ರಯೋಗ ಮಾಡುವವರು ಯಾವ ಅಭಿಪ್ರಾಯವನ್ನು ಸೂಚಿಸಬೇಕೆಂದು ಅಪೇಕ್ಷಿಸುತ್ತಾರೋ ಅದಕ್ಕೆ ಸರಿಯಾಗಿ ಶಬ್ದವನ್ನು ಆರಿಸಬೇಕು. ಒಂದು ಶಬ್ದಕ್ಕೆ ಮತ್ತೊಂದು ಶಬ್ದ ಎಲ್ಲ

ರೀತಿಯಲ್ಲಿಯೂ ಸಮನಾಗಿರುತ್ತದೆಂದು ಹೇಳಲಾಗುವುದಿಲ್ಲ. ಶಬ್ದವನ್ನು ಪ್ರಯೋಗ ಮಾಡಿದ ಸಂದರ್ಭವನ್ನು ಅರ್ಥ ಅನುಸರಿಸುತ್ತದೆ.

**ಮುಗಿಲ ಮಲ್ಲಿಗೆ** ಇದು ಆಕಾಶದ ಹೂವು, ನಕ್ಷತ್ರ. ಅಂದರೆ ಕೈಗೆ ಎಟುಕದ ವಸ್ತು, ವಿಚಾರ. ಇದನ್ನು ಮೊಲದ ಕೊಂಬಿಗೂ, ಬಂಜೆಯ ಮಗುವಿಗೂ, ಮರೀಚಿಕೆಯ ಜಲಕ್ಕೂ ಸರಿಸಮಾನವಾಗಿ ವರ್ಣಿಸುತ್ತಾರೆ ಕವಿಗಳು. ಸಿಗದ ವಸ್ತುವಿಗೆ ಹಾತೊರೆಯುವುದೂ ಮುಗಿಲ ಮಲ್ಲಿಗೆಗೆ ಬಯಸುವುದೂ ಒಂದೇ. ನೋಡಿ: ಮರೀಚಿಕೆ.

**ಮುಗುಂ** ಇದು ಅರಬ್ಬಿಯ ಮುಘ್ಘಮ್ ಎಂಬ ಶಬ್ದದಿಂದ ಬಂದಿದೆ. ಕನ್ನಡದಲ್ಲಿ ಇದಕ್ಕೆ ಅನೇಕ ಪರ್ಯಾಯ ಶಬ್ದಗಳಿವೆ. ಮಗುಂ, ಮೊಗಂ, ಮೊಗುಂ, ಮೋಗವ್, ಮೋಘಮ್ ಇತ್ಯಾದಿ. ಇದಕ್ಕೆ ಅನಿಶ್ಚಿತ, ಅಸ್ಪಷ್ಟ ಎಂಬ ಗುಣವಾಚಕದ ಅರ್ಥವಿದೆ. ಈ ಶಬ್ದಕ್ಕೆ ಬಹು ವ್ಯಾಪಕವಾದ ಪ್ರಭಾವವಿದೆ. ಒಬ್ಬರಾಡುವ ಮಾತನ್ನು ವಿವರಿಸುವಾಗ ಈ ಶಬ್ದವನ್ನು ಹೆಚ್ಚಾಗಿ ಬಳಸುತ್ತಾರೆ. ಹೇಳದಂತೆ ಹೇಳುವ ಜಾಣತನ ಇದು.

**ಮುಗ್ಗಲು** ಬೂಷ್ಟು ಹತ್ತಿ ದುರ್ನಾತ ಬಂದಿರುವ ಸ್ಥಿತಿಗೆ, ಆ ಸ್ಥಿತಿಯಲ್ಲಿರುವ ವಸ್ತುವಿಗೆ ಮುಗ್ಗಲು ಎಂದು ಉಪಯೋಗಿಸುತ್ತೇವೆ. ಮುಗ್ಗಲು ಆಹಾರವಸ್ತು ಆರೋಗ್ಯಕ್ಕೆ ಅಪಾಯವನ್ನು ತರುವುದರಿಂದ ಅದನ್ನು ಉಪಯೋಗಿಸಬಾರದು. **ಅಗ್ಗದ ಜೋಳ ಮುಗ್ಗಲು ರೊಟ್ಟಿ** ಎಂಬ ಗಾದೆಯೇ ಇದೆ.

**ಮುಜುಗರ** ಈ ಶಬ್ದದ ಮೂಲ ಗೊತ್ತಿಲ್ಲ. ಇದಕ್ಕೆ ಮುಜಗರ ಎಂಬ ಪರ್ಯಾಯ ರೂಪವೂ ಇದೆ. ೧. ಸಂಕೋಚ, ದಾಕ್ಷಿಣ್ಯ ಎಂದೂ, ೨. ಹಿಂಸೆ, ತೊಂದರೆ ಎಂದೂ ಅರ್ಥಗಳಿವೆ.

**ಮುಜರಾಯಿ** ಇದು ಹಿಂದೀ ಭಾಷೆಯ ಮೂಲಕ ಬಂದ ಶಬ್ದ. ರಾಜ್ಯಕ್ಕೆ ಬರುವ ಒಟ್ಟು ಕಂದಾಯದಲ್ಲಿ ರಾಜ್ಯದ ದೇವಸ್ಥಾನ, ಛತ್ರ ಮುಂತಾದ ಜನಹಿತ ಕಾರ್ಯಗಳ ಅಭಿವೃದ್ಧಿಗೆಂದು ಒದಗಿಸುವ ಹಣ ಎಂದು ಅದಕ್ಕೆ ಅರ್ಥ. ಅದನ್ನು ಕುರಿತು ಆಡಳಿತ ನಡೆಸುವ ಇಲಾಖೆ ಮುಜರಾಯಿ ಇಲಾಖೆ.

**ಮುಟ್ಟುಗೋಲು** ಎಂಬುದು ಇಂಗ್ಲಿಷಿನ forfeiture ಎಂಬ ಪದಕ್ಕೆ ಸಮಾನವಾದುದು. ಯಾವುದಾದರೂ ಅಪರಾಧಕ್ಕೆ ತೆರಬೇಕಾದ ದಂಡ ಇದು. ಈ ಶಬ್ದದಲ್ಲಿ ಮುಟ್ಟು ಎಂದರೆ ಆಸ್ತಿ-ಪಾಸ್ತಿ ಪದಾರ್ಥಗಳು. ಇದಕ್ಕೆ ಕೋಳು ಎಂಬ ಶಬ್ದ ಸೇರಿದೆ. ಕೊಳ್ಳು ಧಾತು ಕೋಳು ಎಂದು ನಾಮಪದವಾಗುತ್ತದೆ. ಅರ್ಥ ಕಿತ್ತುಕೊಂಡದ್ದು. ಪದಾರ್ಥಗಳನ್ನು ಬಲವಂತವಾಗಿ ಸ್ವಾಧೀನದಿಂದ ತೆಗೆದುಹಾಕುವುದು. ಇದು ಒಂದು ಶಿಕ್ಷೆ. ಈ ಕೋಳು ಎಂಬುದೇ ಗೋಲು ಆಗಿದೆ. ಮುಟ್ಟುಗೋಲು ಹಾಕಿಕೊಳ್ಳುವುದು ಒಂದು ಬಗೆಯ ಶಿಕ್ಷೆ.

**ಮುಟ್ಟು – ಹಿಡಿ** ಅವು ಸಮಾನಾರ್ಥ ಪದಗಳಲ್ಲ. ಈ ಎರಡಕ್ಕೂ ಬೇರೆ ಬೇರೆ ಅರ್ಥಗಳಿವೆ. ಮುಟ್ಟು, ಇದು ಕ್ರಿಯಾಪದವಾದರೆ, ೧. ಸ್ಪರ್ಶಿಸು, ಸೋಕು ಎಂದು ಅರ್ಥ. ಇದಕ್ಕೆ ಬೇರೆ ಅರ್ಥಗಳೂ ಇವೆ. ೨. ಸೇರು, ತಲಪು. ಉದಾ: *ನಿಮ್ಮ ಪತ್ರ ಮುಟ್ಟಿತು. ನಾವು ಮೈಸೂರನ್ನು ಮುಟ್ಟುವ ಹೊತ್ತಿಗೆ ರಾತ್ರಿಯಾಗಿತ್ತು.* ೩. ಸಮೀಪಿಸು. *ಸೈನ್ಯವು ಶತ್ರುಗಳನ್ನು ಮುಟ್ಟಿ ಮುತ್ತಿತು.* ೪. ತಿನ್ನು, ಕುಡಿ ಉದಾ: *ಮೂರು ದಿನದಿಂದ ಅವನು ಒಂದು ತುತ್ತು ಆಹಾರವನ್ನಾಗಲಿ, ಒಂದು ತೊಟ್ಟು ಹಾಲನ್ನಾಗಲಿ ಮುಟ್ಟಿಲ್ಲ* ೫. ಸೋಕು, ದೈಹಿಕ ಸಂಬಂಧವನ್ನು ಪಡೆ. ***ಇನ್ನು ಮುಟ್ಟಿದೆನಾದರೆ ನಿಮ್ಮ ರಾಣಿವಾಸದಾಣೆ.*** *(ಬಸವಣ್ಣನ ವಚನ ೮೯೭). ೬. ಕಚ್ಚು, ಹಾವು ಮುಟ್ಟಿ ಸತ್ತ ಮಗನನ್ನು ಚಂದ್ರಮತಿ ಕಂಡಳು ೭. ಸಂದಾಯವಾಗು. ನಾನು ಕೊಟ್ಟ ಸಾಲ ನನಗೆ ಮತ್ತೆ ಮುಟ್ಟಿದೆ. ಹೀಗೆ ನಾನಾರ್ಥಗಳಿವೆ.*

*ನಾಮಪದವಾದರೆ ೧. ಸ್ಪರ್ಶ, ೨. ಮೈಲಿಗೆ ೩. ಸ್ತ್ರೀಯರು ರಜಸ್ವಲೆಯರಾಗುವುದು*

*೪. ಯಾವುದಾದರೂ ಆಯುಧ ಸಾಧನ ೫. ಸಮ, ಸಮಾನ ಎಂಬ ಅರ್ಥಗಳೂ ಹೊಂದುತ್ತವೆ. ಇವಕ್ಕೆಲ್ಲ ಪ್ರಯೋಗಗಳಿವೆ. ಹಿಡಿ ಶಬ್ದವೂ ಹೀಗೆಯೇ ನಾಮಪದವಾಗಿಯೂ ಕ್ರಿಯಾಪದವಾಗಿಯೂ ಪ್ರಯೋಗವಾಗುತ್ತದೆ. ಇದರ ಮೂಲರೂಪ ಪಿಡಿ. ಕ್ರಿಯಾಪದವಾದಾಗ ಈ ಶಬ್ದಕ್ಕೆ ಸುಮಾರು ೨೦ ಅರ್ಥಗಳಿವೆ. ಮುಖ್ಯವಾಗಿ ೧. ಕೈಯಲ್ಲಿ ಗ್ರಹಿಸು, ಮುಷ್ಟಿಯೊಳಗೆ ಸೇರಿಸು ೩. ಸ್ವೀಕರಿಸು, ತೆಗೆದುಕೊಳ್ಳು ೩. ಸ್ವಾಧೀನಪಡಿಸಿಕೊಳ್ಳು ೪. ಆಶ್ರಯಿಸು ೫. ಬಂಧಿಸು, ೬. ಅನುಸರಿಸು ೭. ಗುರುತಿಸು ೮. ಊದು, ವಾಲಗ ಮುಂತಾದುವನ್ನು ಬಾಜಿಸು ೯. ಪ್ರಾರಂಭಿಸು ೧೦. ನಿಯಂತ್ರಿಸು ೧೧. ಬೇಕಾಗು ೧೨. ಒಗ್ಗು ಇತ್ಯಾದಿ. ನಾಮಪದವಾದರೆ ೧. ಹಿಡಿಯಲ್ಲಿ ಸೇರುವಷ್ಟು ವಸ್ತು ೨. ಹಿಡಿಯುವಿಕೆ ೩. ಮುಷ್ಟಿ ೪. ಪೊರಕೆ ೫. ಬಂಧನ,* ಸೆರೆ ಇತ್ಯಾದಿ. ಇದಲ್ಲದೆ ಅನೇಕ ನುಡಿಗಟ್ಟುಗಳು ಬೆಳೆದಿವೆ. ಆದುದರಿಂದ ಈ ಶಬ್ದಗಳನ್ನು ಉಪಯೋಗಿಸುವಾಗ ತುಂಬ ಎಚ್ಚರಿಕೆಯಿಂದ ಇರಬೇಕು.

**ಮುಟ್ಟುಹಾಳ** ಶಬ್ದ ಸರಿಯೋ ಮುಠ್ಠಾಳ ಸರಿಯೋ? ಕುವೆಂಪು ಅವರು ಅವರ ರಾಮಕೃಷ್ಣ ಪರಮಹಂಸ ಎಂಬ ಪುಸ್ತಕದಲ್ಲಿ ೨೦೩ ನೇ ಪುಟದಲ್ಲಿ ಈ ಶಬ್ದವನ್ನು 'ಮುಟ್ಟುಹಾಳ' ಎಂಬ ರೂಪದಲ್ಲಿ ಬಳಸಿದ್ದಾರೆ. ಕನ್ನಡದಲ್ಲಿ ಮುಟ್ಟು ಎಂದರೆ ಯಾವುದಾದರೂ ಕೆಲಸ ಮಾಡುವುದಕ್ಕೆ ಇರುವ ಸಾಧನ. ಕೆಲಸ ಮಾಡಬೇಕಾದವನು ಮುಟ್ಟುಗಳನ್ನೇ ಹಾಳು ಮಾಡಿದರೆ ಕೆಲಸ ಸಾಗುವುದೆಂತು? ಆದುದರಿಂದ ಸಾಧನೋಪಾಯಗಳನ್ನು ಹಾಳು ಮಾಡಬಾರದು ಎಂಬ ಅರ್ಥದಲ್ಲಿ ಕುವೆಂಪು ಅವರು ಈ ಶಬ್ದವನ್ನು ಉಪಯೋಗಿಸಿದ್ದಾರೆ. 'ಮನೆಹಾಳ' ಎಂಬ ಶಬ್ದವನ್ನು ನೋಡಿ. ದುಶ್ಚಟಗಳಿಗೆ ಬಿದ್ದು ಮನೆಯ ಸ್ಥಿತಿಗತಿಗಳನ್ನು ಹಾಳು ಮಾಡುವವನು ಮನೆಹಾಳ. ಇದೇ ರೀತಿ ಮುಟ್ಟುಹಾಳ ಎಂಬ ಶಬ್ದ ಬಂದಿರಬೇಕು. ಅದೇ ಬಳಿಕ ಮುಠ್ಠಾಳ ಆಗಿರಬಹುದು.

ಆದರೆ ಮುಠ್ಠಾಳ ಶಬ್ದಕ್ಕೆ ಈ ವ್ಯುತ್ಪತ್ತಿಯನ್ನು ನೀಡಲು ವಿದ್ವಾಂಸರು ಸ್ವಲ್ಪ ಹಿಂದೆಗೆಯುತ್ತಾರೆ. ಇದು ತುಂಬ ಸರಳವಾದ ಶಬ್ದ. ಆದುದರಿಂದಲೇ ಅಷ್ಟು ಸರಿಯಲ್ಲದ ವ್ಯುತ್ಪತ್ತಿ ಎನ್ನುವುದು ಅವರ ವಾದ. ತುಳು ಭಾಷೆಯಲ್ಲಿ ಈ ಶಬ್ದಕ್ಕೆ ನಮ್ಮಲ್ಲಿರುವಂತೆ ದಡ್ಡ, ಪೆದ್ದ, ಎಂಬ ಅರ್ಥಗಳೇ ಇವೆ. ಗಾಂಪರೊಡೆಯರ ಶಿಷ್ಯರ ಹೆಸರನ್ನು ಎಲ್ಲರೂ ಕೇಳಿದ್ದಾರೆ ತಾನೆ. ಇಲ್ಲದಿದ್ದರೆ ದಿ. ರಾ. ನರಸಿಂಹಾಚಾರ್ಯರ 'ನಗೆಗಡಲು' ಪುಸ್ತಕವನ್ನು ಓದಿನೋಡಿ. ಅಲ್ಲಿ ಗುರುಗಳಿಗೆ ಐವರು ಶಿಷ್ಯರಿರುವುದು ಗೊತ್ತಾಗುತ್ತದೆ. ಅವರ ಹೆಸರುಗಳು ಹೀಗಿವೆ. ಮರುಳ, ಮಂಕ, ಮುಠ್ಠಾಳ, ಮಡೆಯ, ಮಡ್ಡಿ. ಇಲ್ಲಿಯೂ ಆ ಶಬ್ದಕ್ಕೆ ಪೆದ್ದ ಎಂದೇ ಅರ್ಥ. ತಮಿಳಿನಲ್ಲಿ ಮುಟ್ಟಾಟ್ಟ ಎಂದರೆ ದಡ್ಡ, ಹೇಡಿ ಎಂಬ ಅರ್ಥಗಳಿವೆಯೆಂದು ಕಿಟ್ಟೆಲ್ ಅವರು ತಮ್ಮ ನಿಘಂಟಿನಲ್ಲಿ ಸೂಚಿಸಿದ್ದಾರೆ. ಹೀಗಿರುವುದರಿಂದ ಈ ಶಬ್ದದ ವ್ಯುತ್ಪತ್ತಿ ಇನ್ನೂ ಸಂಶೋಧನೆಗೆ ಸಾಮಗ್ರಿಯಾಗಿದ್ದರೂ ಮುಟ್ಟುಗಳನ್ನು ಹಾಳು ಮಾಡುವವನು ಎಂಬುದರ ಪ್ರಭಾವವನ್ನು ಮರೆಯುವ ಹಾಗಿಲ್ಲ.

**ಮುತ್ತೈದೆ** ಈ ಶಬ್ದದಲ್ಲಿ ಎರಡು ಭಾಗಗಳಿವೆ. ಮುತ್ತ + ಐದೆ. ಐದೆ ಎಂದರೆ ಸುಮಂಗಲಿ, ಸುವಾಸಿನಿ. ಈ ಶಬ್ದವು ಅಯಿದೆ, ಎಯ್ದೆ, ಅಯ್ದೆ ಎಂಬ ಬೇರೆ ಮೂರು ರೂಪಗಳಲ್ಲಿಯೂ ಕನ್ನಡ ಕಾವ್ಯಗಳಲ್ಲಿ ಪ್ರಯೋಗವಾಗಿದೆ. ಐದೆ ಶಬ್ದವು ಅಚಿರಾ < ಅಯಿದೆ ವ್ಯುತ್ಪತ್ತಿ ಹೊಂದಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದು ವಿಚಾರಣೀಯ. ಇದು ದೇಶ್ಯ ಶಬ್ದವೇ ಆಗಿರುವ ಸಾಧ್ಯತೆಯಿದೆ. ಮುತ್ತ ಎಂದರೆ ಮುದುಕಿಯಾದ, ಮುಪ್ಪಿನ ಎಂದರ್ಥ. ಅಲ್ಲದೆ ಮುಪ್ಪಿನ ವ್ಯಕ್ತಿ ಎಂದೂ ಅರ್ಥವಿದೆ. ಈ ಶಬ್ದವು ಮುದು = ಮುಪ್ಪನ್ನು ಹೊಂದು ಎಂಬ ಧಾತುವಿನಿಂದ ಬಂದುದು. ಆದುದರಿಂದ

ಮುತ್ತೈದೆ ಎಂದರೆ ವೃದ್ಧಳಾದ ಸುಮಂಗಲಿ ಎಂದು ಸ್ಪಷ್ಟವಾದ ಅರ್ಥ. ಮುತ್ತಜ್ಜ, ಮುತ್ತಜ್ಜಿ, ಮುತ್ತಬ್ಬೆ, ಮುತ್ತಪ್ಪ ಶಬ್ದಗಳು ಈಗಲೂ ಬೇರೆ ಬೇರೆ ಪ್ರದೇಶಗಳಲ್ಲಿ ವ್ಯಾಪಕವಾಗಿ ಪ್ರಯೋಗದಲ್ಲಿವೆ.

ಆದರೆ ಈಗ ಮುತ್ತೈದೆ ಎಂಬ ಶಬ್ದವನ್ನು ಉಪಯೋಗಿಸುವಾಗ ಆ ಶಬ್ದದಲ್ಲಿ ಮುಪ್ಪಿನ ಅರ್ಥವಿದೆ ಎಂಬುದನ್ನು ಮರೆತು ಉಪಯೋಗಿಸುತ್ತೇವೆ. ಕೇವಲ ಸುಮಂಗಲಿ ಎಂಬಷ್ಟೇ ಅರ್ಥಕ್ಕೆ ಉಪಯೋಗಿಸುತ್ತೇವೆ. ಮುದುಕಿಯಾದ ಸುಮಂಗಲಿಗೆ ಮುಪ್ಪಿನ ಮುತ್ತೈದೆ ಎಂದು ಹೇಳುತ್ತೇವೆ. ಮದುವೆಯಾಗದ ಹುಡುಗಿಯರು ಮನೆಗೆ ಬಂದರೆ ಅವರನ್ನು ಪುಟ್ಟ ಮುತ್ತೈದೆ, ಚಿಕ್ಕ ಮುತ್ತೈದೆ ಎಂದು ಕರೆಯುತ್ತೇವೆ. ನಮ್ಮ ಸಂಸ್ಕೃತಿಯಲ್ಲಿ ನಾವು ಸೌಮಂಗಲ್ಯಕ್ಕೆ ಕೊಡುವ ಪ್ರಾಧಾನ್ಯ ಅಷ್ಟು ಪ್ರತಿಷ್ಠೆಯುಳ್ಳದ್ದು.

**ಮುತ್ಸದ್ದಿ** ಎಂದರೆ ರಾಜಕಾರಣಿ. ರಾಜಕಾರಣದಲ್ಲಿ ವ್ಯವಹಾರ ಚಾತುರ್ಯವುಳ್ಳವನು. ಇದು ಅರಬ್ಬಿಯ ಮುತ್ಸಹೀ ಎಂಬ ಶಬ್ದದಿಂದ ಮರಾಠಿಗೆ ಬಂದಿದೆ. ಕನ್ನಡದಲ್ಲಿ ವಿಚಾರವಂತ, ಚಾಣಾಕ್ಷ, ದೂರದೃಷ್ಟಿಯುಳ್ಳವ ಎಂತಲೂ ಧೂರ್ತ, ವಂಚಕ, ಮೋಸಗಾರ ಎಂಬ ಅರ್ಥದಲ್ಲೂ ಬಳಸುತ್ತಾರೆ. ಎರಡನೆಯ ರೀತಿಯ ಅರ್ಥ ಕೇವಲ ಆಲಂಕಾರಿಕವಾದುದು, ಕೇವಲ ಹಾಸ್ಯಕ್ಕಾಗಿ ಉಪಯೋಗಿಸುವುದು.

**ಮುದ್ದಾಂ** ಅರಬ್ಬಿ ಭಾಷೆಯಲ್ಲಿ ಮುದ್ದಾವ್ ಎಂಬುದನ್ನು ಅವ್ಯಯವಾಗಿ ಉಪಯೋಗಿಸುತ್ತಾರೆ. ಸ್ವಂತವಾಗಿ ಎಂಬುದು ಅದರ ಅರ್ಥ. ಮುದ್ದಾಂ ಎಂಬುದು ನಾಮಪದ. ಸ್ವಂತವಾದುದು ಎಂದರ್ಥ. ನಮಗೆ ಮರಾಠೀ ಭಾಷೆಯ ಮೂಲಕ ಬಂದಿದೆ. ನಮ್ಮಲ್ಲಿ ಮುದ್ದಾಂ = ಸ್ವಂತ ಸೇವಕನೊಂದಿಗೆ ಎಂಬರ್ಥದಲ್ಲಿ ಪ್ರಯೋಗವಾಗುತ್ತದೆ.

**ಮುನ್ನಾದಿನ** ಮುಂ, ಮುನ್ನ ಎಂಬ ಕನ್ನಡ ಶಬ್ದಕ್ಕೆ ಮುಂಚೆ ಎಂದರ್ಥ. ಮುನ್ನಿನ ದಿನ ಎಂದರೆ ಯಾವುದೋ ಸಂದರ್ಭಕ್ಕೆ ಹೊಂದಿದಂತೆ ಮಾತನಾಡುವಾಗ ಅದರ ಮುಂಚಿನ ದಿನ, ಕಳೆದು ಹೋದದಿನ ಎಂದರ್ಥ. ಮುನ್ನಾದಿನ ಆ ಶಬ್ದದ ಆಡುಮಾತಿನ ರೂಪ.

**ಮುನಿ** ಎಂದರೆ ಮೌನವ್ರತವನ್ನು ಧರಿಸಿದವನು, ತಪಸ್ವಿ. ಕಾಮ, ಕ್ರೋಧ, ಭಯಗಳನ್ನು ತ್ಯಜಿಸಿದವನು. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ದರ್ಭೆ ೨. ಪ್ರಿಯಾಲವೆಂಬ ಗಿಡ ೩. ಜಿನ ೪. ಅಗಸ್ತ್ಯ ಮಹರ್ಷಿ ೫. ಬುದ್ಧ. ಇದು ಸಂಸ್ಕೃತ ಶಬ್ದ.*

**ಮುನ್ಸಿಫ್** ಅರಬ್ಬಿ ಶಬ್ದ. ಆ ಭಾಷೆಯಲ್ಲೂ ಇದೇ ರೂಪದಲ್ಲಿದೆ. ಅರ್ಥ ನ್ಯಾಯಾಧೀಶ.

**ಮುರ್ಮುರ** ಇದೊಂದು ಸಂಸ್ಕೃತ ಶಬ್ದ. ಇದಕ್ಕೆ ಬತ್ತದ ಹೊಟ್ಟು ಮುಂತಾದುವನ್ನು ಹಾಕಿ ಮಾಡಿದ ಬೆಂಕಿ ಎಂದರ್ಥ. ಇದೇ ತುಷಾಗ್ನಿ, ಈ ಶಬ್ದವನ್ನು ಕನ್ನಡದಲ್ಲಿ ಹೆಚ್ಚಾಗಿ ಉಪಯೋಗಿಸುವುದಿಲ್ಲ. ಸಂಸ್ಕೃತದಲ್ಲಿ ಇದಕ್ಕೆ ಇನ್ನೂ ಬೇರೆ ಬೇರೆ ಅರ್ಥಗಳಿವೆ. *೧. ಸೂರ್ಯನ ಕುದುರೆ, ೨. ಮನ್ಮಥ ೩. ಹಸುವಿನ ಗಂಜಲ ೪. ಸಗಣಿ. ಸಂಸ್ಕೃತದ 'ವೈಜಯಂತೀ ಮೇದಿನಿ ಕೋಶ' ಮುಂತಾದ ನಿಘಂಟುಗಳಲ್ಲಿ ಈ ಶಬ್ದಕ್ಕೆ ಅರ್ಥಗಳನ್ನು ಹೇಳಿದ್ದಾರೆ.* ವಿದ್ವಾಂಸರ ಮಾತುಕತೆಗಳಲ್ಲಿ ವಾದ ವಿವಾದಗಳಲ್ಲಿ ಈ ಶಬ್ದ ಆಗಾಗ ಪ್ರಯೋಗವಾಗುತ್ತದೆ. ಕನ್ನಡದ ಕಾವ್ಯಗಳಲ್ಲಿ ಇದು ಕಂಡುಬಂದಿಲ್ಲ.

**ಮುಯ್ಯಿ** ಎಂಬುದು ಗ್ರಾಮ್ಯದ ರೂಪ. ಇದರ ಸರಿಯಾದ ರೂಪ ಮುಯಿ. ಇದು ಕೂಡ ಮೂಲದಲ್ಲಿ ಮುಯ್. ಮುಯ್ಯಿ, ಮುಯ್ ಎಂಬ ಇತರ ಪರ್ಯಾಯ ರೂಪಗಳೂ ಇವೆ. ಕಾಣಿಕೆ, ಉಡುಗೊರೆ, ಬಹುಮಾನ, ಪ್ರತಿಫಲ, ಗೌರವ, ಸತ್ಕಾರ ಎಂಬ ಅರ್ಥಗಳಿವೆ. ಎಲ್ಲ ಅರ್ಥಗಳಿಗೂ ಕಾವ್ಯಪ್ರಯೋಗಗಳಿವೆ. ಇದು ಕನ್ನಡದ ಶಬ್ದ.

**ಮುಯ್ಯಿಗೆ ಮುಯ್ಯಿ** ಎಂಬ ಒಂದು ನುಡಿಗಟ್ಟು ತುಂಬ ಜನಪ್ರಿಯವಾದುದು. ಇದಕ್ಕೆ

೧. ಬಂದ ಉಡುಗೊರೆಗೆ ಸರಿಯಾದ ಪ್ರತಿ ಉಡುಗೊರೆಯನ್ನು ನೀಡುವುದು ೨. ಸೇಡು ತೀರಿಸಿಕೊಳ್ಳುವುದು ಎಂಬ ಎರಡು ಮುಖ್ಯ ಅರ್ಥಗಳಿವೆ.

**ಮುವ್ವತ್ತು - ಮೂವತ್ತು** ಮೂರು + ಪತ್ತು = ಮುಪ್ಪತ್ತು ಎಂಬುದು ಈ ಶಬ್ದದ ಮೂಲ. ಮುಪ್ಪತ್ತು ಎಂಬುದು ಮುಂದೆ ಮುವ್ವತ್ತು ಆಗುತ್ತದೆ. ಅಲ್ಲಿಂದ ಮುಂದೆ ಅದು ಪಡೆಯುವ ರೂಪ ಮೂವತ್ತು. ಪಕಾರಕ್ಕೆ ವಕಾರ ಬರುವುದೂ ಸಾಮಾನ್ಯ. ಅದರ ಹಿಂದೆ ದೀರ್ಘ ಬರುವುದೂ ಭಾಷೆಗಳು ಬೆಳೆಯುವಾಗ ಆಗುವ ಮುಖ್ಯ ವ್ಯತ್ಯಾಸಗಳಲ್ಲಿ ಸೇರುತ್ತವೆ. ಇದು ಬೆಳೆದ ದಾರಿ: ಮುಪ್ಪತ್ತು > ಮುವ್ವತ್ತು > ಮೂವತ್ತು.

**ಮುಸಲಧಾರೆ** ಮುಸಲ ಎಂದರೆ ಒನಕೆ. ಮಳೆ ಹೊಯ್ಯುವಾಗ ನೀರಿನ ಧಾರೆ ತುಂಬ ದಪ್ಪವಾಗಿದ್ದರೆ, ನೀರಿನ ಸುರಿತ ಅಗಾಧವಾಗಿದ್ದರೆ ಅಂಥ ಮಳೆಗೆ ಮುಸಲಧಾರೆ ಎಂದು ಕರೆಯುತ್ತಾರೆ. ಇದರಲ್ಲಿ ತುಂಬ ಉತ್ಪ್ರೇಕ್ಷೆಯಿದೆ. ಆದರೆ ಸುಂದರವಾದ ನುಡಿಗಟ್ಟು. ಕುಂಭದ್ರೋಣ ಎಂಬ ಮತ್ತೊಂದು ಶಬ್ದವಿದೆ. ಇದಕ್ಕೆ ಕುಂಭ = ಕೊಡವನ್ನು ಎತ್ತಿ ಸುರಿದಂತೆ ಸುರಿಯುವ ಮಳೆ. ದ್ರೋಣ ಎಂದರೆ ದೋಣಿಯಾಕಾರದ ಪಾತ್ರೆ. ನೀರಿನ ಕೊಡವನ್ನು ಎತ್ತಿ ದ್ರೋಣದಲ್ಲಿ ಸುರಿದರೆ ಹೇಗೆ ಧಾರೆ ಬೀಳುತ್ತದೋ ಹಾಗೆ ಬೀಳುವ ಮಳೆ ಎಂದು ಅದಕ್ಕೆ ಅರ್ಥ. ಈ ಶಬ್ದಗಳನ್ನು ಅನೇಕರು ಕಾವ್ಯಗಳಲ್ಲಿ, ಕತೆಗಳಲ್ಲಿ ಉಪಯೋಗಿಸಿದ್ದಾರೆ. ದಿ.ಎಂ. ಗೋಪಾಲಕೃಷ್ಣ ಅಡಿಗರು ಅವರ ಅನಾಥೆ ಎಂಬ ಪುಸ್ತಕದಲ್ಲಿ '**ಮುಸಲಧಾರೆಯಾದ ಮಳೆ. ಪರಿಚಯವಿಲ್ಲದ ಸ್ಥಳ. ಅವಳು ಎಲ್ಲಿಗೆ ತಾನೇ ಹೋದಾಳು ?**' ಎಂದು ಉಪಯೋಗಿಸಿದ್ದಾರೆ. ಬೆಳ್ಳಾವೆ ವೆಂಕಟ ನಾರಾಯಣಪ್ಪ ಅವರು ಗುಣಸಾಗರ ಎಂಬ ಪುಸ್ತಕದಲ್ಲಿ '**ಬಿರುಗಾಳಿಯೆದ್ದು ಕುಂಭದ್ರೋಣದಂತೆ ಮಳೆ ಸುರಿಯಲಾರಂಭಿಸಿತು**' ಎಂದು ಬರೆದಿದ್ದಾರೆ.

**ಮುಹೂರ್ತ** 'ಮುಹೂರ್ತ' ಎಂಬುದು ಸಂಸ್ಕೃತ ಶಬ್ದ. ಇದಕ್ಕೆ ಸುಮಾರು ನಲವತ್ತೆಂಟು ನಿಮಿಷಗಳ ಅವಧಿ ಎಂದರ್ಥ. 'ಮಹೂರ್ತ' ತಪ್ಪು. ಉಪಯೋಗಿಸಬಾರದು.

**ಮೂಗಿಗಿಂತ ಮೂಗುತಿ ಭಾರ** ಎಂಬುದು ಗಾದೆ ಮಾತು. ಇದು ಅಲಂಕಾರದ ವಸ್ತು ಅಥವಾ ಒಡವೆ, ಅಲಂಕರಿಸುವ ದೇಹ ಭಾಗಕ್ಕಿಂತ ಹೆಚ್ಚು ಪ್ರಧಾನವಾದರೆ ಒಡವೆ ಧರಿಸುವ ಉದ್ದೇಶವೇ ನೆರವೇರಿದಂತೆ ಆಗುವುದಿಲ್ಲ ಎಂಬ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತದೆ. ಇದೇ ಅರ್ಥ ವ್ಯಾಪಕವಾಗಿ ಮಿತಿಮೀರಿ ಮಾಡುವ ಎಲ್ಲ ಆಡಂಬರದ ವ್ಯವಹಾರಕ್ಕೂ ಅನ್ವಯವಾಗುತ್ತದೆ. ಹಿತಮಿತಿಯನ್ನು ಮೀರಿದ ಎಲ್ಲ ಅಹಿತ - ಅಮಿತ ವ್ಯವಹಾರಗಳಿಗೂ ಹೊಂದುತ್ತದೆ. ತುಂಬ ಅರ್ಥವತ್ತಾದ ಗಾದೆ ಇದು.

**ಮೂರಾಬಟ್ಟೆ** ಇದು ಮರಾಠಿ ಮಾತನಾಡುವವರು ಹೆಚ್ಚಾಗಿ ವಾಸವಾಗಿರುವ ಕಡೆ ಉಪಯೋಗದಲ್ಲಿದೆ. ಮರಾಠೀ ಭಾಷೆಯಲ್ಲಿ ಮೂರಾಬಟ್ಟೀ ಎಂಬ ಶಬ್ದವಿದೆ. ಅದಕ್ಕೆ ಸರ್ವನಾಶ, ಹಾಳು ಎಂದರ್ಥ. ಅದೇ ಕನ್ನಡದಲ್ಲಿ ಮೂರಾಬಟ್ಟೆ ಆಗಿದೆ.

**ಮೂರೂ ಬಿಟ್ಟವನು ಊರಿಗೆ ದೊಡ್ಡವನು** ಈ ಗಾದೆ ಹೇಳಿಕೆಯಲ್ಲ, ವ್ಯಂಗ್ಯೋಕ್ತಿ. ಕಚ್ಚೆ, ಕೈ, ಬಾಯಿ ಈ ಮೂರು ಶುದ್ಧವಾಗಿಲ್ಲದವನು ಊರಿಗೆ ಹೇಗೆ ತಾನೇ ದೊಡ್ಡವನಾಗುತ್ತಾನೆ. ಅಂಥವನೇನಾದರೂ ದುರದೃಷ್ಟವಶದಿಂದ ಊರಿಗೆ ಮುಖ್ಯನಾದರೆ ಅವನನ್ನು ಹಾಸ್ಯ ಮಾಡಲು ಆಡುವ ಮಾತು ಇದು. ಇಂಥ ಸನ್ನಿವೇಶ ಊರಿನವರಿಗೂ ಗೌರವ ತರುವುದಿಲ್ಲ. ಇದೊಂದು ದುರ್ವ್ಯವಸ್ಥೆ. ಇದರ ಛಾಯೆ ಈ ಮಾತಿನಲ್ಲಿ ಅಡಗಿದೆ.

**ಮೂರ್ಖತನ- ಮೂರ್ಖತ್ವ** ವಿದ್ಯಾರ್ಥಿಗಳಿಗಾಗಲೀ ವಿದ್ಯಾರ್ಥಿನಿಯರಿಗಾಗಲೀ ಇದು ಎರಡೂ ಸರಿಯಲ್ಲ. ಅವರಿಗೆ ಒಂದೇ ಸರಿ. ಅದು ಜಾಣತನ. ಆದರೆ ವ್ಯಾಕರಣದ ದೃಷ್ಟಿಯಿಂದ ಆ ಶಬ್ದಗಳನ್ನು ವಿವರಿಸುತ್ತೇನೆ. ಮೂರ್ಖ ಎಂಬುದು ಸಂಸ್ಕೃತ ಶಬ್ದ.

ಸಂಸ್ಕೃತ ವ್ಯಾಕರಣದ ಪ್ರಕಾರ ಮೂರ್ಖನ ಭಾವ ಮೂರ್ಖತ್ವ. ಇದಕ್ಕೆ ಮೂರ್ಖತಾ ಎಂಬ ಸ್ತ್ರೀಲಿಂಗದ ರೂಪವೂ ಇದೆ. ಇವು ಎರಡೂ ಸರಿ. ಜೊತೆಗೆ ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಹತ್ತಿಸಿ ಭಾವನಾಮವನ್ನು ಮಾಡಬಹುದು. ಆಗ ಮೂರ್ಖ + ತನ = ಮೂರ್ಖತನ. ಇದೂ ಸರಿಯಾದ ರೂಪವೇ. ಆದರೆ ಹೀಗೆ ಕನ್ನಡ ಶಬ್ದಗಳಿಗೆ ಸಂಸ್ಕೃತ ಪ್ರತ್ಯಯಗಳನ್ನು ಸೇರಿಸುವುದು ತಪ್ಪಾಗುತ್ತದೆ. ಜಾಣನ ಭಾವ ಜಾಣತ್ವ ಆಗುವುದಿಲ್ಲ. ಪೆದ್ದನ ಭಾವ ಪೆದ್ದತ್ವ ಆಗುವುದಿಲ್ಲ. ಜಾಣತನ, ಪೆದ್ದತನ ಆಗುತ್ತದೆ.

ಭಾಷೆ ಬೆಳೆಯುವ ಗುಣವುಳ್ಳದ್ದು. ಹೀಗೆ ವ್ಯಾಕರಣ ವಿಧಿಗಳಿದ್ದರೂ, ಅವುಗಳನ್ನು ಮುರಿದು ಜನ ಶಬ್ದಗಳನ್ನು ನಿರ್ಮಾಣ ಮಾಡಿಬಿಡುತ್ತಾರೆ. ಕೆಲವು ಉಳಿದುಬಿಡುತ್ತವೆ. ಉದಾ: ನಂಟಸ್ಥ, ನಂಟಸ್ಥಿಕೆ. ನಂಟಸ್ತಿಕೆ ಎಂಬ ರೂಪವೂ ಪ್ರಯೋಗದಲ್ಲಿದೆ.

**ಮೂಲಕ, ಮುಖಾಂತರ** ಸಾಮಾನ್ಯವಾಗಿ ಜನರು ಈ ಎರಡೂ ಶಬ್ದಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸುತ್ತಾರೆ. ಇದಕ್ಕೆ ಕಾರಣವಿಲ್ಲದಿಲ್ಲ. ಈ ಎರಡು ಶಬ್ದಗಳಲ್ಲಿಯೂ ಮತ್ತೊಬ್ಬರ ಪ್ರಭಾವವನ್ನು ಗುರುತಿಸುವ ಸಮಾನ ಧರ್ಮವಿದೆ. ಇದರಿಂದಲೇ ಈ ಎರಡಕ್ಕೂ ಒಂದು ಬಗೆಯ ಗೊಂದಲದ ಪರಿಸರ ನಿರ್ಮಾಣವಾಗಿದೆ. ಈ ಶಬ್ದಗಳ ಅರ್ಥವನ್ನು ವ್ಯಾಪಕವಾಗಿ ಮಾಡಿ ಬೇರೆ ಬೇರೆ ಅರ್ಥಗಳನ್ನು ಸೆಳೆಯುವ ಸಾಧ್ಯತೆಯೂ ಇದೆ. ನಾನು ಮತ್ತು ನನ್ನ ಕೆಲವರು ಸ್ನೇಹಿತರು ಈ ಬಗ್ಗೆ ಬಹು ಹಿಂದೆಯೇ ಮಾಡಿಕೊಂಡ ತೀರ್ಮಾನವನ್ನು ಇಲ್ಲಿ ಪ್ರಕಟಪಡಿಸುತ್ತೇನೆ. ಮೂಲಕ ಒಂದು ಸಂಸ್ಕೃತ ಶಬ್ದ. ಒಂದು ನಾಮಪದ. ಇಲ್ಲಿಂದ ಉತ್ಪತ್ತಿಯಾದುದು, ಇಲ್ಲಿಂದ ಮೊದಲಾದುದು ಎಂದು ಆ ಶಬ್ದಕ್ಕೆ ಅರ್ಥ. ಮೂಲಕದ ವ್ಯುತ್ಪತ್ತಿಯೂ ಮೂಲದ ಮೂಲಕವೇ! ಆದರೆ ಸಂಸ್ಕೃತದಲ್ಲಿ ಈ ಶಬ್ದವು ವ್ಯಾಪಕವಾಗಿ ಪ್ರಯೋಗದಲ್ಲಿಲ್ಲ. ಕನ್ನಡದಲ್ಲಿ ಅವ್ಯಯದಂತೆ ಬಹಳವಾಗಿ ಚಲಾವಣೆಯಲ್ಲಿದೆ. ನೀರು ಕೊಳವೆಯ ಮೂಲಕ ನಲ್ಲಿಗೆ ಬರುತ್ತದೆ. ಸುರಂಗದ ಮೂಲಕ ನದಿಯ ನೀರು ಹರಿಯುವಂತೆ ಮಾಡಿದ್ದಾರೆ. ಹಿರಿಯ ಅಧಿಕಾರಿಗಳನ್ನು ನೋಡಬೇಕಾದರೆ ಇವರ ಮೂಲಕ ಹೋಗಬೇಕು. ಇಲ್ಲೆಲ್ಲ ಮಾರ್ಗವಾಗಿ, ತೋರಿದ ದಾರಿಯಲ್ಲಿ ಎಂಬ ಅರ್ಥ ಬರುತ್ತದೆ.

ನಾನು ಅಭಿವೃದ್ಧಿ ಹೊಂದಿದುದು ಇವರ ಮೂಲಕ — ಎಂದರೆ ಅವರು ತೋರಿದ ಮಾರ್ಗದಿಂದ ಎಂದೇ ಅರ್ಥ. ಈ ಅರ್ಥದಲ್ಲಿ ಮೂಲಕ ಶಬ್ದವನ್ನು ಉಪಯೋಗಿಸುವುದು ಸರಿ. ಈಗೀಗ ಮೂಲಕ ಶಬ್ದಕ್ಕೆ ಮಧ್ಯಸ್ಥ, ದಳ್ಳಾಳಿ ಎಂಬರ್ಥ ಹೆಚ್ಚಾಗಿರುವಂತೆ ಕಾಣುತ್ತದೆ. ಶ್ರೀ ಗೋಪಾಲಕೃಷ್ಣ ಅಡಿಗರ ಕವನ ಮೂಲಕ ಮಹಾಶಯರು ಈ ಪ್ರಭಾವವನ್ನು ಉಂಟು ಮಾಡಿರಬಹುದು. ಅದೊಂದು ಸೊಗಸಾದ ವ್ಯಂಗ್ಯಾರ್ಥವುಳ್ಳ ಕವನ. ಅದರ ಒಂದು ಭಾಗವನ್ನು ಇಲ್ಲಿ ಬರೆಯುತ್ತೇನೆ:

*ಕತ್ತಿನ ಮೇಲೆ ಸ್ವಂತ ತಲೆ ಇದ್ದೂ ಕೂಡ*
*ಬೇಸಿರ್ ಹೆಸರೂ ಗಿಟ್ಟಿಸುವ ಕಲ್ಪನೆಯ ಕಾಕು.*
*ಪರಕಾಯ ಪ್ರವೇಶ ಪ್ರವೀಣ ಹೆಣ.*
*ನಿನಗೆ ಸ್ವಂತ ಬದುಕೆಂಬುದೇ ಇಲ್ಲ.*
*ಭಯ. ಬದುಕಿನಲ್ಲಿ ಸಿಕ್ಕಿಕೊಳ್ಳುವುದಕ್ಕೆ*
*ಕನಸಿನಲಿ ಕಂಡ ಶಿಖರದ ಕಡೆ ಹೆಜ್ಜೆ ಹಾಕುವುದಕ್ಕೆ - ಮೂಲಕವೇ*
*ಬದುಕುವಂಥವರು.*

ಈ ಕವನದ ವ್ಯಂಗ್ಯದಲ್ಲಿ ಮೂಲಕ ಶಬ್ದದ ಹೊಸ ಅರ್ಥ ವ್ಯಾಪ್ತಿ ಸ್ಪಷ್ಟ. ತಾನು ಮಾಡಲಾಗದ್ದನ್ನು ಇತರರ ಮೂಲಕ ಮಾಡಿಸುವ ಸರ್ಕಸ್ಸಿನ ಚಿತ್ರ ಇಲ್ಲಿದೆ.

**ಮುಖಾಂತರ** ಶಬ್ದದಲ್ಲಿ ಮುಖ ಎಂಬ ಭಾಗ ಮುಖ್ಯವಾದುದು. ಮುಖ ಎಂಬ ಶಬ್ದಕ್ಕೆ ಬಾಯಿ, ವದನ, ದಿಕ್ಕು ಮುಂತಾಗಿ ಬೇರೆ ಬೇರೆ ಅರ್ಥಗಳಿವೆ. ಅಂತರ ಶಬ್ದಕ್ಕೆ ಹಾಗೆಯೇ ಬೇರೆ ಬೇರೆ ಅರ್ಥಗಳಿವೆ. ಒಳಗು, ಉದ್ದೇಶ, ಗೌರವ ಇತ್ಯಾದಿ. **ಅವರ ಮುಖಾಂತರ ನನ್ನ ಕೆಲಸವಾಯಿತು** ಎಂಬ ವಾಕ್ಯದಲ್ಲಿ ಅವರು ಆಡಿದ ಮಾತಿನ ಪ್ರಭಾವದಿಂದ ನನ್ನ ಕೆಲಸವಾಯಿತು ಎಂದರ್ಥ. ಅವರಿಗಿರುವ ಗೌರವದಿಂದ ಎಂದೂ ಮಥಿತಾರ್ಥ.

ಕೊಳವೆಯ ಮುಖಾಂತರ ನೀರು ಬಂತು. ಸುರಂಗದ ಮುಖಾಂತರ ನದಿಯ ನೀರು ಹರಿಯುತ್ತದೆ ಎಂದು ಹೇಳಿದರೆ ತಪ್ಪೇನೂ ಆಗುವುದಿಲ್ಲ. ಜನಸಾಮಾನ್ಯರು ಮುಖಾಂತರ, ಮೂಲಕ ಎಂಬ ಶಬ್ದಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸುತ್ತಿರುವುದನ್ನು ತಿಳಿದೂ ತಿಳಿದೂ ನಮ್ಮ ಪ್ರಯತ್ನ ಪ್ರಯತ್ನವಾಗಿಯೇ ಉಳಿದುಬಿಡಬಹುದು. ಇದೊಂದು ಪ್ರಯತ್ನ ಅಷ್ಟೆ! ಸರಿಯೆಂಬ ಹಟ ಏನೂ ಇಲ್ಲ! ಪ್ರಯೋಗ ಶರಣರು ನಾವು.

**ಮೂಸೆ** ಸಂಸ್ಕೃತದ ಮೂಷಾ ಎಂಬ ಶಬ್ದದ ತದ್ಭವ. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ, ಮಣ್ಣಿನಿಂದ ಮಾಡಿದ ಸಾಧನ. ಕನ್ನಡದಲ್ಲಿ ಇದಕ್ಕೆ ಅನೇಕ ಪರ್ಯಾಯ ರೂಪಗಳಿವೆ. Crucible ಎಂಬುದು ಇಂಗ್ಲಿಷ್ ಶಬ್ದ.

**ಮೂಳ** ಎಂಬ ಶಬ್ದಕ್ಕೆ ಅಂಗವಿಕಲ. ಯಾವುದಾದರೂ ಅಂಗವನ್ನು ಕಳೆದುಕೊಂಡವನು ಎಂದು ಅರ್ಥ. ಅದೇ ಮೂಳ್ಯಾ ಆಗಿದೆ. ಅದು ಕನ್ನಡಪದ. ಹೆಂಗಸರು ಪುರುಷನನ್ನು ಮೂಳ್ಯ ಎಂದು ಕರೆದರೆ ಅವನಿಗೆ ಯಾವ ಅಂಗವಿಕಲವಾಗಿದೆ ಎಂದು ಊಹಿಸುವುದು ಕಷ್ಟವೇನಲ್ಲ. ಆದುದರಿಂದ ಈ ಸಂದರ್ಭದಲ್ಲಿ ದಿಕ್ಕೇಡಿ, ಸಂನ್ಯಾಸಿ, ಪರದೇಶಿ ಮುಂತಾದ ಯಾವ ಶಬ್ದ ಉಪಯೋಗಿಸಿದರೂ ಅದಕ್ಕೆ ಆ ಸಂದರ್ಭದಲ್ಲಿ ನಪುಂಸಕ, ಷಂಡ ಎಂದೇ ಅರ್ಥ.

**ಮೂಳೆಚಕ್ಕಳ** ಇದು ಎರಡು ಶಬ್ದಗಳ ದ್ವಂದ್ವ ಸಮಾಸ. ಯಾರಾದರೂ ದೇಹದಲ್ಲಿ ತುಂಬ ಕೃಶರಾಗಿದ್ದರೆ, ರೋಗದಿಂದ ಮಾಂಸ ಖಂಡಗಳೆಲ್ಲ ಲೋಪಗೊಂಡು ತುಂಬ ನಿರ್ಬಲರಾಗಿದ್ದರೆ ಅಂಥವರನ್ನು ವರ್ಣಿಸುವ ಶಬ್ದ. ಬರಿಯ ಮೂಳೆಯ ಮೇಲೆ ಚರ್ಮವನ್ನು ಅಂಟಿಸಿಕೊಂಡಂತೆ ಕಾಣುವ ದೇಹದ ಮನುಷ್ಯ ಎಂದರ್ಥ.

**ಮೃತಿಪತ್ರ** Death Certificate ಎಂಬೀ ಶಬ್ದಕ್ಕೆ ಮೃತಪತ್ರ - ಮೃತ್ಯಪತ್ರ - ಮೃತ್ಯುಪತ್ರ ಎಂಬ ಮೂರೂ ಶಬ್ದಗಳು ಸರಿಹೊಂದುವುದಿಲ್ಲ. ಮೃತ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಸಾವು ಎಂಬ ಅರ್ಥವಿದ್ದರೂ ಅದಕ್ಕೆ ಬೇರೆ ಅರ್ಥಗಳೂ ಇವೆ. ಕನ್ನಡದಲ್ಲಿ ಅದನ್ನು ಸಾವು ಎಂಬ ಅರ್ಥದಲ್ಲಿ ಹೆಚ್ಚಾಗಿ ಉಪಯೋಗಿಸುವುದಿಲ್ಲ. ಮೃತ್ಯು ಎಂಬುದು ಅಪಶಬ್ದ. ಮೃತ್ಯು ಎಂದರೆ ಪ್ರಧಾನವಾಗಿ ಯಮ, ಸಾವಿನ ದೇವತೆ. ಅದಕ್ಕೂ ಸಾವು ಎಂಬುದು ಎರಡನೆಯ ಅರ್ಥ. ಹೀಗಿರುವುದರಿಂದ ಮೃತಿಪತ್ರ ಎಂಬುದು ಸರಿಯಾಗುತ್ತದೆ. ಏಕೆಂದರೆ ಮೃತಿ ಎಂದರೆ ಸಾವು ಎಂಬುದು ಒಂದೇ ಅರ್ಥ. ಅದರಿಂದ ಯಾರಾದರೂ ತಮ್ಮ ಸಾವಿನ ಬಗ್ಗೆ ಬರೆದ ಪತ್ರ ಎಂಬುದು ಖಚಿತವಾಗುತ್ತದೆ. ಮೃತಪತ್ರ ಎಂಬುದಕ್ಕೆ ಸತ್ತವನು ಬರೆದ ಪತ್ರ ಎಂದು ಅರ್ಥವಾಗುತ್ತದೆ. ಅದು ಉಯಿಲು. ಮೃತಿ ದಾಖಲೆ = Death Certificate.

**ಮೃದಂಗ** ಶಬ್ದವು ಮೃದ್ ಎಂಬ ಶಬ್ದದಿಂದ ಬಂದುದು. ಇದಕ್ಕೆ ಅಮರಸಿಂಹನ ಗ್ರಂಥಕ್ಕೆ ಬರೆದ ಒಂದು ಟೀಕೆ ಆಧಾರ. **ಮೃದ್ಯತ ಇತಿ ಮೃದಂಗಃ** ಅಲ್ಲದೆ 'ವಿನಯ ವಿಜಯ' ಎಂಬುವನು ಭದ್ರಬಾಹುವಿನ ಕಲ್ಪಸೂತ್ರಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾ ಪಣವ ಮತ್ತು

ಮೃದಂಗವು ಮಣ್ಣಿನಿಂದ ಮಾಡಿದುವು ಎಂದು ಹೇಳುತ್ತಾನೆ. **ಪಣವೋ ಮೃತ್ಪಟಃ ಮುರಜೋ ಮರ್ದಲಃ ಮೃದಂಗೋ ಮೃಣ್ಮಯಃ** ಸಪಿಪ

ಮೃದಂಗದ ಬಲಮುಖದ ಚರ್ಮದ ಮೇಲೆ ಕಪ್ಪಾದ ಗಟ್ಟಿಯಾದ ಒಂದು ಭಾಗವಿರುವುದನ್ನು ನಾವು ನೋಡಿದ್ದೇವೆ. ಇದನ್ನೇ ತಮಿಳಿನಲ್ಲಿ ಸೋರು (ಅನ್ನ) ಎನ್ನುತ್ತಾರೆ. ನದೀ ತೀರದಲ್ಲಿ ದೊರೆಯುವ ಕಿಟ್ಟನ್ ಎಂಬ ಕಲ್ಲನ್ನು ಚೆನ್ನಾಗಿ ಕುಟ್ಟಿ ಪುಡಿ ಮಾಡಿ ಅನ್ನ ಮತ್ತು ಹುಣಸೆಯ ನೀರಿನಿಂದ ಕಣಕವನ್ನಾಗಿ ಮಾಡುತ್ತಾರೆ. ಇದನ್ನು ಮೆತ್ತಿ ಮೃದಂಗದ ಆ ಭಾಗವನ್ನು ಸಿದ್ಧಪಡಿಸುತ್ತಾರೆ. ಅಮರದ ಒಂದು ಟೀಕೆಯಲ್ಲಿ ವಿವರಣೆ ಹೀಗಿದೆ: **ಮೃತ್ಸ್ನಾ ಅಂಗೇ ಯಸ್ಯೇತಿವಾ.** ಇದನ್ನು ಓದಿದ ಮೇಲೆ ಮೃದಂಗ ಶಬ್ದದ ವ್ಯಾಖ್ಯೆಯಲ್ಲಿ ಹಿಂದಿನಿಂದ ಬೇರೆ ಬೇರೆ ಅಭಿಪ್ರಾಯಗಳಿರುವುದು ಸ್ಪಷ್ಟವಾಗುತ್ತದೆ.

**ಮೃಷ್ಟಾನ್ನ** ಮಿಷ್ಟಾನ್ನ ಎನ್ನುವುದು ಸರಿಯಾದ ಶಬ್ದ. ಅದಕ್ಕೆ ರುಚಿಕರವಾದ, ಶುಭ್ರವಾದ, ಸಿಹಿಯಾದ ಅನ್ನ ಎಂದರ್ಥ. ಜನರ ಪ್ರಯೋಗದಲ್ಲಿ ಮೃಷ್ಟಾನ್ನಕ್ಕೆ ಮಿಷ್ಟಾನ್ನದ ಅರ್ಥ ಅಂಟಿಕೊಂಡು ಬಂದು ವ್ಯಾಪಕವಾಗಿ ರೂಢಿಯಲ್ಲಿದೆ. ಇದು ಆ ಶಬ್ದದ ಪುಣ್ಯ. ಅದನ್ನು ಸವಿಯುವವರ ಆನಂದ. ಇದು ಶಬ್ದ ಪ್ರಪಂಚದ ಸೊಗಸು.

**ಮೆತ್ತು** ಮೆತ್ತು, ಬಳಿ- ಈ ಎರಡಕ್ಕೂ ಸ್ವಲ್ಪ ಸಂಬಂಧವಿದೆ. ಮೆತ್ತುವುದು ಮೃದುವಾದ ವಸ್ತುವನ್ನು ತಟ್ಟುವುದು. ಉದಾ: ಮಣ್ಣನ್ನು ಗೋಡೆಗೆ ಮೆತ್ತುವುದು. ಬಳಿಯುವುದು - ನೀರಾಗಿರುವುದನ್ನು ಸವರುವುದು: ಉದಾ: ಬಣ್ಣ ಬಳಿ; ಕೆಮ್ಮಣ್ಣು ಬಳಿ; ಎಂಬ ಪ್ರಯೋಗಗಳನ್ನು ನೋಡಿ.

**ಮೆದುಳು, ಮಿದುಳು** ಮಿದುಳು ಸರಿಯಾದ ಶಬ್ದ. ಆದರೆ ಹೊಸಗನ್ನಡದಲ್ಲಿ ಮೆದುಳು ಎಂಬ ರೂಪವನ್ನೂ ಹೆಚ್ಚಾಗಿ ಉಪಯೋಗಿಸಿ ಅದು ಪ್ರಚಾರಕ್ಕೆ ಬಂದುಬಿಟ್ಟಿದೆ. ಅದನ್ನು ಬಹಿಷ್ಕರಿಸುವುದು ಕಷ್ಟ. ಇದು ಕನ್ನಡ ಶಬ್ದ.

**ಮೆಲೊಡ್ರಾಮ** Melodrama ಎಂಬ ಶಬ್ದ ಇಂಗ್ಲಿಷ್ ಸಾಹಿತ್ಯ ವಿಮರ್ಶೆಯಲ್ಲಿ ಪ್ರಧಾನವಾದ ಸ್ಥಾನವನ್ನು ಆಕ್ರಮಿಸಿದೆ. ಪ್ರಾರಂಭದಲ್ಲಿ ಇದು ಒಂದು ಬಗೆಯ ನಾಟಕ ಪ್ರಕಾರಕ್ಕೆ ಅನ್ವಯಿಸುತ್ತಿತ್ತು. ಆ ಬಗೆಯ ನಾಟಕಗಳಲ್ಲಿ ಭಾವನೆಗಳನ್ನು ತೀವ್ರಗೊಳಿಸಿ ರಸನಿರೂಪಣೆಯಲ್ಲಿ ಅತಿಶಯತೆಯನ್ನು ಸೇರಿಸಿ ಅತ್ಯದ್ಭುತವಾದ, ರೋಮಾಂಚಕಾರಕವಾದ ಕ್ರಿಯೆಗಳನ್ನು ಹೆಚ್ಚಾಗಿ ಸೃಷ್ಟಿಮಾಡುತ್ತಿದ್ದರು. ಈ ಶಬ್ದ Melo = ಹಾಡು Drama= ನಾಟಕ ಎಂಬ ಅರ್ಥವುಳ್ಳ ಗ್ರೀಕ್ ಶಬ್ದದಿಂದ ಬಂದಿದೆ. ಕ್ರಮವಾಗಿ ಕರುಣರಸ ಪ್ರಧಾನ ಸುಖಾಂತ ನಾಟಕಗಳಿಗೆ ಅನ್ವಯವಾಗುತ್ತ ಬಂತು.

**ಮೇಜವಾನಿ** ಇದು ಪಾರಸೀ ಶಬ್ದ. ಮೇಜ್‌ಬಾನಿ. (Mez-Bani) ಇದಕ್ಕೆ ಸ್ವಾಗತಿಸುವುದು, ಆತಿಥ್ಯವನ್ನು ನೀಡುವುದು, ಔತಣ ಕೊಡುವುದು ಎಂದರ್ಥ. ಇದರಲ್ಲಿರುವ ಮೇಜ್ ಶಬ್ದಕ್ಕೆ table, ಮೇಜು ಎಂದೇ ಅರ್ಥ. ಈ ಶಬ್ದ ಪೋರ್ಚುಗೀಸ್ ಭಾಷೆಯಿಂದ ಬಂದಿರುವ ಸಾಧ್ಯತೆ ಇದೆ. ಕನ್ನಡದಲ್ಲಿ ಮೇಜವಾನಿ ಎಂದರೆ ಔತಣದ ಅಚ್ಚುಕಟ್ಟು ಎಂದೂ ಅರ್ಥವಿದೆ.

**ಮೇಜು** ಇದು ಪಾರಸೀ ಭಾಷೆಯ ಶಬ್ದ. ಕನ್ನಡದಲ್ಲಿ ಚೆನ್ನಾಗಿ ಬೇರು ಬಿಟ್ಟಿದೆ. ಅದಕ್ಕೆ ಬೇರೆ ಕನ್ನಡ ಶಬ್ದವನ್ನು ಏಕೆ ಹುಡುಕಬೇಕು? ಅದನ್ನೇ ಕನ್ನಡವನ್ನಾಗಿ ಮಾಡಿ ಪ್ರಯೋಗಿಸಬಹುದು.

**ಮೇನಾ** ಇದು ಪಾರಸೀ ಭಾಷೆಯ ಮಿಯಾನಾ ಎಂಬ ಶಬ್ದದ ಕನ್ನಡ ರೂಪ. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿಯೂ ಪ್ರಚಾರದಲ್ಲಿದೆ. ಇದು ಕದ ಬಾಗಿಲುಗಳುಳ್ಳ ಪಲ್ಲಕ್ಕಿ. ಇದನ್ನು ಹಿಂದೆ ಬೋಯಿಗಳು ಹೊರುತ್ತಿದ್ದರು. ಸಾಮಾನ್ಯವಾಗಿ ಸಿರಿವಂತರ ಮನೆಯ ಹೆಂಗಸರು

ಇದರಲ್ಲಿ ಕುಳಿತು ಸ್ಥಳದಿಂದ ಸ್ಥಳಕ್ಕೆ ಹೋಗುತ್ತಿದ್ದರು. ಮೇನಾ, ಮೇಣೆ, ಮೇನ ಎಂಬ ರೂಪಗಳೂ ಉಂಟು.

**ಮೇಲು + ಅಧಿಕಾರಿ** ಮೇಲಧಿಕಾರಿ ಆಗಬಹುದು. ಆದರೂ ಕನ್ನಡ ಸಂಸ್ಕೃತ ಶಬ್ದಗಳು ಸೇರಿರುವ ಸಂಧಿ ಇದು. ಮೇಲಾಧಿಕಾರಿ ತಪ್ಪು. ಕನ್ನಡದಲ್ಲಿ ಈಗ ಶಬ್ದ ಸೃಷ್ಟಿಯ ಕಡೆ ಹೆಚ್ಚು ಗಮನ ಬಿದ್ದು ಅನೇಕ ಅಪಶಬ್ದಗಳು ಸೃಷ್ಟಿಯಾಗುತ್ತಿವೆ. ಕ್ರಮವಾಗಿ ಉಳಿಯುವ ಶಬ್ದಗಳಿಗೆ ಶಿಷ್ಟತೆ ದೊರಕುತ್ತದೆ.

**ಮೈತ್ರೀ** ಮಿತ್ರನಭಾವ ಮೈತ್ರೀ. ಸ್ನೇಹಿತನ ಭಾವ ಸ್ನೇಹ ಇದ್ದ ಹಾಗೆ. ಇದು ಸಂಸ್ಕೃತದ ಶಬ್ದ. ಕನ್ನಡಕ್ಕೆ ಬಂದಾಗ ಅದು ಮೈತ್ರಿ ಎಂದು ಹ್ರಸ್ವವಾಗುತ್ತದೆ. ಸಂಸ್ಕೃತದಲ್ಲಿ ಅದು ಸ್ತ್ರೀಲಿಂಗದ ಶಬ್ದ. ಯಾವ ಜನ್ಮದ ಮೈತ್ರಿ ಎಂದು ಮೊದಲಾಗುವ ಹೊಸಗನ್ನಡ ಕವನವನ್ನೂ ಅದನ್ನು ಸೊಗಸಾಗಿ ಹಾಡಿರುವುದನ್ನೂ ನೆನಪಿಗೆ ತಂದುಕೊಳ್ಳಿ.

**ಮೈದುನ** ಎಂದರೆ ಗಂಡನ ತಮ್ಮ. ಈ ಶಬ್ದಕ್ಕೆ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಅನೇಕ ಭಾಷೆಗಳಲ್ಲಿ ಜ್ಞಾತಿ ಶಬ್ದವಿದೆ. ತಮಿಳು: ಮಚ್ಚಾನ್, ಮೈತುನನ್. ಮಲಯಾಳ: ಮಚ್ಚುನನ್, ಮಚ್ಚಿನನ್, ತುಳು: ಮೈತಿನೆ, ಮೈದುನೆ, ತೆಲುಗು: ಮೇನ.

**ಮೈಸೂರು ಪಾಕ್** ಈ ಶಬ್ದ ಉಚ್ಚಾರಣೆಯ ಲಾಘವದಿಂದ ಆದ ರೂಪ. ಸರಿಯಾಗಿ ಅದು ಮಸುರ್ ಪಾಕ್. ಮಸೂರ ಎಂದರೆ ಕಡಲೆ. ಕಡಲೆ ಹಿಟ್ಟಿನಿಂದ ತಯಾರಿಸಿದ ಪಾಕ ಅದೇ ಮೈಸೂರ್ ಪಾಕ್ ಆಗಿದೆ.

**ಮೊಕದ್ದಮೆ** ಅರಬ್ಬಿ ಭಾಷೆಯ ಮುಕದಮಾ ಶಬ್ದದಿಂದ ಬಂದಿದೆ. ನ್ಯಾಯಾಲಯದಲ್ಲಿರುವ ಕಟ್ಲೆಗೆ ಇದು ಅನ್ವಯಿಸುತ್ತದೆ. ಅರಬ್ಬಿಯಲ್ಲಿ ಆ ಶಬ್ದಕ್ಕೆ ಕಾರ್ಯ ಎಂದು ಅರ್ಥ.

**ಮೊಣಕಾಲು** ಮೊಣ ಎಂಬುದಕ್ಕೆ ಮೊಳ ಎಂಬುದು ಪ್ರಾಚೀನ ಕನ್ನಡ ಶಬ್ದ. ಇದಕ್ಕೆ ತಮಿಳು ತೆಲುಗುಗಳಲ್ಲಿ ಜ್ಞಾತಿ ಶಬ್ದವಿದೆ. ಮೊಣಕಾಲ, ಮೊಣಕೈಗಳ ಸಂದಿನ ಪ್ರದೇಶಕ್ಕೆ ಮೊಳ ಹೆಸರಿದೆ. ಈ ಶಬ್ದದಲ್ಲಿ ಣ ಕಾರಕ್ಕೆ ಪ್ರತಿಯಾಗಿ ಳ ಕಾರ ಪ್ರಯೋಗವೂ ಉಂಟು.

**ಮೊತ್ತಮೊದಲು** ಎಂಬ ರೂಪ ಮೊದಲು + ಮೊದಲು ಎಂಬ ದ್ವಿರುಕ್ತಿಯ ಸಂಗ್ರಹರೂಪ. ತುತ್ತತುದಿ ಎಂಬುದು ತುದಿ + ತುದಿ ಎಂಬ ದ್ವಿರುಕ್ತಿಯ ಸಂಗ್ರಹ ರೂಪ. ಇವೆರಡು ಒಂದು ಬಗೆಯ ಸಮಾಸಕ್ಕೆ ಉದಾಹರಣೆಗಳು. ಆದರೆ ಈಗ ಯಾರೂ ಈ ಶಬ್ದಗಳನ್ನು ಸರಿಯಾಗಿ ಪ್ರಯೋಗಿಸುತ್ತಿಲ್ಲ. ಮೊಟ್ಟಮೊದಲು, ತುಟ್ಟತುದಿ ಎಂದೇ ಪ್ರಯೋಗಿಸುತ್ತಿದ್ದಾರೆ. ಇದಕ್ಕೆ ಕಾರಣವಿಲ್ಲದಿಲ್ಲ. ಜನರು ಹೆಚ್ಚಾಗಿ ಉಪಯೋಗಿಸುವ ಕಟ್ಟಕಡೆ, ನಟ್ಟನಡು ಎಂಬ ಎರಡು ಶಬ್ದಗಳೂ ವ್ಯಾಕರಣದ ಪ್ರಕಾರವೂ ಸರಿಯಾದ ಶಬ್ದಗಳು. ಇವುಗಳ ಸಾಮ್ಯದಿಂದ ಮೊಟ್ಟಮೊದಲು, ತುಟ್ಟತುದಿ ಪ್ರಚಾರಕ್ಕೆ ಬಂದಿವೆ. ಆದರೆ ವ್ಯಾಕರಣ ಶುದ್ಧವಾದ ರೂಪಗಳೇ ಸರಿ ಎಂಬುದನ್ನು ತಿಳಿಸಬೇಕಾದುದು ಕರ್ತವ್ಯ.

**ಮೊದಲನೆಯ, ಮೊದಲನೇ - ಇವುಗಳಲ್ಲಿ ಯಾವುದನ್ನು ಉಪಯೋಗಿಸಬೇಕು?** ಅನೆಯ ಎಂಬುದು ಒಂದು ತದ್ಧಿತ ಪ್ರತ್ಯಯ. ಇದನ್ನು ಅಷ್ಟು, ಇಷ್ಟು, ಅನಿತು, ಇನಿತು, ಒಂದು, ಎರಡು ಮುಂತಾದ ಶಬ್ದಗಳಿಗೆ ಪ್ರಮಾಣಪೂರಣಕ್ಕಾಗಿಯೂ ಸಂಖ್ಯಾಪೂರಣಕ್ಕಾಗಿಯೂ ಹತ್ತಿಸುತ್ತಾರೆ. ಅಷ್ಟನೆಯ ವರುಷ, ಎಷ್ಟನೆಯ ತಿಂಗಳು, ಇಷ್ಟನೆಯ ಸ್ಥಳ, ಮೂರನೆಯ ಮಗ, ಮೊದಲನೆಯ ಮಗಳು, ಇತ್ಯಾದಿ. ಆದುದರಿಂದ ಮೊದಲನೆಯ ಎಂಬುದೇ ಶುದ್ಧರೂಪ. ಅದರಲ್ಲಿ ಅನುಮಾನವೇ ಬೇಡ. ಆದರೆ 'ಯ' ಎಂಬ ಅಕ್ಷರ ಅನುನಾಸಿಕವೂ ಆಗುತ್ತದೆ, ನಿರನುನಾಸಿಕವೂ ಆಗುತ್ತದೆ. ಈ ಕಾರಣದಿಂದ ಯಕಾರದ ಸ್ಥಳದಲ್ಲಿ ನಕಾರದ ಸಾನ್ನಿಧ್ಯದಿಂದ ಎ, ಏ ಎಂಬ ಎರಡೂ ಅಕ್ಷರಗಳು ಪ್ರಯೋಗವಾಗುವುದುಂಟು. ಆಗ ಮೊದಲನೆ, ಮೊದಲನೇ ಎಂಬ ರೂಪಗಳು

ಸಾಧಿತವಾಗುತ್ತವೆ. ಅವುಗಳಲ್ಲಿಯೂ 'ಏ' ಎಂಬ ದೀರ್ಘಪ್ರಯೋಗವೇ ಹೆಚ್ಚು. ಅದನ್ನು ತಪ್ಪು ಎಂದು ಹೇಳಲಾಗುವುದಿಲ್ಲ.

**ಮೊಸಳೆ ಕಣ್ಣೀರು, ಕಾಗೆ ಕಣ್ಣೀರು** ಮೊಸಳೆ ಕಣ್ಣೀರು ಎಂಬುದು ನಮಗೆ ಪಾಶ್ಚಾತ್ಯ ಸಂಪರ್ಕದಿಂದ ಬಂದ ನಾಣ್ನುಡಿ. ಪಾಶ್ಚಾತ್ಯರಲ್ಲಿ ಮೊಸಳೆ ಕಣ್ಣೀರು ಎಂಬುದಕ್ಕೆ ಆಷಾಢಭೂತಿಯ ನಡವಳಿಕೆ ಎಂದರ್ಥ. ಅಪ್ರಾಮಾಣಿಕವಾದ ಮರುಕ ಎಂದು ಅರ್ಥ. ಮೊಸಳೆಗಳು ತಾವು ತುಂಬ ದುಃಖದಲ್ಲಿ ಮುಳುಗಿರುವ ಹಾಗೆ ನರಳುತ್ತಾ ಪ್ರಯಾಣಿಕರನ್ನು ತಮ್ಮ ಬಳಿಗೆ ಆಕರ್ಷಿಸುವುವೆಂದೂ ಅಂಥವರನ್ನು ಹಿಡಿದು ತಿನ್ನುವಾಗ ಕೂಡ ಅವರ ಮೇಲೆ ಕಣ್ಣೀರು ಸುರಿಸುತ್ತವೆಂದೂ ಒಂದು ಪ್ರಾಚೀನವಾದ ನಂಬಿಕೆ ಇದೆ. ಪಂಚತಂತ್ರದ ಮೊಸಳೆ ಮತ್ತು ಕಪಿ ಎಂಬ ಕಥೆಯನ್ನು ನೋಡಿ. ಅದರಿಂದ ಬಂದದ್ದು ಈ ಗಾದೆ. ನಾವು ಅದನ್ನು ಈಗಲೂ ಉಪಯೋಗಿಸುತ್ತೇವೆ. ಕಾಗೆಗೆ ಒಕ್ಕಣ್ಣು ಎಂದು ಪ್ರಸಿದ್ಧಿ, ಅದು ಒಂದು ಕಣ್ಣಿನಿಂದ ನೋಡುತ್ತದೆ ಎಂದು ಹೇಳುತ್ತಾರೆ. ಎರಡು ಕಣ್ಣುಗಳ ಗುಡ್ಡೆಗಳೂ ಒಂದೇ ಕಣ್ಣಿಗೆ ಬರುತ್ತವೆಂದು ನಂಬಿಕೆ. ಆದುದರಿಂದಲೇ ಕಾಗೆ ಏನನ್ನಾದರೂ ನೋಡಬೇಕಾದರೆ ಒಂದು ಕಡೆಗೆ ಬಗ್ಗಿ ನೋಡುತ್ತದೆ. **ವಾಯಸದಂತಿರೆ ನೋಡು** ಎಂಬುದು ಒಂದು ಖಳನ್ಯಾಯ. ಆದುದರಿಂದ ಅದರ ಕಣ್ಣೀರು ಏಕ ಧಾರೆ. ಹಾಗೆಯೇ ಹಾಲು ತುಂಬ ನೀರಾಗಿದೆ ಎಂದು ಹೇಳಲು ಹಳ್ಳಿಯ ಕಡೆ **ಕಾಗೆ ಕಣ್ಣೀರು** ಎಂಬ ಈ ಮಾತನ್ನು ಉಪಯೋಗಿಸುತ್ತಾರೆ.

**ಮೋಟಾರ್, ಕಾರ್, ರಿಕ್ಷಾ** Motor ಎಂಬ ಶಬ್ದ ಚಲನೆ ಎಂಬ ಅರ್ಥವುಳ್ಳ ಲ್ಯಾಟಿನ್ ಭಾಷೆಯ ಶಬ್ದ. ಇಂಗ್ಲಿಷ್‌ಗೆ ಬಂದಿದೆ. ಅಲ್ಲಿಂದ ಕನ್ನಡಕ್ಕೆ. Carಶಬ್ದವೂ ಲ್ಯಾಟಿನ್ ಶಬ್ದವೇ. ಹೀಗೆ ಇಂಗ್ಲಿಷ್ ಭಾಷೆಗೆ ಬೇರೆ ಬೇರೆ ಭಾಷೆಗಳಿಂದ ಬಂದಿರುವ ಶಬ್ದಗಳಿವು. ರಿಕ್ಷಾ ಕಥೆ ಇನ್ನೂ ವಿಚಿತ್ರವಾಗಿದೆ. ಇದು ಜಪಾನೀ ಭಾಷೆಯ Jinrikshaಎಂಬ ಶಬ್ದದ ಸಂಕ್ಷಿಪ್ತರೂಪ. ಜಪಾನಿ ಭಾಷೆಯಲ್ಲಿ ಜಿನ್ ಎಂದರೆ ಮನುಷ್ಯ. ರಿಕ್ = ಶಕ್ತಿ, ಷಾ =ಬಂಡಿ. ಆದ್ದರಿಂದ ಮನುಷ್ಯನು ತನ್ನ ಶಕ್ತಿಯಿಂದ ಎಳೆಯುತ್ತಿದ್ದ ಬಂಡಿ ಎಂದರ್ಥ. ಈ ಜಿನ್ರಿಕ್ಷಾ ಸಂಕ್ಷಿಪ್ತವಾಗಿ ರಿಕ್ಷಾ ಆಗಿದೆ. ಈ ಶಬ್ದಗಳಿಗೆ ಕನ್ನಡದಲ್ಲಿಯೇ ಬೇರೆ ಶಬ್ದಗಳಿರಬೇಕೆಂಬುದು ಯಾವ ಉದ್ದೇಶಕ್ಕೆ? ಎಲ್ಲ ಭಾಷೆಗಳೂ ಬೆಳೆಯುವುದು ಹೀಗೆ. ಆ ಹೊಸ ಶಬ್ದವನ್ನು ನಾವು ಉಪಯೋಗಿಸಿ ನಮ್ಮದನ್ನಾಗಿ ಮಾಡಿಕೊಳ್ಳುವುದು ಭಾಷೆಯನ್ನು ಬೆಳೆಸುವ ಸೊಗಸಾದ ರಾಜಮಾರ್ಗ. ಇವನ್ನು ನಾವೆಲ್ಲ ತಿಳಿದಿರಬೇಕು. Plate, cup, pin ಪ್ಲೇಟು, ಕಪ್ಪು, ಪಿನ್ನು ಮಾಡಿರುವ ಜನಕ್ಕೆ, ಈ ಮಡಿಬುದ್ಧಿ ಸರಿಯಲ್ಲ.

**ಮೋಡ** ಮೋಡ ಎಂದರೆ ಆಕಾಶವನ್ನೆಲ್ಲ ಮುತ್ತಿಕೊಂಡು ಭೂಮಿಗೆ ಕತ್ತಲೆಯನ್ನುಂಟು ಮಾಡುವಂತೆ ಕಪ್ಪಗೆ ಇದ್ದು ಮಳೆಯನ್ನು ಬರಿಸುವವುಗಳು. ಅದಕ್ಕೆ ಏಕವಚನದಲ್ಲಿ ಮುಗಿಲು, ಮೋಡ ಎನ್ನುತ್ತಾರೆ. ಬಹುವಚನ ಮುಗಿಲುಗಳು, ಮೋಡಗಳು.

**ಮೋಡಿ** ಇದು ಅನೇಕ ಅರ್ಥಗಳುಳ್ಳ ಕನ್ನಡ ಶಬ್ದ. ಇದಕ್ಕೆ ಸೌಂದರ್ಯ, ಠೀವಿ, ಬೆಡಗು, ಆಕರ್ಷಣೆ, ವಿಶಿಷ್ಟವಾದ ಗುಣ, ಇಂದ್ರಜಾಲ, ಮಾಟ ಮಂತ್ರ, ಪ್ರಭಾವ ಮುಂತಾದ ಅನೇಕ ಅರ್ಥಗಳಿವೆ. ಅನೇಕ ಪ್ರಾಚೀನ ಕವಿಗಳು ಈ ಶಬ್ದವನ್ನು ಬೇರೆ ಬೇರೆ ಅರ್ಥಗಳಲ್ಲಿ ಬಳಸಿದ್ದಾರೆ. ತುಂಬ ಪ್ರಭಾವವುಳ್ಳ ಶಬ್ದ. ಮೋಡಿ ಹಾಕು, ಮಾಟ ಮಾಡು, ಮೋಡಿ ಮಾಡು = ೧. ಆಕರ್ಷಣೆಯುಂಟು ಮಾಡು. ೨. ಇಂದ್ರಜಾಲ ಮಾಡು - ಹೀಗೆ ಅನೇಕ ನುಡಿಗಟ್ಟುಗಳಿವೆ. ಅವನು ಒಳ್ಳೆ ಮೋಡಿ ಹಾಕಿದ ಎಂದರೆ ಮೋಸ ಮಾಡಿದ ಎಂಬ ಅರ್ಥವೂ ಕೆಲವು ವೇಳೆ ಬರುತ್ತದೆ. ಅಕ್ಷರಗಳನ್ನು ಬರೆಯುವಾಗ ಒಂದಕ್ಕೊಂದು ಸೇರಿರುವಂತೆ ಬರೆಯುವ ಮಾರ್ಗಕ್ಕೆ ಕೂಡ ಮೋಡಿ ಎಂಬ ಹೆಸರಿದೆ. ಮೋಡಾ ಮೋಡಿ

ಎಂಬ ನುಡಿಗಟ್ಟಿಗೆ ಚಾತುರ್ಯ, ಚಮತ್ಕಾರ ಎಂಬ ಅರ್ಥ ಬರುತ್ತದೆ. ಮೋಡಿಯನ್ನು ಹಾವಿನ ಮೇಲೆಯೂ ಮಾನವರ ಮೇಲೆಯೂ ಹಾಕುತ್ತಾರೆ ಬಲ್ಲವರು.

**ಮೋದ** ಇದಕ್ಕೆ ಸಂತೋಷ, ಹರ್ಷ ಎಂದು ಅರ್ಥ ಸಂಸ್ಕೃತದಲ್ಲಿ. ಪ್ರಮೋದ, ಸಂಮೋದ ಎಂಬ ಎರಡು ಶಬ್ದಕ್ಕೂ ಸಮೃದ್ಧವಾದ ಸಂತೋಷ ಎಂದು ಅರ್ಥ. ಪ್ರ, ಸಮ್ ಎಂಬುವು ಹೆಚ್ಚು ಎಂಬರ್ಥದ ಉಪಸರ್ಗಗಳು.

**ಮೋಹ - ವ್ಯಾಮೋಹ** ಇವೆರಡೂ ಅನೇಕ ಅರ್ಥಗಳುಳ್ಳ ಸಂಸ್ಕೃತ ಶಬ್ದಗಳು. ಮೋಹಕ್ಕೆ *೧. ಪ್ರಜ್ಞೆ ತಪ್ಪುವುದು, ೨. ಅಜ್ಞಾನ, ೩. ಮಾಯೆ, ೪. ದಿಗ್ಭ್ರಮೆ, ೫. ಕೋಪ, ೬. ಮೂರ್ಖತನ, ೭. ಗಾಬರಿ, ೮. ದುಃಖ, ೯. ಪ್ರೀತಿ, ವಿಶ್ವಾಸ, ಅಭಿಮಾನ.* ಸಾಮಾನ್ಯವಾಗಿ ೯ನೆಯ ಅರ್ಥದಲ್ಲಿ ಜನರು ಹೆಚ್ಚಾಗಿ ಉಪಯೋಗಿಸುತ್ತಾರೆ. ವ್ಯಾಮೋಹ ಅನ್ನುವುದು ಕಾವ್ಯಗಳಲ್ಲಿ ಪುರುಷರು ಸ್ತ್ರೀಯರ ವಿಷಯದಲ್ಲಿ ತೋರಿಸುವ ಅತಿಯಾದ ಲೈಂಗಿಕ ಆಸಕ್ತಿ ಎಂಬ ಅರ್ಥದಲ್ಲಿ ಉಪಯೋಗವಾಗುತ್ತದೆ. ಇಂಗ್ಲಿಷಿನ Infatuationಎಂಬ ಶಬ್ದಕ್ಕೆ ಸಮಾನವಾದ ಅರ್ಥ ಅದು.

**ಮೋಹನಾಂಗಿ** ನೋಡುವವರ ಮನಸ್ಸಿನ ಮೇಲೆ ದಿಗ್ಭ್ರಮೆಯನ್ನುಂಟು ಮಾಡುವ, ಮರುಳುಗೊಳಿಸುವ ಅಂಗಾಂಗಗಳುಳ್ಳವಳು ಎಂದರ್ಥ. ಮೋಹನ ಶಬ್ದಕ್ಕೆ ಭ್ರಮೆ, ಭ್ರಾಂತಿ, ಆಕರ್ಷಣೆ ಎಂಬ ಅರ್ಥಗಳೂ ಇವೆ. ಮೂರ್ಛೆ ಬರಿಸುವಿಕೆ ಎಂಬ ಅರ್ಥವೂ ಇದೆ. **ಮೋಹನಚೂರ್ಣ** ಎಂಬ ಒಂದು ಶಬ್ದವಿದೆ. ಅದಕ್ಕೆ ಮಂಕುಬೂದಿ ಎಂಬ ಅರ್ಥವಿದೆ. ಹೀಗೆ ತುಂಬಿದ ಅರ್ಥವುಳ್ಳ ಶಬ್ದ ಮೋಹನ. **'ಯಾವ ಮೋಹನ ಮುರಳಿ ಕರೆಯಿತು ದೂರ ತೀರಕೆ ನಿನ್ನನು'** ಎಂಬ ಅಡಿಗರ ಕವಿವಾಣಿಯನ್ನು ನೆನೆಯಿರಿ.

**ಮೌನಂ ಸರ್ವತ್ರ ಸಾಧನಂ** ಹೀಗೆ ಕೊನೆಗಾಣುವ ಅನೇಕ ಪದ್ಯಗಳಿವೆ. ನನಗೆ ತಿಳಿದಿರುವ ಒಂದು ಪದ್ಯ **ಲಘು ಚಾಣಕ್ಯ** ಎಂಬ ಗ್ರಂಥದಲ್ಲಿ ಬರುತ್ತದೆ. ಆ ಪದ್ಯ ಹೀಗಿದೆ:

***ಆತ್ಮನೋ ಮುಖದೋಷೇಣ***
***ಬಧ್ಯಂತೇ ಶುಕಸಾರಿಕಾಃ***
***ಬಕಾಸ್ತತ್ರ ನ ಬಧ್ಯಂತೇ***
***ಮೌನಂ ಸರ್ವತ್ರ ಸಾಧನಂ***

ತಮ್ಮ ತಮ್ಮ ಬಾಯಿಯ ದೋಷದಿಂದ ಗಂಡು ಗಿಣಿಗಳೂ ಹೆಣ್ಣು ಗಿಣಿಗಳೂ ಬಂಧನಕ್ಕೆ ಒಳಗಾಗುತ್ತವೆ. ಬಕಪಕ್ಷಿಗೆ ಈ ಬಗೆಯ ಬಂಧನವಿಲ್ಲ. ಮಾತನಾಡದಿರುವುದು, ಗಳಹದಿರುವುದು ಸದಾ ಸುಖಕ್ಕೆ ಸಾಧನ. ಇದೇ ರೀತಿಯ ಇತರ ಪದ್ಯಗಳೂ ಉಂಟು.

**ಮ್ಲೇಚ್ಛೆ** ಮ್ಲೇಚ್ಛಾ ಎಂಬುದು ಮ್ಲೇಚ್ಛೆ ಎಂದಾಗುತ್ತದೆ. ಮ್ಲೇಚ್ಛಾ ಎಂದರೆ ಸಂಸ್ಕೃತದಲ್ಲಿ ಸುಸಂಸ್ಕೃತಳಲ್ಲದವಳು, ಅನಾರ್ಯೆ. ಮ್ಲೇಚ್ಛ ಎಂಬ ಶಬ್ದದ ಸ್ತ್ರೀಲಿಂಗ ರೂಪ. ಮ್ಲೇಂಚ್ಛಾ ಎಂಬ ರೂಪವೂ ಉಂಟು.

# ಯ

**ಯತಿ** ಇದು ಸಂಸ್ಕೃತದ ಶಬ್ದ. ಮೋಕ್ಷದ ಗಳಿಕೆಗಾಗಿ ಪ್ರಯತ್ನ ಮಾಡುವವನು ಯತಿ, ಎಂದು ಶಬ್ದದ ಅರ್ಥ. **ಯತತೇ ಮೋಕ್ಷಾಯ** ಎಂಬುದು ಸಂಸ್ಕೃತದ ವಿವರಣೆ. ಕನ್ನಡದಲ್ಲಿ ಯತಿ ಎಂಬುದನ್ನು ಬೇರೆ ಅರ್ಥದಲ್ಲಿ ಉಪಯೋಗಿಸುತ್ತಾರೆ. ಛಂದೋರಚನೆಗಳಲ್ಲಿ

ಅಲ್ಲಲ್ಲಿ ಬರುವ ವಿರಾಮಸ್ಥಾನಕ್ಕೆ ಈ ಹೆಸರಿದೆ. ಸಂಗೀತದಲ್ಲಿಯೂ ಈ ಶಬ್ದದ ವ್ಯಾಪ್ತಿಯಿದೆ.

**ಯದ್ವಾತದ್ವಾ** ಇದು ಒಂದು ಶಬ್ದವಲ್ಲ. ಯದ್ ಎಂಬುದು ಸಂಬಂಧದ ಅರ್ಥವನ್ನು ಕೊಡುವ ಸರ್ವನಾಮ. ತದ್ ಎಂಬುದು ಹೇತ್ವರ್ಥಕವಾದ ಅವ್ಯಯ. ಇವೆರಡೂ ಒಟ್ಟಿಗೆ ಉಪಯೋಗವಾಗುತ್ತದೆ. ವಾ ಎಂಬುದೂ ಒಂದು ಅವ್ಯಯ. ಅಥವಾ ಎಂಬ ಅರ್ಥದಲ್ಲಿ ಉಪಯೋಗವಾಗುತ್ತದೆ. ಯಾವುದು ಅಥವಾ ಅದು ಎಂಬ ಅರ್ಥ ಬರುವ ಈ ಪದಸಮುಚ್ಚಯವನ್ನು ಕನ್ನಡದಲ್ಲಿ ಓರಣವಿಲ್ಲದ, ಅಣೆಯಿಲ್ಲದ, ಚೆಲ್ಲಾಪಿಲ್ಲಿಯಾದ, ಸಿಕ್ಕಾಬಟ್ಟೆ ಇರುವ, ಒಂದು ಕ್ರಮವಿಲ್ಲದ ಎಂಬ ಅರ್ಥಗಳಲ್ಲಿ ಉಪಯೋಗಿಸುತ್ತಾರೆ. ಇದು ರೂಢಿಯಿಂದ ಬಂದ ಅರ್ಥ.

**ಯಥೇಚ್ಛ** ಎಂದರೆ ಇಷ್ಟ ಬಂದಂತೆ ಎಂದು ಅರ್ಥ. ಅದು ಅವ್ಯಯ. ವಿವರಣೆ ಇಚ್ಛೆಯನ್ನು ಮೀರದಿರುವಂತೆ ಎಂದು. **ಇಚ್ಛಾಂ ಅನತಿಕ್ರಮ್ಯ** ಎಂಬುದು ಟೀಕೆ. ಇದು ಸ್ವೇಚ್ಛೆಗೆ ವಿರುದ್ಧವಾದ ಶಬ್ದವಲ್ಲದಿದ್ದರೂ ಒಂದು ಮಿತಿಯನ್ನು ಸೂಚಿಸುವ ಶಬ್ದ. ಈಗಿನ ವ್ಯವಹಾರಗಳಲ್ಲಿ ಯಥೇಚ್ಛವಾಗಿ ಎಂದಾಗ ಅತ್ಯಧಿಕ ಪ್ರಮಾಣದಲ್ಲಿ ಎಂದೇ ಅರ್ಥವಿದೆ. ಮಗಳ ಮದುವೆಗೆ ಅವನು ಯಥೇಚ್ಛವಾಗಿ ಧನವನ್ನು ವ್ಯಯ ಮಾಡಿದನು. ಎಂಬ ವಾಕ್ಯವನ್ನು ಗಮನಿಸಿ. ಮಾರುಕಟ್ಟೆಯಲ್ಲಿ ಈಗ ಅವರೆಕಾಯಿ ಯಥೇಚ್ಛವಾಗಿ ಸಿಗುತ್ತದೆ ಎಂಬ ಮತ್ತೊಂದು ವಾಕ್ಯವನ್ನು ಪರಿಶೀಲಿಸಿ.

**ಯಮ** ಸಂಸ್ಕೃತದ ಯಮ ಶಬ್ದಕ್ಕೆ ಅನೇಕ ಅರ್ಥಗಳಿವೆ. ಅವುಗಳಲ್ಲಿ ಅವಳಿ ಮಕ್ಕಳು. ಜೊತೆಯಲ್ಲಿ ಒಮ್ಮೆಗೆ ಹುಟ್ಟಿದ ಮಕ್ಕಳು ಎಂಬ ಅರ್ಥವೂ ಇದೆ. ಅದೇ ಶಬ್ದವೇ ಯಮಲ ಎಂದೂ ಪ್ರಯೋಗದಲ್ಲಿದೆ. ಕನ್ನಡದ ಅವಳಿ ಶಬ್ದವೂ ಸಂಸ್ಕೃತದ ಯಮಲ ಶಬ್ದದಿಂದಲೇ ವ್ಯುತ್ಪತ್ತಿ ಹೊಂದಿದೆ. ಅವಳಿ ಜವಳಿ ಎಂಬ ಜೊತೆ ಜೊತೆಯಾಗಿ ಉಪಯೋಗವಾಗುವ ಶಬ್ದವನ್ನು ನೀವು ಕೇಳಿರಬಹುದು. ಅದರ ಎರಡನೆಯ ಭಾಗವಾದ ಜವಳಿ ಕೂಡ ಯಮಳದ ತದ್ಭವ ರೂಪ. ಯಮಳ ಪ್ರಾಕೃತದಲ್ಲಿ ಜಮಲ ಎಂದಾಗುತ್ತದೆ. ಅಲ್ಲಿಂದ ಕನ್ನಡದಲ್ಲಿ ಜಮಲ, ಜಮಳಿ, ಜವಳಿ ಎಂಬ ರೂಪಗಳನ್ನು ಪಡೆಯುತ್ತದೆ. ಆದುದರಿಂದ ಅವಳಿ ಜವಳಿ ಶಬ್ದಗಳಲ್ಲಿ ಒಂದೇ ಅರ್ಥದ ಎರಡು ಶಬ್ದಗಳು ಕೂಡಿಕೊಂಡಿವೆ. ಬಟ್ಟೆ ಎಂಬ ಅರ್ಥವನ್ನು ಕೊಡುವ ಜವಳಿ ಎಂಬುದು ಬೇರೆಯ ಶಬ್ದ. ಅದು ದೇಶ್ಯ ಶಬ್ದ. ಪಂಪನ ಆದಿಪುರಾಣವೆಂಬ ಕಾವ್ಯದಲ್ಲಿಯೇ ಆ ಶಬ್ದದ ಪ್ರಯೋಗವು ದೊರಕುತ್ತದೆ. **"ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್"** (ಆದಿಪುರಾಣ ೪-೩೪ ವಚನ). ಹೀಗೆಯೇ ಈ ಶಬ್ದಕ್ಕೂ ಪ್ರಾಚೀನವಾದ ಪ್ರಯೋಗಗಳಿವೆ.

**ಯವನ** ಈ ಸಂಸ್ಕೃತ ಶಬ್ದಕ್ಕೆ ಗ್ರೀಸ್, ಟರ್ಕಿ, ಮುಂತಾದ ದೇಶದವ, ಎಂದರ್ಥ. ಮುಸಲ್ಮಾನ, ತುರುಕ ಎಂದೂ ಅದರ ಅರ್ಥವಿದೆ. ಪರಂಗಿ ಎಂದೂ ಅರ್ಥವಿದೆ. ೨. ಸಜ್ಜರಸ ಎಂಬ ಪರಿಮಳದ್ರವ್ಯ ೩. ಅಧರ್ಮಿ. ವಚನಗಳಲ್ಲಿ **ಕ್ರಿಯೆಯಿಲ್ಲದ ಪ್ರಸಾದಿ ಯವನ** ಎಂಬಂಥ ವಾಕ್ಯಗಳು ಬರುತ್ತವೆ. **ಯವನಿ** ಎಂದರೆ ಯವನ ಸ್ತ್ರೀ. **ಯವನಕ** ಎಂಬ ಶಬ್ದಕ್ಕೂ ಯವನ ಎಂದೇ ಅರ್ಥ.

**ಯವನಿಕಾ** ಎಂಬುದು ಸಂಸ್ಕೃತದ ಶಬ್ದ. ಇದಕ್ಕೆ ಎರಡು ಅರ್ಥಗಳಿವೆ. ೧. ತೆರೆ, ಪರದೆ ೨. ಯವನ ಜಾತಿಯ ಸ್ತ್ರೀ. **ಯುವಂತಿ ಜನಾ ಅತ್ರ ಇತಿ ಯವನಿಕಾ**. ಅಲ್ಲಿ ಜನರು ಮಿಶ್ರವಾಗುತ್ತಾರೆ, ಸೇರುತ್ತಾರೆ ಎಂದು ಒಂದು ಟೀಕೆ ಹೇಳುತ್ತದೆ. ಈ ಶಬ್ದಕ್ಕೆ **ಪ್ರತಿಸೀರಾ**, **ತಿರಸ್ಕರಿಣೀ** ಎಂಬ ಇತರ ಎರಡು ಶಬ್ದಗಳೂ ಸಮಾನಾರ್ಥಕಗಳು.

**ಯಶಸ್ಸು** ಇದು ಸಂಸ್ಕೃತದಲ್ಲಿ ಕೀರ್ತಿಯನ್ನು ತಿಳಿಸುವ ಮತ್ತೊಂದು ಶಬ್ದ. ಜ್ಞಾನ, ದಾನ,

ಧರ್ಮ ಇವುಗಳಿಂದ ಗಳಿಸುವ ಹೆಸರುವಾಸಿಗೆ ಯಶಸ್ಸು ಎಂದು ತಿಳಿಯಬೇಕು. ಇಂಥವನ ಕೀರ್ತಿ ದೇಶಾಂತರಗಳಿಗೂ ವ್ಯಾಪಿಸುವುದರಿಂದ ಯಶಸ್ಸು ಎಂಬುದು ಅರ್ಥವತ್ತಾಗುತ್ತದೆ. **ವ್ಯಾಪ್ನೋತಿ ದೇಶಾಂತರೇಷು ಯಶಃ** ಎಂದು ಟೀಕೆಯಿದೆ.

**ಯಾ, ಯಾನೆ** ಇದಕ್ಕೆ ಅಥವಾ, ಅರ್ಥಾತ್, ಎಂದರೆ ಎಂದರ್ಥ. ಇದಕ್ಕೆ ಸಮಾನವಾದ ಯಾ ಉರ್ದು ಶಬ್ದ. ಎರಡು ಪರ್ಯಾಯ ರೂಪಗಳು. ನೆ ಎಂಬುದು ಉರ್ದುವಿನಲ್ಲಿ ಒಂದು ಪ್ರತ್ಯಯ. ತೆಲುಗು ಲೇಕ ಎಂಬುದರ ಅರ್ಥ ಇಲ್ಲಿದೆ. ಈ ಶಬ್ದ ಯಾ ಎಂದು ಕೊಂಕಣಿಯಲ್ಲಿಯೂ ಇದೆ. ಇವೆಲ್ಲಕ್ಕೂ ಅರಬ್ಬಿಯ ಯ, ಅನೀ ಎಂಬುದೇ ಮೂಲ. ಮರಾಠಿಯಲ್ಲಿ ಯಾನೇ, ಯಾನೀ. ಹಿಂದಿಯಲ್ಲಿಯೂ ಅಷ್ಟೆ!

**ಯಾಗ, ಯಜ್ಞ, ಹೋಮ** ಇವುಗಳ ಅರ್ಥ ವ್ಯತ್ಯಾಸ ಏನು? ಯಾಗ, ಯಜ್ಞ - ಈ ಎರಡೂ ಶಬ್ದಗಳು ಯಜ್ = ದೇವರ ಪೂಜೆ ಮಾಡು ಎಂಬ ಧಾತುವಿನಿಂದ ಬಂದವು. ಹೀಗೆ ಮಾಡುವವನು ಯಜಮಾನ. ಆದುದರಿಂದ ಈ ಎರಡೂ ಸಮಾನಾರ್ಥಕ ಶಬ್ದಗಳು. ಹೋಮ ಎಂದರೆ ಅಗ್ನಿಕುಂಡವನ್ನು ಪುಟಗೊಳಿಸಿ ಮಂತ್ರೋಕ್ತವಾಗಿ ಆ ಅಗ್ನಿಗೆ ತುಪ್ಪವನ್ನು ಅಥವಾ ಚರು ಮುಂತಾದುವನ್ನು ಅರ್ಪಿಸುವುದು. ಹೋಮ ಕುಂಡ, ಹೋಮಶಾಲೆ, ಹೋಮಾಗ್ನಿ ಮುಂತಾದ ಶಬ್ದಗಳಿಂದ ಈ ಅರ್ಥ ಮತ್ತಷ್ಟು ಸ್ಪಷ್ಟ. ಮಾನವಶಾಸ್ತ್ರ ಅಥವಾ ಸಮಾಜಶಾಸ್ತ್ರಗಳ ಆಧುನಿಕ ಸಂಶೋಧನೆಗಳಿಂದ ಯಾಗ, ಯಜ್ಞ, ಹೋಮ ಮುಂತಾದ ಶಬ್ದಗಳಿಗೆ ಸ್ತ್ರೀ ಪುರುಷ ಸಂಭೋಗದ ಅರ್ಥವಿದೆ ಎಂದು ವಿವರಣೆಗಳೂ ದೊರಕುತ್ತವೆ. ನೋಡಿ: **ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ.** ಲೇ. ಇತಿಹಾಸಾಚಾರ್ಯ ರಾಜವಾಡೆ. ನವಕರ್ನಾಟಕ ಪ್ರಕಾಶನ.

**ಯಜ್ಞ ಯಾಗ** ಎರಡು ಶಬ್ದಗಳಿಗೂ ಅರ್ಥಗಳಲ್ಲಿಯೂ ಸಾಮ್ಯವಿದೆ. ಪೂಜೆ, ಪ್ರಾರ್ಥನೆ, ಭಕ್ತಿ, ಅರ್ಪಣೆ ಮತ್ತು ಅರ್ಪಣೆ ಮಾಡಿದ ಯಾವ ಕಾರ್ಯವಾದರೂ ಆಗಬಹುದು. ಈ ಎರಡು ಶಬ್ದಗಳೊಡನೆ ಇತರ ಅನೇಕ ಶಬ್ದಗಳು ಸೇರಿ ಸಂಸ್ಕೃತದಲ್ಲಿ ಅನೇಕ ಸಮಾಸ ಶಬ್ದಗಳಾಗಿವೆ. ಉದಾಹರಣೆಗೆ ಯಜ್ಞಕರ್ಮ, ಯಜ್ಞಕುಂಡ, ಯಜ್ಞಭಾಗ, ಯಾಗಕಂಟಕ, ಯಾಗಕರ್ಮ, ಯಾಗಮಂಟಪ ಇತ್ಯಾದಿ. ವೈದಿಕ ಸಾಹಿತ್ಯಕ್ಕೆ ಸೇರಿದಂತೆ ಇಂಥ ಅನೇಕ ಶಬ್ದಗಳಿವೆ. ಅವುಗಳಿಗೆ ಸಂದರ್ಭಕ್ಕೆ ತಕ್ಕಂತೆ ಅರ್ಥವ್ಯತ್ಯಾಸಗಳಾಗುತ್ತವೆ. ಸ್ವಾರಸ್ಯದ ವಿಷಯವೆಂದರೆ ಕನ್ನಡದಲ್ಲಿ ಯಜ್ಞ ಎಂಬ ಶಬ್ದಕ್ಕೆ ಬಹಳ ಕಷ್ಟದ ಕೆಲಸ ಎಂಬ ಅರ್ಥದಲ್ಲಿ ಪ್ರಯೋಗಿಸುತ್ತಾರೆ. ಇನ್ನು **ಅದೊಂದು ಯಜ್ಞ ಕಾದಿದೆ** ಎಂದರೆ ಕಷ್ಟಕಾರ್ಯವಿದೆ ಎಂದರ್ಥ.

**ಯಾದವೀಕಲಹ** ಇದು ಯದುವಂಶದ ನಾಶವನ್ನು ತಿಳಿಸುವ ಕಥೆ. ಭಾರತದ ಮೌಸಲಪರ್ವದಲ್ಲಿರುವುದು ಈ ಕಥೆಯೇ. ಮೌಸಲ, ಎಂದರೆ ಮುಸಲ ಶಬ್ದದ ಗುಣವಾಚಕ ರೂಪ. ಮುಸಲ ಎಂದರೆ ಒನಕೆ. ಒಂದು ಒನಕೆ ಒಂದು ವಂಶವನ್ನೇ ನಾಶ ಮಾಡಿದ ಕಥೆ ಇದರಲ್ಲಿದೆ. ಮಹಾಭಾರತದ ಯುದ್ಧ ಮುಗಿದು ಕೃಷ್ಣ ಬಲರಾಮರು ದ್ವಾರಕೆಯಲ್ಲಿದ್ದಾಗ ಅಲ್ಲಿಗೆ ವಿಶ್ವಾಮಿತ್ರ, ಕಣ್ವ ಮತ್ತು ನಾರದ ಎಂಬ ಮೂವರು ಮಹಾಋಷಿಗಳು ಬಂದರು. ಯಾದವರು ಆ ಮೂವರನ್ನೂ ಪರಿಹಾಸ್ಯ ಮಾಡಲು ಒಂದು ಉಪಾಯವನ್ನು ಹೂಡಿದರು. ಸಾಂಬನೆಂಬ ಒಬ್ಬನಿಗೆ ಸೀರೆಯನ್ನು ಉಡಿಸಿ ಅವನಿಗೆ ಗಂಡು ಮಗುವಾಗುತ್ತದೆಯೋ ಹೆಣ್ಣು ಮಗುವಾಗುತ್ತದೆಯೋ ಹೇಳಬೇಕೆಂದು ಕೇಳಿದರು. **'ಈ ಸಾಂಬನು ಉಕ್ಕಿನ ಒನಕೆಯನ್ನು ಹೆರುತ್ತಾನೆ. ಅದರಿಂದ ವೃಷ್ಣಿ ಮತ್ತು ಅಂಧಕ ಎಂಬ ಎರಡು ಯಾದವ ಕುಲಗಳೂ ನಾಶವಾಗುತ್ತವೆ'** ಎಂದು ಹೇಳಿ ಋಷಿಗಳು ದುರದುರನೆ ಹೊರಟುಹೋದರು. ದ್ವಾರಕೆಯಲ್ಲಿ ಉತ್ಪಾತಗಳಾದುವು. ಸಾಂಬನು

ಒನಕೆಯನ್ನೇ ಹೆತ್ತನು. ಆಗ ಕೃಷ್ಣನು ಎಲ್ಲರನ್ನೂ ಸಮುದ್ರ ತೀರಕ್ಕೆ ತೀರ್ಥ ಯಾತ್ರೆಗೆಂದು ಕರೆದುಕೊಂಡು ಹೋದನು. ಇಷ್ಟುಹೊತ್ತಿಗೆ ಯಾದವ ರಾಜನು ಆ ಒನಕೆಯನ್ನು ಸಣ್ಣಗೆ ಪುಡಿ ಪುಡಿ ಮಾಡಿಸಿ ಸಮುದ್ರದಲ್ಲಿ ಕದಡಿಬಿಟ್ಟಿದ್ದನು. ಆ ಪುಡಿಗಳೆಲ್ಲ ಜೊಂಡುಗಳಾಗಿ ಬೆಳೆದಿದ್ದುವು. ಸಮುದ್ರ ತೀರದಲ್ಲಿ ಸೇರಿದ್ದ ಯಾದವರ ಎರಡು ವಂಶಗಳವರೂ ಪರಸ್ಪರ ಕೀಟಲೆ ಮಾಡಲು ಮೊದಲು ಮಾಡಿದರು. ಸಮುದ್ರದಲ್ಲಿದ್ದ ಜೊಂಡುಗಳನ್ನು ಹಿಡಿದು ಹೊಡೆದಾಡಿದರು. ಆ ಜೊಂಡುಗಳೆಲ್ಲವೂ ಉಕ್ಕಿನ ಒನಕೆಗಳೇ ಆದುವು. ಹೀಗೆ ಹೊಡೆದಾಡಿ ಎರಡು ಯಾದವ ವಂಶಗಳೂ ನಾಶವಾದುವು. ಬಲರಾಮನ ಬಾಯಿಯಿಂದ ಬಂದ ಸಾವಿರ ಹೆಡೆಯ ಸರ್ಪವು ಸಮುದ್ರದಲ್ಲಿ ಸೇರಿಕೊಂಡಿತು. ಕೃಷ್ಣನು ಎಲ್ಲೋ ಮಲಗಿದ್ದಾಗ ಜರ ಎಂಬ ಹೆಸರಿನ ಬೇಡನು ಅವನ ಕಾಲನ್ನು ಕಂಡು, ಅದು ಜಿಂಕೆಯಿರಬೇಕೆಂದು ಬಾಣಬಿಟ್ಟನು. ಯೋಗದಲ್ಲಿದ್ದ ಕೃಷ್ಣನು ಸ್ವರ್ಗವಾಸಿಯಾದನು. ಹೀಗೆ ಆದ ಕೊನೆಯನ್ನು ದಾಯಾದಿಗಳ ಕಲಹವೆಂದೂ **ಯಾದವೀಕಲಹವೆಂದೂ** ಕರೆಯುತ್ತಾರೆ.

**ಯಾದೃಚ್ಛಿಕ** ಇದು ಯದೃಚ್ಛಾ ಎಂಬ ಸಂಸ್ಕೃತ ಶಬ್ದದ ವಿಶೇಷಣದ ರೂಪ. ಅಕಸ್ಮಾತ್ತಾಗಿ ಉಂಟಾದ, ತಾನಾಗಿ ಸಂಭವಿಸಿದ, ಅನಿರೀಕ್ಷಿತವಾಗಿ ಉಂಟಾದ ಎಂದರ್ಥ. ಅಲ್ಲದೆ ಸ್ವತಂತ್ರವಾಗಿ, ಯಾವ ಅಡ್ಡಿಗಳೂ ಇಲ್ಲದೆ ಎಂದೂ ಅರ್ಥ. ಇಂಗ್ಲಿಷಿನ Arbitrary, Random ಶಬ್ದಗಳಿಗೆ ಸಮಾನವಾಗಿ ಉಪಯೋಗಿಸುತ್ತಾರೆ.

**ಯಾವತ್ತೂ** ಇದನ್ನು ಎಲ್ಲ, ಎಲ್ಲರೂ ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಊರಿನ ಯಾವತ್ತೂ ಜನರು ಎಂದರೆ ಎಲ್ಲರೂ ಎಂದರ್ಥ. ಈ ಶಬ್ದದ ಮೂಲ ಏ ಪೊತ್ತು = ಯಾವ ಹೊತ್ತು. ಇದೇ ಯಾವತ್ತು ಎಂದಾಗುತ್ತದೆ. ಇದಕ್ಕೆ ಎಂದು ಯಾವ ದಿನ, ಯಾವ ದಿವಸ ಎಂದು ಅರ್ಥ. ಅದೇ ಬೆಳವಣಿಗೆ ಹೊಂದಿ ಈಗ ಎಲ್ಲರೂ ಎಂಬ ಹೊಸ ಅರ್ಥವನ್ನೂ ಹೊಂದಿದೆ.

**ಯುಗಾದಿ ಉಗಾದಿ** ಯುಗಾದಿ ಸಂಸ್ಕೃತ: ಯುಗ +ಆದಿ. ಉಗಾದಿ ತದ್ಭವ. ಎರಡೂ ಸರಿ. ಇದು ಹಿಂದುಗಳಿಗೆ ಪ್ರಸಿದ್ಧವೂ ಪವಿತ್ರವೂ ಆದ ಹಬ್ಬ. ಚೈತ್ರಮಾಸದ ಶುಕ್ಲಪಕ್ಷದ ಪಾಡ್ಯದಂದು ಈ ಹಬ್ಬ ಬರುತ್ತದೆ. ಇದು ಚಾಂದ್ರಮಾನದ ಸಂವತ್ಸರಾರಂಭವನ್ನು ಸೂಚಿಸುತ್ತದೆ. ಈ ದಿನಕ್ಕೆ ಆರೋಗ್ಯ ಪ್ರತಿಪತ್ ಎಂಬ ಮತ್ತೊಂದು ಹೆಸರಿದೆ. ಈ ದಿನ ಮಾಡುವ ನಿಂಬದಳ ಭಕ್ಷಣಕ್ಕೆ ಸುಖ ದುಃಖಗಳನ್ನು ಸಮಾನ ರೀತಿಯಲ್ಲಿ ಅನುಭವಿಸುವುದು ಮುಖ್ಯ ಎಂಬ ಅರ್ಥವಿದೆ ಎಂದು ಹೇಳುತ್ತಾರೆ. ಕೆಲವು ಪಂಗಡಗಳಲ್ಲಿ ಆಯಾ ವರ್ಷದ ಆಯವ್ಯಯಗಳ ಲೆಕ್ಕವನ್ನು ಈ ದಿನದಂದು ಪ್ರಾರಂಭಿಸುತ್ತಾರೆ. ವ್ಯಾಪಕವಾಗಿ ಆಚರಿಸಲ್ಪಡುವ ಹಬ್ಬ.

**ಯುದ್ಧಾಸಕ್ತ** Activist ಇದು ಇಂಗ್ಲಿಷ್ ಶಬ್ದ, ಅದಕ್ಕೆ ತಾನು ನಂಬಿರುವ ತತ್ವಕ್ಕಾಗಿ ಅಥವಾ ತಾನು ಸೇರಿದ ಪಕ್ಷಕ್ಕಾಗಿ ಯುದ್ಧಕ್ಕೆ ಸದಾ ಸಿದ್ಧನಾಗಿರುವವನು ಎಂದರ್ಥ. ಮುನ್ನುಗ್ಗಿ ಹೊಡೆದಾಟ ಮಾಡುವವನು; ಕನ್ನಡದಲ್ಲಿ ಕದನಾಸಕ್ತ, ಯುದ್ಧಾಸಕ್ತ, ಸಂಘರ್ಷನಿಷ್ಠ ಎಂಬ ಶಬ್ದಗಳನ್ನು ಟಂಕಿಸಬೇಕಾಗುತ್ತದೆ.

**ಯುಧಿಷ್ಠಿರ** ಇದು ಪಾಂಡವರಲ್ಲಿ ಮೊದಲನೆಯವನ ಹೆಸರು. 'ಯುಧಿಷ್ಠಿರ' ಎಂದರೆ ಯುದ್ಧದಲ್ಲಿ ಸ್ಥಿರವಾಗಿ ನಿಂತಿರುವವನು ಎಂದರ್ಥ. ಧೈರ್ಯಶಾಲಿ, ಸೋಲದವನು.

**ಯುಯುತ್ಸು** ನೋಡಿ: ಕೌರವರು

**ಯೆಕ್ಕುಟ್ಟಹೋಗ್ಲಿ** ಇದು ಸರಿಯಾಗಿ ಹೇಳಿದರೆ **ಎಕ್ಕ ಹುಟ್ಟಿ ಹೋಗಲಿ** ಎಂದಾಗುತ್ತದೆ. ಎಕ್ಕ ಎಂಬುದು ಒಂದು ಗಿಡ. ಅದು ಬೆಳೆಸುವ ಗಿಡವಲ್ಲ. ತಾನೇ ತಾನಾಗಿ ಪಾಳು

ಭೂಮಿಯಲ್ಲಿ ಬೆಳೆಯುತ್ತದೆ. ಒಬ್ಬರ ಮನೆ ಅಥವಾ ಜಮೀನು ಎಕ್ಕ ಹುಟ್ಟಿ ಹೋಗಲಿ ಎಂದರೆ ಹಾಳು ಬೀಳಲಿ ಎಂದರ್ಥ. ಸರ್ವನಾಶವಾಗಲಿ ಎಂಬ ಅರ್ಥದ ಬೈಗಳು. ಇದನ್ನು ಹೇಳಬೇಕಾದರೆ ಅಂಥವರಿಗೆ ತುಂಬಾ ಕೋಪ ಬಂದಿರಬೇಕು.

**'ಯೇತರ'** ಹಿಂದಿಯೇತರ, ಪದವಿಯೇತರ ಮುಂತಾದ 'ಯೇತರ' ಶಬ್ದಗಳು ಎಲ್ಲಿಯವು? 'ಬ್ರಾಹ್ಮಣೇತರ' ಶಬ್ದ ಬಹುವಾಗಿ ಪ್ರಯೋಗಕ್ಕೆ ಬಂದ ಮೇಲೆ ಅದೇ ಬಗೆಯಾಗಿ ಇತರ ಶಬ್ದಗಳೂ ಸೃಷ್ಟಿಯಾದವು. ಇವುಗಳ ಸ್ವರೂಪದ ಬಗ್ಗೆ ಸ್ಪಷ್ಟ ಪರಿಶೀಲನೆ ಅಗತ್ಯ. 'ಹಿಂದೀ', 'ಕನ್ನಡ' ಮುಂತಾದ ಶಬ್ದಗಳನ್ನು ಸಂಸ್ಕೃತದ ಶಬ್ದಗಳನ್ನಾಗಿಯೇ ಪರಿಗಣಿಸುವುದು ಸಾಧ್ಯವಿದೆ. ಏಕೆಂದರೆ ಅವು ಅಂಕಿತನಾಮಗಳು. ಹಾಗೆ ಪರಿಗಣಿಸುವುದಾದರೆ 'ಹಿಂದೀ + ಇತರ = ಹಿಂದೀತರ' ಎಂದೂ 'ಕನ್ನಡ + ಇತರ = ಕನ್ನಡೇತರ' ಎಂದೂ ಶಬ್ದರೂಪವು ಸಿದ್ಧವಾಗುತ್ತದೆ. ಆದರೆ ಯಾವುದನ್ನೂ ತಿಳಿಯದೆ 'ಯೇತರ' ಶಬ್ದಗಳನ್ನು ಉಪಯೋಗಿಸಬಾರದು. 'ಕನ್ನಡ'ವನ್ನು ಸಂಸ್ಕೃತ ಭಾಷೆಯಲ್ಲಿ ಅದೇ ಭಾಷೆಯ ಶಬ್ದದಂತೆ ಉಪಯೋಗಿಸುವುದು ಸರಿ ಎನ್ನುವುದಾದರೆ, 'ಕನ್ನಡಾಭಿಮಾನ' ಕೂಡ ಸರಿಯಾಗುತ್ತದೆ. ಇಲ್ಲದಿದ್ದರೆ 'ಕನ್ನಡದ ಅಭಿಮಾನ' ಎಂದು ಉಪಯೋಗಿಸುವುದೇ ಉತ್ತಮ. **"ಈಚೀಚೆಗೆ ಕನ್ನಡಾಭಿಮಾನ ದುರಾಭಿಮಾನವಾಗುತ್ತಿದೆ."** ಎಂದು ಒಬ್ಬ ಭಾಷಣಕಾರರು ಒಮ್ಮೆ ಘೋಷಿಸಿದರು. ಈ 'ದುರಾಭಿಮಾನ' ವೂ ಒಂದು ಅಪಶಬ್ದ. ಅದು 'ದುರಭಿಮಾನ' ಎಂದು ಶುದ್ಧರೂಪವನ್ನು ಪಡೆಯಬೇಕು. ಹೀಗೆಯೇ ಪುನರವತಾರ ಎಂಬ ರೂಪದ ಶಬ್ದವನ್ನು 'ಪುನರಾವತಾರ' ಮುಂತಾದ ಅಶುದ್ಧ ರೂಪದಲ್ಲಿ ಉಪಯೋಗಿಸುವುದನ್ನು ಎಷ್ಟು ಕಡಿಮೆ ಮಾಡಿದರೆ ಅಷ್ಟು ಒಳ್ಳೆಯದು. ಬರಹದಲ್ಲಿ, ಮಾತಿನಲ್ಲಿ ನಾವು ಉಪಯೋಗಿಸುವ ಶಬ್ದ ಸ್ವರೂಪದ ಕಡೆ ಎಚ್ಚರಿಕೆ ಈಚೀಚೆಗೆ ಹೆಚ್ಚು ಅಗತ್ಯವಾಗುತ್ತಿದೆ.

**ಯೋಗವಾಹ ಎಂದರೇನು?** ಭಾಷೆಯಲ್ಲಿ ಅನುಸ್ವಾರ ವಿಸರ್ಗಗಳೆಂದು ಎರಡು ಧ್ವನಿಗಳಿವೆ. ಇವುಗಳನ್ನು ನಾವು ಸ್ವತಂತ್ರವಾಗಿ ಉಚ್ಚರಿಸುವುದಕ್ಕೆ ಆಗುವುದಿಲ್ಲ. ಇವೆರಡಕ್ಕೂ ಹಿಂದೆ ಒಂದು ಸ್ವರಾಕ್ಷರವು ಇದ್ದೇ ಇರಬೇಕು. ಅಂ, ಅಃ ಎಂದು ಬರೆದಾಗ ಅವನ್ನು ಉಚ್ಚರಿಸುವುದು ಸಾಧ್ಯ. ಇತರ ಸ್ವರ + ಅಕ್ಷರಗಳ ಸಂಬಂಧವನ್ನು ಹೊಂದುವುದರಿಂದ ಈ ಎರಡು ಧ್ವನಿಗಳಿಗೆ ಯೋಗವಾಹಗಳೆಂದು ಹೆಸರು. ನೋಡಿ: ರಂಗರಾಯ.

**ಯೋಚನೆ** ಯೋಚನೆ, ಆಲೋಚನೆ, ಸಮಾಲೋಚನೆ. ಯೋಚನೆ ಶಬ್ದದ ಮೂಲ ಇಂದಿಗೂ ಸಂದಿಗ್ಧವಾಗಿಯೇ ಇದೆ. ಸಂಸ್ಕೃತದಲ್ಲಿ ಈ ಶಬ್ದವಿಲ್ಲ. ತಮಿಳು ತೆಲುಗು ಭಾಷೆಗಳಲ್ಲಿ ಯೋಚನೈ, ಯೋಚನ ಎಂಬ ರೂಪಗಳು ಉಪಯೋಗದಲ್ಲಿವೆ. ಆದರೆ ಅಲ್ಲಿಯೂ ಇವುಗಳ ಮೂಲ ಸಂದೇಹವಾಗಿಯೇ ಇದೆ. ಕೆಲವರು ಯೋಜನೆಯಿಂದ ಬಂದಿರುವ ಸಾಧ್ಯತೆಯಿದೆ ಎನ್ನುತ್ತಾರೆ. ಅದಕ್ಕೆ ತಕ್ಕಷ್ಟು ಪುರಾವೆಗಳಿಲ್ಲ. ಆದರೆ ಅರ್ಥ ಮಾತ್ರ ಸ್ಪಷ್ಟ. ಯೋಚಿಸು ಶಬ್ದಕ್ಕೆ ಚಿಂತಿಸು, ಪರಿಶೀಲಿಸು, ಆಲೋಚನೆ ಮಾಡು ಎಂದರ್ಥ. ಆಲೋಚನೆ, ಆಲೋಚಿಸು ಎಂಬುವು ಆಲೋಕನ, ಲೋಚನ ಎಂಬ ಶಬ್ದಗಳಿಗೆ ಸಂಬಂಧಪಟ್ಟವು. ಆಲೋಚನೆ ಎಂದರೆ ೧. ನೋಟ, ದರ್ಶನ ೨. ಚಿಂತನೆ, ಪರ್ಯಾಲೋಚನೆ, ವಿವೇಚನೆ ಇತ್ಯಾದಿ. ಸಮಾಲೋಚನೆ - ಚೆನ್ನಾದ ಆಲೋಚನೆ ಅಷ್ಟೆ. ಯೋಚನೆ ಶಬ್ದದ ಮೂಲವನ್ನೇ ನಾವು ಮತ್ತಷ್ಟು ಆಳವಾಗಿ ಪರಿಶೀಲಿಸಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರೆ ತಪ್ಪೇನೂ ಇಲ್ಲ. ಈ ಶಬ್ದ ಎಷ್ಟು ಭದ್ರವಾಗಿದೆ ಎಂದರೆ ನಿರ್ಯೋಚನೆ ಎಂಬ ವಿರುದ್ಧ ಶಬ್ದವನ್ನೂ ಸೃಷ್ಟಿಮಾಡಿಸಿಬಿಟ್ಟಿದೆ.

# ರ

**ರ ಕಾರದ ಒತ್ತಾದ '್ರ' ಮತ್ತು 'ರ್' ಈ ಎರಡೂ ಗುರುತುಗಳ ಬಗ್ಗೆ ವಿವರಣೆ** ಕೆಲವರಿಗೆ ಈ ಎರಡೂ ಒಂದೇ ಎಂಬ ಸಂದೇಹವಿದೆ. ರ ಕಾರದ ಒತ್ತು '್ರ' ಬೇರೆ. ಚಕ್ರ, ವಕ್ರ ಈ ಶಬ್ದಗಳಲ್ಲಿರುವುದು ಒಂದು. 'ರ್' ಈ ಚಿಹ್ನೆ ಅರ್ ಕಾರಕ್ಕೆ ಸಂಬಂಧಪಟ್ಟದ್ದು. ಅದನ್ನು ಅರ್ಕಾರದವೊತ್ತು, ಅರ್ಕಾರದೊತ್ತು > ಅರ್ಕಾವೊತ್ತು ಎಂದು ವ್ಯುತ್ಪತ್ತಿ ಮಾಡಬಹುದು. ಧರ್ಮ ಎನ್ನುವುದನ್ನು ರ್ಧಮ ಎಂದು ಬರೆಯುವುದಕ್ಕೆ ಆಗುವುದಿಲ್ಲ. ಇದು 'ರ್ಮ' ಎರಡೂ ಸೇರಿ ರ್ಮ ಎಂಬ ಉಚ್ಚಾರವನ್ನೇ ನೀಡುತ್ತದೆ. ಈ ಕಾಗುಣಿತಕ್ಕೆ ಕಾರಣ ನಾವು ನಮ್ಮ ಕಾಗುಣಿತ ಸಂಸ್ಕೃತದ ರೀತಿಯನ್ನು ಅನುಸರಿಸಿರುವುದು.

**ರಂಗಮಂದಿರ ಕಲಾಮಂದಿರ** ರಂಗಮಂದಿರ, ನಾಟಕ ನಾಟ್ಯ ಮುಂತಾದ ದೃಶ್ಯ ಪ್ರದರ್ಶನಗಳಿಗೆ ಏರ್ಪಾಟಾಗಿರುವ ಸ್ಥಾನ. ಇಲ್ಲಿ ಹೆಚ್ಚಾಗಿ ನಾಟಕ ನಾಟ್ಯಗಳು ನಡೆದರೂ ಸಂಗೀತ ಮುಂತಾದ ಕಾರ್ಯಕ್ರಮಗಳಾಗಬಾರದೆಂದೇನೂ ಇಲ್ಲ. ಆದರೆ ಕಲಾಮಂದಿರವನ್ನು ಹೆಚ್ಚಾಗಿ ಚಿತ್ರ ಶಿಲ್ಪ ಕಲೆಗಳಿಗೆ ಮೀಸಲಾಗಿಟ್ಟು ಅಲ್ಲಿಯೇ ಪ್ರದರ್ಶನ ಏರ್ಪಡಿಸುತ್ತಾರೆ.

**ರಂಗರಾಯ** ಎಂಬುದನ್ನು ಸಾಲಿನ ಕೊನೆಯಲ್ಲಿ ರ ಎಂದು ಬರೆದು ಮುಂದಿನ ಸಾಲಿನ ಮೊದಲಿನಲ್ಲಿ ಂಗರಾಯ ಎಂದು ಬರೆಯಬಹುದೇ ಎಂದು ಪ್ರಶ್ನೆ. ಹಾಗೆ ಬರೆಯುವುದೂ ಮುದ್ರಿಸುವುದೂ ತಪ್ಪು. ಂ ಇದು ಅನುಸ್ವಾರ, ಃ ಇದು ವಿಸರ್ಗ. ಇವುಗಳನ್ನು ವ್ಯಾಕರಣದಲ್ಲಿ ಯೋಗವಾಹಗಳೆಂದು ಕರೆಯುತ್ತಾರೆ. ಯೋಗವಾಹ ಎಂದರೆ **ಯೋಗಂ, ವರ್ಣಾಂತರೇಣ ಸಂಬಂಧಂ, ವಾಹಯತಿ** ಎಂದು ಈ ಶಬ್ದದ ವಿವರಣೆ. ಈ ಯೋಗವಾಹಗಳನ್ನು ಸ್ವತಂತ್ರವಾಗಿ ಉಚ್ಚರಿಸುವುದು ಅಸಾಧ್ಯ. ಅವುಗಳ ಹಿಂದೆ ಯಾವುದಾದರೂ ಒಂದು ಸ್ವರವು ಅವಶ್ಯವಾಗಿ ಇರಲೇಬೇಕು. ವರ್ಣಗಳಲ್ಲಿ ಈ ಅನುಸ್ವಾರ ವಿಸರ್ಗಗಳಿಗೆ ಸ್ಥಾನವಿಲ್ಲ. ಹೀಗಿರುವುದರಿಂದ ರಂಗ ಎಂಬ ಶಬ್ದದಲ್ಲಿ ರಂ ಎಂಬುದು ಒಂದೇ ಅಂಶ. ಅದನ್ನು ಕತ್ತರಿಸಿ ಎರಡಾಗಿ ಮಾಡಬಾರದು. ರಾಮ ಎಂಬಲ್ಲಿ ರ್ ಎಂಬುದನ್ನು ಒಂದು ಸಾಲಿನ ಕೊನೆಯಲ್ಲಿ ಬರೆದು ಮುಂದಿನ ಸಾಲಿನ ಪ್ರಾರಂಭದಲ್ಲಿ ಾ ಎಂಬುದನ್ನು ಬರೆದರೆ ಎಷ್ಟು ಅನುಚಿತವೋ ಈ ಅನುಸ್ವಾರ ವಿಸರ್ಗಗಳ ಕಥೆಯೂ ಹಾಗೆಯೇ ಅನುಚಿತ. ಅನುಸ್ವಾರ ವಿಸರ್ಗಗಳನ್ನು ಅವು ಸಂಬಂಧಿಸಿದ ಅಕ್ಷರದ ಜೊತೆಯಲ್ಲಿಯೇ ಬರೆಯಬೇಕು ಅಥವಾ ಮುದ್ರಿಸಬೇಕು. ಅಷ್ಟೇ ಅಲ್ಲ. ಎರಡು ಮೂರು ಅಕ್ಷರಗಳುಳ್ಳ ಶಬ್ದಗಳನ್ನು ಬರೆಯುವಾಗಲೂ ಎಚ್ಚರಿಕೆ ಅಗತ್ಯ. ಶಾಮಲ ಎಂಬುದನ್ನು ಶಾ-ಮಲ ಎಂದು ಬಿಡಿಸಬಾರದು. ಶಾಮ-ಲ ಎಂದೂ ಬಿಡಿಸಬಾರದು. ಬೇರು ಎಂಬುದನ್ನು ಬೆ-ೀರು ಎಂದಾಗಲೀ ಬೇ-ರು ಎಂದಾಗಲೀ ಬಿಡಿಸಿ ಬರೆಯಬಾರದು. ಮೈದಾನವನ್ನು ಮೈ-ದಾನ ಎಂದು ಬಿಡಿಸುವುದು ಅನುಚಿತ. ನಮ್ಮ ವೃತ್ತಪತ್ರಿಕೆಗಳಲ್ಲಿ ಈ ಬಗೆಯ ಮುದ್ರಣ ಕಾಣಬರುತ್ತಿದೆ. ಇದು ಕನ್ನಡವನ್ನು ಹಾಳು ಮಾಡುವ ಬಗೆ.

**ರಂಜನಾ** ಶಬ್ದಕ್ಕೆ ಸಂಸ್ಕೃತದಲ್ಲಿ ಬಣ್ಣ ಬಳಿಯುವುದು, ಸಂತೋಷ ಪಡಿಸುವುದು, ಆಕರ್ಷಕವಾಗಿರುವುದು ಎಂದು ಅರ್ಥಗಳಿವೆ. ಇದನ್ನು ತಮ್ಮ ಹೆಸರಾಗಿ ಇಟ್ಟುಕೊಳ್ಳಲು ಸ್ತ್ರೀಯರು ಅಪೇಕ್ಷಿಸುತ್ತಾರೆ. ಉಚ್ಚಾರಣೆಗೆ ಬಾಯಿ ತುಂಬುವ ಶಬ್ದ.

**ರಂಪ** ಕನ್ನಡದಲ್ಲಿ ಎರಡು ರಂಪಗಳಿವೆ. ೧. ಗರಗಸ - ಮರ, ಚರ್ಮ ಮೊದಲಾದವುಗಳನ್ನು

ಕತ್ತರಿಸುವ ಕಬ್ಬಿಣದ ಸಾಧನ. ಕ್ರಕಚ ಎಂದು ಸಂಸ್ಕೃತದ ಹೆಸರಿರುವ ಸಾಧನ. ತೆಲುಗಿನಲ್ಲಿ ಇದು ರಂಪ ಎಂದಿದೆ. ೨. ರಗಳೆ ಎಂಬರ್ಥದ ರಂಪ. ಇದು ಕೊಡವ, ತೆಲುಗು ಭಾಷೆಗಳಲ್ಲಿಯೂ ಇದೆ. ಇದೇ ಅರ್ಥ. ಮಗು ರಂಪ ಮಾಡುತ್ತಿದೆ, ಎಂಬ ಮಾತನ್ನು ಗಮನಿಸಿ. ಹಟದಿಂದ ಅಳುವ ಕಾರ್ಯ ಇದು. ಗದ್ದಲ, ಗಲಾಟೆ, ಚಲ್ಲಾ ಪಿಲ್ಲಿ, ಚೆಲ್ಲಾಟ ಇದಕ್ಕೂ ಕೂಡ. ಇದೇನು ರಂಪ? ಎನ್ನುತ್ತಾರೆ. ಮನಸ್ಸಿಗೆ ಬೇಜಾರನ್ನು ತರುವ ಅನೇಕ ಕ್ರಿಯೆಗಳನ್ನು ರಂಪ ಎಂಬ ಶಬ್ದದಿಂದ ಹೆಸರಿಸಬಹುದು. ಮೊದಲ ಅರ್ಥದ ಶಬ್ದಕ್ಕೆ ಮೂಲ **ಜಿಂಪ** ಇರಬಹುದು.

**ರಖಂ** ಎಂಬುದು ಅರಬ್ಬಿಯ 'ರಕ್ಮ್' ಎಂಬ ಶಬ್ದದಿಂದ ಬಂದುದು. ಇದಕ್ಕೆ ಹಿಂದಿಯ "ರಕಂ" ಎಂಬ ರೂಪವೂ ಇದೆ. ಮರಾಠಿಯಲ್ಲಿ 'ರಕ್ಕಮ್' ಮತ್ತು 'ರಕಮ್' ಎಂದಿದೆ. ಇದಕ್ಕೆ ೧. ಹಣ, ಧನ ೨. ರೀತಿ, ಬಗೆ, Variety ಎಂಬ ಅರ್ಥ.

**ರಜ - ರಜಾ** ರಜ, ಇದು ಧೂಳು ತುಂಬಿರುವ ಧಾನ್ಯದ ರಾಶಿ. ಇದು ಸಂಸ್ಕೃತ ಶಬ್ದ. ಧೂಳು, ಹುಡಿ ಎಂಬ ಅರ್ಥವೂ ಇದೆ. ರಜಸ್ ಎಂಬ ಶಬ್ದದಿಂದ ಬಂದದ್ದು. ರಜೋಗುಣ ಎಂಬ ಶಬ್ದವನ್ನು ಗಮನಿಸಿ.

ರಜಾ ಇದು ಅರಬ್ಬಿಯಿಂದ ಬಂದ ಶಬ್ದ. ಇದಕ್ಕೆ ಬಿಡುವು, ಸೂಟಿ ಎಂದರ್ಥ. ಕೆಲಸಗಾರರು ತಮ್ಮ ಅಧಿಕಾರಿಯಿಂದ ಅಪ್ಪಣೆ ಪಡೆದು ಕೆಲಸದ ವಿನಾಯತಿಯನ್ನು ಪಡೆಯುವುದು, ಎಂದೂ ಅರ್ಥವಾಗುತ್ತದೆ.

**ರಜಕ** ಈ ಸಂಸ್ಕೃತದ ಶಬ್ದಕ್ಕೆ ಕನ್ನಡದಲ್ಲಿ ಅಗಸ, ಮಡಿವಾಳ ಎಂದರ್ಥ. ಬಟ್ಟೆಗಳನ್ನು, ವಸ್ತ್ರಗಳನ್ನು ಬೆಳ್ಳಗೆ ಮಾಡುತ್ತಾನೆ. ಬೆಳಗುವಂತೆ ಮಾಡುತ್ತಾನೆ ಎಂದು ರಜಕ ಎಂದು ಹೆಸರು. **ರಂಜಯತಿ ವಸ್ತ್ರಾಣಿ ಇತಿ ರಜಕಃ** ಎಂದು ಒಂದು ಟೀಕೆ. ಈ ಶಬ್ದಕ್ಕೆ ಸಂಸ್ಕೃತದಲ್ಲಿ ನಿರ್ಣೇಜಕ ಎಂಬ ಇನ್ನೊಂದು ಹೆಸರಿದೆ. ಹೀಗೆ ಅನೇಕ ಹೆಸರುಗಳಿದ್ದರೂ ಈಗ ಎಲ್ಲರೂ ಉಪಯೋಗಿಸುವ ಶಬ್ದ ಒಂದೇ ಹಿಂದೀ ಶಬ್ದ ಧೋಬೀ, ಡೋಬಿ, ದೋಬಿ.

**ರಜತೋತ್ಸವ, ಜ್ಯೂಬಿಲಿ** ಈ ಶಬ್ದ ಲ್ಯಾಟಿನ್, ಹೀಬ್ರೂ, ಗ್ರೀಕ್ ಭಾಷೆಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಪ್ರಚಾರದಲ್ಲಿದೆ. ಹೀಬ್ರೂ ಭಾಷೆಯಲ್ಲಿ Yobel ಎಂಬ ಶಬ್ದಕ್ಕೆ ಟಗರು, ಟಗರಿನ ಕೊಂಬಿನಿಂದ ಮಾಡಿದ ತುತ್ತೂರಿ, ಸಂತೋಷ ಸಮಾರಂಭ ಎಂಬ ಅರ್ಥಗಳಿವೆ. ಲ್ಯಾಟಿನ್ ಭಾಷೆಯಲ್ಲಿ Jubilum ಎಂದರೆ ಸಂತೋಷದ ಕೂಗಾಟ ಎಂದರ್ಥ. ಯಹೂದಿಗಳು ಈಜಿಪ್ಟಿನ ಕಡೆಯಿಂದ ಬಿಡುಗಡೆ ಹೊಂದಿದ ಸಮಾರಂಭವನ್ನು ೫೦ ವರ್ಷಕ್ಕೊಮ್ಮೆ ಆಚರಿಸುವ ಪದ್ಧತಿ ಇತ್ತು. ಕ್ರಮೇಣ ೫೦ ವರ್ಷಕ್ಕೊಮ್ಮೆ ಆಚರಿಸುವ ಸಮಾರಂಭಕ್ಕೆ Jubilee ಎಂಬ ಹೆಸರು ಪ್ರಯೋಗಕ್ಕೆ ಬಂತು. ರೋಮನ್ ಕ್ಯಾಥೋಲಿಕ್ ಚರ್ಚುಗಳು ಕೆಲವು ಸಮಾರಂಭಗಳಿಗೆ ಆಗಾಗ ಈ ಹೆಸರನ್ನು ಉಪಯೋಗಿಸುತ್ತವೆ. ಇಂಗ್ಲೆಂಡಿನಲ್ಲಿ ವಿಕ್ಟೋರಿಯಾ ಮಹಾರಾಣಿಯ ಸಿಂಹಾಸನಾರೋಹಣದ ೬೦ನೆಯ ವರ್ಷವನ್ನು ಡೈಮಂಡ್ ಜ್ಯೂಬಿಲಿ ಎಂಬ ಹೆಸರಿನಲ್ಲಿ ಆಚರಿಸಿದರು. ಭಾರತದಲ್ಲಿ ಇಂಗ್ಲೆಂಡಿನವರು ಆಡಳಿತ ನಡೆಸುತ್ತಿದ್ದ ಸಮಯದಲ್ಲಿ Jubilee ಗಳ ಆಚರಣೆ ಪ್ರಾರಂಭವಾಯಿತು. ಇದಕ್ಕೆ ಒಂದು ವ್ಯವಸ್ಥೆ ಬಂದು ೨೫, ೫೦, ೬೦ ನೆಯ ವರ್ಷಗಳಲ್ಲಿ ಆಚರಿಸುವ ಸಮಾರಂಭಕ್ಕೆ ರಜತ ಮಹೋತ್ಸವ (Silver Jubilee) ಸುವರ್ಣ ಮಹೋತ್ಸವ (Golden Jubilee) ವಜ್ರಮಹೋತ್ಸವ (Diamond Jubilee) ಎಂಬ ಹೆಸರುಗಳು ಕ್ರಮವಾಗಿ ಪ್ರಚಾರಕ್ಕೆ ಬಂದುವು. ರಸಾಯನ ಶಾಸ್ತ್ರದ Periodic Table ಪ್ರಕಾರ ಲೋಹಗಳಲ್ಲಿ ತಾಮ್ರ, ಬೆಳ್ಳಿ, ಚಿನ್ನ, ಪ್ಲಾಟಿನಂ ಇವುಗಳು ಕ್ರಮವಾಗಿ ಹೆಚ್ಚು ಮೌಲಿಕವಾದ ಸ್ಥಾನಗಳನ್ನು ಪಡೆಯುತ್ತವೆ.

ಇದಕ್ಕೆ ಕಾರಣ ಅವುಗಳ ಅಧಿಕಾಧಿಕ ರಾಸಾಯನಿಕ ಸತ್ವ. ಇದಕ್ಕೆ Platinum ಗೆ ಹೆಚ್ಚು ಗೌರವವನ್ನು Periodic Recurrence of Propertiesಮೇಲೆ ಗುರುತಿಸುತ್ತಾರೆ. ಆದುದರಿಂದ Platinum Jubilee ಎಲ್ಲಕ್ಕಿಂತ ದೊಡ್ಡ ಸಮಾರಂಭ ಎಂದು ಗೌರವಿಸುತ್ತಾರೆ. ಈಚೆಗೆ ಈ Platinum Jubileeಗೆ ಅಮೃತ ಮಹೋತ್ಸವ ಎಂದು ಹೆಸರಿಟ್ಟು ಆಚರಿಸುತ್ತಿದ್ದಾರೆ. ಇದಕ್ಕೆ ಯಾವ ಚಾರಿತ್ರಕ ಸಾಂಪ್ರದಾಯಿಕ ಆಧಾರ ಇದ್ದಂತಿಲ್ಲ.

ಹಿಂದೂ ಸಂಪ್ರದಾಯದಲ್ಲಿ **ಷಷ್ಟ್ಯಬ್ದ ಪೂರ್ತಿ** ಎಂದು ವ್ಯಕ್ತಿಯ ೬೦ನೆಯ ಹುಟ್ಟಿದ ಹಬ್ಬವನ್ನು ಆಚರಿಸುತ್ತಾರೆ. **ಸಹಸ್ರ ಚಂದ್ರದರ್ಶನ** ಎಂದು ೮೦ ನೆಯ ವರ್ಷವನ್ನು ಆಚರಿಸುತ್ತಾರೆ. ಆದರೆ ಶತಾಯುಷಿಗಳನ್ನು ಹೀಗೆ ಸಾಂಪ್ರದಾಯಿಕವಾಗಿ ಆಚರಣೆಗೆ ಒಳಗುಪಡಿಸಿದ ಉದಾಹರಣೆಗಳಿಲ್ಲ. ಈಚೆಗೆ ಜನ್ಮ ಶತಾಬ್ದಿ ಎಂದು Birth Centenary ಆಚರಿಸುತ್ತಾರೆ. ಈ ವೇಳೆಗೆ ವ್ಯಕ್ತಿಗಳು ಸತ್ತು ಅನೇಕ ವರ್ಷಗಳಾಗಿರಬಹುದು. ಸಂಘ ಸಂಸ್ಥೆಗಳ ಶತಮಾನೋತ್ಸವಗಳೂ ಉಂಟು. ಹೀಗಿದೆ ಈ Jubileeಗಳ ಚರಿತ್ರೆ. ನೋಡಿ: ಅಮೃತೋತ್ಸವ.

**ರಜನೀ** ಎಂಬುದು ಸಂಸ್ಕೃತದ ಶಬ್ದ. ಅದು ಕನ್ನಡದಲ್ಲಿ ರಜನಿ ಎಂದಾಗುತ್ತದೆ. ಅದಕ್ಕೆ ರಾತ್ರಿ ಎಂದರ್ಥ. ಕತ್ತಲೆಯಿಂದ ಸೊಗಸುತ್ತಾಳೆ ಎಂದು ರಜನಿ ಎಂಬ ಹೆಸರಿನ ಅರ್ಥ.

**ರತ್ನಾಕರ** ರತ್ನ + ಆಕರ = ರತ್ನಾಕರ, ರತ್ನಗಳಿರುವ ಮನೆ ಅಂದರೆ ಸಮುದ್ರ ಎಂದರ್ಥ. ಅಮರದಲ್ಲಿ '**ರತ್ನಾಕರೋ ಜಲನಿಧಿಃ ಯಾದಃಪತಿರಪಾಂಪತಿಃ**' ಎಂದಿದೆ. ರತ್ನಾಕರ ಎಂದರೆ, ಜಲನಿಧಿ, ಜಲಚರಗಳ ಒಡೆಯ, ನೀರಿನ ರಾಜ ಎಂದು ಅರ್ಥ. ಸಮುದ್ರಕ್ಕೆ ಬೇರೆ ಬೇರೆ ಹೆಸರುಗಳೂ ಇವೆ. ರತ್ನಾಕರ ಸಮುದ್ರವಾದರೆ, ರತ್ನಗರ್ಭೆ ಭೂಮಿ. ಹೀಗೆ ಶಬ್ದಗಳು ಬೆಳೆಯುತ್ತ ಹೋಗುತ್ತವೆ.

**ರಬ್ಬರ್** ಎಂಬ ಹೆಸರು ಹೇಗೆ ಬಂದಿತೆಂದು ಇನ್ನೂ ನಿರ್ಧಾರವಾಗಿ ಹೇಳುವುದು ಸಾಧ್ಯವಾಗಿಲ್ಲ. ಇದು ಏಷ್ಯಾ ದೇಶದ ಗಿಡವೆಂದು ಹೇಳುತ್ತಾರೆ. ಬ್ರೆಜಿಲ್, ದಕ್ಷಿಣ ಅಮೇರಿಕಾದ ಇತರ ಪ್ರದೇಶಗಳು, ಮಲಯಾ, ಇಂಡೋನೇಷಿಯಾ ದೇಶಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಇದು ಅಂಕಿತನಾಮವಾದುದರಿಂದ ಅದನ್ನು ಹಾಗೆಯೇ ಉಪಯೋಗಿಸಬೇಕು. ಕನ್ನಡದಲ್ಲಿ ಅದು ರಬ್ಬರು ಎಂದಾಗುತ್ತದೆ. ಈ ಗಿಡ ನೂರು ಅಡಿಗಳಿಗಿಂತ ಹೆಚ್ಚು ಎತ್ತರವಾಗಿ ಬೆಳೆಯುತ್ತದೆ. ಮನೆಯೊಳಗೆ ಬೆಳೆಯುವ ಅಸ್ಸಾಂ ರಬ್ಬರ್ ಎಂಬ ಕುಬ್ಜ ಗಿಡವೂ ಇದೆ.

**ರಬ್ಬಳಿಗಿ** ರಬ್ಬಳಿಗೆ, ರಬ್ಬಳಿಕೆ, ರಬ್ಬಳಿಗಿ ಎಂಬ ಮೂರು ಶಬ್ದಗಳೂ ಪರ್ಯಾಯ ರೂಪಗಳು. ಸಣ್ಣಾಗಿ ಗುಂಡಗಿರುವ ಧಾನ್ಯದಿಂದ ಮಾಡಿದ ಗಂಜಿ, ಜೋಳದ ಗಂಜಿ ಎಂದು ಇದರ ಅರ್ಥ. ಇದರ ವ್ಯುತ್ಪತ್ತಿ ಅನುಮಾನಾಸ್ಪದವಾಗಿದೆ.

**ರಮಣೀಯ** ಸುಂದರವಾದ, ಮನೋಹರವಾದ, ಚೇತೋಹಾರಿಯಾದ, ಆಕರ್ಷಕವಾದ ಎಂದರ್ಥ. ಈ ಶಬ್ದಕ್ಕೆ ಸಂತೋಷಗೊಳಿಸುವ ಎಂಬ ಅರ್ಥವೂ ಇದೆ. ಸಂಸ್ಕೃತ ಶಬ್ದ.

**ರಯ್** ಇದು ಸಂಸ್ಕೃತ ಶಬ್ದ ರೈ. ಇದಕ್ಕೆ ಸಿರಿ, ಸಂಪತ್ತು, ಸಮೃದ್ಧಿ. ಕುವೆಂಪು ರಚಿತ ರಾಮಾಯಣದಲ್ಲಿ ರಾವಣ ವಧೆಯಾದ ಮೇಲೆ ಸೀತೆಯ ಅಗ್ನಿ ಪರೀಕ್ಷೆಯಾಗುವ ಸನ್ನಿವೇಶವನ್ನು ಚಿತ್ರಿಸುವ ಭಾಗಕ್ಕೆ **ರಯ್‌ಗೆ ಕರೆದೊಯ್, ಓ, ಅಗ್ನಿ!** ಎಂದು ಹೆಸರನ್ನು ನೀಡಲಾಗಿದೆ. ಈ ವಿಚಿತ್ರ ಸಂದರ್ಭದಲ್ಲಿ ಸೀತೆ ಮಾತ್ರ ಅಗ್ನಿಯಿಂದ ಪರಿಶುದ್ಧೆಯಾಗುವುದಿಲ್ಲ. ಅವಳೊಡನೆ ರಾಮನೂ ಅಗ್ನಿಪರೀಕ್ಷೆಗೆ ಒಳಗಾಗುತ್ತಾನೆ. ಅದು ಅಗ್ನಿಯೇ ಎಲ್ಲರನ್ನೂ ಸಮೃದ್ಧಿಗೆ ಕರೆತಂದಂತೆ ಆಗುತ್ತದೆ.

**ರವಷ್ಟು** ರವೆಯಷ್ಟು ಶಬ್ದ ಇದು. ರವೆ ಶಬ್ದಕ್ಕೆ ಪುಡಿ, ಸಣ್ಣ ಚೂರು ಎಂಬ ಅರ್ಥವಿದೆ. ಇದು ಸಂಸ್ಕೃತದ ರಜಸ್ = ಧೂಳು ಶಬ್ದದಿಂದ ಬಂದಿರಬಹುದು. ರಜಸ್ > ರಯ < ರವೆ.

ರವೆಯು + ಅಷ್ಟು = ರವೆಯಷ್ಟು = ಅತಿ ಅಲ್ಪ. ಆಡುಮಾತಿನಲ್ಲಿ ರವಷ್ಟು, ರೋಷ್ಟು ಆಗಿದೆ.

**ರವಾನೆ** ಇದು ಪಾರಸೀ ಭಾಷೆಯ ರವಾನ ಎಂಬ ಶಬ್ದದಿಂದ ಬಂದದ್ದು. ಆ ಭಾಷೆಯಲ್ಲಿ ಆ ಶಬ್ದಕ್ಕೆ ಹೋಗುವುದು, ಕಳುಹಿಸುವುದು, ಕಳುಹಿಸು ಎಂಬ ಅರ್ಥಗಳಿವೆ. ಕನ್ನಡದಲ್ಲಿ ಕಳುಹಿಸುವುದು ಎಂಬ ಅರ್ಥದಲ್ಲಿ ಉಪಯೋಗವಾಗುತ್ತಿದೆ.

**ರಶೀದಿ, ರಸೀದಿ** ಇದು ಇಂಗ್ಲಿಷಿನ Receipt ಎಂಬ ಶಬ್ದದ ಕನ್ನಡ ರೂಪ. ಈ ಎರಡು ರೂಪಗಳೂ ಪ್ರಚಾರದಲ್ಲಿವೆ. ಇದಕ್ಕೆ ಹಣ ಅಥವಾ ಯಾವುದಾದರೂ ವಸ್ತು ಸಂದ ದಾಖಲೆ ಎಂದು ಅರ್ಥ.

**ರಸಿಕ** ಸಂಸ್ಕೃತ ಶಬ್ದ. ತುಂಬ ಅರ್ಥವತ್ತಾದುದು. *೧. ಸುಸಂಸ್ಕೃತ ೨. ಕಲೆಗಳನ್ನು ಮೆಚ್ಚುವ ಸಾಮರ್ಥ್ಯವುಳ್ಳವನು ೩. ಸೌಂದರ್ಯವೆಂದರೆ ಏನೆಂದು ತಿಳಿದವನು ೪. ಕಾಮುಕ ೫. ಭಾವುಕ ೬. ವ್ಯಭಿಚಾರಿ. ಇವಲ್ಲದೆ ಕೇವಲ ನಿಘಂಟುಗಳಲ್ಲಿ ಮಾತ್ರ ಇರುವ ೭. ಆನೆ. ೮. ಕುದುರೆ ೯. ಕಬ್ಬಿನ ರಸ ಎಂಬ ಅರ್ಥಗಳೂ ಇವೆ.* ಪ್ರಮುಖವಾಗಿ ಸಾಹಿತ್ಯ, ಸಂಗೀತ, ನಾಟ್ಯ, ಶಿಲ್ಪ, ಚಿತ್ರಲೇಖನ ಮುಂತಾದ ಕಲೆಗಳಲ್ಲಿ ಆಳವಾದ ತಿಳಿವಳಿಕೆ ಹೊಂದಿ, ಒಳ್ಳೆಯಡನ್ನು ಮೆಚ್ಚುವವನು ಎಂಬುದೇ ಸರಿಯಾದ ಅರ್ಥ. ಮಿಕ್ಕದ್ದೆಲ್ಲ ಬೇರೆ ಬೇರೆ ದಿಕ್ಕಿನಲ್ಲಿ ಹಬ್ಬಿಕೊಂಡಿರುವ ವ್ಯಾಪಕವಾದ ಅರ್ಥ. ರಸಿಕ ರಂಜಿನಿ, ರಸಿಕ ಚಂದ್ರಿಕೆ, ರಸಿಕ ಸರ್ವಸ್ವ ಎಂಬ ಸಂಸ್ಕೃತ ಗ್ರಂಥಗಳಿವೆ, ಈ ಶಬ್ದದ ಅರ್ಥವ್ಯಾಪ್ತಿಯನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಎನ್ನಬಹುದು. ರಸಿಕಾ ಎಂಬುದು ಸಂಸ್ಕೃತದಲ್ಲಿ ಸ್ತ್ರೀಲಿಂಗ ಶಬ್ದ. ಕನ್ನಡದಲ್ಲಿ ರಸಿಕಾ ಶಬ್ದ ರಸಿಕೆ ಎಂದಾಗುತ್ತದೆ. ಆದರೆ ರಸಿಕೆ ಶಬ್ದಕ್ಕೆ ಲಸಿಕೆ ಮುಂತಾದ ಅರ್ಥಗಳಿವೆ. ಆದ್ದರಿಂದ ರಸಿಕಳು ಎಂದು ಹೇಳುವುದು ಒಂದೇ ಮಾರ್ಗ. ನೋಡಿ: ಅರಸಿಕ.

**ರಸ್ತೆ** ನೋಡಿ: ಓಣಿ

**ರಾಕ್ಷಸ** ನೋಡಿ: ಅಸುರ

**ರಾಚನಿಕ** ಸಂಸ್ಕೃತದಲ್ಲಿ ರಚನಾ ಎಂಬ ಶಬ್ದವಿದೆ. ಇದಕ್ಕೆ ಕಾರ್ಯ, ಏರ್ಪಾಟು, ರಚಿಸುವುದು, ಗ್ರಂಥರಚನೆ, ಅಲಂಕಾರ ಮಾಡುವುದು ಮುಂತಾದ ಅರ್ಥಗಳಿವೆ. ಇದರಿಂದ ರಚನೀಯ ಎಂಬ ವಿಶೇಷಣವನ್ನು ಮಾಡಿಕೊಳ್ಳಬಹುದು. ಆಧುನಿಕ ಕನ್ನಡ ಲೇಖಕರು ಇಂಗ್ಲಿಷ್‌ನ ಕೆಲವು ಶಬ್ದಗಳಿಗೆ ಸಮನಾದ ಶಬ್ದಗಳನ್ನು ಸೃಷ್ಟಿ ಮಾಡುತ್ತಿದ್ದೇವೆಂದು ಪ್ರಯತ್ನಿಸಿ ಸೃಷ್ಟಿಸಿರುವ ರೂಪಗಳು ಕೆಲವಿವೆ. ಅವುಗಳಲ್ಲಿ ರಾಚನಿಕ ಒಂದು. ಇದಕ್ಕೆ ರಚನೆಗೆ ಸಂಬಂಧಿಸಿದ ಎಂದು ಅರ್ಥ.

**ರಾಜಕಾರಣ** ರಾಜ್ ಎಂಬ ಸಂಸ್ಕೃತ ಧಾತುವಿಗೆ ಆಡಳಿತ ಮಾಡು ಎಂದೂ ಸೊಗಸಾಗಿ ರಂಜಿಸು ಎಂದೂ ಅರ್ಥ. ದೊರೆಗೂ ಆಡಳಿತದ ಮುಖ್ಯಸ್ಥನಿಗೂ ಅದನ್ನು ಅನ್ವಯಿಸಬಹುದು. ಭಾಷೆಯಲ್ಲಿ ಅನೇಕ ಹಿಂದಿನ ಶಬ್ದಗಳಿಗೆ ಹೊಸ ಅರ್ಥವನ್ನು ಹೊಂದಿಸುತ್ತಾರೆ. ಆ ಅರ್ಥಗಳು ಬದುಕಿಕೊಳ್ಳುತ್ತವೆ. ಪ್ರಮುಖರ, ಮುಂದಾಳುಗಳ ಕೆಲಸ - ರಾಜಕಾರಣ. ಆಡಳಿತದಲ್ಲಿ ಸಾಮರ್ಥ್ಯವಿರುವವರನ್ನು ರಾಷ್ಟ್ರಕ ಎಂಬ ಹೆಸರಿನಿಂದ ಕರೆಯಬೇಕೆಂದು ಹಿಂದೆಯೇ ಡಿ.ವಿ.ಜಿ. ಯವರು ಸಲಹೆ ನೀಡಿದ್ದರು. ಇದು ತುಂಬ ಒಳ್ಳೆಯ ಶಬ್ದ. Statesman ಎಂಬ ಶಬ್ದಕ್ಕೆ ಸಮಾನ. ಅದನ್ನು ಉಪಯೋಗಿಸುವುದು ಒಳ್ಳೆಯದು. ಈಗೀಗ ರಾಜಕಾರಣ ಎಂದರೆ ಕಚ್ಚಾಟ, ಆಂತರಿಕ ಗೊಂದಲ, ಮುಸುಕಿನ ಒಳಗಿನ ಗುದ್ದು ಎಂಬ ಅರ್ಥಗಳು ಪ್ರಚಾರದಲ್ಲಿವೆ.

**ರಾಜಕೀಯ** ಇದು ಸಂಸ್ಕೃತ ಶಬ್ದ. ರಾಜನಿಗೆ ಸಂಬಂಧಪಟ್ಟ ಎಂದು ವಿಶೇಷಣಾರ್ಥ ಅದಕ್ಕೆ.

ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ಎಂದೂ ಅರ್ಥವಾಗಬಹುದು. ಈ ಶಬ್ದವನ್ನೇ ನಾಮಪದವಾಗಿ ಉಪಯೋಗಿಸಿದರೆ, ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ವ್ಯವಹಾರ, ಸರಕಾರದ ಕೆಲಸ ಎಂದೂ ಅರ್ಥವಾಗುತ್ತದೆ. ಇದೆಲ್ಲ ಈ ಶಬ್ದದ ಸಾಮಾನ್ಯವಾದ ಅರ್ಥ. ಆದರೆ ಇದಕ್ಕೆ ವಿಶೇಷವಾದ, ಜನರಲ್ಲಿ ತುಂಬ ಪ್ರಚಾರದಲ್ಲಿರುವ ಒಂದು ಅರ್ಥವಿದೆ. **'ಅವನು ರಾಜಕೀಯ ಮಾಡುತ್ತಾನೆ'** ಎಂಬ ವಾಕ್ಯವನ್ನು ನೋಡಿ. ಇದರಲ್ಲಿ ಪಿತೂರಿ, ಒಳಸಂಚು, ಕಿತಾಪತಿ, ತರಳೆ, ಉಪದ್ವ್ಯಾಪ ಮುಂತಾದ ಅರ್ಥಗಳು ಬೆಳೆದಿವೆ. ಈಗಂತೂ ಈ ಅರ್ಥಗಳಿಗೇ ಪ್ರಾಮುಖ್ಯವಿದೆ. ಸ್ವಾರಸ್ಯವೇನೆಂದರೆ, Politics ಎಂಬ ಇಂಗ್ಲಿಷ್ ಭಾಷೆಯ ಶಬ್ದಕ್ಕೂ ಕೂಡ ಇದೇ ರೀತಿಯ ಅರ್ಥಗಳು ಬೆಳೆದಿವೆ ಎಂಬುದು.

**ರಾಜನ್** ಎಂಬ ಸಂಸ್ಕೃತದ ಶಬ್ದ. ರಾಜ ಎಂದು ಕನ್ನಡವಾಗುತ್ತದೆ. ಅದು ತದ್ಭವ. ಅದೇ ಶಬ್ದ ಮುಂದೆ **ರಾಯ** ಎಂದಾಗುತ್ತದೆ. ಅದು ಒಂದು ಬೆಳವಣಿಗೆ. ಅದು ಮುಂದೆ **ರಾವ್** ಆಗಿದೆ. ಹೀಗೆ ಶಬ್ದಗಳು ಬದಲಾಗುತ್ತ ಹೋಗುತ್ತವೆ.

**ರಾಜೀನಾಮೆ** ಪಾರಸೀ ಭಾಷೆಯಲ್ಲಿ ರಾಜೀನಾಮಾ ಎಂಬ ಶಬ್ದವಿದೆ. ಅದೇ ಕನ್ನಡದ ರಾಜೀನಾಮೆ. ಅಂದರೆ ಸ್ವಂತ ಇಚ್ಛೆಯಿಂದ ಅಧಿಕಾರ ಬಿಡುವ ಉದ್ದೇಶ ತಿಳಿಸುವ ಪತ್ರ.

**ರಾತ್ರಿಂಚರ** ರಾತ್ರಿಂಚರ ಎಂಬುದು ಸಂಸ್ಕೃತದ ಶಬ್ದ. ರಾತ್ರಿಚರ ಎಂಬ ಶಬ್ದವೂ ಇದೆ. ಈ ಶಬ್ದಗಳಲ್ಲಿರುವ 'ಚರ' ಎಂಬುದೇ ಬೇರೆಯ ಶಬ್ದ. ಇದಕ್ಕೆ ಚರಿಸುವುದು ಓಡಾಡುವುದು ಎಂಬುದು ಒಂದು ಅರ್ಥ. ತಿನ್ನುವುದು ಎಂಬುದು ಇನ್ನೊಂದು ಅರ್ಥ. ಆದುದರಿಂದ ರಾತ್ರಿಂಚರ ಶಬ್ದಕ್ಕೆ ರಾತ್ರಿಯಲ್ಲಿ ಓಡಾಡುವವನು, ಅಥವಾ ರಾತ್ರಿಯಲ್ಲಿ ಆಹಾರವನ್ನು ಹುಡುಕಿ ತಿನ್ನುವವನು ಎಂದು ಅರ್ಥ. ಅಂದರೆ ರಾಕ್ಷಸ, ನಿಶಾಚರ ಎಂಬುದು ಸ್ಪಷ್ಟ.

**ರಾಮನ ಲೆಕ್ಕ ಕೃಷ್ಣನ ಲೆಕ್ಕ** ಇದು ವ್ಯಾಪಾರಗಾರರು ಕೊಳ್ಳುವಾಗಲೂ ಮಾರುವಾಗಲೂ ಉಪಯೋಗಿಸುವ ಬೇರೆ ಬೇರೆ ಲೆಕ್ಕಗಳಿಗೆ ಅನ್ವಯಿಸುತ್ತದೆ. ಅಳತೆಯಲ್ಲಿ ಈ ಎರಡಕ್ಕೂ ವ್ಯತ್ಯಾಸವಿರುತ್ತದೆ. ಕೊಳ್ಳುವಾಗ ದೊಡ್ಡ ಅಳತೆಯನ್ನೂ ಮಾರುವಾಗ ಚಿಕ್ಕ ಅಳತೆಯನ್ನೂ ಉಪಯೋಗಿಸುತ್ತಾರೆ. ಈ ಎರಡು ಅಳತೆಯ ಲೆಕ್ಕಕ್ಕೆ ಈ ಮಾತು ಅನ್ವಯಿಸುತ್ತದೆ. ಇದನ್ನು ಅವರವರು ಅವರವರ ಅನುಕೂಲಕ್ಕೆ ತಕ್ಕಂತೆ ಅರ್ಥ ಬದಲಾಯಿಸಿ ಉಪಯೋಗಿಸುತ್ತಾರೆ ಎಂಬ ನಂಬಿಕೆ ಸಾಮಾನ್ಯರಿಗೂ ಗೊತ್ತಿದೆ. ತಮ್ಮ ಆದಾಯ ಎಷ್ಟು ಬಂದಿದೆ ಎಂದು ತೆರಿಗೆಗಾಗಿ ಲೆಕ್ಕವನ್ನು ತೋರಿಸುವಾಗಲೂ ಹೀಗೆಯೇ ಆದಾಯವನ್ನು ಕಡಿಮೆ ಮಾಡಿ ಲೆಕ್ಕ ಬರೆಯುವ ವ್ಯಾಪಕವಾದ ಪದ್ಧತಿಯಿದೆ. ಹೀಗೆ ಸರಿಯಾದ ಲೆಕ್ಕ ರಾಮನ ಲೆಕ್ಕ. ಕಡಿಮೆಯ ಲೆಕ್ಕ ಕೃಷ್ಣನ ಲೆಕ್ಕ ಅಥವಾ ಅದಲು ಬದಲು ಆಗಬಹುದು. ಇದು ವ್ಯಾಕರಣದ ಪ್ರಶ್ನೆಯಲ್ಲ. ವ್ಯವಹಾರದ ಪ್ರಶ್ನೆ.

**ರಾಷ್ಟ್ರಪತಿ** ಈ ಶಬ್ದವನ್ನು ನಮ್ಮ ರಾಷ್ಟ್ರದ ಅತ್ಯಂತ ಪ್ರಮುಖವಾದ ಅಧಿಕಾರದಲ್ಲಿರುವವರಿಗೆ ಅನ್ವಯಿಸಲಾಗುತ್ತಿದೆ. ರಾಷ್ಟ್ರಕ್ಕೆ - ಪತಿ = ಒಡೆಯ. ಇದು ಎರಡು ಶಬ್ದಗಳು ಸೇರಿ ಆಗಿರುವ ಸಮಾಸ ಚತುರ್ಥೀ ತತ್ಪುರುಷ ಅಥವಾ ಷಷ್ಠೀ ತತ್ಪುರುಷ.

**ರಿಯಾಯ್ತಿ** ಈ ಶಬ್ದಕ್ಕೆ ಇನ್ನೆರಡು ಪರ್ಯಾಯ ರೂಪಗಳಿವೆ. ರಿಯಾಯತಿ ರಿಯಾಯಿತಿ. ಇದು ಅರಬ್ಬಿ ಭಾಷೆಯ **ರಿಆಯತ್** ಎಂಬ ಶಬ್ದದಿಂದ ಬಂದದ್ದು. ತೆರಿಗೆ, ದಂಡ, ಶ್ರಮ ಮುಂತಾದುವುಗಳೆಲ್ಲದರಲ್ಲಿ ಅಧಿಕಾರದಲ್ಲಿರುವವರು ಬಿಟ್ಟುಕೊಡುವ ಸೋಡಿ.

**ರಿವಾಜು** ಹಿಂದೀ ಶಬ್ದ. ಇದಕ್ಕೆ ಪದ್ಧತಿ, ಸಂಪ್ರದಾಯ, ಎಂದರ್ಥ. **ಪುರಾನಾ ರಿವಾಜ್** ಎಂದರೆ ಪ್ರಾಚೀನ ಸಂಪ್ರದಾಯ. ಈ ಅರ್ಥದಲ್ಲಿ ನಾವು ಕನ್ನಡದಲ್ಲಿ ಉಪಯೋಗಿಸುತ್ತೇವೆ. ರೀತಿ ರಿವಾಜು ಎಂಬ ಜೋಡು ನುಡಿಯೂ ಇದೆ.

**ರೀತಿ - ನೀತಿ** ನೋಡಿ: ನಡೆ ನುಡಿ

**ರುಕ್ಷ** ಇದು ಸಂಸ್ಕೃತದ ಋಕ್ಷ ಶಬ್ದದ ತದ್ಭವ. ಅರ್ಥ ೧. ಕರಡಿ ಎಂಬ ಪ್ರಾಣಿ. ಇತರ ಅರ್ಥಗಳೂ ಇವೆ. ೨. ನಕ್ಷತ್ರ ೩. ಹನ್ನೆರಡು ನಕ್ಷತ್ರ ರಾಶಿಗಳಲ್ಲಿ ಯಾವುದಾದರೂ ಒಂದು. ಗುಣವಾಚಕವಾಗಿ ಒರಟು ಸ್ವಭಾವದ ಎಂಬ ಅರ್ಥವೂ ಕನ್ನಡದಲ್ಲಿ ಇವೆ.

**ರುಧಿರ** ಎಂದರೆ ರಕ್ತ. ಇದು ಸಂಸ್ಕೃತದ ಶಬ್ದ. **ರುಧ್ಯತೇ ತ್ವಚಾ.** ಚರ್ಮದಿಂದ ಹೊರಬರುತ್ತದೆ, ಹರಿಯುತ್ತದೆ ಎಂದು ರುಧಿರ ಎಂಬ ಹೆಸರು ಅದಕ್ಕೆ.

**ರುಷುವತ್ತು** ಇದು ಅರಬ್ಬಿ ಮತ್ತು ಪಾರಸೀ ಭಾಷೆಗಳೆರಡರಲ್ಲಿಯೂ ಪ್ರಯೋಗದಲ್ಲಿರುವ ಶಬ್ದ. ಅದರ ಮೂಲ ರೂಪ ರಿಶ್ವತ್. ಇದು ಮರಾಠಿಯಲ್ಲಿ ರುಶ್ವತ್ ಆಗಿ ಕನ್ನಡದಲ್ಲಿ ರುಷುವತ್ತು ಮತ್ತು ರುಷವತ್ತು ಎಂಬ ಎರಡು ರೂಪಗಳನ್ನು ಪಡೆದಿದೆ. ಇದಕ್ಕೆ ಲಂಚ ಎಂದರ್ಥ. ಇಂಗ್ಲಿಷಿನ Bribe. ಅನ್ಯಾಯವಾಗಿ ಯಾವುದೇ ಲಾಭಕ್ಕಾಗಿ ಸಾಕ್ಷಿ ಇಲ್ಲದಂತೆ ತೆರುವ ಹಣ. ಇದಕ್ಕೆ ಒಂದೇ ಶಬ್ದ ಸಾಲದು ಎಂದು ಲಂಚ, ರುಷುವತ್ತು ಎಂದೇ ಪ್ರಯೋಗಿಸುವ ಪದ್ಧತಿ ಇದೆ. ಆಧುನಿಕ ಜನರ ಜೀವನವನ್ನು ಅತ್ಯಂತ ಅವನತಿಗೆ ಇಳಿಸಿರುವ ಇದರ ಪ್ರಭಾವ ಸರ್ವವ್ಯಾಪಿಯಾದುದು. ಆದ್ದರಿಂದಲೇ ಹೊಸ ಗಾದೆ ಉತ್ಪತ್ತಿಯಾಗಿದೆ. **ಲಂಚ ತಿನ್ನದವನೇ ಪಾಪಿ.** ಇದೊಂದು ಹೊಸ ವೃತ್ತಿ, ಕಾಯಕ ಆಗಿರುವುದರಿಂದ ಇದಕ್ಕೆ ಹೊಸ ಪಾರಿಭಾಷಿಕ ಶಬ್ದವನ್ನು ಸೃಷ್ಟಿಸಬೇಕೆಂದು ಜನಸಾಮಾನ್ಯರು ಮಾಡಿರುವ ಶಬ್ದ **ಗುಳುಂಗಾರಿಕೆ. ಗುಳುಂಗಾರ = ಲಂಚವಣಿಗ.**

**ರುಸ್ತುಂ** ಎನ್ನುವುದು ಒಂದು ಅಂಕಿತನಾಮ. ರುಸ್ತುಮನು ಪರ್ಷಿಯಾ ದೇಶದ ಮಹಾಪರಾಕ್ರಮಿ; ನಮ್ಮ ಭಾರತದ ಭೀಮನಂತೆ. ಅವನು ರಾಜನಾದ ಜಾಲ್ ಎಂಬುವನ ಮಗ ಮತ್ತು ಸೆಡ್ಜಿಸ್ತಾನದ ರಾಜಕುಮಾರ. ಅಶ್‌ದೀವ್ ಎಂಬ ಬಿಳಿಯ ದೈತ್ಯ ಡ್ರೇಗನ್ನನ್ನು ಕೊಂದು ಪ್ರಸಿದ್ಧವಾದ ರಾಜಕುಮಾರನಾದ ಇನ್ನೊಬ್ಬ ಪರಾಕ್ರಮಿ ಇಸ್‌ಫೆಂಡಿಯರ್ ಎಂಬುವನೊಡನೆ ಮಾಡಿದ ಎರಡು ದಿನದ ಯುದ್ಧ ಪರ್ಷಿಯಾ ದೇಶದ ಕವಿಗಳಿಗೆ ಪ್ರಧಾನ ಕಥಾ ವಸ್ತುವಾಗಿದೆ. ರುಸ್ತುಮನು ಅವನ ಮಗ ಸೊಹ್ರಾಬನೊಡನೆ ಮಗನೆಂದು ಅರಿಯದೆ ಯುದ್ಧ ಮಾಡಿ ಅವನನ್ನು ಕೊಂದ ದುರಂತ ಕತೆ ಪ್ರಸಿದ್ಧವಾದದ್ದು. ಕನ್ನಡದಲ್ಲಿ ದಿ. ಎಲ್. ಗುಂಡಪ್ಪನವರು ಒಂದು ಕಾವ್ಯವನ್ನು ದಿ. ವಿ. ಸೀತಾರಾಮಯ್ಯನವರು ಒಂದು ನಾಟಕವನ್ನು ರಚಿಸಿದ್ದಾರೆ. ಹೀಗಿರುವುದರಿಂದ ರುಸ್ತುಂ ಎಂಬ ಪದವನ್ನು ಯಾವ ಕ್ಷೇತ್ರದಲ್ಲಾದರೂ ಮಹಾಶಕ್ತನಾದವನಿಗೆ ಗುಣವಾಚಕವಾಗಿ ಉಪಯೋಗಿಸಬಹುದು.

**ರೂಪ-ಕುರೂಪ** ರೂಪ ಶಬ್ದಕ್ಕೆ ವಿರುದ್ಧ ಶಬ್ದ ಕುರೂಪ ತಾನೆ? ಆಸೆ-ನಿರಾಸೆ, ಭಾಗ್ಯ-ನಿರ್ಭಾಗ್ಯ ಮುಂತಾದ ಇತರ ಜೊತೆಯ ಶಬ್ದಗಳೂ ವಿರುದ್ಧ ಶಬ್ದಗಳೇ? ರೂಪಕ್ಕೆ ಕುರೂಪ ವಿರುದ್ಧವಾಗಬೇಕಾಗಿಲ್ಲ. ವಿರೂಪ ಆಗಬಹುದು. ಸುರೂಪ ಶಬ್ದವಿದ್ದರೆ ಅದಕ್ಕೆ ಕುರೂಪ ವಿರುದ್ಧವಾಗಬಹುದು. ಒಂದು ಭಾಷೆಯಲ್ಲಿ ಒಂದು ಶಬ್ದಕ್ಕೆ ವಿರುದ್ಧ ಶಬ್ದವನ್ನು ರಚಿಸಲು ವ್ಯಾಕರಣದಲ್ಲಿ ಮಾರ್ಗಗಳನ್ನು ಸೂಚಿಸಿದ್ದಾರೆ. ಸಂಸ್ಕೃತದಲ್ಲಿ ನಿರ್, ಪ್ರತಿ, ವಿ, ದುರ್ ಮುಂತಾದ ಉಪಸರ್ಗಗಳನ್ನು ಸೇರಿಸಿ ವಿರುದ್ಧಾರ್ಥಗಳನ್ನು ನೀಡುವ ಶಬ್ದಗಳನ್ನು ಮಾಡಬಹುದು. ನಿಷೇಧಾರ್ಥ ಸೂಚಕವಾದ ನ ಎಂಬ ಅವ್ಯಯವೂ ಇದೆ. ಇದು ತತ್ಪುರುಷ ಸಮಾಸದಲ್ಲಿ ಹೆಚ್ಚಾಗಿ ಪ್ರಯೋಗವಾಗುತ್ತದೆ. ರುಚಿ ಅರುಚಿ ಎಂದೂ ವಿರುದ್ಧ ಶಬ್ದವನ್ನು ಮಾಡಬಹುದು. ವಿದ್ಯಾರ್ಥಿಗಳಿಗೆ ಪರೀಕ್ಷೆಗಳಲ್ಲಿ ಕೇಳುವ ಪ್ರಶ್ನೆಗಳಲ್ಲಿ ವಿರುದ್ಧ ಶಬ್ದಗಳನ್ನು ಕುರಿತು ಕೆಲವು ಪ್ರಶ್ನೆಗಳಿರುತ್ತವೆ. ವ್ಯಾಕರಣ ಪ್ರಕ್ರಿಯೆಯ ಸಹಾಯದಿಂದ ವಿರುದ್ಧ ಶಬ್ದವನ್ನು ರಚಿಸುವುದನ್ನು ಪ್ರಶ್ನಿಸಬೇಕಾದರೆ ಅದೇ ಬೇರೆಯ ರೀತಿಯ ಪ್ರಶ್ನೆಯಾಗಬೇಕು. '**ಉಪಸರ್ಗಗಳನ್ನು ಸೇರಿಸಿ ವಿರುದ್ಧ ಶಬ್ದಗಳನ್ನು ರಚಿಸಿ**' ಎಂದು ಹೇಳಿ ಸಂಸ್ಕೃತ ಶಬ್ದಗಳನ್ನು ಪಟ್ಟಿ ಮಾಡಬಹುದು. ಕನ್ನಡದ ಶಬ್ದಗಳನ್ನು ಕುರಿತು

ಪ್ರಶ್ನೆಗಳನ್ನು ಕೇಳುವಾಗ ಈ ಉಪಸರ್ಗಗಳ ಮಾತೇ ಬರಬಾರದು. ಹಾಗೆಯೇ ವಿರುದ್ಧ ಶಬ್ದಗಳನ್ನು ಬರೆಯುವಂತೆ ಪ್ರಶ್ನೆಗಳನ್ನು ಕೇಳುವುದು ಒಳ್ಳೆಯದು. ಉದಾಹರಣೆಗೆ ಬೆಳಕು, ಕಪ್ಪು, ದಿಟ, ತೆಳು ಇತ್ಯಾದಿ. ಇವುಗಳಿಗೆ ಕತ್ತಲೆ, ಬಿಳಿ, ಸಟೆ, ದಪ್ಪ ಇತ್ಯಾದಿಗಳು ಉತ್ತರಗಳಾಗಬಹುದು. ಕಪ್ಪು ಶಬ್ದಕ್ಕೆ ಬಿಳಿ ವಿರುದ್ಧವಲ್ಲ ಎಂದು ವಾದಿಸುವವರೂ ಇದ್ದಾರೆ. ನಾನು ಸೂಚಿಸಿರುವ ವಿರುದ್ಧ ಶಬ್ದಗಳಿಗಿಂತ ಹೆಚ್ಚು ಸೂಕ್ತವಾದ ಶಬ್ದಗಳಿದ್ದರೆ ಒಳ್ಳೆಯದೇ. ಪರೀಕ್ಷಕರು ಈ ಬಗ್ಗೆ ಸ್ಪಷ್ಟವಾದ ತಿಳಿವಳಿಕೆಯನ್ನು ವಿದ್ಯಾರ್ಥಿಗಳಿಗೆ ನೀಡಬೇಕು. ವಿರುದ್ಧಾರ್ಥಗಳಷ್ಟೇ ಅಲ್ಲ. ಪರೀಕ್ಷೆಗಳಲ್ಲಿ ಸಮಾನಾರ್ಥಗಳನ್ನು ಕೊಡುವ ಶಬ್ದಗಳನ್ನು ಬರೆಯಿರಿ ಎಂದೂ ಪ್ರಶ್ನೆಗಳನ್ನು ಕೇಳಬೇಕು. ಆಗ ಈ ವಿಚಾರದಲ್ಲಿ ಸ್ಪಷ್ಟವಾದ ತಿಳಿವಳಿಕೆ ವಿದ್ಯಾರ್ಥಿ ಬಾಲಕ ಬಾಲಕಿಯರಿಗೆ ಬರುತ್ತದೆ. ಸಟೆ, ಸುಳ್ಳು ಇವೆರಡೂ ಸಮಾನಾರ್ಥಕ ಶಬ್ದಗಳು. ಇಂಥ ಶಬ್ದಗಳ ಪಟ್ಟಿಯನ್ನು ಉಪಾಧ್ಯಾಯರು ಸಿದ್ಧಗೊಳಿಸಬೇಕು. ದಿಟ ಸಟೆ ಇವು ವಿರುದ್ಧಾರ್ಥಕ ಶಬ್ದಗಳು.

**ರೂಪರೇಖೆ** ಎಂಬುದು ಸಂಸ್ಕೃತ ಶಬ್ದ. ಸ್ವರೂಪ ಮತ್ತು ಗೆರೆ ಎಂದು ಆ ಶಬ್ದಗಳ ಅರ್ಥ. ರೂಪುರೇಖೆ ಎಂದೂ ಪ್ರಯೋಗವುಂಟು. ಯಾವುದಾದರೂ ವಿಷಯದ ಸಾಮಾನ್ಯ ವಿವರಗಳನ್ನು ಹೇಳುವಾಗ ಈ ಶಬ್ದ ಬರುತ್ತದೆ. **'ಹೊಸ ವಿಶ್ವವಿದ್ಯಾಲಯದ ರೂಪರೇಷೆಗಳು ಹೀಗಿವೆ'** ಎಂಬ ವಾಕ್ಯವನ್ನು ನೋಡಿ. ಆದರೆ ರೇಷೆ ಎಂಬ ಶಬ್ದವು ರೇಷಾ ಎಂಬ ಸಂಸ್ಕೃತದ ಶಬ್ದದಿಂದ ಬಂದಿತೆಂದು ಮರಾಠಿ ನಿಘಂಟುಗಳು ಹೇಳುತ್ತವೆ. ಸಂಸ್ಕೃತ ನಿಘಂಟುಗಳಲ್ಲಿ ಈ ಶಬ್ದವಿಲ್ಲ. ಮರಾಠೀ ಭಾಷೆಯ ಪ್ರಭಾವವಿರುವ ಕಡೆ ರೂಪುರೇಷೆ ಶಬ್ದ ಹೆಚ್ಚಾಗಿ ಪ್ರಯೋಗದಲ್ಲಿದೆ.

**ರೂಪಲಾವಣ್ಯ** ಇದು ಒಂದು ದ್ವಂದ್ವ ಸಮಾಸ ಪದ. ಸಂಸ್ಕೃತದ್ದು. ರೂಪಕ್ಕೆ ಆಕಾರ ಲಕ್ಷಣ, ಸೌಂದರ್ಯ ಎಂಬ ಅರ್ಥಗಳಿವೆ. ಲಾವಣ್ಯಕ್ಕೆ ದೇಹ ಸೌಂದರ್ಯ ಎಂಬ ಅರ್ಥವಿದೆ. ಆದುದರಿಂದ ಎರಡರಲ್ಲಿಯೂ ಇರುವ ಸೌಂದರ್ಯದ ಭಾವವನ್ನು ದೃಢೀಕರಣ ಮಾಡಲು ರೂಪ ಲಾವಣ್ಯ ಎಂಬ ಸಮಾಸವನ್ನು ಉಪಯೋಗಿಸುತ್ತಾರೆ.

**ರೂಬುರೂಬು** ಎಂದರೆ ಎದುರಿಗೆ, ಪ್ರತ್ಯಕ್ಷವಾಗಿ ಎಂದರ್ಥ. ಇದು ಪಾರಸೀ ಭಾಷೆಯ ರೂಬುರೂ ಎಂಬ ಶಬ್ದದಿಂದ ಬಂದದ್ದು. ಎದುರು ಬದುರು ಎಂಬ ಅರ್ಥದ ಶಬ್ದ.

**ರೇಡವೆ** ಎಂಬುದನ್ನು ಶಿಷ್ಟವಾದ ಬರವಣಿಗೆಯ ಭಾಷೆಯಲ್ಲಿ ರೇಡಿಯೋ ಎಂಬ ಪದದ ಇಂಗ್ಲಿಷ್ ಜನ್ಯವಾದ ಶಬ್ದವಾಗಿ ಒಪ್ಪುವುದು ಕಷ್ಟ. ತದ್ಭವ ಎಂಬ ವ್ಯಾಕರಣದ ಶಬ್ದವನ್ನು ಸಾಮಾನ್ಯವಾಗಿ ಸಂಸ್ಕೃತ ಜನ್ಯವಾದ ಶಬ್ದಗಳಿಗೆ ಎಂದು ಅನ್ವಯಿಸುತ್ತಾ ಬಂದಿದ್ದೇವೆ. ತತ್ ಎಂದರೆ ಸಂಸ್ಕೃತದಿಂದ ಭವ = ಉಂಟಾದದ್ದು. ಆದುದರಿಂದ ಕನ್ನಡದಲ್ಲಿರುವ ಸಂಸ್ಕೃತ ಜನ್ಯ ಶಬ್ದಗಳನ್ನೆಲ್ಲ ತದ್ಭವವೆಂಬ ಪಟ್ಟಿಯಲ್ಲಿ ಸೇರಿಸುವುದೆ ಉಚಿತ. ಬಳಿಕ ಅನ್ಯದೇಶ್ಯ ಎಂದು ಕರೆಯುವ ಪಟ್ಟಿಯಲ್ಲಿ ಇತರ ಭಾಷೆಗಳಿಂದ ಬಂದ ಶಬ್ದಗಳನ್ನೇ ಬೇರೆಯಾಗಿ ಇಡಬೇಕು. ಇದರಿಂದ ಬಾಲಕರಿಗೆ ತಿಳಿವಳಿಕೆ ಹೆಚ್ಚಲು ಸಾಧ್ಯ. ಬೇಕಾದರೆ ಇತರ ಭಾಷೆಗಳಿಂದ ಬಂದ ಶಬ್ದಗಳನ್ನು ಇಂಗ್ಲಿಷ್, ಪರ್ಶಿಯನ್ ತದ್ಭವ ಎನ್ನಬಹುದು. ಅದಕ್ಕೆ ಬದಲಾಗಿ ಅನ್ಯದೇಶ್ಯ ಎಂಬುದೇ ಸುಲಭ. ಇನ್ನು ರೇಡವೆ ಎಂಬುದನ್ನು radio ಶಬ್ದದಿಂದ ಬಂದದ್ದೆಂದು ಸ್ವೀಕರಿಸಬೇಕಾದರೆ ಯಾವುದಾದರೂ ಒಂದು ಸೂತ್ರವಿರಬೇಕು. ಯಾವುದೇ ಒಂದು ಪ್ರದೇಶದಲ್ಲಿ ಅಲ್ಪಸಂಖ್ಯಾತರು ಮಾತ್ರ ಉಪಯೋಗಿಸುತ್ತಿರುವ ಮುಂದೆ ಅವರೂ ತಿದ್ದಿಕೊಳ್ಳಬಹುದಾದ ರೂಪವನ್ನು ಕೂಡಲೇ ಒಪ್ಪಬೇಕಾದರೆ ಅಂಥ ಇತರ ಉದಾಹರಣೆಗಳಿವೆಯೆ ಎಂಬುದನ್ನು ಪರಿಶೀಲಿಸಬೇಕು. ಈಗ ಇಂಗ್ಲಿಷಿನಲ್ಲಿ ಉಚ್ಚಾರಣೆಯುಳ್ಳ ಶಬ್ದಗಳನ್ನು ಪರಿಶೀಲಿಸೋಣ. Studio, Sterio, Video, Audio - ಈ

ಎಲ್ಲ ಶಬ್ದಗಳಿಂದ ಜನ್ಯವಾಗುವ ಕನ್ನಡ ರೂಪಗಳು ಏನಾಗಬಹುದು? ರೇಡವೆ ಎಂಬುದನ್ನು ಒಪ್ಪಬೇಕಾದರೆ, ಈ ಪರೀಕ್ಷೆ ಅಗತ್ಯವಾಗುತ್ತದೆ. ಸ್ಟೂಡವೆ, ಸ್ಟೀರವೆ, ವೀಡವೆ, ಆಡವೆ ಇಂಥ ಶಬ್ದಗಳನ್ನು ಯಾರಾದರೂ ಉಪಯೋಗಿಸುತ್ತಿದ್ದಾರೆಯೇ? radio ಬರುವುದಕ್ಕಿಂತ ಹಿಂದಿನಿಂದಲೂ ಪ್ರಸಿದ್ಧವಾಗಿದ್ದ studio ಹಾಗೆಯೇ ನಿಂತಿಲ್ಲವೇ?

**ರೇತಸ್ಸು** ಸಂಸ್ಕೃತದ ರೇತಸ್ ಶಬ್ದದ ತದ್ಭವ. ಇದಕ್ಕೆ ಗಂಡಸಿನ ವೀರ್ಯ, ಶುಕ್ರ ಎಂಬ ಅರ್ಥವಿದೆ. ಇಂಗ್ಲಿಷಿನಲ್ಲಿ ಇದನ್ನೆ Semen Virile ಎಂದು ಕರೆಯುವುದು.

**ರೈತ** ಇದು ಅರಬ್ಬೀ ಭಾಷೆಯ **ರಯತ್** ಶಬ್ದದಿಂದ ಬಂದಿದೆ. ಇದಕ್ಕೆ ಪ್ರಜೆ ಗೇಣಿದಾರ ಒಕ್ಕಲು ಎಂಬ ಅರ್ಥ. ಸ್ತ್ರೀಲಿಂಗದ ರೂಪವಿಲ್ಲ. ರೈತ ಹೆಂಗಸು ಎನ್ನಬಹುದು. ರೈತಿ ತಪ್ಪು.

**ರೈಲುಬಿಡು** ಎಂದರೆ ಬುರುಡೆ ಹೊಡಿ ಎಂದರ್ಥ. ಸ್ವಲ್ಪವೂ ಆಧಾರವಿಲ್ಲದ ಹೇಳಿಕೆಗೆ ಬುರುಡೆ ಎಂಬ ಹೆಸರು ಸಲ್ಲುತ್ತದೆ. ಬುರುಡೆ, ಖಾಲಿ ಬುರುಡೆ ಬೇರೆ. ರೈಲು ಮುಂದುವರಿಯಬೇಕಾದರೆ ಕಂಬಿ ಬೇಕು. ಹಾಗೆಯೇ ನೆಲದ ಮೇಲೆ ರೈಲು ಬಿಟ್ಟರೆ ಏನಾಗುತ್ತದೆಯೋ ಹಾಗೆಯೇ ಬುರುಡೆ ಹೊಡೆಯುವುದು ನಿಷ್ಫಲವಾದುದು ಎಂದರ್ಥ. **ತಳವಿಲ್ಲದೆ ಆಳೆಯುವುದು** ಎನ್ನುವುದೂ ರೂಢಿಯಲ್ಲಿದೆ.

**ರೊಟ್ಟಿ** ಇದು ಹಿಂದೀ ಭಾಷೆಯ ರೋಟೀ ಎಂಬುದರಿಂದ ಬಂದಿದೆ. ಮರಾಠೀ ಭಾಷೆಯಲ್ಲಿ ಕೂಡ ರೋಟೀ ಎಂಬುದೇ ವ್ಯವಹಾರದಲ್ಲಿದೆ. ಕನ್ನಡದಲ್ಲಿ ಇದು ಮೊದಲು ಕಾವ್ಯದಲ್ಲಿ ಉಪಯೋಗವಾಗಿರುವುದು ಮಂಗರಸನ ಸೂಪಶಾಸ್ತ್ರದಲ್ಲಿ. ಇದರ ಕಾಲ ಸುಮಾರು ಕ್ರಿ.ಶ. ೧೫೧೦. ಈ ಶಬ್ದದ ಚರಿತ್ರೆ ವಿಶಿಷ್ಟವಾದುದು. ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಇರುವ ಈ ಶಬ್ದ ಸಂಸ್ಕೃತದಲ್ಲಿ ರೋಟಿ, ರೋಟಿಕಾ ಎಂಬ ರೂಪಗಳಲ್ಲಿ ದೊರಕುತ್ತದೆ. ಪ್ರಾಕೃತದಲ್ಲಿ ಲುಟ್ಟಿಅ ಎಂಬ ರೂಪದಲ್ಲಿ ಪ್ರಚಾರದಲ್ಲಿತ್ತು. ಹೀಗಿರುವುದರಿಂದ ಇದು ಹಳೆಯ ಶಬ್ದ. ಭೋಜಪ್ರಬಂಧದಲ್ಲಿ ಈ ಶಬ್ದದ ಮೊದಲ ಪ್ರಯೋಗ, ಸಂಸ್ಕೃತದ್ದು ದೊರೆಯುತ್ತದೆ. ಫಿರಂಗಾ ರೋಟೀ ಎಂಬ ಶಬ್ದವನ್ನು ಸಂಸ್ಕೃತದ ನಿಘಂಟುಕಾರರು ಉಲ್ಲೇಖಿಸಿ ಇದಕ್ಕೆ ಪರಂಗಿಯವರ ರೊಟ್ಟಿ, ಬ್ರೆಡ್ಡು ಎಂಬ ಅರ್ಥವನ್ನು ಕೊಡುತ್ತಾರೆ. ಇದು ದ್ರಾವಿಡ ಭಾಷೆಗಳಿಂದ ಸಂಸ್ಕೃತಕ್ಕೂ ಹಿಂದಿಗೂ ಹೋಗಿರಬಹುದು ಎಂದು ಊಹಿಸುವ ವಿದ್ವಾಂಸರೂ ಇದ್ದಾರೆ. ಇದರ ಚರಿತ್ರೆ ವ್ಯಾಪಕವಾಗಿದೆ. ಕನ್ನಡದಲ್ಲಿ ಕಾವ್ಯದಲ್ಲಿ ಕಾಣಿಸಿಕೊಳ್ಳುವುದಕ್ಕಿಂತ ಮುಂಚೆಯೇ ಇದು ಪ್ರಚಾರದಲ್ಲಿದ್ದಿರಬೇಕು. ಇದು ಸಂಶೋಧನೆಗೆ ಅರ್ಹವಾದ ಶಬ್ದ.

**ರೋಚಕ** ಎಂದರೆ *೧. ಕಾಂತಿಯಿಂದ ಕೂಡಿದ, ೨. ಸುಖವನ್ನು ಕೊಡುವ, ಆನಂದವನ್ನು ಮಾಡುವ, ೩. ಪ್ರಿಯವಾದ ಎಂಬ ಅರ್ಥಗಳಿವೆ. ೪. ಆಯುರ್ವೇದದಲ್ಲಿ ಈ ಶಬ್ದಕ್ಕೆ ಜೀರ್ಣವನ್ನುಂಟು ಮಾಡುವ, ಜೀರ್ಣಕಾರಿಯಾದ ಎಂಬ ಅರ್ಥವೂ ಇದೆ.* ಒಟ್ಟಿನಲ್ಲಿ ಹಿತಕರವಾದ ಎಂಬ ಅರ್ಥದಲ್ಲಿ ಇದು ಸರ್ವವ್ಯಾಪಿಯಾಗಿ ಪ್ರಯೋಗದಲ್ಲಿದೆ. ಆಸಕ್ತಿಯನ್ನು ಉಂಟು ಮಾಡುವ ಎಂಬ ಅರ್ಥವೂ ಬರುತ್ತದೆ. ಇದು ರುಚ ಎಂಬ ಮೂಲದಿಂದ ಬೆಳೆದ ಸಂಸ್ಕೃತ ಶಬ್ದ. ಇದಕ್ಕೆ ಸುಖವನ್ನುಂಟು ಮಾಡುವ ಎಂಬುದು ಮೊದಲ ಅರ್ಥ. ಹಸಿವು, ಚಟ್ನಿ, ಕದಳಿ, ಈರುಳ್ಳಿ ಮುಂತಾದ ನಾಮಪದ ಅರ್ಥಗಳೂ ಇವೆ.

**ರೋದಿಸು** ಇದಕ್ಕೆ ಅಳು ಎಂದು ಕ್ರಿಯಾಪದದ ಅರ್ಥವಿದೆ. ರೋದನ ಎಂದರೆ ಸಂಸ್ಕೃತದಲ್ಲಿ ಅಳು ಎಂದೆ ನಾಮಪದದ ಅರ್ಥ. ರೋದನ + ಇಸು =ರೋದಿಸು. ಇದರ ವ್ಯುತ್ಪತ್ತಿ.

**ರೋಧ, ವಿರೋಧ, ಅನುರೋಧ, ಪ್ರತಿರೋಧ** ಸಂಸ್ಕೃತದ ರೋಧ ಶಬ್ದಕ್ಕೆ *೧. ತಡೆಯುವುದು, ಆವರಿಸುವುದು ೨. ತಡೆ ೩. ಬಂಧಿಸುವುದು ೪. ನದಿಯ ದಡ ೫. ಬಾಣ ಎಂಬ ಅರ್ಥಗಳಿವೆ.* 'ರುಧಿರ್' ಎಂಬ ಶಬ್ದದಿಂದ ಬೆಳೆದು ಬಂದುದು 'ರೋಧ'.

'ವಿ' ಎಂಬ ಉಪಸರ್ಗ ಸೇರಿದರೆ 'ವಿರೋಧ' ಎಂದು ರೂಪವಾಗುತ್ತದೆ. ಅದಕ್ಕೆ ವೈರ, ದ್ವೇಷ, ಜಗಳ, ನಾಶ ಮುಂತಾದ ಅನೇಕ ಅರ್ಥಗಳಾಗುತ್ತವೆ. ಅವುಗಳಲ್ಲಿ ಕೆಲವು ಅರ್ಥದಲ್ಲಿ ಮಾತ್ರ ಕನ್ನಡದಲ್ಲಿ ವಿರೋಧ ಎಂಬ ಶಬ್ದ ಉಪಯೋಗವಾಗುತ್ತಾ ಇದೆ. 'ಅನುರೋಧ' ಎಂದರೆ ಅನುಕೂಲವಾಗುವಂತೆ ತಡೆಯುವುದು. ಎಂದರೆ ಬಲಾತ್ಕಾರ, ಒತ್ತಾಯ ಮಾಡುವುದು, 'ಪ್ರತಿರೋಧ' ಎಂದರೆ ಎದುರಿಗೆ ನಿಂತು ತಡೆಯುವುದು, ತಿರಸ್ಕಾರ ಸೂಚನೆ ಎಂಬ ಅರ್ಥವೂ ಉಂಟು.

**ರೋಫ್ ಹಾಕುವುದು ರುಆಬ್** ಎಂಬ ಅರಬ್ಬಿ ಶಬ್ದವು ಮರಾಠಿಯಲ್ಲಿ **ರೋಬ್** ಎಂದಾಗಿದೆ. ಇದೇ ಕನ್ನಡದಲ್ಲಿ ರೋಫ್, ರೋಪ್, ರೋಪು ಎಂಬ ರೂಪಗಳನ್ನು ಹೊಂದಿದೆ. ಇದಕ್ಕೆ ಜಬರ್‌ದಸ್ತು ಮಾಡುವುದು, ಜೋರು ಮಾಡುವುದು ಎಂದರ್ಥ.

**ರೋಲ್ ಕಾಲ್** ಎಂಬುದು ಇಂಗ್ಲಿಷ್ ಶಬ್ದ. ಇದಕ್ಕೆ ಯಾವುದಾದರೂ ಸಂದರ್ಭದಲ್ಲಿ ಹಾಜರಿರುವವರ ಹೆಸರನ್ನು ಒಂದೊಂದಾಗಿ ಕರೆಯುವುದು - ಶಾಲೆ ಕಾಲೇಜುಗಳಲ್ಲಿ ಹಾಜರಿ ತೆಗೆಯುವಂತೆ. ಈಚೆಗೆ ರೌಡಿಗಳು ತಮ್ಮ ಕಡೆಯವರನ್ನು ಒಟ್ಟು ಸೇರಿಸಬೇಕಾದರೆ ಈ ಶಬ್ದವನ್ನು ಉಪಯೋಗಿಸುತ್ತಾರಂತೆ!

**ರೌಡಿ** ಎನ್ನುವುದು ಇಂಗ್ಲಿಷಿನಿಂದ ಕನ್ನಡಕ್ಕೆ ಬಂದಿರುವ ಶಬ್ದ. Rowdy ಎಂದು ಅದರ ಇಂಗ್ಲಿಷ್ ಸ್ವರೂಪ. ಇಂಗ್ಲಿಷ್ ಭಾಷೆಗೆ ಎಲ್ಲಿಂದ ಬಂದಿತೋ ಅದು ಇನ್ನೂ ನಿರ್ಧಾರವಾಗಿಲ್ಲ. ಆಂಗ್ಲ ಭಾಷೆಯ ವಿದ್ವಾಂಸರು ಕೂಡ ಅದರ ಮೂಲ ಸಂಶಯಾತ್ಮಕವಾಗಿದೆ ಎಂದು ಹೇಳುತ್ತಾರೆ. ಇದಕ್ಕೆ ಅರ್ಥ ಮಾತ್ರ ಸ್ಪಷ್ಟ. ಒರಟು ಸ್ವಭಾವದ, ಅವ್ಯವಸ್ಥೆಯಿಂದ ಕೂಡಿದ, ಇನ್ನೊಬ್ಬರಿಗೆ ಬೇಗ ಹಿಂಸೆ ಕೊಡುವುದರಲ್ಲಿ ಆಸಕ್ತನಾದ, ವ್ಯಕ್ತಿ ಎಂದು ಅದರ ಅರ್ಥ. ಇಲ್ಲದ ಗಲಾಟೆ ಮಾಡುವ, ತರಲೆ ಸ್ವಭಾವದ, ಹುಯಿಲೆಬ್ಬಿಸುವ ವ್ಯಕ್ತಿ ಇವನು. ಈ ಶಬ್ದ ಇಂಗ್ಲಿಷಿನಿಂದ ಬಂದರೂ ಇಂಥ ವ್ಯಕ್ತಿಗಳು ಈಗಂತೂ ತಾವೇ ತಾವಾಗಿ ಸಮಾಜದಲ್ಲಿ ಕಾಣಸಿಗುತ್ತಾರೆ. ಎಚ್ಚರದಿಂದ ಇರಬೇಕು!

**ರೌರವ** ಎಂಬುದು ಅನೇಕ ನರಕಗಳಲ್ಲಿ ಒಂದರ ಹೆಸರು. ಅನೇಕ ಹಿಂಸೆಗಳನ್ನು ಕೊಡುವ ಭಯಂಕರ ನರಕ.

## ಲ

**ಲಂಘನೆ** ಇದು ಸಂಸ್ಕೃತದ ಲಂಘನ ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ಕೆಲವು ಅರ್ಥಗಳಿವೆ. ೧. ದಾಟು ೨. ನೆಗೆ ೩. ಉಪವಾಸ ೪. ಆಕ್ರಮಣ ೫. ನಿಯಮವನ್ನು ಮೀರುವುದು. ಈ ಎಲ್ಲ ಅರ್ಥಗಳಿಗೂ ಸಾಹಿತ್ಯದಲ್ಲಿ ಪ್ರಯೋಗಗಳು ದೊರಕುತ್ತವೆ.

**ಲಂಚ** ಇದು ದೇಶ್ಯ ಶಬ್ದವಿದ್ದಂತಿದೆ. ಮಹಾರಾಷ್ಟ್ರದಲ್ಲಿ ಲಾಂಚ್, ಲಂಚ ಎಂಬ ಎರಡು ರೂಪಗಳೂ ಇವೆ. ಕನ್ನಡದ ಹಳೆಯ ವ್ಯಾಕರಣದಲ್ಲಿ ಕೇಶಿರಾಜನು ಈ ಶಬ್ದವನ್ನು ಉಲ್ಲೇಖಿಸಿದ್ದಾನೆ. ವಣಿಗ ಪ್ರತ್ಯಯಕ್ಕೆ ಉದಾಹರಣೆಯನ್ನು ಕೊಡುತ್ತ ಲಂಚವಣಿಗಂ, ಸಾಲವಣಿಗಂ ಎಂಬ ಶಬ್ದಗಳನ್ನೂ ಸೂಚಿಸುತ್ತಾನೆ. ಹಾಗೆಯೇ ಗುಳಿ ಪ್ರತ್ಯಯಕ್ಕೆ ಉದಾಹರಣೆಗಳನ್ನು ಕೊಡುವಾಗ ಲಂಚಗುಳಿ ಎಂಬ ಶಬ್ದವನ್ನೂ ಸೂಚಿಸಿದ್ದಾನೆ. ನಾವು ಕಂಡ ಹಾಗೆ ಲಂಚಖೋರ, ಲಂಚಕೋರ, ಮುಂತಾದ ಶಬ್ದಗಳು ಪ್ರಚಾರದಲ್ಲಿವೆ. ಕುಮಾರವ್ಯಾಸನು ತನ್ನ ಕಾವ್ಯದ ಉದ್ಯೋಗಪರ್ವದಲ್ಲಿ (೮.೩೫) ಕೌರವನ ಆಸ್ಥಾನವನ್ನು ವರ್ಣಿಸಿದ್ದಾನೆ. ಅಲ್ಲಿರುವ ಲಂಚ ಪ್ರಯೋಗ ಶಬ್ದ ಪ್ರಸಿದ್ಧವಾದುದು.

**'ಒಲಿದರೊಳಲಂಚದಲಿ ಛಿದ್ರಿಸಿ ಕೊಲುವ ಮಂತ್ರಿಗಳು ಮೆರೆದರು'**. ಪ್ರೀತಿಯುಂಟಾದರೆ ಒಳಗೊಳಗೇ ಪಡೆಯುವ ಲಂಚದ ಆಸೆಯಿಂದ ಒಳಕಲಹವನ್ನುಂಟು ಮಾಡಿ ಸಾವನ್ನೇ ತರುವ ಮಂತ್ರಿಗಳು ಕೌರವನ ಆಸ್ಥಾನದಲ್ಲಿದ್ದರು ಎಂದರ್ಥ. ಈ ಶಬ್ದದ ಮೂಲ ಏನು ಎಂದು ಹೇಳುವುದು ಕಷ್ಟ. ಇದು ದೇಶ್ಯ ಶಬ್ದವೆಂಬ ಬಗ್ಗೆ ಅನುಮಾನವಿಲ್ಲ. ಆದರೆ ಒಂದು ಮಾತು! ಮೂಲದ ಮಾತು! ಲಂಚದ ಮೂಲ ಲಂಚವನ್ನು ಕೊಡುವವನ, ತೆಗೆದುಕೊಳ್ಳುವವನ ಸ್ವಾರ್ಥದಲ್ಲಿ ಅಡಗಿದೆ ಎಂಬುದು ವ್ಯಾವಹಾರಿಕವಾದ ಸತ್ಯ.

**ಲಂಡು** ಎಂಬುದು ಸಂಸ್ಕೃತದ ಲಡ್ಡ ಶಬ್ದದ ತದ್ಭವ. ಲಂಡ ಅದರ ಪರ್ಯಾಯ ರೂಪ. ಲಂಡು ನೀಚತನ, ದುಷ್ಟತನ ಮತ್ತು ನೀಚ, ದುಷ್ಟ ಎಂಬ ಅರ್ಥಗಳನ್ನು ಹೊಂದಿದೆ.

**ಲಂಪಟ** ಎಂದರೆ ಪರಸ್ತ್ರೀಲೋಲ, ಜಾರ, ಅತಿಯಾದ ವಿಷಯಾಸಕ್ತ, ಕಾಮುಕ. ವಿಷಯ ಲಂಪಟ, ಲಂಪಟ ಎಂಬ ಎರಡಕ್ಕೂ ಅರ್ಥ ವ್ಯತ್ಯಾಸವೇ ಇಲ್ಲದಂತೆ ಇವು ಪ್ರಯೋಗವಾಗುತ್ತವೆ. ಆದರೆ ಆ ಶಬ್ದಕ್ಕೆ ಮುಖ್ಯವಾಗಿ ದುರಾಸೆಯುಳ್ಳ. ಅತಿ ಆಸೆಯಿಂದ ಕೂಡಿರುವ ಎಂಬುದೇ ಅರ್ಥ ಮುಖ್ಯವಾಗಿದೆ. ಹಲಾಯುಧನ ವಾಕ್ಯ ಹೀಗಿದೆ:- **ಲೋಲುಪಂ, ಲೋಲುಭಂ, ಲೋಲಂ, ಲಂಪಟಂ, ಲಾಲಸಂ, ವಿದುಃ.**

**ಲಕ್ಕೋಟೆ** ಇದು ಹಿಂದೀ ಭಾಷೆಯ ಲಿಖಾವಟ್ ಎಂಬ ಶಬ್ದದಿಂದ ಬೆಳೆದು ಬಂದ ಲಖೌಟಾ ಶಬ್ದದಿಂದ ಬಂದಿದೆ. ಹಿಂದಿಯಲ್ಲಿ ಲಿಖಾವಟ್ ಎಂದರೆ, *೧. ಬರೆಯುವ ರೀತಿ ೨. ಲಿಪಿ ೩. ಲೇಖನ. ಮರಾಠಿಯಲ್ಲಿ ಲಖೋಟಾ ಎಂದರೆ ಮುದ್ರೆ ಹಾಕಿದ ಪತ್ರ.* ಮರಾಠಿಯ ವಿದ್ವಾಂಸರು ಈ ಶಬ್ದವು ಸಂಸ್ಕೃತದ ಲಾಕ್ಷಾ = ಅರಗು ಎಂಬ ಶಬ್ದಕ್ಕೆ ಸಂಬಂಧಿಸಿದ್ದು ಎಂದು ಅಭಿಪ್ರಾಯ ಪಡುತ್ತಾರೆ. ಕನ್ನಡದಲ್ಲಿಯೂ ಇದು ಮುದ್ರೆ ಹಾಕಿದ ಪತ್ರ - A closed letter. ಕನ್ನಡದಲ್ಲಿ ಲಕೋಟಿನ ಹೋಳಿಗೆ ಎಂಬ ಒಂದು ಬಗೆಯ ಲಕೋಟೆಯ ಆಕಾರದಲ್ಲಿ ತಯಾರು ಮಾಡಿದ ಕರಿದ ಕಡುಬು ಉಂಟು. ಆಲೋಚಿಸಿದರೆ ಲಾಕ್ಷಾ ಶಬ್ದಕ್ಕಿಂತ ಹೆಚ್ಚಾಗಿ ಇದು ಲಿಖಾವಟ್‌ಗೆ ಸಂಬಂಧಿಸಿದುದು ಎಂದು ಕಾಣುತ್ತದೆ.

**ಲಕ್ವ** ಈ ಶಬ್ದ ಅರಬ್ಬೀ ಭಾಷೆಗೆ ಸೇರಿದ್ದು. **ಲಕವಾ**, ಅರ್ಧಾಂಗವಾಯು, ಪಾರ್ಶ್ವವಾಯು ಎಂದರ್ಥ. ಹಿಂದೀ, ಮರಾಠೀ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿದೆ.

**ಲಕ್ಷ್ಮಣರೇಖೆ** ರಾಮಾಯಣದಲ್ಲಿ **ಕಾಣದೇ** ಇರುವ ಈ ಶಬ್ದಕ್ಕೆ ಸಂಬಂಧ ಪಟ್ಟ ಕಥೆ ಭಾರತದಲ್ಲಿ ಎಲ್ಲರಿಗೂ ತಿಳಿದಿದೆ. ಮಾಯಾಮೃಗದ ಬೆನ್ನು ಹತ್ತಿ ರಾಮನು ಕಾಡಿಗೆ ನುಗ್ಗಿದಾಗ ಮಾರೀಚನು ರಾಮಶರದಿಂದ ಹತನಾದನು. ಸಾಯುವುದಕ್ಕೆ ಮುಂಚೆ ಆ ರಾಕ್ಷಸನು 'ಹಾ, ಲಕ್ಷ್ಮಣಾ' ಎಂದು ಕಿರುಚುತ್ತಾ ಸೀತೆಗೆ ಆತಂಕವನ್ನು ಉಂಟು ಮಾಡಿದನು. ಸೀತೆಯು ಲಕ್ಷ್ಮಣನನ್ನು ರಾಮನ ಸಹಾಯಕ್ಕೆ ಹೋಗಬೇಕೆಂದು ತಿಳಿಸಿ ಕಠಿಣವಾದ ಮಾತನ್ನಾಡಿದಳು. ಆಗ ಲಕ್ಷ್ಮಣನು ಒಂದು ಗೆರೆಯನ್ನು ಹಾಕಿ ಅದನ್ನು ದಾಟಿ ಯಾರೂ ಹೋಗದಂತೆ ದಿಗ್ಬಂಧನ ಮಾಡಿ ರಾಮನನ್ನು ಹುಡುಕಲು ಹೊರಟನು. ಅದೇ ಸಮಯಕ್ಕಾಗಿ ಕಾದಿದ್ದ ರಾವಣನು ಸಂನ್ಯಾಸಿಯ ವೇಷದಲ್ಲಿ ಬಂದು ಭಿಕ್ಷೆ ಬೇಡಿದನು. ಅವನಿಗೆ ಭಿಕ್ಷೆ ಕೊಡಬೇಕಾದರೆ ಸೀತೆ ಲಕ್ಷ್ಮಣನು ಹಾಕಿದ್ದ ರೇಖೆಯನ್ನು ದಾಟಬೇಕಾಯಿತು. ಆ ಗೆರೆಯನ್ನು ರಾವಣನು ದಾಟುವುದು ಅಸಾಧ್ಯವಾದುದರಿಂದ ಅವನು ಆ ಗೆರೆಯ ಹೊರಗಡೆಯೇ ಕುಳಿತುಬಿಟ್ಟನು. ಇಂಥ ಸಂದರ್ಭದಲ್ಲಿ ಸೀತೆ ಲಕ್ಷ್ಮಣನು ಹಾಕಿದ್ದ ರೇಖೆಯನ್ನು ದಾಟಿದಳು. ರಾವಣನಿಗೆ ಸೆರೆಯಾದಳು. ಇದು ಲಕ್ಷ್ಮಣರೇಖೆಯ ಕಥೆ. ಆದುದರಿಂದ ಇದರಲ್ಲಿ ಎರಡು ಪಕ್ಷದ ನೋಟವಿದೆ. ಲಕ್ಷ್ಮಣರೇಖೆ ಹಾಕುವವನ ದೃಷ್ಟಿ. ಇನ್ನೊಂದು ಆ ರೇಖೆಯನ್ನು ದಾಟಿಸುವ ದೃಷ್ಟಿ. ಸಾಮಾನ್ಯವಾಗಿ ಲೋಕದಲ್ಲಿ ಸಮೀಪ ದೃಷ್ಟಿಗೆ ಕಾಣುವುದು ರಾವಣನ ಗೆಲುವು; ಸೀತೆಯ ಸೋಲು. ದೂರದೃಷ್ಟಿಗೆ ಕಾಣುವುದು

ಲಕ್ಷ್ಮಣನ ಸಿರ್ಧಾರ, ರಾವಣನ ಸೋಲು. ಎಲ್ಲರ ಬಾಳಿನಲ್ಲಿಯೂ ಇಂಥ ಸನ್ನಿವೇಶಗಳು ಒದಗುತ್ತವೆ. ಆದರೆ ಲಕ್ಷ್ಮಣರೇಖೆಯನ್ನು ದಾಟದೆ ಬದುಕುವುದು ಒಂದು ವಿವೇಕ. ದಾಟಿದರೂ ಗೆಲ್ಲುವ ಹಟ ತೊಡುವುದು ಮತ್ತೊಂದು ಮಾನವಾತೀತವಾದ ತೀರ್ಮಾನ. ಇಂಥ ಸಂದಿಗ್ಧಗಳನ್ನು ತಂದೊಡ್ಡಿ ಕವಿಗಳು ತಮ್ಮ ಕಥೆ ಕಾವ್ಯಗಳಿಂದ ಮಾನವ ಸ್ವಭಾವವನ್ನು ಚಿತ್ರಿಸಿ ವಿವೇಕವನ್ನು ಮೂಡಿಸುತ್ತಾರೆ. ಅದನ್ನು ತಿಳಿದು ಜೀವನದಲ್ಲಿ ಗೆಲ್ಲುವ ಅವಕಾಶ ಯಾರಿಗೆ ದೊರಕುತ್ತದೆಯೋ ಅವರು ಪುಣ್ಯಶಾಲಿಗಳು.

**ಲಗು-ಲಘು ಇವುಗಳ ವ್ಯತ್ಯಾಸವೇನು?** 'ಲಗು' ಇದು 'ಲಘು' ಎಂಬ ಸಂಸ್ಕೃತ ಶಬ್ದದ ತದ್ಭವ ರೂಪ. 'ಲಘು' ಎಂದರೆ ಹಗುರ, ಸಣ್ಣ, ಸರಳ, ಹ್ರಸ್ವ, ದುರ್ಬಲ, ಮೃದು, ವೇಗ ಮುಂತಾದ ಅನೇಕ ಅರ್ಥಗಳಿವೆ. ತದ್ಭವಕ್ಕೆ ಇಷ್ಟೆಲ್ಲ ಅರ್ಥಗಳಿಲ್ಲ. ಬೇಗ, ಅವಸರ, ತ್ವರೆ ಮತ್ತು ಹಗುರ ಎಂಬ ಅರ್ಥಗಳು ಮಾತ್ರ ಇವೆ.

**ಲಗ್ನ** ಇದು ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದ. ಮೇಷ, ವೃಷಭ ಮೊದಲಾದ ರಾಶಿಗಳ ಉದಯ ಎಂಬ ಅರ್ಥ. ಒಂದು ದಿನದಲ್ಲಿ ಹನ್ನೆರಡು ರಾಶಿಗಳೂ ಉದಯಿಸುತ್ತವೆ. ಪೂರ್ವದಿಕ್ಕಿನ ಪರ್ವತದ ಸಂಬಂಧವೇ ಉದಯ. ಈ ಸಂಬಂಧದಿಂದಲೇ ಲಗ್ನ = ಸೇರುವಿಕೆ ಎಂಬ ಹೆಸರು ಬಂದಿದೆ. **ರಾಶೀನಾಂ ಉದಯೇ ಲಗ್ನಂ.** ೨. ವಂದಿ ಮಾಗಧರಿಗೂ, ೩. ಮದಿಸಿದ ಆನೆಗೂ ಈ ಶಬ್ದವನ್ನು ಉಪಯೋಗಿಸುತ್ತಾರೆ. ವಿವಾಹಕ್ಕೆ ಮುಹೂರ್ತವನ್ನು ನಿಶ್ಚಯಿಸುವುದೇ ಲಗ್ನ ನಿಷ್ಕರ್ಷೆ. ಅದರಿಂದ ಲಗ್ನಕ್ಕೂ ಮದುವೆ ಎಂಬ ಅರ್ಥ ಬಂದಿದೆ ಪ್ರಚಾರದಲ್ಲಿ.

**ಲಪ್ಪೋಟೆ** ಕನ್ನಡದಲ್ಲಿ ಲಪ್ಪಟ್ಟೆ, ಲಪಾಟೆ, ಲಪೋಟೆ ಎಂಬ ಮೂರು ರೂಪಗಳಲ್ಲಿ ಈ ಶಬ್ದ ಪ್ರಯೋಗವಾಗುತ್ತದೆ. ಇದು ಹಿಂದಿಯ **ಲಪೇಟನ್** = ಸುತ್ತುವ ಪದಾರ್ಥ ಎಂಬ ಶಬ್ದದಿಂದ ಬಂದಿದೆ. ಮರಾಠಿಯಲ್ಲಿಯೂ ಈ ಶಬ್ದದ ಪ್ರಯೋಗವಿದೆ. ಮರಾಠಿಯಲ್ಲಿ ಲಪೇಟ್ ಎಂದರೆ ಸುತ್ತುವಿಕೆ ಜಮಖಾನವನ್ನು ಸುತ್ತುವುದು, ಹಾಸಿಗೆಯನ್ನು ಸುತ್ತುವುದು, ಮುಂತಾದುದು. ಕನ್ನಡದಲ್ಲಿ ಲಪ್ಪಟ್ಟೆ ಮುಂತಾದ ರೂಪಗಳಿಗೆ ತಲೆಗೆ ಸುತ್ತುವ ಬಟ್ಟೆ ಎಂದು ಅರ್ಥ ಬಂದಿದೆ. **ಕಾಲಿಗೆ ಜೋಡಿಲ್ಲ, ತಲೆಗೆ ಲಪ್ಪಟೆ ಇಲ್ಲ, ಅವನೆಂಥ ಮನುಷ್ಯ** ಎಂಬುದು ಗಾದೆ ಮಾತಾಗಿ ಕೆಲವು ಕಡೆ ಉಪಯೋಗವಾಗುತ್ತಿತ್ತು, ಹಿಂದೆ.

**ಲವ-ಕುಶ** ವಾಲ್ಮೀಕಿಯ ಆಶ್ರಮದಲ್ಲಿ ಸೀತೆಯು ವಾಸ ಮಾಡುತ್ತಿದ್ದಾಗ ಅವಳ ಹೊಟ್ಟೆಯಲ್ಲಿ ಅವಳಿಜವಳಿ ಮಕ್ಕಳು ಬೆಳೆಯುತ್ತಿದ್ದುವು. ವಾಲ್ಮೀಕಿಯು ಗರ್ಭರಕ್ಷಣೆಗಾಗಿ ಕುಶದಿಂದಲೂ ಲವದಿಂದಲೂ ಸೀತೆಯ ಗರ್ಭವನ್ನು ಸವರಿದನು. ಕುಶ ಎಂದರೆ ದರ್ಭೆ. ಲವ ಎಂದರೆ ಹಸುವಿನ ಬಾಲದ ಕುಚ್ಚು. ಹೀಗಾದುದರಿಂದ ಆ ಮಕ್ಕಳಿಗೆ ಕುಶ - ಲವ ಎಂದು ಹೆಸರಾಯಿತು. ಇದರಲ್ಲಿ **ಕುಶ** ಹಿರಿಯವನು, **ಲವ** ಎರಡನೆಯವನು.

**ಲಷ್ಕರ್** ಇದು ಪಾರಸೀ ಭಾಷೆಯ ಶಬ್ದ. ಹಿಂದೀ ಮತ್ತು ಮರಾಠೀ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿದೆ. ಇದಕ್ಕೆ ಎರಡು ಅರ್ಥಗಳಿವೆ: ೧. ಸೈನ್ಯ, ದಂಡು, ೨. ಸೈನ್ಯದ ಪಾಳೆಯ ಸೈನ್ಯವು ನೆಲೆಸಿರುವ ಸ್ಥಳ. ಇಂಗ್ಲಿಷಿನ Cantonment = A place where persons are trained for military service. ಕನ್ನಡದಲ್ಲಿ **ದಂಡು** ಪ್ರಸಿದ್ಧವಾದ ಪದ. ಸಂಸ್ಕೃತವಾದರೆ **ಸೈನ್ಯಾವಾಸ.** ಆದರೂ ಇವೆರಡಕ್ಕಿಂತ **ಲಷ್ಕರು** ಎನ್ನುವುದೇ ಹೆಚ್ಚು ಪ್ರಚಾರದಲ್ಲಿದೆ - ಭಾರತದಲ್ಲೆಲ್ಲ. ಈ ಶಬ್ದ ಇಂಗ್ಲಿಷಿನಲ್ಲಿ ೧೬ನೆಯ ಶತಮಾನದಲ್ಲಿಯೇ ಪ್ರಚಾರಕ್ಕೆ ಬಂತು. ಕನ್ನಡದಲ್ಲಿ ೧೯ನೆ ಶತಮಾನದಲ್ಲಿ ಪ್ರಾರಂಭವಾದುದು ಇದೆ.

**ಲಾಂಡ್ರಿ** ಲ್ಯಾಟಿನ್ ಭಾಷೆಯಲ್ಲಿ **ಲಲಾಂಡೇರಿಯ** ಎಂಬ ಶಬ್ದಕ್ಕೆ ಬಟ್ಟೆ ಒಗೆಯುವ ಜಾಗ ಎಂಬ ಅರ್ಥವಿದೆ. ಅದರಿಂದ ಬಂದ ಶಬ್ದ ಲಾಂಡ್ರಿ. ಇದು ಇಂಗ್ಲಿಷ್, ಫ್ರೆಂಚ್, ಮುಂತಾದ

ಭಾಷೆಗಳಲ್ಲಿ ಬಹು ಸಾಮಾನ್ಯ ಪ್ರಯೋಗದಲ್ಲಿದೆ. ಇಂಗ್ಲಿಷಿನಿಂದ ನಮಗೆ ಬಂದಿದೆ. ಇಂಗ್ಲಿಷಿನಲ್ಲಿ ಆ ಶಬ್ದಕ್ಕೆ ಬಟ್ಟೆ ಒಗೆದು ಇಸ್ತ್ರಿ ಮಾಡುವ ಜಾಗ ಎಂದೂ ಒಗೆಯುವ ಬಟ್ಟೆಗಳ ರಾಶಿ ಎಂದೂ ಅರ್ಥವಿದೆ. ಕನ್ನಡದಲ್ಲಿ ಬಟ್ಟೆ ಒಗೆದು ಇಸ್ತ್ರಿ ಮಾಡುವ ಅಂಗಡಿ ಎಂದು ಮಾತ್ರ ಅರ್ಥ. ಇಂಗ್ಲಿಷ್ ಭಾಷೆಯಲ್ಲಿ ಅದೂ ಅಮೇರಿಕದಲ್ಲಿ ಲಾಂಡರ್ ಎಂದರೆ ಕಪ್ಪುಹಣವನ್ನು ಬೇರೆ ದೇಶಗಳಿಗೆ ರವಾನಿಸಿ ಬಿಳಿಯ ಹಣವನ್ನಾಗಿ ಮಾಡುವುದು ಎಂದು ಅರ್ಥವುಳ್ಳ ರೀತಿಯಲ್ಲಿ ಗುಟ್ಟು ಭಾಷೆಯಲ್ಲಿ ಉಪಯೋಗಿಸುತ್ತಾರೆ.

**ಲಾಗಾಯತು** ಇದು ಅರಬ್ಬಿ ಶಬ್ದ. ನಮಗೆ ಹಿಂದೀ ಭಾಷೆಯ ಮೂಲಕ ಬಂದಿದೆ. ಅರಬ್ಬಿಯಲ್ಲಿ ಅದು ಲಾಗಾಯತ್. ಅರ್ಥ **ಮೊದಲಿನಿಂದಲೂ** ಎಂದು ಯಾವುದಾದರೂ ಸಮಯವನ್ನು ಸೂಚಿಸುವುದಕ್ಕೆ ಈ ಶಬ್ದವನ್ನು ಉಪಯೋಗಿಸುತ್ತಾರೆ. ಅವನು ಹುಟ್ಟಿದ ಲಾಗಾಯ್ತು ಅವನ ಆರೋಗ್ಯ ಹೀಗೆ ಇದೆ ಎಂಬ ವಾಕ್ಯವನ್ನು ನೋಡಿ. ಈ ಶಬ್ದಕ್ಕೆ ಲಾಗಾಯಿತು ಮತ್ತು ಲಾಗಾಯ್ತು ಎಂಬ ಪರ್ಯಾಯ ರೂಪಗಳೂ ಇವೆ.

**ಲಾಗೋಡು** ಮರಾಠೀ ಭಾಷೆಯ **ಲಾಗವಡ್** ಶಬ್ದದ ರೂಪಾಂತರ. ಆ ಭಾಷೆಯಲ್ಲಿ **ಲಾಗವಣ್** ಎಂಬ ಮತ್ತೊಂದು ಶಬ್ದ ಇದೆ. ಅದಕ್ಕೆ ಬೀಜವನ್ನು ಜಮೀನಿನಲ್ಲಿ ಬಿತ್ತುವಿಕೆ ಎಂದು ಅರ್ಥ. ಲಾಗವಡ್ ಎಂದರೆ ಸಾಗುವಳಿಗೆ ತಗುಲುವ ವೆಚ್ಚ. ಅದೇ ನಮ್ಮ ಲಾಗೋಡು.

**ಲಾಟರಿ ಹೊಡೆ** ಈ ಶಬ್ದಕ್ಕೂ ಲಾಟರಿ (Lottery) ಶಬ್ದಕ್ಕೂ ಏನೂ ಸಂಬಂಧವಿಲ್ಲ. ಇದು ಇಂಗ್ಲಿಷಿನ ಲಾಯ್‌ಟರ್ Loiter ಎಂಬ ಶಬ್ದಕ್ಕೆ ಸಂಬಂಧಪಟ್ಟದ್ದು. ಯಾವ ಗುರಿಯೂ ಇಲ್ಲದೆ ಸೋಮಾರಿಯಂತೆ ಅತ್ತಿಂದಿತ್ತ ಅಲೆದಾಡುತ್ತಿರುವವನಿಗೆ ಈ ಮಾತನ್ನು ಉಪಯೋಗಿಸುತ್ತಾರೆ. ಪರೀಕ್ಷೆಯಲ್ಲಿ ಲಾಟರಿ ಹೊಡೆದನು ಎಂಬಂಥ ವಾಕ್ಯದಲ್ಲಿ ಲಾಟರಿ ಟಿಕೆಟ್ಟನ್ನು ಕೊಂಡು ಲಾಭ ಬರದಿರು ಎಂಬ ಅರ್ಥವೂ ಬರುತ್ತದೆ. ಈಚೆಗೆ ದುಂದುವೆಚ್ಚ ಮಾಡುವವರನ್ನು 'ಲಾಟರಿ ಹೊಡೆದೆಯೋ ಹೇಗೆ?' ಎಂದು ಪ್ರಶ್ನಿಸುವುದು ಉಂಟು.

**ಲಾಯರ್** ಕಾನೂನುಗಳನ್ನು ಚೆನ್ನಾಗಿ ತಿಳಿದವನು. ಕಾನೂನನ್ನೇ ವೃತ್ತಿಯ ಮೂಲವಾಗಿ ಇಟ್ಟುಕೊಂಡಿರುವವನು. ಕಾನೂನು ಪಂಡಿತ. ಇಂಗ್ಲಿಷಿನಿಂದ ಬಂದ ಶಬ್ದ Lawyer.

**ಲಾವಣಿ - ಲಾವಣಿ ಪತ್ರ** ಲಾವಣೆ - ಇದು ಮರಾಠಿ ಪದ. ನೆಲವನ್ನು ಬೇಸಾಯಕ್ಕೆ ಹದಗೊಳಿಸುವುದು ಎಂದು ಈ ಶಬ್ದಕ್ಕೆ ಅರ್ಥ. ಕನ್ನಡದಲ್ಲಿ ಇದು ಲಾವಣಿ ಆಗಿದೆ. ಇದಕ್ಕೆ ನೆಲದ ಒಡೆಯನಿಗೆ ರೈತರು ಆ ನೆಲದಲ್ಲಿ ಸಾಗುವಳಿ ಮಾಡುವುದಕ್ಕಾಗಿ ಕೊಡಬೇಕಾದ ಹಣ. ಈ ಏರ್ಪಾಟು ಮಾಡಲು ಪರಸ್ಪರ ಒಪ್ಪಿಗೆಗಾಗಿ ಬರೆಯುವ ಪತ್ರ ಲಾವಣಿ ಪತ್ರ. ಉತ್ತರ ಕನ್ನಡದಲ್ಲಿ ಹೆಚ್ಚಾಗಿ ಪ್ರಯೋಗದಲ್ಲಿದೆ. **ಲಾವಣಿ ಪದ್ಧತಿ** ಶಬ್ದವೂ ಪ್ರಚಾರದಲ್ಲಿದೆ.

**ಲಾವಣ್ಯ** ಸಂಸ್ಕೃತ ಶಬ್ದ. ಲಾವಣ್ಯ ಎಂಬುದು ಮುತ್ತಿನ ಮೈಮೇಲೆ ಹೇಗೆ ಛಾಯೆ ಚಲಿಸಿ ಚಂಚಲತೆಯನ್ನು ತೋರುತ್ತದೋ ಹಾಗೆ ಸ್ತ್ರೀಯರ ಅಂಗಾಂಗಗಳಲ್ಲಿ ಕಾಣಿಸಿಕೊಳ್ಳುವ ಸೌಂದರ್ಯ ದ್ರವ್ಯಕ್ಕೆ ಲಾವಣ್ಯ ಎಂದು ಕರೆಯುತ್ತಾರೆ.

**ಲಿಂಗವಂತ, ಲಿಂಗಾಯತ** ಎಂಬ ಎರಡು ಶಬ್ದಗಳ ವ್ಯತ್ಯಾಸವೇನು? ಈ ಎರಡೂ ಪಾರಿಭಾಷಿಕ ಶಬ್ದಗಳು. ಲಿಂಗವಂತ ಎಂದರೆ ವೀರಶೈವರಲ್ಲಿ ಗುರುವಾದವನು ಶರಣನಿಗೆ ದೇಹದ ಮೇಲೆ ಧರಿಸುವುದಕ್ಕಾಗಿ ದೀಕ್ಷಾ ಕಾಲದಲ್ಲಿ ಕೊಡುವ ಲಿಂಗವನ್ನು ಧರಿಸಿದವನು. ಲಿಂಗಾಯತ ಎಂದರೆ ಆಚಾರ್ಯನಾದವನು ತಾನು ಶಿಷ್ಯನಿಗೆ ಕೊಡುವ ಲಿಂಗವನ್ನು ಪೂಜಿಸಿ ಅವನಿಗೆ ತೋರಿಸಿ ಕೊಡುವ ಕ್ರಿಯೆ. ಈ ಕಾರಣದಿಂದ ಈ ಶಬ್ದಕ್ಕೆ ಇಷ್ಟಲಿಂಗವನ್ನು ಧರಿಸಿದವನು ಎಂಬ ಅರ್ಥವೂ ಬರುತ್ತದೆ. ಲಿಂಗಾಯತ ಮತ್ತು ಲಿಂಗಾಯ್ತ ಎಂಬ ಎರಡು ಪರ್ಯಾಯ ರೂಪಗಳೂ ಕನ್ನಡದಲ್ಲಿ ಪ್ರಚಾರದಲ್ಲಿವೆ.

**ಲೂಟಿ** ಇದು ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿ ಪ್ರಯೋಗದಲ್ಲಿದೆ. ಸಂಸ್ಕೃತದ ಲುಠತಿ

ಮುಂತಾದ ಶಬ್ದಗಳ ಸಾಮ್ಯವನ್ನು ಕೆಲವರು ಆರೋಪಿಸುತ್ತಾರೆ. ಇದಕ್ಕೆ ಅರ್ಥ ಕೊಳ್ಳೆ ಹೊಡೆಯುವುದು, ಸುಲಿಗೆ. ನೋಡಿ: ದರೋಡೆ

**ಲೆಕ್ಕ** – ಲೆಖ್ಖ ಲೆಕ್ಕ ಎಂಬುದು ಸರಿಯಾದ ಶಬ್ದ. ಇದು ಸಂಸ್ಕೃತದ ಲೇಖಾ ಶಬ್ದದ ತದ್ಭವ. ಇದಕ್ಕೆ ೧. ಎಣಿಸುವುದು ೨. ಅಂಕಿ ಹಾಕುವುದು ೩. ಗಣಿತದ ಸಮಸ್ಯೆ ಮುಂತಾದ ಅರ್ಥಗಳಿವೆ. ಲೆಕ್ಕಿಸು ಎಂದರೆ ಲಕ್ಷ್ಯಕ್ಕೆ ತರು. ಲೆಕ್ಕಿಗ ಎಂಧರೆ ಗಣಿತಜ್ಞ. ಅವನನ್ನು ಜನ ಲೆಕ್ಕಿಸುವುದಿಲ್ಲ ಎಂದರೆ ಅವನು ಗಣನೆಗೆ ಬಾರದವನು, ಶೂನ್ಯ, ಎಂದರ್ಥ.

**ಲೆತ್ತ** ಲೆತ್ತ-ನೆತ್ತ ಎರಡೂ ಒಂದೇ ಶಬ್ದದ ಬೇರೆ ಬೇರೆ ರೂಪಗಳು. ಈ ಶಬ್ದಕ್ಕೆ ಪಗಡೆಯಾಟದಲ್ಲಿ ಉಪಯೋಗಿಸುವ ಎರಡು ದಾಳಗಳು ಎಂದರ್ಥ. ಆದರೆ ಕವಿಗಳು ಪಗಡೆಯ ಕಾಯಿ ಎಂಬ ಅರ್ಥದಲ್ಲಿಯೂ ಇದನ್ನು ಉಪಯೋಗಿಸಿದ್ದಾರೆ. ಸಾರಿ ಎಂದರೆ ಪಗಡೆಯ ಕಾಯಿ. ಹಲಗೆ ಪಗಡೆಯಾಟದ ಮಣೆ. ದಾಳಕ್ಕೆ ಹಾಸಂಗಿ ಎಂಬ ಮತ್ತೊಂದು ಶಬ್ದವಿದೆ. ಸಾರಿ ಎಂಬುದು ಸಂಸ್ಕೃತದ ಚಾರಿ ಎಂಬುದರಿಂದ ಬಂದುದು. ನಡೆಸುವ ಕಾಯಿ ಅದು. ಪಗಡೆಯಾಟದ ಈ ಪದಗಳನ್ನು ಉಪಯೋಗಿಸುವುದರಲ್ಲಿ ಕವಿಗಳು ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಲೆತ್ತ ಎಂದರೆ ಪಗಡೆಯ ಆಟ ಎಂದೂ ಅರ್ಥವಿದೆ. ಆದರೆ ಸಾರಿ ಎಂಬುದು ಮಾತ್ರ ಪಗಡೆಯ ಕಾಯಿ ಎಂಬುದನ್ನು ತಿಳಿಸುವ ಒಂದು ಪ್ರಯೋಗ ಅನಂತನಾಥ ಪುರಾಣದಲ್ಲಿದೆ. (೮-೧೫). **ನೆತ್ತದ ಸಾರಿಯಂತೆ ಮೊಲೆ ಮೂಡಲೊಡಂ ಗುಣವೇರಿ ಲಜ್ಜೆ ನಾಣ್ಪತ್ತುವು.**

**ಲೇ–ರೀ** ಲೇ ಎನ್ನುವುದು ಎಲೆ, ಎಲೇ ಎನ್ನುವ ಶಬ್ದಗಳ ಸಂಕುಚಿತ ರೂಪ. ಹೆಂಗಸನ್ನು ಕರೆಯಬೇಕಾದರೆ ಕನ್ನಡದಲ್ಲಿ ಎಲೌ, ಎಲೆ, ಎಲೇ ಎಂಬ ರೂಪಗಳನ್ನು ಬಳಸುತ್ತಾರೆ. ಎಲೆ + ಅಯ್ಯ ಎನ್ನುವುದು ಎಲೈ ಆಗಿದೆ. ಇದು ಗಂಡಸರಿಗೆ ಅನ್ವಯವಾಗುತ್ತದೆ. ಎಲೆ + ಅವ್ವ ಎಂಬುದು ಎಲೌ ಆಗಿದೆ. ಇದು ಸ್ತ್ರೀಯರಿಗೆ ಅನ್ವಯವಾಗುತ್ತದೆ.

ರೀ ಎಂಬುದು ಎನಿರಿ ಎಂಬ ಶಬ್ದದ ಸಂಕುಚಿತ ರೂಪ. ಹಳಗನ್ನಡದಲ್ಲಿ ಏನಿಂ ಎಂಬ ರೂಪವಿದೆ. **ಏನಿಂ ಪಾಸುರಗನೆ ಬಿಲ್ಲೇನದು ಶೃಂಗಜಮೆ** ಎಂದು ಅರ್ಥನೇಮಿ ಪುರಾಣದಲ್ಲಿ ಪ್ರಯೋಗವಿದೆ. ಈ ವಿಚಾರವನ್ನು ವಿಸ್ತಾರವಾಗಿ ಖಚಿತವಾಗಿ ಪ್ರೊ. ತೀ.ನಂ.ಶ್ರೀಯವರ ಲೇಖನವು ಅವರ ಸಮಾಲೋಕನ ಗ್ರಂಥದಲ್ಲಿ ಅಚ್ಚಾಗಿದೆ. ಅದನ್ನು ಓದುವುದರಿಂದ ಈ ವಿಚಾರವಾದ ಸಂದೇಹಕ್ಕೆ ಬೇಕಾದ ಉತ್ತರ ದೊರಕುತ್ತದೆ. ಏನ್ರಿ =ಏನು + ರಿ ಇದು ಗೌರವಸೂಚಕ ಪ್ರತ್ಯಯ. ಹೆಂಗಸರನ್ನು ಕರೆಯುವಾಗ ಎಲೆಗಿಂತ ಎಲೌ ಹೆಚ್ಚು ಗೌರವಯುತ. ಇವಲ್ಲದೆ ಎಲೋ ಮತ್ತು ಎಲಗೆ ಎಂಬ ಎರಡು ರೂಪಗಳಿವೆ. ಎಲೋ, ಎಲವೋ ಎಂದು ಗಂಡಸರಿಗೂ ಎಲಗೆ ಎಂದು ಹೆಂಗಸರಿಗೂ ಸಂಬೋಧನೆಯಾಗಿ ಉಪಯೋಗಿಸುತ್ತಾರೆ. ತಮಗಿಂತ ಕೀಳೆಂದು ಹೇಳುವ ಉದ್ದೇಶದಿಂದಲೂ ಅವಮಾನ ಮಾಡುವ ಉದ್ದೇಶದಿಂದಲೂ ಈ ಶಬ್ದಗಳನ್ನು ಸಾಹಿತ್ಯದಲ್ಲಿ ಉಪಯೋಗಿಸಲಾಗಿದೆ.

**ಲೇಖನಾ** ಸಂಸ್ಕೃತದಲ್ಲಿ ಲೇಖನ ಎಂಬ ಶಬ್ದವಿದೆ. ಅದು ನಪುಂಸಕ ಲಿಂಗವಂತೆ. ಲೇಖನೀ ಎಂದರೆ ಸ್ತ್ರೀಲಿಂಗ. ಲೇಖನ ಶಬ್ದಕ್ಕೆ ಅರ್ಥಗಳು ಹೀಗಿವೆ. ೧. ಬರಹ ೨. ಚಿತ್ರ ಬರೆಯುವುದು ೩. ಕತ್ತರಿಸುವುದು ೪. ಉದ್ರೇಕಗೊಳಿಸುವುದು ೫. ಕತ್ತರಿಸುವ ಸಾಧನ ೬. ವಾಂತಿ ಮಾಡುವುದು ೭. ಹುಲ್ಲು. ಆದುದರಿಂದ ಲೇಖನಾ ಎಂದು ಹೆಣ್ಣು ಮಗುವಿಗೆ ಹೆಸರಿಡುವುದು ಸರಿಯಾಗುತ್ತದೆಯೇ ? ಎಂಬುದನ್ನು ಆಲೋಚಿಸಬೇಕು.

**ಲೇಖನಿ, ಲೇಖಣಿ, ಲೆಕ್ಕಣಿ** ಲೇಖನೀ ಎಂಬ ಸಂಸ್ಕೃತ ಶಬ್ದವು ಕನ್ನಡದಲ್ಲಿ ಲೇಖನಿ ಎಂದಾಗುತ್ತದೆ. ಅದಕ್ಕೆ ಬರೆಯುವ ಸಾಧನ ಎಂದು ಅರ್ಥ. ಲೇಖಣಿ ಎಂಬುದು ಇದರಿಂದ ಬಂದ ಶಬ್ದ. ಲೇಖನಿಕ ಎಂದರೆ ಸಂಸ್ಕೃತದಲ್ಲಿ ಬರಹಗಾರ, ಬರೆಯುವವನು ಎಂದರ್ಥ. ಕನ್ನಡದಲ್ಲಿ ಸಂಸ್ಕೃತದಲ್ಲಿ ಪ್ರಚಾರದಲ್ಲಿಲ್ಲದ ಲೇಖನಿಕಾ ಎಂಬ ಶಬ್ದದ ಭ್ರಮೆಯಿಂದ

ಲೇಖನಿಕೆ, ಲೆಕ್ಕಣಿಕೆ ಎಂಬ ಶಬ್ದಗಳನ್ನು ರೂಪಿಸಿಕೊಂಡು ಉಪಯೋಗಿಸಿದ್ದಾರೆ. ಪ್ರಯೋಗದಲ್ಲಿರುವ ಶಬ್ದಗಳಿವು. ಅವುಗಳನ್ನು ಬಿಡಬೇಕಾಗಿಲ್ಲ.

**ಲೇವಡಿಗೂ ಲೇಡಿಗೂ ಏನು ಸಂಬಂಧ?** ಏನೇನೂ ಸಂಬಂಧವಿಲ್ಲ. ಲೇವಡಿ ಹಿಂದೀ ಭಾಷೆಯ ಶಬ್ದ. ಅದಕ್ಕೆ ಹೀನಾಯವಾಗಿ ಕಾಣುವುದು, ಹೀಯಾಳಿಸುವಿಕೆ ಎಂದರ್ಥ. ಇದನ್ನು ಕನ್ನಡದಲ್ಲಿ ತುಂಬ ಬಳಸುತ್ತಾರೆ. ಮತ್ತೊಬ್ಬರನ್ನು ಅಥವಾ ಅವರ ಕಾರ್ಯಗಳನ್ನೂ ಮಾತುಗಳನ್ನೂ ಅಪಹಾಸ್ಯಕ್ಕೆ ಈಡು ಮಾಡುವುದು ಇವರ ಉದ್ದೇಶ. ಸ್ನೇಹಿತರನ್ನು ಕಳೆದುಕೊಳ್ಳುವುದಕ್ಕೆ ಇದು ಭಾರಿ ಸಾಧನ. ಅಲ್ಲದೆ ಆತ್ಮಗೌರವವು ನಾಶವಾಗುವುದಕ್ಕೂ ಕಾರಣವಾಗಬಹುದು. ಸ್ವಲ್ಪ ಎಚ್ಚರಿಕೆ ಇದ್ದರೆ ಒಳ್ಳೆಯದು. ನೋಡಿ, ಒಂದೇ ವಕಾರ ವಕ್ರವಾಗಿ ಮಧ್ಯೆ ಬಂದರೆ ಏನಾಗಬಹುದು ಎಂಬುದನ್ನು.

**ಲೇವಾದೇವಿ** ಇದು ಹಿಂದೀ ಭಾಷೆಯ **ಲೇವಾದೇಈ** ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ಹಣಕಾಸಿನ ಸಾಲ ಕೊಡುವ, ಬಡ್ಡಿ ವಸೂಲು ಮಾಡುವ ಮತ್ತು ಸಾಲ ತೀರಿಸುವ ವ್ಯವಹಾರವನ್ನು ಕುರಿತ ಕೆಲಸ ಎಂದರ್ಥ. ಲೇವಾದೇವಿ ಪತ್ರಗಳು ಎಂದರೆ ಇಂಥ ಉದ್ಯೋಗಕ್ಕೆ ಸಂಬಂಧಿಸಿದ ದಾಖಲೆಗಳು ಎಂದರ್ಥ. ಒಂದಾನೊಂದು ಕಾಲದಲ್ಲಿ ಬ್ಯಾಂಕುಗಳು ಇನ್ನೂ ಪ್ರಚಾರಕ್ಕೆ ಬರದಿದ್ದ ಕಾಲದಲ್ಲಿ ಈ ಲೇವಾದೇವಿ ಉದ್ಯೋಗದಿಂದ ಲಕ್ಷಾಧೀಶರಾದ ಧನವಂತರಿದ್ದರು. ಬಡವರ ಸಣ್ಣಪುಟ್ಟ ಮನೆ ಜಮೀನುಗಳನ್ನು ಗುಳುಂ ಮಾಡಿದವರಿದ್ದರು. ಈಚೆಗೆ ಬೇರೆ ರೀತಿಯ ಗುಳುಂ ಉದ್ಯೋಗಗಳು ಮೊದಲಾಗಿವೆ.

**ಲೋಕವಿದಿತ - ಲೋಕವಿಧಿತ** ಇವುಗಳಲ್ಲಿ ಮೊದಲನೆಯ ರೂಪ ಶುದ್ಧವಾದುದು. ಪ್ರಪಂಚದ ಜನರಿಗೆ ತಿಳಿದ, ಲೋಕಕ್ಕೆಲ್ಲ ಗೊತ್ತಿರುವ, ಕೀರ್ತಿಶಾಲಿಯಾದ ಎಂದು ಮುಂತಾದ ಅರ್ಥಗಳಿವೆ. ಲೋಕವಿಧಿತ ಸರಿಯಾದ ಶಬ್ದವಲ್ಲ.

**ಲೋಕಾಭಿರಾಮ** ಇದು ಒಂದು ಸೊಗಸಾದ ಶಬ್ದ. ಲೋಕ ಎಂದರೆ ಪ್ರಪಂಚ ಮತ್ತು ಪ್ರಪಂಚದ ಜನ. ಅಭಿರಾಮ ಎಂದರೆ ಸುಂದರವಾದ, ಮನೋಹರವಾದ, ಇಂಪಾದ, ಹೃದ್ಯವಾದ, ಸಂತೋಷಕರವಾದ, ಸಂಪ್ರೀತಿಯ, ಸಂತೋಷಪಡಿಸಿದ, ಆನಂದವನ್ನುಂಟು ಮಾಡುವ ಇತ್ಯಾದಿ ಗುಣವಾಚಕದ ಅರ್ಥ. ಆದುದರಿಂದ ಈ ಶಬ್ದದಲ್ಲಿ ಸರ್ವಜನಾದರಣೀಯವಾದ ಎಂಬ ಅರ್ಥವಿದೆ. ಇದು ಹರ್ಷದಾಯಕವಾದ ಮಾತುಕತೆಗೆ, ಸಂಭಾಷಣೆಗೆ ಚೆನ್ನಾಗಿ ಅನ್ವಯಿಸುತ್ತದೆ. ಇಂಗ್ಲಿಷಿನ informal ಎಂಬ ಶಬ್ದದ ಅರ್ಥವನ್ನೆಲ್ಲ ಒಳಗೊಂಡು ಅದಕ್ಕಿಂತ ಹೆಚ್ಚು ವ್ಯಾಪ್ತಿಯುಳ್ಳ ಅರ್ಥವನ್ನು ನೀಡುತ್ತದೆ. ವಿದ್ವಾಂಸರೊಡನೆ ಲೋಕಾಭಿರಾಮವಾಗಿ ಮಾತನಾಡುವುದರಲ್ಲಿ ಬಹಳ ಪ್ರಯೋಜನವಿದೆ.

**ಲೋಕಾರೂಢಿ** ಲೋಕರೂಢಿ ಎಂಬುದು ಶುದ್ಧ ರೂಪ. ಲೋಕದಲ್ಲಿ ರೂಢಿಯಾಗಿರುವ ವಿಷಯ ಎಂದರ್ಥ. ಲೋಕಾರೂಢಿ ಎಂಬುದು ಅಶುದ್ಧ ರೂಪ. ಆದರೆ ಸರ್ವಾದರಣೀಯವಾದ ಪ್ರಯೋಗವಾಗುತ್ತ ಇದೆ. ಜಗದೋದ್ಧಾರ ಎಂಬ ಶಬ್ದದ ಹಾಗೆ, ಇದೂ ಪ್ರಯೋಗ ಶುದ್ಧ.

**ಲೋಬಾನ** ಈ ಶಬ್ದ ಅರಬ್ಬಿಯಿಂದ ಬಂದಿದೆ. ಆ ಭಾಷೆಯಲ್ಲಿ ಲೋಬಾನ ಎಂದರೆ ಸುಗಂಧ ದ್ರವ್ಯದಂತೆ ಬಳಸುವ ಒಂದು ಮರದ ಅಂಟು. ಅದಕ್ಕೆ ಸಂಸ್ಕೃತದಲ್ಲಿ ತುರುಷ್ಕ ಎಂಬ ಹೆಸರಿದೆ. ಲೋಭಾನ ಎಂಬ ಕನ್ನಡದ ರೂಪವೂ ಇದೆ. ಇದೇ ಹಾಲುಮಡ್ಡಿ ಎಂದು ಕೆಲವರು ಹೇಳುತ್ತಾರೆ.

**ಲೋಭಿ** ಸಂಸ್ಕೃತದ ಶಬ್ದ. ಲೋಭ ಎಂದರೆ ಅತಿ ಆಸೆ. ಇತರರ ಹಣವನ್ನು ಗಳಿಸುವ ಅಪೇಕ್ಷೆ. ಯಾರಲ್ಲಿ ಈ ಲೋಭಗುಣ ಇದೆಯೋ ಅವನೇ ಲೋಭಿ. ಸಂಸ್ಕೃತದಲ್ಲಿ ಅದು ಲೋಭಿನ್. ಕನ್ನಡದಲ್ಲಿ ಲೋಭಿ.

**ಲೋಮ** ಸಂಸ್ಕೃತದಲ್ಲಿ ಲೋಮ ಅಂದರೆ ರೋಮ, ಕೂದಲು ಎಂದರ್ಥ.

**ಲೋಲುಪತೆ** ಅತಿ ಆಸೆ ಹೊಂದಿರುವಿಕೆ. ತುಂಬ ತವಕದಿಂದಿರುವಿಕೆ. ಲೋಲುಪ ಎಂಬ ಗುಣವಾಚಕದಿಂದ - ತಾ ಎಂಬ ಭಾವನಾಮ ಪ್ರತ್ಯಯವನ್ನು ಸೇರಿಸಿರುವ ಪದ. ಸಂಸ್ಕೃತದಲ್ಲಿ ಲೋಲುಪತಾ ಎನ್ನುವುದು ಕನ್ನಡದಲ್ಲಿ ಲೋಲುಪತೆ ಎಂದಾಗುತ್ತದೆ.

**ಲೌಡಿ** ಲವುಡಿ ಎಂಬ ಶಬ್ದವು ಸಂಸ್ಕೃತದ ಲಗುಡ ಎಂಬುದರ ತದ್ಭವ. ಪ್ರಾಕೃತದಲ್ಲಿ ಅದು ಲವುಡ ಎಂದಾಗುತ್ತದೆ. ಕನ್ನಡದಲ್ಲಿ ಲವುಡಿ. ಇದಕ್ಕೆ ಲೌಡಿ, ಲಗುಡಿ ಎಂಬ ರೂಪಗಳೂ ಇವೆ. ಇದಕ್ಕೆ ದೊಣ್ಣೆಯ ಹಾಗಿರುವ ಕಬ್ಬಿಣದ ಆಯುಧ ಎಂದು ಅರ್ಥ. ಈ ಪ್ರಯೋಗವನ್ನು ನೋಡಿ: **ಸುರಗಿಯಲಿ ಲವುಡಿಯಲಿ, ಮುಸಲದಲಿ ಕೃಪಾಣದಲಿ... ಎಚ್ಚಾಡಿದನು. (ಗಯಚರಿತ್ರೆ ೨೫.೨೫)**

ಕನ್ನಡದಲ್ಲಿ ಇನ್ನೊಂದು ಶಬ್ದ ಲೌಡಿ ಇದೆ. ಇದು ಬೇರೆಯ ಜಾತಕದ ಶಬ್ದ. ಪಾರಸೀ ಭಾಷೆಯ ಲವಂದ್ ಹಿಂದೀ ಭಾಷೆಯಲ್ಲಿ ಲೌಂಡಿ ಆಗಿ ಮರಾಠಿಯಲ್ಲಿ ಲವಂಡಿ ಆಗಿದೆ. ಈ ಶಬ್ದಕ್ಕೆ ೧. ವೇಶ್ಯೆ ೨. ದಾಸಿ, ತೊತ್ತು ಎಂದು ಅರ್ಥ. ಇದು ಕನ್ನಡದಲ್ಲಿ ಬೈಗುಳ ಶಬ್ದ. ಕೆಲವು ಮನೆಗಳಲ್ಲಿ ಹೆಣ್ಣು ಮಕ್ಕಳನ್ನು ಪ್ರೀತಿಗಾಗಿ ಲೌಡಿ ಎಂದು ಕರೆಯುವುದುಂಟು. ಅವರಿಗೆ ಈ ಶಬ್ದದ ಪೂರ್ತಿ ಅರ್ಥ ತಿಳಿಯದೆ ಹೀಗೆ ಆಗುತ್ತದೆ.

# ವ

**ವಂಕುಡಿ** ಬಾಗಿರುವ ಚಿಕ್ಕ ಕತ್ತಿಯಂಥ ಆಯುಧ.

**ವಂಡಾರ (ವಣ್ಣಾರ) ಕಂಬಳ, ಬಸ್ರೂರ ಜಪ್ಪಳ, ಕೋಟೇಶ್ವರ ಕೋಡಿಹಬ್ಬ ಮೂರೂ ಕಂಡರೆ ಮೋಚ - ಎಂಬ ಗಾದೆ ಮಾತಿನ ಐತಿಹ್ಯ.**

ಕಿಟ್ಟೆಲ್ಲನ ನಿಘಂಟಿನಲ್ಲಿ ಈ ಗಾದೆ ಉಕ್ತವಾಗಿದೆ. ವನ್ನಾರ, ಬಸ್ರೂರು ಮತ್ತು ಕೋಟೇಶ್ವರ ಎಂಬ ಮೂರೂ ದಕ್ಷಿಣ ಕನ್ನಡದಲ್ಲಿ ಪ್ರಸಿದ್ಧವಾದ ಸ್ಥಳಗಳು. ವಣ್ಣಾರ ಎಂಬುದನ್ನು ಈಗ ವಂಡಾರ ಎಂದೇ ಬರೆಯುತ್ತಾರೆ. ಈ ಸ್ಥಳದಲ್ಲಿ ನಡೆಯುವ ಕಂಬಳವು ಬಹು ಪ್ರಸಿದ್ಧವಾದ ಜಾತ್ರೆಯ ಸಮಯ. ಕಂಬಳ ಎಂದರೆ ಪುಷ್ಟವಾದ ಕೋಣಗಳನ್ನು ಕೆಸರು ಗದ್ದೆಯಂತಿರುವ ನೀರು ನಿಂತ ಓಟದ ಕಣದಲ್ಲಿ ಓಡಿಸುವುದು. ಜೊತೆ ಕೋಣಗಳನ್ನು ಓಡಿಸುವುದೂ ಉಂಟು. ಹಿಂದೆ ಈ ಕಂಬಳ, ಅರಸ ಕಂಬಳ ಎಂಬ ಹೆಸರಿನಲ್ಲಿ ಪ್ರಖ್ಯಾತವಾಗಿತ್ತು. ವಂಡಾರದಲ್ಲಿ ನಡೆಯುವ ಕಂಬಳ ಬಹು ಪ್ರಸಿದ್ಧ. ಬಸ್ರೂರು ಕುಂದಾಪುರದ ತಾಲ್ಲೂಕಿನ ಒಂದು ಪ್ರಸಿದ್ಧವಾದ ಊರು. ಇಲ್ಲಿ ಅನೇಕ ದೇವಾಲಯಗಳಿವೆ. ಹಿಂದೆ ಇಲ್ಲಿ ಜಪ್ಪಳ ಅಂದರೆ ಜಾತ್ರೆ ನಡೆಯುತ್ತಿತ್ತಂತೆ. ಅದೂ ಪ್ರಸಿದ್ಧವಾಗಿತ್ತು. ಕೋಟೇಶ್ವರ ದೇವಸ್ಥಾನವೂ ಪ್ರಾಚೀನವಾದುದೇ. ಅಲ್ಲಿ ಮಾರ್ಗಶೀರ್ಷ ಪೂರ್ಣಿಮೆಯಲ್ಲಿ ನಡೆಯುವ ಜಾತ್ರೆ ಜನಪ್ರಿಯವಾದುದು. ಇದಕ್ಕೆ ಕೋಡಿಹಬ್ಬ ಎಂಬ ಹೆಸರಿದೆ. ಕೋಡಿ ಎಂದರೆ ಕರಾವಳಿಯ ಭಾಷೆಯಲ್ಲಿ ಕಾರ್ತಿಕಮಾಸ. ಆ ಸಮಯದಲ್ಲಿ ನಡೆಯುವ ಹಬ್ಬ ಎಂದು ಈ ಹೆಸರು ಬಂದಿರಬೇಕು. ಈ ಮೂರು ಜಾತ್ರೆಗಳ ಬಗ್ಗೆ ಅನೇಕ ಕಥೆಗಳಿವೆ. ದುರಂತದ ಕಥೆಯೂ ಒಂದಿದೆ. ಎಲ್ಲವೂ ಬಹು ಜನಪ್ರಿಯವಾದುದರಿಂದ ಈ ಜಾತ್ರೆಗಳನ್ನು ನೋಡಿದವರಿಗೆ ಮೋಕ್ಷ ಸಿಕ್ಕಿದಷ್ಟು ಸಂತೋಷವಾಗುತ್ತದೆ ಎಂದು ಯಾರೋ ಜಾನಪದ ಕವಿ ಆ ಗಾದೆಯಂಥ ಪದ್ಯವನ್ನು ಕಟ್ಟಿರಬೇಕು. ಮೋಚ = ಮೋಕ್ಷ.

**ವಂತಿಗೆ** ಇದು ತುಳು ಭಾಷೆಯ ಶಬ್ದ. ಇದಕ್ಕೆ ವತ್ತಿಗೆ ಎಂಬ ಪರ್ಯಾಯ ರೂಪವೂ ಇದೆ.

ಇದಕ್ಕೆ ಸಾಮಾಜಿಕವಾದ ಧರ್ಮಕಾರ್ಯಗಳಿಗೆ ನೀಡುವ ಧನಸಹಾಯ ಎಂದರ್ಥ. ಇದನ್ನು ಆಗಿಂದಾಗ್ಗೆ ತಿಂಗಳಿಗಿಷ್ಟು ಎಂದು ಕೊಡುವುದೂ ಉಂಟು. ಒಟ್ಟಾಗಿ ಇಂಥ ಕಾರ್ಯಕ್ಕೆ ಇಷ್ಟು ಎಂದು ಧನವನ್ನು ನೀಡುವುದೂ ಉಂಟು. ವಂತಿಗೆ ಶಬ್ದಕ್ಕೆ ಆಲಂಕಾರಿಕವಾಗಿ ವಿದ್ವತ್ಕಾರ್ಯ, ಧರ್ಮಕಾರ್ಯ, ಕಲಾಸೇವೆ ಮುಂತಾಗಿ ಅರ್ಥಮಾಡುವುದೂ ಉಂಟು. ಉದಾಹರಣೆಗೆ, ಸಂಗೀತ ಕ್ಷೇತ್ರಕ್ಕೆ ಚೌಡಯ್ಯನವರ ವಂತಿಗೆ ತುಂಬ ಹಿರಿದು.

**ವಂದನೆ** ಇದು ಹೆಚ್ಚು ಔಪಚಾರಿಕವಾದ ಮಾತು. ಸಭೆಸಮಾರಂಭಗಳಿಗೆ ಮಾತ್ರ ಉಚಿತವಾದುದು. ವ್ಯವಹಾರದಲ್ಲಿ ನಾವು ವಂದನೆಗೆ ಬದಲಾಗಿ ನಮಸ್ಕಾರ ಎಂಬುದನ್ನೇ ಉಪಯೋಗಿಸುವುದಿಲ್ಲವೆ? ಪರಿಶೀಲಿಸಿ. ಧನ್ಯವಾದ ಎಂಬ ಸಂಸ್ಕೃತ ಶಬ್ದವೂ ಇದೆ. ಈಚೀಚೆಗೆ ಪ್ರಚಾರಕ್ಕೆ ಬರುತ್ತಿದೆ.

**ವಕ್ಷ್ಯಮಾಣ** ವಕ್ಷಮಾಣ ಅನ್ನುವುದು ಸಂಸ್ಕೃತದ ವಕ್ಷ್ಯಮಾಣ ಎಂಬ ಶಬ್ದದ ತಪ್ಪು ರೂಪ. ಆ ಶಬ್ದಕ್ಕೆ ಮುಂದೆ ಹೇಳಲ್ಪಡುವ ಎಂಬ ಭವಿಷ್ಯತ್ಕಾಲದ ಅರ್ಥವಿದೆ. ಬಹುಶಃ ಕಾನೂನಿನ ಕಾಗದ ಪತ್ರಗಳಲ್ಲಿ 'ಕೆಳಗೆ ನಮೂದಿಸಿರುವ' ಎಂಬುದಕ್ಕೆ ಸರಿಯಾಗಿ ಉಪಯೋಗಿಸಿರಬಹುದು. ಅದು ತಪ್ಪಾಗುವುದಿಲ್ಲ. ಆದರೆ ಶಬ್ದದ ಸ್ವರೂಪ ತಪ್ಪು.

**ವಡಬಾಗ್ನಿ** ವಡಬ + ಅಗ್ನಿ = ವಡಬಾಗ್ನಿ. ವಡಬ ಎಂಬ ಹೆಸರುಳ್ಳ ಬೆಂಕಿ. ಸಮುದ್ರ ಮಧ್ಯದಲ್ಲಿ ಒಂದು ಬೆಂಕಿ ಇದೆಯೆಂದೂ ಅದಕ್ಕೆ ವಡಬ ಎಂದು ಹೆಸರಿದೆ ಎಂದೂ ನಂಬಿಕೆಯಿದೆ. ವಡಬ ಎಂಬ ಶಬ್ದಕ್ಕೆ ಬಡಬ ಎಂಬ ರೂಪವೂ ಇದೆ ಸಂಸ್ಕೃತದಲ್ಲಿಯೇ! ದಕ್ಷಿಣ ಧ್ರುವದ ಬಳಿ ಕುದುರೆಯ ಬಾಯಿಯಂತಿರುವ ಕುಹರದಿಂದ ಸಮುದ್ರ ಮಧ್ಯದಲ್ಲಿ ಹೊರಡುವ ಬೆಂಕಿ ಇದು. ಬಡಬಾಗ್ನಿ ಎಂಬ ರೂಪವೂ ಇದೆ.

**ವಡ್ಡಾರಾಧನೆ** ವೃದ್ಧರ ಎಂದರೆ ಹಿರಿಯರ ಆರಾಧನೆ ಎಂದರೆ ಪೂಜೆ. ಇದೇ ವಡ್ಡಾರಾಧನೆ. ವೃದ್ಧ ಶಬ್ದ ತದ್ಭವವಾಗಿ ವಡ್ಡ ಎಂದಾಗಿದೆ.

**ವಜನು** ಇದು ಅರಬ್ಬಿಯ ವಜನ್ ಶಬ್ದದ ಕನ್ನಡ ರೂಪ. ಇದಕ್ಕೆ ತೂಕ, ಭಾರ, ಹೊರೆ ಎಂಬ ಅರ್ಥಗಳ ಜೊತೆಗೆ ಪ್ರಭಾವ ಎಂಬ ಆಲಂಕಾರಿಕ ಅರ್ಥವೂ ಇದೆ. ವಜನ್, ವಜಾ ಎಂಬ ಎರಡು ಅರಬ್ಬಿಯ ಶಬ್ದಗಳಿವೆ. ವಜನ್ ಎಂದರೆ ಅರಬ್ಬಿಯಲ್ಲಿ ೧. ತೂಕ, ೨. ಪ್ರಭಾವ. ಈ ಶಬ್ದ ಕೊನೆಯ ಅಕ್ಷರವಿಲ್ಲದೆ ವಜ = ತೂಕ, ಭಾರ ಎಂಬರ್ಥದಲ್ಲಿ ಕನ್ನಡದಲ್ಲಿ ಕೆಲವು ಕಡೆ ಪ್ರಯೋಗವಾಗುತ್ತಿದೆ. ವಜೆ, ವಜನು ಎಂಬ ರೂಪಗಳೂ ಕನ್ನಡದಲ್ಲಿವೆ. ಇದಕ್ಕೂ ತೂಕ ಎಂಬ ಅರ್ಥದ ಎಲ್ಲ ವ್ಯಾಪಕತೆಯೂ ಇದೆ. ದೀರ್ಘಾಂತವಾದ ವಜಾ ಎಂದರೆ ಕಳೆಯುವುದು, Subtract. ಇದಕ್ಕೆ ವ್ಯಾಪಕವಾಗಿ ಕೆಲಸದಿಂದ ತೆಗೆದುಹಾಕು, ಲೆಕ್ಕಕ್ಕೆ ಇಲ್ಲದಂತೆ ಮಾಡು ಎಂಬ ಅರ್ಥಗಳೂ ಬರುತ್ತವೆ.

**ವಠಾರ** ಈ ಶಬ್ದ ಮರಾಠೀ ಭಾಷೆಯಿಂದ ಬಂದಿರುವಂತಿದೆ. ಮರಾಠಿಯಲ್ಲಿ 'ವಾಡಾ' ಎಂದರೆ ಮನೆ. ವಾರ ಎಂದರೆ ಆವರಣ. ಇವೆರಡೂ ಶಬ್ದಗಳು ಸೇರಿ ಈ ಶಬ್ದ ಆಗಿರಬಹುದು ಎಂದು ಕಿಟ್ಟೆಲ್ ನಿಘಂಟಿನಲ್ಲಿದೆ. ವಠಾರ ಎಂಬ ಶಬ್ದವೇ ಬೇರೆಯಾಗಿ ಈಗ ಮರಾಠಿಯಲ್ಲಿ ಪ್ರಯೋಗದಲ್ಲಿದೆ. ಇದಕ್ಕೆ ನಗರದ ಒಂದು ಭಾಗ ಎಂಬ ಅರ್ಥವಿದೆ. ಆದರೆ ಕನ್ನಡದಲ್ಲಿಯೇ ವಟ್ಟಾರ ಎಂಬ ಶಬ್ದ ಹನ್ನೊಂದನೆಯ ಶತಮಾನದ ಶಾಸನಗಳಲ್ಲಿ ಬರುತ್ತದೆ. ವಟಾರ ಎಂಬ ಶಬ್ದರೂಪವೂ ಇದೆ. ಕನ್ನಡದಲ್ಲಿ ಈ ಶಬ್ದಕ್ಕೆ ಹಲವು ಸಣ್ಣ ಸಣ್ಣ ಮನೆಗಳನ್ನೊಳಗೊಂಡ ಆವರಣ ಎಂಬ ಅರ್ಥ ವ್ಯಾಪಕವಾಗಿ ಇದೆ. ದೇವಸ್ಥಾನ, ಮಠ ಮುಂತಾದವುಗಳ ಕೆಲಸಗಾರರು ಒಟ್ಟಾಗಿ ವಾಸ ಮಾಡುವ ಪ್ರದೇಶ ಎಂಬ ಅರ್ಥವೂ ಇದೆ. ಕೆಲವರು ವಿದ್ವಾಂಸರು ವೃತ್ತಾಗಾರ = ಸುತ್ತಲೂ ಇರುವ ಮನೆಗಳು ಎಂಬ

ಸಂಸ್ಕೃತ ಮೂಲವನ್ನು ಸೂಚಿಸುತ್ತಾರೆ. ಇನ್ನೂ ಇದು ಸಂಶೋಧನೆಗೆ ಸಾಮಗ್ರಿಯಾಗಿಯೇ ಇದೆ.

**ವನಿತಾ, ಸವಿತಾ** ವನಿತಾ ಸಂಸ್ಕೃತ ಶಬ್ದ. 'ಯಾರನ್ನು ಯಾಚಿಸಿ, ಸೇವಿಸಿ, ಪಡೆಯುತ್ತಾರೋ ಅಂಥ ಸ್ತ್ರೀ ವನಿತಾ, ಅಂದರೆ ಶ್ರೇಷ್ಠಳು' ಎಂದರ್ಥ. 'ಸವಿತಾ' ಎಂಬುದಕ್ಕೆ 'ತಾಯಿ' ಎಂಬರ್ಥವನ್ನು ಮಾಡಬಹುದು. ಅದೂ ಸಂಸ್ಕೃತವೇ.

**ವರ್ಣಮಾಲೆ** ಭಾರತದಲ್ಲಿರುವ ಎಲ್ಲ ಭಾಷೆಗಳ ಲಿಪಿಗಳಲ್ಲಿ ಬಹು ಲಿಪಿಗಳು ಹಿಂದಿದ್ದ ಬ್ರಾಹ್ಮೀ ಲಿಪಿಯಿಂದ ಬಂದಿವೆ. ಬ್ರಾಹ್ಮೀ ಲಿಪಿಯು ಧ್ವನಿಯ ಉಚ್ಚಾರಣೆಗೆ ಅನುಸಾರವಾಗಿ ಬರೆಯಲ್ಪಟ್ಟುದರಿಂದ ಅದು ಸದಾ ವೈಜ್ಞಾನಿಕ ಲಿಪಿಯಾಗಿದೆ. ಕ್ರಿ.ಪೂ. ಮೂರನೆಯ ಶತಮಾನದಿಂದ ಕ್ರಮವಾಗಿ ಬೆಳೆದು ಕನ್ನಡದ ಈಗಿನ ರೂಪವನ್ನು ಪಡೆದಿದೆ. ಲಿಪಿಶಾಸ್ತ್ರವೆನ್ನುವುದೇ ಒಂದು ದೊಡ್ಡ ಶಾಸ್ತ್ರ. ಖರೋಷ್ಠಿ, ಉರ್ದು ರೀತಿಯ ಬರವಣಿಗೆ.

**ವಶಿಕ** ಈ ಸಂಸ್ಕೃತ ಶಬ್ದಕ್ಕೆ ತುಚ್ಛವಾದ, ಶೂನ್ಯವಾದ, ಬರಿದಾದ, ನಿಕೃಷ್ಟವಾದ ಎಂದರ್ಥ. 'ವಶಿಕಂ ತುಚ್ಛ ರಿಕ್ತಕೇ' ಎಂದು ಅಮರದಲ್ಲಿ ಹೇಳಿದೆ.

**ವಸಾಹತು** ಅರಬ್ಬೀ ಭಾಷೆಯಿಂದ ಆಮದಾದ ಶಬ್ದ. ಆ ಭಾಷೆಯಲ್ಲಿ ಅದು ವಸ್‌ಅತ್ ಎಂದಿದೆ. ಸಂಸ್ಕೃತದ ವಸ್‌ಧಾತುವಿಗೆ ಸಂಬಂಧವಿರಬಹುದು. ಹಿಂದಿಯಲ್ಲಿ ವಸ್‌ಅತ್ ಮರಾಠಿಯಲ್ಲಿ ವಸಾಹತ್, ವಸಾತ್, ವಸಾದ್ ಎಂಬ ರೂಪಗಳಲ್ಲಿ ಪ್ರಯೋಗದಲ್ಲಿದೆ. ಕನ್ನಡದಲ್ಲಿಯೂ ಕೂಡ ಈ ಶಬ್ದಕ್ಕೆ ನಾಲ್ಕು ಪರ್ಯಾಯ ರೂಪಗಳಿವೆ. ವಸಾಹತು, ವಾಸಾಹತು, ವಸಾಹತ, ವಸಾಹತ್ತು. ಪರದೇಶಿಯರು ತಮಗಾಗಿ ಬೇರೆ ಸ್ಥಳಗಳನ್ನು ನಿರ್ದೇಶಿಸಿ ಬಿಡಾರಗಳನ್ನು ಕಟ್ಟಿ ವಾಸಿಸುವ ಸ್ಥಳ. ಇಂಗ್ಲಿಷಿನ Colony ಎಂಬ ಶಬ್ದಕ್ಕೆ ಸಮಾನವಾದದ್ದು. ಭಾರತದಲ್ಲಿ ಪೋರ್ಚುಗೀಸರು, ಫ್ರೆಂಚರು, ಇಂಗ್ಲಿಷರು ಮುಂತಾದವರೆಲ್ಲ ಬೇರೆ ಬೇರೆ ಕಡೆಗಳಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದ್ದರು. ಮಿಕ್ಕವರನ್ನೆಲ್ಲ ಓಡಿಸಿ ಇಂಗ್ಲಿಷರು ಒಟ್ಟು ಭಾರತವನ್ನೇ ತಮ್ಮ ರಾಜಕೀಯ ವಸಾಹತನ್ನಾಗಿ ಮಾಡಿಕೊಂಡು ಬಿಟ್ಟರು, ೨೦೦ ವರ್ಷಗಳ ಕಾಲ. ವಸಾಹತುಗಾರ, ವಸಾಹತುಗಿರಿ, ವಸಾಹತುಶಾಹಿ ಎಂಬ ಶಬ್ದಗಳನ್ನು ಲೇಖಕರು ಬಳಸುತ್ತಾರೆ..

**ವಸಿ** ಇದು ಗ್ರಾಮ್ಯ ಶಬ್ದ. ಸ್ವಲ್ಪ ಎಂಬ ಅರ್ಥ. ಮರಾಠಿಯ ವಾಇಚ ಶಬ್ದವಿಂದ ಬಂದದ್ದು. ಇದಕ್ಕೆ ಕನ್ನಡದ ಓಸು ಮೂಲವಿರಬೇಕು.

**ವಸುಂಧರಾ** ಭೂಮಿ. ವಸು ಅಂದರೆ ಸಿರಿ. ಐಶ್ವರ್ಯ, ಸಿರಿ ತುಂಬಿರುವವಳು ಭೂಮಿ ತಾಯಿ. ವಸುಧಾ ಎಂದರೂ ಅದೇ. ಅದಕ್ಕೆ ಸಂಸ್ಕೃತದಲ್ಲಿ ವಸೂನಿ ಧಾರಯತಿ ಎಂದು ವಿವರಣೆ. ಭೂಮಿಗೆ ರತ್ನಗರ್ಭಾ ಎಂದು ಇನ್ನೊಂದು ಹೆಸರು. ಗರ್ಭದಲ್ಲಿ ಅನೇಕ ರತ್ನರಾಶಿಗಳನ್ನೇ ಹೊಂದಿರುವವಳು ಎಂದರ್ಥ.

**ವಸ್ತು ಸಾಮಗ್ರಿ** ವಸ್ತು = ಪದಾರ್ಥ. ಸಂಸ್ಕೃತ ಶಬ್ದ. ಸಾಮಗ್ರಿ, ಸಮಗ್ರ ಸಂಸ್ಕೃತ ಶಬ್ದದಿಂದ ಬಂದಿದೆ. ಎಲ್ಲ ಪದಾರ್ಥಗಳು, ಒಂದು ಕೆಲಸಕ್ಕೆ ಬೇಕಾದ ಸಕಲ ವಸ್ತು ಸಂಗ್ರಹ ಎಂದರ್ಥ.

**ವಹಿ** ಈ ಶಬ್ದದ ಮರಾಠೀ ಭಾಷೆಯ ಸರಿಯಾದ ರೂಪ ವಹೀ. ಇದು ಲೆಕ್ಕಾಚಾರದ ಪುಸ್ತಕ. Accounts Register ಹಿಂದಿಯಲ್ಲಿಯೂ ಕೆಲವು ಕಡೆ ಪ್ರಯೋಗದಲ್ಲಿದೆ. ಕನ್ನಡದಲ್ಲಿ ಈ ಶಬ್ದವನ್ನೇ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಈಗ ಅದು ಪ್ರಯೋಗದಲ್ಲಿಲ್ಲ.

**ವಾಂಗೀಬಾತು** ಬದನೆಕಾಯಿಯನ್ನು ಒಗ್ಗರಣೆಯಲ್ಲಿ ಬೇಯಿಸಿ ಕಲಸಿದ ಅನ್ನ. ವಾಂಗಿ ಎಂಬುದು ಮರಾಠಿಯಲ್ಲಿ ವಾಂಗೇ ಎಂದಿದೆ. ಇದು ವೃಂತಾಕ ಎಂಬ ಸಂಸ್ಕೃತ ಶಬ್ದದ ತದ್ಭವ. ಹಿಂದಿಯಲ್ಲಿ ಬೈಗನ್, ಗುಜರಾತಿಯಲ್ಲಿ ವೇಂಗಣ್, ಪೋರ್ಚುಗೀಸ್ ಭಾಷೆಯಲ್ಲಿ Bringella, ಇಂಗ್ಲಿಷ್‌ನಲ್ಲಿ Brinjal.

**ವಾಂಛಾ** ಇದು ಸಂಸ್ಕೃತದಲ್ಲಿ ಆಸೆ, ಅಪೇಕ್ಷೆ, ಬಯಕೆ ಎಂಬ ಅರ್ಥವನ್ನು ಹೊಂದಿರುವ ಶಬ್ದ. ಕನ್ನಡದಲ್ಲಿ ವಾಂಛೆ ಎಂದು ತದ್ಭವ ರೂಪ. ಅರ್ಥದಲ್ಲಿ ಏನೂ ಬದಲಾವಣೆ ಇಲ್ಲ.

**ವಾಗೀಶ** ಈ ಸಂಸ್ಕೃತ ಶಬ್ದಕ್ಕೆ ವಾಕ್ಕಿಗೆ, ಮಾತಿಗೆ ಎಂದರೆ ಎಲ್ಲ ವಿದ್ಯೆಗಳಿಗೆ ಈಶ ಒಡೆಯನಾದ ಬ್ರಹ್ಮ ಎಂದರ್ಥ. ವಾಗೀಶಾ ಎಂದರೆ ಸರಸ್ವತಿ.

**ವಾಗ್ಮಿ** ಎಂಬುದು ಸಂಸ್ಕೃತದ ವಾಗ್ಮಿನ್ ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ತುಂಬ ರಸವತ್ತಾಗಿ ಮಾತನಾಡುವವನು ಎಂದರ್ಥ. **ವಾಕ್ ಪ್ರಶಸ್ತಾಸ್ಯಾಸ್ತೀತಿ ವಾಗ್ಮಿನ್** ಎಂದು ಸಂಸ್ಕೃತದಲ್ಲಿ ವಿವರ. ಇದಕ್ಕೆ Plato ತುಂಬ ಸೊಗಸಾದ ಸೂತ್ರವನ್ನು ಹೇಳಿದ್ದಾನೆ. ಯಾರು ಜನತೆಯ ಮನಸ್ಸನ್ನು ತನ್ನ ಅಧೀನಕ್ಕೆ ತಂದುಕೊಳ್ಳಬಲ್ಲನೋ ಅಂಥವನು ವಾಗ್ಮಿ ಎಷ್ಟು ಸೊಗಸಾದ ಸೂತ್ರ. A person who rules over men's minds. ನೆನಪಿಡಬೇಕಾದುದು.

**ವಾಙ್ಮಯ** ಸಂಸ್ಕೃತ ಶಬ್ದ. ಇದಕ್ಕೆ ೧. ಭಾಷೆ, ಮಾತು ಎಂದೂ ೨. ಕವಿಗಳಿಂದ ರಚಿತವಾದ ಕಾವ್ಯರಾಶಿ ಎಂದೂ ಅರ್ಥಗಳಿವೆ. **ಸಮಸ್ತಂ ವಾಙ್ಮಯಂ ವ್ಯಾಪ್ತಂ ತ್ರೈಲೋಕ್ಯಮಿವ ವಿಷ್ಣುನಾ** ಎಂದು ವೃತ್ತರತ್ನಾಕರವೆಂಬ ಗ್ರಂಥದಲ್ಲಿ ಉಲ್ಲೇಖವಿದೆ. ಮೂರು ಲೋಕವನ್ನು ತುಂಬಿಕೊಂಡಂತೆ ಕಾವ್ಯ ಸಮೂಹವನ್ನು ಹರಿಯೇ ತುಂಬಿದ್ದಾನೆ ಎಂದು ಅರ್ಥ.

**ವಾಙ್ಮಾಧುರ್ಯ** ವಾಕ್ + ಮಾಧುರ್ಯ ಈ ಎರಡು ಶಬ್ದಗಳು ಸೇರಿ ಸಂಧಿಯಾದಾಗ ವಾಙ್ಮಾಧುರ್ಯ ಎಂಬ ರೂಪ ಸಿದ್ಧಿಸುತ್ತದೆ. ಇಂಥ ಸಂಧಿಗೆ ಅನುನಾಸಿಕ ಸಂಧಿ ಎಂದು ಹೆಸರು. ಈ ಶಬ್ದಕ್ಕೆ ಅರ್ಥ ಮಾತಿನಲ್ಲಿರುವ ಮಧುರವಾದ ಗುಣ ಎಂದು. ಮಾಧುರ್ಯ ಎಂಬುದು ಕಾವ್ಯದ ಒಂದು ಗುಣ. ಮಾತನ್ನು ಕೇಳಿದೊಡನೆಯೇ ಮನಸ್ಸಿಗೆ ಹರ್ಷವನ್ನು ತರಿಸುವ ಗುಣ. ಇದು ಭಾಷಣ ಕಲೆಗೂ ಅನ್ವಯಿಸುತ್ತದೆ.

**ವಾಚಸ್ಪತಿ** ಇದು ಸಂಸ್ಕೃತದ ಶಬ್ದ. ದೇವತೆಗಳಿಗೆ ಗುರುವಾದ ಅವನು ಎಲ್ಲ ಮಾತಿಗೂ ಅಂದರೆ ಭಾಷೆಗೂ ಗುರು. '**ವಾಚಾಂ ಪತಿಃ ವಾಚಸ್ಪತಿಃ**' ಎಂದು ವಿವರಣೆ. ಅವನಿಗೆ ಬೃಹಸ್ಪತಿ, ಜೀವ, ಸುರಗುರು ಮುಂತಾದ ಅನೇಕ ಹೆಸರುಗಳಿವೆ.

**ವಾಚಾಮಗೋಚರ** ಇದು ಒಂದು ಶಬ್ದವಲ್ಲ. ಸಂಸ್ಕೃತದಲ್ಲಿ ವಾಚಾಂ + ಅಗೋಚರ ಎಂದು ಎರಡು ಶಬ್ದಗಳು ಸೇರಿ ಆಗಿರುವ ನುಡಿಗಟ್ಟು ಅದು. ಮಾತಿಗೆ, ಭಾಷೆಗೆ ಸಿಕ್ಕದ್ದು ಎಂದರ್ಥ. ಆದರೆ ಈ ಮಾತನ್ನು ಕನ್ನಡದಲ್ಲಿ ಅಧಿಕವಾಗಿ ಬೈಗಳಿಗೆ ಮಾತ್ರ ಅನ್ವಯಿಸಿ ಉಪಯೋಗಿಸುತ್ತಾರೆ. ಕೈಗೆ ಸಿಕ್ಕಿದ ಕಳ್ಳನನ್ನು ವಾಚಾಮಗೋಚರವಾಗಿ ಬೈದರು, ಸದ್ಯ ಹೊಡೆಯಲಿಲ್ಲ, ಎಂಬ ವಾಕ್ಯವನ್ನು ಗಮನಿಸಿ.

**ವಾಚಿಕೆ** ಎಂದರೆ ಚಾರರ ಮೂಲಕ ಬಾಯಿಯಲ್ಲಿ ಹೇಳಿ ಕಳುಹಿಸುವ ಮಾತು, ವರ್ತಮಾನ, ವೃತ್ತಾಂತ ಇತ್ಯಾದಿ. ಈಚೆಗೆ ಕನ್ನಡದಲ್ಲಿ ಈ ಶಬ್ದವನ್ನು ಇಂಗ್ಲಿಷಿನ Reader ಎಂಬ ಶಬ್ದಕ್ಕೆ ಸಮಾನವಾಗಿ ಉಪಯೋಗಿಸುತ್ತಿದ್ದಾರೆ. ಇದಕ್ಕೆ ಪಠ್ಯಪುಸ್ತಕ ಎಂದರ್ಥ.

**ವಾಚ್ಯ** ಶಬ್ದಗಳ ಅರ್ಥಗಳು ಹೊರಡುವುದು ವಾಕ್ಯದಲ್ಲಿ. ವಾಕ್ಯದಲ್ಲಿ ಅರ್ಥವು ನೇರವಾಗಿ ತಿಳಿಯಬಂದರೆ ಅದೇ ವಾಚ್ಯಾರ್ಥ. ಇನ್ನೂ ಮುಂದೆ ಹೋಗಿ ಒಳ್ಳೆಯ ಕಾವ್ಯದಲ್ಲಿ ರಚನೆಯು ವಾಚ್ಯವಾಗಿರುವುದಕ್ಕಿಂತ ಬೇರೆಯ ರೀತಿಯಲ್ಲಿ ಇರುತ್ತದೆ. ಇಂಥ ವಾಕ್ಯರಚನೆಯಿಂದ ಲಕ್ಷಣಾರ್ಥವು ಹೊರಡುತ್ತದೆ. ಲಕ್ಷಣಾರ್ಥಕ್ಕಿಂತ ಇನ್ನೂ ಮುಂದೆ ಹೋಗಿ ಅರ್ಥವು ಹೊರಡುವ ಹಾಗಿದ್ದರೆ ಅದು ವ್ಯಂಗ್ಯಾರ್ಥ. ಈ ವ್ಯಂಗ್ಯಾರ್ಥವೇ ಉತ್ತಮ ಕಾವ್ಯದ ಕುರುಹು. ಈ ವಿವರಗಳನ್ನು ಒಂದೆರಡು ಪುಟಗಳಲ್ಲಿ ತಿಳಿಸಲು ಸಾಧ್ಯವಿಲ್ಲ. ಇದಕ್ಕೆ ಸಹಾಯ ಮಾಡುವ ಉತ್ತಮ ಗ್ರಂಥಗಳಿವೆ. ಅವುಗಳಲ್ಲಿ ಒಂದು ದಿ. ಪ್ರೊ. ತೀನಂಶ್ರೀಯವರ 'ಭಾರತೀಯ ಕಾವ್ಯ ಮೀಮಾಂಸೆ'. ಈ ಗ್ರಂಥದ ೨೨೧ನೇ ಪುಟದಿಂದ ೨೪೩ ರ ವರೆಗೆ ಓದಿದರೆ ಮೇಲೆ ಹೇಳಿರುವ ಸೂಚನೆಯ ಸ್ಪಷ್ಟ ವಿವರಣೆ

ತಿಳಿಯಬರುತ್ತದೆ. ಕಾವ್ಯಗಳನ್ನು ಓದುವವರೂ ಬರೆಯುವವರೂ ಈ ಗ್ರಂಥದಿಂದ ತುಂಬ ಪ್ರಯೋಜನವನ್ನು ಪಡೆಯಬಹುದು.

ವಾಜಮೀ ಇದು ಅರಬ್ಬಿಯ ವಾಜಿಬ್ ಎಂಬ ಶಬ್ದದಿಂದ ಬಂದದ್ದು. ಇದು ಗುಣವಾಚಕದ ಅರ್ಥವನ್ನು ಹೊಂದಿದೆ. ಸರಿಯಾದ, ಯೋಗ್ಯವಾದ, ಅರ್ಹವಾದ ಎಂದರ್ಥ. ಈ ಶಬ್ದ ವಾಜಬೀ, ವಾಜವಿ, ವಾಜಮೀ, ವಾಜಿಬೀ, ವಾಜಿಮೀ ಎಂಬ ರೂಪಗಳಲ್ಲಿಯೂ ಅಲ್ಲಲ್ಲಿ ಪ್ರಯೋಗದಲ್ಲಿದೆ. ಮರಾಠಿಯಲ್ಲಿ ವಾಜಬೀ ಎಂದು ಹೆಚ್ಚು ಪ್ರಯೋಗವುಳ್ಳ ಶಬ್ದ.

ವಾಡಿ ಸಂಸ್ಕೃತದಲ್ಲಿ ವಾಟೀ ಎಂಬ ಶಬ್ದವಿದೆ. ಇದಕ್ಕೆ ಸಣ್ಣ ಮನೆ, ಕುಟೀರ, ಗುಡಿಸಲು ಎಂದು ಅರ್ಥ. ಈ ಶಬ್ದವೇ ಪ್ರಾಕೃತದಲ್ಲಿ ವಾಡಿ, ವಾಡೀ ಎಂಬ ರೂಪಗಳನ್ನು ಪಡೆಯುತ್ತದೆ. ವಾಡಿ ಶಬ್ದ ದ್ರಾವಿಡದ ಎಲ್ಲ ಭಾಷೆಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿ ಪ್ರಯೋಗವಾಗುತ್ತವೆ. ಕನ್ನಡದಲ್ಲಿ ಪಾಡಿ, ಪಾಳಿ, ವಾಡಿ, ಹಾಡಿ, ಹಾಡು, ಹಾಡ್ಯ ಎಂಬ ರೂಪಗಳಲ್ಲಿ ದೊರಕುತ್ತದೆ. ಇವಕ್ಕೆ ೧. ಹಳ್ಳಿ, ಗ್ರಾಮ ೨. ಜಿಲ್ಲೆ ೩. ಹಟ್ಟಿ ೪. ಸೈನ್ಯ ೫. ಮನೆಗಳ ಸಾಲು ೬. ಹುಲ್ಲುಗಾವಲು ೭. ತೋಟ ಎಂಬ ಅರ್ಥದ ಪ್ರಯೋಗಗಳಿವೆ.

ವಾಢಾಮಾ ಇದು ಮರಾಠಿಯಲ್ಲಿ ಪ್ರಯೋಗವಾಗುವ ಶಬ್ದ. ಸಂಸ್ಕೃತದ ವರ್ಧಕದ ತದ್ಭವ. ಸಂಸ್ಕೃತದಲ್ಲಿ ಆ ಶಬ್ದಕ್ಕೆ ಬಡಗಿ ಎಂದು ಅರ್ಥ. ಕನ್ನಡದಲ್ಲಿಯೂ ಈ ಅರ್ಥದಲ್ಲಿ ವಾಢಮಾ ಉತ್ತರ ಕರ್ನಾಟಕದಲ್ಲಿ ಪ್ರಯೋಗದಲ್ಲಿದೆ. ವಾಢಾವಾ ಎಂಬ ಶಬ್ದವೂ ಅಲ್ಲಲ್ಲಿ ಪ್ರಯೋಗವಾಗುತ್ತದೆ ಎಂದು ಹೇಳುತ್ತಾರೆ.

ವಾನಪ್ರಸ್ಥ ಪ್ರಾಚೀನರು ಮಾನವರಿಗೆ ನಾಲ್ಕು ಆಶ್ರಮಗಳನ್ನು ನಿಯಮಿಸಿದ್ದಾರೆ. ಇವು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ. ಇವು ನಾಲ್ಕು ಘಟ್ಟಗಳು. ಬ್ರಹ್ಮಚಾರಿಗೆ ವಿದ್ಯಾಭ್ಯಾಸ, ಗೃಹಸ್ಥನಿಗೆ ಯಾಗಾದಿ ಕರ್ಮಗಳು, ವಾನಪ್ರಸ್ಥನಿಗೆ ತಪಸ್ಸು, ಸಂನ್ಯಾಸಿಗೆ ಜ್ಞಾನಮೋಕ್ಷಗಳು, ಇದಿಷ್ಟು ವಿಷಯಗಳಾಗಿರುತ್ತವೆ. ವನದಲ್ಲಿ ವಾಸಿಸುವವನು ವಾನಪ್ರಸ್ಥ.

ವಾಪಸ್ ಇದು ಪಾರಸೀ ಭಾಷೆಯ ಶಬ್ದ; ಅಲ್ಲಿಯೂ ಇದೇ ರೂಪದಲ್ಲಿದೆ. ಇದಕ್ಕೆ ಅರ್ಥ ಹಿಂದಕ್ಕೆ, ಮೊದಲಿದ್ದ ಜಾಗಕ್ಕೆ ಎಂದರ್ಥ. ಪತ್ರ ವಾಪಸ್ ಬಂತು. ಊರಿಗೆ ಹೋದವನು ಇವತ್ತೇ ವಾಪಸ್ಸು ಬಂದ. ವರ್ಗವಾಗಿದ್ದವನು ಮತ್ತೆ ವಾಪಸ್ಸು ಬಂದ. ವಾಪಸ್, ವಾಪಸ್ಸು ಎರಡು ರೂಪಗಳೂ ಉಂಟು. ಇದು ಅವ್ಯಯವಾಗಿ ಪ್ರಯೋಗವಾಗುತ್ತದೆ.

ವಾಮಮಾರ್ಗ ವಾಮ ಎಂಬ ಸಂಸ್ಕೃತದ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಸಿರಿ, ಸಂಪತ್ತು, ಧನ ೨. ಸುಂದರವಾದ, ಚೆನ್ನಾದ ೩. ಎಡಗಡೆಯ, ಬಲಕ್ಕೆ ವಿರುದ್ಧವಾದ ೪. ಪ್ರತಿಕೂಲವಾದ, ವಿರುದ್ಧವಾದ ೫. ಶಿವ, ಪರಮೇಶ್ವರ ೬. ಮನ್ಮಥ. ವಾಮಮಾರ್ಗ ಎನ್ನುವುದಕ್ಕೆ ವಿಶೇಷವಾದ ಅರ್ಥವಿದೆ. ಇದು ಒಂದು ತಂತ್ರ. ಇದನ್ನೇ ವಾಮಾಚಾರ ಎಂದೂ ಕರೆಯುತ್ತಾರೆ. ಈ ತಂತ್ರದ ಪ್ರಕಾರ ಶಿವನ ಪತ್ನಿಯಾದ ಪಾರ್ವತಿಯನ್ನು ಶಕ್ತಿ ಎಂದು ಆರಾಧಿಸುವುದು. ಇದು ದಕ್ಷಿಣಾಚಾರಕ್ಕೆ ವಿರುದ್ಧವಾದುದು. ಇದು ಸರಿಯಾದ ಮಾರ್ಗವಲ್ಲವೆಂದೂ ಯಕ್ಷಿಣಿ, ಇಂದ್ರಜಾಲ ಮುಂತಾದುವುಗಳಿಗೆ ಪ್ರೇರಕವೆಂದೂ, ದುಷ್ಟಶಕ್ತಿಗಳ ಆಗರವೆಂದೂ ಸಾಮಾನ್ಯರಲ್ಲಿ ತಿಳಿವಳಿಕೆಯಿದೆ. ಮಾಯ, ಮಾಟ ಮುಂತಾದುವುಗಳ ಮೂಲಕ ಬೇಡದವರಿಗೆ ಕೆಟ್ಟದ್ದನ್ನು ಮಾಡುವ ಉದ್ದೇಶ ಹೊಂದಿರುವ ಈ ತಂತ್ರದ ಬಗ್ಗೆ ಸಾಮಾನ್ಯರಲ್ಲಿ ಗೌರವವಿಲ್ಲ.

ವಾಮಾಚಾರ ಕ್ರಿಯೆ ವಾಮಾಚಾರ ಎಂಬುದು ತಾಂತ್ರಿಕ ಆಚಾರಕ್ಕೆ ಸಂಬಂಧಿಸಿದುದು. ಶಿವನ ಪತ್ನಿಯನ್ನು ಶಕ್ತಿ ರೂಪದಲ್ಲಿ ಪೂಜಿಸಿ ಇತರರಿಗೆ ಕೆಟ್ಟದ್ದನ್ನು ಉಂಟು ಮಾಡುವ ಆಚಾರ. ಅಂಥ ಕೆಲಸವೇ ವಾಮಾಚಾರ ಕ್ರಿಯೆ. ಇದು ದಕ್ಷಿಣಾಚಾರಕ್ಕೆ ವಿರುದ್ಧವಾದುದು.

**ವಾರಗಿತ್ತಿ - ನಗೆಣ್ಣಿ - ನಗೆವೆಣ್ಣು** ಈ ಶಬ್ದ ನಿಜವಾಗಿ ಓರಗಿತ್ತಿ. ಒಂದೇ ಓರಗೆಯವಳು ಎಂದರ್ಥ. ಅಣ್ಣ ತಮ್ಮಂದಿರ ಹೆಂಡತಿಯರು ಓರಗಿತ್ತಿಯರಾಗುತ್ತಾರೆ. ಇದಕ್ಕೆ ಬದಲಾಗಿ ನೆಗೆಣ್ಣೆ ಎಂದು ಶಬ್ದವನ್ನು ಉತ್ತರ ಕರ್ನಾಟಕದಲ್ಲಿ ಬಳಸುತ್ತಾರೆ. ಈ ಶಬ್ದ ನಗೆವೆಣ್ ಎಂಬ ಶಬ್ದದಿಂದ ಬಂದಿದೆ ಎನ್ನುತ್ತಾರೆ. ನಗೆವೆಣ್ ಎಂದರೆ ನಗುನಗುತ್ತಾ ಜೊತೆಗಾತಿಯಾಗಿರುವ ಹೆಣ್ಣು ಎಂದು ಅರ್ಥ. ನಗೆವೆಣ್ಣು ಎಂಬ ಶಬ್ದರೂಪ ಕನ್ನಡದಲ್ಲಿ ಬಹಳ ಹಿಂದಿನ ಕಾಲದಿಂದ ಬಂದಿದೆ. ಅಂದರೆ ೧೩ನೆಯ ಶತಮಾನದಿಂದ ಕಾವ್ಯಗಳಲ್ಲಿ ಪ್ರಯೋಗದಲ್ಲಿದೆ. **'ಕಾಮವೆಂಬೊ ನಗೆಹೆಣ್ಣು ಎನ್ನ ಕಟ್ಟಿ ಆಳುತಾಳೆ'** ಈ ಸಾಲಿನಲ್ಲಿರುವ ನಗೆಹೆಣ್ಣು ಧಾರವಾಡದ ಕಡೆ ಉಪಯೋಗಿಸುವ ನಗೆಣ್ಣೆ =ಓರಗಿತ್ತಿ. ಈ ಪದ ತುಂಬ ಸ್ವಾರಸ್ಯವಾದುದು. ಪದದಲ್ಲಿ ಮೊದಲಿನಿಂದ ಕೊನೆಯವರೆಗೂ ಸಂಸಾರದ ಸಂಬಂಧಗಳ ಆಳವಾದ ವಿವರವುಳ್ಳ ರೂಪಕಗಳಿವೆ. ಸಂಸಾರವೆಂಬ ಶಬ್ದದಲ್ಲಿ ಶ್ಲೇಷೆ ಅಡಗಿದೆ. ಅದು ಕುಟುಂಬಕ್ಕೆ. ಆ ಜನ್ಮದ ಬಾಳಿಗೂ ಅನ್ವಯಿಸುತ್ತದೆ. ಆದುದರಿಂದ ಇಲ್ಲಿರುವ ನಗೆಹೆಣ್ಣು ಚಂಚಲೆ. ಅಲ್ಲಿ ಅವಳು ಓರಗಿತ್ತಿ. ಇದೇ ಸರಿಯಾದ ಅರ್ಥ. ಬಹುಶಃ **ನೆಗೆಹೆಣ್ಣು** ಎಂಬ ರೂಪವೇ ಅಸಾಧು.

**ವಾರುಣೀ** ಇದು ಸಂಸ್ಕೃತದ ಸ್ತ್ರೀ ಲಿಂಗದ ಶಬ್ದ. ಇದಕ್ಕೆ *೧. ವರುಣನ ಪತ್ನಿ ೨. ಮದ್ಯ ೩. ಪಶ್ಚಿಮ ದಿಕ್ಕು ೪. ಮದ್ಯದ ಅಧಿದೇವತೆ ಎಂಬ ಅರ್ಥಗಳು ಮುಖ್ಯವಾಗಿವೆ.* ಇತರ ಅರ್ಥಗಳೂ ಉಂಟು. ಅನೇಕರು ಬಾಲಕಿಯರು ಈ ಹೆಸರನ್ನು ಧರಿಸಿದ್ದಾರೆ. ಬಾಯಿ ತುಂಬ ಹೇಳುವ ಹೆಸರು ಚೆನ್ನಾಗಿದೆ.

**ವಾರ್ತೆ** ಇದು ವಾರ್ತಾ ಎಂಬ ಸಂಸ್ಕೃತ ಶಬ್ದದ ತದ್ಭವ. ವಾರ್ತೆ, ಪ್ರವೃತ್ತಿ, ವೃತ್ತಾಂತ, ಉದಂತ ಎಂಬ ಎಲ್ಲ ಶಬ್ದಗಳಿಗೆ ಹೆಚ್ಚು ಕಡಿಮೆ ಒಂದೇ ಅರ್ಥವೆಂದು ಅಮರದ ಟೀಕಾಕಾರರು ಹೇಳುತ್ತಾರೆ. ರಾಜರು, ಪ್ರಮುಖರು, ಪ್ರಸಿದ್ಧರು ಮುಂತಾದವರ ವರ್ತನೆಯ ವಿಚಾರವೇ ವಾರ್ತೆ. ಪ್ರವೃತ್ತಿಗೂ ಅದೇ ಅರ್ಥ ಇಲ್ಲಿ. ವೃತ್ತಾಂತ ಅಂಥ ವಾರ್ತೆಯ ಕೊನೆಯ ಸ್ಥಿತಿಯನ್ನು ಹೇಳುವುದು. ಉದಂತ ಶಬ್ದಕ್ಕೆ ಅದೇ ಅರ್ಥ. ಆದರೆ ಆ ಬಳಿಕ ಆ ಶಬ್ದಕ್ಕೆ ಕಥೆ ಎಂಬ ಅರ್ಥ ಬಂದಿದೆ. ರಾಮೋದಂತ ಎಂಬ ಗ್ರಂಥದ ಹೆಸರನ್ನು ನೋಡಿ.

**ವಾವೆ** ಇದು ರಕ್ತಸಂಬಂಧವನ್ನು ಸೂಚಿಸುವ ಶಬ್ದ. ನೆಂಟತನ, ವರಸೆ ಇವುಗಳನ್ನು ಹೇಳುತ್ತದೆ. ತೆಲುಗಿನಲ್ಲಿ ವರಸೆ ಎಂಬ ಶಬ್ದವೇ ಇದೆ. ಸಂಸ್ಕೃತದ ಜಾಮಿ ಎಂಬ ಶಬ್ದದಿಂದ ಬಂದಿರಬಹುದು ಎಂದು ಕೆಲವರ ಅಭಿಪ್ರಾಯ.

**ವಾಸನೆ1.** ಇದು ವಿಚಿತ್ರವಾದ ಶಬ್ದ. ಸಂಸ್ಕೃತದಲ್ಲಿ ವಾಸ ಎಂದರೆ ಸುವಾಸನೆ, ಕಂಪು. ಆದರೆ ವಾಸನಾ ಎಂಬ ಶಬ್ದಕ್ಕೆ ಈ ಅರ್ಥವಿಲ್ಲ. ವಾಸನೆ ಎಂಬ ಶಬ್ದ ಇಂಥ ಸ್ವರೂಪದ ಶಬ್ದಗಳ ಸಾಮ್ಯದಿಂದ ಪ್ರಯೋಗಕ್ಕೆ ಬಂದಿರಬಹುದು. ಸುವಾಸನಾ, ದುರ್ವಾಸನಾ ಎಂಬ ಶಬ್ದಗಳ ಪ್ರಯೋಗ ಸಹಿತ ಸಂಸ್ಕೃತ ಕಾವ್ಯಗಳಲ್ಲಿ ಕಾಣಬರುವುದಿಲ್ಲ. ಸುಗಂಧ, ದುರ್ಗಂಧ ಎಂಬ ಶಬ್ದಗಳು ಹೆಚ್ಚಾಗಿ ಉಪಯೋಗವಾಗುತ್ತವೆ. ಈಗಂತೂ ವಾಸನೆ ಎಂಬ ಶಬ್ದಕ್ಕೆ ಕೆಟ್ಟ ವಾಸನೆ, ದುರ್ಗಂಧ ಎಂಬುದೇ ಮುಖ್ಯ ಅರ್ಥವಾಗಿದೆ ಕನ್ನಡದಲ್ಲಿ. ಸುವಾಸನೆ ಎಂದಾಗಲೇ ಅದು ಹಿತಕರವಾದ ಕಂಪು ಎಂಬ ಅರ್ಥಬರುವುದು. ಏನೋ ವಾಸನೆ ಎಂದರಂತೂ ತೀರ್ಮಾನವಿತ್ತಂತೆ. ಅದು ದುರ್ಗಂಧವೇ, ಬೇರೆ ಅಲ್ಲ. ಈ ಶಬ್ದಗಳನ್ನು ಉಪಯೋಗಿಸುವಾಗ ತುಂಬ ಎಚ್ಚರದಿಂದ ಇರಬೇಕು. ಏನೋ 'ಘಂ' ಅಂತ ವಾಸನೆ ಬರುತ್ತಿದೆ ಎಂದರೆ 'ಘಂ' ಎಂಬುದರಿಂದ ಸುವಾಸನೆ ಎಂದು ಅರ್ಥ. ಘಂ ಎಂಬುದು ಗಮುಗಮು, ಘಮುಘಮುಕ್ಕೆ ಸಮಾನ.

**ವಾಸನೆ2.** ಕನ್ನಡದ ಶಬ್ದ. ಬಾಸಣೆ, ಬಾಸಣಿಸು, ಬಾಸಣಿಗೆ ಮುಂತಾದ ಶಬ್ದಗಳಿಗೆ

ಸಂಬಂಧಿಸಿರುವುದು, ವೈದ್ಯಶಾಸ್ತ್ರದಲ್ಲಿ. ಔಷಧಗಳನ್ನು ತಯಾರಿಸುವಾಗ ಔಷಧ ದ್ರವ್ಯಗಳನ್ನು ಪುಡಿ ಮಾಡಿ, ಆ ಪುಡಿಯನ್ನು ತುಂಬ ನುಣ್ಣಗೆ ಮಾಡಲು ಪಾತ್ರೆಯ ಬಾಯಿಗೆ ಬಟ್ಟೆಯನ್ನು ಕಟ್ಟಿ ಅದರಲ್ಲಿ ಸೋಸುತ್ತಾರೆ. ಇದಕ್ಕೆ ವಾಸಿಸು = ಕಂಪನ್ನು ತುಂಬು ಎಂಬ ಅರ್ಥವಿದೆ. ಈ ವಾಸನೆ ಎಂಬ ಶಬ್ದ ಅದರಿಂದ ಬಂದುದು. ಸಂಸ್ಕೃತದ ವಾಸನಾ ಶಬ್ದಕ್ಕೂ ಇದಕ್ಕೂ ಸಂಬಂಧವಿಲ್ಲ. ಸಂಸ್ಕೃತದ ಶಬ್ದಕ್ಕೆ ನೆನಪಿನಿಂದ ಬಂದ ತಿಳಿವಳಿಕೆ, ಪೂರ್ವಜನ್ಮದ ವಾಸನೆ ಎಂಬಂಥ ಅರ್ಥವಿದೆ. ಈ ಎರಡನ್ನೂ ಒಂದೇ ಮೂಲದಿಂದ ವ್ಯುತ್ಪನ್ನ ಮಾಡುವುದು ತಪ್ಪು.

**ವಾಸಿ** ಸಂಸ್ಕೃತ ಶಬ್ದವಾದರೆ ವಾಸ ಮಾಡುವವನು. ಉದಾ: ಪುರವಾಸಿ. ಗ್ರಾಮವಾಸಿ ಅದಕ್ಕೆ ವಿರುದ್ಧವಾದುದು. ವಾಸಿಯಾಗು ಎಂದರೆ ರೋಗ ಗುಣವಾಗು. ಆತ ತುಂಬ ಹೆಸರುವಾಸಿಯಾದ ಮನುಷ್ಯ ಎಂದರೆ ಪ್ರಸಿದ್ಧ ಎಂದರ್ಥ. ಒಳ್ಳೆಯದು ಎಂಬ ಅರ್ಥದಲ್ಲಿಯೂ ಇದು ಪ್ರಯೋಗವಾಗುತ್ತದೆ. ಕತ್ತೆಗಿಂತ ಕುದುರೆ ವಾಸಿ. ಧಾರಣೆವಾಸಿ ಎಂದರೆ ಬೆಲೆ ತಕ್ಕಷ್ಟು ಹಿಡಿತದಲ್ಲಿದೆ ಎಂದರ್ಥ. ಬಹೂಪಯೋಗಿಯಾದ ಶಬ್ದ ಇದು.

**ವಾಸ್ತು** ಈ ಸಂಸ್ಕೃತ ಶಬ್ದಕ್ಕೆ ಮನೆಯನ್ನು ಕಟ್ಟುವ ಸ್ಥಳ, ಗೃಹನಿವೇಶನ ಎಂಬರ್ಥವಿದೆ. ಬೃಹತ್ಸಂಹಿತೆಯಲ್ಲಿ ಇದಕ್ಕೆ ಒಂದು ಕತೆಯನ್ನು ಹೇಳಿದೆ. ಒಂದು ಮಹಾಭೂತವು ಭೂಮಿಯಲ್ಲಿಯೂ ಆಕಾಶದಲ್ಲಿಯೂ ದೇವತೆಗಳಿಗೆ ತೊಂದರೆಯನ್ನು ಉಂಟು ಮಾಡುತ್ತಿತ್ತು. ಆಗ ದೇವತೆಗಳೆಲ್ಲರೂ ಸೇರಿ ಆ ಭೂತವನ್ನು ಹಿಡಿದು ಅದನ್ನು ತಲೆಕೆಳಗು ಮಾಡಿ ಇಟ್ಟು, ಅದರ ಮೇಲೆ ನಿಂತರು. ಬ್ರಹ್ಮನು ಬಂದು ಆ ಭೂತವನ್ನು ವಾಸ್ತುಪುರುಷನನ್ನಾಗಿ ಮಾಡಿದನು. ದೇವತೆಗಳೂ ರಾಕ್ಷಸರೂ ಇದರ ಮೇಲೆ ನಿಂತಿರುವುದರಿಂದ ಇದಕ್ಕೆ 'ವಾಸ್ತು' ಎಂಬ ಹೆಸರು ಬಂತು. ಕತೆ ಚೆನ್ನಾಗಿದೆ ನಂಬಿ, ಬಿಡಿ.

**ವಿ** ಎಂಬ ಉಪಸರ್ಗ ನಕಾರಾತ್ಮಕ ಭಾವವನ್ನು ಸೂಚಿಸುತ್ತದೆ.ಇದಲ್ಲದೆ ಅತ್ಯಂತ ಎಂಬರ್ಥದಲ್ಲಿಯೂ ಬಳಕೆಯಾಗುತ್ತದೆ. ಹೀಗೆ ಒಂದೇ ಉಪಸರ್ಗವನ್ನು ಎರಡು ಅರ್ಥಗಳಿಗೆ ಉಪಯೋಗಿಸಬಹುದೇ? ಫಲ - ವಿಫಲ = ಫಲವಿಲ್ಲದ. ದೇಹ — ವಿದೇಹ = ದೇಹವಿಲ್ಲದ, ಇಲ್ಲಿ ವಿನಾ ಎಂಬರ್ಥ. ನೂತನ - ವಿನೂತನ = ತುಂಬ ನೂತನ. ಶುದ್ಧ - ವಿಶುದ್ಧ = ತುಂಬ ಶುದ್ಧ. ಇಲ್ಲಿ ವಿಶೇಷವಾಗಿ ಎಂಬರ್ಥ. ಕೆಲವು ಉಪಸರ್ಗಗಳಿಗೆ ಹೀಗೆ ಎರಡು ಅರ್ಥಗಳೂ ಉಂಟು. ಒಂದರಲ್ಲಿ ವಿ ಎಂದರೆ ವಿನಾ ಎಂದರ್ಥ. ಇನ್ನೊಂದರಲ್ಲಿ ವಿ ಎಂದರೆ ವಿಶೇಷವಾಗಿ ಎಂದರ್ಥ. ಎರಡನ್ನೂ ಉಪಯೋಗಿಸಬಹುದು.

**ವಿಕಸಿತ** ವಿಕಸನಗೊಂಡದ್ದು ವಿಕಸಿತ. ಇದು ಕೃದಂತ ರೂಪ. ಚೆನ್ನಾಗಿ ಅರಳಿದ ಎಂದರ್ಥ.

**ವಿಕ್ಷಿಪ್ತ** ವಿಕ್ಷೇಪ ಎಂದರೆ ೧. ಇಡುವುದು ೨. ಎಸೆಯುವುದು ೩. ಚೆಲ್ಲುವುದು ೪. ಅಲ್ಲಾಡಿಸುವುದು ಇತ್ಯಾದಿ. ಈ ಶಬ್ದವು ಸಂಸ್ಕೃತದಲ್ಲಿ ಕ್ಷಿಪ್ ಎಂಬ ಧಾತುವಿನಿಂದ ಬಂದಿದೆ. ವಿ ಎಂಬುದು ಉಪಸರ್ಗ ಹಿಂದೆ ಸೇರಿದೆ. ವಿಕ್ಷೇಪದಿಂದ ವಿಕ್ಷಿಪ್ತ ಸಾಧಿತವಾಗುತ್ತದೆ. ಇದು ವಿಶೇಷಣದ ರೂಪ. ಇದಕ್ಕೆ ೧. ಎಸೆಯಲ್ಪಟ್ಟ ೨. ಇಟ್ಟ ೩. ಚೆಲ್ಲಿದ ೪. ತಿರಸ್ಕರಿಸಿದ ೫. ಅಳ್ಳಾಡಿಸಲ್ಪಟ್ಟ ಮುಂತಾದ ಅರ್ಥಗಳಾಗುತ್ತವೆ. ಒಂದು ವಾಕ್ಯದಲ್ಲಿ ಆ ಶಬ್ದವನ್ನು ಉಪಯೋಗಿಸಿದಾಗ ಅದರ ಅರ್ಥ ನಿರ್ಧಾರಗೊಳ್ಳುತ್ತದೆ.

**ವಿಕ್ಷೇಪ** ಎಂದರೆ ಚೆಲ್ಲುವುದು, ಹರಡುವುದು, ಎಸೆಯುವುದು, ಬಿಸಾಡುವುದು, ಮನಸ್ಸು ಚಂಚಲವಾಗುವಂತೆ ಮಾಡುವುದು ಎಂದು ಅರ್ಥ. ಕಾಳಿದಾಸನ ಕುಮಾರಸಂಭವದಲ್ಲಿ ಲಾಂಗೂಲ ವಿಕ್ಷೇಪ ಎಂಬ ಶಬ್ದ ಬರುತ್ತದೆ. ಅಲ್ಲಿ ಅಲ್ಲಾಡಿಸುವುದು, ಬಾಲವನ್ನು ಬೀಸುವುದು ಎಂಬ ಅರ್ಥ ಬರುತ್ತದೆ.

**ವಿಘ್ನ** ಈ ಸಂಸ್ಕೃತ ಶಬ್ದ ಹನ್ ಎಂಬ ಧಾತುವಿಗೆ ವಿ ಎಂಬ ಉಪಸರ್ಗ ಸೇರಿ ಆಗಿರುವ ರೂಪ. **ವಿಹನ್ಯತೇ ಅನೇನ** ಎಂದು ವಿವರಣೆ. ಇದಕ್ಕೆ ಅಡ್ಡಿ, ತಡೆ, ಅಡಚಣೆ, ಪ್ರತಿಷೇಧ ಎಂದರ್ಥ. ವಿಘ್ನ + ಈಶ್ವರ = ವಿಘ್ನೇಶ್ವರ ಎಂದರೆ ವಿಘ್ನಗಳನ್ನು ನಾಶ ಮಾಡುವವನು ಎಂದು ಅರ್ಥ ಮಾಡಬೇಕು. ವಿಘ್ನನಾಯಕ, ವಿಘ್ನನಾಶಕ ಎಂದರೂ ಒಂದೇ ಅರ್ಥ.

**ವಿಚಲಿತ ರಸ್ತೆ** ಇದು Bypass Road ಎಂಬ ಇಂಗ್ಲಿಷ್ ಶಬ್ದವನ್ನು ಅನುವಾದ ಮಾಡಿರುವ ರೀತಿ. ಇದು ತಪ್ಪು ಅನುವಾದ. ವಿಚಲಿತ ಎಂದರೆ ಅಳ್ಳಾಡಿದ, ದಾರಿತಪ್ಪಿದ ಎಂದರ್ಥ. ರಸ್ತೆ ಅಳ್ಳಾಡುವುದು ಇಲ್ಲ. ದಾರಿ ತಪ್ಪುವುದೂ ಇಲ್ಲ. ನಗರದ ಒಳಕ್ಕೆ ಹೋಗದೆ ಊರ ಹೊರಗಡೆಯೇ ವಾಹನಗಳು ಚಲಿಸುವಂತೆ ಮಾಡಿರುವ ಏರ್ಪಾಡಿನ ರಸ್ತೆ. ಅದು ಊರ ಹೊರಗಿನ ನೇರರಸ್ತೆ. ನೇರರಸ್ತೆ ಎನ್ನಬಹುದು. ಬಹಿರಾವರಣದ ರಸ್ತೆ.

**ವಿಚಾರಗೋಷ್ಠಿ** ಇದು ಹೆಚ್ಚು ಪ್ರಬುದ್ಧವಾದ ಶಬ್ದ. ಇದರಲ್ಲಿ ಅನೇಕರು ಒಂದು ವಿಷಯದ ಬೇರೆ ಬೇರೆ ಮುಖಗಳನ್ನು ಕುರಿತು ಅನೇಕ ವಿವರಗಳನ್ನು ಸಂಗ್ರಹಿಸಿ ಅವುಗಳನ್ನು ಬಿತ್ತರಿಸುತ್ತಾರೆ. ಕೊನೆಗೆ ಸಭೆಯಲ್ಲಿದ್ದವರಿಗೆಲ್ಲ ಅನೇಕ ವಿಷಯಗಳು ಪರಿಚಿತವಾಗುತ್ತವೆ. ತಿಳಿವಳಿಕೆ ಹೆಚ್ಚುವುದಕ್ಕೆ ಇವು ಸಹಾಯಕರ.

**ವಿಚಾರವಾದಿ** ಸಂದಿಗ್ಧವಾದ ವಿಷಯಗಳಲ್ಲಿ ನಿರ್ಧಾರಕ್ಕೆ ತಲುಪಲು ಪ್ರಮಾಣ ಪೂರ್ವಕವಾಗಿ ಮಾತನಾಡುವವನು. **ವಿಚಾರವಂತ** ಎಂದರೆ ವಿಮರ್ಶಿಸಲು ಬೇಕಾದ ತಿಳಿವಳಿಕೆಯುಳ್ಳವನು.

**ವಿಜ್ಞಾನ** ವಿಜ್ಞಾನ ಎಂಬ ಶಬ್ದವನ್ನು ಉಚ್ಚಾರಣೆ ಮಾಡುವುದು ಹೇಗೆ? ಕೆಲವರು ಆ ಶಬ್ದವನ್ನು ವಿಗ್ನಾನ ವೆಂದೂ ಮತ್ತೆ ಕೆಲವರು ವಿಗ್ಯಾನವೆಂದೂ ಉಚ್ಚರಿಸುತ್ತಿರುವುದು ಕೆಲವರಿಗೆ ಸಂದೇಹವನ್ನು ಉಂಟು ಮಾಡಿದೆ. ವಿದ್ಯಾಭ್ಯಾಸದಲ್ಲಿ ಶಿಕ್ಷಾಶಾಸ್ತ್ರವೆಂಬುದೊಂದಿದೆ. ಅದು ಆರು ವೇದಾಂಗಗಳಲ್ಲಿ ಒಂದು. ಇದು ಸ್ವರ ಮತ್ತು ವರ್ಣಗಳ ಉತ್ಪತ್ತಿ ಸ್ಥಾನವನ್ನು ತಿಳಿಸಿ ಅವುಗಳನ್ನು ಹೇಗೆ ಉಚ್ಚಾರ ಮಾಡಬೇಕೆಂಬುದನ್ನು ಹೇಳಿಕೊಡುತ್ತದೆ. ಇದು ಬಾಲ ಶಿಕ್ಷೆ. ಬಾಲ್ಯದಲ್ಲಿ ಈ ಶಿಕ್ಷಣ ದೊರಕದ ವಿದ್ವಾಂಸರೂ ಕೂಡ ಈ ವಿಜ್ಞಾನ ಮುಂತಾದ ಶಬ್ದಗಳನ್ನು ತಪ್ಪಾಗಿ ಉಚ್ಚರಿಸುತ್ತಾರೆ. 'ಜ್ಞ' ಎಂಬುದು ಸ್ವತಂತ್ರ ವ್ಯಂಜನವಲ್ಲ. ಜ್ + ಞ್ ಎರಡೂ ಸೇರಿ ಆಗಿರುವುದು. ಇದು ತಾಲವ್ಯ. ಇದನ್ನು ಉಚ್ಚಾರ ಮಾಡಬೇಕಾದಾಗ ನಾಲಗೆಯು ತಾಲುವನ್ನು ಮುಟ್ಟಬೇಕು. ತಾಲು ಎಂದರೆ ಗಂಟಲಿನಲ್ಲಿ ಮೂಗಿನ ದ್ವಾರವನ್ನೂ ಬಾಯಿಯನ್ನೂ ಬೇರೆಯಾಗಿ ಮಾಡುವ ಪ್ರದೇಶ. ಗಂಟಲ ಮೇಲಿನ ಅಟ್ಟ. ಇಷ್ಟು ವಿವರಣೆ ಕೊಟ್ಟರೂ ಎದುರಿಗೆ ಅಕ್ಷರಗಳನ್ನು ಸರಿಯಾಗಿ ಉಚ್ಚರಿಸುವವರ ಬಳಿ ಕುಳಿತು ಕಲಿತುಕೊಳ್ಳಬೇಕಾದ ವಿಷಯ ಇದು. ಗುರುಮುಖೇನ ತಿಳಿದುಕೊಂಡರೆ ಬೇಗ ತಿಳಿವಳಿಕೆ ಬರುತ್ತದೆ.

**ವಿಟಾಳ** ಇದರ ವ್ಯುತ್ಪತ್ತಿ ಅನಿಶ್ಚಿತ. ಇದಕ್ಕೆ ಕಲ್ಮಶ, ಕೊಳೆ, ಮಲ ಎಂದರ್ಥ.

**ವಿದ್ಯಮಾನ** ವಿದ್ಯಮಾನ ಎಂದರೆ ಸಂಸ್ಕೃತದಲ್ಲಿ ಈಗ ಕಾಣಬರುತ್ತಿರುವ ಎಂದು ಗುಣವಾಚಕ ಅರ್ಥ. ಕನ್ನಡದಲ್ಲಿ ಅದಕ್ಕೆ ಈಗಿರುವ ಸ್ಥಿತಿ ಎಂದು ನಾಮಪದದ ಅರ್ಥವಿದೆ. **ವಿದ್ಯತೇ ಸತ್ತಾಯಾಮ್** ಎಂದು ಸಂಸ್ಕೃತದಲ್ಲಿ ಅದರ ವಿವರಣೆ. ಸಂಸ್ಕೃತದ ಶಿಶುಪಾಲವಧ ಎಂಬ ಕಾವ್ಯದಲ್ಲಿ **ಕೋ ವಿದ್ಯಮಾನ ಗತಿರಾಸಿತುಮುತ್ಸಹೇತ** ಎಂಬ ವಾಕ್ಯ ಬರುತ್ತದೆ. ರಾಮಜನ್ಮಭೂಮಿಯಲ್ಲಿನ ವಿದ್ಯಮಾನವೇನು ಎಂದರೆ ಅಲ್ಲಿನ ಸ್ಥಿತಿಗತಿ ಏನು ಎಂದರ್ಥ.

**ವಿದ್ಯಾಧರಕರಣ** ಇದು ಮಲ್ಲಯುದ್ಧದ ಅನೇಕ ಕಲಿಕೆಗಳಲ್ಲಿ ಒಂದು ವಿದ್ಯೆ. ಅಂಗೋಪಾಂಗಗಳನ್ನು ಸಂಕೋಚಗೊಳಿಸಿ ಶತ್ರುವಿನ ಹೊಡೆತಕ್ಕೆ ಸಿಗದಂತೆ ಆಕಾಶದ ಕಡೆಗೆ ನೆಗೆಯುವುದಕ್ಕೆ ಈ ಹೆಸರಿದೆ. ಈ ಶಬ್ದವು ವಡ್ಡಾರಾಧನೆಯಲ್ಲೂ ಬರುತ್ತದೆ.

ವಿದ್ಯುಚ್ಚೋರರಿಸಿಯ ಕಥೆಯಲ್ಲಿ (ಪು. ೧೨೩ ಸಾಲು ೨೭) **ಪಿರಿದೊಂದು ಕಿಱುವಳ್ಳಮಂ ಕಂಡದಂ ವಿದ್ಯಾಧರಕರಣದಿಂ ಲಂಘಿಸಿ.** ಇವೆರಡೂ ಒಂದೇ ಬಗೆಯ ವಿದ್ಯೆ. ಮೊದಲನೆಯದು ಯುದ್ಧಕಾಲದ ನೆಗೆತ. ಎರಡನೆಯದು ಸಾಮಾನ್ಯ ಕಾಲದ ನೆಗೆತ.

**ವಿದ್ಯಾರ್ಥಿ** ಈ ಶಬ್ದದಲ್ಲಿ ಧ ಎಂಬ ಮಹಾಪ್ರಾಣ ಬರುವುದಿಲ್ಲ. ವಿದ್ಯಾ + ಅರ್ಥಿ = ವಿದ್ಯೆಗೆ ಆಸೆಪಡುವವನು ವಿದ್ಯಾರ್ಥಿ. ವಿದ್ಯಾದಾನ ದಾನಗಳಲ್ಲೆಲ್ಲ ಶ್ರೇಷ್ಠವಾದುದು. ವಿದ್ಯಾವಿಹೀನಃ ಪಶುಃ =ವಿದ್ಯೆಯಿಲ್ಲದವನು ಪಶು. ವಿದ್ ಧಾತುವಿಗೆ ತಿಳಿದುಕೊಳ್ಳು, ಅರಿ, ಪರಿಚಯ ಮಾಡಿಕೊಳ್ಳು ಇತ್ಯಾದಿ ಅರ್ಥಗಳಿವೆ. ಆ ಧಾತುವಿನಿಂದ ಬಂದ ಶಬ್ದ ವಿದ್ಯಾ. ಇದಕ್ಕೆ ಜ್ಞಾನ ತಿಳಿವಳಿಕೆ ಎಂದು ಅರ್ಥ. **ವಿದ್ಯಾ ನಾಮ ನರಸ್ಯ ರೂಪಮಧಿಕಂ ಪ್ರಚ್ಛನ್ನ ಗುಪ್ತಂಧನಂ** ಎಂದು ಭರ್ತೃಹರಿ ಹೇಳಿದ್ದಾನೆ. ವಿದ್ಯೆಗಳು **ತ್ರಯೀ, ಆನ್ವೀಕ್ಷ(ಕ್ಷಿ)ಕೀ ದಂಡನೀತಿ, ವಾರ್ತಾ** ಎಂದು ನಾಲ್ಕು ವಿಧ. ಅಲ್ಲಿಂದ ೬೪ ವಿದ್ಯೆಗಳವರೆಗೆ ವಿದ್ಯೆಯ ವಿಸ್ತಾರವಿದೆ. ಲಕ್ಷ್ಮೀಸಹಸ್ರನಾಮದ ಒಂದು ಶ್ಲೋಕ
ಹೀಗಿದೆ:-

***ಅಧ್ಯಾತ್ಮ ವಿದ್ಯಾ ವಿದ್ಯೇಶಾಪದ್ಮಸ್ಥಾ ಪರಮೇಷ್ಠಿನೀ।***
***ಆನ್ವೀಕ್ಷಿಕೀತ್ರಯೀವಾರ್ತಾ ದಂಡನೀತಿರ್ನಯಾತ್ಮಿಕಾ॥***

**ವಿದುರ** ವಿದುರ ಎಂದರೆ ವಿದ್ವಾಂಸ, ಪಂಡಿತ, ಜ್ಞಾನಿ, ಎಂದರ್ಥ. **ವೇತ್ತಿ, ವೇದನ ಶೀಲಃ** ಎಂಬುದು ಸಂಸ್ಕೃತದಲ್ಲಿ ಅದರ ವಿವರಣೆ. ವಿದ್ ಎಂಬ ಧಾತುವಿಗೆ ತಿಳಿ. ಅರಿತುಕೊಳ್ಳು ಎಂದರ್ಥ. ವಿದ್ಯಾ ಎಂಬ ಶಬ್ದವೂ ಹೀಗೆಯೇ ಬಂದಿದೆ. **ಜ್ಞಾತಾತು ವಿದುರೋ ವಿನ್ದುಃ** ಎಂಬ ಪರ್ಯಾಯ ಶಬ್ದಗಳ ಪಟ್ಟಿಯಿದೆ. ಕೌರವರ ಮಹಾಮಂತ್ರಿಯಾಗಿದ್ದ ವಿದುರನ ಬಗ್ಗೆ ಯಾರಿಗೆ ತಾನೇ ಗೌರವವಿಲ್ಲ? ಮಹಾಭಾರತದ ಉದ್ಯೋಗಪರ್ವದಲ್ಲಿ ವಿದುರನೀತಿಯೆಂಬ ಭಾಗವಿದೆ. ಇದನ್ನು ಓದಿ ಅರ್ಥ ಮಾಡಿಕೊಂಡು ಜೀವನದಲ್ಲಿ ಅದನ್ನು ಅನುಸರಿಸಿದರೆ ಮಾನವರು ಶ್ರೇಷ್ಠ ವ್ಯಕ್ತಿಗಳಾಗುತ್ತಾರೆ. ಹಿಂದೆ ಈ ನಂಬಿಕೆಯಿದ್ದುದರಿಂದ ಪ್ರತಿಯೊಂದು ಹಳ್ಳಿಯಲ್ಲಿಯೂ ಆಗಾಗ ವಿದುರನೀತಿಯ ಬಗ್ಗೆ ವಾಚನ ವ್ಯಾಖ್ಯಾನಗಳು ನೆರವೇರುತ್ತಿದ್ದುವು. ಹೀಗಿದ್ದರೂ ವಿದುರ ಶಬ್ದಕ್ಕೆ ಸಂಸ್ಕೃತದಲ್ಲಿ ಕಪಟಿ, ಮೋಸಗಾರ ಎಂಬ ಅರ್ಥವಿರುವುದು ಆಶ್ಚರ್ಯ. ಅದು ಆಲಂಕಾರಿಕ ಅರ್ಥ.

**ವಿದ್ಯುತ್ ಶಕ್ತಿ** ವಿದ್ಯುತ್ ಎಂಬ ಶಬ್ದಕ್ಕೆ ಶಕ್ತಿ ಎಂಬ ಶಬ್ದವು ಸೇರಿ ಸಂಧಿಯಾದರೆ ಅದು ವಿದ್ಯುಚ್ಛಕ್ತಿ ಎಂಬ ರೂಪವನ್ನು ಪಡೆಯುತ್ತದೆ. ಆಗ ಅದನ್ನು ಹಾಗೆಯೇ ಉಚ್ಚರಿಸಬೇಕು. ಈ ಶಬ್ದಗಳನ್ನು ಸಂಧಿ ಮಾಡದೇ ಹಾಗೆಯೇ ವಿದ್ಯುತ್ ಶಕ್ತಿ ಎಂದು ಹೇಳಿದರೂ ತಪ್ಪಲ್ಲ.

**ವಿಧ್ಯುಕ್ತ** ಈ ಸಂಸ್ಕೃತ ಶಬ್ದದಲ್ಲಿ ಎರಡು ಬೇರೆ ಬೇರೆ ಶಬ್ದಗಳು ಸೇರಿವೆ. ವಿಧಿ + ಉಕ್ತ = ವಿಧ್ಯುಕ್ತ. ವಿಧಿಗಳಂತೆ ಇರುವುದು ಅಥವಾ ವಿಧಿಗಳಿಗೆ ಉಚಿತವಾಗಿರುವುದು ಎಂದರ್ಥ. ವಿಧಿ ಎಂದರೆ ಕಟ್ಟಳೆ, ನಿಯಮ. ಯಾವುದು ನಿಯಮಬದ್ಧವೋ ಅದು ವಿಧ್ಯುಕ್ತ. ಮತೀಯವಾಗಿ ಇದನ್ನು ಉಪಯೋಗಿಸುವಾಗ ವೇದಗಳು ಮತ್ತು ಶಾಸ್ತ್ರಗಳಿಗೆ ಸಮ್ಮತವಾದ ಎಂದು ಮಾತ್ರ ಅರ್ಥವಾಗುತ್ತದೆ. ವಿಧಿಯುಕ್ತ ಎಂದರೆ ವಿಧಿ ಸಹಿತವಾಗಿ ಎಂದರ್ಥ. ಅದು ಸಮಾಸ.

**ವಿನಾ** ಇದು ಸಂಸ್ಕೃತದ ಒಂದು ಅವ್ಯಯ. ಇದರ ಸ್ವರೂಪ ಸದಾ ವಿನಾ **ನಿಷೇಧಾರ್ಥಾತ್ ವಿಶಬ್ದಾತ್** ನಾ ಎಂದು ಇದರ ವಿವರಣೆ. ಇದಕ್ಕೆ ಅರ್ಥ ಹೊರತು, ಉಳಿದು, ಬಿಟ್ಟು ಎಂಬ ಕನ್ನಡ ಶಬ್ದಗಳಲ್ಲಿ ಸ್ಪಷ್ಟ. ವಿನಹ, ವಿನಾಃ ಮುಂತಾದ ರೂಪಗಳು ಅಬದ್ಧ. ಅವುಗಳನ್ನು ಉಪಯೋಗಿಸಬಾರದು. ಅದು ಅವ್ಯಯವಾದುದರಿಂದ ಅದಕ್ಕೆ

ರೂಪಭೇದವಿಲ್ಲ. ಪುಟ್ಟಪ್ಪನವರು ಒಂದು ಪದ್ಯದಲ್ಲಿ ಸಂಸ್ಕೃತದ ಪ್ರಸಿದ್ಧವಾದ ಸಾಲನ್ನೇ ಉಪಯೋಗಿಸಿದ್ದಾರೆ. **ತೃಣಮಪಿ ನಚಲತಿ ತೇನವಿನಾ, ತೇನವಿನಾ, ತೇನವಿನಾ.** ಮತ್ತೊಂದು ಸಂಸ್ಕೃತ ಪದ್ಯ ಭಾಗ ಹೀಗಿದೆ: **ವಿದ್ಯಾ ಹೃದ್ಯಾಪಿ ಸಾವದ್ಯಾ ವಿನಾ ವಿನಯ ಸಂಪದಮ್.** ವಿನಯವಿಲ್ಲದ ವಿದ್ಯೆ ಎಷ್ಟು ಹೃದ್ಯವಾಗಿದ್ದರೂ ಗೌರವಾರ್ಹವಲ್ಲ.

**ವಿನಾಯ್ತಿ** ಎಂಬ ಶಬ್ದಕ್ಕೆ ವಿನಾಯತಿ, ವಿನಾಯಿತಿ ಎಂಬ ಇನ್ನೆರಡು ಪರ್ಯಾಯ ರೂಪಗಳಿವೆ. ಇದೊಂದು ವಿಚಿತ್ರವಾದ ಶಬ್ದ. ರಿಯಾಯ್ತಿಯ ಹಾಗೆ ಅರಬ್ಬಿ ಮುಂತಾದ ಇತರ ಭಾಷೆಗಳಿಂದ ಬಂದದ್ದಲ್ಲ. ಸಂಸ್ಕೃತದಲ್ಲಿ ವಿನಾ ಎಂಬ ಅವ್ಯಯ ಇದೆ. ಅದಕ್ಕೆ ಹೊರತುಪಡಿಸಿ, ಉಳಿದು, ಇದನ್ನು ಬಿಟ್ಟು ಎಂಬ ಅರ್ಥಗಳಿವೆ. ಈ ಅವ್ಯಯದ ಸಹಾಯದಿಂದ ರಿಯಾಯ್ತಿ ಎಂಬ ಶಬ್ದದ ಸಾಮ್ಯದ ಆಧಾರದಿಂದ ರೂಪಿತವಾದ ಕನ್ನಡ ಶಬ್ದ. ಆದುದರಿಂದ ಇದು ಅಪೂರ್ವವಾದ ಶಬ್ದ.

**ವಿನ್ಯಾಸ** ಸಂಸ್ಕೃತ ಶಬ್ದ. ವಿನ್ಯಾಸ ಎಂದರೆ ಇಡುವುದು, ಅಣಿ, ಕ್ರಮಪಡಿಸುವಿಕೆ ಇತ್ಯಾದಿ.

**ವಿಪರೀತ** ನೋಡಿ: ಅವಸರ

**ವಿಪರ್ಯಾಸ** ಈ ಸಂಸ್ಕೃತ ಶಬ್ದಕ್ಕೆ *೧. ವ್ಯತ್ಯಾಸ, ಬದಲಾವಣೆ* ಎಂದು ಮೊದಲ ಅರ್ಥ. *೨. ಪ್ರತಿಕೂಲ ಸ್ಥಿತಿ, ಅಡ್ಡಿ ಆತಂಕಗಳಿರುವ ಪರಿಸ್ಥಿತಿ* ಎಂಬುದು ಮತ್ತೊಂದು ಅರ್ಥ. ಕನ್ನಡದಲ್ಲಿ ಈ ಎರಡನೆಯ ಅರ್ಥದಲ್ಲಿಯೇ ಹೆಚ್ಚಾಗಿ ಪ್ರಯೋಗ.

**ವಿಫುಲ** ಅಧಿಕ, ಹೆಚ್ಚು. ವಿಫುಲ ತಪ್ಪು ಶಬ್ದ. ತಪ್ಪು ಶಬ್ದಗಳನ್ನು ಗುರುತಿಸದಿದ್ದರೆ ವಾಚನದ ಲೋಪವಾಗುತ್ತದೆ. ಎಚ್ಚರದಿಂದ ಓದಬೇಕು. ಮುದ್ರಣದ ಲೋಪವೂ ಇರಬಹುದು.

**ವಿಪ್ರ** ಎಂಬುದು ಸಂಸ್ಕೃತ ಭಾಷೆಯ ಶಬ್ದ. ಸಂಸ್ಕೃತದಲ್ಲಿ ಈ ಶಬ್ದಕ್ಕೆ ಅರ್ಥವನ್ನು ವಿವರಿಸುತ್ತಾ ಟೀಕಾಕಾರರು **ಪಾಪೇಭ್ಯೋ ಆತ್ಮಾನಂ ಪರಂ ಚ ಪಾತಿ ಇತಿ ವಿಪ್ರಃ** ಎಂದು ವಿವರಿಸುತ್ತಾರೆ. ತನ್ನನ್ನೂ ಇತರರನ್ನೂ ಪಾಪಗಳಿಂದ ರಕ್ಷಿಸುತ್ತಾನೆ ಎಂದು ಅವನಿಗೆ ವಿಪ್ರ ಎಂದು ಹೆಸರು. ವಿಪ್ರ ಎಂಬ ಶಬ್ದಕ್ಕೆ ಬ್ರಾಹ್ಮಣ, ಬಾಡಬ, ದ್ವಿಜ ಎಂಬ ಇತರ ಹೆಸರುಗಳೂ ಇವೆ.

**ವಿಪ್ಲವ** ಈ ಶಬ್ದ ಸಂಸ್ಕೃತ ಮೂಲದ್ದು. ಸಂಸ್ಕೃತದಲ್ಲಿ ಪ್ಲವ ಎಂದರೆ ಹರಿಗೋಲು, ತೆಪ್ಪ ಎಂಬುದು ಮೊದಲ ಅರ್ಥವಾದರೂ ಅದಕ್ಕೆ ಇತರ ಸುಮಾರು ಮೂವತ್ತು ಅರ್ಥಗಳಿವೆ. ಪ್ರವಾಹ ಎಂಬುದೂ ಒಂದು ಅರ್ಥ. ಆ ಶಬ್ದಕ್ಕೆ ವಿ ಎಂಬ ಉಪಸರ್ಗ ಸೇರಿದಾಗ ವಿಪ್ಲವ ಆಗುತ್ತದೆ. ಆಗ ಅದಕ್ಕೆ ಹದಿನೈದು ಬೇರೆ ಬೇರೆ ಅರ್ಥಗಳುಂಟಾಗುತ್ತವೆ. ಆದರೆ ಮುಖ್ಯವಾಗಿ *೧. ಪರರಾಷ್ಟ್ರಗಳಿಂದ ಉಂಟಾಗುವ ಅಪಾಯದ ಭಯ. ೨. ಬಲಾತ್ಕಾರ ೩. ಅತಿಕ್ರಮ* ಎಂಬ ಅರ್ಥಗಳೇ ಮುಖ್ಯ *೪. ಜಲಪ್ರಳಯ* ಎಂಬ ಅರ್ಥದಲ್ಲಿಯೂ ಅದು ಹೆಚ್ಚಾಗಿ ಉಪಯೋಗವಾಗುತ್ತದೆ. ಆಂದೋಳನ, ಕ್ರಾಂತಿ ಅರ್ಥಗಳೂ ಉಂಟು.

**ವಿಭ್ರಾಜ, ವಿಭ್ರಾಂತ, ವಿಭ್ರಾಜ್** ಎಂದರೆ ಪ್ರಕಾಶಿಸುವ, ಕಾಂತಿಯಿಂದ ಕೂಡಿರುವ, ಹೊಳೆಯುವ, ಶೋಭಿಸುವ ಎಂದರ್ಥ. ಕನ್ನಡದಲ್ಲಿ ಇದು ವಿಭ್ರಾಜಿತ ಎಂಬ ರೂಪದಲ್ಲಿ ಬಹುವಾಗಿ ಪ್ರಯೋಗಗೊಂಡಿದೆ. ಜೈಮಿನಿ ಭಾರತದಲ್ಲಿ (೭-೯) "**ರಾಜಮುಖಿ ನೋಡೀ ಸರೋವರದ ಪದ್ಮಿನಿಗೆ ರಾಜಹಂಸ ಕ್ರೀಡೆ ಪುನ್ನಾಗ ಕೇಳಿ ವಿಭ್ರಾಜಿತ ಮಧುಪಗೋಷ್ಠಿ ಸಂದಪುದು**" ಎಂದಿದೆ. ಇಲ್ಲಿಯ ಚಮತ್ಕಾರವನ್ನು ಓದಿಯೇ ಸವಿಯಬೇಕು. ವಿಭ್ರಾಂತ ಎಂದರೆ *೧. ಸುತ್ತಾಡುವ, ತಿರುಗುವ ೨. ಭ್ರಾಂತಿಗೆ ಒಳಗಾದ, ದಿಗ್ಭ್ರಮೆಗೊಂಡ* ಎಂಬ ಅರ್ಥಗಳು ಬರುತ್ತವೆ. ವಿದ್ಯಾಜ್ಞಾನವುಳ್ಳವನು ಎಂಬ ಅರ್ಥವೂ ಬರುತ್ತದೆ. ಆದಿಪುರಾಣದಲ್ಲಿ ಪಂಪನು "**ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ**

ವಿಭ್ರಾಂತನಪ್ಪೆ'' ಎಂಬ ಉಪಮಾನವನ್ನು ನೀಡುತ್ತಾನೆ. ಜೈನಸಾಹಿತ್ಯದಲ್ಲಿ ಒಂದು ನರಕಕ್ಕೆ 'ವಿಭ್ರಾಂತ ನರಕ' ಎಂದು ಹೆಸರಿದೆ.

**ವಿಭೂತಿ** ಇದು ಸಂಸ್ಕೃತದ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. ೧. ಐಶ್ವರ್ಯ ೨. ಸಮೃದ್ಧಿ ೩. ಅಣಿಮಾ ಮುಂತಾದ ಅಷ್ಟೈಶ್ವರ್ಯಗಳು ೪. ಪರಮೇಶ್ವರನು ಧರಿಸಿದ ಗೋಮಯದ ಬೂದಿ. ೫. ಪರಮಾತ್ಮನ ಮಹಿಮೆ. ಶಿವಭಕ್ತರು ಹಣೆಗೆ ಧರಿಸುವ ಬೂದಿಯೂ ಕೂಡ ಪವಿತ್ರ ಭಸ್ಮ ಎಂಬುದೇ ಅರ್ಥ. ಪರಮಾತ್ಮನ ಮಹಿಮೆಯನ್ನು ಮತ್ತೆ ವಿವರಿಸುವುದಕ್ಕೆ ನಾವಾರು. ವೀಭೂತಿ ಎಂದು ಈ ಶಬ್ದವನ್ನು ಉಚ್ಚರಿಸುವುದು ಶಿಷ್ಟವಲ್ಲ.

**ವಿಮರ್ಶೆ** ಎಂದರೆ ಯಾವುದಾದರೂ ಒಂದು ಕೃತಿಯ ಯೋಗ್ಯತೆಯನ್ನು ಪರಾಮರ್ಶಿಸುವ ಕಾರ್ಯ. ಅದು ಯಾವ ಉದ್ದೇಶವನ್ನು ಎಷ್ಟು ದಕ್ಷತೆಯಿಂದ ಸಾಧಿಸಿದೆ ಎಂಬುದನ್ನು ಪರಿಶೀಲಿಸುವ ಕೆಲಸ. ಶಾಸ್ತ್ರಗ್ರಂಥಗಳಾಗಬಹುದು, ಕಾವ್ಯ ನಾಟಕಾದಿ ಕವಿ ಸೃಷ್ಟಿಯಾಗಬಹುದು. ಇವುಗಳನ್ನು ಪರಿಶೀಲಿಸುವವರು ಬೇರೆ ಬೇರೆಯ ರೀತಿಗಳಲ್ಲಿಯೇ ವಿವೇಚಿಸುತ್ತಾರೆ. ಸಾಮಾನ್ಯವಾಗಿ ವಿಮರ್ಶೆಯೆನ್ನುವುದನ್ನು ಸಾಹಿತ್ಯ ಕೃತಿಗಳನ್ನು ಕುರಿತ ಲೇಖನಗಳಿಗೆ ಹೆಚ್ಚಾಗಿ ಅನ್ವಯಿಸುತ್ತಾರೆ. ಒಂದು ಗ್ರಂಥದ ಪ್ರಕಟನೆಯ ಕಾಲದ ಸಾಮಾಜಿಕ ಸ್ಥಿತಿಗತಿಗಳು ಕೃತಿಯಲ್ಲಿ ಕಾಣುವ ಅದರ ಪ್ರಭಾವ, ರಚನೆಯಲ್ಲಿರುವ ಕಲೆಗಾರಿಕೆ, ತಂತ್ರಪ್ರಯೋಗ, ಅಂತರಾರ್ಥವನ್ನು ಸಾಧಿಸುವುದರಲ್ಲಿ ಪ್ರಯೋಗವಾಗಿರುವ ಪ್ರತಿಮೆ, ಪ್ರತೀಕಗಳ ಪ್ರಯೋಗ, ಭಾಷೆಯ ಶೈಲಿ ಇದೇ ಬಗೆಯ ಇತರರ ಕೃತಿಗಳೊಡನೆ ಹೋಲಿಕೆ, ದೇಶವಿದೇಶಗಳಲ್ಲಿರಬಹುದಾದ ಸಮಕಾಲೀನ ರಚನೆಗಳ ಹೋಲಿಕೆ, ಒಟ್ಟಂದ, ಓದುಗರ ಮೇಲಾಗುವ ಪ್ರಭಾವ ಮುಂತಾಗಿ ಅನೇಕ ದೃಷ್ಟಿಗಳಿಂದ ಒಂದು ಕೃತಿಯನ್ನು ಪರಿಶೀಲನೆಗೆ ಒಳಪಡಿಸಿ ಅದರ ಹಿರಿಮೆಯನ್ನು ಗುರುತಿಸಲು ವಿಮರ್ಶಕರು ಪ್ರಯತ್ನ ಪಡುತ್ತಾರೆ. ವಿಮರ್ಶಕನು ಎಷ್ಟು ಹೆಚ್ಚಾಗಿ ಇಂಥ ವಿಚಾರಗಳನ್ನು ಅರಿತಿರುತ್ತಾನೋ ಅವನ ಬರಹ ಅಷ್ಟು ಬೆಲೆ ಬಾಳುವುದಾಗುತ್ತದೆ. ದಕ್ಷರಾದವರು ಮಾಡುವ ವಿಮರ್ಶೆ ಸ್ವಂತವಾಗಿ ಕಲೆಗಾರಿಕೆಯನ್ನು ಹೊಂದಿ ತಾನೇ ಒಂದು ಸೃಷ್ಟಿಶೀಲ ಕೃತಿಯಾಗಲೂಬಹುದು. ಅದಕ್ಕೆ ತುಂಬ ಗೌರವ ದಕ್ಕುತ್ತದೆ.

**ವಿಮಾಣ ನಿಲ್ದಾಣ** ಕೆಲವರಿಗೆ ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ 'ವಿಮಾಣ ನಿಲ್ದಾಣ' ಎಂಬ ಬೋರ್ಡಿನ ಬರಹ ಕಣ್ಣಿಗೆ ಬಡಿದಿದೆ. 'ವಿಮಾಣ' ಎಲ್ಲಿಯದು ಯಾವ ನಿಘಂಟಿನಲ್ಲಿಯೂ ಸಿಕ್ಕುವುದಿಲ್ಲವಲ್ಲ! ಹೊಸ ತದ್ಭವವೇ ? ಪ್ರವೇಶದ ಟಿಕೆಟ್ಟಿನಲ್ಲಿಯೂ 'ವಿಮಾಣ' ಎಂದೇ ಅಚ್ಚಾಗಿದೆ. ಬೆಂಗಳೂರಿನ ಬೋರ್ಡುಗಳ ಕತೆ ಬಹಳ ವಿಚಿತ್ರವಾಗಿ ಬೆಳೆದು ಬಂದಿದೆ. ಇಲ್ಲಿನ ದೊಡ್ಡ ದೊಡ್ಡ ಅಧಿಕಾರಿಗಳಾಗಿ ಬರುವವರು ಕನ್ನಡಿಗರಲ್ಲ, ಪರಭಾಷೆಯವರು. ಕನ್ನಡದ ಬಗ್ಗೆ ಅವರಿಗೆ ತಿಳಿವಳಿಕೆಯಿರುವುದಿಲ್ಲ. ಬರೆದುದು ತಪ್ಪಾಗಿದೆ ಎಂದು ಸರಿಯಾದುದನ್ನು ಅವರಿಗೆ ತಿಳಿಸುವ ಕಿರಿಯ ಕನ್ನಡ ಅಧಿಕಾರಿಗಳು ಈ ಕಡೆ ಗಮನ ಕೊಡುವುದಿಲ್ಲ. ಇದರಿಂದ ಇಂಥ ಆಭಾಸಗಳು ಎಲ್ಲ ಕಡೆಯೂ ಕಣ್ಣಿಗೆ ರಾಚುತ್ತವೆ. ಈ ಊರಿನ ವಿಮಾ ಕಛೇರಿಗೆ ಬಂಗಾಳಿಯ ಅಧಿಕಾರಿ ಬಂದಾಗ ಒಂದು ಯೋಜನೆಯ ಪ್ರಕಾರ ಆ ಕಛೇರಿಯವರಿಗೆ ಒಂದು ಬಡಾವಣೆ ಮಂಜೂರಾಯಿತು. ಆ ಬಡಾವಣೆಗೆ ಆ ಅಧಿಕಾರಿಯೇ ಹೆಸರಿಟ್ಟ. ಅದೇ "ಜೀವನ್ ಬಿಮಾ ನಗರ್". ಬಂಗಾಳಿಗಳಿಗೆ 'ವ' ಕಾರವನ್ನು ಉಚ್ಚರಿಸುವುದಕ್ಕೆ ಬರುವುದಿಲ್ಲ. 'ರವೀಂದ್ರ' ಅವರಿಗೆ 'ರಬೀಂದ್ರ' 'ವಂಕಿಮ ಚಂದ್ರ', 'ಬಂಕಿಮ ಚಂದ್ರ', 'ವಂಗ', 'ಬಂಗ' ಎಂದಾಗುತ್ತದೆ. ಹೀಗೆ 'ಬಿಮಾ ನಗರ್' ಬಗ್ಗೆ ನಮ್ಮವರಾದ ಕೆಳಗಿನ ಅಧಿಕಾರಿಗಳು ಕನ್ನಡದಲ್ಲಿ ತಪ್ಪಾಗುತ್ತದೆಂಬುದನ್ನು ತಿಳಿಸಲಿಲ್ಲ. ಈಗ 'ಜೀವನ್ ಬಿಮಾ ನಗರ್' ಬೋರ್ಡಿನಲ್ಲಿ ರಾರಾಜಿಸುತ್ತಿದೆ. ಇಲ್ಲಿ ಏನೋ

ತಪ್ಪಿದೆಯೆಂದು ಅರಿತ ಕನ್ನಡ ಜನ ಅದನ್ನು 'ಭೀಮಾನಗರ' ಮಾಡಿದ್ದಾರೆ. ಹೀಗೆ 'ವಿಮಾಣ' ಬಂದಿರುವುದು 'money'ಎಂಬ ಶಬ್ದವನ್ನು 'ಮಣಿ' ಎಂದು ಉಚ್ಚರಿಸುವವರ ಕಡೆಯಿಂದ. ಕನ್ನಡದ ಅಧಿಕಾರಿಗಳು ಇಂಥ ಸಂದರ್ಭಗಳಲ್ಲಿ ಎಚ್ಚರಿಕೆ ವಹಿಸಿದರೆ ಇಂಥ ತಪ್ಪುಗಳು ಉಂಟಾಗುವುದಿಲ್ಲ.

**ವಿಮೆ** ಇದು ಸಂಸ್ಕೃತದ ವಿಮಾ ಶಬ್ದದ ತದ್ಭವ. ವಿಮಾ ಶಬ್ದಕ್ಕೆ ಅನೇಕ ಅರ್ಥಗಳಿವೆ. ನಿರ್ಧರಿಸು, ಸರಿಪಡಿಸು, ವ್ಯವಸ್ಥೆ ಮಾಡು, ಸಿದ್ಧಪಡಿಸು, ಇತ್ಯಾದಿ. ಜೀವವಿಮೆ ಎಂದಾಗ ಬದುಕಿಗೆ ಒಂದು ವ್ಯವಸ್ಥೆ ಎಂಬರ್ಥದಲ್ಲಿ ಸರಿಯಾಗಿಯೇ ಬಳಸುತ್ತಿದ್ದಾರೆ.

**ವಿರಾಮ ಚಿಹ್ನೆಗಳು** "—" ಈ ಚಿಹ್ನೆಯನ್ನು ಮತ್ತೊಂದು ಗ್ರಂಥದಿಂದ ಉದ್ಧಾರ ಮಾಡುವಾಗ ಉಪಯೋಗಿಸುತ್ತಾರೆ. ಕೆಲವು ಗ್ರಂಥದ, ಕವನಗಳ ಹೆಸರನ್ನು ತಿಳಿಸುವಾಗ, ಹಾಡು, ಕೀರ್ತನೆಗಳನ್ನು ಹೆಸರಿಸುವಾಗ ಮತ್ತೊಬ್ಬರ ಮಾತುಗಳನ್ನು ಉದ್ಧಾರ ಮಾಡುವಾಗ ಈ ವಿರಾಮ ಚಿಹ್ನೆಗಳನ್ನು ಉಪಯೋಗಿಸುತ್ತಾರೆ.

'—' ಹೀಗೆ ಒಂದೇ ವಿರಾಮ ಚಿಹ್ನೆಯನ್ನು " — " ಈ ಚಿಹ್ನೆಗಳ ಒಳಗೆ ಅದೇ ಕಾರಣಕ್ಕಾಗಿ ಉಪಯೋಗಿಸುತ್ತಾರೆ.

! - ಇದು ಆಶ್ಚರ್ಯಸೂಚಕ ಚಿಹ್ನೆ. ಇದನ್ನು ತೀವ್ರವಾದ ಭಾವನೆಗಳನ್ನು ತಿಳಿಸುವ ಶಬ್ದ, ನುಡಿಗಟ್ಟು, ವಾಕ್ಯ ಇವುಗಳ ಕೊನೆಯಲ್ಲಿ ಉಪಯೋಗಿಸುತ್ತಾರೆ. ಅಪ್ಪಣೆ, ಆಶ್ಚರ್ಯ, ಸಂಭ್ರಮಗಳನ್ನು ಈ ಚಿಹ್ನೆ ತಿಳಿಸುತ್ತದೆ.

!! ಹೀಗೆ ಎರಡು ಆಶ್ಚರ್ಯ ಚಿಹ್ನೆಗಳಿದ್ದರೆ ಭಾವನೆ ತೀವ್ರವಾಗಿದೆ ಎಂದರ್ಥ.

..... ಹೀಗೆ ಚುಕ್ಕೆಗಳು ಇದ್ದರೆ, ಆ ಭಾಗದಲ್ಲಿ ಏನಿರಬೇಕೋ ಅದನ್ನು ಬಿಟ್ಟಿದೆ ಎಂದರ್ಥ.

**ವಿಲಾಸಿ** ವಿಲಾಸ ಎಂದರೆ ವಿನೋದದ ಕ್ರೀಡೆ. ಸ್ತ್ರೀಯರ ಸ್ವಭಾವ ಸಿದ್ಧವಾದ ಶೃಂಗಾರ ಚೇಷ್ಟೆ. ಇದರಲ್ಲಿ ಆಸಕ್ತಿಯಿರುವವನು ವಿಲಾಸಿ. ಆದುದರಿಂದ ಈ ಶಬ್ದಕ್ಕೆ ವಿನೋದದಲ್ಲಿರುವ ಅಪೇಕ್ಷೆಯೇ ಮುಖ್ಯ. ವಿಷಯಾಸಕ್ತ ಎಂಬ ಅರ್ಥವೂ ಉಂಟು. 'ವಿಲಾಸಿ ರಂಗಭೂಮಿ' ಎಂಬ ಪದಪುಂಜವನ್ನು ನೋಡಿ. 'ಹವ್ಯಾಸಿ ರಂಗಭೂಮಿ' ಎಂದೂ ಅದನ್ನು ಕರೆಯುತ್ತಾರೆ. ಆ ಗುಂಪಿನ ನಟರಿಗೆ ಅವರದು ವೃತ್ತಿಯಲ್ಲ. ಕೇವಲ ವಿನೋದ, ಹವ್ಯಾಸ, ಕಾಲಹರಣಕ್ಕೆಂದು ಆರಿಸಿಕೊಂಡ ಒಂದು ಕಲೆಯ ವ್ಯವಹಾರ, ಅಷ್ಟೆ.

**ವಿಲೇವಾರಿ** ಇದು ಅರಬ್ಬಿಯ ವಿಲ್ಹೇ ಎಂಬ ಶಬ್ದದಿಂದ ಬಂದುದು. ವಿಲ್ಹೇ ಎಂದರೆ ಆ ಭಾಷೆಯಲ್ಲಿ ಸಾಲು, ಒಂದು ತರಗತಿ, ಜಾತಿ, ವರ್ಗ ಇತ್ಯಾದಿ ಅರ್ಥಗಳಿವೆ. ವಿಲ್ಹೇವಾರ್ ಎಂದರೆ ಕ್ರಮವಾಗಿ, ಓರಣವಾಗಿ ಎಂದು ವಿಶೇಷಣದ ಅರ್ಥ. ವಿಲ್ಹೇವಾರಿ ಎಂದರೆ ವರ್ಗೀಕರಣ, ದರ್ಜೆಗಳಾಗಿ ಮಾಡುವಿಕೆ ಎಂದರ್ಥ. ಕನ್ನಡದಲ್ಲಿ ಹಂಚುವಿಕೆ, ಪದಾರ್ಥಗಳ ಸಾಗಾಣಿಕೆ ಎಂಬ ಅರ್ಥಗಳಲ್ಲಿ ಉಪಯೋಗಿಸುತ್ತಾರೆ.

**ವಿವಾಹ** ಇದು ವಿಶಿಷ್ಟ ವಹನ ಎಂದರೆ ವಿಶಿಷ್ಟವಾಗಿ ವಹಿಸಿಕೊಳ್ಳುವುದು, ಕೈಗೆತ್ತಿಕೊಳ್ಳುವುದು, ಸ್ವಂತವನ್ನಾಗಿಸಿಕೊಳ್ಳುವುದು. ಒಂದು ಹೆಣ್ಣನ್ನು ಒಂದು ಗಂಡು ತನ್ನದನ್ನಾಗಿ ಸ್ವೀಕಾರ ಮಾಡುವುದು. ಇದು ವಿವಾಹದ ಅರ್ಥ.

**ವಿವಿಧ** ಎಂಬ ಶಬ್ದದಿಂದ ನಾಮಪದವನ್ನು ವ್ಯುತ್ಪನ್ನ ಮಾಡುವಾಗ ವಿವಿಧತಾ = ವಿವಿಧತೆ ಅಥವಾ ವೈವಿಧ್ಯ ಎಂಬ ಎರಡು ರೂಪಗಳು ಸರಿ. ವೈವಿಧ್ಯತೆ ತಪ್ಪು. ಇದು ಪ್ರಾಮುಖ್ಯತೆ, ಪ್ರಾಧಾನ್ಯತೆ, ಪ್ರಾವೀಣ್ಯತೆ, ಸೌಂದರ್ಯತೆ, ಸೌಹಾರ್ದತೆ ಮುಂತಾದ ತಪ್ಪು ಶಬ್ದಗಳ ಗುಂಪಿಗೆ ಸೇರುತ್ತದೆ.

**ವಿವೇಚನೆ** ನೋಡಿ: ಆಲೋಚನೆ.

**ವಿಶ್ವಲೀನ, ಪಂಚಭೂತಲೀನ** ಮಾನವನ ದೇಹವು ಪಂಚಭೂತಗಳಿಂದ ಆದುದು. ಪೃಥ್ವಿ,

ಅಪ್ಪು, ತೇಜಸ್ಸು, ವಾಯು, ಆಕಾಶ ಇವೇ ಪಂಚಭೂತಗಳು. ಮನುಷ್ಯನ ಅವಸಾನವಾದಾಗ, ಶವ ಸಂಸ್ಕಾರಗೊಂಡಾಗ ಆ ದೇಹ ಪಂಚಭೂತಗಳಿಗೆ ಹಿಂದಿರುಗುತ್ತದೆ. ಪಂಚಭೂತಲೀನ ಎಂದರೂ ಅದೇ. ವಿಶ್ವಲೀನ ಎಂಬ ಶಬ್ದಕ್ಕೂ ಅದೇ ಅರ್ಥ. ಪಂಚತ್ವ ಎಂದರೆ ಸಾವು. ಅದೇ ದೇಹ ಐದಾಗಿ ವಿಭಾಗಗೊಂಡು ವಿಶ್ವದಲ್ಲಿ ಲೀನವಾಗುವುದು.

**ವಿಶ್ವವಿದ್ಯಾಲಯ, ವಿಶ್ವವಿದ್ಯಾನಿಲಯ ಎಂಬ ಶಬ್ದಗಳ ವ್ಯತ್ಯಾಸವೇನು?** ವಿದ್ಯಾ ಎಂಬುದು ಇಲ್ಲಿ ಮುಖ್ಯವಾದ ಶಬ್ದ. ಅದಕ್ಕೆ ವಿಶ್ವದ ಪ್ರಪಂಚದ ಎಂಬ ಅರ್ಥದ ಶಬ್ದ ಗುಣವಾಚಕವಾಗಿದೆ. ಎಲ್ಲ ವಿದ್ಯೆಗಳು ಎಂದರ್ಥ. ವಿಶ್ವವಿದ್ಯಾ ಎಂಬ ಶಬ್ದಕ್ಕೆ ಆಲಯ ಶಬ್ದ ಸೇರಿದರೆ ವಿಶ್ವವಿದ್ಯಾಲಯ ಎಂದಾಗುತ್ತದೆ. ನಿಲಯ ಶಬ್ದ ಸೇರಿದರೆ ವಿಶ್ವವಿದ್ಯಾನಿಲಯ ಆಗುತ್ತದೆ. ಆಲಯ, ನಿಲಯ ಎಂಬ ಎರಡು ಶಬ್ದಗಳಿಗೆ ಒಂದೇ ಅರ್ಥ - ಮನೆ, ವಾಸಸ್ಥಳ, ಇರುವ ಜಾಗ. ಒಂದು ವಿಚಾರ ಮಾತ್ರ ನೆನೆಪಿನಲ್ಲಿರಬೇಕು. ವಿಶ್ವವಿದ್ಯಾನಿಲಯವೇ ಆಗಲಿ ವಿಶ್ವವಿದ್ಯಾಲಯವೇ ಆಗಲಿ ಆ ಶಬ್ದದಲ್ಲಿ ಲಯ = ನಾಶ ಎಂಬುದು ಇಲ್ಲ, ಅಷ್ಟೇ!

**ವಿಷ, ಅಮೃತ ಇವು ವಿರುದ್ಧ ಪದಗಳೇ?** 'ವಿಷ' ಮತ್ತು 'ಅಮೃತ' ಎಂಬ ಶಬ್ದಗಳು ವಿರುದ್ಧ ಶಬ್ದಗಳೆಂಬ ಬಗ್ಗೆ ಅನುಮಾನವಿಲ್ಲ. ಆದರೆ ಅಮೃತವೇ ವಿಷವಾಗುತ್ತದೆ ಎಂಬಂತೆ ವಾಕ್ಯಗಳನ್ನು ನಿರ್ಮಾಣ ಮಾಡಬಹುದು. ಇದು ಭಾಷೆಯ ಸ್ವಾರಸ್ಯ. ಈ ವಾಕ್ಯವನ್ನು ನೋಡಿ: **ಆಲಸ್ಯಂ ಅಮೃತಂ ವಿಷಂ.** ಇಂಥ ಮಾತನ್ನು ಕೇಳಿ ನೀವು ಭಾಷೆಯ ಚಮತ್ಕಾರವನ್ನು ತಿಳಿಯಬಹುದು. ಸೋಮಾರಿತನ ಅಮೃತವನ್ನೂ ವಿಷವಾಗಿಸುತ್ತದೆ.

**ವಿಷಯಾಸಕ್ತ** ಎಂಬ ಸಂಸ್ಕೃತ ಶಬ್ದ ಬಹುವಾಗಿ ಪ್ರಯೋಗದಲ್ಲಿದೆ. ವಿಷಯ ಎಂದರೆ ಇಂದ್ರಿಯಗಳು. ಪಂಚೇಂದ್ರಿಯ ಸುಖಗಳಲ್ಲಿ ಆಸಕ್ತನಾಗಿರುವವನು ವಿಷಯಾಸಕ್ತ. ಆದರೂ ಇದಕ್ಕೆ ಸಾಮಾನ್ಯವಾಗಿ ಉಪಯೋಗಿಸುವ ರೀತಿಯಲ್ಲಿ ಕಾಮುಕ ಎಂದೇ ವಿಶೇಷಾರ್ಥ.

**ವಿಸೃತ** ಎಂಬ ಶಬ್ದಕ್ಕೆ ಹರಡಿರುವ, ಹಬ್ಬಿರುವ ಎಂದು ಅರ್ಥವಿದೆ. ಕನ್ನಡದಲ್ಲಿ ಹರಡಿರುವಿಕೆ, ಹಬ್ಬಿರುವಿಕೆ, ವ್ಯಾಪಕತೆ ಎಂಬ ಅರ್ಥದಲ್ಲಿ ವಿಸೃತಿ ಎಂದು ಯಾರಾದರೂ ಉಪಯೋಗಿಸಿರಬಹುದು ಅಷ್ಟೇ! ಅದು ಅಷ್ಟು ಪ್ರಚಾರದಲ್ಲಿಲ್ಲ.

**ವಿಸ್ಮೃತಿ** ಸ್ಮೃತಿ ಎಂದರೆ ನೆನಪು, ಸ್ಮರಣೆ. ವಿ ಎಂಬುದು ವಿನಾ ಎಂಬ ಅರ್ಥದಲ್ಲಿ ಸೇರುವ ಉಪಸರ್ಗ. ನೆನಪಿಲ್ಲದಿರುವಿಕೆ. ಅಂದರೆ ಮರೆವು. ಮರೆತುಬಿಡುವುದು.

**ವಿಹ್ವಲ** ಇದು ಸಂಸ್ಕೃತದ ಶಬ್ದ. ಇದಕ್ಕೆ ಹೆದರಿದವನು, ಆತಂಕ ಹೊಂದಿದವನು, ಭಯದಿಂದ ಚಿಂತೆಗೆ ಒಳಗಾದವನು ಎಂದು ಅರ್ಥ.

**ವೀಡಿಯೋ, ಆಡಿಯೋ** ಎಂಬ ಶಬ್ದಗಳು ಈಚೀಚೆಗೆ ವಿಜ್ಞಾನದ ಬೆಳವಣಿಗೆಯನ್ನು ಅನುಸರಿಸಿ ಸೃಷ್ಟಿಯಾದ ಶಬ್ದಗಳು. ಆಡಿಯೋ ಎಂಬ ಶಬ್ದಕ್ಕೆ ಈಗಾಗಲೇ ಸಾಕಷ್ಟು ಪ್ರಸಿದ್ಧಿಯುಂಟಾಗಿ ಅದು ಪ್ರಚಾರದಲ್ಲಿದೆ. ಕನ್ನಡದಲ್ಲಿ ರೇಡಿಯೋ ಶಬ್ದ ಈಗ ಎಲ್ಲರಿಗೂ ಅರ್ಥವಾಗುತ್ತದೆ ತಾನೆ. ಅದು ಕನ್ನಡ ಕಾವ್ಯದೊಳಗೆ ಈಗಾಗಲೇ ಪ್ರವೇಶ ಮಾಡಿದೆ. **'ಕಾಡಿಯೋ, ಬೇಡಿಯೋ, ತಂದೆನೊಂದು ರೇಡಿಯೋ'** ಎಂಬುದು ವಿನಾಯಕ ಗೋಕಾಕರ ಒಂದು ಪದ್ಯದ ಮೊದಲ ಸಾಲು. ಹೀಗಿರುವುದರಿಂದ ಆಡಿಯೋ, ವೀಡಿಯೋ ಎಂಬ ಶಬ್ದಗಳನ್ನೇ ಕನ್ನಡ ಶಬ್ದಗಳನ್ನಾಗಿ ಮಾಡಿಕೊಳ್ಳುವುದು ಅತ್ಯುತ್ತಮ.

**ವೀಥಿ - ಬೀದಿ** ವೀಥಿ ಸಂಸ್ಕೃತ ಶಬ್ದ. ಇದನ್ನು ವೀದಿ ಎಂದು ಅಲ್ಪಪ್ರಾಣ ಸಹಿತವಾಗಿ ಬರೆಯಬಾರದು. ಬೀದಿ ಎಂಬುದು ತದ್ಭವ.

**ವೀರಗಾಥೆ** ಒಬ್ಬ ವೀರನ ಕಥೆ. ಗಾಥಾ ಎಂಬ ಶಬ್ದದಿಂದ ಗಾಥೆ ಬರುತ್ತದೆ. ಅದಕ್ಕೆ ಹಾಡು, ಹೊಗಳಿಕೆಯ ಕವನ ಎಂಬ ಅರ್ಥವಿದೆ.

**ವೀರಗಾಸೆ** ಇದು ಪರಾಕ್ರಮಿಗಳೆನ್ನುವ ವೀರರು ಧರಿಸುವ ಕಚ್ಚೆ = ಕಾಸೆ. 'ಕಾಸೆ' ಎಂಬ ಶಬ್ದ ಮರಾಠಿಯ ಮೂಲವನ್ನು ಹೊಂದಿರಬಹುದು. ಕಾಚ ಎಂಬ ಶಬ್ದವಿದೆ ಮರಾಠಿಯಲ್ಲಿ, ಕಾಸೆ ಶಬ್ದವನ್ನು ಕನ್ನಡದಲ್ಲಿ ಹೆಂಗಸರು ಉಡುವ ಬಟ್ಟೆಗೂ ಗಂಡಸರು ಉಡುವ ಬಟ್ಟೆಗೂ ಅನ್ವಯಿಸುತ್ತಾರೆ. ಇದು ಸೊಂಟದ ಹಿಂಬದಿಗೆ ಸಿಕ್ಕಿಸುವ ಕಚ್ಚೆಗೆ ಸಂಬಂಧಪಟ್ಟ ಶಬ್ದ. ಸಂಸ್ಕೃತದ ಕಾಷಾಯ = ಸನ್ಯಾಸಿಗಳು ಉಡುವ ಬಣ್ಣದ ಬಟ್ಟೆಗೂ ಕನ್ನಡದಲ್ಲಿ ಕಾಸೆ ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಅದು ಕಾಷಾಯ ಶಬ್ದದ ತದ್ಭವ. ಅದು ಬೇರೆಯ ಶಬ್ದ. ಇವೆರಡಕ್ಕೂ ಗೊಂದಲ ಮಾಡಬಾರದು. ವೀರ + ಕಾಸೆ = ವೀರಗಾಸೆ ಎಂದಾಗಿದೆ. ಇದು ಅವರು ಧರಿಸುವ ಉಡುಪಿಗೆ ಸಂಬಂಧಿಸಿದ ಮಾತು. ವೀರಗಾಸೆ ಕುಣಿತ ಎಂಬ ಜಾನಪದ ಕುಣಿತವಿದೆ. ಇದು ಅಂಥ ಉಡುಪು ಧರಿಸಿ ಆಡುವ ನಾಟ್ಯ.

**ವೃಕೋದರ** ವೃಕ = ತೋಳ + ಉದರ = ಹೊಟ್ಟೆ. ತೋಳವು ಹಸಿವಿಗೆ ಹೆಸರಾದ ಪ್ರಾಣಿ. ಭೀಮಸೇನನಿಗೆ ತೋಳದಂಥ ಹಸಿವು ಇದ್ದುದರಿಂದ ಅವನಿಗೆ ಈ ಹೆಸರು ಬಂತು. ಇಂಗ್ಲಿಷಿನಲ್ಲಿ ಜನತೆಯ ಮುಂದಾಳುಗಳಿಗೆಂದು ಒಂದು ನೀತಿಯ ವಾಕ್ಯ ಪ್ರಸಿದ್ಧವಾಗಿದೆ. They must be watch dogs and not hungry wolves. ಅಂಥ ಮುಂದಾಳುಗಳಾದವರು ಕಾವಲು ನಾಯಿಗಳಾಗಿರಬೇಕು. ಹಸಿದ ತೋಳಗಳಾಗಬಾರದು. ಅಂದರೆ ಜನತೆಯ ರಕ್ಷಕರಾಗಿರಬೇಕು. ತಾವೇ ಗುಳುಂ ಮಾಡುವ ತೋಳಗಳಾಗಬಾರದು. ತೋಳ ಶಬ್ದದ ಪ್ರಯೋಜನ ಹೀಗಿದೆ ನೋಡಿ. ಭಾಷೆ ಯಾವುದಾದರೇನು ? ಅರ್ಥ ಮುಖ್ಯ.

**ವೃದ್ಧಾಪ್ಯ** ಇದಕ್ಕೆ ಮುದಿತನ ಎಂದರ್ಥ. ವೃದ್ಧ +ಆಪ್ಯ ಎಂದು ಎರಡು ಶಬ್ದ ಸೇರಿ ಆಗಿರುವ ರೂಪ. ಮುಪ್ಪು ಹೊಂದಿಕೊಂಡಿರುವುದು ಎಂದರ್ಥ. ವಾರ್ಧಕ್ಯ ಶಬ್ದಕ್ಕೂ ಅದೇ ಅರ್ಥ.

**ವೃಷ್ಟಿ** ಇದು ಸಂಸ್ಕೃತದಲ್ಲಿ ವೃಷು ಎಂಬ ಧಾತುವಿನಿಂದ ಆದ ಶಬ್ದ. ಇದಕ್ಕೆ ಮಳೆಸುರಿಯುವುದು ಎಂದರ್ಥ. ಪುಷ್ಪವೃಷ್ಟಿ ಎಂದರೆ ಮಳೆಯಂತೆ ಹೂವುಗಳು ಸುರಿಯುವುದು. ಸುವರ್ಣವೃಷ್ಟಿ ಎಂದರೆ ಚಿನ್ನದ ಮಳೆಸುರಿಯುವುದು. ಈ ಶಬ್ದಗಳೆಲ್ಲ ಆಲಂಕಾರಿಕವಾಗಿ ಶುಭವನ್ನು ಸೂಚಿಸುತ್ತವೆ.

**ವೃಷ್ಣಿ** ಎಂಬುವವನು ಚಂದ್ರವಂಶದ ಒಬ್ಬ ರಾಜ. ಇವನು ಶ್ರೀಕೃಷ್ಣನ ಮೂಲಪುರುಷ. ಅವನ ವಂಶವೇ ವೃಷ್ಣಿವಂಶ. ನೋಡಿ: ಯಾದವೀಕಲಹ.

**ವೆರಸು** ಬೆರಸು ಎಂದರೆ ಕೂಡಿ ಎಂದರ್ಥ. ಬೆರಸು = ಕೂಡು. ಈ ಶಬ್ದ ಇತರ ಶಬ್ದಗಳ ಜೊತೆ ಸಮಾಸವಾದಾಗ ಅದು 'ವೆರಸು' ಎಂದಾಗುತ್ತದೆ. **'ಮಾಣಿಗಳ್ವೆರಸು ಬಟ್ಟಾಡುತ್ತಿರೆ'** ಎಂಬ 'ವಡ್ಡಾರಾಧನೆ'ಯ ಪ್ರಯೋಗವನ್ನು ನೋಡಿ. (೭೩-೨೨)

**ವೇಳೆ** ವೇಲಾ ಎಂಬುದು ಸಂಸ್ಕೃತ ಶಬ್ದ. ಕನ್ನಡದಲ್ಲಿ ವೇಳೆ ಎಂದಾಗುತ್ತದೆ. ಅದಕ್ಕೆ *೧. ಸಮುದ್ರ ದಡ ೨. ಅವಧಿ ೩. ಅವಸರ ೪. ಅವಕಾಶ ಎಂಬ ಅರ್ಥಗಳಿವೆ.* ಕನ್ನಡದಲ್ಲಿ ಜನಸಾಮಾನ್ಯರು ವಿಶೇಷವಾಗಿ ಕಾಲ ಎಂಬ ಅರ್ಥದಲ್ಲಿಯೇ ಉಪಯೋಗಿಸುತ್ತಾರೆ.

**ವೇಳೆವಾಳಿ** ಎಂಬ ಶಬ್ದವೂ ಹೀಗೆಯೇ ವೇಳೆ +ಪಾಟಿ = ವೇಳೆಪಾಟಿ. ಆ ಬಳಿಕ ವೇಳೆವಾಳಿ. ಧಣಿಯು ಸತ್ತಮೇಲೆ ತಾನು ಬದುಕಿರುವುದಿಲ್ಲ ಎಂಬ ಪ್ರತಿಜ್ಞೆ ಮಾಡಿರುವ ಸೇವಕರು.

**ವೈಖರೀ** ಮನುಷ್ಯನ ಮನಸ್ಸು ಇತರರಿಗೆ ಏನನ್ನಾದರೂ ತಿಳಿಸಬೇಕೆಂದು ಇಚ್ಛಿಸಿದಾಗ ಶಬ್ದದ ಉತ್ಪತ್ತಿಗೆ ಅದು ಕಾರಣವಾಗುತ್ತದೆ. ನಾಭಿ ಮೂಲದಿಂದ ಶಬ್ದವು ಹೊರಟು ಬಾಯಿಂದ ಹೊರಹೊಮ್ಮುತ್ತದೆ. ಹೀಗಾಗುವಾಗ ನಾಲ್ಕು ಸ್ಥಿತಿಗಳಿರುತ್ತವೆ. ೧. ಪರಾ (ಸೂಕ್ಷ್ಮ) ೨. ಪಶ್ಯಂತೀ ೩. ಮಧ್ಯಮಾ ೪. ವೈಖರೀ. ಹೊಕ್ಕುಳಿನ ಬಳಿ ವಾಯು ಚಲನವಾದಾಗ

ಅದು ಪರಾ. ನಾಭಿಯವರೆಗೆ ಬಂದಾಗ ಪಶ್ಯಂತೀ. ಹೃದಯ ಪ್ರದೇಶಕ್ಕೆ ಬಂದಾಗ ಮಧ್ಯಮಾ. ಬಾಯಿಂದ ಹೊರಹೊಮ್ಮುವಾಗ ಅದು ವೈಖರೀ. ಕನ್ನಡದಲ್ಲಿ ಈ ಶಬ್ದ ವೈಖರಿ ಎಂಬ ರೂಪವನ್ನು ಪಡೆಯುತ್ತದೆ. ಅಲ್ಲದೆ ಕನ್ನಡದಲ್ಲಿ ಇನ್ನೂ ಹೆಚ್ಚು ವ್ಯಾಪಕವಾದ ಅರ್ಥವನ್ನು ಪಡೆಯುತ್ತದೆ. ೧. ಸ್ಪಷ್ಟವಾದ ಮಾತಿನ ರೀತಿ. ೨. ವಾಕ್ಚಾತುರ್ಯ, ಭಾಷಣ ಚಾತುರ್ಯ ೩. ವೈವಿಧ್ಯ ೪. ಕ್ರಮ, ರೀತಿ ಎಲ್ಲ ಅರ್ಥಗಳಿಗೂ ಅನೇಕ ದೃಷ್ಟಾಂತಗಳು ದೊರಕುತ್ತವೆ.

**ವೈದೇಹಿ** ಇದು ಸೀತೆಯ ಮತ್ತೊಂದು ಹೆಸರು. **ವಿದೇಹಸ್ಯಾಪತ್ಯಂ ಸ್ತ್ರೀ.** ವಿದೇಹ ರಾಜನ ಮಗಳು = ವೈದೇಹಿ. ವಿದೇಹ ಎಂಬುದು ಒಂದು ದೇಶ. ಈ ದೇಶದಲ್ಲಿ ಬೆಳೆಯುವುದು ವೈದೇಹೀ ಎಂದರೆ ಮೆಣಸು ಎಂಬ ಒಂದು ಅರ್ಥವೂ ಇದೆ. **ವಿದೇಹಾಖ್ಯ ದೇಶೇ ಭವಾ ವೈದೇಹೀ** ಎಂದು ಅಮರದ ಒಂದು ಟೀಕೆಯಲ್ಲಿ ಹೇಳಿದೆ.

**ವೈದ್ಯ** ಎಂಬ ಶಬ್ದವನ್ನು ಎರಡು ವಿಧವಾಗಿ ವ್ಯುತ್ಪತ್ತಿ ಮಾಡುತ್ತಾರೆ. ಒಂದು ವಿದ್ಯಾ ಇನ್ನೊಂದು ವೇದ ಎಂಬ ಮೂಲಗಳನ್ನು ಸೂಚಿಸುತ್ತಾರೆ. ಕೆಲವು ಅರ್ಥಗಳಿಗೆ ವಿದ್ಯಾ ಎಂಬುದು ಮೂಲವಾದರೆ ಮತ್ತೆ ಕೆಲವಕ್ಕೆ ವೇದ ಎಂಬುದು ಮೂಲ ಎಂಬುದು ವಿದ್ವಾಂಸರ ಮತ. ವಿದ್ಯಾ ಎಂಬುದು ಚಿಕಿತ್ಸಕ ವಿದ್ಯೆ ಅಥವಾ ಔಷಧಿ (ಗಿಡ ಮೂಲಿಕೆಗಳು) ಗಳ ಬಗ್ಗೆ ಜ್ಞಾನ ಎಂಬ ಅರ್ಥದಿಂದ ಬಂದದ್ದು. ಇನ್ನೊಂದು ವೇದ = ಆಯುರ್ವೇದದ ಬಗ್ಗೆ ತುಂಬ ಪರಿಣತವಾದುದು ಎಂದರ್ಥ. ವೈದ್ಯದರ್ಪಣ, ವೈದ್ಯಕೌಸ್ತುಭ ಮುಂತಾಗಿ ಅನೇಕ ಗ್ರಂಥಗಳಿವೆ. ವೈದ್ಯಕಲ್ಪದ್ರುಮ ಮುಂತಾದ ನಿಘಂಟುಗಳಿವೆ.

**ವೈನತೇಯ** ಎಂಬುದು ಸಂಸ್ಕೃತ ಪದ. ವಿನತಾ ಎಂಬುದು ಕಶ್ಯಪ ಋಷಿಯ ಒಬ್ಬ ಹೆಂಡತಿಯ ಹೆಸರು. ಅವಳಿಗೆ ಇಬ್ಬರು ಮಕ್ಕಳು *೧. ಗರುಡ, ೨. ಅರುಣ.* ವಿನತೆಯ ಮಕ್ಕಳಾದುದರಿಂದ ಅವರಿಬ್ಬರಿಗೂ ವೈನತೇಯ ಎಂಬ ಹೆಸರು ಅನ್ವಯಿಸುತ್ತದೆ. **ವಿನತಾಯಾಃ ಅಪತ್ಯಂ ಪುಮಾನ್** ಎಂಬುದು ಸಂಸ್ಕೃತದ ವಿವರಣೆ.

**ವೈನಾಗಿ** ಇದು ಹೊಸ ಬಗೆಯ ಶಬ್ದ. ವಯಿನು ಎಂಬುದು ದೇಶ್ಯ ಶಬ್ದ. ತಮಿಳು, ತೆಲುಗು, ತುಳು ಭಾಷೆಗಳಲ್ಲಿ ಈ ಶಬ್ದವನ್ನು ಉಪಯೋಗಿಸುತ್ತಾರೆ. ಈ ಶಬ್ದಕ್ಕೆ ಅಚ್ಚುಕಟ್ಟು, ಓರಣ, ಅಣಿ ಎಂದು ಮುಖ್ಯವಾದ ಅರ್ಥ. ಶಾಂತಿ, ಸಮಾಧಾನ, ಅಧಿಕ ಮುಂತಾದ ಅರ್ಥಗಳೂ ಇವೆ. ವೈನಾಗಿ ಎಂದರೆ ಚೆನ್ನಾಗಿ, ಅಚ್ಚುಕಟ್ಟಾಗಿ, ಅಣಿಯಾಗಿ ಎಂದರ್ಥ.

**ವೈನೋದಿಕ** ಎಂಬುದು ಇಂಗ್ಲಿಷಿನ Comedy ಎಂಬ ಶಬ್ದಕ್ಕೆ ಕನ್ನಡದಲ್ಲಿ ಮಾಡಿಕೊಂಡಿರುವ ರೂಪ. ಇದು ವಿನೋದ ಎಂಬ ಶಬ್ದದಿಂದ ರೂಪಿಸಿಕೊಂಡಿರುವುದು. ಇಂಗ್ಲಿಷಿನಲ್ಲಿ Comedy ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಕಾಮೆಡಿ ಸಾಮಾನ್ಯವಾಗಿ ಸುಖಾಂತವಾಗಿರುವ ವಿನೋದದ ನಾಟಕ. ಆದರೆ ಕಾಮೆಡಿಯು ತುಂಬ ಗಂಭೀರವಾಗಿರಬಹುದು. ನಾಟಕಕಾರನೂ, ಪ್ರೇಕ್ಷಕರೂ ನಾಟಕದ ಪಾತ್ರಗಳಿಗೆ ತೋರುವ ಮರುಕದ ಮಹತ್ವದ ಪರಿಣಾಮವನ್ನು ಅನುಸರಿಸಿ ಒಂದು ನಾಟಕ ವಿನೋದ ನಾಟಕವೋ ದುರಂತ ನಾಟಕವೋ ಆಗುತ್ತದೆ. ವೈನೋದಿಕ ನಾಟಕದಲ್ಲಿ ಪಾತ್ರಗಳು, ಸಾಮಾಜಿಕವಾಗಿ ಪವಿತ್ರವಾದುವೆಂದು ಗಣಿಸಿರುವ ಮೌಲ್ಯಗಳ ವಿಚಾರದಲ್ಲಿ ತೋರುವ, ತಿರಸ್ಕಾರವನ್ನು ನಾಟಕಕಾರನು ಗಂಭೀರವಾಗಿ ಚಿತ್ರಿಸಿರುವುದನ್ನು ಪ್ರೇಕ್ಷಕರು ಅನುಭವಿಸಬಹುದು. Comedy of Humour ಮತ್ತು Comedy of Manners ಎಂದು ಎರಡು ಮುಖ್ಯ ಬಗೆಗಳಿವೆ.

**ವೈಪರೀತ್ಯ** ಸಂಸ್ಕೃತದಲ್ಲಿ ವಿಪರೀತ ಎಂಬ ಒಂದು ಶಬ್ದವಿದೆ. ಇದಕ್ಕೆ ಹಿಂದುಮುಂದಾದ, ತಲೆಕೆಳಗಾದ, ಪ್ರತಿಕೂಲವಾದ ಎಂದು ಗುಣವಾಚಕದ ಅರ್ಥ. ಈ ಶಬ್ದದ ಭಾವನಾಮರೂಪ ವೈಪರೀತ್ಯ. ಹಿಂದು ಮುಂದಾಗಿರುವಿಕೆ, ಪ್ರತಿಕೂಲವಾಗಿರುವಿಕೆ

ಎಂದರ್ಥ. ಕನ್ನಡದಲ್ಲಿ ವಿಪರೀತ ಎಂದರೆ ಅಧಿಕವಾದ, ಅಗಾಧವಾದ, ಅತಿಶಯವಾದ ಎಂಬ ಅರ್ಥ ಒಂದಿದೆ. ಈ ಅರ್ಥ ಸಂಸ್ಕೃತದಲ್ಲಿಲ್ಲ.

**ವೈಭವ** ವಿಭವ ಶಬ್ದದಿಂದ ಬಂದ ಭಾವನಾಮ. ವಿಭವ ಎಂದರೆ ಐಶ್ವರ್ಯ, ಸಂಪತ್ತು, ಧನಶಕ್ತಿ. ಇವುಗಳಿಂದ ಒದಗುವ ಸುಖಾದಿಗಳಿಗೆ ವೈಭವ ಎಂದು ಹೆಸರು. ಸಂಸ್ಕೃತ ಶಬ್ದ.

**ವೈಯಾರ** ಇದು ಸಂಸ್ಕೃತದ ವಿಹಾರ ಶಬ್ದದಿಂದ ಬಂದದ್ದು. ಇದಕ್ಕೆ ಪ್ರದರ್ಶನದ ಚಮತ್ಕಾರ, ತನ್ನ ಸೌಂದರ್ಯವನ್ನು, ಸಿರಿಯನ್ನು, ತಿಳಿವಳಿಕೆಯನ್ನು, ದರ್ಪವನ್ನು ಇತರರಿಗಾಗಿ ಪ್ರದರ್ಶನ ಮಾಡುವುದೇ ವೈಯಾರ. ಈ ಶಬ್ದವನ್ನು ಹೆಚ್ಚಾಗಿ ಸ್ತ್ರೀಯರಿಗಾಗಿ ಉಪಯೋಗಿಸುತ್ತಾರೆ. ಗಂಡಸರಿಗೆ ವೈಯಾರದ ಶಬ್ದ ಹೊಂದುವುದಿಲ್ಲ. ಅವರಿಗೆ ದರ್ಪ, ಅದಬ್ಬು, ಗರ್ವ ಇತ್ಯಾದಿ ಶಬ್ದಗಳಿವೆ. ಇವುಗಳಿಗೂ ಬೇರೆ ಬೇರೆ ಅರ್ಥಗಳಿವೆ.

**ವೈರಾಗ್ಯ** ಎಂದರೆ ಸರ್ವಸಂಗ ಪರಿತ್ಯಾಗ. ಈ ಸಂಸ್ಕೃತ ಶಬ್ದಕ್ಕೆ ವಿರಾಗ ಎಂಬುದು ಮೂಲ. ರಂಜ್ ಎಂಬ ಧಾತುವಿನಿಂದ ಬಂದ ಶಬ್ದ ಅದು. ಅದಕ್ಕೆ ಪ್ರೀತಿ ಇಲ್ಲದಿರುವಿಕೆ, ಅಪರಾಗ ಎಂದರ್ಥ. ವಿ ಎಂಬ ಉಪಸರ್ಗ ಸೇರಿದಾಗ ಅದು ವಿರಾಗ ಎಂದಾಗುತ್ತದೆ. ವಿರಾಗದ ಭಾವ ವೈರಾಗ್ಯ. ಇದು ಭಾವನಾಮ ರೂಪ.

**ವೈರುಧ್ಯ** ಇದು ವಿರುದ್ಧದ ಭಾವನಾಮ. ವಿರುದ್ಧವಾದುದು ಎಂದರ್ಥ. ಈ ಶಬ್ದವನ್ನು ಈಚೆಗೆ ವಿಮರ್ಶೆಯಲ್ಲಿ ಉಪಯೋಗಿಸುತ್ತಾರೆ. ಇಂಗ್ಲಿಷಿನ oppositionಎಂಬ ಮತ್ತು Antithesis ಎಂಬ ಮತ್ತು Rivalryಎಂಬ ಶಬ್ದಗಳಿಗೆ ಸಮಾನವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. ಶಬ್ದ ವ್ಯಾಕರಣಬದ್ಧವಾದುದು. ವೈಷಮ್ಯ, ನೈಪುಣ್ಯ, ಪ್ರಾವೀಣ್ಯ ಎಂಬ ಶಬ್ದಗಳಂತೆ ಇದೆ. ಉಪಯೋಗಕ್ಕೆ ಅನುಕೂಲಕರವಾದ ಶಬ್ದ.

**ವೈಶಿಷ್ಟ್ಯ - ವೈಶಿಷ್ಟ** ಇವುಗಳಲ್ಲಿ ವೈಶಿಷ್ಟ್ಯ ಎಂಬುದು ಸರಿಯಾದ ಶಬ್ದ. ವಿಶಿಷ್ಟ ಎಂದರೆ ವಿಶೇಷವಾದ ಗುಣಗಳಿಂದ ಕೂಡಿದುದು ಎಂದರ್ಥ. ವಿಶಿಷ್ಟದ ಭಾವನಾಮ ವೈಶಿಷ್ಟ್ಯ. ವೈಶಿಷ್ಟ ತಪ್ಪು ರೂಪ.

**ವ್ಯಕ್ತಿ, ಮಾನವ, ಮನುಷ್ಯ** ಈ ಮೂರೂ ಸಂಸ್ಕೃತ ಶಬ್ದಗಳು. ಇವು ಗಂಡಸರಿಗೂ, ಹೆಂಗಸರಿಗೂ ಅನ್ವಯವಾಗುತ್ತವೆ. ಮಾನವೀ, ಮಾನುಷೀ ಎಂಬ ರೂಪಗಳು ಹೆಂಗಸರಿಗೆ ಬೇರೆಯಾಗಿ ಅನ್ವಯವಾಗುತ್ತವೆ. ವ್ಯಕ್ತಿ ಪುಲ್ಲಿಂಗ ಸ್ತ್ರೀಲಿಂಗ ಎರಡಕ್ಕೂ ಅನ್ವಯವಾಗುತ್ತದೆ.

**ವ್ಯಷ್ಟಿ** ಈ ಸಂಸ್ಕೃತ ಶಬ್ದಕ್ಕೆ ಪ್ರತ್ಯೇಕವಾಗಿರುವುದು, ಬಿಡಿಬಿಡಿಯಾಗಿರುವುದು, ಸಮಷ್ಟಿಯಿಂದ ಬೇರೆಯಾಗಿರುವುದು ಎಂದರ್ಥ. ಇದಕ್ಕೆ ಒಬ್ಬ ವ್ಯಕ್ತಿ ಎಂದೂ ಅರ್ಥ ಬರುತ್ತದೆ. **ಪೂಜಿಪೆವಲ್ತೆ ವ್ಯಷ್ಟಿರೂಪದಿನಿಳಿದ ಸೃಷ್ಟಿಯ ಸಮಷ್ಟಿಯಂ** ಎಂಬ ರಾಮಾಯಣದರ್ಶನಂ ಕಾವ್ಯದ (೧೧-೨೯೬) ಸಾಲನ್ನು ಗಮನಿಸಿ.

**ವ್ಯವಸಾಯ** ಇದು ಸಂಸ್ಕೃತದ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. ಉದ್ಯೋಗ, ನಿರ್ಧಾರ, ಆಚರಣೆ, ವಿಧೇಯತೆ, ಕೃಷಿ ಇತ್ಯಾದಿ. ಕನ್ನಡದಲ್ಲಿ ಕೃಷಿಯೇ ಮುಖ್ಯವಾದ ಅರ್ಥ.

**ವ್ಯಸನಿ** ಎಂದರೆ ಏಳು ಬಗೆಯ ಗೀಳುಗಳಲ್ಲಿ ಯಾವುದಾದರೂ ಒಂದಕ್ಕೆ ಸಿಕ್ಕಿಕೊಂಡವನು. ಅವು ಹೀಗಿವೆ: *೧. ಬೇಟೆಯಾಡಿ ಪ್ರಾಣಿಗಳನ್ನು ಕೊಲ್ಲುವ ಗೀಳು. ೨. ಮದ್ಯಪಾನ, ೩. ಜೂಜು ೪. ವೇಶ್ಯೆ ೫. ಮಾಂಸ ೬. ಕಠಿಣವಾದ ಮಾತು ೭. ಕಠಿಣವಾದ ಶಿಕ್ಷೆ.*

**ವ್ಯಾಕರಣ** ಒಂದು ಭಾಷೆಯ ವ್ಯವಹಾರದಲ್ಲಿ ಉಪಯೋಗವಾಗುವ ರೀತಿಯನ್ನು ಕುರಿತ ವಿವರಣೆಗೆ ವ್ಯಾಕರಣ ಎಂದು ಹೇಳುತ್ತಾರೆ. ಶಬ್ದ ಸ್ವರೂಪ, ವಾಕ್ಯ ಸ್ವರೂಪ, ನುಡಿಗಟ್ಟು, ನಾಮಪದಗಳು, ಲಿಂಗ, ವಚನ, ಕ್ರಿಯೆಯ ಕಾಲ ಮುಂತಾದ ವಿವರಗಳನ್ನು ತಿಳಿಸುವ ಗ್ರಂಥ ವ್ಯಾಕರಣ. ಇದನ್ನು ಅಭ್ಯಾಸ ಮಾಡದೆ ಭಾಷೆಯನ್ನು ಸರಿಯಾಗಿ ಉಪಯೋಗಿಸಲು ಬರುವುದಿಲ್ಲ. ಕನ್ನಡದ ವ್ಯಾಕರಣ ಎಂದರೆ ಕನ್ನಡ ಭಾಷೆಯ ಸರ್ವತೋಮುಖವಾದ

ವ್ಯಾಸಂಗಕ್ಕೆ ಸಹಾಯಕವಾದ ಗ್ರಂಥ. ಜನರ ಬಾಯಲ್ಲಿ ಕನ್ನಡವು ಆಡುವ, ಆಡಿಸುವ ಬಗೆಯ ವಿವರಣೆಯ ಗ್ರಂಥ. ಶಬ್ದ ಸಾಧುತ್ವವನ್ನೂ ಅರ್ಥವತ್ತಾದ ಶಬ್ದಗಳನ್ನೂ ಪ್ರತಿಪಾದಿಸುವುದರಿಂದ ಅದಕ್ಕೆ ವ್ಯಾಕರಣ ಎಂದು ಹೆಸರು. **ವ್ಯಾಕ್ರಿಯಂತೇ ಅರ್ಥಾಃ ಯೇನ** ಎಂಬುದು ಸಂಸ್ಕೃತದ ವಿವರಣೆ.

**ವ್ಯಾಕುಲ** ಇದು ಸಂಸ್ಕೃತ ವಿ +ಆಕುಲ ಎಂಬ ಎರಡು ಶಬ್ದ ಸೇರಿ ಆಗಿರುವ ಪದ. ಆಕುಲ ಎಂಬ ಶಬ್ದಕ್ಕೆ ದಿಗ್ಭ್ರಮೆ ಹೊಂದಿದ, ಗೊಂದಲಕ್ಕೆ ಸಿಕ್ಕಿದ, ದಿಕ್ಕು ತೋಚದ ಎಂಬ ಅರ್ಥ. ವಿ ಎಂಬ ಉಪಸರ್ಗಕ್ಕೆ ವಿಶೇಷವಾಗಿ ಎಂದರ್ಥ. ಆದ್ದರಿಂದ ವ್ಯಾಕುಲ ಎಂದರೆ, ತುಂಬ ದಿಗ್ಭ್ರಮೆಯಾದ ಸ್ಥಿತಿ ಮತ್ತು ಆ ಸ್ಥಿತಿಯಲ್ಲಿರುವವನು ಎಂದರ್ಥ. ಆಕುಲ ಶಬ್ದವನ್ನು ತುಂಬ ಸಮರ್ಥವಾಗಿ ಪಂಪನೇ ಉಪಯೋಗಿಸಿದ್ದಾನೆ '**ನಿಮ್ಮ ಕುಲವಾಕುಲಮಂ ನಿಮಗುಂಟು ಮಾಡುಗುಂ**. ಪಂಪಭಾರತ (೧೦-೨೧). ಇದು ಕರ್ಣನ ಮಾತು.

**ವ್ಯಾಪಾರೋ ದ್ರೋಹಚಿಂತನಂ ಎಂಬುದು ವ್ಯಾಪಾರೋ ದ್ರವ್ಯ ಚಿಂತನಂ ಎಂದಿರಬೇಕಲ್ಲವೇ ?** ವ್ಯಾಪಾರೋ ದ್ರೋಹ ಚಿಂತನಂ. ಈ ವಾಕ್ಯವು ಶುದ್ಧ ತಪ್ಪು. ಇದರ ಮೂಲ ಅಮರದಲ್ಲಿದೆ. ಅದು **ವ್ಯಾಪಾದೋ ದ್ರೋಹ ಚಿಂತನಂ**. ವ್ಯಾಪಾದ ಎಂಬ ಸಂಸ್ಕೃತದ ಶಬ್ದಕ್ಕೆ, ದ್ರೋಹಚಿಂತನ ಎಂದರ್ಥ. ಅಂದರೆ ಮತ್ತೊಬ್ಬರಿಗೆ ದ್ರೋಹವನ್ನು ಬಗೆಯುವುದಕ್ಕೆ ವ್ಯಾಪಾದ ಎಂದು ಹೆಸರು. ಯಾರೋ ಪಂಡಿತರು ಯಾವ ವ್ಯಾಪಾರಿಯ ಬಗ್ಗೆ ಹಾಸ್ಯ ಮಾಡಬೇಕಾಯಿತೋ ಕಾಣೆ. ಅವರು ಅಮರದ ವಾಕ್ಯವನ್ನು ತಿದ್ದಿ ವ್ಯಾಪಾರೋ ದ್ರೋಹ ಚಿಂತನಂ ಎಂದು ಹೇಳಿ ವಿನೋದ ಮಾಡಿರಬೇಕು ಅಷ್ಟೇ. ಅಲ್ಲದೆ ಸಂಸ್ಕೃತದಲ್ಲಿ ವ್ಯಾಪಾರ ಎಂಬ ಶಬ್ದಕ್ಕೆ ವರ್ತಕನ ವೃತ್ತಿ ಎಂಬ ಅರ್ಥವೇ ಇಲ್ಲ. ಅಲ್ಲಿ ವ್ಯಾಪಾರ ಎಂದರೆ *೧. ಚಟುವಟಿಕೆ, ೨. ವೃತ್ತಿ, ಕಸಬು, ೩. ಪ್ರಯತ್ನ ೪. ಉದ್ಯೋಗ*, ಅಷ್ಟೆ. ಆದ್ದರಿಂದ ವ್ಯಾಪಾರೋ ದ್ರೋಹ ಚಿಂತನಂ ಎಂಬುದನ್ನು ವಿನೋದದಲ್ಲಿ ನುಡಿದ ಮಾತು ಎಂದು ತಿಳಿಯಬೇಕೇ ಹೊರತು ಅದರಲ್ಲಿ ಸತ್ಯವನ್ನು ಹುಡುಕಬಾರದು. ಕನ್ನಡದಲ್ಲಿ ವ್ಯಾಪಾರಕ್ಕೆ ವರ್ತಕರ ವೃತ್ತಿ ಎಂಬ ವಿಶೇಷಾರ್ಥವಿದೆ. ಇದೂ ನೆನಪಿನಲ್ಲಿರಬೇಕು.

**ವ್ಯಾಮೋಹ** ಇದು ವಿಶೇಷವಾದ ಮೋಹ. ವ್ಯಾಕುಲದ ಹಾಗೆಯೇ ಇದರ ವ್ಯುತ್ಪತ್ತಿ. ಮೋಹ ಎಂಬ ಶಬ್ದಕ್ಕೆ ಮುಖ್ಯವಾದ ಅರ್ಥ. *೧. ಎಚ್ಚರ ತಪ್ಪುವಿಕೆ, ೨. ಭ್ರಮೆ, ೩. ದಿಗ್ಭ್ರಮೆ ೪. ಅವಿವೇಕ ೫. ತಪ್ಪು.* ಇವು ಇತರ ಅರ್ಥಗಳು. *ಈ ಅರ್ಥಗಳಿಗೆ ವಿರುದ್ಧವಾದ ೬. ಅಭಿಮಾನ, ೭. ವಿಶ್ವಾಸ, ೮. ಆಕರ್ಷಣೆ, ಸೆಳೆತ* ಇತರ ಅರ್ಥಗಳೂ ಇವೆ. ಕಾವ್ಯ ಮೀಮಾಂಸೆ, ತತ್ತ್ವಶಾಸ್ತ್ರ ಇತ್ಯಾದಿಗಳಲ್ಲಿ ಇನ್ನೂ ಅಧಿಕವಾದ ಅರ್ಥಗಳುಂಟು. ಸಾಮಾನ್ಯವಾಗಿ ಮೋಹಗೊಳ್ಳು ಎಂಬ ಶಬ್ದಕ್ಕೆ ಮರುಳಾಗು, ಮನಸೋಲು ಎಂಬ ಅರ್ಥಗಳಿವೆ. ಈ ಶಬ್ದವನ್ನು ಬಹು ಎಚ್ಚರದಿಂದ ಸಂದರ್ಭಕ್ಕೆ ತಕ್ಕಹಾಗೆ ಉಪಯೋಗಿಸಬೇಕು. ವ್ಯಾಮೋಹ ಎಂಬುದರಲ್ಲಿ ಎರಡು ಉಪಸರ್ಗಗಳು ಸೇರಿವೆ. ವಿ +ಆ + ಮೋಹ. ಈ ಶಬ್ದಕ್ಕೆ ಅತಿಯಾದ ಮೋಹ ಎಂದು ಅರ್ಥ.

**ವ್ಯುತ್ಪತ್ತಿ ನೋಡಿ: ಉತ್ಪತ್ತಿ.**

## ಶ

**'ಶ', 'ಷ'** ಇವೆರಡರ ಉಚ್ಚಾರಣೆಯಲ್ಲಿ ವ್ಯತ್ಯಾಸವೇನು ? 'ಶಂಕರ' ಎಂಬುದನ್ನು 'ಷಂಕರ'

ಎಂದೂ 'ಷಣ್ಮುಖ' ಎನ್ನುವುದನ್ನು 'ಶಣ್ಮುಖ' ಎಂದು ಏಕೆ ಬರೆಯಬಾರದು ಎಂಬುದು ಸಮಸ್ಯೆಯಾಗಿದೆ. ಹತ್ತನೆ ತರಗತಿಯಲ್ಲಿರುವ ವಿದ್ಯಾರ್ಥಿಗಳು ಈ ಪ್ರಶ್ನೆಗೆ ಉತ್ತರ ಸಿಗದೆ ಕಷ್ಟಪಡುತ್ತಾರೆ. ಪ್ರತಿಯೊಂದು ಶಬ್ದಕ್ಕೂ ಒಂದೊಂದು ವ್ಯುತ್ಪತ್ತಿ ಅಂದರೆ 'ಹುಟ್ಟು' ಇರುತ್ತದೆ. ಅದರಂತೆಯೇ ಅದನ್ನು ಉಚ್ಚರಿಸಬೇಕು. ಅದೇ ನಿಯಮ. 'ಷ' ಎನ್ನುವುದು ಮೂರ್ಧನ್ಯಾಕ್ಷರ. 'ಶ' ಎನ್ನುವುದು ತಾಲವ್ಯ. 'ಷ' ಉಚ್ಚಾರಣೆ ಮಾಡುವಾಗ ನಾಲಗೆಯ ತುದಿಯು ಬಾಯೊಳಗಿನ ನೆತ್ತಿಯ ಭಾಗವನ್ನು ಮುಟ್ಟುತ್ತದೆ. 'ಶ'ಕಾರವನ್ನು ಉಚ್ಚರಿಸುವಾಗ ನಾಲಗೆಯು ನೆತ್ತಿಯಿಂದ ಮುಂದಕ್ಕೆ ಬಂದು ತಾಲುವನ್ನು ತಗಲಬೇಕು. ಆಗ ಉಚ್ಚಾರ ಮೂಡುತ್ತದೆ. ಇದನ್ನು ತಿಳಿದವರ ಮುಂದೆ ಕುಳಿತು ಕಲಿಯಬೇಕು. ಅಂಚೆಯಲ್ಲಿ ಉಚ್ಚಾರವನ್ನು ಕಲಿಸುವುದು ಅಸಾಧ್ಯ.

**ಶಂಕುಸ್ಥಾಪನೆ** ಶಂಕು ಎಂಬ ಶಬ್ದವು ಸಂಸ್ಕೃತದ್ದು. ಅದಕ್ಕೆ ಅನೇಕ ಅರ್ಥಗಳಿವೆ. ಶಂಕುಸ್ಥಾಪನೆ ಎಂಬ ಶಬ್ದದಲ್ಲಿ ಅದಕ್ಕೆ ಸ್ತಂಭ - ಕಂಬ ಎಂಬುದು ಮುಖ್ಯವಾದ ಅರ್ಥ. ವಾಸ್ತುಶಾಸ್ತ್ರದಲ್ಲಿ ದೇವಾಲಯ, ಕಟ್ಟಡ ಮುಂತಾದವುಗಳ ನಿರ್ಮಾಣದ ಪ್ರಾರಂಭದಲ್ಲಿ ಒಂದು ಸ್ತಂಭದ ಸ್ಥಾಪನೆ ಮಾಡುವುದು ಸಂಪ್ರದಾಯ. ಇದಕ್ಕೆ ಮೂಲಸ್ತಂಭ ಎಂಬ ಪ್ರಯೋಗವೂ ಪ್ರಚಾರದಲ್ಲಿದೆ. ಅನೇಕ ಶಾಸನಗಳ ಪ್ರಾರಂಭದ ಶ್ಲೋಕದಲ್ಲಿ **"ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ"** ಎಂಬ ಪ್ರಾರ್ಥನೆಯ ಮಾತು ಬರುತ್ತದೆ. ಅದೇ ಶಂಕುಸ್ಥಾಪನೆ. ಈಗ ಅದಕ್ಕೆ ತಳಪಾಯ, ಅಡಿಗಲ್ಲು ಹಾಕುವುದು ಎಂಬ ಅರ್ಥವಿದೆ.

**ಶಕಟವ್ಯೂಹ** ಪ್ರಾಚೀನ ಕಾಲದ ಯುದ್ಧಗಳಲ್ಲಿ ಎರಡು ಸೈನ್ಯಗಳು ಯುದ್ಧಕ್ಕೆ, ಧರ್ಮಯುದ್ಧಕ್ಕೆ ನಿಂತಾಗ ಆಯಾ ಸೈನ್ಯದವರು ತಮ್ಮ ತಮ್ಮ ಸೈನ್ಯವನ್ನು ಬೇರೆ ಬೇರೆ ವ್ಯೂಹ ಅಂದರೆ ರಚನೆಗಳಲ್ಲಿ ಸಿದ್ಧಪಡಿಸುತ್ತಿದ್ದರು. ಪದ್ಮವ್ಯೂಹ, ಚಕ್ರವ್ಯೂಹ, ಕ್ರೌಂಚವ್ಯೂಹ, ಶಕಟವ್ಯೂಹ ಎಂಬುವು ಅಂಥವುಗಳು. ಈಗ ಹೆಸರು ಮಾತ್ರ ನಿಂತಿದೆ. ಆ ಸಿದ್ಧಪಡಿಸಿದ ರಚನೆಯ ವಿವರಗಳು ತಿಳಿದಿಲ್ಲ. ಅನೇಕ ವ್ಯೂಹಗಳನ್ನು ಕವಿಗಳು ಹೆಸರಿಸಿದರೂ ಅದರ ರಚನೆಯನ್ನು ಹೇಗೆ ಮಾಡಬೇಕು ಎಂಬ ಚಿತ್ರ ಸಹಿತವಾದ ವಿವರಗಳು ಹಿಂದೆ ಇದ್ದಿರಬೇಕು. ಇಲ್ಲದಿದ್ದರೆ ಈ ಹೆಸರುಗಳಿಗೆ ಅರ್ಥವೇ ಇರುವುದಿಲ್ಲ.

**ಶಕ್ತಿ - ಸಾಮರ್ಥ್ಯ** ಶಕ್ತಿ ಎಂಬುದು ಪರಾಕ್ರಮ, ಬಲ, ದೈಹಿಕವಾದ ವೀರ್ಯ. ಸಾಮರ್ಥ್ಯ ಎನ್ನುವುದು ಕಾರ್ಯವನ್ನು ಸಾಧಿಸುವುದರಲ್ಲಿ ಇರುವ ದಕ್ಷತೆ, ಕ್ರಿಯಾ ಶಕ್ತಿ. ಹೀಗಿದ್ದರೂ ಈ ಎರಡು ಶಬ್ದಗಳನ್ನೂ ಅನೇಕ ಜನ ಒಂದೇ ಅರ್ಥದಲ್ಲಿ ಉಪಯೋಗಿಸುತ್ತಾರೆ. ತಿಳಿದವರು ಬೇರೆ ಅರ್ಥಗಳಲ್ಲಿಯೇ ಉಪಯೋಗಿಸುತ್ತಾರೆ. ಹಾಗೆ ಮಾಡುವುದು ಭಾಷೆಯಲ್ಲಿನ ಸಾಮರ್ಥ್ಯವನ್ನು ಉಪಯೋಗಿಸಿಕೊಳ್ಳುವ ಮಾರ್ಗ.

**ಶತಾಬ್ದ, ಶತಾಬ್ದಿ** ಸಂಸ್ಕೃತದಲ್ಲಿ ಅಬ್ದ ಎಂದರೆ ವರ್ಷ ಎಂದೂ ನೀರು ಕೊಡುವ ಮೋಡ ಎಂದೂ ಅರ್ಥಗಳಿವೆ. ಇತರ ಅರ್ಥಗಳೂ ಇವೆ. ಶತಾಬ್ದ ಎನ್ನುವುದು ನೂರು ವರ್ಷ ಎಂಬ ಅರ್ಥವನ್ನು ನೀಡುತ್ತದೆ. ಅದೇ ಸರಿಯಾದ ರೂಪ. ಅದನ್ನು ಉಪಯೋಗಿಸುವುದೇ ಸರಿ. ಅಬ್ದ ಎನ್ನುವುದಕ್ಕೆ ವಿವರಣೆ ಇದೆ. **ಆತ್ಯತೇ ಅಧಿಕ ಮಾಸೇನ ಇತಿ ಅಬ್ದ** ಎಂಬುದು ಒಬ್ಬ ಟೀಕಾಕಾರನ ವಾಕ್ಯ. ಅಧಿಕ ಮಾಸವೂ ಸೇರಿಕೊಂಡಿರುತ್ತದೆ — ಎಂದು ವರ್ಷಕ್ಕೆ ಅಬ್ದ ಎಂದು ಹೆಸರು ಎಂದು ಅದರ ಅರ್ಥ. ಅಧಿಕ ಎನ್ನುವ ಶಬ್ದಕ್ಕೆ ಅಖಿಲ ಎಂಬ ಪಾಠಾಂತರವಿದೆ ಒಂದು ಪ್ರತಿಯಲ್ಲಿ. ಹಾಗಾದರೆ ಹನ್ನೆರಡು ಮಾಸಗಳೂ ಕೂಡಿ ಒಂದು ವರ್ಷ = ಅಬ್ದವಾಗುತ್ತದೆ ಎಂದು ಅರ್ಥ. ಹೇಗೇ ಆದರೂ ಅಬ್ದ ಎಂಬುದೇ ಸರಿಯಾದ ರೂಪ. ಹಿಂದೀ ಭಾಷೆಯಲ್ಲಿ ಸಂಸ್ಕೃತದಿಂದ ಶತಾಬ್ದ ಎಂಬುದು ಶತಾಬ್ದೀ

ಎಂಬ ರೂಪವನ್ನು ಪಡೆದಿದೆ. ಈ ರೂಪವನ್ನು ಹಿಂದಿಯ ಮೂಲಕ ಬಂದ ಶಬ್ದವೆಂದು ಗುರುತಿಸಬೇಕು. ಶತಾಬ್ಧಿ ಎಂಬ ರೂಪ ತಪ್ಪು. ಅದನ್ನು ಉಪಯೋಗಿಸಬಾರದು.

**ಶತಾಯುಗತಾಯು** ಶತಾಯಗತಾಯ ಎಂಬುದು ನಿಜವಾಗಿ ಶತಾಯುಗತಾಯು ಎಂಬ ಪದಪುಂಜದ ತಪ್ಪು ಪ್ರಯೋಗ. ಶತಾಯು ಗತಾಯು ಎಂಬುದು ನಾನು ನೂರು ವರ್ಷದಷ್ಟು ಮುಪ್ಪಿನವನಾದರೂ ಈ ಕೆಲಸವನ್ನು ಸಾಧಿಸದೆ ಬಿಡುವುದಿಲ್ಲ ಎಂಬರ್ಥದಲ್ಲಿ ಉಪಯೋಗಿಸುವ ನುಡಿಗಟ್ಟು. ಏನೇ ಆದರೂ ಎಂದು ಹೇಳುವ ರೀತಿಯ ಮತ್ತೊಂದು ಕ್ರಮ. ಶತಾಯುವನ್ನೇ ಏಕೆ ಹಿಡಿದಿರಬಹುದು ಎಂದರೆ ಮಾನವನಿಗೆ ಶತವರ್ಷಗಳೇ ಆಯುಃಪರಿಮಿತಿಯೆಂಬ ನಂಬಿಕೆಯಿಂದ. **ಜೀವೇಮ ಶರದಶ್ಶತಂ** ತಾನೇ!

**ಶಬ್ದ** ಶಬ್ದ, ಶಬ್ಧ ಎಂಬ ಎರಡು ರೂಪಗಳನ್ನು ಕೆಲವರು ನಮ್ಮ ಮುಂದೆ ಇಟ್ಟಿದ್ದಾರೆ. 'ಶಬ್ಧ' ಎನ್ನುವುದು ಅಪಶಬ್ದ. ಅದರ ಉಪಯೋಗವನ್ನು ನಿಲ್ಲಿಸಬೇಕು. ಸಂಸ್ಕೃತದ ಶಬ್ದ ಎಂಬುದಕ್ಕೆ ಧ್ವನಿ, ಸದ್ದು ಮುಂತಾದ ಅರ್ಥಗಳಿವೆ. **ಶಬ್ದ ಕಲ್ಪದ್ರುಮ** ಎಂಬ ಹೆಸರಿನ ಪ್ರಸಿದ್ಧವಾದ ನಿಘಂಟು ಒಂದಿದೆ. 'ಶಬ್ದ'ದ ಚರಿತ್ರೆ ವಿಸ್ತಾರವಾದುದು. ಇದರಲ್ಲಿ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ಬಗೆಗಳಿವೆ. ಧ್ವನ್ಯಾತ್ಮಕ ಎಂದೂ ವರ್ಣಾತ್ಮಕ ಎಂದೂ ಬೇರೆಯ ವಿಧವಾದ ವಿಭಾಗಗಳಿವೆ. ಬೇರೆ ಬೇರೆ ಪ್ರಾಣಿಗಳಿಂದ, ಅಂಗಗಳಿಂದ, ವಸ್ತುಗಳಿಂದ ಹೊರಡುವ ಶಬ್ದಗಳಿಗೂ ಬೇರೆ ಬೇರೆ ಹೆಸರುಗಳುಂಟು. ಸಿಂಹದ ಶಬ್ದ ಗರ್ಜನೆ, ಕುದುರೆಯ ಶಬ್ದ ಹೇಷಾ ಇತ್ಯಾದಿ.

**ಶಬ್ದಮಾಲಿನ್ಯ** ಜಲಮಾಲಿನ್ಯದಲ್ಲಿ ನೀರು ಮಲಿನವಾಗುತ್ತದೆ. ವಾಯುಮಾಲಿನ್ಯದಲ್ಲಿ ಗಾಳಿ ಮಲಿನವಾಗುತ್ತದೆ. ಶಬ್ದ ಮಾಲಿನ್ಯ ಎಂಬ ಶಬ್ದದ ವಿಗ್ರಹವಾಕ್ಯವನ್ನು ಶಬ್ದದಿಂದಾಗುವ ಮಾಲಿನ್ಯ ಎಂದು ಅರ್ಥವಾಗುವಂತೆ ಮಾಡಿಕೊಳ್ಳಬೇಕು. ಆ ಶಬ್ದ ಸರಿಯಾಗಿದೆ ಮತ್ತು ಪ್ರಯೋಗಕ್ಕೆ ಬಂದಿದೆ. ಹಾಗೆ ಉಪಯೋಗದಲ್ಲಿರಲಿ.

**ಶಬ್ದ ಸಾಮೀಪ್ಯ ದೋಷ "ಸರ್ಕಾರದ ಔದಾರ್ಯದಿಂದ ತಾಯಿಯಾಗುವ ಉದ್ಯೋಗಸ್ಥ ನೌಕರರಿಗೆ ಹೆರಿಗೆ ರಜ ಸಿಗುತ್ತದೆ.''** ಈ ವಾಕ್ಯದಲ್ಲಿರುವ ವಾಕ್ಯ ರಚನೆಯ ದೋಷಕ್ಕೆ **ಶಬ್ದ ಸಾಮೀಪ್ಯ ದೋಷ** ಎಂಬ ಪಾರಿಭಾಷಿಕ ಪದವಿದೆ. ಈ ದೋಷದಿಂದಾಗಿ 'ಸರಕಾರದ ಔದಾರ್ಯದಿಂದ ತಾಯಿಯಾಗುವುದು' ಎಂಬಂಥ ಅರ್ಥ ಬಂದಿದೆ. ಇದು ವಾಕ್ಯ ರಚನೆಯ ತಪ್ಪು. ವಾಕ್ಯಗಳನ್ನು ರಚಿಸುವಾಗ ಶಬ್ದಗಳ ಪರಸ್ಪರ ಸಂಬಂಧವನ್ನು ಗಮನಿಸಬೇಕಾದುದು ತುಂಬ ಅಗತ್ಯ. ಅದರಲ್ಲಿಯೂ ಗುಣವಾಚಕಗಳನ್ನು ಬಹು ಎಚ್ಚರಿಕೆಯಿಂದ ಉಪಯೋಗಿಸಬೇಕು. ಇದು ಕ್ರಿಯಾ ವಿಶೇಷಣಗಳಿಗೂ ಅನ್ವಯಿಸುತ್ತದೆ. ಶಬ್ದಗಳ ಸಾಮೀಪ್ಯದಿಂದುಂಟಾಗುವ ಸಂಬಂಧದಲ್ಲಿ ಏರುಪೇರಾದರೆ ಅರ್ಥದಲ್ಲಿಯೂ ಏರುಪೇರಾಗುತ್ತದೆ. ಇದನ್ನು ಇಂಗ್ಲಿಷಿನಲ್ಲಿ error of proximity ಎಂದು ಕರೆಯುತ್ತಾರೆ. ಇದು ಎಲ್ಲ ಭಾಷೆಗಳಿಗೂ ಅನ್ವಯಿಸುತ್ತದೆ. ನಾವು ಇದನ್ನು **ಶಬ್ದ ಸಾಮೀಪ್ಯ ದೋಷ** ಎಂದು ಕರೆಯಬಹುದು. ಈಗಿನ ಬರವಣಿಗೆಯಲ್ಲಿ ಇಂಥ ಅನೇಕ ದೋಷಗಳಿವೆ. ಒಂದು ದೃಷ್ಟಾಂತವನ್ನು ನೀಡುತ್ತೇನೆ. ಮೊನ್ನೆ ತಾನೆ ಅಪಘಾತ ಒಂದರಲ್ಲಿ ಸಿಕ್ಕಿಕೊಂಡು ಸ್ವಲ್ಪದರಲ್ಲಿ ಸಾವಿನಿಂದ ಪಾರಾದ ನನ್ನ ಸ್ನೇಹಿತರೊಬ್ಬರಿಗೆ ಬಂದ ಒಂದು ಪತ್ರ ಹೀಗಿತ್ತು. *"ತಮಗೆ ಉಂಟಾಗಿದ್ದ ಅಪಘಾತವನ್ನು ತಿಳಿದು ನಮಗೆಲ್ಲ ಅತೀವ ವ್ಯಥೆಯಾಯಿತು. ದೇವರೇ ತಮ್ಮನ್ನು ಕಾಪಾಡಿದನು. ಇನ್ನು ಮುಂದೆ ಹೀಗಾಗದಿರಲೆಂದು ಪ್ರಾರ್ಥಿಸುತ್ತೇವೆ"* ಕೊನೆಯ ವಾಕ್ಯದ ಅರ್ಥವೇನು? ಆಲೋಚಿಸಿ. ದೇವರು ಮುಂದೆ ಅವರನ್ನು ಕಾಪಾಡಬಾರದು ಎಂಬ ಅರ್ಥ ಬರುವುದಿಲ್ಲವೆ? ಆದುದರಿಂದ ಬರಹದಲ್ಲಿ ಸ್ವಲ್ಪವಾದರೂ ಎಚ್ಚರಿಕೆಯಿರಬೇಕಾದುದು ಅಗತ್ಯ.

**ಶಮೆ - ಕ್ಷಮೆ** ಈ ಎರಡೂ ಸರಿಯಾದ ಶಬ್ದಗಳೇ. ಸಂಸ್ಕೃತದಿಂದ ಬಂದ ತದ್ಭವಗಳು. ಶಮ ಎಂಬುದು ಶಮೆ ಎಂದೂ ಕ್ಷಮಾ ಎಂಬುದು ಕ್ಷಮೆ ಎಂದೂ ರೂಪಗಳನ್ನು ಪಡೆದಿವೆ. ಶಮ ಎಂದರೆ ಶಾಂತಿ ಎಂದರ್ಥ. ಕೋಪ ಮುಂತಾದುವುಗಳನ್ನು ಉಪಶಮನ ಮಾಡುವುದಕ್ಕೆ ಈ ಹೆಸರಿದೆ. ಕಷ್ಟಗಳನ್ನು ಸಹಿಸಿಕೊಳ್ಳುವುದಕ್ಕೆ ದಮೆ ಎಂದು ಹೆಸರು. ಅದು ಬೇರೆ ಶಬ್ದ. ಕ್ಷಮಾ ಶಬ್ದಕ್ಕೆ ಸಹನೆ ಎಂದರ್ಥ. ಇದು ಒಂದು ವಿಶೇಷವಾದ ಶಬ್ದ. ಇದು ಸಂಸ್ಕೃತದಲ್ಲಿ ಮೂರು ಲಿಂಗಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿ ಉಪಯೋಗವಾಗುತ್ತಿದೆ. ಕ್ಷಮಂ, ಕ್ಷಮಃ, ಕ್ಷಮಾ ಎಂದು. ಕನ್ನಡದಲ್ಲಿ ಎಲ್ಲವೂ ಕ್ಷಮೆ ಎಂಬ ರೂಪವನ್ನು ಪಡೆಯುತ್ತದೆ.

**ಶರಣುಮಾಡು, ಸಣ್ ಮಾಡು** ಎಂಬುದು ಗ್ರಾಮ್ಯ ರೂಪ. ಭಾಷಾ ಶಾಸ್ತ್ರದ ದೃಷ್ಟಿಯಿಂದ ಅದನ್ನು ಒಪ್ಪಿಕೊಳ್ಳಬೇಕು. ಈ ಬಗ್ಗೆ ಇನ್ನಷ್ಟು ವಿಷಯವನ್ನು ತಿಳಿಸುತ್ತೇನೆ. ಶರಣ ಇದು ಸಂಸ್ಕೃತದ ಶಬ್ದ. ಬಹಳ ಪ್ರಾಚೀನ ಕಾಲದಿಂದಲೂ ಈ ಶಬ್ದ ಪ್ರಸಿದ್ಧವಾಗಿದ್ದು ವೇದಗಳ ಕಾಲದಿಂದ ಪ್ರಯೋಗದಲ್ಲಿದೆ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ೧. ಮನೆ ೨. ಆಶ್ರಯ ಕೊಡುವ ಸ್ಥಳ ೩. ರಕ್ಷಣೆ ಮಾಡುವವನು ೪. ರಕ್ಷಣೆ ೫. ವಧೆ, ಕೊಲ್ಲುವುದು. ಕೆಲವು ವೇಳೆ ಒಂದೇ ಶಬ್ದಕ್ಕೆ ವಿರುದ್ಧಾರ್ಥಗಳೂ ಬರುವುದುಂಟು. ಈ ಶಬ್ದದೊಡನೆ ಇತರ ಶಬ್ದಗಳು ಸೇರಿ ಸಮಾಸಗಳಾಗಿವೆ. ಹೀಗೆ ಶರಣಾಗತ — ರಕ್ಷಣೆಗಾಗಿ ಬಂದಿರುವವನು. ಶರಣಾರ್ಥಿ — ರಕ್ಷಣೆಯನ್ನು ಯಾಚಿಸುವವನು. ಶರಣ್ಯ - ಕಾಪಾಡುವವನು, ರಕ್ಷಿಸುವವನು. ಕನ್ನಡ ವಚನಕಾರರ ಕೃತಿಗಳಲ್ಲಿ ಈ ಶಬ್ದ ಇನ್ನೂ ಅನೇಕ ಶಬ್ದಗಳ ಜೊತೆ ಸಮಾಸಗಳಾಗಿ ಪ್ರಯೋಗವಾಗಿವೆ. ಶರಣ — ಎನ್ನುವುದನ್ನು ಶಿವಭಕ್ತ ಎಂಬ ಅರ್ಥದಲ್ಲಿ ಹೆಚ್ಚಾಗಿ ಉಪಯೋಗಿಸಿದ್ದಾರೆ. ಶರಣ ಜನ - ಶಿವಭಕ್ತರು. ಶರಣಾಗತಿ - ಮರೆ ಹೋಗುವುದು. ಶರಣಪಥ - ಶಿವಭಕ್ತರ ದಾರಿ. ಶರಣ ಸೇವೆ - ಶಿವಶರಣರ ಸತ್ಕಾರ, ಪರಿಚಯ. ಹೀಗೆಯೇ ಶರಣ ಮಾಡು ಎಂಬ ಒಂದು ಕ್ರಿಯಾ ಸಮಾಸ ಸುಮಾರು ೧೭ನೇ ಶತಮಾನದಲ್ಲಿ ಪ್ರಯೋಗವಾಗಿದೆ. ಅದಕ್ಕೆ ಅರ್ಪಿಸು ಎಂದು ಅಲ್ಲಿ ಅರ್ಥವಾಗುತ್ತದೆ. ಉದಾ: **ನಂದೀಶ್ವರ ಸ್ವಾಮಿಗಳಿಗೆ ವಿಭೂತಿ ಮುಂತಾಗಿ ಶರಣ ಮಾಡಿದೆವು.** ಇದು ಚಿಕ್ಕನಾಯಕನ ಹಳ್ಳಿಯ ಒಂದು ಶಾಸನದಲ್ಲಿದೆ. (ಎಕ xvi ಚಿಕ್ಕನಾ, ೧-೧೪; ೧೬೨೩). ಈ ಶಬ್ದದ ಬಗ್ಗೆ ಮತ್ತೊಂದು ಸ್ವಾರಸ್ಯವಿದೆ. ಶರಣ ಎನ್ನುವುದು ಕನ್ನಡದಲ್ಲಿಯೂ ಶರಣ ಎಂದೇ ಪ್ರಯೋಗವಾಗುತ್ತದೆ. ತದ್ಭವವಾದರೆ ಸರಣ ಆಗುತ್ತದೆ. ಆಶ್ಚರ್ಯಕರವಾಗಿ ಈ ಶಬ್ದವನ್ನು ಗದಾಯುದ್ಧದಲ್ಲಿ ವ್ಯಂಜನಾಂತವಾಗಿ ಉಪಯೋಗಿಸಲಾಗಿದೆ. **ಎರೆವರ್ಗೀವಂ ಭಯದಿಂ ಶರಣ್ಣೆವರೆ ಕಾವಂ** (ಗದಾಯುದ್ಧ ೨-೬). ಇಲ್ಲಿ ಈ ಶಬ್ದದ ರೂಪ ಶರಣ್. ಆ ಬಳಿಕ ಅದಕ್ಕೆ ಉ ಕಾರ ಸೇರಿ ಶರಣು ಎಂಬ ರೂಪವನ್ನು ತಳೆದಿದೆ. ಈಗ ಶರಣು ಎಂದರೆ ನಮಸ್ಕಾರ ಎಂಬ ಅರ್ಥವೂ ಬಂದಿದೆ. ಸರಣ್ ಎಂಬ ವ್ಯಂಜನಾಂತ ರೂಪವನ್ನು ಪಂಪನೇ ಉಪಯೋಗಿಸಿದ್ದಾನೆ. **ಕಾದುದು ಸರಣ್ಗೆ ವಂದರನಾದುದು ಕಾಲಾಗ್ನಿ ಬಲವದರಿನೃಪತಿಗೆ** (ಪಂಪಭಾ ೭-೨). ಇಲ್ಲಿ ಶ ಎಂಬ ಪಾಠಾಂತರವಿದೆ. ಹಾಗಿದ್ದರೆ ಅದು ಶರಣ್ ಎಂದು ವ್ಯಂಜನಾಂತವಾದ ಶಬ್ದವೇ ಆಗುತ್ತದೆ. ಇದು ಈ ಶಬ್ದದ ವೈಶಿಷ್ಟ್ಯ. ಶರಣಾಗತಿ ಎಂಬ ಶಬ್ದವನ್ನು ವಿಶಿಷ್ಟಾದ್ವೈತ ದರ್ಶನದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ಇದಕ್ಕೆ ಪ್ರಪತ್ತಿ ಎಂಬ ಬೇರೆಯ ಶಬ್ದವನ್ನು ಉಪಯೋಗಿಸುತ್ತಾರೆ. ಪರಮಾತ್ಮನ ಕೃಪೆಗೆ ಒಳಗಾಗಲು ಪ್ರಪತ್ತಿ ಮಾರ್ಗವು ಬಹು ಸುಲಭವೂ ಸರಳವೂ ಆದ ಉಪಾಯ. ಇದರಲ್ಲಿ ಐದು ಮುಖ್ಯವಾದ ಅಂಗಗಳಿವೆ. ೧. ಭಗವಂತನಿಗೆ ಪ್ರಿಯವಾದ ಕಾರ್ಯವನ್ನು ಮಾಡುವುದು ೨. ಅವನಿಗೆ ಅಪ್ರಿಯವಾದದ್ದನ್ನು ಬಿಡುವುದು ೩. ಆತನಲ್ಲಿ ದೃಢವಾದ

ಮಹಾ ವಿಶ್ವಾಸ ೪. ನಮ್ಮಲ್ಲಿ ನಮ್ಮ ರಕ್ಷಣೆಗೆ ಬೇಕಾದ ಸಾಮರ್ಥ್ಯವಿಲ್ಲ ಎಂದು ಒಪ್ಪಿಕೊಳ್ಳುವುದು ಮತ್ತು ೫. ಪರಮಾತ್ಮನಲ್ಲಿಯೇ ರಕ್ಷತ್ವವನ್ನು ಬೇಡಿಕೊಳ್ಳುವುದು. ರಾಮಾಯಣದ ಅತಿ ಶ್ರೇಷ್ಠ ಪಾತ್ರಗಳಲ್ಲಿ ಒಬ್ಬನಾದ ವಿಭೀಷಣನನ್ನು ಈ ವಿಧವಾದ ಪ್ರಪತ್ತಿ ತತ್ತ್ವವನ್ನು ಅನುಸರಿಸಿದ ಮಹಾವ್ಯಕ್ತಿಯೆಂದು ದೃಷ್ಟಾಂತಕ್ಕಾಗಿ ಎತ್ತಿ ತೋರಿಸುತ್ತಾರೆ.

ಶರಣಸತಿ ಲಿಂಗಪತಿ ಎಂಬ ಭಕ್ತಿಮಾರ್ಗವನ್ನು ತಿಳಿಸುವ ವಚನಗಳು ವೀರಶೈವ ಸಾಹಿತ್ಯದಲ್ಲಿ ಬಹುವಾಗಿವೆ. ಶರಣ ಶಬ್ದವು ಹೀಗೆ ವ್ಯಾಪಕವಾದ ಅರ್ಥವುಳ್ಳ ಶಬ್ದವಾಗಿದೆ. ಈ ಶಬ್ದವನ್ನು ಶ್ಲೇಷಾರ್ಥದಲ್ಲಿ ಉಪಯೋಗಿಸಿರುವ ಒಂದು ಪ್ರಸಿದ್ಧ ವೃತ್ತವನ್ನು ಓದುಗರ ಅಭ್ಯಾಸಕ್ಕೆಂದು ಉದಾಹರಿಸುತ್ತೇನೆ. ಜಗನ್ನಾಥ ವಿಜಯ ೧೭-೩೩.

*ನಿಂದಿಸಿ ಧರ್ಮಜಪ್ರಮುಖರಂ ಮುಖರಂ ಮುಖರಂಧ್ರ ಘೋಷನಿಂ*
*ತೆಂದನದಿರ್ಪುವೆಂ ಪ್ರಬಳನಂ ಬಳನಂ ಬಳಾರಿ*
*ಗೆಲ್ವಂದಿನಾ ಕೃತಾಂತ ಶರಣಂ ಶರಣಂ ಶರಣಂ ಮುರಾರಿಗಾ*
*ನಿಂದರಿವೆಂ ವಿರೋಧಿಗಳಮಂ ಗಳಮಂಗಳಮಂ ನೆಗಬ್ಬುವೆಂ.*

**ಶರಭ** ಶರಭ ಎಂಬುದು ಗಂಡಭೇರುಂಡದಂತೆಯೇ ಪೌರಾಣಿಕವಾದುದು. ಗಂಡಭೇರುಂಡ ಪಕ್ಷಿಯಾದರೆ ಶರಭ ಒಂದು ಪ್ರಾಣಿ. ಇದು ಕಡವೆಯಂಥ ಪ್ರಾಣಿ. ಇದಕ್ಕೆ ಎರಡು ತಲೆ ಎಂಟು ಕಾಲುಗಳಿವೆಯಂತೆ. ಅಲ್ಲದೆ ಇದು ಊರ್ಧ್ವಲೋಚನವುಳ್ಳದ್ದು ಎಂದರೆ, ತಲೆಯಲ್ಲಿ ಕಣ್ಣುಳ್ಳದ್ದು ಎಂಬ ವಿವರಣೆಯೂ ಬರುತ್ತದೆ. ಕೆಲವು ಟೀಕೆಗಳಲ್ಲಿ ಇದು ಸಿಂಹವನ್ನು ಕೊಲ್ಲುವ ಶಕ್ತಿಯುಳ್ಳದ್ದು, ಇದಕ್ಕಿಂತ ಗಂಡಭೇರುಂಡ ಹೆಚ್ಚು ಪರಾಕ್ರಮವುಳ್ಳದ್ದು.

**ಶರಾರತ್; ಶರಾರತ್ತು** ಇದು ಅರಬ್ಬಿ ಮತ್ತು ಪಾರಸೀ ಭಾಷೆಗಳಲ್ಲಿರುವ ಶಬ್ದ. ಹಿಂದೀ ಮತ್ತು ಮರಾಠಿ ಭಾಷೆಗಳಿಗೂ ಬಂದಿದೆ. ಅಲ್ಲಿಂದಲೇ ಕನ್ನಡಕ್ಕೆ ಬಂದಿದೆ. ಇದಕ್ಕೆ ಮುಖ್ಯವಾಗಿ ತುಂಟಾಟ, ತುಂಟತನ ಎಂದು ಅರ್ಥ. ದುಷ್ಟತನ, ನೀಚತನ ಎಂಬ ಅರ್ಥವೂ ಬೆಳೆದು ದ್ವೇಷ ಎಂಬವರೆಗೆ ವ್ಯಾಪಕವಾಗಿದೆ ಕನ್ನಡದಲ್ಲಿ.

**ಶಹತುತು, ಶಹತುತ್ತು** ತೂತ್, ತುತಿ ಎಂದರೆ ಉಪ್ಪು ನೇರಳೆ ಅಥವಾ ಹಿಪ್ಪು ನೇರಳೆ ಎಂಬ ಗಿಡ. ಇದೂ ಹಿಂದೀಭಾಷೆಯ ಶಬ್ದ. ಈ ಗಿಡದ ಎಲೆಗಳನ್ನು ರೇಷ್ಮೆ ಹುಳುಗಳಿಗೆ ಆಹಾರವಾಗಿ ಉಪಯೋಗಿಸುತ್ತಾರೆ. ಶಹ ಎನ್ನುವುದು ಈ ಆಹಾರ ರಾಜಭೋಗ್ಯ ಎಂಬ ಅರ್ಥದಲ್ಲಿ Royal ಎಂಬ ಅರ್ಥದಲ್ಲಿ ತೂತ್ ಶಬ್ದಕ್ಕೆ ಸೇರಿಸಲಾಗಿದೆ. ಅಷ್ಟೇ! ಹಿಂದೆ ಮೈಸೂರಿನ ಕಡೆ ಈ ಶಬ್ದವು ಉಪಯೋಗದಲ್ಲಿತ್ತು. ಇದು ಮರಾಠೀ ಭಾಷೆಯಲ್ಲಿಯೂ ಪ್ರಯೋಗದಲ್ಲಿತ್ತು. ಈಗ Mulberry ಎಂಬ ಇಂಗ್ಲಿಷ್ ಶಬ್ದವನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಉಪ್ಪುನೇರಳೆ ಪ್ರಯೋಗದಲ್ಲಿದೆ.

**ಶಾಣೋಲ್ಲೀಢ** ಶಾಣ ಎಂದರೆ ಸಾಣೆ ಹಿಡಿಯುವ ಕಲ್ಲು. ಅದರಲ್ಲಿ ಉಲ್ಲೀಢವಾದುದು ಅಂದರೆ ಉಜ್ಜಿ ಹೊಳಪುಕೊಟ್ಟುದು ಎಂದರ್ಥ. ಮಣಿಗಳಿಗೆ ಸಾಣೆ ಹಿಡಿದು ಕಾಂತಿಯುತವಾಗುವಂತೆ ಮಾಡುತ್ತಾರೆ. ಈ ಶಬ್ದವನ್ನು ಕುರಿತು ಪ್ರಯೋಗಗಳನ್ನು ನೆನಪು ಮಾಡಿಕೊಳ್ಳುತ್ತಿರುವಾಗ ನನ್ನ ನೆನಪಿಗೆ ಹೊಳೆದ ಮೊದಲ ಶ್ಲೋಕ '**ಮಣಿಃ ಶಾಣೋಲ್ಲೀಢಃ, ಸಮರ ವಿಜಯೀ ಹೇಲಿದಲಿತಃ ಮದಕ್ಷೀಣೋನಾಗಃ ಶರದಿ ಸರಿತಃ ಜ್ಞಾನ ಪುಲಿನಃ**! ಎಂಬ ಕುವಲಯಾನಂದದ ಉದಾಹರಣ ಪದ್ಯದ ಮೊದಲ ಭಾಗ.

ಭರ್ತೃಹರಿಯ ಈ ಪದ್ಯದ ಮೊದಲ ಭಾಗದ ಅರ್ಥ ಸ್ವಯಂ ಸ್ಪಷ್ಟವಾಗಿ ಗೋಚರಿಸುತ್ತದೆ. ರತ್ನವು ಸಾಣೆ ಹಿಡಿದು ಹೊಳಪನ್ನು ಹೊಂದಿತ್ತು ಎಂದು ಅರ್ಥ.

**ಶಾನುಭಾಗ** ಈ ಶಬ್ದದ ಮೂಲ ಸೇನಬೋವ. ನಿಘಂಟಿನಲ್ಲಿ **ಅಕ್ಷರ ಜೀವಕಃ ಸೇನಬೋವಂ** ಎಂದಿದೆ. ಅದಕ್ಕೆ ಓದುಬರಹ ಬಲ್ಲವನಾಗಿ ಆ ಸಾಮರ್ಥ್ಯವನ್ನೇ ಜೀವನೋಪಾಯಕ್ಕಾಗಿ ಮಾಡಿಕೊಂಡಿರುವವನು ಎಂದರ್ಥ. ಈತನಿಗೆ ಸಂಸ್ಕೃತದಲ್ಲಿ **ಅಕ್ಷರಚಣ, ಅಕ್ಷರಚಂಚು, ಕಾಯಸ್ಥ, ಕರಣ** ಎಂಬ ಹೆಸರುಗಳಿವೆ. ಕನ್ನಡದಲ್ಲಿ ಕ್ರಿ.ಶ. ೯೧೫ ನೆಯ ಇಸವಿಯ ಒಂದು ಶಾಸನದಲ್ಲಿ **ಸೇನಬೋವಂ ಗುಣವರ್ಮಂ ಬರೆದಂ** ಎಂದಿದೆ. ಇಲ್ಲಿಂದ ಮುಂದೆ ಸೇನಬೋವ ಎಂಬ ಶಬ್ದ ವಿಧವಿಧವಾಗಿ ಬದಲಾವಣೆ ಹೊಂದಿ ಸುಮಾರು ೨೫ ಬೇರೆ ಬೇರೆ ರೂಪಗಳನ್ನು ಪಡೆದಿದೆ. ಇಲ್ಲಿ ಕೆಲವು ರೂಪಗಳನ್ನು ಎತ್ತಿ ತೋರಿಸುತ್ತೇನೆ. **ಶೇನ ಭೋಗ, ಶಾನುಭಾಗ, ಶೇನಭಾವ, ಶೇನಭೋಗ, ಶೇನಭಾವ, ಶ್ಯಾನಭಾಗ, ಸೇನ ಭೂವ** ಇತ್ಯಾದಿ. ಈ ಮತ್ತು ಇಂಥ ಇತರ ರೂಪಗಳಿಗೆ ಶಾಸನಸ್ಥ ಅಥವಾ ಗ್ರಂಥಸ್ಥ ಆಧಾರಗಳಿವೆ. ಈಗ ಎಲ್ಲರೂ ಉಪಯೋಗಿಸುತ್ತಿರುವ ರೂಪ ಶಾನುಭೋಗ. ಆದುದರಿಂದ ಶ್ಯಾನುಭೋಗ ಎಂದು ಬರೆದರೂ ತಪ್ಪಿಲ್ಲ. ಎರಡೂ ಶುದ್ಧ ರೂಪಗಳೇ.

**ಶಾನೆ** ಶಬ್ದವನ್ನು ಕೆಲವು ಕಡೆಗಳಲ್ಲಿ ಶಾನೆ ಪ್ರಯೋಗಿಸುತ್ತಾರೆ. ಅದಕ್ಕೆ ತುಂಬ ಬಹಳ ಹೆಚ್ಚಾಗಿ ಎಂಬ ಅರ್ಥ ಪ್ರಸಿದ್ಧ. ಈ ಶಬ್ದವನ್ನು ಕಿಟ್ಟೆಲ್ ಸಂಸ್ಕೃತದ ಸೇನಾ ಶಬ್ದದಿಂದ ವ್ಯುತ್ಪತ್ತಿ ಮಾಡುತ್ತಾನೆ. ಇದು ವಿಚಾರಣೀಯ. ಪಾರಸೀ ಭಾಷೆಯಲ್ಲಿ ಶಾನ್ ಎಂಬ ಶಬ್ದವೊಂದಿದೆ. ಅದಕ್ಕೆ ಅಲಂಕಾರ, ಶೃಂಗಾರ, ಮುಖದ ಕಾಂತಿ ಮುಂತಾಗಿ ಅರ್ಥಗಳಿವೆ. ಶಾನ್ ದಾರ್, ಶಾನ್ ದಾರಿ ಮುಂತಾದ ರೂಪಗಳಿವೆ. ಇವಕ್ಕೆಲ್ಲ ಸುಂದರವಾದ, ಸೌಂದರ್ಯ ಮುಂತಾಗಿ ಅರ್ಥಗಳಿವೆ. ಇದರಲ್ಲಿ ಡೌಲು ಎಂಬ ಅರ್ಥವೂ ಬರುತ್ತದೆ. ಮರಾಠಿಯಲ್ಲಿ ಈ ಶಬ್ದದ ಪ್ರಯೋಗ ಹೆಚ್ಚು. ಈ ಶಬ್ದದ ಅರ್ಥವು ಹೆಚ್ಚು ವ್ಯಾಪಕವಾಗಿ ಅಧಿಕ, ಬಹಳ ಎಂಬ ಅರ್ಥ ಬಂದಿರಬಹುದು. ಇದು ಇನ್ನೂ ಶೋಧನೆಗೆ ಒಳಪಡಬೇಕಾದ ಅಂಶ.

**ಶಾನ್ತಲಾ** ಶಾನ್ತಲಾ ಎಂದು ಬರೆಯುವುದು ಸಂಸ್ಕೃತದಲ್ಲಿ ಕಾಗುಣಿತವನ್ನು ಬರೆಯುತ್ತಿದ್ದ ರೀತಿ. ಕನ್ನಡದಲ್ಲಿ ಹಿಂದೆ ಎಲ್ಲರೂ ಹೀಗೆಯೇ ಬರೆಯುತ್ತಿದ್ದರು. ಕ್ರಮವಾಗಿ ಅನುನಾಸಿಕಗಳಿಗೆ ಅನುಸ್ವಾರವನ್ನು ಬಳಸುವ ಪರಿಪಾಠ ಕನ್ನಡದಲ್ಲಿ ಬಂತು. ಆಗ ಶಾಂತಲಾ ಶಾಂತಲೆ ಎಂಬ ರೂಪ ಪ್ರಸಿದ್ಧವಾಯಿತು. ಹೀಗೆಯೇ ತಿಂಮ ಎಂಬುದು ಹಿಂದೆ ಗ್ರಾಮ ಪ್ರದೇಶದಲ್ಲಿ ಬರೆಯುತ್ತಿದ್ದ ರೀತಿ. ಅಂಣ, ತಂಮ, ಅಂಮ ಮುಂತಾಗಿ ಬರೆಯುತ್ತಿದ್ದ ಕಾಲ ಒಂದಿತ್ತು. ಕ್ರಮವಾಗಿ ಅದು ಅಣ್ಣ, ತಮ್ಮ, ಅಮ್ಮ ಆದಾಗ ತಿಂಮ - ತಿಮ್ಮ ಆಯಿತು. ಇದು ಕನ್ನಡ ಕಾಗುಣಿತದ ಬದಲಾವಣೆಯ ಚರಿತ್ರೆಯ ಭಾಗ. ಕನ್ನಡದಲ್ಲಿ ಸಂಸ್ಕೃತದ ಕಾಗುಣಿತದ ರೀತಿಯನ್ನೇ ಅನುಸರಿಸಬೇಕಾಗಿಲ್ಲ. ಆಧುನಿಕ ಭಾಷೆಗಳಲ್ಲಿ ಬರಹದಲ್ಲೂ ಮಾತಿನಲ್ಲಿ ಅನೇಕ ವ್ಯತ್ಯಾಸಗಳಾಗುತ್ತವೆ. ಅವೆಲ್ಲವನ್ನು ಬೆಳವಣಿಗೆಗಳು ಎಂದು ಗುರುತಿಸಬೇಕು.

**ಶಾಮಿಯಾನಾ** ಇದು ಪಾರಸೀ ಭಾಷೆಯ ಶಬ್ದ. ಆ ಭಾಷೆಯಲ್ಲಿ ಇದಕ್ಕೆ ಎರಡು ರೂಪಗಳಿವೆ, ಶಾಮಿಯಾನಾ ಮತ್ತು ಶಾಮ್ಯಾನಾ. ಇದಕ್ಕೆ ದೊಡ್ಡ ಗುಡಾರ ಎಂದರ್ಥ. 'ಮಗಳ ಮದುವೆಗೆ ಮನೆಯ ಸುತ್ತ ಶಾಮಿಯಾನಾ ಹಾಕಿಸಿದ್ದರು' ಎಂಬ ವಾಕ್ಯವನ್ನು ಪರಿಶೀಲಿಸಿ.

**ಶಾಮೀಲು** ಇದು ಅರಬ್ಬಿ ಭಾಷೆಯ ಶಾಮಿಲ್ ಅಥವಾ ಸಾಮಿಲ್ ಎಂಬ ಶಬ್ದದಿಂದ ಬಂದದ್ದು. ಅದಕ್ಕೆ ಹೊಂದಿಕೊಂಡಿರುವುದು, ಸೇರಿಕೊಂಡಿರುವುದು ಎಂದರ್ಥ. 'ಈ ಕಳ್ಳತನದಲ್ಲಿ ಅವನು ಶಾಮೀಲಾಗಿದ್ದಾನೆ' ಎಂಬ ವಾಕ್ಯವನ್ನು ನೋಡಿ.

**ಶಾರೀರ – ಶಾರೀರಕ** ಶರೀರ ಎಂದರೆ ದೇಹ. ಶಾರೀರ, ಶಾರೀರಿಕ, ಶಾರೀರಕ ಎಂಬ ಮೂರು ಮಾತುಗಳೂ ಸರಿ. ಅವುಗಳನ್ನು ಶರೀರಕ್ಕೆ ಸಂಬಂಧಿಸಿದ ಎಂಬರ್ಥದಲ್ಲಿ

ಉಪಯೋಗಿಸಬಹುದು. ಸಂಗೀತಗಾರರು ಶಾರೀರ ಎನ್ನುವುದನ್ನು ನಾಮಪದವಾಗಿ ಉಪಯೋಗಿಸುತ್ತಾರೆ. ಅದು ಕಂಠದ ಧ್ವನಿಯ ಯೋಗ್ಯತೆಯನ್ನು ತಿಳಿಸಲು ಉಪಯೋಗವಾಗುವ ಶಬ್ದ. ಒಳ್ಳೆಯ ಶಿಕ್ಷಣದಿಂದ ಅದು ತುಂಬ ಅರ್ಹತೆಯನ್ನೂ ಪ್ರೌಢಿಮೆಯನ್ನೂ ಪಡೆಯಬಹುದು.

**ಶಾರ್ಙ್ಗರವ** ಈ ಹೆಸರು ಶಾಕುಂತಲ ನಾಟಕದಲ್ಲಿ ಬರುವ ಕಣ್ವ ಮಹರ್ಷಿಗಳ ಇಬ್ಬರು ಶಿಷ್ಯರಲ್ಲಿ ಒಬ್ಬನದು. ಸಂಸ್ಕೃತದ ಸಾಹಿತ್ಯದಲ್ಲಿ ಈ ಇಬ್ಬರು ವಟುಗಳಂಥ ಬೇರೆಯ ಪಾತ್ರಗಳು ನಮಗೆ ಸಿಕ್ಕುವುದು ಕಷ್ಟ. ಇದು ನಾಟಕದ ಮಾತಾಯಿತು. ಆದರೆ ಈ ವಟುವಿಗೆ ಕಾಳಿದಾಸ ಈ ಹೆಸರನ್ನು ಏಕೆ ಇಟ್ಟ ಎಂಬುದು ಒಂದು ಸಮಸ್ಯೆಯ ಮಾತಾಗಿದೆ. ವಿದ್ವಾಂಸರು ಇದರ ಬಗ್ಗೆ ತುಂಬ ಆಲೋಚಿಸಿ ಕೈ ಬಿಟ್ಟಿದ್ದಾರೆ. ಶಾರ್ಙ್ಗ ಎಂದರೆ ವಿಷ್ಣುವಿನ ಬಿಲ್ಲು. ರವ ಎಂದರೆ ಶಬ್ದ. ಈ ಎರಡರಿಂದ ಈ ಹೆಸರನ್ನು ಸಾಧಿಸುವುದು ಕಷ್ಟ. ಶೃಂಗರವ ಇರಬಹುದೇ ಎಂದು ಕೆಲವರು ಊಹಿಸಿದ್ದಾರೆ. ಆಗ ಅದಕ್ಕೆ ಪರ್ವತದ ಪ್ರತಿಧ್ವನಿ ಎಂಬ ಅರ್ಥ ಬರಬಹುದು. ಕಣ್ವರ ಪ್ರತಿಧ್ವನಿ ಎಂದು ಅರ್ಥವಾದೀತು. ಆದರೆ ಇದೆಲ್ಲಾ ಊಹೆ. ಇನ್ನೂ ನಿರ್ಧಾರವಾಗಿರುವ ತೀರ್ಮಾನವಲ್ಲ.

**ಶಾಸಕ** ಶಾಸಕ ಎಂದರೆ ಆಡಳಿತವನ್ನು ನಡೆಸುವವನು. ಇದು ಹೀಗೆಯೇ ನಡೆಯಬೇಕು ಎಂದು ಆಜ್ಞೆ ಮಾಡುವವನು. ಈಗ ಈ ಅರ್ಥದಲ್ಲಿ ಸ್ವಲ್ಪ ಶಿಥಿಲತೆ ಅಡಗಿಕೊಂಡಿದೆ. ಸರಕಾರವನ್ನು ನಡೆಸುವ ರಾಜ್ಯಾಂಗಗಳಿಗೆ ಆಯ್ಕೆಯಾಗುವ ಎಲ್ಲರಿಗೂ ಈ ಶಬ್ದವನ್ನು ಉಪಯೋಗಿಸುತ್ತಾರೆ. Legislator ಎಂಬ ಇಂಗ್ಲಿಷ್ ಶಬ್ದಕ್ಕೆ ಸಮಾನವಾದ ಕನ್ನಡ ಶಬ್ದ.

**ಶಾಸ್ತ್ರಿ** ಶಾಸ್ತ್ರವನ್ನು ಬಲ್ಲವನು ಶಾಸ್ತ್ರಿ. ಸಂಸ್ಕೃತದ ಶಾಸ್ತ್ರೀ ಶಬ್ದವು ಕನ್ನಡದಲ್ಲಿ ಶಾಸ್ತ್ರಿ ಆಗುತ್ತದೆ.

**ಶಿಕ್ಷಕ** ಈ ಶಬ್ದಕ್ಕೆ ವಿದ್ಯೆಯನ್ನು ನೀಡುವವನು. ಬೋಧಕ ಎಂಬ ಅರ್ಥವಿದೆ. ಈಗ ಹೆಚ್ಚಾಗಿ ಈ ಶಬ್ದವನ್ನೇ ಉಪಯೋಗಿಸುತ್ತಿದ್ದಾರೆ, ವಿದ್ಯಾ ಇಲಾಖೆಯವರು. ವಿದ್ಯಾ ಇಲಾಖೆಗೂ ಶಿಕ್ಷಣ ಇಲಾಖೆ ಎಂದೇ ಈಗ ಪ್ರಾಚುರ್ಯವಿದೆ.

**ಶಿಕ್ಷಾ** ಇದು ಒಂದು ಶಾಸ್ತ್ರ. ಆರು ವೇದಾಂಗಗಳಲ್ಲಿ ಮೊದಲನೆಯದು. ಸ್ವರ ವರ್ಣಗಳು ಉತ್ಪತ್ತಿ ಸ್ಥಾನಗಳನ್ನು ತಿಳಿಸಿ ಉಚ್ಚಾರಣಾ ಕ್ರಮವನ್ನು ಹೇಳಿಕೊಡುವುದು. ಈ ಶಬ್ದಕ್ಕೆ ಇತರ ಅರ್ಥಗಳೂ ಇವೆ. ಕಲಿಯುವುದು, ಅಭ್ಯಾಸ, ಕಲಿಸುವುದು, ಶಿಕ್ಷಣ ನೀಡುವುದು, ಪಳಗಿಸುವುದು ಎಂಬ ಅರ್ಥಗಳೂ ಇವೆ. ಶಿಕ್ಷಣ ಶಬ್ದಕ್ಕೆ ವಿದ್ಯೆಯನ್ನು ಕಲಿಸುವುದು, ವಿದ್ಯೆ ಕಲಿಯುವುದು, ಪಳಗಿಸುವುದು, ದಂಡಿಸುವುದು ಎಂಬ ಅರ್ಥಗಳಿವೆ. ದುಷ್ಟಶಿಕ್ಷಣ, ಶಿಷ್ಟರಕ್ಷಣ ಎಂದರೆ ರಾಜನಾದವನು, ಆಡಳಿತದಲ್ಲಿರುವವನು ಕೆಟ್ಟವರನ್ನು ದಂಡಿಸಿ ಒಳ್ಳೆಯವರನ್ನು ಕಾಪಾಡಬೇಕು ಎಂದು ಅರ್ಥ.

**ಶಿಖಾ** ಎಂದರೆ ಜುಟ್ಟು. ಇದಕ್ಕೆ ಜಟೀ ಎಂದೂ ಬೇರೆಯ ಶಬ್ದವಿದೆ. ಶೇತೇ ಶಿರಸಿ = ತಲೆಯ ಮೇಲೆ ಮಲಗಿರುತ್ತದೆ ಎಂದು ಶಿಖಾ ಎಂಬ ಹೆಸರು ಬಂದಿದೆಯಂತೆ. ಚಾಣಕ್ಯನು ಮುದ್ರಾರಾಕ್ಷಸ ನಾಟಕದಲ್ಲಿ ಹೇಳುತ್ತಾನೆ. **ನಂದಕುಲ ಕಾಲ ಭುಜಗೀಂ ಕೋಪಾನಲ ಬಹುಲ ಲೋಲ ಧೂಮಲತಾಮ್ ಅದ್ಯಾಪಿ ವಧ್ಯಮಾನಾಂ ವಧ್ಯಃ ಕೋ ನೇಚ್ಛತಿ ಶಿಖಾಂ ಮೇ.** ವ್ಯಕ್ತಿಗಳ ತಲೆಯ ಮೇಲಿನ ಕೂದಲಿಗೆ ಜಟಿ ಎಂತಲೂ ಸ್ತ್ರೀಯರ ಕೂದಲಿಗೆ ವೇಣಿ ಎಂತಲೂ ಬೇರೆ ಬೇರೆ ಹೆಸರುಗಳಿವೆ. ಇದಲ್ಲದೆ ಶಿಖಾ ಎಂಬ ಶಬ್ದಕ್ಕೆ ೧. ಬೆಟ್ಟದ ಶಿಖರ, ೨. ಅಗ್ನಿಜ್ವಾಲೆ ೩. ನವಿಲಿನ ಕೊಟ್ಟು ೪. ಬಟ್ಟೆಯ ಅಂಚು ಇತ್ಯಾದಿ ಅರ್ಥಗಳೂ ಇವೆ.

**ಶಿಫಾರಸು** ಇದಕ್ಕೆ ಪಾರಸೀ ಭಾಷೆಯ ಶಿಫಾರಿಶ್ ಎಂಬುದು ಮೂಲ. ಮರಾಠಿಯಲ್ಲಿ

ಶಿಫಾರಸ್ ಆಗಿ ನಮಗೂ ಬಂದು ಸೇರಿ ಶಿಫಾರಸು ಆಗಿದೆ. ಅರ್ಹತಾಪತ್ರ ಅಥವಾ ಬಾಯಿಮಾತಿನ ಹೊಗಳಿಕೆ ಎಂದರ್ಥ.

**ಶಿರಸಾಷ್ಟಾಂಗ ಪ್ರಣಾಮಗಳು** ಪ್ರಣಾಮ ಎಂದರೆ ನಮಸ್ಕಾರ. ಅಷ್ಟಾಂಗ ಎಂದರೆ ಎಂಟು ಅಂಗಗಳು: *೧. ತೋಳುಗಳು ೨. ಕಾಲುಗಳು ೩. ಮಂಡಿ, ೪. ಎದೆ ೫. ಶಿರಸ್ಸು ೬. ಕಣ್ಣುಗಳು ೭. ಮನಸ್ಸು ೮. ವಚಸ್ಸು (ಮಾತು).* ಈ ಎಂಟೂ ಅಂಗಗಳಿಂದ ಪ್ರಣಾಮ ಮಾಡುತ್ತೇವೆ ಎಂದು ಅರ್ಥ. ಶಿರ ಮೊದಲ್ಗೊಂಡು ೮ ಅಂಗಗಳೂ ಎಂಬುದಕ್ಕೆ ಈ ಶಬ್ದಪುಂಜ ಹುಟ್ಟಿಕೊಂಡಿದೆ. ಆ ಮಾತೇ ಸಂಪ್ರದಾಯವಾಗಿ ಉಳಿದಿದೆ.

**ಶಿವ** ಸಂಸ್ಕೃತ ಶಬ್ದ. ಸಿವ ತದ್ಭವ. ಆದರೆ ಈ ತದ್ಭವ ರೂಪಕ್ಕೆ ಶಿಷ್ಟ ಪ್ರಯೋಗದಲ್ಲಿ ಹೆಚ್ಚು ಪ್ರಾಧಾನ್ಯ ದೊರೆತಿಲ್ಲ.

**'ಶಿವಪೂಜೆಯಲ್ಲಿ ಕರಡಗೆ ಬಿಟ್ಟ ಹಾಗೆ'!** ಎನ್ನುವುದು ಪ್ರಸಿದ್ಧವಾದ ಗಾದೆ. ಯಾವುದಾದರೂ ಸ್ತುತ್ಯಕಾರ್ಯವನ್ನು ಮಾಡುವಾಗ ಆ ಕಾರ್ಯದ ಪ್ರಧಾನ ಅಂಗವಾದ ಯಾವುದಾದರೂ ಅಂಶವನ್ನು ಮರೆಯುವುದು ಒಟ್ಟು ಕಾರ್ಯಕ್ಕೇ ವಿಫಲತೆಯನ್ನು ಉಂಟು ಮಾಡುತ್ತದೆ, ಎಂಬುದು ಇದರ ಅರ್ಥ. ಆದರೆ 'ಕರಡಗೆ' ಎಂಬುದು ಸಂಸ್ಕೃತದ 'ಕರಂಡಕ' ದಿಂದ ಬಂದ ಶಬ್ದ. ಕನ್ನಡದ ಶಬ್ದ ಎಂಬುದರಿಯದವರಿಗೆ ಆ ಶಬ್ದದಲ್ಲಿ ಎಲ್ಲರಿಗೂ ಚಿರಪರಿಚಿತವಾದ 'ಕರಡಿ' ಯೇ ಮುಖ್ಯವಾಗಿ ಕಂಡಿರಬೇಕು. ಹಾಗಾಗಿ **ಶಿವಪೂಜೆಯಲ್ಲಿ ಕರಡಿ ಬಿಟ್ಟ ಹಾಗೆ** ಎಂಬ ಒಂದು ಹೊಸ ಗಾದೆ ಸೃಷ್ಟಿಯಾಯಿತು. ಶಿವಪೂಜೆ ಒಂದು ಪವಿತ್ರ ಕಾರ್ಯ. ಅದು ನಡೆಯುತ್ತಿರುವಾಗ ಕರಡಿಯನ್ನು ತಂದು ಆಟವಾಡಿಸಿದರೆ ಪವಿತ್ರ ಕಾರ್ಯಕ್ಕೆ ಅಡ್ಡಿ ಮಾಡಿದಂತಾಯಿತು. ಹೊಂದಿಕೆ ಅಥವಾ ಸಾಮರಸ್ಯವಿಲ್ಲದ ಕೆಲಸಕ್ಕೆ ಈ ಗಾದೆಯನ್ನು ಅನ್ವಯಿಸುತ್ತಾರೆ. ನೀವು ಇಷ್ಟ ಬಂದದ್ದನ್ನು ಸಮಯಾನುಸಾರವಾಗಿ ಆರಿಸಿ ಉಪಯೋಗಿಸಿಕೊಳ್ಳಬಹುದು.

**ಶಿವಪ್ಪ ನಾಯಕನ ಶಿಸ್ತು** ಕೆಳದಿಯ ರಾಜ್ಯದಲ್ಲಿ ಆಳಿದ ಶಿವಪ್ಪ ನಾಯಕ ಆಡಳಿತದಲ್ಲಿ ತುಂಬ ಸುಧಾರಣೆಗಳನ್ನು ತಂದು ಸಾಮಾನ್ಯ ಜನರ ಜೀವನಕ್ಕೆ ಬಹಳ ಅನುಕೂಲಗಳನ್ನು ಮಾಡಿಕೊಟ್ಟನು. ಅವನ ಆಜ್ಞೆ ಎಂದರೆ ಎಲ್ಲರೂ ಬದ್ಧರಾಗಿರುವಂತೆ ಏರ್ಪಾಟುಮಾಡಿದನು. ಇದು ಚಾರಿತ್ರಿಕವಾಗಿ ನಿಜವಾದ ವಿಷಯ. ಆದುದರಿಂದಲೇ ಶಿವಪ್ಪ ನಾಯಕನ ಶಿಸ್ತು ಎಂಬುದು ಗಾದೆ ಮಾತಾಯಿತು.

**ಶಿಶು ಎಂಬುದಕ್ಕೆ ತದ್ಭವ ಏನು?** ಶಿಶು ಸಂಸ್ಕೃತ - ಸಿಸು - ತದ್ಭವ. ಈ ಶಬ್ದಕ್ಕೆ ಎಳೆಯ ಮಗು, ಹಸುಗೂಸು ಎಂದರ್ಥ.

**ಶಿಶುವಿಹಾರ** ನೋಡಿ: ಅಂಗನವಾಡಿ.

**ಶೀಘ್ರ, ಬೇಗನೆ, ಕೂಡಲೆ, ಈಗಲೇ, ಒಡನೆ, ತಕ್ಷಣ** ಈ ಎಲ್ಲ ಶಬ್ದಗಳೂ ಒಂದೇ ಅರ್ಥವನ್ನು ಹೊಂದಿದ್ದಂತೆ ಕಂಡರೂ ಅವುಗಳಿಗೆ ಬೇರೆ ಬೇರೆ ಅರ್ಥಗಳಿವೆ. ಇವುಗಳಲ್ಲಿ ಶೀಘ್ರ ಸಂಸ್ಕೃತದ ಶಬ್ದ. ಅದಕ್ಕೆ ಬೇಗನೆ ಎಂದರ್ಥ. ತಕ್ಷಣ ಎಂಬುದು ತತ್ಕ್ಷಣದ ತದ್ಭವ. ಈಗಲೇ ಎಂಬುದು ಆ ಮಾತು ಬಂದ ಸಂದರ್ಭದಲ್ಲಿಯೇ ಎಂದು ತಿಳಿಯಬೇಕು. ಒಡನೆ ಎಂದರೆ ಜೊತೆಯಲ್ಲಿ ಎಂದರ್ಥ. ಈ ಅಲ್ಪ ವ್ಯತ್ಯಾಸಗಳನ್ನು ತಿಳಿದು ಶಬ್ದಗಳನ್ನು ಪ್ರಯೋಗಿಸಬೇಕು.

**ಶೀಶೆ, ಶೀಸೆ, ಸೀಸೆ, ಶೀಷೆ, ಶೀಸಾಯಿ** ಇಷ್ಟು ಶಬ್ದಗಳಲ್ಲಿ ಯಾವುದು ಸರಿಯಾದುದು? ಹಿಂದಿಯಲ್ಲಿ ಶೀಶಾ ಎಂಬ ಶಬ್ದವಿದೆ. ಇದಕ್ಕೆ ಗಾಜು, ಗಾಜಿನ ಪಾತ್ರೆ, ಕನ್ನಡಿ ಮುಂತಾದ ಅರ್ಥಗಳಿವೆ. ಶೀಶೀ ಎಂದರೆ ಸಣ್ಣ ಗಾಜಿನ ಬಾಟಲು. ಶೀಶಿಯಾಂ ಅಂದರೆ ಬಹುವಚನ. ಇದೇ ಶಬ್ದ ಮಹಾರಾಷ್ಟ್ರದ ಭಾಷೆಯಲ್ಲಿ ಶೀಸಾ ಎಂದಾಗಿದೆ. ಇದಕ್ಕೆ ಬಾಟಲಿ, ಕುಪ್ಪಿ,

ಹೆಂಡದ ಬುರುಡೆ ಮುಂತಾದ ಅರ್ಥಗಳಿವೆ. ಕನ್ನಡಕ್ಕೆ ಇದು ಹೀಗೆ ಬಂದು ಸೇರಿಕೊಂಡಿದೆ. ಆದುದರಿಂದ ಶೀಶೆ, ಶೀಸೆ, ಸೀಸೆ, ಶೀಸಾಯಿ, ಸೀಸಾಯಿ ಎಂಬ ಎಲ್ಲ ರೂಪಗಳೂ ಸರಿಯಾದುವು. ಶೀಷೆ ಸರಿಯಾದ ರೂಪವಲ್ಲ. ದೆಹಲಿ, ಜಯಪುರ, ಫತೇಪುರ್ ಸಿಕ್ರಿಗಳಲ್ಲಿನ 'ಶೀಶ್ ಮಹಲ್' ಎಂಬ ಕನ್ನಡಿಗಳ ಅರಮನೆಯ ಹೆಸರನ್ನು ನೀವು ಕೇಳಿರಬಹುದು.

**ಶುಕ್ರೋತ್ಸರ್ಜನ** ಈ ಸಂಸ್ಕೃತ ಶಬ್ದದಲ್ಲಿ ಎರಡು ಶಬ್ದಗಳಿವೆ. ಶುಕ್ರ ಮತ್ತು ಉತ್ಸರ್ಜನ. ಶುಕ್ರ ಎಂದರೆ ಸ್ತ್ರೀ ಪುರುಷರ ಸಂಭೋಗಕಾಲದಲ್ಲಿ ಹೊರಸೂಸುವ ದ್ರವ. ಉತ್ಸರ್ಜನ ಎಂದರೆ ವಿಸರ್ಜನೆ, ಬಿಡುವುದು, ಹೊರಸೂಸುವುದು.

**ಶುಕ್ಲಾಂಬರಧರಂ** ಎಂದು ಮೊದಲಾಗುವ ಶ್ಲೋಕದಲ್ಲಿ ವಿಷ್ಣುವನ್ನು ಪ್ರಾರ್ಥನೆ ಮಾಡಬೇಕು. ಅದರಿಂದ ಎಲ್ಲ ವಿಘ್ನಗಳೂ ಉಪಶಾಂತಿ ಹೊಂದುತ್ತವೆ. ಇಳಿಮುಖವಾಗಿ ಕ್ರಮವಾಗಿ ನಾಶವಾಗುತ್ತವೆ ಎಂಬ ಅಭಿಪ್ರಾಯವಿದೆ. ಅಲ್ಲಿ ವಿಷ್ಣು ಮತ್ತು ಗಣಪತಿಯ ಸಂಬಂಧದ ವಿಚಾರವಿಲ್ಲ. ಎಲ್ಲ ದೇವತೆಗಳೂ ವಿಘ್ನನಾಶಕರೇ, ಎಂದಮೇಲೆ ಜಗದ್ರಕ್ಷಕನಾದ ವಿಷ್ಣುವು ಅದಕ್ಕೆ ಸಹಾಯಕ ತಾನೆ! ಈ ಶ್ಲೋಕದಲ್ಲಿ ಬರುವ **ಸರ್ವವಿಘ್ನೋಪಶಾಂತಯೇ** ಎಂಬ ಭಾಗಕ್ಕೆ ಎಲ್ಲ ವಿಘ್ನಗಳೂ ಉಪಶಾಂತಿ ಹೊಂದಲಿ ಸಮವಾಗಿ ನಾಶವಾಗಲಿ ಎಂದು ಅಪೇಕ್ಷಿಸುವುದಕ್ಕಾಗಿ ಎಂದರ್ಥ. ಇಲ್ಲಿ ಗಣೇಶನ ಹೆಸರಿಲ್ಲ.

**ಶುಭಾಶಯ** ಶುಭ + ಆಶಯ ಎಂಬ ಎರಡು ಸಂಸ್ಕೃತ ಶಬ್ದಗಳು ಸೇರಿ ಆಗಿರುವುದು ಶುಭಾಶಯ. ಇದಕ್ಕೆ ಇನ್ನೊಬ್ಬರಿಗೆ ಒಳ್ಳೆಯದಾಗಲಿ ಎಂಬ ಆಸೆಯನ್ನು ವ್ಯಕ್ತಪಡಿಸುವುದು ಎಂದರ್ಥ. ಶುಭಾಷಯ ಎಂಬ ಶಬ್ದವೇ ಇಲ್ಲ. ಅದು ತಪ್ಪು; ಉಪಯೋಗಿಸಬಾರದು.

**ಶುರು** ಕನ್ನಡ ಶಬ್ದವೇ? ಶುರು ಹಿಂದಿ ಶಬ್ದ. ಮರಾಠಿಯಲ್ಲಿಯೂ ಉಪಯೋಗದಲ್ಲಿದೆ. ಅಲ್ಲಿಂದ ಕನ್ನಡಕ್ಕೆ ಬಂದ ಶಬ್ದ ಇದು. ಈಚೀಚೆಗೆ ಸುರು ಎಂದೂ ಅಧಿಕವಾಗಿ ಪ್ರಯೋಗವಾಗುತ್ತಿದೆ. ಅದು ಗ್ರಾಮ್ಯ ರೂಪ. ಬರಹದಲ್ಲಿ ಅದನ್ನು ಬಿಡುವುದು ಉತ್ತಮ.

**ಶೂನ್ಯವೇಳೆ** ಎಂದರೆ ಯಾವುದಾದರೂ ನಿಶ್ಚಿತವಾದ ಕಾರ್ಯಕ್ರಮವನ್ನು ಪ್ರಾರಂಭಿಸಲು ನಿಗದಿಯಾಗಿರುವ ಸಮಯ. ಈ ಶಬ್ದವನ್ನು ಮೊದಲು ಸೈನಿಕ ಕಾರ್ಯಾಚರಣೆಗೆ ಮಾತ್ರ ಉಪಯೋಗಿಸುತ್ತಿದ್ದರು. ಈಚೆಗೆ ಎಲ್ಲ ಕಡೆಗಳಲ್ಲಿಯೂ ಉಪಯೋಗಿಸುತ್ತಾರೆ. ಉದಾಹರಣೆಗೆ ಉಪಗ್ರಹಗಳ ಉಡಾವಣೆಯಲ್ಲಿ ಆ ಸಮಯವನ್ನು ಕ್ಷಣಕ್ಷಣಕ್ಕೂ ಲೆಕ್ಕಹಾಕಿ ೧೦, ೯, ೮, ೭, ೬, ೫, ೪, ೩, ೨, ೧ ಎಂದು ಹಿಂದಕ್ಕೆ ಎಣಿಸಿ ಹೇಳಿ ನಿಲ್ಲಿಸಿದ ಕೂಡಲೇ ಈ ಶೂನ್ಯವೇಳೆಯಲ್ಲಿ ಉಡಾವಣೆ ನಡೆಯುತ್ತದೆ. ಲೋಕಸಭೆ - ರಾಜ್ಯಸಭೆ - ವಿಧಾನಸಭೆಗಳಲ್ಲಿಯೂ ಪ್ರಶ್ನೆಗಳನ್ನು ಕೇಳಲು ನಿಗದಿಯಾದ ಸಮಯವನ್ನು ಶೂನ್ಯವೇಳೆ ಎಂದು ಕರೆಯುತ್ತಾರೆ. Zero Hour ಎಂಬ ಇಂಗ್ಲಿಷ್ ಶಬ್ದದ ಅನುವಾದ.

**ಶೃಂಗಸಭೆ** ಬಹು ಶಕ್ತವಾದ ರಾಷ್ಟ್ರಗಳ ಪ್ರಮುಖ ನಾಯಕರು ತಾವೇ ಭಾಗವಹಿಸುವ ಸಭೆ. ಇದು Summit conference ಎಂಬ ಇಂಗ್ಲಿಷ್ ಶಬ್ದದ ಕನ್ನಡ ಅನುವಾದ. ಭಾರತ ಪಾಕಿಸ್ತಾನದ ಪರವಾಗಿ ಆ ರಾಷ್ಟ್ರಗಳ ಪ್ರಧಾನಿಗಳೇ ಸೇರಿ ನಡೆಸುವ ಮಾತುಕತೆಗಳ ಸಭೆ ಒಂದು ಶೃಂಗಸಭೆ. ಹೀಗೆಯೇ ಇಂಥ ಉನ್ನತ ಸ್ಥಾನದಲ್ಲಿರುವ ಅಧಿಕಾರಿಗಳ ಸಭೆಯೆಲ್ಲ ಶೃಂಗಸಭೆಯೇ ಆಗುತ್ತದೆ. ಈಚೆಗೆ Summit ಎಂಬ ಒಂದೇ ಶಬ್ದವನ್ನು ಇಂಗ್ಲಿಷಿನಲ್ಲಿ ಉಪಯೋಗಿಸಲು ಮೊದಲು ಮಾಡಿದ್ದಾರೆ. ನಾವೂ ಕನ್ನಡದಲ್ಲಿ ಶೃಂಗ ಎಂಬ ಅಷ್ಟನ್ನೇ ಉಪಯೋಗಿಸಿದರೆ ಅದೇ ಚಾಲ್ತಿಗೆ ಬರುತ್ತದೆ. ಒಳ್ಳೆಯ ಅರ್ಥ ಸೃಷ್ಟಿಯಾದಂತಾಯಿತು.

**ಶೃಂಗೇರಿ** ಇದು ಋಷ್ಯಶೃಂಗ ಮುನಿಯ ಜನ್ಮಸ್ಥಳವಾದುದರಿಂದ ಇದಕ್ಕೆ ಶೃಂಗಗಿರಿ ಎಂಬ ಹೆಸರು ಬಂದಿತೆಂದು ಪ್ರತೀತಿಯಿದೆ. ಇದಕ್ಕೆ ಆಧಾರವಾವುದೂ ಇಲ್ಲ. ಶಾಸನಗಳಲ್ಲಿ ಆ

ಊರನ್ನು ಶೃಂಗಿಪುರ ಎಂದು ಕರೆದಿದ್ದಾರೆ. ಇದು ಆಧಾರಭೂತವಾದ ಹೆಸರು. ನಮಗೆ ಗೊತ್ತಿರುವುದು ಇಷ್ಟೇ! 'ಗೇರಿ' ಎಂದು ಕೊನೆಯಾಗುವ ಊರ ಹೆಸರುಗಳಲ್ಲಿ 'ಕೆರೆ' ಗೆ, 'ಏರಿ'ಗೆ, 'ಕೇರಿ'ಗೆ ಸಂಬಂಧಿಸಿರುವ ಸಾಧ್ಯತೆಯಿದೆ. ಇದರ ವ್ಯುತ್ಪತ್ತಿಯನ್ನು ನಿರ್ಧಾರ ಮಾಡಬೇಕಾಗಿದೆ. ಸ್ಥಳಪುರಾಣಕ್ಕೂ ಭಾಷಾ ಚರಿತ್ರೆಗೂ ಸಂಬಂಧವಿಲ್ಲ.

**ಶೇಕ್‌ಸ್ಪಿಯರ್** ಷೇಕ್ಸ್‌ಪಿಯರ್ ಎಂಬುದೇ ಹೆಚ್ಚು ಜನ ವಿದ್ವಾಂಸರು ಉಪಯೋಗಿಸುವ ರೂಪ. ಇತರ ರೂಪಗಳು ಷೇಕ್ಸ್‌ಪಿಯರ್, ಷೇಕ್ಸ್ಪ್ರಿಯರ್. ಕೆಲವರು ಶೇಕ್ಸ್‌ಪಿಯರ್ ಎಂದೂ ಉಪಯೋಗಿಸಿದ್ದಾರೆ. ಎರಡೂ ಚಾಲ್ತಿಯಲ್ಲಿರುವ ಶಬ್ದಗಳು ಇದಕ್ಕೆ ಮುಖ್ಯವಾದ ಕಾರಣವಿದೆ. ಕನ್ನಡದಲ್ಲಿ ಶ, ಷ ಎಂಬ ಅಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸುವುದರಲ್ಲಿರುವ ಕಷ್ಟ. ಅದಕ್ಕೆ ಅಭ್ಯಾಸ ಬೇಕು. ಇದು ಹೆಚ್ಚಾಗಿ ಇಲ್ಲ. ಎರಡು ರೂಪಗಳೂ ಚಾಲ್ತಿಯಲ್ಲಿವೆ.

**ಶೈಲ** ಶಿಲಾ ಎಂಬ ಶಬ್ದದಿಂದ ಶೈಲ ಎಂಬ ಶಬ್ದ ರೂಪ ಸಿದ್ಧಿಸುತ್ತದೆ. ಆದುದರಿಂದ ಹೆಣ್ಣು ಮಗುವಿಗೆ ಶೈಲ ಎಂಬುದು ಸರಿ. ಕಲ್ಲಿಗೆ, ಬೆಟ್ಟಕ್ಕೆ ಸಂಬಂಧಿಸಿರುವ ಎಂದು ಅರ್ಥ. ಶೈಲಜಾ ಎಂದರೆ ಪಾರ್ವತಿ ಎಂದು ಸ್ಪಷ್ಟವಾಗುತ್ತದೆ. **ಶೈಲಾಧಿರಾಜ** ಎಂಬುದು ಸಂಸ್ಕೃತದಲ್ಲಿ ಪ್ರಸಿದ್ಧವಾದ ಸಮಾಸ. ಇದಕ್ಕೆ ಹಿಮಾಲಯ ಪರ್ವತ ಎಂದು ಅರ್ಥ.

**ಶೋಕಿ** ಇದಕ್ಕೆ ಮೂಲ ಅರಬ್ಬಿಯ, ಪಾರಸೀಯ **ಷೋಕಿ** ಶಬ್ದ. ಇದಕ್ಕೆ ರಸಿಕತನದ, ಅಭಿರುಚಿಯುಳ್ಳ, ವಿಲಾಸದ ಎಂಬ ವಿಶೇಷಣದ ಅರ್ಥವಿದೆ. ಮರಾಠಿಯಲ್ಲಿ ಈ ಶಬ್ದವಿದೆ. ಅದಕ್ಕೆ ಭೋಗಾಸಕ್ತನಾದ, ವಿಷಯಾಸಕ್ತನಾದ, ವಿಷಯ ಲಂಪಟನಾದ ಎಂಬ ವಿಶೇಷಣದ ಅರ್ಥವಿದೆ. ಕನ್ನಡಕ್ಕೆ ಇದು ಮರಾಠಿಯ ಮೂಲಕ ಬಂದಿರುವುದರಿಂದ ಕನ್ನಡದಲ್ಲಿಯೂ ಹೆಚ್ಚಾಗಿ ಆ ಅರ್ಥಗಳೇ ಇವೆ. ಕನ್ನಡದಲ್ಲಿ ಶೋಕಿ, ಷೋಕಿ ಎಂಬ ಎರಡು ರೂಪಗಳೂ ಇವೆ. ಷೋಕೀಲಾಲ, ಷೋಕೀದಾರ ಮುಂತಾಗಿ ಬೆಳೆದ ಇತರ ಶಬ್ದಗಳೂ ಇವೆ. ಇಂಥವರ ಗುಣವನ್ನು **ಷೋಕು** ಎಂದೂ ಕರೆಯುತ್ತಾರೆ.

**ಶೌಚ** ಶುಚಿತ್ವ ಎಂದು ಈ ಶಬ್ದದ ಅರ್ಥ. ಶುಚಿಯಾಗಿರುವುದು ಶೌಚ. ಶುಚಿ ಎಂದರೆ ಸಂಸ್ಕೃತದಲ್ಲಿ ನಿರ್ಮಲವಾಗಿರುವುದು; ಕೊಳಕು, ಕೊಳೆ, ಕಸ ಇಲ್ಲದಿರುವುದು, ಪರಿಶುದ್ಧವಾಗಿರುವುದು ಎಂದು ಅರ್ಥ. ಗರುಡ ಪುರಾಣದಲ್ಲಿ ಐದು ಬಗೆಯ ಶೌಚಗಳನ್ನು ನಿರೂಪಿಸುತ್ತಾರೆ. ೧. ಸತ್ಯ ಶೌಚ ೨. ಮನಃಶೌಚ ೩. ಇಂದ್ರಿಯ ನಿಗ್ರಹವೆಂಬ ಶೌಚ ೪. ಸರ್ವಭೂತದಯಾ ಶೌಚ ೫. ಜಲಶೌಚ.

**ಶೌಚಾಲಯ** ಶೌಚ ಆಲಯ ಶೌಚಾಲಯ. ಶುಚಿ ಶಬ್ದಕ್ಕೆ ಮಡಿ, ಬಿಳಿಪು, ಶುಭ್ರವಾದ, ನಿರ್ಮಲವಾದ ಎಂಬ ಅರ್ಥಗಳಿವೆ. ಸ್ನಾನ, ಮಲಮೂತ್ರ ವಿಸರ್ಜನೆ ಮಾಡುವಿಕೆ ಮುಂತಾದ ಶೌಚ ಕಾರ್ಯಗಳಿಗೆ ಮೀಸಲಾದ ಸ್ಥಳಕ್ಕೆ ಆ ಹೆಸರು ಸರಿಯಾಗಿದೆ. ನಾವು ಬಚ್ಚಲ ಮನೆ ಎನ್ನುವುದಿಲ್ಲವೆ? ಹಾಗೆಯೇ ಆಲಯ ಶಬ್ದ ಉಪಯೋಗವಾಗಿದೆ. ತಪ್ಪೇನೂ ಇಲ್ಲ. ಮೂತ್ರಾಲಯ, ಮಲಾಲಯ ಮುಂತಾಗಿ ಶಬ್ದಗಳನ್ನು ಮಾಡಬಾರದು.

**'ಶ್ಮಶಾನ'** 'ಶ್ಮಶಾನ' ಎಂಬುದು ಸಂಸ್ಕೃತದ ಶುದ್ಧರೂಪ. ಕನ್ನಡದಲ್ಲಿ ಇದಕ್ಕೆ ತದ್ಭವವಾಗಿ 'ಮಸಣ' ಎಂಬ ಶಬ್ದವಿದೆ. ಜನರ ಆಡುಮಾತಿನಲ್ಲಿ 'ಮಸಾಣ' ಎಂಬುದು ಪ್ರಚಾರದಲ್ಲಿದೆ. ಆದರೆ ಈ ಎರಡೂ ಶಿಷ್ಟ ಜನರ ಆಡುಭಾಷೆಯಲ್ಲಿಯೂ ಕಾಣಬರುವುದಿಲ್ಲ. ಅವರವರ ಅಭ್ಯಾಸದ ದೆಸೆಯಿಂದಾಗಿ ಅವರು 'ಶ್ಮಶಾನ'ವನ್ನು 'ಸ್ಮಶಾನ' ವನ್ನಾಗಿ ಮಾಡಿದ್ದಾರೆ. ಇದೂ ತುಂಬ ವ್ಯಾಪಕವಾಗಿ ಉಪಯೋಗದಲ್ಲಿದೆ. ಸಂಸ್ಕೃತ ಭಾಷೆಯನ್ನು ಬಲ್ಲವರು ಮಾತ್ರ 'ಶ್ಮಶಾನ' ಶಬ್ದವನ್ನು ಉಪಯೋಗಿಸುತ್ತಾರೆ. 'ಸ್ಮಶಾನ' ಶಬ್ದವನ್ನು 'ಶ್ಮಶಾನ' ದ ಮತ್ತೊಂದು ತದ್ಭವರೂಪವಾಗಿ ಸ್ವೀಕರಿಸಬೇಕಾಗುತ್ತದೆ.

**ಶ್ರದ್ಧೆ - ಆಸಕ್ತಿ** ಈ ಎರಡೂ ಸಂಸ್ಕೃತ ಶಬ್ದಗಳೇ. ಶ್ರದ್ಧೆಯಲ್ಲಿ ನಂಬಿಕೆಗೆ ಮೊದಲ ಸ್ಥಾನ,

ತತ್ಪರತೆಯಲ್ಲಿ ಎರಡನೆಯ ಸ್ಥಾನ. ಆಸಕ್ತಿಯಲ್ಲಿ ಒಂದೇ ಮನಸ್ಸಿನಿಂದ ಇರುವುದು; ಅದೇ ತತ್ಪರತೆ. ಅದರಲ್ಲಿ ನಂಬಿಕೆಯು ಪ್ರಶ್ನೆ ಏಳುವುದಿಲ್ಲ.

**ಶ್ರೀ** ಇದಕ್ಕೆ ಅನೇಕ ಅರ್ಥಗಳಿವೆ. *೧. ಲಕ್ಷ್ಮೀ ೨. ಸಂಪತ್ತು ೩. ಕಾಂತಿ ೪. ಮಾತು ೫. ಬುದ್ಧಿಶಕ್ತಿ ೬. ಕೀರ್ತಿ.* ಈ ಅರ್ಥಗಳಲ್ಲಿ ಯಾವ ಒಂದು ಅರ್ಥವನ್ನು ಹಿಡಿದೂ ಶ್ರೀ ಎಂಬುದನ್ನು ಸ್ತ್ರೀ ದೇವತೆಗಳಿಗೆ ಅನ್ವಯಿಸಬಹುದು. ಸಂಪದ್ಯುಕ್ತಳಾದ ಸರಸ್ವತಿ ಎನ್ನುವ ಬದಲು ಶ್ರೀ ಸರಸ್ವತಿ ಎಂದು ಕನ್ನಡದಲ್ಲಿ ಹೇಳಬಹುದು. **ಶ್ರೀ, ಶ್ರೀಯುತ** ಎರಡನ್ನೂ ಸಾಮಾನ್ಯ ವ್ಯಕ್ತಿಗಳ ಹೆಸರಿನ ಹಿಂದೆ ಸೇರಿಸುವುದು ಉಚಿತ. ಶ್ರೀಮಾರ್ಕಂಡೇಯ, ಶ್ರೀಯುತ ಮಾರ್ಕಂಡೇಯ ಇವು ದೃಷ್ಟಾಂತಗಳು. ಶ್ರೀ ಎಂಬುದರಿಂದ ಕೂಡಿದ ಎಂದು ಶ್ರೀಯುತದ ಅರ್ಥ. **ಶ್ರೀಶ್ರೀಶ್ರೀ** ಎಂಬುದು ಮತೀಯ ಮಠಾಧಿಪತಿಗಳನ್ನು ಕುರಿತು ಮಾತನಾಡುವಾಗ, ಬರೆಯುವಾಗ ಸಂಪ್ರದಾಯದಲ್ಲಿ ಬಂದಿರುವ ಪ್ರಯೋಗಗಳು. ಇದು ಸ್ವಾಮಿಗಳೇ ಕೆಲವು ವೇಳೆ ನಿರೀಕ್ಷಿಸುವ ಸಂಬೋಧನೆ. ಕೆಲವು ವೇಳೆ ಭಕ್ತ ಮಹಾಶಯರು ಹೇರಿರುವ ಭಾರ. ಮೂರು ಶ್ರೀಗಳನ್ನು ಸೇರಿಸುವುದರಿಂದ ಗೌರವ ಹೆಚ್ಚುವುದಿಲ್ಲ. ತೆಗೆಯುವುದರಿಂದ ಕಡಿಮೆಯಾಗುವುದಿಲ್ಲ. ಆದರೆ ಸಂಪ್ರದಾಯ ನಿಷ್ಠರಿಗೆ ಬಹಳ ಇರಿಸುಮುರಿಸಾಗುತ್ತದೆ. ಅನೇಕ ಬಗೆಯ ತೊಂದರೆಗೆ ಸಿಕ್ಕಿಕೊಳ್ಳಬೇಕಾಗಬಹುದು. ಸಂಪ್ರದಾಯಕ್ಕೆ ಬದ್ಧರಾಗಿದ್ದರೆ ತೊಂದರೆ ತಪ್ಪುತ್ತದೆ. ಶ್ರೀಮತ್ ಎಂಬುದು ಮಠದ ಸ್ವಾಮಿಗಳಂಥ ವ್ಯಕ್ತಿಗೂ ಮಹಾಗ್ರಂಥ ಮುಂತಾದುವುಗಳಿಗೂ ಅನ್ವಯಿಸುತ್ತಾರೆ. ಶ್ರೀಮದ್ರಾಘವೇಂದ್ರ ಸ್ವಾಮಿಗಳು, ಶ್ರೀಮದ್ರಾಮಾಯಣದಲ್ಲಿ, ಶ್ರೀಮದ್ಭಾಗವತಕ್ಕೆ ಇತ್ಯಾದಿ. ಕೆಲವರು ಮನೆಯಲ್ಲಿ ಅಡಿಗೆಯೇನು ಎಂದು ಕೇಳಿದರೆ ಶ್ರೀಮದ್ಬೇಳೆಹುಳಿ ಎಂದು ಉತ್ತರ ಕೊಡುತ್ತಾರೆ. ಬೇಳೆ ಹುಳಿಗೆ ಹಾಸ್ಯದಿಂದ ಬಂದ ದೈವತ್ವ ಭಾವವಿರಬೇಕು! ಕೆಲವರು ಮಠಾಧೀಶರ ಹೆಸರಿನ ಹಿಂದೆ ಜಗದ್ಗುರು ಶ್ರೀ ೧೦೮, ೧೦೦೮ ಮುಂತಾಗಿ ಸೇರಿಸುತ್ತಾರಲ್ಲ ಇದಕ್ಕೇನು ಅರ್ಥ?

ಇದೊಂದು ವಿಚಿತ್ರವಾದ ಸಂಪ್ರದಾಯದ ಪರಿಣಾಮವೆಂದು ಮಠಾಧಿಪತಿಗಳಿಂದಲೇ ಕೇಳಿ ತಿಳಿದುಕೊಂಡಿದ್ದೇನೆ. ಸಾಮಾನ್ಯರನ್ನು ಸಂಬೋಧಿಸುವಾಗ ಶ್ರೀ ಎಂದು ಬರೆಯುತ್ತೇವೆ. ಕೆಲವರು ಶ್ರೀ ಶ್ರೀ ಎಂದು ಎರಡು ಸಲ ಹೇಳಿದರೆ ತೃಪ್ತರು. ಮಠಾಧಿಪತಿಗಳಿಗೆ ಶ್ರೀ ಶ್ರೀ ಶ್ರೀ ಎಂದು ಮೂರು ಸಲ ಹೇಳಿದರೆ ಅವರು ಪ್ರಸನ್ನರಾಗುತ್ತಾರೆ. ಇಲ್ಲದಿದ್ದರೆ ಅವರ ಹಿರಿಮೆಗೆ ಏನೋ ಮುಕ್ಕಾಯಿತೆಂದು ನಿಜವಾಗಿ ನಂಬುವ ಮಠಾಧೀಶರೂ ಅವರ ಶಿಷ್ಯರೂ ಇದ್ದಾರೆ. ದೇವತೆಗಳನ್ನು ಪೂಜಿಸುವಾಗ ನಾವು ಅವರ ಹೆಸರನ್ನು ಸಾಮಾನ್ಯವಾಗಿ ೧೦೮ ಸಲ ಹೇಳಿ ಅಷ್ಟೋತ್ತರ ಶತನಾಮಾವಳಿಯ ಪೂಜೆ ಮಾಡಿಸುತ್ತೇವೆ. ಕೆಲವು ಸಲ ತ್ರಿಶತಿ ಎಂದು ೩೦೦ ಹೆಸರು ಹೇಳುವುದುಂಟು. ಇಲ್ಲದಿದ್ದರೆ ೧೦೦೦ ಹೆಸರು ಹೇಳಿ ಸಹಸ್ರನಾಮಾರ್ಚನೆ ಮಾಡಿಸುವುದೂ ಉಂಟಷ್ಟೆ! ಹೀಗೆ ದೇವತೆಗಳನ್ನು ಪೂಜಿಸುವ ಸಂಪ್ರದಾಯವನ್ನು ಮಠಾಧಿಪತಿಗಳಿಗೇಕೆ ಉಪಯೋಗಿಸಬಾರದೆಂದು ಕೆಲವರು ಭಕ್ತ ಮಹಾಶಯರು ಜಗದ್ಗುರು ಶ್ರೀ ೧೦೮ ಮಠಾಧಿಪತಿಗಳು ದಯಮಾಡುತ್ತಾರೆ ಎಂದು ಪ್ರಚಾರ ಮಾಡಿದರು. ಅಲ್ಲಿ ಶ್ರೀ ೧೦೮ ಎಂದರೆ ೧೦೮ ಸಲ ಹೇಳಿದಂತಾಯಿತು ಎಂದರ್ಥ. ಸದ್ಯಕ್ಕೆ ಇದು ೧೦೦೮ ಕ್ಕೆ ನಿಂತಿದೆ. ಭಕ್ತರ ಗುರುಭಕ್ತಿ ಇನ್ನೂ ಅದಕ್ಕಿಂತ ಹೆಚ್ಚಾಗಿಲ್ಲ. ನಾವು ಅಷ್ಟರಲ್ಲಿ ತೃಪ್ತಿ ಪಡಬೇಕು. ಈ ಶ್ರೀ ೧೦೮, ಶ್ರೀ ೧೦೦೮ ಪ್ರಚಾರಕ್ಕೆ ಬಂದ ಮೇಲೆ ಅದಕ್ಕೆ ಬೇರೆ ಏನಾದರೂ ಅಂತರಾರ್ಥವನ್ನು ಹುಡುಕುವ ಅನಗತ್ಯ ಪ್ರಯತ್ನಗಳೂ ನಡೆದಿವೆ.

**ಶ್ರೀಕಂಡ** ಎಂದರೆ 'ಗಂಧದ ಮರ' ಎಂದರ್ಥ. ಆದರೆ ಮರಾಠಿಯಲ್ಲಿ 'ಶ್ರೀಕಂಡ' ಎಂಬುದು

ಒಂದು ಬಗೆ ರುಚಿಕರವಾದ, ಮೊಸರು ಸಕ್ಕರೆ ಬೆರಸಿ ಮಾಡಿದ ಅಡುಗೆ. ಪೂರಿಯ ಜೊತೆ ಭಕ್ಷಿಸಲು ಬಲು ಸೊಗಸು. ಅದೇ ಬೇರೆ ಶಬ್ದ.

**ಶ್ರೀಮತಿ** ಶ್ರೀಮಾನ್ ಎಂಬುದು ಪುರುಷರ ಹೆಸರಿಗೆ ಗೌರವಸೂಚಕವಾಗಿ ಸೇರುತ್ತದೆ. ಹಾಗೆಯೇ ಶ್ರೀಮತಿ ಎಂಬುದು ಹೆಂಗಸರ ಹೆಸರಿಗೆ ಗೌರವಸೂಚಕವಾಗಿ ಸೇರುತ್ತದೆ. ಈ ಶಬ್ದ ಸಂಸ್ಕೃತದ ಶ್ರೀಮತೀ ಎಂಬ ರೂಪದ ತದ್ಭವ. ಶ್ರೀ ಅಸ್ಯಾಃ ಅಸ್ತಿ = ಆಕೆಯಲ್ಲಿ ಶ್ರೀ ಇದೆ ಎಂಬುದು ಅರ್ಥ. ಶ್ರೀ ಎಂದರೆ ಸಂಪತ್ತು, ಕಾಂತಿ, ಶೋಭೆ, ಬುದ್ಧಿ, ಕೀರ್ತಿ ಇತ್ಯಾದಿ ಅರ್ಥಗಳಿವೆ. ಇವುಗಳಲ್ಲಿ ಯಾವುದು ಒಂದಿದ್ದರೂ ಸಾಕು. ಆಕೆ ಶ್ರೀಮತಿ. ಶ್ರೀಮತಿ ಶಬ್ದದ ಮುಂದೆ ಯಾರಾದರೂ ಗಂಡಸಿನ ಹೆಸರಿದ್ದರೆ ಅದು ಆಗ ಅವರ ಪತ್ನಿ ಎಂಬುದನ್ನು ತಿಳಿಸುತ್ತದೆ. ಅದು Mr ಮತ್ತು Ms ಎಂಬ ಇಂಗ್ಲಿಷ್ ಭಾಷೆಯ ಸಂಬೋಧನೆಯ ಮಾರ್ಗವನ್ನು ಅನುಸರಿಸಿದವರು, ಮಾಡಿಕೊಂಡಿರುವ ಸಂಪ್ರದಾಯ. ಶ್ರೀಮತಿಯೆಂಬುದನ್ನು ಮದುವೆಯಾದ ಹೆಂಗಸರಿಗೆ ಮಾತ್ರ ಉಪಯೋಗಿಸಬೇಕೆಂಬ ಯಾವ ವ್ಯಾಕರಣ ನಿಯಮವೂ ಇಲ್ಲ. ಗೌರವಾರ್ಹವಾದ ಎಲ್ಲ ಹೆಂಗಸರಿಗೂ ಇದನ್ನು ಅನ್ವಯಿಸಬಹುದು. ಓಟು ಮಾಡುವ ಹಕ್ಕು ಬಂದ ಎಲ್ಲ ಹೆಂಗಸರಿಗೂ ಅದು ಅನ್ವಯಿಸಲು ಯೋಗ್ಯವಾದುದು. ಮದುವೆಯಾಗದಿದ್ದರೂ ವಿಧವೆಯರಾಗಿದ್ದರೂ ಹೆಂಗಸರು ಸಂಪದ್ಯುಕ್ತರೂ, ಕಾಂತಿಯುಕ್ತರೂ, ಕೀರ್ತಿಭಾಜನರೂ ವಾಗ್ಮಿಗಳೂ ಬುದ್ಧಿವಂತೆಯರೂ ಆಗಿರಬಹುದು. ಅಂಥವರನ್ನು ಶ್ರೀಮತಿ ಎಂದು ಗೌರವಯುಕ್ತವಾಗಿ ಕರೆಯುವುದು ತಪ್ಪಲ್ಲ. ಚಿಕ್ಕವರಿಗೆ ಕುಮಾರಿ ಇದ್ದೇ ಇದೆ. **ಶ್ರೀ, ಶ್ರೀಮತಿ** ಇವನ್ನು ಆಮಂತ್ರಣ ಪತ್ರಿಕೆಯಲ್ಲಿ ಎರಡು ರೀತಿಯಲ್ಲಿ ಮುದ್ರಿಸುತ್ತಾರೆ. ಒಂದು ಉತ್ತಮ ಪುರುಷದಲ್ಲಿ ಇನ್ನೊಂದು ಪ್ರಥಮಪುರುಷದಲ್ಲಿ.

೧. ಶ್ರೀ ಮತ್ತು ಶ್ರೀಮತಿ ಇಂಥವರು ತಮ್ಮನ್ನು ಇಂಥ ಶುಭ ಕಾರ್ಯಕ್ಕೆ ಆಹ್ವಾನಿಸುತ್ತಿದ್ದಾರೆ. ಹೀಗಿದ್ದರೆ ಕೆಳಗೆ ಸಹಿಯ ಸ್ಥಳದಲ್ಲಿ ಏನೂ ಇರುವುದಿಲ್ಲ. ಮೊದಲನೆಯದು ಒಂದು ಹೇಳಿಕೆ ಅಷ್ಟೆ!

೨. ನಮ್ಮ ಮನೆಯಲ್ಲಿ ಇಂಥ ಶುಭಕಾರ್ಯ ನಡೆಯುವಾಗ ತಾವು ಬರಬೇಕು ಎಂದು ಮುದ್ರಿಸಿದರೆ ಕೆಳಗೆ ಸಹಿಯ ಸ್ಥಳದಲ್ಲಿ ಶ್ರೀ ಮತ್ತು ಶ್ರೀಮತಿ ಎಂಬುದು ಇಲ್ಲದೆ ಹೆಸರುಗಳನ್ನು ಮಾತ್ರ ಮುದ್ರಿಸಬೇಕು. ಹಾಗೆ ಶ್ರೀ ಸೇರಿಸುವುದು ಶಿಷ್ಟವಲ್ಲ. ಮೇಲೆ ಹೆಸರುಗಳು ಇರುವುದಿಲ್ಲ. ಇದನ್ನು ಕ್ರಮ ಎಂದು ನಾವು ಇಂಗ್ಲಿಷ್ ಭಾಷೆಯ ಆಹ್ವಾನ ಪತ್ರಿಕೆಗಳಿಂದ ಕಲಿತಿದ್ದೇವೆ. ಆದರೆ ಅನೇಕರು ತಪ್ಪಾಗಿ ಮುದ್ರಿಸುತ್ತಾರೆ. ತಿಳಿವಳಿಕೆ ಹರಡಿದರೆ ತಪ್ಪು ಕಡಮೆಯಾಗುತ್ತದೆ. ನೋಡಿ: ಕುಮಾರಿ.

**ಶ್ರೀವಾಸ್ತವ ಎಂಬುದು ಸರಿಯೆ?** ಶ್ರೀವಾಸ್ತವ ಎಂಬುದು ಸರಿಯಾದ ಹೆಸರು. ಅದರಲ್ಲಿ ತಪ್ಪಿಲ್ಲ. ಶ್ರೀವತ್ಸ ಬೇರೆ ಶ್ರೀವಾಸ್ತವ ಬೇರೆ. ವಸ್ತು ಎಂಬುದರಿಂದ ವಾಸ್ತವ ಶಬ್ದ ವ್ಯುತ್ಪತ್ತಿ ಹೊಂದಿದೆ. ಅನೇಕರು ಆ ಹೆಸರನ್ನು ಇಟ್ಟುಕೊಂಡಿದ್ದಾರೆ. ಉತ್ತರ ದೇಶದಲ್ಲಿ ಇದು ಒಂದು ವಂಶದ ಹೆಸರಾಗಿಯೂ ಇದೆ. ಇದಕ್ಕೆ ಅರ್ಥ: ಸರಿಯಾದ, ನಿಜವಾದ, ತಾಜಾ, ಸತ್ವಪೂರ್ಣ.

**ಶ್ರೀಶ ಸರಿಯೇ ಶ್ರೀಷ ಸರಿಯೇ?** ಇದು ಶ್ರೀ + ಈಶ = ಲಕ್ಷ್ಮಿಯ ಗಂಡ ಎಂಬ ಅರ್ಥವುಳ್ಳ ಪದ. ಶ್ರೀಶ ಸರಿ.

**ಶ್ರುತಿ** 'ಶ್ರುತಿ-ಶೃತಿ' ಈ ಎರಡು ರೂಪಗಳಲ್ಲಿ ಯಾವುದು ಸರಿ? **'ಶ್ರುತಿ'** ಸರಿಯಾದ ಶಬ್ದ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. ಕಿವಿ, ಕಿವಿಗೆ ಬಿದ್ದ ವರ್ತಮಾನ, ಕೇಳುವುದು, ವೇದ, ನಾಲ್ಕು ಎಂಬ ಸಂಖ್ಯೆ, ಒಂದು ಸದ್ದು. ಸಂಗೀತದಲ್ಲಿ ಅನೇಕ ಶ್ರುತಿಗಳಿವೆ. ಶ್ರುತಿಗಾರ,

ಶ್ರುತಿಕೊಡು, ಶ್ರುತಿಯುಕ್ತ ಮುಂತಾಗಿ ಅನೇಕ ಶಬ್ದಗಳು ಬೆಳೆದು ಬಂದಿವೆ. ಕನ್ನಡದಲ್ಲಿ ಈ ಶಬ್ದದ ಕಾಗುಣಿತವನ್ನು ತಪ್ಪಾಗಿ ಬರೆದು ಶೃತಿ ಎಂಬ ಶಬ್ದ ತಲೆಯೆತ್ತಿದೆ. ಅದನ್ನು ಮರೆತು ಸರಿಯಾಗಿ **ಶ್ರುತಿ** ಎಂದು ಬರೆಯುವುದನ್ನು ಕಲಿಯಬೇಕು. **ಶೃತಿ** ಎಂಬ ಶಬ್ದವೇ ಇಲ್ಲ.

**ಶ್ರೇಯ** ಇದು ನಪುಂಸಕಲಿಂಗದ ಸಂಸ್ಕೃತ ಶಬ್ದ. ಶ್ರೇಯಸ್ ಎಂದರೆ ಮೋಕ್ಷ, ಏಳಿಗೆ, ಮಂಗಳ, ಶ್ರೇಷ್ಠ. ಈ ಹೆಸರನ್ನು ಗಂಡು ಮಕ್ಕಳಿಗೆ ಇಡಬಹುದು. ಹೆಣ್ಣು ಮಗುವಿಗಾದರೆ ಶ್ರೇಯಸೀ ಎಂದಿಡಬೇಕು. ಅದು ಸ್ತ್ರೀಲಿಂಗ ಶಬ್ದ. ಅಲ್ಲದೆ ಅದಕ್ಕೆ ಪುಣ್ಯ, ಸುಕೃತ ಎಂಬ ಅರ್ಥವಿದೆ.

**ಶ್ರೇಯೋಭಿಲಾಷಿ** ಶ್ರೇಯಸ್+ ಅಭಿಲಾಷಿ= ಶ್ರೇಯೋಭಿಲಾಷಿ. ಇದು ಸರಿಯಾಗಿದೆ. ಸಂಧಿಯಾಗುವಾಗ ಶ್ರೇಯಸ್, ತಪಸ್ ಮುಂತಾದ ಸಕಾರಾಂತ ಶಬ್ದಗಳಿಗೆ ಶ್ರೇಯಃ, ತಪಃ ಎಂಬ ರೂಪ ಬರುತ್ತದೆ. ಆ ಬಳಿಕ ಸಂಧಿಯಾಗುತ್ತದೆ. ಇದು ವಿಸರ್ಗ ಸಂಧಿ. ವಿಸರ್ಗ ಸಂಧಿಯಲ್ಲಿ ಅನೇಕ ಬಗೆಗಳಿವೆ. ವಿದ್ಯಾರ್ಥಿಗಳು ಅವುಗಳನ್ನು ಉಪಾಧ್ಯಾಯರ ಮೂಲಕ ತಿಳಿದುಕೊಳ್ಳಬೇಕು. ಶ್ರೇಯಸ್ಸು ಉಂಟಾಗಲಿ ಎಂದು ಅಪೇಕ್ಷೆ ಪಡುವವನು ಎಂದರ್ಥ.

**ಶ್ಲೀಲ - ಅಶ್ಲೀಲ** ಸಂಸ್ಕೃತದ ಶ್ಲೀಲ ಶಬ್ದಕ್ಕೆ ಸಂಪತ್ತಿನಿಂದ ಕೂಡಿದ, ಐಶ್ವರ್ಯವುಳ್ಳ ಎಂಬರ್ಥಗಳಿವೆ. ಅಶ್ಲೀಲ ಎಂದರೆ ಅಸಭ್ಯವಾದ, ಗ್ರಾಮ್ಯವಾದ, ಅನಾಗರಿಕವಾದ ಎಂದರ್ಥ. ಅನೇಕ ವೇಳೆ ಇಂಥ ಮಾತುಗಳಿಂದ ನಾಚಿಕೆ, ಜುಗುಪ್ಸೆ, ಅಮಂಗಳಗಳು ಉಂಟಾಗುತ್ತವೆಂದು ಅಭಿಪ್ರಾಯವಿದೆ. ಇದು ಕಾವ್ಯದೋಷ. ಶೀಲ ಶಬ್ದಕ್ಕೂ ಈ ಶಬ್ದಗಳಿಗೂ ಸಂಬಂಧವಿಲ್ಲ.

**ಶ್ಲೇಷೆ** ಶ್ಲೇಷೆ ಎಂದರೆ ಒಂದು ಶಬ್ದಕ್ಕೆ ಎರಡು ಅರ್ಥಗಳು ಇರುವುದು.

> ***ಶ್ರೀ ವಿಶದವರ್ಣೆ ಮಧುರಾ***
> ***ರಾವೋಚಿತೆ ಚತುರರುಚಿರಪದರಚನೆ ಚಿರಂ***
> ***ದೇವಿ ಸರಸ್ವತಿ ಹಂಸೀ***
> ***ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೋಳ್***

ಈ ಕಂದಪದ್ಯವು ಕವಿರಾಜ ಮಾರ್ಗದ ಮೊದಲನೆಯ ಪರಿಚ್ಛೇದದಲ್ಲಿ ಮೂರನೆಯ ಪದ್ಯವಾಗಿದೆ. ಇದು ತುಂಬ ಸುಂದರವಾದ ಕಂದಪದ್ಯ. ಸರಸ್ವತಿಯನ್ನು ವರ್ಣಿಸಿ ಮಾನಸ ಸರೋವರದಲ್ಲಿ ಹಂಸವು ನೆಲಸುವಂತೆ ಆ ದೇವತೆಯು ತನ್ನ ಮನಸ್ಸಿನಲ್ಲಿ ನೆಲಸಲಿ ಎಂದು ಕವಿ ಪ್ರಾರ್ಥಿಸಿದ್ದಾನೆ. ಇಲ್ಲಿ ವಿಶದವರ್ಣೆ, ಮಧುರಾರಾವ, ಚತುರ ರುಚಿರ ಪದರಚನೆ, ಮನ್ಮಾನಸ - ಈ ಶಬ್ದಗಳು ಸರಸ್ವತಿಗೂ ಹಂಸಕ್ಕೂ ಅನ್ವಯಿಸುವಂತೆ ಇವೆ. ವರ್ಣ ಎಂಬುದೂ ಅಕ್ಷರಗಳಿಗೂ, ಬಿಳಿಯ ಬಣ್ಣಕ್ಕೂ ಅನ್ವಯವಾಗುತ್ತದೆ. ಹಂಸಕ್ಕೆ ಬಿಳಿಯ ಬಣ್ಣವೂ ಸರಸ್ವತಿಗೆ ಬಿಳಿಯ ಬಣ್ಣದ ಜೊತೆಗೆ ಶುದ್ಧ ಅಕ್ಷರಗಳೂ ಅನ್ವಯಿಸುತ್ತವೆ. ಮಧುರವಾದ ಆರಾವ = ಶಬ್ದ. ಇದು ಮಾತಿನ ಧ್ವನಿಗೂ ಹಂಸದ ಕೂಗಿಗೂ ಅನ್ವಯವಾಗುತ್ತದೆ. ಹಾಗೆಯೇ ಪದರಚನೆ ಎಂಬುದು ಶಬ್ದಗಳ ನಿರ್ಮಾಣಕ್ಕೂ ಹಂಸದ ಕಾಲುಗಳ ಚಲನೆಗೂ ಅನ್ವಯವಾಗುತ್ತದೆ. ಮಾನಸ ಎಂಬುದು ಮನಸ್ಸಿಗೂ ಮಾನಸ ಸರೋವರಕ್ಕೂ ಅನ್ವಯವಾಗುತ್ತದೆ. ಓದಿದಷ್ಟೂ ಅರ್ಥವಿಸ್ತಾರದಿಂದ ಸಂತೋಷವನ್ನು ನೀಡುವ ಪದ್ಯ ಇದು.

**ಶ್ವಪಚ** ಶ್ವ ಎಂದರೆ ನಾಯಿ. ಪಚ್‌ಧಾತುವಿಗೆ ಬೇಯಿಸು ಎಂದರ್ಥ. ನಾಯಿಯ ಮಾಂಸವನ್ನು ಬೇಯಿಸಿ ತಿನ್ನುತ್ತಾನೆ ಎಂದು ಶ್ವಪಚ ಎಂಬ ರೂಪವಾಯಿತು. ಇದಕ್ಕೆ ಶ್ವಪಾಕ ಎಂಬ

ಬೇರೊಂದು ರೂಪವೂ ಇದೆ. ಎರಡಕ್ಕೂ ಒಂದೇ ಅರ್ಥ =ನಾಯಿಯ ಮಾಂಸವನ್ನು ತಿನ್ನುವವನು. ವಿಶ್ವಾಮಿತ್ರನು ನಾಯಿಯ ಮಾಂಸವನ್ನು ತಿಂದ ಕಥೆಯೂ ಇದೆ.

**ಶ್ವೇತಪತ್ರ** ಎಂಬುದು ಇಂಗ್ಲಿಷಿನ White paper ಎಂಬುದರ ಕನ್ನಡ ಅನುವಾದ. ಇದು ವಿಶಿಷ್ಟವಾಗಿ ಬ್ರಿಟನ್ನಿನ ರಾಜಕೀಯದಲ್ಲಿ ಹೆಚ್ಚು ಪ್ರಚಾರದಲ್ಲಿದ್ದ ಶಬ್ದ. ಭಾರತಕ್ಕೆ ಅಲ್ಲಿಂದಲೇ ಬಂದಿದೆ. ಸರಕಾರ ತನ್ನ ಕಚೇರಿಗಳ ಕಡೆಯಿಂದ ಯಾವುದಾದರೂ ವಿಷಯದಲ್ಲಿ ಅಧಿಕಾರಯುತವಾಗಿ ವಿಚಾರಣೆಯನ್ನು ನಡೆಸಿದ್ದರೆ ಅಂಥ ವಿಚಾರಣೆಯ ಸಂಪೂರ್ಣ ವಿವರಣೆಯನ್ನು ನೀಡುವ ಸರಕಾರೀ ವರದಿ. ಇದನ್ನು ಶಾಸನಸಭೆಯು ತರಿಸಿ ಆ ಬಗ್ಗೆ ಚರ್ಚೆ ನಡೆಸಬಹುದು. ಆಳುವ ಪಕ್ಷವು ತನ್ನ ಪ್ರಾಮಾಣಿಕತೆಯನ್ನು ಸಾಬೀತುಮಾಡಲು ಇದೊಂದು ಒಳ್ಳೆಯ ಸಾಧನ.

## ಷ

**ಷಂಡ, ಹಿಜಡ, ನಾಮರ್ದ** ಷಂಡ ಸಂಸ್ಕೃತದ ಶಬ್ದ. ಇದಕ್ಕೆ ನಪುಂಸಕ ಎಂದು ಒಂದರ್ಥ. ಇದಲ್ಲದೆ ಗೂಳಿ, ಎತ್ತು ಎಂಬ ಅರ್ಥವೂ ಇದೆ. ಕಮಲ ಮುಂತಾದ ಹೂವುಗಳ ಸಮೂಹಕ್ಕೆ ಕೂಡ ಈ ಶಬ್ದವನ್ನು ಉಪಯೋಗಿಸುತ್ತಾರೆ. ಅಂತಃಪುರದಲ್ಲಿರುವ ಗಂಡಾಳುಗಳಿಗೂ ಈ ಶಬ್ದವನ್ನು ಪ್ರಯೋಗಿಸುತ್ತಾರೆ. ಷಂಥ ಎಂಬ ಶಬ್ದವೂ ಇದೆ. **ಹಿಜಡ** ಇದು ಹಿಂದೀಭಾಷೆಯ ಶಬ್ದ. ಇದಕ್ಕೆ ನಪುಂಸಕ ಎಂದೇ ಅರ್ಥ. ಹೆಂಗಸಿನ ಸ್ವಭಾವದ ಮನುಷ್ಯ. ನಾಮರ್ದ, ಈ ಪಾರಸೀ ಭಾಷೆಯ ಶಬ್ದಕ್ಕೆ ನಪುಂಸಕ ಎಂದೇ ಅರ್ಥ.

**ಷಟ್ಪದಿಗಳ ೩ ಮತ್ತು ೬ನೇ ಸಾಲುಗಳಲ್ಲಿ ಕೊನೆಯ ಅಕ್ಷರ ಗುರುವಾಗಬೇಕೆಂಬ ಲಕ್ಷಣವಿದೆ. ಆದರೆ ಅನೇಕ ಕಡೆ ಅದು ಲಘುವಾಗಿಯೇ ಇರುತ್ತದೆಯಲ್ಲ! ಏಕೆ?**

ಷಟ್ಪದಿಯಲ್ಲಿ ೩ ಮತ್ತು ೬ನೇ ಸಾಲುಗಳ ಲಕ್ಷಣ ಸರಿಯಾಗಿದೆ. ಅದನ್ನು ತಿದ್ದಬೇಕಾಗಿಲ್ಲ. ಅಲ್ಲಿರುವ ಸ್ವಾರಸ್ಯವೆಂದರೆ ನೀವು ಪದ್ಯವನ್ನು ಓದುವಾಗ ೩ ಮತ್ತು ೬ ನೇ ಸಾಲುಗಳಲ್ಲಿ ಕೊನೆಗೆ ನಿಲ್ಲಿಸುವಾಗ ಆ ಲಘುವನ್ನು ಗುರುವಾಗಿಯೇ ಉಚ್ಚರಿಸುತ್ತೀರಿ. ಅದು ಲಘುವಾಗಿದ್ದರೂ ಅದನ್ನು ಗುರುವೆಂದೇ ಭಾವಿಸಬೇಕು. ಇನ್ನೊಮ್ಮೆ ಆ ಸಾಲುಗಳನ್ನು ಓದಿ ನೋಡಿ. ನಿಮಗೇ ಅದು ಅನುಭವಕ್ಕೆ ಬರುತ್ತದೆ.

**ಷಡ್ಯಂತ್ರ** ಎಂದರೆ ಪಿತೂರಿ, ಒಳಸಂಚು ಎಂದರ್ಥ. ಈ ಶಬ್ದವನ್ನು ಮಹಾರಾಷ್ಟ್ರದಲ್ಲಿಯೂ, ಉತ್ತರ ಕರ್ನಾಟಕದಲ್ಲಿಯೂ ಅಧಿಕವಾಗಿ ಉಪಯೋಗಿಸುತ್ತಾರೆ. ಹಿಂದೀಭಾಷೆಯಲ್ಲಿ ಇದರ ಪ್ರಯೋಗ ಅಧಿಕವಾಗಿದೆ. ಹಿಂದೀ ನಿಘಂಟುಗಳಲ್ಲಿ ಈ ಶಬ್ದಕ್ಕೆ ಕಪಟಪೂರ್ಣ ಆಯೋಜನ ಎಂದು ಅರ್ಥವನ್ನೂ ಕೊಡುತ್ತಾರೆ. ಅರ್ಥ ಸ್ಪಷ್ಟವಾದರೂ ಇದರ ವ್ಯುತ್ಪತ್ತಿಯ ಬಗ್ಗೆ ಸ್ಪಷ್ಟವಾಗಿ, ನಿರ್ಧಾರವಾಗಿ ಹೇಳುವುದು ಕಷ್ಟ. ಷಟ್ + ಯಂತ್ರ ಎಂಬುದು ಸಂಧಿಯಾದರೆ ಷಡ್ಯಂತ್ರ ಎಂದಾಗುತ್ತದೆ. ಆದರೆ ಆರು ಯಂತ್ರಗಳಾವುವು ಎಂಬುದರ ವಿವರ ಸಿಕ್ಕುವುದಿಲ್ಲ.

**ಷಾಣ್ಮಾಸಿಕ** ಎಂದರೆ ಆರು ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ. Halfyearlyಎಂಬ ಇಂಗ್ಲಿಷ್ ಶಬ್ದದ ಸಮ. ಆರು ತಿಂಗಳಿಗೆ ಸಂಬಂಧಿಸಿದ ಎಂಬ ಗುಣವಾಚಕವೂ ಆಗುತ್ತದೆ. ಯಾವ ನಾಮಪದಕ್ಕೆ ಆದರೂ ಅದನ್ನು ವಿಶೇಷಣವಾಗಿ ಉಪಯೋಗಿಸಬಹುದು. ಉದಾಹರಣೆಗೆ ಷಾಣ್ಮಾಸಿಕ ವ್ರತ, ಷಾಣ್ಮಾಸಿಕ ಪರೀಕ್ಷೆ ಇತ್ಯಾದಿ.

**ಷಾಹಿ ಎಂಬ ಶಬ್ದ ಆದಿಲ್‌ಷಾಹಿ ಶಬ್ದಕ್ಕೆ ಸಂಬಂಧಪಟ್ಟದ್ದೇ?** ಷಾಹ ಎನ್ನುವುದು ಪಾರಸೀ ಮತ್ತು ಉರ್ದು ಶಬ್ದ. ಇದಕ್ಕೆ ದೊರೆ ಎಂದರ್ಥ. ರಾಜ್ಯದ ದೊರೆ, ಚದುರಂಗದ ದೊರೆ, ಇಸ್ಪೀಟಿನ ದೊರೆ, ಬಾದ್‌ಷಾ ಎಂಬ ರೂಪವೂ ಇದೆ. ಷಹನ್‌ಷಾ ಎಂದರೆ ದೊರೆಗಳ ದೊರೆ, ಚಕ್ರವರ್ತಿ. ಷಾಹಿ ಎಂಬುದು ಗುಣವಾಚಕದ ಅರ್ಥ. ದೊರೆಯ, ರಾಜನ, ರಾಜನಿಗೆ ಸಂಬಂಧಿಸಿದ. ಷಹಜಾದ ಎಂದರೆ ಆಳುವ ರಾಜನ ಮಗ. ಷಹಜಾದಿ ಎಂದರೆ ಆಳುವ ರಾಜನ ಮಗಳು. ಬಾದಷಾ, ಪಾಷಾ, ಬಾಷಾ ಎಂಬ ಎಲ್ಲ ಶಬ್ದಗಳೂ ಪಾರಸೀ ಭಾಷೆಯ ಷಾ ಎಂಬುದರಿಂದ ಬಂದವು. ಇವಕ್ಕೆಲ್ಲ ಮೂಲ ಸಂಸ್ಕೃತದ ಕ್ಷತ್ರಿಯ ಎಂಬ ಶಬ್ದ. ಸಂಸ್ಕೃತದ ಕ್ಷತ್ರಿಯ ಪಾರಸೀ ಭಾಷೆಯಲ್ಲಿ ಷಾ ಆಗಿ ನಮ್ಮಲ್ಲಿ ಮೊಘಲರ ಆಡಳಿತ ಬಂದಾಗ ಮತ್ತೆ ಇಲ್ಲಿಗೆ ಷಾ ಆಗಿ ಬಂದಿರುವ ಕತೆ ಸ್ವಾರಸ್ಯವಾಗಿದೆ. ಷಾಹಿಜೀರ ಎಂಬ ಪದವೂ ಒಂದಿದೆ. ಇದು ಉತ್ತಮ ಬಗೆಯ, ಪಲಾವ್ ಮಾಡಲು ಹಾಕುವ ಜೀರಿಗೆ.

**ಷಡ್ಡ** ಇದು ದೇಶ್ಯ ಶಬ್ದವೇ ಇರಬಹುದು. ತೆಲುಗಿನಲ್ಲಿ ಸಡ್ಡಕ, ಷಡ್ಡಕ ಎಂಬ ರೂಪಗಳಿವೆ. ಮರಾಠೀ ಭಾಷೆಯಲ್ಲಿ ಸಾಡೂ, ಸಾಢೂ ಎಂದೂ, ಹಿಂದೀ, ಪಂಜಾಬೀ, ಸಿಂಧಿಗಳಲ್ಲಿ ಸಾಧೂ ಎಂದೂ, ಕಾಶ್ಮೀರಿಯಲ್ಲಿ ಸೋಜಿವಾ ಎಂದೂ ಇದೆ. ಭಾರತದ ಇತರ ಭಾಷೆಗಳಲ್ಲಿಯೂ ಈ ಶಬ್ದವಿದೆ. ಸಂಸ್ಕೃತದಲ್ಲಿ ಇದಕ್ಕೆ ಸಮಾನವಾದ ಶಬ್ದವಿಲ್ಲ. ಈ ಶಬ್ದಕ್ಕೆ ಅರ್ಥ ಕನ್ನಡದಲ್ಲಿ ಹೆಂಡತಿಯ ತಂಗಿಯ ಅಥವಾ ಅಕ್ಕನ ಗಂಡ ಎಂದು. ಇತರ ಭಾಷೆಗಳಲ್ಲಿಯೂ ಅದೇ ಅರ್ಥ. ಇದರ ಮೂಲ ಮಾತ್ರ ಇನ್ನೂ ನಿಶ್ಚಯವಾಗಿ ಹೇಳಲಾಗುವುದಿಲ್ಲ. ಕನ್ನಡದಲ್ಲಿ ಸಡ್ಡಕ, ಷಡ್ಕ ಎಂಬ ರೂಪಗಳೂ ಉಂಟು. ಷಡ್ಕ ಎಂಬುದು ಅತ್ಯಪೂರ್ವವಾಗಿ ಪ್ರಯೋಗವಾಗುತ್ತದೆ. ಒಂದು ಗಾದೆ ಇದೆ: ಸಡ್ಡಕನಿಗಿಂತ ನೆಂಟನಿಲ್ಲ, ಲಡ್ಡುಗೆಗಿಂತ ಭಕ್ಷ್ಯವಿಲ್ಲ. ಸಡ್ಡಕನ ಗೌರವ ಇಲ್ಲಿ ಸುಸ್ಪಷ್ಟ.

**ಷೋಡಶೋಪಚಾರ** ದೇವತೆಗಳನ್ನು ಪೂಜಿಸುವಾಗ ಮಾಡಬೇಕಾದ ೧೬ ಉಪಚಾರಗಳು. ಇವು ಹೀಗಿವೆ: ಆವಾಹನೆ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ ಯಜ್ಞೋಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನಮನ, ಪ್ರದಕ್ಷಿಣ, ಮಂತ್ರ ಪುಷ್ಪ. ಸಾಮಾನ್ಯವಾಗಿ ಮನೆಯಲ್ಲಿ ದೇವತಾರ್ಚನೆ ಮಾಡುವಾಗ ಎಲ್ಲರೂ ಅನುಸರಿಸುವ ಮಾರ್ಗ ಇದು. ಇದಲ್ಲದೆ ಇತರ ಬಗೆಗಳ ಉಪಚಾರಗಳೂ ಇವೆ. ಪೂಜಿಸುವವನ ಅನುಕೂಲಕ್ಕೆ ತಕ್ಕಂತೆ ಉಪಚಾರಗಳು ಮೂರೇ ಆಗಬಹುದು, ಮೂವತ್ತೇ ಆಗಬಹುದು. ಸ್ನಾನ, ಪೂಜೆ, ನೈವೇದ್ಯ ಇವು ಮುಖ್ಯ.

# ಸ

**ಸಂಕಲ್ಪ - ಸಾಕ್ಷಾತ್ಕಾರ** ಸಂಕಲ್ಪ ಬಹಳ ಅರ್ಥವತ್ತಾದ ಶಬ್ದ. ಇದಕ್ಕೆ ಅನೇಕ ಅರ್ಥಗಳಿವೆ. ೧. ಮನಸ್ಸಿನಲ್ಲಿ ಅಪೇಕ್ಷಿಸುವುದು ೨. ಇಚ್ಛೆ, ಬಯಕೆ ೩. ಬುದ್ಧಿ ೪. ಯಾವುದಾದರೂ ದೈವಿಕವಾದ ಪವಿತ್ರ ಕಾರ್ಯಗಳಿಗಾಗಿ ಮಾಡುವ ಪ್ರತಿಜ್ಞೆ, ಬೌದ್ಧಿಕ ನಿರ್ಧಾರ. **ಸಂಕಲ್ಪಃ ಕರ್ಮ ಮಾನಸಾಮ್** ಇದು ಮಾನಸವ್ಯಾಪಾರ. **ಸಮ್ಯಕ್ ಕಲ್ಪತೇ ಅನೇನ ಇತಿ ಸಂಕಲ್ಪಃ** ಹೀಗೆ ಈ ಶಬ್ದದ ವಿವರಣೆ - ಯಾವುದಾದರೂ ವ್ರತ ಮಾಡುವಾಗ 'ಇತಿ ಸಂಕಲ್ಪ್ಯ' ಎಂದು ಹೇಳಿಯೇ ಮುಂದೆ ಪೂಜೆ ಮಾಡುವುದು. ಶಿಷ್ಟ ಸಂಪ್ರದಾಯದಲ್ಲಿ ಸಂಕಲ್ಪ ಮಾಡಿ ಅಥವಾ ಸಂಕಲ್ಪ ಮಾಡಿಸಿ ಎಂದು ಆರಂಭದಲ್ಲಿ ಹೇಳುವುದು ಪದ್ಧತಿ. ಅದು ಎಲ್ಲ ಪೂಜೆಗೂ ಆದಿ. **ಸಾಕ್ಷಾತ್ಕಾರ** ಎಂದರೆ ಪ್ರತ್ಯಕ್ಷವಾದ ಜ್ಞಾನ. ಅಂದರೆ

ಸಂಪೂರ್ಣವಾಗಿ ಮನಸ್ಸಿಗೆ ಅರ್ಥ ಸುವ್ಯಕ್ತವಾಗುವುದು. ಇನ್ನೊಂದು ಅರ್ಥ ಕಣ್ಣೆದುರಿಗೆ ನಿಲ್ಲುವುದು. ಇದು ಮಂತ್ರದ ಅರ್ಥವಾಗಬಹುದು, ದೇವರ ಪ್ರತಿರೂಪವಾಗಬಹುದು. ಈ ಅನುಭವದ ವಿವರಣೆ ಭಾಷೆಗೆ ಸಾಧ್ಯವಿಲ್ಲದ್ದು; ಅನುಭವಕ್ಕೆ ಬರಬೇಕಾದ್ದು.

**ಸಂಕ್ಷಿಪ್ತಗಳು** – ಹೆಸರುಗಳಲ್ಲಿ ಮಕ್ಕಳಿಗೆ ನಾಮಕರಣ ಮಾಡುವಾಗ ಸೊಗಸಾದ ಹೆಸರುಗಳನ್ನು ಆರಿಸಿ ಇಡುತ್ತಾರೆ. ಭಾಸ್ಕರ ದಿನೇಶ ಮಹಾದೇವ ಸಹದೇವ. ಆದರೆ ಕರೆಯುವಾಗ ಬಾಸ್ಕಿ, ದಿನಿ, ಮಾದೇವ, ಸಾದೇವ ಎಂದು ಕರೆಯುತ್ತಾರೆ. ಇದಕ್ಕೆ ವ್ಯಾಕರಣದಲ್ಲಿ ಯಾವ ಸೂತ್ರಗಳಿವೆ. ದಯವಾಡಿ ತಿಳಿಸಿ ಎಂದು ಕೆಲವರು ಕೇಳುತ್ತಾರೆ. ಈ ಬಗೆಯ ಶಬ್ದರೂಪಗಳಿಗೆ ವ್ಯಾಕರಣ ಸೂತ್ರಗಳು ಕಾರಣವಲ್ಲ. ತಂದೆ, ತಾಯಿ, ಅಣ್ಣ, ಅಕ್ಕ, ಮುಂತಾದವರ ಪ್ರೀತಿಯ ಸೂತ್ರಗಳೇ ಕಾರಣ. ನಮ್ಮ ಮನೆಯ ಹತ್ತಿರ ಇರುವ 'ತಿಲೋತ್ತಮೆ' ಎಂಬ ಹುಡುಗಿಯನ್ನು ಅವರ ಮನೆಯವರೆಲ್ಲ 'ಗಾಜಿ' ಎಂದು ಕರೆಯುತ್ತಾರೆ. ಅವಳು ಗಾಜಿನ ಬೊಂಬೆಯಂತಿದ್ದಾಳೆ ಎನ್ನುವುದೇ ಕಾರಣ!

**ಸಂಕ್ಷೇಪ** ಈ ಶಬ್ದಕ್ಕೆ ೧. *ಚಿಕ್ಕದು ಮಾಡುವುದು, ಸಂಗ್ರಹ ಮಾಡುವುದು ಎಂದು ಅರ್ಥ. ಸಂಗ್ರಹವಾಗಿ ಹೇಳುವುದು ಎಂದೂ ಆಗಬಹುದು.* ೨. ರಾಶಿ ಹಾಕುವುದಕ್ಕೂ ಕೂಡಿಡುವುದಕ್ಕೂ ಈ ಶಬ್ದವನ್ನೇ ಉಪಯೋಗಿಸುತ್ತಾರೆ. ಇದು ಸಂಸ್ಕೃತ ಶಬ್ದ.

**ಸಂಖ್ಯಾವಾಚಕಗಳು** ಕನ್ನಡದಲ್ಲಿ ಒಂದರಿಂದ ಹಿಡಿದು ನೂರರವರೆಗೆ ಸಂಖ್ಯೆಗಳಿಗೆ ಹೆಸರುಗಳಿವೆ. ಒಂಬೈನೂರ ತೊಂಬತ್ತೊಂಬತ್ತು ಎಂಬುದರ ತನಕ ಕನ್ನಡದಲ್ಲಿ ಹೆಸರುಗಳನ್ನು ಹೇಳಬಹುದು. ಸಾಯಿರ, ಸಾಸಿರ, ಸಾವಿರ ಎಂಬುದು ಸಹಸ್ರ ಎಂಬ ಸಂಸ್ಕೃತ ಶಬ್ದದ ತದ್ಭವ. ಸಂಸ್ಕೃತದಲ್ಲಿ ಸಾವಿರಕ್ಕೂ ಹಾಗೂ ಅದರ ಮುಂದಿನ ಕೆಲವು ದೊಡ್ಡ ಸಂಖ್ಯೆಗಳಿಗೂ ಹೆಸರಿವೆ. ಅವುಗಳು ಹೀಗೆ: ಏಕ, ದಶಕ, ಶತಕ, ಸಹಸ್ರ, ಲಕ್ಷ, ದಶಲಕ್ಷ, ಕೋಟಿ. ಹತ್ತು ಸಾವಿರಕ್ಕೆ 'ಅಯುತಮ್' ಎಂದೂ ಹತ್ತು ಲಕ್ಷಕ್ಕೆ 'ಪ್ರಯುತಮ್' ಎಂದೂ ಹೆಸರುಗಳಿವೆ. ಅಲ್ಲಿಂದ ಮುಂದೆ ಹತ್ತು ಕೋಟಿ = ಅರ್ಬುದ, ಹತ್ತು ಅರ್ಬುದ = ಪದ್ಮ, ಹತ್ತು ಪದ್ಮ = ಖರ್ವ, ಹತ್ತು ಖರ್ವ = ನಿಖರ್ವ, ಹತ್ತು ನಿಖರ್ವ = ಬೃಂದ, ಹತ್ತು ಬೃಂದ = ಮಹಾಪದ್ಮ, ಹತ್ತು ಮಹಾಪದ್ಮ = ಶಂಖ, ಹತ್ತು ಶಂಖ = ಮಹಾಶಂಖ, ಹತ್ತು ಮಹಾಶಂಖ = ಸಮುದ್ರ, ಹತ್ತು ಸಮುದ್ರ = ಮಹಾಸಮುದ್ರ, ಹತ್ತು ಮಹಾಸಮುದ್ರ = ಮಧ್ಯ, ಹತ್ತು ಮಧ್ಯ = ಪರಾರ್ಧ. ಪರಾರ್ಧದ ಸ್ವರೂಪ ಹೀಗಿರುತ್ತದೆ - ಒಂದರ ಮುಂದೆ ೧೯ ಸೊನ್ನೆಗಳು. ಒಟ್ಟು ೨೦ ಅಂಕಿಗಳೂ ಜೊತೆ ಸೇರಿರುತ್ತವೆ. ಇನ್ನೂ ಹೆಚ್ಚು ಬೇಕಾದರೆ ಈ ಹೆಸರುಗಳನ್ನೇ ಬಳಸಿಕೊಳ್ಳಬಹುದು.

**ಸಂಗತಿ** ಇದು ಸಂಸ್ಕೃತದ ಶಬ್ದ. ಇದಕ್ಕೆ ಸಂಬಂಧ, ಸಹವಾಸ, ಸ್ತ್ರೀ ಪುರುಷರ ಸಂಭೋಗ, ಜ್ಞಾನ, ಸಾಮಂಜಸ್ಯ ಮುಂತಾಗಿ ಅನೇಕ ಅರ್ಥಗಳಿವೆ. ಕನ್ನಡದಲ್ಲಿ ಇದರ ಜೊತೆಗೆ ವರ್ತಮಾನ, ವಿಚಾರ ಎಂಬ ಅರ್ಥಗಳೂ ಸೇರಿವೆ. ಸಂಗೀತ ಶಾಸ್ತ್ರದಲ್ಲಿ ಸಂಗತಿ ಎಂದರೆ ಸಾಹಿತ್ಯದ ಭಾವವನ್ನು ಪ್ರವೃದ್ಧಿಗೊಳಿಸುವುದು. ಇತರ ಶಾಸ್ತ್ರಗಳಲ್ಲಿ ಬೇರೆ ಬೇರೆ ಅರ್ಥ ವ್ಯಾಪ್ತಿಗಳಿವೆ. ಇದು ತುಂಬ ವ್ಯಾಪ್ತವಾದ ಅರ್ಥವುಳ್ಳ ಶಬ್ದ.

**ಸಂಗಾತಿ** ಇದು ಪುಂಸ್ತ್ರೀಲಿಂಗ. ಆಗ ಜೊತೆಗಾರ, ಜೊತೆಗಾತಿ ಎಂದರ್ಥ. ನಪುಂಸಕ ಲಿಂಗದಲ್ಲಿಯೂ ಬೇರೊಂದು ಅರ್ಥದಲ್ಲಿ ಪ್ರಯೋಗದಲ್ಲಿದೆ. ಆಗ ಅರ್ಥ ಮೈಮೇಲಿನ ಮಚ್ಚೆ, ಕರಿಯ ಬಣ್ಣದ ಚುಕ್ಕಿ.

**ಸಂಗ್ರಹ ಪ್ರಬಂಧ** ನೋಡಿ: ಬಸವಣ್ಣನವರು.

**ಸಂಗ್ರಾಮ** ಸಂಗ್ರಾಮ ಎಂದರೆ ಯುದ್ಧ, ಪರಸ್ಪರ ಹೊಡೆದಾಟ. ಪರಸ್ಪರಂ ಪ್ರಹರಂತ್ಯತ್ರೇತಿ ಸಂಗ್ರಾಮಃ ಎಂದು ಅಮರದಲ್ಲಿದೆ. ಹೋರಾಟ ಇದು ಕನ್ನಡ ಶಬ್ದ. ಪೋರ್ ಎಂಬ

ಕನ್ನಡ ಶಬ್ದಕ್ಕೆ ಕಾಳಗ, ಯುದ್ಧ ಎಂದೇ ಅರ್ಥ. ಪೋರ್ + ಆಟ = ಪೋರಾಟ > ಹೋರಾಟ.

**ಸಂಘರ್ಷ** ಸಂಸ್ಕೃತದಲ್ಲಿ ಘರ್ಷ ಎಂದರೆ ತಿಕ್ಕಾಟ, ಜಗಳ, ಪುಡಿ ಮಾಡುವಿಕೆ, ಸಾಣೆ - ಹಿಡಿಯುವಿಕೆ ಮುಂತಾದ ಅರ್ಥಗಳಿವೆ. ಸಮ್ ಎಂಬುದು ಉಪಸರ್ಗ. ಉತ್ ಇದ್ದ ಹಾಗೆ. ಹೆಚ್ಚಾದ ತಿಕ್ಕಾಟ ಎಂದು ಅದರ ಅರ್ಥ. ಸಂಘರ್ಷ - ಘರ್ಷಣೆ ಎರಡಕ್ಕೂ ಒಂದೇ ಅರ್ಥ. ಘೃಷು ಧಾತುವಿನಿಂದ ಬಂದದ್ದು. ತಿಕ್ಕಾಟ, ಎರಡು ವಿರುದ್ಧ ಶಕ್ತಿಗಳ ತಾಕಲಾಟ.

**ಸಂಚಯ** ಸಂಚಯ ಎಂದರೆ ರಾಶಿ ಹಾಕುವುದು, ಕೂಡಿಸುವುದು, ಸೇರಿಸಿಡುವುದು, ದಾಸ್ತಾನು ಮಾಡುವುದು, ರಾಶಿ, ಸಮೂಹ ಇತ್ಯಾದಿ ಅರ್ಥಗಳಿವೆ, ಸಂಸ್ಕೃತದಲ್ಲಿ.

**ಸಂಚಿತ** ಎಂಬ ಶಬ್ದವು ಸಂಸ್ಕೃತದ್ದು. ಇದಕ್ಕೆ ಕೂಡಿ ಹಾಕಿದ, ಶೇಖರಿಸಿದ, ರಾಶಿ ಹಾಕಿದ, ಒಟ್ಟು ಗೂಡಿಸಿದ ಎಂಬ ಅರ್ಥಗಳಿವೆ. ವ್ಯಾಪಕವಾಗಿ ಪೂರ್ವ ಜನ್ಮಗಳಲ್ಲಿ ಮಾಡಿದ ಪಾಪಕರ್ಮಗಳು ಎಂದೂ ಅರ್ಥವಾಗುತ್ತದೆ.

**ಸಂತ** ಇದೊಂದು ವಿಶೇಷ ಚರಿತ್ರೆಯುಳ್ಳ ಶಬ್ದ. ಸಂಸ್ಕೃತದ ಶಾಂತ ಎಂಬ ಶಬ್ದಕ್ಕೆ ಯೋಗಿ, ಶಿವ, ಮುನಿ ಮುಂತಾದ ಅರ್ಥಗಳಿವೆ. ಇದು ಕನ್ನಡದಲ್ಲಿ ಸಾಂತ ಎಂಬ ತದ್ಭವ ರೂಪವನ್ನು ಪಡೆಯುತ್ತದೆ. ಸಾಂತ ಎಂಬುದು ಹ್ರಸ್ವವಾಗಿ ಸಂತ ಎಂದಾಗಿದೆ. ಇಂಗ್ಲಿಷ್ ಭಾಷೆಯಲ್ಲಿ Saint ಎಂಬ ಶಬ್ದವಿದೆ. ಕ್ರೈಸ್ತ ಮತದಲ್ಲಿ ಈ ಶಬ್ದಕ್ಕೆ ವಿಶೇಷವಾದ, ಗೌರವಯುತವಾದ ಅರ್ಥವಿದೆ. A soul gone to heaven, a person whose holiness has been attested by miracles after his death and who has been canonized by the church as worthy of Veneration. ಕನ್ನಡಕ್ಕೆ ಬೈಬಲ್ ಗ್ರಂಥವನ್ನೂ ಇತರ ಕ್ರಿಸ್ತ ಮತದ ಗ್ರಂಥಗಳನ್ನೂ ಅನುವಾದ ಮಾಡುವಾಗ ಈ saint ಶಬ್ದಕ್ಕೆ ಸಂತ ಎಂಬ ಶಬ್ದವು ಅನುಕೂಲವಾಗಿರುವುದನ್ನು ಕಂಡು ಅದನ್ನೇ ಅನೇಕರು ಉಪಯೋಗಿಸಿದರು. ಹೀಗಾಗಿ ಇಂಗ್ಲಿಷಿನ saint ಕನ್ನಡದ ಸಂತ ಎಂದಾಗಿದೆ ಎಂದು ಹೇಳಬಹುದು.

**ಸಂತರ್ಪಣೆ - ಸಮಾರಾಧನೆ** ಈ ಎರಡೂ ಸಂಸ್ಕೃತದ ಸಂತರ್ಪಣ, ಸಮಾರಾಧನಾ ಎಂಬ ಶಬ್ದಗಳಿಂದ ಕ್ರಮವಾಗಿ ತದ್ಭವಗಳಾಗಿವೆ. ಸಂತರ್ಪಣಕ್ಕೆ ತೃಪ್ತಿ ಪಡಿಸುವುದು ಎಂದರ್ಥ. ಸಮಾರಾಧನಾ ಶಬ್ದಕ್ಕೆ ಪೂಜೆ, ಸೇವೆ, ಸತ್ಕಾರ ಎಂದರ್ಥ. **ನಾಟ್ಯಂ ಭಿನ್ನ ರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ** (ಮಾಳವಿಕಾಗ್ನಿಮಿತ್ರ ೧-೪) ಎಂಬ ಕಾಳಿದಾಸನ ವಾಕ್ಯಕ್ಕೆ ಅರ್ಥ ಬೇರೆ ಬೇರೆ ಆಸಕ್ತಿಗಳುಳ್ಳ ಜನರಿಗೆ ಬಹುಶಃ ನಾಟಕ ಒಂದೇ ಸಂತೋಷಪಡಿಸುವ ಸಾಧನ ಎಂದು. ಈ ಶಬ್ದಗಳಿಗೆ ಬರಬರುತ್ತಾ ಅರ್ಥ ವಿಸ್ತಾರವಾಗಿ ಭೋಜನ, ಔತಣ ಎಂಬ ಅರ್ಥವೂ ಅಂಟಿಕೊಂಡುಬಿಟ್ಟಿದೆ. ಕಾಶಿಗೆ ಹೋಗಿ ಬಂದವರು ಗಂಗಾಸಮಾರಾಧನೆ ಮಾಡುತ್ತಾರೆ. ಇದು ಅನೇಕರಿಗೆ ಏರ್ಪಡಿಸುವ ಭೋಜನ. ಅನ್ನ ಸಂತರ್ಪಣೆ ಎಂಬ ಶಬ್ದ ಒಂದಿದೆ. ಅದಕ್ಕೂ ಒಳ್ಳೆಯ ಭೋಜನದಿಂದ ತೃಪ್ತಿಪಡಿಸುವುದು ಎಂದೇ ಅರ್ಥ. ಭೂರಿ ಸಂತರ್ಪಣೆ ಎಂಬುದು ಮತ್ತೊಂದು ಶಬ್ದ. ಮೈಸೂರಿನಲ್ಲಿ ಅರಮನೆಯವರು ಯಾವುದಾದರೂ ಸಂತೋಷ ಸಮಾರಂಭದಲ್ಲಿ ಊರಿನ ಎಲ್ಲರಿಗೂ ಭೂರಿ ಸಂತರ್ಪಣೆಯನ್ನು ಏರ್ಪಡಿಸಿ ಬಂದವರಿಗೆಲ್ಲ ಊಟದ ಜೊತೆಗೆ ದಕ್ಷಿಣೆಯನ್ನೂ ಕೊಡುತ್ತಿದ್ದರು. ವೈಕುಂಠ ಸಂತರ್ಪಣೆ ಎಂಬ ಶಬ್ದವೂ ಪ್ರಚಲಿತವಾಗಿದೆ. ಇದು ಮೃತಿ ಹೊಂದಿದವರ ಉತ್ತರ ಕ್ರಿಯೆಯ ಕೊನೆಯಲ್ಲಿ ನೀಡುವ ಭೂರಿ ಭೋಜನ.

**ಸಂತೋಷ** ಇದು ಸಂಸ್ಕೃತ ಶಬ್ದ. ಆದರೆ ಇದರಲ್ಲಿ ಒಂದು ವಿಶೇಷ ಸಂದರ್ಭದ ಸೂಚನೆ ಇದೆ. ಯಾವುದಾದರೂ ಅಪೇಕ್ಷಿತ ವಸ್ತು ದೊರಕಿದಾಗ ಆಗುವ ಆನಂದ ಇದು. ಈ

ಶಬ್ದಕ್ಕೆ ಧೈರ್ಯ ಎಂಬ ಅರ್ಥವೂ ಇದೆ. ಧೃತಿ, ಸಂತೋಷ, ಸ್ವಾಸ್ಥ್ಯ ಇವೆಲ್ಲ ಒಂದೇ ಎಂದು ನಿಘಂಟುಗಳ ಅಭಿಪ್ರಾಯ.

**ಸಂದುಗೊಯ್ಯ** ಸಂದು ಎಂದರೆ ಎರಡು ಭಾಗಗಳು ಸೇರಿರುವ ಸ್ಥಳ. ಕೊಯ್ಯ ಎಂದರೆ ಕೊಯ್ಯುವವನು. ಅಂದರೆ ಸೇರಿರುವ ಎರಡು ಭಾಗಗಳನ್ನು ಕತ್ತರಿಸಿ ಬೇರ್ಪಡಿಸುವವನು ಎಂದರ್ಥ. ಇದು ಭೇದೋಪಾಯವನ್ನು ಸಮರ್ಥವಾಗಿ ಉಪಯೋಗಿಸುವವರಿಗೆ ಅನ್ವಯಿಸುವ ಶಬ್ದ. ಇಬ್ಬರು ಆಪ್ತರಾಗಿರುವ ಮಿತ್ರರನ್ನು ಬೇರ್ಪಡಿಸುವ ಉಪಾಯ ಮಾಡುವುದು ಇತ್ಯಾದಿ ವಿಷಬೀಜವನ್ನು ಬಿತ್ತುವ ಕಾರ್ಯ ಅದು. ಮಾನವನು ಮಾಡಬಹುದಾದ ಅತಿ ಹೇಯ ಕಾರ್ಯಗಳಲ್ಲಿ ಒಂದು.

**ಸಂಧ್ಯಕ್ಷರ, ಪ್ಲುತಸ್ವರ** ಎಂಬ ಶಬ್ದಗಳು ಬಹಳ ಹಳೆಯ ವ್ಯಾಕರಣಗಳಲ್ಲಿಯೇ ಚರ್ಚಿತವಾಗಿರುವ ವಿಷಯಗಳು. ಸಂಧ್ಯಕ್ಷರದ ವಿಚಾರವಂತೂ ಪ್ರಾತಿಶಾಖ್ಯದಲ್ಲಿಯೇ ಉಲ್ಲೇಖಗೊಂಡಿದೆ. ಇಂಥ ವಿದ್ವದ್ವಿಷಯಗಳು ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗಾಗಲಿ, ವಿದ್ಯಾರ್ಥಿಗಳಿಗಾಗಲಿ ಪ್ರಯೋಜನಕರವಾದುವಲ್ಲ. ಕೇವಲ ಸಂಶೋಧನೆಯ ದೃಷ್ಟಿಯಿಂದ ಬೇಕಾದವರು ಸಂಧ್ಯಕ್ಷರದ ಚರಿತ್ರೆ, ಪ್ಲುತವನ್ನು ಏಕೆ ಹೆಸರಿಸುತ್ತಾರೆ, ಮುಂತಾಗಿ ಚರ್ಚಿಸಲು ಸಾಧ್ಯ. ವ್ಯಾಕರಣದಲ್ಲಿ ಸಂಧ್ಯಕ್ಷರಕ್ಕೆ ಸಂಧಿಸ್ವರ ಎಂದೂ ಹೆಸರುಂಟು. ಅ + ಇ, ಆ + ಉ, ಆ + ಏ, ಆ + ಓ ಹೀಗೆ ಅಕ್ಷರಗಳು ಸಂಧಿಯಾದಾಗ ಹುಟ್ಟುವ ಸ್ವರಗಳು. ಏ, ಓ, ಐ, ಔ ಎಂಬ ನಾಲ್ಕು ಅಕ್ಷರಗಳಿಗೆ ಸಂಧ್ಯಕ್ಷರಗಳು ಎಂದು ಹೆಸರು. ಹಾಗೆಯೇ ಪ್ಲುತ ಎಂಬುದು ಛಂದಶ್ಶಾಸ್ತ್ರಕ್ಕೆ ಸೇರಿದ ಶಬ್ದ, **ಹ್ರಸ್ವಮದೇಕ ಮಾತ್ರಕಂ, ದೀರ್ಘಮುಭಯಮಾತ್ರಕಂ, ತ್ರಿಮಾತ್ರಕಂ ಪ್ಲುತಮಕ್ಕುಂ** ಎಂದು ಶಬ್ದಮಣಿ ದರ್ಪಣದಲ್ಲಿ ಹೇಳಿದೆ. ಉಚ್ಚಾರಣೆಗೆ ಮೂರು ಮಾತ್ರೆಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಅಕ್ಷರಕ್ಕೆ ಪ್ಲುತ ಎಂದು ಹೆಸರು.

**ಸಂನ್ಯಾಸಿ** ಎಂದರೆ ಎಲ್ಲ ಬಾಹ್ಯ ವಿಷಯಗಳ ಸಂಬಂಧವನ್ನೂ ಬಿಟ್ಟವನು. ಬ್ರಹ್ಮಚಾರಿಯಾಗಿರಬೇಕು. ಒಂದೇ ಕಡೆ ನಿಲ್ಲದೆ ಒಂದು ಗ್ರಾಮದಲ್ಲಿ ಒಂದು ರಾತ್ರಿ ಮಾತ್ರ ವಾಸ ಮಾಡಿ ಪ್ರಯಾಣದಲ್ಲಿರಬೇಕು. ಯಾಚಿಸಿ ಆಹಾರವನ್ನು ಸ್ವೀಕರಿಸಬೇಕು. ಆತ್ಮಜ್ಞಾನವನ್ನು ಪಡೆಯುವುದರಲ್ಲಿ ನಿರತನಾಗಬೇಕು. ಇಂಥವನೇ ನಿಜವಾದ ಸಂನ್ಯಾಸಿ. ಸಂನ್ಯಾಸಿ - ಸನ್ಯಾಸಿ ಸಮ್ + ನಿ + ಅಸು (ಕ್ಷೇಪಣೇ) 'ಣಿನಿಃ' ಎಂಬ ಸೂತ್ರದ ಪ್ರಕಾರ ಸಂನ್ಯಾಸಿನ್ ಎಂಬುದೇ ಸರಿಯಾದ ಪದ. ಇಲ್ಲಿ ಜೊತೆಯಾಗಿ ಬರುವ ಎರಡು ಅನುನಾಸಿಕಗಳ ಉಚ್ಚಾರಣೆಯ ಕ್ಲಿಷ್ಟತೆಯಿಂದಾಗಿ ಕನ್ನಡದಲ್ಲಿ 'ಸನ್ಯಾಸಿ' ಎಂದು ಬರೆದು ಉಪಯೋಗಿಸುತ್ತಾರೆ. ಸೌಲಭ್ಯವೆನ್ನುವ ಸೂತ್ರ ಪ್ರಭಾವ ಬೀರದ ಭಾಷಾ ಪ್ರಯೋಗವೇ ಇಲ್ಲ. ಆದುದರಿಂದ ಸನ್ಯಾಸಿ ಎಂಬ ರೂಪವನ್ನೂ ಕನ್ನಡದಲ್ಲಿ ಬಳಸಬಹುದು. ವಿದ್ವಾಂಸರು ಸಂಸ್ಕೃತದ ರೂಪವನ್ನೇ ಇಟ್ಟುಕೊಂಡರೆ ಅದೂ ಸರಿಯೇ.

**ಸಂಪ್ರತಿ** ಎಂದರೆ ಈಗ, ಇಂದು, ಈ ಸಮಯದಲ್ಲಿ ಎಂಬ ಅವ್ಯಯದ ಅರ್ಥದ ಶಬ್ದ. ಇದರಲ್ಲಿ ಸಮ್ ಮತ್ತು ಪ್ರತಿ ಎರಡು ಶಬ್ದಗಳು ಸೇರಿವೆ. ಸಂಪ್ರತೀತಿ ಎಂದರೆ ಪ್ರಸಿದ್ಧಿ, ಕೀರ್ತಿ. ಸಂಪ್ರತೀತ ಎಂದರೆ ಖ್ಯಾತಿ ಪಡೆದ ವ್ಯಕ್ತಿ, ಪ್ರಸಿದ್ಧ.

ಕುಮಾರವ್ಯಾಸ ಭಾರತದ ಉದ್ಯೋಗ ಪರ್ವದಲ್ಲಿ ಹತ್ತನೆಯ ಸಂಧಿ ೨೨ನೆಯ ಪದ್ಯದಲ್ಲಿ ಬರುವ ಭಾಗದಲ್ಲಿ ಸಂಪ್ರತಿಗಿಂದು ಸೇರಿಸು ಎಂದು ಬಂದಿದೆ. ಇದಕ್ಕೆ ಸಂಧಾನ ಎಂದು ಅರ್ಥ ಬರುವುದಿಲ್ಲ. ಸಂಪ್ರತಿ ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ೧. ಎದುರಿಗೆ, ೨. ಸರಿಯಾದ ಮಾರ್ಗದಲ್ಲಿ, ಒಪ್ಪಿಗೆಯಾಗುವಂತೆ ೩. ಸರಿಯಾದ ಸಮಯದಲ್ಲಿ ೪. ಈಗ, ಈಗಲೇ ೫. ಕೂಡಲೇ, ಈ ಕ್ಷಣ ಎಂಬ ಅರ್ಥಗಳಿವೆ. ಇದರಲ್ಲಿ ಯಾವುದು

ಸರಿಯಾದುದೋ ಅದನ್ನು ಆರಿಸಿಕೊಳ್ಳಬೇಕು. ಆದುದರಿಂದ ಈ ಪದ್ಯದ ಅನ್ವಯವನ್ನು ಹೀಗೆ ಮಾಡಬೇಕು. ತಮ್ಮಂದಿರಿಗೆ ರಾಜ್ಯವನ್ನು ಇಂದು ಕೊಡಿಸುವುದು ಉಚಿತ. ಇಂದು ಸಂಪ್ರತಿಗೆ = ಒಪ್ಪಿಗೆಯಾಗುವುದಕ್ಕೆ ನಿನ್ನ ಮಾತನ್ನು ಸೇರಿಸು. ಕೌರವೇಶ್ವರನು ಹಿಂದುಗಳೆಯನು. ಆದರೆ ಕುಮಾರವ್ಯಾಸನು ಸಂಪ್ರತಿ ಶಬ್ದಕ್ಕೆ ಸಮಯೋಪಾಯ ಪರಿಹಾರ ಎಂಬ ಅರ್ಥ ಬರುವಂತೆ ಆ ಶಬ್ದವನ್ನು ಉಪಯೋಗಿಸಿರುವ ಸಾಧ್ಯತೆಯೂ ಇಲ್ಲದಿಲ್ಲ. ಉದಾಹರಣೆಗೆ ಅದೇ ಪರ್ವದ ೬ನೇ ಸಂಧಿಯಲ್ಲಿ ೧೭, ೧೯ ಪದ್ಯಗಳನ್ನು ನೋಡಿ. **ಸಂಪ್ರತಿಗೆ ಎಳೆಸಿದ್ಯೆ. ಸಂಪ್ರತಿಯ ಸೇರುವೆಗೆ** ಎಂಬ ಶಬ್ದಪುಂಜಗಳಲ್ಲಿ ಸಂಧಾನ ಎಂಬ ಅರ್ಥವನ್ನೇ ಸೂಚಿಸುವಂತಿದೆ. ಓದುಗರ ಭಾವಪೂರಣಕ್ಕೆ ಬೇಕಾದ ಹಾಗೆ ಈ ಶಬ್ದವನ್ನು ಕವಿ ಉಪಯೋಗಿಸಬಹುದು.

**ಸಂಬಂಧ** ಸಂಬಂಧಗಳಲ್ಲಿ ರಕ್ತಸಂಬಂಧ ಎಂದು ಇದೆಯಷ್ಟೆ? ನಂಟರು ಎಂಬ ಶಬ್ದವನ್ನು ಕೇವಲ ರಕ್ತಸಂಬಂಧಿಗಳಿಗೆ ಮಾತ್ರ ಉಪಯೋಗಿಸಬೇಕೆ? ಗಂಡನಿಗೆ ಹೆಂಡತಿ ರಕ್ತ ಸಂಬಂಧಿಯಾಗಿರುವುದಿಲ್ಲ. ಗಂಡು ಹೆಣ್ಣುಗಳಿಗೆ ಮದುವೆಗೆ ಮುಂಚೆಯಿರುವ ಸಂಬಂಧ ಒಂದು. ಮದುವೆಯಾದ ಮೇಲೆ ಬರುವ ಸಂಬಂಧ ಮತ್ತೊಂದು. ಇದು ತುಂಬ ಸೂಕ್ಷ್ಮವಾದ ವಿವರಣೆಯನ್ನು ನಿರೀಕ್ಷಿಸುತ್ತದೆ. ದಶರಾತ್ರಿ ಜ್ಞಾತಿಗಳಿಗಿರುವ ಸಂಬಂಧವನ್ನು ಬೇರೆಯವರಿಗೆ ಅಂಟಿಸಲಾಗುವುದಿಲ್ಲ. ಮದುವೆಯಾದ ಮೇಲೆ ಹೆಣ್ಣು ಬೇರೆ ಮನೆಗೆ ಸೇರಿ ಅಲ್ಲಿಯ ಸಂಬಂಧವನ್ನು ಬೆಳೆಸಿಕೊಳ್ಳುತ್ತಾಳೆ. ಈ ಬಗ್ಗೆ ಭಾಷಾ ಶಾಸ್ತ್ರಗಳ ವ್ಯಾಸಂಗದಲ್ಲಿ ವ್ಯಾಪಕವಾದ ಸಂಶೋಧನೆಗಳು ಇತರ ಭಾಷೆಗಳಲ್ಲಿ ನಡೆದಿವೆ. ಆದುದರಿಂದಲೇ ಈ ಕ್ಷೇತ್ರ ವ್ಯಾಪಕವಾದ ವ್ಯಾಸಂಗಕ್ಕೆ ಒಳಗಾಗಬೇಕು, ನಮ್ಮ ವಿದ್ವಾಂಸರಿಂದ.

ಅಕ್ಕ - ಅಣ್ಣ, ತಮ್ಮ - ತಂಗಿ ಈ ಸಂಬಂಧದಲ್ಲಿ ಸಹೋದರತ್ವದ ಅರ್ಥ ತುಂಬಿದೆ. ಅಕ್ಕ - ಭಾವ, ತಮ್ಮ - ನಾದಿನಿ, ಈ ಸಂಬಂಧ ಮದುವೆಯ ಸಂಬಂಧವನ್ನು ಹೊಂದಿದೆ. ಮದುವೆಯಾದ ಮೇಲೂ ಹುಟ್ಟಿದಂದಿನಿಂದ ಇದ್ದಂತೆಯೇ ಅಕ್ಕ ಅಕ್ಕನೇ, ಅಣ್ಣ - ಅಣ್ಣನೇ. ಆದುದರಿಂದ ಇಂಥ ಶಬ್ದಗಳಿಗೆ ಬೇರೆಯ ಲಿಂಗವನ್ನು ಸೂಚಿಸುವಾಗ ಈ ಸಂಬಂಧಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡಬೇಕು. ಸಾಮಾನ್ಯವಾಗಿ ನೆಂಟರು ಎಂಬ ಶಬ್ದವನ್ನು ದಾಯಾದಿಗಳಿಗೂ ಮದುವೆಯಿಂದ ಆದ ಸಂಬಂಧವುಳ್ಳ ಎಲ್ಲರಿಗೂ ಅನ್ವಯಿಸುತ್ತಾರೆ. ಆದರೆ ಸಹೋದರ ಸಹೋದರಿಯರು ನೆಂಟರಲ್ಲ. ಅವರು ಅಕ್ಕತಂಗಿಯರೇ. ಆದರೆ ಭಾವ ನೆಂಟ, ಅತ್ತಿಗೆ ನೆಂಟಿತಿ. ಸಂಬಂಧ ವಾಚಕಗಳು ಎಂಬ ಶಬ್ದಗಳ ಗುಂಪೇ ಇದೆ. ಈ ಶಬ್ದಗಳು ದ್ರಾವಿಡ ಭಾಷೆಯಲ್ಲಿ ಹೇಗೆ ಉಪಯೋಗವಾಗಿವೆ ಎಂಬುದರ ವ್ಯಾಸಂಗವೇ ಅತ್ಯಂತ ಸ್ವಾರಸ್ಯವುಳ್ಳ ಕ್ಷೇತ್ರ.

**ಸಂಬಳ** ಇದು ಸಂಸ್ಕೃತದ ಶಂಬಲ ಎಂಬ ಶಬ್ದದಿಂದ ಬಂದದ್ದು. ಇದಕ್ಕೆ ಮೂಲದಲ್ಲಿ ಪ್ರಯಾಣ ಕಾಲದಲ್ಲಿ ಜೊತೆಗೆ ತೆಗೆದುಕೊಂಡು ಹೋಗುವ ಆಹಾರ ಸಾಮಗ್ರಿ ಎಂದು ಅರ್ಥ, ಪಾಥೇಯ. ಅದೇ ವ್ಯಾಪಕವಾದ ಅರ್ಥವನ್ನು ಪಡೆದು ತಿಂಗಳು ತಿಂಗಳಿಗೂ ಪಡೆಯುವ ವೇತನ ಎಂಬ ಅರ್ಥವನ್ನು ಪಡೆದಿದೆ. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿಯೂ ಈ ಶಬ್ದವು ವ್ಯಾಪಕವಾಗಿ ಪ್ರಯೋಗದಲ್ಲಿದೆ.

**ಸಂಯುಕ್ತ - ಸಂಯೋಜನೆ - ಸಂಸತ್ತು** ಈ ಶಬ್ದಗಳನ್ನು ಅನುಸ್ವಾರ ಸಹಿತವಾಗಿ ಉಚ್ಚರಿಸಬೇಕೆ? ಅಥವಾ ಸಯ್ಯುಕ್ತ - ಸಯ್ಯೋಜನೆ - ಸವ್‌ಸತ್ತು ಹೀಗೂ ಉಚ್ಚರಿಸಬೇಕೆ? ಸಮ್ = ಎನ್ನುವುದು ಸಂಸ್ಕೃತದ ಒಂದು ಉಪಸರ್ಗಾವ್ಯಯ. ಇದಕ್ಕೆ ಅನೇಕ ಅರ್ಥಗಳಿವೆ. ಉತ್ತಮ, ಸಮಂಜಸ, ಸಂಬಂಧ, ಚೆನ್ನಾಗಿ ಇತ್ಯಾದಿ. ಆದುದರಿಂದ

ಅನುನಾಸಿಕ ಮ್ ಕಾರದ ಉಚ್ಚಾರಣೆ ಇರಲೇಬೇಕು. ಕನ್ನಡದ ಯ, ವ, ಲ ಕಾರಗಳು ಅನುನಾಸಿಕವೂ ಆಗುತ್ತವೆ. ನಿರನುನಾಸಿಕವೂ ಆಗುತ್ತವೆ. ಇದು ಕನ್ನಡ ವೈಯಾಕರಣರ ಮತ. ಕೆಲವರು ಆಡುಮಾತಿನಲ್ಲಿ ಸುತ್ತಣ ಪರಿಸರದ ಪ್ರಭಾವದಿಂದ ಈ ಮ್ ಕಾರವನ್ನು ಯ, ವ, ಕಾರದಂತೆ ಉಚ್ಚರಿಸುವುದನ್ನು ನಾನೂ ಕೇಳಿದ್ದೇನೆ. ಅದು ತಪ್ಪು ಉಚ್ಚಾರಣೆ ಎಂಬ ಬಗ್ಗೆ ಅನುಮಾನವಿಲ್ಲ. ಅದು ಶಿಷ್ಟರ ಉಚ್ಚಾರಣೆಗೆ ಸರಿ ಹೊಂದುವುದಿಲ್ಲ. ಕುಮಾರವ್ಯಾಸ ಭಾರತದ ವಾಚನ ಮಾಡುವಾಗ ಕೆಲವರು ಗಮಕಿಗಳು

*ಸೆಣಸುವದಟರ ಗಂಡ ಸಮರಾಂ*
*ಗಣಕಮಲಭೇರುಂಡನಾ ದಿನ*
*ಮಣಿಯ ಮಗನುದ್ದಂಡ ಕರ್ಣನ ಕಂಡಳಾ ಕುಂತಿ. (ಉದ್ಯೋಗ ಪರ್ವ - ೧೦)*

ಎಂಬ ಸೂಚನೆಯನ್ನು ಓದುವಾಗ 'ಸೆಣಸುವದಟರ ಗಲ್ಡ - ಭೇರುಲ್ಡ - ಉದ್ದಲ್ಡ - ಕಲ್ಡ' ಎಂದು ಈಗಲೂ ಹಾಡುವುದನ್ನು ಯಾರು ಬೇಕಾದರೂ ಗಮನಿಸಬಹುದು. ಇದೊಂದು ವೈಯಕ್ತಿಕ ಸ್ವಭಾವ, ಅಷ್ಟೆ! ಇಂಗ್ಲಿಷಿನ Mannerism ಗೆ ಸೇರುತ್ತದೆ. ಅದು ಶಿಕ್ಷಾಶಾಸ್ತ್ರಶುದ್ಧವಲ್ಲ.

**ಸಂವಾದ** ಇದು ಸಂಸ್ಕೃತದ ಶಬ್ದ. ಇದು ಇಬ್ಬರಾದರೂ ವ್ಯಕ್ತಿಗಳಿದ್ದು ಅವರ ನಡುವೆ ನಡೆಯುವ ಮಾತುಗಳು. ಇಂಥ ಮಾತುಕತೆ ಅನಿಯಂತ್ರಿತವಾಗಿ ನಡೆಯುತ್ತದೆ. ಇದು ಸಂಭಾಷಣೆಗೆ ಸಮಾನವಾದ ಶಬ್ದ. ಇದನ್ನೆ ಸಂಲಾಪಾ, ಸಲ್ಲಾಪ ಎಂದೂ ಕರೆಯುತ್ತಾರೆ. ಈ ಬಗೆಯ ಮಾತುಕತೆಯಲ್ಲಿ ಪರಸ್ಪರ ವಿಶ್ವಾಸ, ಸ್ನೇಹ ಅಗತ್ಯವಾಗಿರುತ್ತವೆ.

**ಸಂಶಪ್ತಕರ ಪ್ರತಿಜ್ಞೆ** ಮಹಾಭಾರತದಲ್ಲಿ ದ್ರೋಣ ಪರ್ವದಲ್ಲಿ ಈ ಘಟನೆ ಬರುತ್ತದೆ. ಬಹು ಪರಾಕ್ರಮಿಯಾದ ಒಬ್ಬನನ್ನು ಆ ದಿನ ಬೀಳಿಸುವ ಶಪಥವನ್ನು ದ್ರೋಣನು ಕೈಗೊಳ್ಳುತ್ತಾನೆ. ಅವನು ಕೌರವನ ಕಡೆ ಹೋರಾಡಿದ ಒಂದು ರಾಜ್ಯದ ಸೈನಿಕರಾದ ಸಂಶಪ್ತಕರನ್ನು ಕರೆದು ಅವರು ಅರ್ಜುನನನ್ನು ಬೇರೆಯ ದಿಕ್ಕಿಗೆ ಕರೆದುಕೊಂಡು ಹೋದರೆ, ತಾನು ತನ್ನ ಪ್ರತಿಜ್ಞೆಯನ್ನು ಪೂರೈಸುವುದಾಗಿ ಹೇಳಿದನು. ಸಂಶಪ್ತಕರ ಮುಖಂಡರಾದ ಸುಶರ್ಮ ಮುಂತಾದವರು ಅರ್ಜುನನಿಗೆ ಅವಕಾಶ ಕೊಡದೆ ಯುದ್ಧ ಮಾಡುತ್ತೇವೆಂದು ಶಪಥ ಮಾಡಿ ಯುದ್ಧ ಮಾಡಿದರು. ಆದರೂ ಅರ್ಜುನನು ಅವರೆಲ್ಲರನ್ನೂ ಸೋಲಿಸಿ ಹಿಂದಿರುಗುವ ವೇಳೆಗೆ ಕರ್ಣಾದಿಗಳು ಅಭಿಮನ್ಯುವನ್ನು ಕೊಂದಿದ್ದರು. ಇದೇ ಕಥೆ.

**ಸಂಸತ್** ಸಂಸದ್ ಎಂದರೆ ಯಾವುದಾದರೂ ಕಾರ್ಯಕಲಾಪಗಳನ್ನು ಪರಿಶೀಲಿಸುವುದಕ್ಕಾಗಿ ಜನರು ಸಭೆ ಸೇರುವುದು. ಇದು ನ್ಯಾಯಾಧೀಶರ ಸಭೆಯೂ ಆಗಬಹುದು. ಈ ಶಬ್ದವನ್ನೇ ಉಪಯೋಗಿಸಿ ಈಗಿನ ಸಂಸತ್ತು ಎಂಬುದು ರಚಿತವಾಗಿದೆ. ಇದನ್ನು ಲೋಕಸಭೆ ಎಂದೂ ಕರೆಯುತ್ತಾರೆ. ಇದು ಈಗ ರಾಜಕೀಯವಾಗಿ ಸ್ಪಷ್ಟವಾದ ಅಂಗರಚನೆಯುಳ್ಳ ಸಭೆಯಾಗಿ ರೂಪುಗೊಂಡಿದೆ. ಲೋಕಸಭೆಗೆ ಇಂಗ್ಲಿಷಿನ Parliament ಎಂಬುದು ಸಮಾನ. ಸಂಸತ್ ಎಂಬುದು ಎರಡೂ ಸಭೆಗಳು - ಲೋಕಸಭೆ, ರಾಜ್ಯಸಭೆ ಸೇರಿದ ಮಿಲನ.

**ಸಂಸಾರ** ಸಂಸ್ಕೃತ ಶಬ್ದ. ಚಕ್ರವು ಸುತ್ತುವಂತೆ ಪುನಃ ಪುನಃ ಜನ್ಮ ತಳೆಯುವುದು - ಮತ್ತೆ ಮತ್ತೆ ಜನ್ಮ ತಳೆಯುವ ಒಂದು ಅವಸ್ಥೆಯ ಪ್ರವಾಹ. ಇದಕ್ಕೆ ಸಂಸಾರ ಎಂದು ಹೆಸರು. ಇದನ್ನೇ ಇತರರು, ತಮ್ಮ ತಮ್ಮ ಅದೃಷ್ಟದಿಂದ ಪಡೆಯುವ ಪುನರ್ಜನ್ಮ ಎಂದು ಕರೆಯುತ್ತಾರೆ. ಈ ಭೂತ ಪ್ರಪಂಚದ ಸಂಬಂಧವನ್ನು ಹೊಂದಿರುವುದೇ ಸಂಸಾರ. ಈ ಶಬ್ದ ದ್ವೈತಾದ್ವೈತವಿಶಿಷ್ಟಾದ್ವೈತ ದರ್ಶನದ ಬೇರೆ ಬೇರೆ ಅರ್ಥಗಳಿಂದ ಆವೃತ್ತವಾಗಿದೆ. ಮೂಲಾರ್ಥ ಮಾತ್ರ ಒಂದೇ. ಕೆಲವು ವೇಳೆ ಸಂಸಾರ ಎಂಬುದಕ್ಕೆ ಹೆಂಡತಿ ಎಂಬ

ಅರ್ಥವೂ ಉಂಟು. ಒಬ್ಬರೇ ಬಂದಿರಲ್ಲಾ, ಸಂಸಾರ ಬರಲಿಲ್ಲವೇ? ಎಂಬ ವಾಕ್ಯವನ್ನು ಗಮನಿಸಿ. ತಮಿಳಿನಲ್ಲಿ ಸಂಸಾರ ಶಬ್ದಕ್ಕೆ ಹೆಂಡತಿ ಎಂಬ ವಿಶೇಷಾರ್ಥವೇ ಇದೆ, ಕನ್ನಡದಲ್ಲಿ ಕುಟುಂಬ ಎಂಬ ಶಬ್ದಕ್ಕೆ ಹೆಂಡತಿ ಎಂಬ ಅರ್ಥ ಇರುವಂತೆ.

**ಸಗಣಿ - ಸೆಗಡಿ ಯಾವುದು ಸರಿ? ಸಗಣಿ, ಸಗಣ, ಸಗಣೆ, ಸೆಗಣಿ, ಸೆಗಣ** ಎಂಬ ಎಲ್ಲ ರೂಪಗಳೂ ಪ್ರಯೋಗದಲ್ಲಿವೆ. ಸಗಣ ಎಂಬುದು ಮೂಲರೂಪ. ಸಂಸ್ಕೃತದ ಛಗಣ ಎಂಬ ಶಬ್ದದ ತದ್ಭವಗಳು ಇವು. ಸೆಗಡಿ ತಪ್ಪು.

**ಸಖತ್** ಎಂಬುದು ಅರಬ್ಬಿಯ ಸಖ್ತ್ ಎಂಬ ಶಬ್ದದಿಂದ ಬಂದಿದೆ. ಇದಕ್ಕೆ ಮೂಲದಲ್ಲಿ ಗಟ್ಟಿಯಾದ, ಭದ್ರವಾದ, ಬಿಗಿಯಾದ, ಒರಟಾದ ಎಂಬರ್ಥ. ಕನ್ನಡದಲ್ಲಿ ತೀವ್ರವಾದ ಎಂಬರ್ಥದಲ್ಲಿ ಸಖತ್ ಕಾಯಿಲೆ ಎಂಬಂತೆ ಉಪಯೋಗಿಸುತ್ತಿದ್ದರು. ಈಗ ಅದು ಶ್ರೇಷ್ಠವಾದ, ಉತ್ತಮವಾದ ಎಂಬ ಅರ್ಥದಲ್ಲಿ ಗುಣವಾಚಕವಾಗಿ ಉಪಯೋಗವಾಗುತ್ತಾ ಇದೆ. ಈ ಶಬ್ದದ ಅರ್ಥ ಈಗೀಗ ಇನ್ನೂ ವ್ಯಾಪಕವಾಗುತ್ತಾ ಇದೆ. ತುಂಬ ಚೆನ್ನಾಗಿ ಎಂಬ ಅರ್ಥದ ಗುಣವಾಚಕದ ಪ್ರಯೋಗ ಈಗ ಅಧಿಕವಾಗಿದೆ.

**ಸಚಿವ** ಸಚಿವ, ಮಂತ್ರಿ ಎಂಬ ಎರಡು ಶಬ್ದಗಳಿಗೂ ಈಗ ಒಂದೇ ಅರ್ಥವಿದೆ. ಆದರೆ ಈ ಎರಡು ಶಬ್ದಗಳೂ ಬೇರೆ ಬೇರೆ ಮೂಲದಿಂದ ಬಂದಿವೆ. ಸಚಿವ ಎಂಬ ಸಂಸ್ಕೃತ ಶಬ್ದಕ್ಕೆ ಜೊತೆಗಾರ, ಸ್ನೇಹಿತ, ರಾಜನ ಗೆಳೆಯನಾದ ಸಹಾಯಕ ಎಂಬ ಅರ್ಥಗಳಿವೆ. ಈ ಶಬ್ದಗಳಿಗೆ ರಾಜನ ಮಂತ್ರಿಯ ಅಧಿಕಾರ ಎಂಬ ಅರ್ಥವಿದೆ. ಸಚಿವ ಗೆಳೆಯನಾದ ಮಂತ್ರಿ ಆಗಬಹುದು. ಸಚಿವರಲ್ಲಿ ಎರಡು ವಿಧ. ಒಂದು ಧೀಸಚಿವ = ಮಂತ್ರಾಲೋಚನೆಗೆ ಸಹಾಯ ಮಾಡುವವನು, ಎರಡು ಕರ್ಮಸಚಿವ = ಕಾರ್ಯನಿರ್ವಾಹಕ. ಒಂದು ವಿನೋದದ ವಿಷಯವೇನೆಂದರೆ **ಸಚಿವಾಮಯ** ಎಂಬ ಶಬ್ದದ ಅರ್ಥ. ಆಮಯ ಎಂದರೆ ಕಾಯಿಲೆ. ಇದು ಸಚಿವರಿಗೆ ಮಾತ್ರ ಬರುವ ಕಾಮಾಲೆಯಂಥ ಕಾಯಿಲೆ ಎಂದು ನಿಘಂಟುಕಾರರು ತಿಳಿಸುತ್ತಾರೆ. ಈ ಅರ್ಥದ ಹಿಂದಿರುವ ವ್ಯಂಗ್ಯ ಸುಲಭಗ್ರಾಹ್ಯ. ಮಂತ್ರ ಶಬ್ದದಿಂದ ಮಂತ್ರಿ ಶಬ್ದ ವ್ಯುತ್ಪತ್ತಿಯಾಗುತ್ತದೆ. ಮಂತ್ರ ಶಬ್ದಕ್ಕೆ ಆಲೋಚನೆ, ಒಂದು ಪವಿತ್ರ ಶಬ್ದಪುಂಜ, ಒಂದು ಋಕ್ಕು ಎಂಬ ಅರ್ಥಗಳಿವೆ. ಮಂತ್ರಕಾರ್ಯ ಎಂದರೆ ಪರ್ಯಾಲೋಚಿಸುವ ವಿಷಯ; ಮಂತ್ರಕುಶಲ ಎಂದರೆ ರಾಜ್ಯಭಾರದಲ್ಲಿ ಅಗತ್ಯವಾದ ಸೂಚನೆಗಳನ್ನು ನೀಡುವುದರಲ್ಲಿ ನಿಪುಣನಾದವನು ಎಂದರ್ಥ. ಹೀಗಾಗಿ ಮಂತ್ರಿ ಎಂದರೆ ರಾಜ್ಯದ ಆಡಳಿತದಲ್ಲಿ ದಕ್ಷನಾಗಿ ಪ್ರಜೆಗಳಿಗೆ ಪ್ರಯೋಜನಕರವಾದ ಮಾರ್ಗಗಳನ್ನು ಸೂಚಿಸುವವನು ಎಂದು ಅರ್ಥ. ಮಂತ್ರಿ ಎಂಬ ಹೆಸರಿಗೆ ಅರ್ಹನಾಗುವವನು ಇಂಥ ಕಾರ್ಯಗಳನ್ನೇ ಮಾಡಬೇಕು. ಮಹಾಭಾರತವು ಮಂತ್ರಿಜನಕ್ಕೆ ಬುದ್ಧಿಗುಣವನ್ನು ನೀಡುತ್ತದೆ ಎಂದು ಕುಮಾರವ್ಯಾಸನು ಹೇಳುತ್ತಾನೆ. ಕನ್ನಡದ ಆಡುಮಾತಿನಲ್ಲಿ ಮಂತ್ರಿ ಶಬ್ದಕ್ಕೆ ಆಲಂಕಾರಿಕವಾಗಿ ಕೆಡುಕಿಗೆ ಪ್ರೇರಣೆ ನೀಡುವವನು ಎಂಬ ವ್ಯಂಗ್ಯಾರ್ಥವೂ ಇದೆ. ಇದು ಶಕುನಿಯಂಥ ಮಂತ್ರಿ ಎಂಬ ಮಹಾಭಾರತದ ಮೂಲದ ಪ್ರಯೋಗ.

**ಸಚೇತಕ** ಈ ಶಬ್ದವನ್ನು ಇಂಗ್ಲಿಷ್ ಭಾಷೆಯಲ್ಲಿ ರಾಜಕಾರಣದಲ್ಲಿ ಉಪಯೋಗಿಸುವ Whip ಎಂಬ ಅಧಿಕಾರವನ್ನು ಸೂಚಿಸಲು ಕನ್ನಡದಲ್ಲಿ ಅನುವಾದ ಮಾಡಿಕೊಂಡಿದ್ದಾರೆ. Whip ಎಂದರೆ ರಾಜಕೀಯ ಪಕ್ಷದಲ್ಲಿ ಶಿಸ್ತನ್ನು ಕಾಪಾಡುವುದಕ್ಕಾಗಿ ನೇಮಕಗೊಂಡ ಅಧಿಕಾರಿ. ಅವನು ಸಮಯ ಬಂದಾಗ ರಾಜಕೀಯ ಪಕ್ಷದ ಎಲ್ಲ ಸದಸ್ಯರೂ ಸದನದಲ್ಲಿ ಹಾಜರಿರುವಂತೆ ನೋಡಿಕೊಳ್ಳಬೇಕು. Whip ಶಬ್ದಕ್ಕೆ ಚಾವಟಿ ಎಂಬ ಅರ್ಥವೂ ಇದೆ. ಕುದುರೆಗಾಡಿಯನ್ನು ನಡೆಸುವವನು ಕುದುರೆಯನ್ನು ಓಡಿಸುವ ಚಾವಟಿಯೂ ಆಗಬಹುದು. ಸಂಸ್ಕೃತದಲ್ಲಿಯೂ ಆ ಅರ್ಥವೇ ಇದೆ. ಚೈತನ್ಯವನ್ನುಂಟು ಮಾಡುವ

ಶಕ್ತಿಯುಳ್ಳವನು ಎಂದರ್ಥ. ಈ ಕಾರಣದಿಂದ ಆ ಶಬ್ದವನ್ನು ಅರ್ಥವತ್ತಾಗಿ ಆರಿಸಿದ್ದಾರೆ. ಅದು ರಾಜಕೀಯವಾಗಿಯೂ ಅರ್ಥವತ್ತಾಗಿದೆ.

**ಸತ್ಕಾರ** ಇದು ಸಂಸ್ಕೃತದ ಶಬ್ದ. ಅತಿಥಿಯನ್ನು ಗೌರವಿಸುವುದು ಮರ್ಯಾದೆಯಿಂದ ಉಪಚಾರ ಮಾಡುವುದು ಎಂದು ಅರ್ಥ. ಈಚೆಗೆ ಸತ್ಕಾರಕೂಟ ಎಂಬ ಶಬ್ದ ಪ್ರಸಿದ್ಧವಾಗಿದೆ. ಯಾರನ್ನಾದರೂ ಅವರು ಸಾಧಿಸಿದ ಹಿರಿಮೆಗಾಗಿ ಗೌರವಿಸಲು ಏರ್ಪಡಿಸುವ ಸಮಾರಂಭಕ್ಕೆ ಸತ್ಕಾರಕೂಟ ಎಂದು ಕರೆದು ಜನರನ್ನು ಆಹ್ವಾನಿಸುತ್ತಾರೆ.

**ಸತ್ತುಗ** ಇದನ್ನು 'ಸತ್ವದ ಹಿಟ್ಟು' ಎಂದೂ ಕರೆಯುತ್ತಾರೆ. ಅಕ್ಕಿಯ ಹಿಟ್ಟಿಗೆ ಬೆಲ್ಲ ಮುಂತಾದ ದ್ರವ್ಯಗಳನ್ನು ಹಾಕಿ ಕಲಸಿದ ಪದಾರ್ಥ. ತಿನ್ನಲು ರುಚಿಯಾಗಿರುತ್ತದೆ. ಬ್ರಾಹ್ಮಣರು ಆಚರಿಸುವ ಉಪಾಕರ್ಮದಂದು ಇದನ್ನು ಪ್ರಸಾದವಾಗಿ ಹಂಚುತ್ತಾರೆ. ಇದು ಸಂಸ್ಕೃತದ ಸಕ್ತು ಎಂಬುದರ ತದ್ಭವ.

**ಸತ್ವ** ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಸುಮಾರು ಇಪ್ಪತ್ತು. ಅವುಗಳಲ್ಲಿ ಮುಖ್ಯವಾದವು: ೧. ವಸ್ತು ೨. ಶಕ್ತಿ, ಚೈತನ್ಯ ೩. ಪ್ರಾಣ ೪. ಆಯುಸ್ಸು ೫. ಧನ ಇತ್ಯಾದಿ. ಸಂಸ್ಕೃತದಲ್ಲಿ ಈ ಶಬ್ದವನ್ನು ಸತ್ತ್ವ ಎಂದೇ ಬರೆಯುತ್ತಾರೆ. ಸತ್ + ತ್ವ = ಸತ್ತ್ವ. ಕನ್ನಡದಲ್ಲಿ ತಕಾರದ ಒತ್ತನ್ನು ಉಚ್ಚರಿಸುವುದಕ್ಕೆ ಆಗುವುದಿಲ್ಲವೆಂದು ಬರಹದಲ್ಲಿ ಬಿಟ್ಟಿದ್ದಾರೆ. ಇದು ಕನ್ನಡದ ಬರಹದ ದೃಷ್ಟಿಯಿಂದ ತಪ್ಪೇನೂ ಅಲ್ಲ.

**ಸತ್ಸಂಗ** ಎಂದರೆ ಸಜ್ಜನರ ಒಡನಾಟ, ಅಷ್ಟೆ! ಆದರೆ ಈಚೀಚೆಗೆ ಕೆಲವು ಮತೀಯ ವಿಭಾಗಗಳು ಯಾವುದಾದರೂ ಒಂದು ದಿನ ಆ ವಿಭಾಗದವರ ನಂಬಿಕೆಗಳಲ್ಲಿ ವಿಶ್ವಾಸವುಳ್ಳವರು ಒಂದೆಡೆ ಸೇರಿ ಹರಿ ಸಂಕೀರ್ತನ, ಶ್ರೀರಾಮ ಭಜನೆ ಮುಂತಾದ ಭಕ್ತಿ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಹೀಗೆ ಜನರು ಸೇರುವುದನ್ನು ಅವರು ಸತ್ಸಂಗ ಎಂದು ಕರೆಯುತ್ತಾರೆ. ಸತ್ಸಂಗವನ್ನು ಆಚರಿಸುವ ಬೇರೆ ಬೇರೆ ನಂಬಿಕೆಯುಳ್ಳವರು ಅನೇಕ ಬಗೆಗಳಾಗಿದ್ದಾರೆ. ರಾಧಾಸ್ವಾಮಿಯ ಪಂಗಡದವರು ಅವರ ಎಲ್ಲ ಸಭೆಗಳಿಗೂ ಸತ್ಸಂಗ ಎಂದೇ ಕರೆಯುತ್ತಾರೆ.

**ಸದಭಿರುಚಿ** ಅಭಿರುಚಿ ಎಂದರೆ ಆಸಕ್ತಿ. ಕಾವ್ಯ, ನಾಟ್ಯ, ಸಂಗೀತ ಮುಂತಾದ ಕಲೆಗಳಲ್ಲಿ ಇರುವ ಆಸಕ್ತಿ. ಅವುಗಳ ಬಗ್ಗೆ ಹೆಚ್ಚಾದ ಪ್ರೀತಿ. ಸತ್ ಎಂದರೆ ಒಳ್ಳೆಯ, ಉತ್ತಮವಾದ, ವ್ಯಾಸಂಗದಿಂದ ಬಂದ ಎಂದು ಅರ್ಥ. ಆದುದರಿಂದ ಸದಭಿರುಚಿ ಮಾನವನ ಬಾಳಿನ ಸದ್ಗುಣಗಳಲ್ಲಿ ಮುಖ್ಯವಾದುದು, ರಸಾಸ್ವಾದನಾಸಕ್ತಿ.

**ಸದಸ್ಯ** ನೋಡಿ: ಅಧ್ಯಕ್ಷ

**ಸದಸ್ಯೆ** ಸಂಸ್ಥೆಯಲ್ಲಿ ಸದಸ್ಯತ್ವವನ್ನು ಪಡೆದ ಸ್ತ್ರೀಗೆ ಏನೆಂದು ಕರೆಯಬೇಕು. ಸದಸ್ಯಿನಿ ಅಥವಾ ಸದಸ್ಯೆ ಯಾವುದು ಸರಿ? ಸದಸ್ಯೆ ಎಂಬುದು ಸರಿ. ಸದಸ್ಯ ಎಂಬ ಶಬ್ದಕ್ಕೆ ಕನ್ನಡದ ಸ್ತ್ರೀಲಿಂಗದ ಎ ಪ್ರತ್ಯಯವನ್ನು ಹತ್ತಿಸಿ ಆ ರೂಪವನ್ನು ಸಾಧಿಸಬಹುದು. ಸದಸ್ಯ ಎಂಬ ಶಬ್ದಕ್ಕೆ ಸಭೆಯಲ್ಲಿ ವಿಧಿವಿಹಿತವಾದುದನ್ನು ನೋಡಿಕೊಳ್ಳುವವ ಎಂದರ್ಥ. ಒಂದು ಪಕ್ಷಕ್ಕೇ ಕೈ ಎತ್ತುವ ಈ ಕಾಲದಲ್ಲಿ ಈ ಅರ್ಥಕ್ಕೆ ಏನಾದರೂ ಗೌರವ ದೊರತೀತೇ? ನೋಡಿ: ಅಧ್ಯಕ್ಷ

**ಸದ್ಯ** ಸದ್ಯದ್ ಎಂಬ ಸಂಸ್ಕೃತದ ಅವ್ಯಯದ ಕಡೆಯಿಂದ ಕನ್ನಡದಲ್ಲಿ ಸದ್ಯ ಎಂಬ ರೂಪ ಸಿದ್ಧವಾಗಿದೆ. ಈ ಶಬ್ದಕ್ಕೆ ೧. ಅಂದೇ, ೨. ಆಗಲೆ ೩. ಆಗತಾನೆ ಮುಂತಾಗಿ ಅವ್ಯಯದ ಅರ್ಥಗಳಿವೆ. **ವತ್ಸೇ ಸದ್ಯೋ ಹುತಾಗ್ನೀನ್ ಪ್ರದಕ್ಷಿಣೀ ಕುರುಷ್ವ.** ಮಗಳೇ ಈಗಲೇ ಹುತಾಗ್ನಿಯನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸು ಎಂಬುದು ಕಾಳಿದಾಸನ ಶಾಕುಂತಲ ನಾಟಕದ ವಾಕ್ಯ. ಸಧ್ಯ ಎಂಬ ಶಬ್ದವೇ ಇಲ್ಲ.

**ಸದ್ರೀ** ಸದರೀ ಇದು ಪಾರಸೀ ಭಾಷೆಯ ಸದಹೂರ್ ಎಂಬ ಶಬ್ದದ ಅಪಭ್ರಂಶ. 'ಹಿಂದೆ ಹೇಳಿದ, ಈ ಹಿಂದೆ ತಿಳಿಸಿರುವ' ಎಂಬ ಅರ್ಥದಲ್ಲಿ ಪ್ರಯೋಗ. ಎರಡು ರೂಪಗಳೂ ಸರಿ.

**ಸನ್ ಮತ್ತು ಇಸವಿ – ಈ ಶಬ್ದಗಳಿಗೆ ವ್ಯತ್ಯಾಸವೇನು?** ಈ ಎರಡು ಶಬ್ದಗಳೂ ಅರಬ್ಬಿ ಭಾಷೆಯ ಶಬ್ದಗಳು. ಆ ಭಾಷೆಯಲ್ಲಿ ಸನ್ ಎಂದರೆ ಒಂದು ಕಾಲಮಾನ, ವರ್ಷ. ಇಸವಿ ಎಂಬ ಶಬ್ದ ಈಸ ಎಂಬ ಶಬ್ದದಿಂದ ಬಂದುದು. ಈಸ ಎಂದರೆ ಜೀಸಸ್ = ಕ್ರಿಸ್ತ. ಇಸವಿ ಎಂದರೆ ಕ್ರಿಸ್ತನಿಗೆ ಸಂಬಂಧಿಸಿದ ಶಕ. ಸನ್ = ವರ್ಷ. ಇಸವಿ = ಕ್ರಿಸ್ತಶಕ. ಸನ್ ಒಂದು ಸಾವಿರದ ಒಂಬೈನೂರ ತೊಂಬತ್ತೆರಡನೆಯ ಇಸವಿ ಎಂದರೆ ಸಾವಿರದ ಒಂಬೈನೂರ ತೊಂಬತ್ತೆರಡನೆಯ ವರ್ಷ, ಕ್ರಿಸ್ತಶಕ ಎಂದರ್ಥ. ಈಗ ಸನ್ ಎಂಬುದರ ಉಪಯೋಗ ನಿಂತುಹೋಗಿದೆ. ಇಸವಿ ಎಂಬುದಕ್ಕೆ ಕ್ರಿಸ್ತಶಕದ ವರ್ಷ ಎಂಬ ಅರ್ಥ ಬಂದಿರುವಂತೆ ಪ್ರಯೋಗ ಮಾಡುತ್ತಾರೆ.

**ಸನುಮಾನ** ಎಂಬುದು ಸನ್ಮಾನದ ತದ್ಭವ. ಆದರೂ ಈ ರೂಪದಲ್ಲಿ ಈ ಶಬ್ದದ ಉಪಯೋಗ ಅಪೂರ್ವ. ಈ ಶಬ್ದಕ್ಕೂ ಅನುಮಾನಕ್ಕೂ ಯಾವ ಸಂಬಂಧವೂ ಇಲ್ಲ.

**ಸಪ್ತರ್ಷಿಗಳು** ವಿಶ್ವಾಮಿತ್ರ, ಜಮದಗ್ನಿ, ಗೌತಮ, ಅತ್ರಿ, ಕಶ್ಯಪ, ಭರದ್ವಾಜ, ವಸಿಷ್ಠ ಇದು ಒಂದು. ಇನ್ನೊಂದು ಪಟ್ಟಿ ಇದೆ. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ವಸಿಷ್ಠ, ಕ್ರತು. ಮಹಾಭಾರತದಲ್ಲಿಯೇ ಬೇರೆ ಬೇರೆ ಕಾಲಕ್ಕೆ ಸಂಬಂಧಪಟ್ಟಂತೆ ಈ ಎರಡು ಪಟ್ಟಿಗಳು ಬರುತ್ತವೆ. ಪುರಾಣಗಳಲ್ಲಿ ಇವುಗಳ ಉಲ್ಲೇಖಗಳಿವೆ.

**ಸಬೂಬು** ಇದು ಮೂಲದಲ್ಲಿ ಅರಬ್ಬಿ ಶಬ್ದ. ಆ ಭಾಷೆಯಲ್ಲಿ ಅದರ ರೂಪ 'ಸಬಬ್'. ಹಿಂದೀ ಮತ್ತು ಮರಾಠೀ ಭಾಷೆಗಳಲ್ಲಿಯೂ ಅದೇ ರೂಪದಲ್ಲಿ ಪ್ರಯೋಗವಾಗುತ್ತ ಇದೆ. ಇದಕ್ಕೆ 'ಕಾರಣ' ಎಂದು ಅರ್ಥ. ಕನ್ನಡದಲ್ಲಿಯೂ ಅದೇ ಅರ್ಥ. ಯಾವುದಾದರೂ ಕೆಲಸವನ್ನು ಮಾಡದೆ ಇರುವಾಗ ಅದಕ್ಕೆ ಜನ ಏನಾದರೂ ಸಬೂಬನ್ನು ಹೇಳುತ್ತಾರೆ. ಇಂಗ್ಲಿಷಿನ excuse ಎಂಬ ಶಬ್ದದ ನಾಮಪದದ ಅರ್ಥ ಇದು. ಆದರೆ ಕನ್ನಡದಲ್ಲಿ ಆ ಶಬ್ದದ ಪ್ರಯೋಗದಲ್ಲಿ ವ್ಯಂಗ್ಯವಾದ ಸುಳ್ಳು ಕಾರಣ ಎಂಬ ಅರ್ಥವೇ ಹೆಚ್ಚು ಸ್ಪಷ್ಟ.

**ಸಭ್ಯ – ಸಭಿಕ** ಈ ಎರಡೂ ಶಬ್ದಗಳು ಸಂಸ್ಕೃತದ ಶಬ್ದಗಳು. ಸಭ್ಯ ಎಂದರೆ ಯೋಗ್ಯನಾದವನು, ಅರ್ಹನಾದವನು, ಸುಸಂಸ್ಕೃತನಾದವನು ಮುಂತಾದ ಅರ್ಥಗಳಿವೆ. ಸಭಿಕ ಎಂದರೆ ಜೂಜಿನ ಮನೆಯನ್ನು ಇಟ್ಟು ಇತರರ ಕೈಲಿ ಜೂಜನ್ನು ಆಡಿಸುವವನು ಎಂದರ್ಥ. ಶೂದ್ರಕ ಕವಿಯ ಮೃಚ್ಛಕಟಿಕ ಪ್ರಕರಣ ನಾಟಕದಲ್ಲಿ ಇದರ ಸ್ಪಷ್ಟ ಪ್ರಯೋಗವಿದೆ.

ಕನ್ನಡದಲ್ಲಿ ಸಭ್ಯ ಎಂಬ ಶಬ್ದದ ಅರ್ಥವನ್ನು ಹಾಗೆಯೇ ಉಳಿಸಿಕೊಂಡು ಮಾತಿನಲ್ಲಿಯೂ ಬರಹದಲ್ಲಿಯೂ ಅದನ್ನು ಪ್ರಯೋಗಿಸಲಾಗುತ್ತಿದೆ. ಆದರೆ ಸಭಿಕ ಎಂಬ ಶಬ್ದಕ್ಕೆ ಇರುವ ಅರ್ಥವು ಕನ್ನಡದಲ್ಲಿ ಮಾಯವಾಗಿ ಸಭೆಯಲ್ಲಿ ಉಪಸ್ಥಿತನಾಗಿರುವವನು ಎಂಬ ಅರ್ಥದಲ್ಲಿ ಆ ಶಬ್ದವು ಈಗ ಪ್ರಯೋಗವಾಗುತ್ತಿದೆ. ಒಂದು ಶಬ್ದದ ಅರ್ಥ ಏಕೆ ಬದಲಾಗುತ್ತದೆ ಹೀಗೆ, ಎಂಬುದನ್ನು ಕಂಡಕಂಡ ಎಲ್ಲ ಸಂದರ್ಭಗಳಲ್ಲಿಯೂ ವಿವರಿಸುವುದಕ್ಕಾಗುವುದಿಲ್ಲ. ಯಾರೊ ಒಬ್ಬೊಬ್ಬರು ತಿಳಿಯದೆ ಅದನ್ನು ಒಂದು ಸಲ ಉಪಯೋಗಿಸಿದರೂ ಅದು ಜನಪ್ರಿಯವಾಗಿ ಹೊಸ ಅರ್ಥದಲ್ಲಿ ಮಾತ್ರ ಪ್ರಯೋಗಗೊಳ್ಳಲು ಮೊದಲಾಗುತ್ತದೆ. ಈಗಂತೂ ಸಭೆ ಸೇರಿದಾಗ ಉಪನ್ಯಾಸಕರು ಸಭೆಯಲ್ಲಿರುವವರನ್ನು ಸಭಿಕ ಮಹಾಶಯರೇ ಎಂದೇ ಸಂಬೋಧಿಸುತ್ತಾರೆ. ಸಭಿಕ ಈಗ ಕನ್ನಡ ನಾಡಿನಲ್ಲಿ ಜೂಜಾಡುವುದಿಲ್ಲ. ಸಭೆಯಲ್ಲಿ ಭಾಗವಹಿಸಿ ಅದರ ಯಶಸ್ಸಿಗೆ

ಕಾರಣನಾಗುತ್ತಾನೆ. ಈ ಶಬ್ದ ತನ್ನ ಕನ್ನಡದ ಅವತಾರದಲ್ಲಿ ಗೌರವಾರ್ಹವಾಗಿರುವಂತೆ ಸಂಸ್ಕೃತಾರ್ಥದ ಸಭಿಕರೆಲ್ಲರೂ ಸಭ್ಯರಾಗಿಬಿಟ್ಟರೆ ಸಮಾಜಕ್ಕೆ ಮಹಾಪ್ರಯೋಜನವಿದೆ.

**ಸಮಂಜಸ, ಸಾಂದರ್ಭಿಕ** ಎರಡೂ ಸಂಸ್ಕೃತ ಶಬ್ದಗಳು. ಸಮಂಜಸ ಎಂದರೆ ನ್ಯಾಯವಾದ, ಯೋಗ್ಯವಾಗಿರುವ, ಹೊಂದಿಕೊಳ್ಳುವ ಎಂದರ್ಥ. ಸಾಂದರ್ಭಿಕ ಎಂದರೆ ಸಂದರ್ಭಕ್ಕೆ ಹೊಂದುವ, ಸಮಯಕ್ಕೆ ಸರಿಯಾಗಿರುವ, ಉಚಿತವಾದ ಎಂದರ್ಥ.

**ಸಮಕ್ಷಮ - ಸಮಕ್ಷ** ಈ ಶಬ್ದ ನಿಜವಾಗಿ ಸಮಕ್ಷ, ಅಂದರೆ ಕಣ್ಣೆದುರಿಗೆ. ಪತ್ರಗಳನ್ನು ಬರೆಯುವಾಗ ಇಂಥವರ ಸಮಕ್ಷಕ್ಕೆ ಎಂದು ಹಿಂದೆ ಸಂಪ್ರದಾಯನಿಷ್ಠರು ಬರೆಯುತ್ತ ಇದ್ದರು. ಪತ್ರಗಳಲ್ಲಿ ಯೋಗಕ್ಷೇಮಗಳಿಗೆ ಪತ್ರವನ್ನು ಬರೆಯುವುದು ಎಂದೂ ಬರೆಯುತ್ತಿದ್ದರು. ಇಂಥ ಬರಹಗಳಲ್ಲಿ ಯಾವ ಕಾರಣದಿಂದಲೋ ಸರಿಯಾದ ಶಬ್ದ ತಪ್ಪಿ ಸಮಕ್ಷಮ ಎಂಬುದು ಸಮಕ್ಷಕ್ಕೂ, ಯೋಗಕ್ಷೇಮ ಎಂಬುದು ಯೋಗಕ್ಷೇಮಗಳು ಎಂಬುದಕ್ಕೂ ಪ್ರತಿಯಾಗಿ ಪ್ರಯೋಗವಾಗಲು ಪ್ರಾರಂಭವಾಯಿತು. ಆ ತಪ್ಪು ಹಾಗೆಯೇ ನಿಂತುಬಿಟ್ಟಿದೆ. ಮಾನ್ಯ ಮಂತ್ರಿಗಳ ಸಮಕ್ಷಕ್ಕೆ ಎಂಬುದೇ ಸರಿಯಾದ ಕ್ರಮದ ಬರವಣಿಗೆ. ಯೋಗ = ಬಂದು ಸೇರಿರುವುದು. ಕ್ಷೇಮ = ಅದನ್ನು ರಕ್ಷಿಸುವುದು ಈ ಎರಡೂ ಬೇರೆ ಬೇರೆ. ಆದುದರಿಂದ ಬಹುವಚನವನ್ನು ಪ್ರಯೋಗಿಸಬೇಕು.

**ಸಮಜಾಯಿಷಿ** ಎಂದರೆ ಯಾವುದಾದರೂ ತಕರಾರು ಅಥವಾ ವಾದವಿವಾದ ಉಂಟಾದಾಗ ಎರಡು ಪಕ್ಷದವರಿಗೂ ಸೂಕ್ತ ವಿವರಣೆ ನೀಡಿ ಅವರಿಗೆ ಸಮಾಧಾನವಾಗುವಂತೆ ಮಾಡುವುದು. ಮರಾಠಿಯಲ್ಲಿ **ಸಮಜಾವಣೇಂ** ಶಬ್ದಕ್ಕೆ ವಿವರಿಸು, ಸಮಾಧಾನಕರವಾದ ವಿವರಣೆಯನ್ನು ನೀಡು ಎಂದರ್ಥ. ಇದು ಸಂಸ್ಕೃತದ ಸಂಬುದ್ಧಿ ಎಂಬ ಶಬ್ದಕ್ಕೆ ಸಂಬಂಧಿಸಿದೆ. ಪ್ರಾಕೃತದಲ್ಲಿ ಸಂಬುಜ್ಝಇ ಎಂಬ ಶಬ್ದವಿದೆ. ಅದು ಕೂಡ ಈ ಶಬ್ದಕ್ಕೆ ಹೊಂದುವ ಶಬ್ದವಾಗಿದೆ.

**ಸಮಯ** ಸಮಯ ಶಬ್ದಕ್ಕೆ ಕಾಲ ಎಂಬ ಅರ್ಥದ ಜೊತೆಗೆ ಇತರ ಅನೇಕ ಅರ್ಥಗಳಿವೆ. *೧. ಒಂದು ಸಭೆ ೨. ಒಪ್ಪಿಗೆ ೩. ಒಪ್ಪಂದ ೪. ಸಂದರ್ಭ ೫. ಮತಾಚಾರ ವಿಧಿ ೬. ಅವಕಾಶ ೭. ಸಿದ್ಧಾಂತ ಇತ್ಯಾದಿ.*

**ಸಮಷ್ಠಿ** ಸಮಷ್ಠಿ ಶಬ್ದ ತಪ್ಪು. ಸಮಷ್ಟಿ ಎಂದಿರಬೇಕು. ಈ ಶಬ್ದಕ್ಕೆ ಸಮೂಹ, ಎಲ್ಲ ಕಡೆಯೂ ಹಬ್ಬಿರುವಿಕೆ ಎಂಬ ಅರ್ಥಗಳಿವೆ. ಎಲ್ಲವೂ ಒಟ್ಟುಗೂಡಿರುವ ವಸ್ತು. ಪರಮಾತ್ಮ ಎಂಬ ಅರ್ಥವೂ ಇದೆ. ನೋಡಿ: ವ್ಯಷ್ಟಿ.

**ಸಮಾಚಾರ** ಇದು ಸಂಸ್ಕೃತ ಶಬ್ದ. ಸಮ್ + ಆ + ಚರ ಎಂದು ವಿಭಾಗ. ಚರ ಅಂದರೆ ಗತಿ, ಚಲನೆಗೆ ಸಂಬಂಧಪಟ್ಟದ್ದು ಎಂದು ಅರ್ಥ. ವರ್ತಮಾನ, ವಾರ್ತೆ. ಮತ್ಸ್ಯಪುರಾಣದಲ್ಲಿ '**ಪುಣ್ಯಸ್ತ್ರೀಣಾಂ ಸಮಾಚಾರಂ ಶ್ರೋತುಮಿಚ್ಛಾಮಿ**' ಎಂಬ ಮಾತು ಬರುತ್ತದೆ. ಪುಣ್ಯಸ್ತ್ರೀಯರ ವರ್ತಮಾನವನ್ನೇ ಕೇಳಬೇಕೆಂದು ಬಯಸುತ್ತೇನೆ ಎಂದು ಅರ್ಥ. ಇದು ತುಂಬ ಹಿಂದಿನ ಅರ್ಥ. ಸೀಮೆಯ ಆಚಾರ ಖಂಡಿತ ಅಲ್ಲ.

ಈ ಶಬ್ದವು ಸಂಸ್ಕೃತದಲ್ಲಿಯೇ ಎರಡು ಬಗೆಯಾಗಿ ರೂಪುಗೊಳ್ಳುತ್ತದೆ. ೧. ಸಮ + ಆಚಾರ = ಸಮಾಚಾರ. ಇಲ್ಲಿ ಸಮ ಎನ್ನುವುದು ವಿಶೇಷಣ. ಇದಕ್ಕೆ ಅರ್ಥ ಒಳ್ಳೆಯ ಆಚಾರ, ನಡವಳಿಕೆ, ನೇರವಾದ ಪ್ರಾಮಾಣಿಕ ವ್ಯವಹಾರ. ೨. ಸಮ್ + ಆಚಾರ = ಸಮಾಚಾರ. ಸಭೆ ಸಮಾರಂಭಗಳ ನಡವಳಿಕೆ, ಕಾರ್ಯಕಲಾಪ, ವರದಿ, ವಿಷಯ ಸಂಗ್ರಹ, ತಿಳಿವಳಿಕೆ, ಆಗುತ್ತಿರುವ ಕಾರ್ಯದ ವರದಿ. ಈ ಶಬ್ದಕ್ಕೆ ಸುದ್ದಿ ಎಂಬ ಅರ್ಥವೂ ಬರುತ್ತದೆ. ಹೀಗೆ ಬೇರೆ ಬೇರೆ ಮೂಲಗಳಿದ್ದರೂ ಈಗಿನ ಭಾಷೆಯ ಪ್ರಯೋಗದಲ್ಲಿ ಈ ಎಲ್ಲ

ಶಬ್ದಗಳಿಗೆ ಇಂಗ್ಲಿಷಿನ News ಎಂಬ ಶಬ್ದಕ್ಕೆ ಸಮಾನವಾದ ಅರ್ಥವಿರುವುದು ಕಾಣಬರುತ್ತದೆ. ಶಬ್ದಗಳ ಕಡೆಗೆ ಗಮನ ಕೊಡದೆ ಇರುವಾಗ ಆಗುವ ಅವ್ಯವಸ್ಥೆ ಇದು.

**ಸಮಾಧಿ** ಎಂಬುದು ಸಂಸ್ಕೃತ ಶಬ್ದ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ: ಮನಸ್ಸಿನ ಏಕಾಗ್ರತೆ ೨. ಆತ್ಮತತ್ವದ ಧ್ಯಾನ ೩. ಆತ್ಮದೊಡನೆ ಐಕ್ಯಸಾಧನೆ ಇತ್ಯಾದಿ. ಇದು ಯೋಗಶಾಸ್ತ್ರದ ಎಂಟನೆಯ ಅವಸ್ಥೆ. ಕ್ರಿಯಾಸಮಾಧಿ ಎಂದರೆ ವೀರಶೈವರ ಪ್ರಕಾರ ಶಿವಯೋಗಿಗಳಿಗೆ ಆಗಮೋಕ್ತವಾಗಿ ನೀಡುವ ಶವಸಂಸ್ಕಾರ. ನಿರ್ವಿಕಲ್ಪ ಸಮಾಧಿ ಜ್ಞಾತೃ ಮತ್ತು ಜ್ಞೇಯಗಳಿಗೆ ವ್ಯತ್ಯಾಸವು ತೋರದಂತೆ ಧ್ಯೇಯದಲ್ಲಿ ಲೀನವಾಗಿರುವುದು. ಇದು ಸಮಾಧಿಯ ಒಂದು ಭೇದ - ಯೋಗಶಾಸ್ತ್ರದಲ್ಲಿ. ಜೀವಂತಸಮಾಧಿ ಎಂದರೆ ಸಾಧಕನು ಬದುಕಿದ್ದಾಗಲೇ ಸ್ವನಿರ್ಧಾರದಿಂದ ತನ್ನ ದೇಹದ ಮೇಲೆ ಸಮಾಧಿ ಬೃಂದಾವನಾದಿಗಳನ್ನು ಕಟ್ಟಿಸಿಕೊಳ್ಳುವುದು.

**ಸಮುದ್ರ** ಎಂದರೆ ಆಕಾಶದಿಂದ ಬೀಳುವ ಎಲ್ಲ ಜಲವನ್ನೂ ತನ್ನ ಪರಿಧಿಯೊಳಗೆ ಮುದ್ರಿಸಿ ಹಿಡಿದು ಇಟ್ಟುಕೊಳ್ಳುವುದು. ಏಳು ಸಮುದ್ರಗಳಿವೆ, ಎಂದು ಪುರಾಣ ಕಥೆಗಳು ಹೇಳುತ್ತವೆ. ಅವು ಲವಣ, ಇಕ್ಷು, ಸುರಾ, ಸರ್ಪಿಸ್ಸು, ದಧಿ, ಕ್ಷೀರ ಮತ್ತು ಜಲ. ಅಂದರೆ ಉಪ್ಪು, ಕಬ್ಬಿನ ಹಾಲು, ಮದ್ಯ, ತುಪ್ಪ, ಮೊಸರು, ಹಾಲು ಮತ್ತು ನೀರು.

**ಸಮ್ಮುಖ** ಇದು ಸಂಸ್ಕೃತದಲ್ಲಿ ಅವ್ಯಯವಾದರೆ ಎದುರಾಗಿ ಎಂದೂ, ವಿಶೇಷಣವಾದರೆ ಎದುರಿಗೆ ಇರುವ ಎಂದೂ ನಾಮಪದವಾದರೆ ಎದುರುಬದುರು ಎಂದೂ ಅರ್ಥವಾಗುತ್ತದೆ. ಅಲ್ಲದೆ ಹಿರಿಯರ, ಸ್ವಾಮಿಗಳ, ರಾಜರ ಎದುರಿಗೆ ಎನ್ನುವಾಗ ಗೌರವವಾಗಿ ಸಮ್ಮುಖದಲ್ಲಿ ಎಂದೂ ಕನ್ನಡದಲ್ಲಿ ಪ್ರಯೋಗಿಸುತ್ತಾರೆ.

**ಸಮ್ಮೇಳನ, ಸಮಾವೇಶ, ಸಂಕಿರಣ, ಸಂಕೀರ್ಣ** ಈ ಎಲ್ಲವೂ ಸಂಸ್ಕೃತ ಶಬ್ದಗಳು. ಎಲ್ಲದರಲ್ಲಿಯೂ ಸಮ್ ಎಂಬ ಉಪಸರ್ಗ ಸೇರಿದೆ. ಅದನ್ನು ತೆಗೆದು ಈ ಶಬ್ದಗಳ ಅರ್ಥವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಮೇಲ, ಮೇಲನ, ಮಿಲನ ಈ ಎಲ್ಲ ಶಬ್ದಗಳಿಗೂ ಒಂದೆಡೆ ಸೇರುವುದು, ಎಂಬುದು ಅರ್ಥ. ಸಮ್ = ಚೆನ್ನಾಗಿ, ಸುಂದರವಾಗಿ, ಒಳ್ಳೆಯದಾಗಿ, ಸೊಗಸಾಗಿ ಮುಂತಾದ ಉತ್ಪ್ರೇಕ್ಷೆಯ ಅರ್ಥವನ್ನು ಅದಕ್ಕೆ ಸೇರಿಸಲಾಗಿದೆ. ಆವೇಶ, ವೇಶ ಎಂಬ ಶಬ್ದಗಳಿಗೂ ಪ್ರವೇಶ ಮಾಡುವುದು, ಒಳಗೆ ಸೇರುವುದು, ಎಂಬ ಅರ್ಥಗಳಿವೆ. ಅವಕ್ಕೆ ಇರುವ ಇತರ ಅರ್ಥಗಳು ನಮಗೆ ಈಗ ಪ್ರಮುಖವಾಗಿಲ್ಲ.

ಆದುದರಿಂದ ಸಮ್ಮೇಳನ, ಸಮಾವೇಶ ಎಂಬುದು ಯಾವುದಾದರೂ ಕಾರಣಕ್ಕಾಗಿ ಒಂದೆಡೆ ಸೇರುವ ಸಮಯ, ಸಂದರ್ಭವನ್ನು ಸೂಚಿಸುವುದಕ್ಕೆ ಉಪಯೋಗಿಸಬಹುದು.

ಸಂಕಿರಣದ ಮೂಲ ಕಿರಣ ಎಂಬ ಶಬ್ದ. ಕಿರಣ ಎಂದರೆ ಹರಡುವುದು, ಚದರಿಸುವುದು, ವ್ಯಾಪಿಸುವಂತೆ ಮಾಡುವುದು ಎಂದರ್ಥ. ಯಾವುದಾದರೂ ವಿಷಯಗಳಲ್ಲಿ ಆಲೋಚನೆಗಳನ್ನು ಅಭಿವ್ಯಕ್ತಿಸುವುದು ಎಂದು ಅರ್ಥವಾಗುತ್ತದೆ. ಇದು ದೊಡ್ಡ ಸಭೆ, ಸಮಾರಂಭಕ್ಕೆ ಅನ್ವಯಿಸುವುದಿಲ್ಲ. ಯಾವುದಾದರೂ ವಿಷಯದಲ್ಲಿ ಚೆನ್ನಾಗಿ ತಿಳಿವಳಿಕೆಯನ್ನು ಹೊಂದಿರುವವರು ಒಟ್ಟು ಸೇರಿ ಮೂಲಭೂತವಾದ ಸಂಶೋಧನೆ ಮುಂತಾದುವುಗಳನ್ನು ಕುರಿತು ಕೆಲವರ ಅಭಿಪ್ರಾಯವನ್ನು ಪ್ರಚಾರಪಡಿಸುವುದಕ್ಕೆ ಅಂಥ ಸಭೆಗಳನ್ನು ಮಾಡುತ್ತಾರೆ. ಇಂಗ್ಲಿಷಿನ ಸೆಮಿನಾರ್ ಎಂಬ ಶಬ್ದಕ್ಕೆ ಸರಿಸಮಾನವಾಗಿ ಇದನ್ನು ಈಗ ಉಪಯೋಗಿಸುತ್ತಿದ್ದಾರೆ. ಇದು ಸರಿಯಾಗಿದೆ.

ಸಂಕೀರ್ಣ ಎಂಬ ಶಬ್ದವು ಕೃ ಎಂಬ ಧಾತುವಿನಿಂದ ಬಂದಿದ್ದರೂ ಸಂಕಿರಣದ ಅರ್ಥವೂ ಅದರಲ್ಲಿದೆ. ಆದರೆ ಈ ಎರಡರಲ್ಲಿ ಒಂದನ್ನು ಸಂಕಿರಣ ಎಂಬುದನ್ನು ಮಾತ್ರ ಅಂಥ ಸಭೆಗಳಿಗೆ ಅನ್ವಯಿಸುವುದು ಫಲಕಾರಿ. ಸಂಕೀರ್ಣ ಶಬ್ದದಲ್ಲಿ ಮಿಶ್ರಣ, ಗೋಜು,

ಎಂಬಂತೆ ಇಂಗ್ಲಿಷಿನ ಕಾಂಪ್ಲೆಕ್ಸ್ ಎಂಬ ಶಬ್ದದ ಅರ್ಥಕ್ಕೆ ಅದು ಸಮೀಪವಾಗಿದೆ. ಅದನ್ನು ಹಾಗೇ ಉಪಯೋಗಿಸುವುದೇ ಸರಿ.

**ಸರಕಾರ** ಇದು ಪಾರಸೀ ಭಾಷೆಯ **ಸರ್‌ಕಾರ್** ಎಂಬ ಶಬ್ದದಿಂದ ಬಂದಿದೆ. ಮರಾಠಿಯಲ್ಲಿ ಸರ್ಕಾರ್ ಆಗಿದೆ. ಕನ್ನಡದಲ್ಲಿ ಸರಕಾರ ಎಂದು ಉಪಯೋಗವಾಗುತ್ತ ಇದೆ. ಇದಕ್ಕೆ ಒಂದು ದೇಶವನ್ನು ಆಳುತ್ತಿರುವ ವ್ಯವಸ್ಥೆ; ಏರ್ಪಾಡು ಎಂದರ್ಥ. ಕನ್ನಡದಲ್ಲಿಯೂ ಸರ್ಕಾರ ಎಂಬ ರೂಪವನ್ನು ಉಪಯೋಗಿಸುತ್ತಾರೆ. ಸರ್ಕಾರ, ಸರ್ಕ್ಕಾರ ಎಂದು ಈ ಶಬ್ದವನ್ನು ಎರಡು ರೀತಿಯಲ್ಲಿಯೂ ಬರೆಯಬಹುದು. ಹಾಗೆಯೇ ದರ್ಜೆ - ದರ್‍ಜೆ ಎಂದು ಎರಡು ರೂಪದಲ್ಲಿ ಬರೆಯಬಹುದು. ತಪ್ಪಲ್ಲ. ಇದು ರಕಾರ ಮತ್ತು ಅರ್ಕಾವೊತ್ತಿಗೆ ಇರುವ ಸಂಬಂಧ.

**ಸರಾಫು, ಸರಾಪ್** ಈ ಎರಡು ಸ್ವರೂಪವುಳ್ಳ ಶಬ್ದ ಅರಬ್ಬಿಯ ಭಾಷೆಗೆ ಸೇರಿದ್ದು. ಲೇವಾದೇವಿ ಮಾಡುವ ಮನುಷ್ಯ ಎಂದರ್ಥ. ಇಂಗ್ಲಿಷಿನಲ್ಲಿ Shroff = Banker, ಹಣದ ವಿನಿಮಯದ ಬಗ್ಗೆ ಸ್ಪಷ್ಟವಾದ ತಿಳಿವಳಿಕೆಯುಳ್ಳವನು.

**ಸರ್ಕಲ್ಲು ಕನ್ನಡವೇ?** Circle ಇದು ಇಂಗ್ಲಿಷ್ ಭಾಷೆಯಿಂದ ಕನ್ನಡಕ್ಕೆ ಬಂದ ಶಬ್ದ. ಇಂಗ್ಲಿಷ್ ಭಾಷೆಗೆ ಲ್ಯಾಟಿನ್ ಭಾಷೆಯಿಂದ ಬಂದಿದೆ. ಲ್ಯಾಟಿನ್ನಿನಲ್ಲಿ ಆ ಶಬ್ದದ ರೂಪ Circul. ಈ ಶಬ್ದಕ್ಕೆ ಜ್ಯಾಮಿತಿಯಲ್ಲಿರುವ ಅರ್ಥಕ್ಕಿಂತ ಹೆಚ್ಚು ವ್ಯಾಪಕವಾದ ಅರ್ಥವಿದೆ. A Circle of friends ಎಂಬುದನ್ನು ಗಮನಿಸಿ. ಗುಂಪು, ಸಮೂಹ ಇತ್ಯಾದಿ ಇನ್ನೂ ಅನೇಕ ಅರ್ಥಗಳಿವೆ ಇಂಗ್ಲಿಷ್ ಭಾಷೆಯಲ್ಲಿ. ರಸ್ತೆಗಳು ಕೂಡುವ ಕಡೆ ವೃತ್ತಗಳನ್ನು ನಿರ್ಮಿಸಿ ಆ ಸ್ಥಳಕ್ಕೆ ಯಾರಾದರೂ ಪ್ರಸಿದ್ಧರ ಹೆಸರಿಟ್ಟೋ; ಹಾಗೆಯೋ Circle ಎಂದು ಕರೆಯುತ್ತಾರೆ. ಉದಾ: ಬೆಂಗಳೂರಿನ Royan Circle.

**ಸರ್ವಜ್ಞ** ಈ ಶಬ್ದಕ್ಕೆ ಎಲ್ಲವನ್ನೂ ತಿಳಿದವನು ಎಂದರ್ಥ. ವಿಷ್ಣು, ಶಿವ, ಬುದ್ಧ ಇವರಿಗೂ ಈ ಶಬ್ದ ಅನ್ವಯಗೊಳ್ಳುತ್ತದೆ. **ಸರ್ವಂ ಜಾನಾತಿ ಇತಿ** ಎಂಬುದು ಸಂಸ್ಕೃತದ ವಿವರಣೆ. ಸರ್ವಜ್ಞಾ ಎಂದರೆ ದುರ್ಗಾದೇವಿ. ಕನ್ನಡದ ತ್ರಿಪದಿಗಳನ್ನು ಬರೆದ ಸರ್ವಜ್ಞ ಎಂಬ ಕವಿ ಇದ್ದಾನೆ. ಈತನ ತ್ರಿಪದಿಗಳನ್ನು ಸರ್ವಜ್ಞನ ವಚನಗಳು ಎಂದೇ ಕರೆಯುತ್ತಾರೆ. ಈ ತ್ರಿಪದಿಗಳು ಜನರ ಮಾತಿನಲ್ಲಿ ಈಗಲೂ ಪ್ರಚಾರದಲ್ಲಿವೆ. **ಸಾಲವನು ಕೊಂಬಾಗ.... ಬೆಚ್ಚನೆಯ ಮನೆಯಾಗೆ... ಸೊಡರೆಣ್ಣೆ ತೀರಿದರೆ...** ಮುಂತಾದವನ್ನು ನೆನೆಯಿರಿ. ಹಿಂದೆ ವಾದ ವಿವಾದಗಳಲ್ಲಿ ಆಧ್ಯಾತ್ಮಿಕ ವಿಚಾರಗಳಲ್ಲಿ ಎಲ್ಲರನ್ನೂ ಸೋಲಿಸಿದವರನ್ನು ಸರ್ವಜ್ಞ ಪೀಠದಲ್ಲಿ ಕೂರಿಸುತ್ತಿದ್ದರು.

**ಸರ್ವತಂತ್ರಸ್ವತಂತ್ರ** ಸರ್ವ ತಂತ್ರಗಳು ಎಂದರೆ ಎಲ್ಲ ಮತದರ್ಶನಗಳು ಅಥವಾ ತತ್ವಗಳು + ಸ್ವತಂತ್ರ. ಆ ಎಲ್ಲ ಮತದರ್ಶನಗಳನ್ನೂ ಸಂಪೂರ್ಣವಾಗಿ ಬಲ್ಲವನು ಎಂದರ್ಥ. ಸರ್ವತಂತ್ರ ಎಂಬ ಶಬ್ದಕ್ಕೂ ಅದೇ ಅರ್ಥವಿದೆ. **ಸರ್ವಾಣಿ ತಂತ್ರಾಣಿ ಯಸ್ಯ** ಎಂದು, ಆ ಶಬ್ದದ ವಿಗ್ರಹವಾಕ್ಯ. ಕೆಲವು ದರ್ಶನಗಳ ಮಠಾಧಿಪತಿಗಳ ಬಿರುದುಗಳಲ್ಲಿ ಸರ್ವತಂತ್ರ ಸ್ವತಂತ್ರ ಎಂಬುದು ಉಲ್ಲೇಖವಾಗಿದೆ. ಸ್ವತಂತ್ರ ಎಂಬುದು ಹೆಚ್ಚಾಗಿ ಗುಣವಾಚಕವಾಗಿ ಪ್ರಯೋಗವಾಗುತ್ತದೆ. ಸ್ವತಂತ್ರವಾದ free ಎಂಬಂತೆ. ಸ್ವಾತಂತ್ರ್ಯ ಎಂದರೆ freedom.

**ಸರ್ವೇ ಸಾಮಾನ್ಯ** ಎಂಬುದು ಸಂಸ್ಕೃತದ ಒಂದು ಪದಪುಂಜ. ಸರ್ವ ಶಬ್ದಕ್ಕೆ ಪ್ರಥಮಾ ದ್ವಿತೀಯಾ ವಿಭಕ್ತಿಗಳಲ್ಲಿ ಬಹುವಚನದಲ್ಲಿ ಸರ್ವೇ ಎಂಬ ರೂಪವು ಸಿದ್ಧಿಸುತ್ತದೆ. ಇದು ಪುಲ್ಲಿಂಗದ ರೂಪ. ಸರ್ವೇ ಸಾಮಾನ್ಯ ಎಲ್ಲರೂ ಸಾಮಾನ್ಯರೇ, ಎಲ್ಲ ಕಡೆಯೂ ಕಾಣಬರುವುದು ಎಂದು ಅರ್ಥ. ಆದರೆ ಕನ್ನಡದಲ್ಲಿ ಎಲ್ಲ ಕಡೆಯೂ ಒಂದೇ, ಬಹು

ವ್ಯಾಪಕವಾಗಿರುವುದು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾ ಇದ್ದೇವೆ. ಬಹು ಸಾಧಾರಣ ಎಂದು ಅದರ ಅರ್ಥ.

**ಸರ್ವೋಚ್ಚ ನ್ಯಾಯಾಲಯ** ಇಂಗ್ಲಿಷಿನ Supreme Court ಎಂಬ ಶಬ್ದಕ್ಕೆ ಸರಿಯಾದ ಶಬ್ದ ಇದು. ಈಗ ಇದು ಸರ್ವರಿಗೂ ಪರಿಚಯವಾಗಿದೆ. ದೇಶದ ಎಲ್ಲ ಕಡೆ ಈ ಶಬ್ದವನ್ನೇ ಉಪಯೋಗಿಸುತ್ತಿದ್ದಾರೆ. ಹೀಗೆ ಪ್ರಯೋಗಕ್ಕೆ ಬಂದ ಶಬ್ದಗಳು ಉಳಿದು ಬಿಡುತ್ತವೆ.

**ಸಲೀಸು** ಸಲೀಸು ಅರಬ್ಬೀ ಭಾಷೆಯ ಶಬ್ದ. ಅದಕ್ಕೆ ಅಲ್ಲಿ ಹಗುರ, ಸ್ವಲ್ಪ, ಎಳಸಾದ, ಸಾಧಾರಣ, ಸಮಚಿತ್ತ ಈ ಅರ್ಥಗಳಿವೆ. ಕನ್ನಡದಲ್ಲಿ ಸಲೀಸು - ಅಡ್ಡಿಯಿಲ್ಲದಿರುವುದು ಎಂದು ಹೇಳುವಲ್ಲಿ ವಿರುದ್ಧಾರ್ಥವಿದೆ. ಆದರೆ ಕನ್ನಡಕ್ಕೆ ಕನ್ನಡ ಶಬ್ದವನ್ನೇ ವಿರುದ್ಧವಾಗಿರುವುದನ್ನೇ ಹುಡುಕಬೇಕು. ನೆಮ್ಮದಿ, ನಿರಾಳ ಇತ್ಯಾದಿ ಕನ್ನಡ ಶಬ್ದಗಳಿವೆ, ವ್ಯಗ್ರ ಶಬ್ದಕ್ಕೆ ವಿರುದ್ಧವಾಗಿ.

**ಸಲ್ಲುಗೆ** ಸಲ್, ಸಲ್ಲು ಎಂಬ ಕ್ರಿಯಾರ್ಥ ಶಬ್ದದ ವಿಧಿರೂಪ. ಸಲ್ಲಲಿ, ಉಂಟಾಗಲಿ ಎಂದರ್ಥ.

**ಸವಡು** ಇದು ಮರಾಠೀಭಾಷೆಯಿಂದ ಬಂದ ಶಬ್ದ. ಇದಕ್ಕೆ ಬಿಡುವು, ಅವಕಾಶ, ವಿಶ್ರಾಂತಿ, ಸೌಕರ್ಯ ಮುಂತಾದ ಅರ್ಥಗಳಿವೆ.

**ಸವದತ್ತಿ** ಬೆಳಗಾವಿ ಜಿಲ್ಲೆಯ ಈ ತಾಲ್ಲೂಕು ಕೇಂದ್ರವನ್ನು ಈಗ ಸವದತ್ತಿ ಎಂದು ಕರೆಯುತ್ತಾರೆ. ಇದು ಜನರ ಉಚ್ಚಾರಣೆಯಲ್ಲಿ ಸೌಂದತ್ತಿ ಎಂದಾಗಿದೆ. ಇದಕ್ಕೆ ಕಾರಣ ಆ ಶಬ್ದದಲ್ಲಿರುವ ವ ಕಾರ. ಇದು ಕೆಲವು ವೇಳೆ ಅನುನಾಸಿಕವಾದುದರಿಂದ ಆ ಬಗೆಯ ಉಚ್ಚಾರಣೆ ಸಾಧ್ಯವಾಗಿದೆ. ಸವದತ್ತಿ ಎಂಬ ಶಬ್ದ ಕೂಡ ಹಿಂದೆ ಸುಗಂಧವತಿ ಎಂಬ ರೂಪವನ್ನು ಪಡೆದಿತ್ತು ಎಂದು ಹೇಳುತ್ತಾರೆ. ೯ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಇದು ರಾಷ್ಟ್ರಕೂಟರ ರಾಜಧಾನಿಯಾಗಿತ್ತು.

**ಸವಾಲ್ - ಸವಾಲು** ಇದು ಅರಬ್ಬಿಯ **ಸುಆಲ್** ಎಂಬ ಶಬ್ದದ ಕನ್ನಡ ರೂಪ. ಇದಕ್ಕೆ ಪ್ರಶ್ನೆ ಎಂದರ್ಥ. **ಜವಾಬ್** ಎಂದರೆ ಉತ್ತರ. ಸವಾಲು ಎಂಬ ರೂಪ ಕನ್ನಡದಲ್ಲಿ ಹೆಚ್ಚಾಗಿ ಉಪಯೋಗದಲ್ಲಿದೆ. ಇದಕ್ಕೆ ಸ್ಪರ್ಧೆ ಹೂಡು ಎಂದು ಅರ್ಥ. ಸವಾಲು ಹಾಕು, ಸವಾಲು ಹೂಡು ಎಂದರೆ ಎದುರಿಸು, ಪ್ರತಿಭಟಿಸು ಎಂದು ಅರ್ಥ. **ಸವಾಲ್ - ಜವಾಬ್** ಎಂಬುದು ಜೊತೆಯಾಗಿ ಬರುವ ನುಡಿಗಳು. ಪ್ರಶ್ನೆ-ಉತ್ತರ ಎಂದು ಅದಕ್ಕೆ ಅರ್ಥ.

**ಸವಿ** ಸವಿ ಎನ್ನುವುದು ಕನ್ನಡ ಶಬ್ದ. ಅದಕ್ಕೆ ರುಚಿ ಎಂದು ಅರ್ಥ. ಸಿಹಿ ಎಂಬ ಅರ್ಥವೂ ಬರುವುದುಂಟು. ಕ್ರಿಯಾಪದವಾದರೆ ರುಚಿಯನ್ನು ಕಾಣು ಎಂದರ್ಥ. ಆದುದರಿಂದ ಕಹಿ ವಿರುದ್ಧ ಶಬ್ದವಲ್ಲ. ಕಹಿಗೆ ಸಿಹಿ ವಿರುದ್ಧ.

**ಸವ್ಯಸಾಚಿ** ಸವ್ಯಸಾಚಿ ಎನ್ನುವುದು ಪಾಂಡವರಲ್ಲಿ ಮುಖ್ಯನಾದ ಅರ್ಜುನನ ಇನ್ನೊಂದು ಹೆಸರು. ಎಡಗೈಯಿಂದಲೂ ಶರಸಂಧಾನ ಮಾಡಬಲ್ಲ ಶಕ್ತಿಯುಳ್ಳವನಾಗಿದ್ದನು ಅರ್ಜುನ. ಭಾರತದಲ್ಲಿ ವಿರಾಟ ಪರ್ವದಲ್ಲಿ ವ್ಯಾಸರು ಅರ್ಜುನನ ಬಾಯಿಯಲ್ಲೇ ಈ ಮಾತನ್ನು ಹೇಳಿಸಿದ್ದಾರೆ. **ಉಭೌ ಮೇ ದಕ್ಷಿಣೌ ಪಾಣೀ ಗಾಂಡೀವಸ್ಯ ವಿಕರ್ಷಣೇ.** ಗಾಂಡೀವದ ಹೆದೆಯನ್ನು ಎಳೆದು ಬಾಣ ಹೂಡಿ ಬಿಡುವುದಕ್ಕೆ ನನ್ನ ಎರಡೂ ಕೈಗಳು ಸಮರ್ಥವಾದವು. ಅಂಥವನೇ ಸವ್ಯಸಾಚಿ, ಪ್ರಪಂಚದಲ್ಲಿ ಮತ್ತೊಬ್ಬನಿಲ್ಲ.

**ಸಸೇಮಿರಾ ಎಂದರೇನು ?** ಮಹಾಕವಿ ಕಾಳಿದಾಸನ ಬಗ್ಗೆ ಅನೇಕ ಕಥೆಗಳಿವೆ. ಇವೆಲ್ಲ ಚಾರಿತ್ರಿಕ ಕಥೆಗಳಲ್ಲದಿದ್ದರೂ ಆ ಕವಿಯ ಹಿರಿಮೆಯನ್ನು ಸೂಚಿಸುವುದಕ್ಕಾಗಿ ಜನತೆ ಕಟ್ಟಿರುವ ಕಥೆಗಳು. ಅಂಥ ಕಥೆಗಳಲ್ಲಿ ಇದೂ ಒಂದು, ಸಸೇಮಿರಾ ಕಥೆ.

ಭೋಜರಾಜನ ಮಗನು ಬೇಟೆಯಾಡುವುದಕ್ಕೆಂದು ಕಾಡಿಗೆ ಹೋದನಂತೆ. ಆಗ ಭಯಂಕರವಾದ ಹುಲಿಯೊಂದು ಅವನನ್ನು ಅಟ್ಟಿಸಿಕೊಂಡು ಬಂತು. ಅವನು ಹತ್ತಿರವೇ ಇದ್ದ ಒಂದು ಮರವನ್ನೇರಿ ಕುಳಿತನು. ಮರದ ಮೇಲೆ ಒಂದು ಕರಡಿ ಕುಳಿತಿತ್ತು. ಆದರೆ

ಅದು ಅವನನ್ನು ಏನೂ ಮಾಡದೆ ಮರದ ಮೇಲೆ ರಕ್ಷಣೆ ಪಡೆಯಲು ಅನುಕೂಲ ಮಾಡಿಕೊಟ್ಟಿತು. ಕೆಳಗಿದ್ದ ಹುಲಿಯು ಕರಡಿಯನ್ನು ಕುರಿತು, ಕಾಡಿನ ಪ್ರಾಣಿಗಳಿಗೆಲ್ಲ ಶತ್ರುವಾದ ಮನುಷ್ಯನನ್ನು ಕೆಳಗೆ ತಳ್ಳುವಂತೆ ಕೇಳಿಕೊಂಡಿತು. ಆದರೆ ಕರಡಿಯು "ಶರಣು ಬಂದವರನ್ನು ರಕ್ಷಿಸಬೇಕಾದುದು ಧರ್ಮ. ನಾನು ಹಾಗೆ ಮಾಡುವುದಿಲ್ಲ" ಎಂದಿತು. ಹೀಗೆ ಹೇಳಿ ಅದು ನಿದ್ದೆ ಮಾಡಿತು. ಈ ಸಮಯಕ್ಕೆ ಕಾದಿದ್ದ ಹುಲಿಯು ರಾಜಕುಮಾರನನ್ನು ಕುರಿತು "ಎಲೈ, ರಾಜಕುಮಾರನೆ, ಕರಡಿಯು ನಿಜವಾಗಿ ನಿನಗೆ ರಕ್ಷಣೆ ನೀಡಿಲ್ಲ. ಅದಕ್ಕೆ ಹಸಿವಾದಾಗ ನೀನೇ ಒಳ್ಳೆಯ ಆಹಾರವೆಂದು ನಿನ್ನನ್ನು ಉಳಿಸಿಕೊಂಡಿದೆ. ನೀನು ಅದನ್ನು ಕೆಳಕ್ಕೆ ತಳ್ಳು. ನಾನದನ್ನು ತಿಂದು ನಿನ್ನನ್ನು ಉಳಿಸುತ್ತೇನೆ" ಎಂದಿತು. ರಾಜಕುಮಾರನು ಹುಲಿಯ ಮಾತನ್ನು ನಂಬಿ ಕರಡಿಯನ್ನು ನೂಕುವುದರಲ್ಲಿದ್ದನು. ಅಷ್ಟು ಹೊತ್ತಿಗೆ ಸರಿಯಾಗಿ ಕರಡಿಯು ಎದ್ದು ರಾಜಕುಮಾರನ ಬುದ್ಧಿಯನ್ನು ಕಂಡು ಅವನ ನಾಲಿಗೆಯನ್ನು ಎಳೆದು ಅದರಲ್ಲಿ ಸಸೇಮಿರಾ ಎಂಬ ನಾಲ್ಕು ಅಕ್ಷರಗಳನ್ನು ಬರೆದು ತನ್ನ ಪಾಡಿಗೆ ತಾನು ಮರದಿಂದ ಇಳಿದು ಹುಲಿಯಿಂದ ತಪ್ಪಿಸಿಕೊಂಡು ಹೊರಟುಹೋಯಿತು. ಹುಲಿಯೂ ಬೇರೆ ಆಹಾರವನ್ನು ಹುಡುಕಿಕೊಂಡು ಹೊರಟುಹೋಯಿತು. ರಾಜಕುಮಾರನಿಗೆ ಮಾತೇ ನಿಂತುಹೋಯಿತು. ಬಾಯಿ ಬಿಟ್ಟರೆ ಅವನ ಬಾಯಿಂದ ಸಸೇಮಿರಾ ಎಂಬ ನಾಲ್ಕು ಅಕ್ಷರಗಳು ಮಾತ್ರ ಬರುತ್ತಿದ್ದುವು. ರಾಜಕುಮಾರನ ಜೊತೆಗಾರರು ಅವನನ್ನು ಹುಡುಕಿಕೊಂಡು ಬಂದು ಅವನಿಗಾಗಿದ್ದ ಸ್ಥಿತಿಯನ್ನು ಕಂಡು ಹೆದರಿದರು. ಅವರು ಅವನೊಡನೆ ಅರಮನೆಗೆ ಬಂದು ರಾಜನಿಗೆ ರಾಜಕುಮಾರನ ಅವಸ್ಥೆಯನ್ನು ತಿಳಿಸಿದರು. ಈ ವಿಚಾರವನ್ನು ರಾಜಕುಮಾರನು ಮಹಾಕವಿ ಕಾಳಿದಾಸನಿಗೆ ತಿಳಿಸಿದಾಗ ಅವನು ಬಂದು "ಮಿತ್ರರಾದವರಿಗೆ ದ್ರೋಹ ಮಾಡುವುದು ಮಹಾಪರಾಧ" ಎಂಬ ಅರ್ಥ ಬರುವ ಸಕಾರದಿಂದ ಮೊದಲಾಗುವ ಒಂದು ಶ್ಲೋಕವನ್ನು ಹೇಳಿದನು. ಆಗ ರಾಜಕುಮಾರನಿಗೆ ಏನೋ ಹೊಳೆದಂತಾಗಿ ಸ ಕಾರವನ್ನು ಬಿಟ್ಟು ಸೇಮಿರಾ ಎಂದು ಮೂರು ಅಕ್ಷರವನ್ನು ಹೇಳಿದನು. ಕಾಳಿದಾಸನು ಸೇ ಎಂಬ ಅಕ್ಷರದಿಂದ ಪ್ರಾರಂಭ ಮಾಡಿ ಮತ್ತೊಂದು ಶ್ಲೋಕವನ್ನು ಹೇಳಿದನು. ರಾಜಕುಮಾರನ ಬಾಯಿಯಲ್ಲಿ ಆಗ ಮಿರಾ ಎಂಬ ಎರಡೇ ಅಕ್ಷರ ಹೊರಟಿತು. ಮಿ ಎಂಬ ಅಕ್ಷರದಿಂದ ಇನ್ನೂ ಒಂದು ಶ್ಲೋಕವನ್ನು ಹೇಳಿದಾಗ ರಾಜಕುಮಾರನ ಬಾಯಿಯಲ್ಲಿ ರಾ ಎಂಬ ಒಂದೇ ಅಕ್ಷರ ಹೊರಟಿತು. ಆಗ ಕಾಳಿದಾಸನು ರಾಜನನ್ನು ಕುರಿತು ಜನರಿಗೆ ದಾನ ಮಾಡುವಂತೆ ಇನ್ನೂ ಒಂದು ಶ್ಲೋಕವನ್ನು ಹೇಳಿದನು. ಆಗ ರಾಜಕುಮಾರನ ಬಾಯಿಂದ ಧಾರಾಳವಾಗಿ ಮಾತು ಬಂದಿತು. ರಾಜನಿಗೆ ಸಂತೋಷವಾಗಿ ಕಾಳಿದಾಸನ ಹಿರಿಮೆಯನ್ನು ತಿಳಿದು ಅವನಿಗೆ ಅನೇಕ ಸನ್ಮಾನಗಳನ್ನು ಮಾಡಿದನು. ಇಂಥ ಕಥೆಗಳು ಅನೇಕವಾಗಿವೆ. ಇವುಗಳನ್ನು ಪರಸ್ಪರ ಸಂಬಂಧಿಸಿದ ಕಥೆಗಳನ್ನಾಗಿ ಮಾಡಿ ಹರಿಕಥೆ ಮಾಡುವ ದಾಸರು ಹಿಂದೆ ಜನರಿಗೆ ಉಪದೇಶ ಮಾಡುತ್ತಿದ್ದರು. ಈ ಸಂಪ್ರದಾಯ ಆಧುನಿಕ ಕಾಲದಲ್ಲಿ ಮಾಯವಾಗುತ್ತಿದೆ.

ಸಸ್ತನಿ ಮಕ್ಕಳು ಮರಿಗಳಿಗೆ ಸ್ತನಗಳ ಮೂಲಕ ಹಾಲು ಕುಡಿಸಿ ಬೆಳೆಸುವ ಪ್ರಾಣಿಗಳಿಗೆಲ್ಲ, ಮಾನವನಿಗೆ ಕೂಡ ಈ ಹೆಸರು ಸಲ್ಲುತ್ತದೆ. ಚೆನ್ನಾಗಿ ಪರಿಶೀಲಿಸಿದರೆ ಸ್ತನಿ ಎಂಬ ಶಬ್ದವನ್ನೇ ಕನ್ನಡದಲ್ಲಿ ಸಾಧಿಸಬಹುದು. ಅದಕ್ಕೇ ಸ್ತನವುಳ್ಳದ್ದು ಎಂಬ ಅರ್ಥ ಬರುತ್ತದೆ. ಆದರೆ ಅಜಾಗಳಸ್ತನ ಎಂಬುದಿದೆ. ಅದು ಸ್ತನಿ ಎಂಬ ಅರ್ಥಕ್ಕೆ ಹೊಂದುವುದಿಲ್ಲ. ಆದರೂ ಸಸ್ತನಿ ಎಂಬುದು ಅನಾವಶ್ಯಕವಾಗಿ ಸಕಾರದಿಂದ ಕೂಡಿದೆ ಎಂದೆನಿಸುತ್ತದೆ. ಆದರೆ ಪ್ರಚಾರಕ್ಕೆ ಬಂದಿರುವ ಶಬ್ದವನ್ನು ಬಿಡುವುದು ಕಷ್ಟ. ಸಸ್ತನಿ ಕನ್ನಡದಲ್ಲಿ ನೆಲೆ ನಿಂತಿದೆ.

ಸಹ ಅದೂ ಸಹ, ಇದೂ ಸಹ, ಹೇಳಿದರೂ ಸಹ, ಬೈದರೂ ಸಹ ಹೀಗೆ

ಉಪಯೋಗಿಸುವುದು ಸಾಮಾನ್ಯವಾಗಿ ಬಾಯಿ ಮಾತಿನಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅದೂ ಎಂಬಲ್ಲಿರುವ ಊ ಎಂಬ ಸಮುಚ್ಚಯ ಪ್ರತ್ಯಯವೇ ಸಹ ಶಬ್ದದ ಕೆಲಸವನ್ನು ಮಾಡುತ್ತದೆ. ಇಲ್ಲಿ ಸಹ ಅಸಗತ್ಯ. ಆದರೆ ಬಾಯಿ ಮಾತಿನಲ್ಲಿ ಅವಧಾರಣೆ, ಒತ್ತಾಯವನ್ನು ತಿಳಿಸುವುದಕ್ಕಾಗಿ ಹೀಗೆ ಕೆಲವು ವೇಳೆ ಶಬ್ದಗಳನ್ನು ಸೇರಿಸುವುದುಂಟು. **ಕರೆದರೂ ಕೂಡ ಅವರು ನಮ್ಮ ಮನೆಗೆ ಬರಲಿಲ್ಲ** ಎಂಬ ವಾಕ್ಯವನ್ನೇ ನೋಡಿ. ಹೀಗೆ ಅಲ್ಲಿಯೂ ಅವಧಾರಣೆಯೇ ಮುಖ್ಯ. ಇದನ್ನು ಬರಹದಲ್ಲಿ ಬಿಡಬೇಕಾಗುತ್ತದೆ. ಬರಹದಲ್ಲಿ ಅದು ವಾಕ್ಯಗಳ ಬಿಗಿಯನ್ನು ಸಡಿಲಗೊಳಿಸುತ್ತದೆ.

**ಸಹಸ್ರಾಕ್ಷ** ಸಾವಿರಾರು ಕಣ್ಣುಳ್ಳವನು. ಮೈ ಎಲ್ಲ ಕಣ್ಣಾಗಿರುವವನು ಇಂದ್ರ. ಒಂದು ಶಾಪದಿಂದ ಇಂದ್ರನಿಗೆ ಹೀಗಾಯಿತು ಎಂಬ ಅಹಲ್ಯೆಯ ಕತೆ ಇದೆ. ಸಹಸ್ರಾಕ್ಷ ಎಂದರೆ ಸಾವಿರ ಕಣ್ಣುಗಳು ಇದ್ದುವು ಎಂದು ಅರ್ಥವಲ್ಲ. ಮೈ ಎಲ್ಲ ಕಣ್ಣಾಗಿತ್ತು ಎಂದು ಅರ್ಥ. ಪುರುಷ ಸೂಕ್ತದಲ್ಲಿ ಈ ಮಾತು ಬರುತ್ತದೆ. ಪುರುಷ ಸೂಕ್ತ ಎಂಬುದು ಋಗ್ವೇದದ ಹತ್ತನೆಯ ಮಂಡಲದ ತೊಂಬತ್ತನೆಯ ಸೂಕ್ತ. ಇದರ ಮೊದಲ ಋಕ್ಕು ಹೀಗಿದೆ:-

***ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್***
***ಸಭೂಮಿಂ ವಿಶ್ವತೋವೃತ್ವಾ ಅತ್ಯತಿಷ್ಠದ್ದಶಾಂಗುಲಮ್***

ಇದು ನಾರಾಯಣನ ವರ್ಣನೆ. ಅವನು ಸಾವಿರಾರು ತಲೆಯುಳ್ಳವನು, ಸಾವಿರಾರು ಕಣ್ಣು ಕಾಲುಗಳುಳ್ಳವನು. ಅವನು ಭೂಮಿಯನ್ನೆಲ್ಲಾ ವ್ಯಾಪಿಸಿ ಹತ್ತು ಅಂಗುಲಗಳಷ್ಟು ದೂರದಲ್ಲಿರುತ್ತಾನೆ. ಇಲ್ಲಿಯೂ ಸಾವಿರ ಎಂದರೆ ಅನಂತ ಎಂದೇ ಅರ್ಥ.

**ಸಹಾನುಭೂತಿ, ಕರುಣೆ** ಸಹಾನುಭೂತಿ ಎಂದರೆ ಅನುಭವ. ಮತ್ತೊಬ್ಬರು ಕಷ್ಟವನ್ನೋ ಹಿಂಸೆಯನ್ನೋ ಅನುಭವಿಸುತ್ತಿದ್ದಾಗ ನಾವೂ ಅವರ ಅನುಭವವನ್ನೇ ಪಡೆದಂತೆ ಭಾವಿಸಿರುವುದು. ಸಹ + ಅನುಭೂತಿ. ಇದು ಮನಸ್ಸಿನಲ್ಲಿ ಅದೇ ಬಗೆಯ ಭಾವನೆಗಳನ್ನು ತಳೆದಿರುವಿಕೆ. ಕರುಣೆ ಎಂದರೆ ಇತರರ ದುಃಖವನ್ನು ನಿವಾರಣೆ ಮಾಡುವ ಅಪೇಕ್ಷೆ. ಇದು ಸಹಾನುಭೂತಿಯ ಮುಂದಿನ ಮಜಲು. ಆದ್ದರಿಂದ ಹೆಚ್ಚು ಪ್ರಯೋಜನಕರವಾದದ್ದು. **'ಕರುಣಾಳು ಬಾ ಬೆಳಕೆ'** ಎಂಬ ಬಿ.ಎಂ.ಶ್ರೀ. ಅವರ ಅನುವಾದವನ್ನು ಗಮನಿಸಿ. ನೋಡಿ: ಕರುಣೆ.

**ಸಹೋದರ - ಸಹೋದರಿ ಸೋದರ - ಸೋದರಿ** ಸಹ + ಉದರ, ಸ + ಉದರ ಹೀಗೆ ಸಹೋದರ, ಸೋದರ ಎಂಬ ರೂಪವನ್ನು ಪಡೆಯುತ್ತವೆ. ಸಹ, ಸ ಈ ಎರಡಕ್ಕೂ ಒಡನೆ, ಸಂಗಡ ಎಂದೇ ಅರ್ಥ. ಆದುದರಿಂದ ಎರಡನ್ನೂ ಆ ಅರ್ಥದಲ್ಲಿ ಉಪಯೋಗಿಸಬಹುದು. ಕವಿಗಳ ಪ್ರಯೋಗ ಇದಕ್ಕೆ ದೊಡ್ಡ ಆಧಾರವಾಗಿದೆ. ಕುಮಾರವ್ಯಾಸನ ಈ ವಾಕ್ಯಗಳನ್ನು ನೋಡಿ. **'ವೇದಪುರುಷನ ಸುತನ ಸುತನ ಸಹೋದರನ ಹೆಮ್ಮಗನ....'** (ಪೀಠಿಕಾ ಸಂಧಿ, ೨೩) ಇನ್ನೊಂದು ಉದ್ಯೋಗಪರ್ವದ ೧-೨೭. **ಸೋದರರ ಮನ ಕದಡಿದವು ದಾಯಾದ ವಿಷಯದಲ್ಲಿನ್ನು ಧಾರಿಣಿಗೆ ಕಾದುವೆವು.** ವಿಸ್ತಾರವಾದ ಅರ್ಥದಲ್ಲಿ ಆಲಂಕಾರಿಕವಾಗಿ ನಮ್ಮ ದೇಶದಲ್ಲಿ ಹಿಂದುಗಳೂ ಮಹಮದ್ದೀಯರೂ ಸೋದರರಂತೆ ಬದುಕಬೇಕು ಎನ್ನುವ ಉಪಯೋಗದ ರೀತಿಯೇ ಬೇರೆ. ಉಪನ್ಯಾಸ ಮಾಡುವಾಗ ಸೋದರರೇ ಸೋದರಿಯರೇ ಎನ್ನುವಾಗಲೂ ಅದು ಆಲಂಕಾರಿಕ ಅಷ್ಟೇ! ಎರಡಕ್ಕೂ ಯಾವ ವ್ಯತ್ಯಾಸವೂ ಇಲ್ಲ.

**ಸಾಂತ** ಎಂದರೆ ಸಕಾರದಿಂದ ಕೊನೆಗೊಂಡದ್ದು ಎಂದರ್ಥ. ಮನಸ್, ರಜಸ್, ತಮಸ್ ಮುಂತಾದುವು ಸಾಂತ ಶಬ್ದಗಳು. ಸಾಂತತೆ ಎಂದರೆ ಸಕಾರಾಂತವಾಗಿರುವಿಕೆ ಎಂದರ್ಥ.

**ಸಾಂದರ್ಭಿಕ** ಸಾಂದರ್ಭಿಕ ಎಂದರೆ ಸಂದರ್ಭಕ್ಕೆ ಹೊಂದುವ, ಸಮಯಕ್ಕೆ ಸರಿಯಾಗಿರುವ, ಉಚಿತವಾದ ಎಂದರ್ಥ.

**ಸಾಂಪುತ, ಸಂಪುತಿ** ಸಾಂಪ್ರತ, ಸಂಪ್ರತಿ ಈ ಎರಡೂ ಸಂಸ್ಕೃತದ ಅವ್ಯಯಗಳು. ಈಗ, ಈ ಕಾಲದಲ್ಲಿ, ಇದೇ ಸಮಯದಲ್ಲಿ ಎಂದು ಎರಡಕ್ಕೂ ಅರ್ಥ. ಸಾಂಪ್ರತಮ್ ಎಂಬುದಕ್ಕೆ ಈ ಕಾಲದಲ್ಲಿ ಇರುವ ಎಂಬ ಗುಣವಾಚಕದ ಅರ್ಥವೂ ಬರುತ್ತದೆ.

**ಸಾಕೀನ್** ಇದು ಅರಬ್ಬಿ ಭಾಷೆಯ 'ಸಾಕಿನ್' ಎಂಬ ಶಬ್ದದ ಅಪಭ್ರಂಶ. ಇದಕ್ಕೆ ಒಂದೆಡೆ, ವಾಸವಾಗಿರುವ ಸ್ಥಳ ಎಂದರ್ಥ.

**ಸಾಕ್ಷರತೆ** ಶಬ್ದಕ್ಕೆ ಪ್ರಾಧಾನ್ಯವನ್ನು ನೀಡುತ್ತಿದ್ದೇವೆ. ಕನ್ನಡ ಶಬ್ದವಲ್ಲವೇ ? ಅಕ್ಷರ = ಅಕ್ಕರ. ಅಕ್ಕರವನ್ನು ಬಲ್ಲವನು ಅಕ್ಕರಿಗ. ಇದು ಕನ್ನಡದಲ್ಲಿ ಹಿಂದಿನಿಂದ ಪ್ರಚಾರದಲ್ಲಿರುವ ಕನ್ನಡ ಶಬ್ದವೇ. ಸಾಕ್ಷರತಾ ಆಂದೋಲನ, ಸಾಕ್ಷರಸ್ಥ ಮುಂತಾದ ಕಷ್ಟವಾದ ತಪ್ಪಾದ ಶಬ್ದಗಳನ್ನು ಉಪಯೋಗಿಸಬೇಕಾಗಿಲ್ಲ. ಅಕ್ಷರ ಪ್ರಚಾರ, ಅಕ್ಕರಿಗರನ್ನಾಗಿ ಮಾಡುವ ಯೋಜನೆ ಎಂಬುದಾಗಿ ಸುಲಭ ಶಬ್ದಗಳನ್ನು ಉಪಯೋಗಿಸುವುದು ಉತ್ತಮ. ಅಕ್ಷರ ಕಲಿಯುವವರಿಗೂ ತಾವೇನು ಮಾಡುತ್ತಿದ್ದೇವೆ ಎಂಬ ವಿಚಾರವು ಸ್ಪಷ್ಟವಾಗಿ ತಿಳಿದಿರುತ್ತದೆ.

**ಸಾಕ್ಷಿ** ಸಾಕ್ಷಿ ಸಂಸ್ಕೃತದ ಶಬ್ದ. ಇದಕ್ಕೆ ನೇರವಾಗಿ ನೋಡಿದವನು, ಪ್ರತ್ಯಕ್ಷವಾಗಿ ಕಂಡು ಸತ್ಯಾಂಶ ಏನೆಂದು ಬಲ್ಲವನು. ಜೀವಂತ ಸಾಕ್ಷಿ ಎಂದರೆ ಬದುಕಿರುವ ಸಾಕ್ಷಿ. ಜ್ವಲಂತ ಸಾಕ್ಷಿ ಎಂದರೆ ಪ್ರಖರವಾಗಿರುವ, ಎದ್ದು ಕಾಣುವ, ಎಲ್ಲರಿಗೂ ಸ್ಪಷ್ಟವಾಗಿರುವ ಸಾಕ್ಷಿ ಎಂದರ್ಥ. ಆತ್ಮಸಾಕ್ಷಿ ಎಂದರೆ ನಮ್ಮ ಅಂತರಂಗಕ್ಕೆ ಗೊತ್ತಿರುವ ಸ್ವತಃ ಅರಿತುಕೊಂಡಿರುವ, ಎಂದರ್ಥ. ಮನಃಸಾಕ್ಷಿ ಎಂದರೆ ಮನಸ್ಸಿಗೆ ಸ್ಪಷ್ಟವಾಗಿ ತಿಳಿದಿರುವ ಎಂದರ್ಥ. ಈ ಶಬ್ದಗಳನ್ನೆಲ್ಲ ಅಂತರಂಗ, ಬಹಿರಂಗದ ಅರಿವಿಗೆ ವಿವರಣೆ ನೀಡುವಾಗ ಉಪಯೋಗಿಸುತ್ತಾರೆ.

**ಸಾಗರ** ಎನ್ನುವುದು ಸಗರ ಎಂಬ ರಾಜನ ಹೆಸರಿಗೆ ಸಂಬಂಧಿಸಿದುದು. ಸಗರನು ಅಶ್ವಮೇಧ ಯಜ್ಞವನ್ನು ಮಾಡಲು ಪ್ರಯತ್ನ ಪಟ್ಟಾಗ ಇಂದ್ರನು ತನ್ನ ಸ್ಥಾನಕ್ಕೆ ಚ್ಯುತಿ ಬರುತ್ತದೆಂದು ತಿಳಿದು ಯಜ್ಞಾಶ್ವವನ್ನು ಹಿಡಿದು ಮಹಾತಪಸ್ವಿಯಾದ ಕಪಿಲ ಮುನಿಯು ಪಾತಾಳದಲ್ಲಿ ತಪಸ್ಸು ಮಾಡುತ್ತಿದ್ದಾಗ ಅವನಿಗೆ ತಿಳಿಯದಂತೆ ಅವನ ಹಿಂದೆ ಆ ಅಶ್ವವನ್ನು ಕಟ್ಟಿಬಿಟ್ಟನು. ಸಗರನ ೬೦ ಸಾವಿರ ಮಕ್ಕಳು ಭೂಮಿಯನ್ನು ಅಗೆದು ಆ ಸ್ಥಳಕ್ಕೆ ಹೋದಾಗ ಅವರೆಲ್ಲರೂ ಕಪಿಲನ ಕೋಪಾಗ್ನಿಯಿಂದ ಸುಟ್ಟು ಹೋದರು. ಭಗೀರಥನು ತನ್ನ ಅಜ್ಜಂದಿರಾದ ಸಗರನ ಮಕ್ಕಳಿಗೂ ಸದ್ಗತಿಯನ್ನುಂಟು ಮಾಡುವುದಕ್ಕಾಗಿ ಈಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ ದೇವಲೋಕದಿಂದ ಗಂಗೆಯನ್ನು ತಂದು ಸಗರಪುತ್ರರ ಭಸ್ಮದ ಮೇಲೆ ಹರಿಸಿದನು. ಅದೇ ಸಮುದ್ರವಾಯಿತು. ಭಗೀರಥನು ಅದಕ್ಕೆ **ಸಾಗರ** ಎಂದು ಹೆಸರಿಟ್ಟನು. ಇದೊಂದು ಪುರಾಣ ಕಥೆ. ರಾಮಾಯಣದಲ್ಲಿಯೂ ಮಹಾಭಾರತದಲ್ಲಿಯೂ ಬರುತ್ತದೆ. **ಸಮುದ್ರ** ಇದಕ್ಕೂ ಕಡಲು ಎಂದೇ ಅರ್ಥ. ಅದರಲ್ಲಿ ಉದ್ರಾ ಎಂದರೆ ಜಲಚರ ಪ್ರಾಣಿಗಳು ಕಾಣಬರುತ್ತವೆ ಎಂದು ಅರ್ಥ. ಸಮ್ + ಉದ್ರಾ = ಸಮುದ್ರ. ಕಡಲು ಭೂಮಿಗೆ ಎಲ್ಲೆಯಾಗುತ್ತದೆ. ಆದ್ದರಿಂದ ಅದು ಸಮುದ್ರ ಎಂದು ಮತ್ತೊಂದು ಅರ್ಥ. ಅದರಲ್ಲಿ ರತ್ನಗಳಿರುವುದರಿಂದ ಈ ಹೆಸರು ಬಂದಿದೆ ಎಂದು ಮತ್ತೊಂದು ಅರ್ಥ. ಅದರಲ್ಲಿ ಅಗ್ನಿ ಅಡಗಿದೆಯಾದ್ದರಿಂದ ಅದು ಸಮುದ್ರ ಎಂದು ಮತ್ತೂ ಒಂದು ಅರ್ಥ. ಹೀಗೆ ಸಂಸ್ಕೃತದಲ್ಲಿ ಸಮುದ್ರ ಶಬ್ದಕ್ಕೆ ಅರ್ಥಗಳನ್ನು ಹೇಳುತ್ತಾರೆ. ಮೊದಲನೆಯದು ಹೆಚ್ಚು ಸ್ವಾರಸ್ಯಕರವಾಗಿದೆ.

**ಸಾಡೆ** ಇದು ಮರಾಠಿ ಶಬ್ದ. ವಿವಾಹದ ನಾಲ್ಕನೆಯ ದಿನ ಅಗ್ನಿಸಾನ್ನಿಧ್ಯದಲ್ಲಿ ಆಚರಿಸುವ ವಿಧಿ.

**ಸಾಡೇಸಾತ್** ಈ ಶಬ್ದ ನಮಗೆ ಹಿಂದೀ ಮತ್ತು ಮರಾಠೀ ಭಾಷೆಗಳಿಂದ ಬಂದುದು. ಸಂಸ್ಕೃತದಲ್ಲಿ ಸ + ಅರ್ಧಃ (= ಅರ್ಧ) ಎನ್ನುವುದು ಸಾರ್ಧಃ ಎಂದಾಗುತ್ತದೆ. ಅದೇ

ಸಾಡಾ, ಸಾಡೇ. ಅರ್ಧ ಕೂಡಿದ ಸಾತ್ = ಏಳೂವರೆ; 'ಸಪ್ತ' ಎಂಬ ಸಂಸ್ಕೃತ ಶಬ್ದದ ತದ್ಭವ, ಒಟ್ಟಿನಲ್ಲಿ ಸಾಡೇಸಾತ್ ಎಂದರೆ ಏಳೂವರೆ. ಶನಿಗ್ರಹದ ದೆಸೆಯ ಕಾಲದಲ್ಲಿ ಜಾತಕನಿಗೆ ಏಳೂವರೆ ವರ್ಷ ಸಂಕಟ ಪರಂಪರೆ ಬರುತ್ತದೆಂಬ ನಂಬಿಕೆ. ಇದನ್ನು ಶನಿಗೆ ಸಂಬಂಧವಿಲ್ಲದೆಯೂ ಕಷ್ಟ ಕಾಲ ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. 'ಏನು ಮಾಡೋಣ, ಶನಿದೆಸೆ' ಎನ್ನುವುದಕ್ಕೂ 'ಸಾಡೇಸಾತ್' ಅನುಭವಿಸಬೇಕು ಎನ್ನುವುದಕ್ಕೂ ಏನೂ ವ್ಯತ್ಯಾಸವಿಲ್ಲ.

**ಸಾತತ್ಯ** 'ಸತತ' ಎಂಬ ಶಬ್ದವು ಭಾವನಾಮವಾದಾಗ 'ಸಾತತ್ಯ' ಎಂಬ ರೂಪವನ್ನು ಪಡೆಯುತ್ತದೆ. 'ಸತತ' ಪದ ಸದಾ ಇರುವ ಎಡೆಬಿಡದ ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದ 'ಸಾತತ್ಯ' ಎಂದರೆ ನಿರಾತಂಕವಾಗಿ ಇರುವುದು, ಅವಿಚ್ಛಿನ್ನವಾಗಿ ಇರುವುದು, ಎಡೆಬಿಡದೆ ಇರುವಿಕೆ ಎಂದರ್ಥ. **'ಸತತಸ್ಯ ಭಾವಃ ಸಾತತ್ಯಂ'** ಸಂಸ್ಕೃತದ ವಿವರಣೆ.

**ಸಾದಿಲ್ವಾರು** ಇದು ಅರಬ್ಬೀ ಭಾಷೆಯ **ಸಾದಿರ್‌ವಾರಿದ್** ಎಂಬ ಶಬ್ದದಿಂದ ಬಂದಿದೆ. ಕಚೇರಿಗಳಲ್ಲಿ ಬರುವ ಆಗಂತುಕ ಖರ್ಚಿಗಾಗಿ ಸ್ವಲ್ಪ ಹಣವನ್ನು ಕೊಟ್ಟಿರುತ್ತಾರೆ. ಮರಾಠಿಯಲ್ಲಿ ಈ ಶಬ್ದ ಸಾದಿಲವಾರ್ ಎಂಬುದಾಗಿ ವ್ಯತ್ಯಾಸ ಹೊಂದಿ ಕನ್ನಡದಲ್ಲಿ ಸಾದಿಲ್ವಾರ್, ಸಾದಿಲ್ವಾರು ಆಗಿದೆ.

**ಸಾನಿ** ಎಂಬ ಶಬ್ದ ಹಿಂದಿಯಲ್ಲಿ ಜೊತೆಗಾರ, ಒಡನಾಡಿ ಎಂಬ ಅರ್ಥದಲ್ಲಿದೆ. ಸಾನಿಗುಮಾಸ್ತ ಎಂದರೆ ಜೊತೆಯಲ್ಲಿ ಕೆಲಸ ಮಾಡುವ ಗುಮಾಸ್ತ. ಸಾನಿ ಎಂಬ ಇನ್ನೊಂದು ಶಬ್ದವಿದೆ. ದೊರೆಸಾನಿ ಎಂದರೆ ದೊರೆಯೊಡನೆ ಇರುವವಳು. ದೊರೆಯ ಹೆಂಡತಿ ಎಂಬ ಅರ್ಥವೂ ಇದೆ. ಸಾಮಾನ್ಯವಾಗಿ ಪರಂಗಿಯವರ ಹೆಂಗಸರನ್ನು ದೊರೆಸಾನಿ ಎಂದು ಕರೆಯುವ ರೂಢಿ ಇತ್ತು. ನಾಯಕಸಾನಿ ಎಂಬ ಶಬ್ದಕ್ಕೆ ಕನ್ನಡದಲ್ಲಿ ಸೂಳೆ, ವೇಶ್ಯೆ ಎಂಬ ಅರ್ಥವಿದೆ. ಆದುದರಿಂದ ಸಾನಿ ಶಬ್ದಕ್ಕೆ ನರ್ತಕಿ ಎಂಬ ಅರ್ಥವೂ ವ್ಯಾಪಕವಾಗಿ ಇದೆ. ದೊರೆ ಶಬ್ದಕ್ಕೆ ದೊರೆಸಾನಿ ಎಂಬುದು ಸ್ತ್ರೀಲಿಂಗ ರೂಪವಾಗಬಹುದು. ಇದು ಸಂಸ್ಕೃತದ ಸ್ವಾಮಿನಿ ಶಬ್ದದ ತದ್ಭವ. ಈ ಎರಡೂ ಬೇರೆ ಬೇರೆ ಶಬ್ದಗಳು.

**ಸಾನುಕ್ರೋಶತೆ** ಇದು ಸಂಸ್ಕೃತದ ಶಬ್ದ. 'ಅನುಕ್ರೋಶ' ಎಂದರೆ ಇನ್ನೊಬ್ಬರ ತೊಂದರೆಯನ್ನು ನೋಡಿ ಕನಿಕರವನ್ನು ಹೊಂದುವುದು. ಅಂಥ ಗುಣವೇ ಸಾನುಕ್ರೋಶತೆ. 'ಸ' ಎನ್ನುವುದು 'ಸಹಿತ' ಎಂಬ ಅರ್ಥವನ್ನು ಕೊಡುತ್ತದೆ.

**ಸಾನ್ನಿಧ್ಯ - ಸಾಮೀಪ್ಯ** ಎರಡಕ್ಕೂ ಒಂದೇ ಅರ್ಥವೇ ? ಸಾಮೀಪ್ಯ ಎಂದರೆ ಹತ್ತಿರ. ಸಾನ್ನಿಧ್ಯ ಎಂದರೆ ಹತ್ತಿರದಲ್ಲಿ ಎದುರಿಗಿರುವುದು. ಸಾಮೀಪ್ಯಕ್ಕಿಂತ ಹೆಚ್ಚು ಗೌರವವನ್ನು ನೀಡುವ ಶಬ್ದ ಸನ್ನಿಧಿ. ಹಿರಿಯರ ಸನ್ನಿಧಿ, ಗುರುಗಳ ಸನ್ನಿಧಿ. ದೇವ ಸನ್ನಿಧಿ ಶಬ್ದಗಳನ್ನು ನೋಡಿ.

**ಸಾಪ್ತಾಹಿಕ** ಇದು ಸಂಸ್ಕೃತ ಶಬ್ದ. ಸಪ್ತ = ಏಳು, ಅಹನ್ = ದಿವಸ, ಹಗಲು. ಇವೆರಡನ್ನೂ ಸೇರಿಸಿ ಸಪ್ತಾಹ ಎಂಬ ಶಬ್ದವನ್ನು ಮಾಡಿ ಅದಕ್ಕೆ ಏಳು ದಿನಗಳು; ಏಳು ದಿನಗಳು ನಡೆಯುವ ಉತ್ಸವ ಇತ್ಯಾದಿಗಳು ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಸಪ್ತಾಹ ಶಬ್ದದ ಗುಣವಾಚಕ ರೂಪ ಸಾಪ್ತಾಹಿಕ = ಏಳು ದಿನಕ್ಕೊಮ್ಮೆ ಬರುವ ಎಂದರ್ಥ. ಇದು ಸರಿಯಾದ ರೂಪ. ಆದರೆ ಈ ಶಬ್ದವನ್ನು ಉಚ್ಚರಿಸುವವರೂ ಪತ್ರ ಬರೆಯುವವರೂ ಸಾಪ್ತಾಯಿಕ ಎಂದೇ ಪ್ರಯೋಗಿಸುತ್ತಿದ್ದಾರೆ.

**ಸಾಬೂಣ** ಎನ್ನುವುದು ಅರಬ್ಬಿಯಲ್ಲಿ **ಷಾಬೂನ್**. ಪಾರಸಿಯಲ್ಲಿ ಸಾಬೂನ್. ಪಂಜಾಬಿಯಲ್ಲಿ ಸಾಬಣ. ಹಿಂದಿಯಲ್ಲಿ ಸಾಬೂನ್, ಗುಜರಾತಿಯಲ್ಲಿ ಸಾಬು ಎಂದು ಪ್ರಯೋಗವಾಗುತ್ತ ಇದೆ. ಕನ್ನಡದಲ್ಲಿ ಸಾಬೂನು ಮೈಸೂರು ಸೀಮೆಯ ಕಡೆ. ಧಾರವಾಡ ಸೀಮೆಯ ಕಡೆ

ಸಾಬಾಣ. ಇದೇ ಕೆಲವು ಕಡೆಗಳಲ್ಲಿ ಸಾಬಿನಾ ಆಗಿದೆ. ಇದೇ ಇಂಗ್ಲಿಷ್‌ನ soap. ಇದು ಹಳೆಯ ಇಂಗ್ಲಿಷ್‌ನಲ್ಲಿ sape. ಹೀಗಿದೆ ನಮ್ಮ ಸಾಬೂನಿನ ಕಥೆ.

**ಸಾಬೀತು** ಇದು ಅರಬ್ಬಿಯ **ಸುಬೂತ್** ಎಂಬ ಶಬ್ದದಿಂದ ಬಂದಿದೆ. ದೃಢವಾಗಿರುವುದು ಎಂದರ್ಥ. ಸಾಬೂತು ಎಂಬ ರೂಪದಲ್ಲಿಯೂ ಪ್ರಯೋಗವಾಗುತ್ತದೆ. ಸಾಬೀತುಪಡಿಸು ಎಂಬುದು ಜನಸಾಮಾನ್ಯರಲ್ಲಿ ಹೆಚ್ಚಾಗಿ ಪ್ರಚಾರದಲ್ಲಿರುವ ಮಾತು. ಅದಕ್ಕೆ ಇಂಗ್ಲಿಷಿನ prove ಎಂಬ ಶಬ್ದದ ಅರ್ಥ ಸರಿಹೊಂದುತ್ತದೆ. Prove ಎಂದರೆ to establish the truth of ಎಂದರ್ಥ. ಒಂದು ಹೇಳಿಕೆಯ ಸತ್ಯವನ್ನು ಸಾಧಿಸಿ ತೋರಿಸುವುದು.

**ಸಾಬೂನು** ನೋಡಿ: ಸಾಬಾಣ

**ಸಾಮಾನು ಸರಂಜಾಮು** ಪಾರಸೀ ಭಾಷೆಯ ಸಾಮಾನ್ ಶಬ್ದದಿಂದ ಬಂದಿದೆ. ಪಾರಸೀ ಭಾಷೆಯಲ್ಲಿ ಅದಕ್ಕೆ ಮರದ ಪೀಠೋಪಕರಣ ಎಂದರ್ಥ. ನಮ್ಮಲ್ಲಿ ಎಲ್ಲ ವಸ್ತುಗಳು. ಸರಂಜಾಮು –– ಇದು ಸಾಮಾನಿನ ಜೊತೆ ಬರುವ ಕೂಡುನುಡಿ. ಅದೇ ಅರ್ಥದ್ದು.

**ಸಾಮ್ರಾಟ, ಸಮ್ರಾಟ** ಇವುಗಳಲ್ಲಿ ಯಾವುದು ಸರಿ ಎಂಬ ಸಂದೇಹ. ಸಂಸ್ಕೃತದ ಶಬ್ದ 'ಸಮ್ರಾಟ್' ಅಂದರೆ ಚಕ್ರವರ್ತಿ, ಸಾರ್ವಭೌಮ. ಕನ್ನಡದಲ್ಲಿ ಸಮ್ರಾಜ ಆಗಬೇಕು. ಸಮ್ರಾಜನಿಗೆ ಸಂಬಂಧಿಸಿದ ರಾಜ್ಯ ಸಾಮ್ರಾಜ್ಯ. ಸಮ್ರಾಜನ ಹೆಂಡತಿ ಸಮ್ರಾಜ್ಞಿ. ಆದರೆ ಮರಾಠಿ ಭಾಷೆಯಲ್ಲಿ ಸಾಮ್ರಾಟ್, ಸಾಮ್ರಾಜ್ಞಿ ಎಂಬ ರೂಪಗಳನ್ನು ಉಪಯೋಗಿಸುತ್ತಾರೆ. ಮಹಾರಾಷ್ಟ್ರದ ಸಮೀಪದ ಕನ್ನಡ ದೇಶದವರು ಆ ರೂಪಗಳನ್ನು ಒಪ್ಪಿಕೊಂಡಿದ್ದಾರೆ. ಅವುಗಳನ್ನು ತ್ಯಜಿಸಬೇಕಾಗಿಲ್ಲ.

**ಸಾಯಂಕಾಲ** ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಈ ಮೂರೂ ಸಂಸ್ಕೃತ ಶಬ್ದಗಳು. ವಿಸರ್ಗ, ಮಹಾಪ್ರಾಣ ಇವುಗಳ ಉಚ್ಚಾರಣೆಗೆ ಸ್ವಲ್ಪ ಪ್ರಯತ್ನ ಬೇಕು. ಶಬ್ದಗಳ ಉಚ್ಚಾರಣೆಯಲ್ಲಿ ಶಿಕ್ಷಣವಿದ್ದರೆ ಅವುಗಳ ಉಚ್ಚಾರಣೆ ಸುಲಭ. ಜನರು ಸುಲಭವಾದದ್ದನ್ನು ಹೆಚ್ಚಾಗಿ ಬಳಸುತ್ತಾರೆ. ಹೀಗೆ ಸಾಯಂಕಾಲದ ಪ್ರಯೋಗ ಹೆಚ್ಚು. ಆದರೆ ಆ ಶಬ್ದವನ್ನು ಸ್ಯಾಂಕಾಲ ಎಂದು ಹೇಳುವುದನ್ನು ನಾನೇ ಕೇಳಿದ್ದೇನೆ. ಹಗಲು ಸಮಾಪ್ತಿಯಾಗುತ್ತಿರುವ ಕಾಲವೇ ಸಾಯಂಕಾಲ. ಸಂಧ್ಯಾ ಶಬ್ದದಿಂದ ಸಂಜೆ ಬಂದಿದೆ. ಹಗಲು ರಾತ್ರಿ ಸಂಧಿಸುವ ಸಮಯವೇ ಸಂಧ್ಯಾ = ಸಂಜೆ ಅಷ್ಟೆ!

**ಸಾರಿಗೆ - ಸಾಗಾಣಿಕೆ** ಕನ್ನಡದಲ್ಲಿ ಸಾರು = ಹತ್ತಿರಕ್ಕೆ ಸೇರು. ಸಾಗು = ಮುಂದಕ್ಕೆ ಹೋಗು ಎಂಬ ಎರಡು ಧಾತುಗಳಿವೆ. ಸಾರು + ಇಗೆ = ಸಾರಿಗೆ. ಸಾಗು + ಅಣೆ + ಇಕೆ = ಸಾಗಣಿಕೆ > ಸಾಗಾಣಿಕೆ. ಹೀಗೆ ಈ ರೂಪಗಳು ಭಾವನಾಮಗಳಾಗಿವೆ. ಇಗೆ, ಅಣೆ, ಇಕೆ ಎಂಬುವು ಭಾವನಾಮ ಪ್ರತ್ಯಯಗಳು. ಆದುದರಿಂದ ಎರಡೂ ರೂಪಗಳು ಶುದ್ಧವಾಗಿವೆ. ಅವನ್ನು ಒಂದೇ ಅರ್ಥದಲ್ಲಿ ಉಪಯೋಗಿಸಬಹುದು.

**ಸಾರೂಪ್ಯತೆ** ಅನ್ನುವುದು ತಪ್ಪು ಶಬ್ದ. ಸಾರೂಪ್ಯ ಸಾಕು. ಅದು ಪರಮಾತ್ಮನಿಗೆ ಸಮಾನ ಹೊಂದುವುದು. ಇದು ನಾಲ್ಕು ವಿಧವಾದ ಮೋಕ್ಷಗಳಲ್ಲಿ ಒಂದು. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬುದೇ ಆ ನಾಲ್ಕು ಮೋಕ್ಷಗಳು. ಪ್ರಾಮುಖ್ಯ, ಪ್ರಾಧಾನ್ಯ ಇದ್ದ ಹಾಗೆ ಸಾರೂಪ್ಯ ಸಾಕು.

**ಸಾಲಂಕೃತ** ಇದೊಂದು ಸಂಸ್ಕೃತ ಶಬ್ದ. ಇದಕ್ಕೆ ಅಲಂಕಾರ ಸಹಿತವಾದ ಎಂಬುದು ಅರ್ಥ. '**ಸಾಲಂಕೃತ ಕನ್ಯಾದಾನವನ್ನು ಮಾಡುತ್ತೇನೆ**' ಎಂದರೆ ಕನ್ಯೆಯನ್ನೂ ಅವಳು ಧರಿಸಿರುವ ಆಭರಣಗಳನ್ನೂ ದಾನ ಮಾಡುತ್ತೇನೆ ಎಂದು ಅರ್ಥ. ಸಾಲ ಮಾಡಿ ಮದುವೆ ಮಾಡಿದ್ದೇನೆ ಎಂದು ಅರ್ಥವಲ್ಲ.

**ಸಾಲಿಮೆ** ಎಂದರೆ ಸಾಕಾಗದೆ ಇರುವಿಕೆ ಎಂದರ್ಥ. ಇದರಲ್ಲಿ ಸಾಲು = ಸಾಕಾಗು ಎಂಬ

ಅರ್ಥದ ಶಬ್ದ ಇದೆ. ನೂರು ಜನರ ಊಟಕ್ಕೆ ೫ ಸೇರು ಅಕ್ಕಿ ಸಾಲುವುದಿಲ್ಲ, ಎಂಬ ವಾಕ್ಯವನ್ನು ನೋಡಿ. ಈ ಸಾಲು ಶಬ್ದಕ್ಕೆ - ಇಮೆ ಎಂಬ ನಿಷೇಧಾರ್ಥಕ ಪ್ರತ್ಯಯ ಸೇರಿ ಸಾಲಿಮೆ ಆಗಿದೆ. ಅದಕ್ಕೆ ಸಾಲದಾಗುವುದು, ಕಡಿಮೆ ಬರುವುದು ಎಂದರ್ಥ.

**ಸಾವರ್ಣಿಕ** ಮನುಗಳಲ್ಲಿ ಸಾವರ್ಣಿಕ ಎಂಬ ಹೆಸರುಳ್ಳವನು ೮ ನೆಯ ಮನು. ಸಾವರ್ಣಿಕ ಮನುವಿನಿಂದ ಹಿಡಿದು ಎಂದು ಸಾವರ್ಣಿಕಮನ್ವಾದಿ ಎಂಬುದರ ಅರ್ಥ. ಅದು ಸ್ಪಷ್ಟವಾಗಬೇಕಾದರೆ ಅದರ ಮುಂದೆ ಇರುವ ನಾಮಪದ ಬಹಳ ಮುಖ್ಯ. ಅದನ್ನು ಪರಿಶೀಲಿಸಬೇಕು.

**ಸಾವಿತ್ರಿ** ಸಾವಿತ್ರೀ ಸಂಸ್ಕೃತದ ಶಬ್ದ. ಇದಕ್ಕೆ ಪಾರ್ವತೀ ಎಂದೂ ಗಾಯತ್ರೀ ಎಂದೂ ಅರ್ಥವಿದೆ. ಪುರಾಣದಲ್ಲಿ ಬರುವ ಸತ್ಯವಾನನ ಹೆಂಡತಿಯ ಹೆಸರೂ ಸಾವಿತ್ರೀ. ಯಜ್ಞೋಪವೀತಕ್ಕೆ ಅಂದರೆ ಜನಿವಾರಕ್ಕೆ ಸಾವಿತ್ರೀಸೂತ್ರ ಎಂದು ಹೆಸರಿದೆ. ಆಮರಣ ಸೌಮಂಗಲ್ಯವನ್ನು ಕೋರುವ ಸ್ತ್ರೀಯರು ಜ್ಯೇಷ್ಠಮಾಸದ ಚತುರ್ದಶಿಯ ದಿನ ಸಾವಿತ್ರೀ ವ್ರತವೆಂಬ ಪ್ರಸಿದ್ಧ ವ್ರತವನ್ನು ಆಚರಿಸುತ್ತಾರೆ. ಇದೆಲ್ಲ ಸಾಂಪ್ರದಾಯಿಕವಾದ ನಡವಳಿಕೆ. ಸಾವಿತ್ರಿ ಕನ್ನಡ ಶಬ್ದ.

**ಸಾವುಕಾರ** ಇದು ಹಿಂದೀ ಭಾಷೆಯ **ಸಾಹೂಕಾರ್** ಎಂಬ ಶಬ್ದದಿಂದ ಬಂದಿದೆ. ಕೆಲವರು ಇದು ಸಂಸ್ಕೃತದ ಸಾಧು ಶಬ್ದದಿಂದ ಬಂದಿದೆ ಎನ್ನುತ್ತಾರೆ. ಸಾಧುಕಾರ ಸಾಹೂಕಾರ ಆಗಿದೆ ಎಂದು ಅವರ ಭಾವನೆ. ಕನ್ನಡದಲ್ಲಿ ಸಾಹುಕಾರ, ಸಾವುಕಾರ, ಸಾವಕಾರ ಈ ಮೂರು ರೂಪಗಳೂ ಪ್ರಚಲಿತವಾಗಿವೆ. ತಮಿಳುನಾಡಿನ ಚೆಟ್ಟಿ ಶಬ್ದಕ್ಕೆ ಸಮಾನ. ಇವರು ಲೇವಾದೇವಿ ಮಾಡುತ್ತಿದ್ದ ಜನ. ಇಂಗ್ಲಿಷಿನಲ್ಲಿ ಇವರನ್ನು Bankers ಎಂದೇ ಕರೆಯುತ್ತಾರೆ.

**ಸಾಹೇಬ** ಇದು ಅರಬ್ಬಿ ಭಾಷೆಯ ಶಬ್ದ. ಇದಕ್ಕೆ ಒಡೆಯ ಅಧಿಕಾರಿ, ಹಿರಿಯ, ಪಾಶ್ಚಾತ್ಯ ವ್ಯಕ್ತಿ ಮುಂತಾದ ಅರ್ಥಗಳಿವೆ. ಸಾಹೇಬರು ಎನ್ನುವುದು ಸರಿಯಾದ ಬಹುವಚನದ ಶಬ್ದ. ಸಾಹೇಬ್ರು, ಸಾಯೇಬ್ರು ಎರಡೂ ಗ್ರಾಮ್ಯ ರೂಪಗಳು.

**ಸಿಂಗಿ** ಇದು ಶೃಂಗಿ ಎಂಬ ಸಂಸ್ಕೃತದ ಅಪಭ್ರಂಶದ ರೂಪ. ಇದು ಒಂದು ಭಯಂಕರವಾದ ವಿಷವುಳ್ಳ ಹಾವು ಎಂದು ಕೆಲವರು ಹೇಳುತ್ತಾರೆ. ವಿಷಸಸ್ಯ ಎಂದು ಮತ್ತೆ ಕೆಲವರು. ಕೊಂಬುಳ್ಳ ಪ್ರಾಣಿ ಎಂದು ಸಾರಂಗಕ್ಕೆ ಅನ್ವಯಿಸುತ್ತಾರೆ. ಈ ಶಬ್ದಕ್ಕೆ ಅದು ಪ್ರಯೋಗವಾಗಿರುವ ಪಾಠದ ಅನುಸರಣೆಯಿಂದ ಅರ್ಥಮಾಡಬೇಕು.

**ಸಿಂಚನ** ಸಂಸ್ಕೃತದಲ್ಲಿ ಸಿಚ್ ಎಂಬ ಧಾತುವಿನಿಂದ ಸಿಂಚನ ಎಂಬ ನಾಮರೂಪ ಸಿದ್ಧವಾಗುತ್ತದೆ. ಇದಕ್ಕೆ ಚಿಮುಕಿಸುವುದು, ತಳಿಯುವುದು, ದ್ರವ ಪದಾರ್ಥವನ್ನು ತುಂತುರು ತುಂತುರಾಗಿ ಚೆಲ್ಲುವುದು ಎಂದರ್ಥ.

**ಸಿಂಬೆ, ಸಿಂಬಿ** ಭಾರವನ್ನು ತಲೆಯ ಮೇಲೆ ಹೊರಬೇಕಾದಾಗ ಆ ಭಾರದ ಕೆಳಗಡೆಗೆ ಬಟ್ಟೆಯಿಂದಲೋ ಹಗ್ಗದಿಂದಲೋ ಗುಂಡಗೆ ಸುತ್ತಿ ಮಾಡಿದ ಸಾಧನ. ಕನ್ನಡದ ಶಬ್ದ.

**ಸಿಂಹಾದ್ರಿ** ಇದು ಸಂಸ್ಕೃತದ ಶಬ್ದ. ಸಿಂಹ + ಅದ್ರಿ = ಸಿಂಹಾದ್ರಿ. ಇದು ಪುಲ್ಲಿಂಗ ಶಬ್ದ. ತಿರುಮಲೆಯೆನ್ನುವುದು ಏಳು ಬೆಟ್ಟಗಳು ಸೇರಿರುವ ದೊಡ್ಡ ಬೆಟ್ಟ. ಅಥವಾ ಅದು ಆ ಬೆಟ್ಟಕ್ಕಿರುವ ಏಳು ಬೇರೆ ಬೇರೆ ಶಿಖರಗಳು ಎಂದೂ ಹೇಳಬಹುದು. ಇವುಗಳಲ್ಲಿ ಏಳನೆಯ ಬೆಟ್ಟದ ಮೇಲೆ ತಿರುಪತಿಯ ದೇವಸ್ಥಾನವಿದೆ. ಈ ಏಳು ಬೆಟ್ಟಗಳಿಗೂ ಬೇರೆ ಬೇರೆ ಹೆಸರುಗಳಿವೆ. ಶೇಷಾಚಲ, ವೃಷಭಾಚಲ, ಗರುಡಾಚಲ, ಅಂಜನಾದ್ರಿ, ನಾರಾಯಣಾದ್ರಿ, ಸಿಂಹಾದ್ರಿ (ವೃಷಾದ್ರಿ) ಮತ್ತು ವೆಂಕಟಾದ್ರಿ. ವೃಷಾದ್ರಿಗೆ ಸಿಂಹಾದ್ರಿ ಎಂಬ ಬೇರೊಂದು ಹೆಸರಿದೆ. ಇದು ಪುರಾಣ ಪ್ರಸಿದ್ಧವಾದ ಸ್ಥಳ.

**ಸಿಂಹಾವಲೋಕನ** ಇದು ಒಂದು ನ್ಯಾಯದ ಹೆಸರು. ಸಂಸ್ಕೃತದಲ್ಲಿ ಸಿಂಹಾವಲೋಕನ ನ್ಯಾಯ

ಎಂದರೆ ಸಿಂಹವು ಮುಂದೆ ಮುಂದೆ ಹೋಗುತ್ತಿದ್ದರೂ ಹಿಂದಿರುಗಿ ನೋಡಿಕೊಂಡು ಹೋಗುವಂತೆ ವರ್ತಿಸುವುದು ಎಂದರ್ಥ. ರನ್ನನು ತನ್ನ ಗದಾಯುದ್ಧವೆಂಬ ಕಾವ್ಯವನ್ನು ರಚಿಸುವಾಗ ಭಾರತದ ಕಥೆಯ ಹಿಂದಿನ ವಿಷಯಗಳು ಕ್ರಮವಾಗಿ ನೆನಪಿಗೆ ಬರುವಂತೆ ತಾನು ಕಾವ್ಯವನ್ನು ರಚಿಸಿದ್ದೇನೆ ಎಂದು ಹೇಳುವುದಕ್ಕೆ '**ಭಾರತದೊಳಗಣ ಕಥೆ ಎಲ್ಲಂ ಈ ಗದಾಯುದ್ಧದೊಳ್ ಒಳಕೊಂಡತ್ತು ಎನೆ ಸಿಂಹಾವಲೋಕನ ಕ್ರಮದಿನ್ ಅಜಿಪಿದಂ ಕವಿರನ್ನಂ**' ಎಂದು ತಿಳಿಸಿದ್ದಾನೆ. ಇದಕ್ಕೆ ಇನ್ನೂ ಒಂದು ಅರ್ಥವನ್ನು ಮಾಡಬಹುದು. 'ಕನ್ನಡದಲ್ಲಿ ತನಗಿಂತ ಹಿಂದೆ ಈ ಭಾರತದ ವಿಚಾರವಾಗಿ ಯಾರು ಯಾರು ಕಾವ್ಯರಚನೆ ಮಾಡಿದ್ದಾರೋ ಅದೆಲ್ಲವನ್ನೂ ಕಂಡ ನಾನು ಕಾವ್ಯವನ್ನು ರಚಿಸಿದ್ದೇನೆ' ಎಂದೂ ಹೇಳಿಕೊಂಡಿರಬಹುದು, ಓದುಗರಿಗೆ. ರನ್ನನು ಪಂಪನಿಗೆ ಋಣಿಯಾಗಿರುವ ವಿಚಾರವನ್ನು ಎಲ್ಲರೂ ಬೇಗ ತಿಳಿಯಬಲ್ಲರಷ್ಟೇ!

**ಸಿಕ್ಕಾಪಟ್ಟೆ** ಎಂಬುದು ಸಿಕ್ಕಿದ ಬಟ್ಟೆ ಎಂಬ ಎರಡು ಶಬ್ದಗಳಿಂದ ಆದ ರೂಪ. ಬಟ್ಟೆ ಎಂದರೆ ದಾರಿ, ಮಾರ್ಗ. ಸಿಕ್ಕಿದ ದಾರಿ ಎಂದರೆ ಯಾವ ದಿಕ್ಕಿಗೆ ಅವಕಾಶ ಸಿಕ್ಕಿದರೆ ಆ ದಿಕ್ಕಿಗೆ, ಆ ಕಡೆಗೆ, ಯಾವ ಗುರಿಯೂ ಇಲ್ಲದೆ ಮಾಡುವ ಚಲನೆ ಅದು. ಈಚೆಗೆ ಅದು ಅತಿಶಯವಾಗಿ, ಅಧಿಕವಾಗಿ ಎಂಬ ಅರ್ಥವನ್ನು ಪಡೆದುಕೊಂಡಿದೆ.

**ಸಿತದುಗ್ಧಯುತ** ದುಗ್ಧ ಎಂದರೆ ಹಾಲು. ಸಿತ ಶಬ್ದಕ್ಕೆ ಸಂಸ್ಕೃತದಲ್ಲಿ ಅನೇಕ ಅರ್ಥಗಳಿವೆ. ಔಷಧಕ್ಕೆ ಸಂಬಂಧಪಟ್ಟಂತೆ, ಎರಡು ಅರ್ಥಗಳಿವೆ. ಸಿತ = ಮೂಲಂಗಿ. ಸಿತಾ = ಸಕ್ಕರೆ ಕೆಲವು ವೇಳೆ ವೈದ್ಯ ಗ್ರಂಥಗಳಲ್ಲಿ ಹ್ರಸ್ವ, ದೀರ್ಘಗಳ ಪ್ರಯೋಗದಲ್ಲಿ ವ್ಯತ್ಯಾಸವಿರುವುದುಂಟು. ಆದ್ದರಿಂದ ಇದು ಸಿತ = ಸಕ್ಕರೆ ಎಂದೇ ಇರಬಹುದು. ಸಕ್ಕರೆ ಸೇರಿದ ಹಾಲು ಎಂದು ಈ ಪದಪುಂಜಕ್ಕೆ ಅರ್ಥವಿರಬೇಕು.

**ಸಿನಿಕತನ** ಇದು ಕನ್ನಡ ಶಬ್ದವಲ್ಲ. ಇಂಗ್ಲಿಷ್ ಭಾಷೆಯ cynic ಶಬ್ದಕ್ಕೆ ಕನ್ನಡದ ತನ ಪ್ರತ್ಯಯವನ್ನು ಹಚ್ಚಿರುವ ಶಬ್ದ. ಸಮಾಜದಲ್ಲಿ ಬಹು ಸಂಖ್ಯಾತ ಜನ ಒಪ್ಪಿರುವ ವ್ಯವಹಾರ. ನೈತಿಕತೆ, ಪ್ರಾಮಾಣಿಕತೆ ಮುಂತಾದ ಮೌಲ್ಯಗಳನ್ನು ಅಗೌರವದಿಂದಲೂ, ತಿರಸ್ಕಾರದಿಂದಲೂ, ಅಪನಂಬಿಕೆಯಿಂದಲೂ ಗಮನಿಸುವ ವ್ಯಕ್ತಿ cynic. ಈ ಶಬ್ದವನ್ನೇ ಕನ್ನಡದಲ್ಲಿ **ಸಿನಿಕ** ಎಂದು ಉಪಯೋಗಿಸುತ್ತಿದ್ದಾರೆ. ಇದು ಕನ್ನಡ ಭಾಷೆಗೆ ಚೆನ್ನಾಗಿ ಹೊಂದಿಕೊಳ್ಳುವ ಶಬ್ದವಾಗಿದೆ. ಮಾನವ ಜನಾಂಗದ ವ್ಯವಹಾರವನ್ನೇ ಸಿನಿಕರು ತೃಣೀಕರಿಸುತ್ತಾರೆ. ಇವರಿಗೆ ಇತರರ ಉದ್ದೇಶಗಳಲ್ಲಿ ನಂಬಿಕೆಯೇ ಇಲ್ಲ. ಇಂಗ್ಲಿಷ್‌ನಲ್ಲಿ ಆಸ್ಕರ್ ವೈಲ್ಡ್, ಜಾರ್ಜ್ ಬರ್ನಾರ್ಡ್ ಶಾ, ಮುಂತಾದವರನ್ನು, ಕನ್ನಡದಲ್ಲಿ ಶ್ರೀರಂಗ ಮುಂತಾದವರನ್ನು ಈ ಗುಂಪಿಗೆ ಸೇರಿಸಬಹುದು. ಬದುಕಿರುವವರ ಹೆಸರನ್ನು ಹೇಳುವುದು ತುಂಬ ಕಷ್ಟ.

**ಸಿಬ್ಬಂದಿ** ಕನ್ನಡದಲ್ಲಿ ನಾವು ಉಪಯೋಗಿಸುತ್ತಿರುವ ಸಿಬ್ಬಂದಿ ಶಬ್ದವು ಪಾರಸೀ ಭಾಷೆಯಿಂದ ಮರಾಠೀ ಮೂಲಕವಾಗಿ ನಮಗೆ ಬಂದಿದೆ. ಮರಾಠಿಯಲ್ಲಿ ಅದು 'ಶಿಬನ್ದೀ' ಎಂದೇ ಪ್ರಯೋಗವಾಗುತ್ತಿದೆ. ಕನ್ನಡದಲ್ಲಿ ಕನ್ನಡ ಮರ್ಯಾದೆಗೆ ಅನುಕೂಲವಾಗಿ ಅದನ್ನು 'ಸಿಬ್ಬಂದಿ' ಎಂದು ಉಪಯೋಗಿಸುತ್ತಾರೆ. ಆಯಾ ಭಾಷಾಮರ್ಯಾದೆಗೆ ಅವು ಸರಿಯಾಗಿವೆ. ಕನ್ನಡದಲ್ಲಿ 'ಸಿಬ್ಬಂದಿ' ಯನ್ನು ಬದಲಾಯಿಸಬೇಕಾಗಿಲ್ಲ. ಇದು ಪಾರಸೀ ಭಾಷೆಯ **ಸಿಫ್ ಬಂದಿ** ಎಂಬ ಶಬ್ದದಿಂದ ಬಂದಿದೆ.

'ಸಿಬ್ಬಂದಿ' ಶಬ್ದದ ವ್ಯುತ್ಪತ್ತಿಯ ಬಗ್ಗೆ ನನಗೆ ಆಧಾರಗಳಾದ ಗ್ರಂಥಗಳು ೧. ರೆವರೆಂಡ್ ಕಿಟ್ಟೆಲ್ಲರ ಕನ್ನಡ ಇಂಗ್ಲಿಷ್ ನಿಘಂಟು. ಇದರಲ್ಲಿ ಸಿಬ್ಬನ್ದಿ ಎಂಬ ಶಬ್ದವನ್ನು ಉಲ್ಲೇಖಿಸಿ (ಪುಟ ೧೬೩೩ ಸಂಪುಟ iv ಮದ್ರಾಸು ವಿಶ್ವವಿದ್ಯಾನಿಲಯ), ಮರಾಠೀ ಮತ್ತು

ಹಿಂದೂಸ್ತಾನಿ ಭಾಷೆಗಳಲ್ಲಿ 'ಶಿಬನ್ದೀ' ಶಬ್ದವಿದೆ ಎಂದು ಸೂಚಿಸಿದ್ದಾರೆ. ಅಲ್ಲದೆ ಸಿ.ಪಿ. ಬ್ರೌನ್ ಅವರ ತೆಲುಗು - ಇಂಗ್ಲಿಷ್ ನಿಘಂಟಿನ ಆಧಾರವನ್ನು ಎತ್ತಿ ಹೇಳಿದ್ದಾರೆ. ಈಚೆಗೆ ಪ್ರಕಟವಾದ ಮರಾಠೀ ಕನ್ನಡ ಶಬ್ದಕೋಶದಲ್ಲಿ 'ಶಿಬಂದೀ' ಶಬ್ದವನ್ನು ಉಲ್ಲೇಖಿಸಿ ಅದು ಪಾರಸೀ ಶಬ್ದವೆಂದು ಗುರುತಿಸಲಾಗಿದೆ (ಪುಟ ೫೯೭). ಕಿಟ್ಟೆಲ್ಲರಿಗೆ ಶಬ್ದ ಸಿಕ್ಕಿರುವುದು ಬೊಂಬಾಯಿನ ವಿದ್ಯಾ ಇಲಾಖೆಯು ಸಿದ್ಧಪಡಿಸಿದ್ದ ಕನ್ನಡ ಪಠ್ಯಪುಸ್ತಕಗಳಲ್ಲಿ, ೫ನೆಯ ಪಠ್ಯಪುಸ್ತಕದ, ೧೮೭ ಮತ್ತು ೨೧೮ ನೆಯ ಪುಟಗಳಲ್ಲಿ. ಕಿಟ್ಟೆಲ್ಲರು ನೀಡಿರುವ ಅರ್ಥ, 'ಸಶಸ್ತ್ರರಾದ ಆಳುಗಳು, ಕಾರಕೂನರು, ಆಳುಗಳು ಮತ್ತು ಜವಾನರು ಸೇರಿದ ಕೆಲಸಗಾರರ ಗುಂಪು' ಎಂದು. ಡಾ. ಎಚ್. ಗುಂಡರ್ಟನ ನಿಘಂಟಿನಲ್ಲಿ ಈ ಶಬ್ದ ಪರ್ಷಿಯನ್ನಿನಿಂದ ಬಂದಿದೆ ಎಂದು ಹೇಳಿದೆ. ಸಿ.ಪಿ. ಬ್ರೌನ್ ರಚಿಸಿರುವ ತೆಲುಗು ನಿಘಂಟಿನಲ್ಲಿ ಈ ಶಬ್ದ ಹಿಂದೂಸ್ತಾನಿ ಎಂದು ಹೇಳಿದ್ದರೂ ಪೀಠಿಕೆಯಲ್ಲಿ - "Under the term Hindustani we have included all Persian and Arabic words which have come into use in Telugu' ಎಂದು ವಿವರಿಸಿದ್ದಾನೆ - Glossary of judicial and revenue terms ಎಂಬ ತುಂಬ ಪ್ರಯೋಜನಕಾರಿಯಾದ ನಿಘಂಟನ್ನು ತಯಾರಿಸಿದ ಎಚ್.ಎಚ್. ವಿಲ್ಸನ್ ಎಂಬ ಪ್ರಸಿದ್ಧ ವಿದ್ವಾಂಸನು ತನ್ನ ಗ್ರಂಥದಲ್ಲಿ ಸಿಬ್ಬಂದೀ ಫಸಲಿ, ಮುದ್ದಾಂ ಸಿಬ್ಬಂದಿ, ಹಂಗಾಮಾ ಸಿಬ್ಬಂದಿ ಮುಂತಾದ ಶಬ್ದಗಳನ್ನು ಉಲ್ಲೇಖಿಸಿದ್ದಾನೆ. ಸಿಬ್ಬಂದೀ ಫಸಲೀ ಶಬ್ದಕ್ಕೆ Troops employed for revenue harvest ಎಂದು ಅರ್ಥವನ್ನು ಕೊಟ್ಟಿದ್ದಾನೆ.

ಎಲ್ಲ ಮರಾಠೀ ಕೋಶಗಳೂ ಸಿಬ್ಬಂದಿ, ಶಿಬಂದೀ ರೂಪಗಳಿಗೆ ಪಾರಸೀ ಭಾಷೆಯ ಮೂಲವನ್ನೇ ಸೂಚಿಸಿವೆ. ಪಾರಸೀ ಭಾಷೆಯಲ್ಲಿ ಸಫ್ ಬಂದ ಎಂಬ ಶಬ್ದಕ್ಕೆ ಪ್ರಾರ್ಥನಾ ಸ್ಥಳಗಳಲ್ಲಿ ಎಲ್ಲ ವ್ಯವಸ್ಥೆಯನ್ನು ನಿರ್ವಹಿಸುವವನು ಎಂಬ ಅರ್ಥವಿದೆ. ಈ ಶಬ್ದದಿಂದಲೂ ಸಿಬ್ಬಂದಿ ಬಂದಿರಬಹುದು. ಈಗಂತೂ ಕನ್ನಡದಲ್ಲಿ ಸಿಬ್ಬಂದಿ ಎಂಬುದು Staff ಎಂಬ ಇಂಗ್ಲಿಷ್ ಶಬ್ದಕ್ಕೆ ಸಮಾನವಾಗಿ ಪ್ರಯೋಗವಾಗುತ್ತದೆ.

**ಸಿಬ್ಬು** ಇದು ಚಿಬ್ಬು ಎಂಬ ಕನ್ನಡ ಶಬ್ದದ ರೂಪಾಂತರ. ದೇಹದ ಮೇಲೆ ಉಂಟಾಗುವ ಬಿಳಿಯ, ಕೆಂಪಾದ ಅಥವಾ ಕಪ್ಪಾದ ಗುರುತುಗಳು, ಕಲೆ. ಸಂಸ್ಕೃತದ ಸಿಧ್ಮ ಎಂಬುದರ ತದ್ಭವ. ಚಿಬ್ಬ, ಸಿಬ್ಬ, ಸಿಬ್ಬೆ ಎಂಬ ಬೇರೆ ಬೇರೆ ರೂಪಗಳಿವೆ. ಇದೊಂದು ಚರ್ಮ ರೋಗ.

**ಸಿರಿ** ಎಂಬುದು ಶ್ರೀ ಎಂಬ ಸಂಸ್ಕೃತ ಶಬ್ದದ ಕನ್ನಡ, ತದ್ಭವ. ಶ್ರೀ ಎಂಬ ಶಬ್ದವು ಲಕ್ಷ್ಮಿ , ಐಶ್ವರ್ಯ, ಸೊಗಸು, ಕಾಂತಿ ಮುಂತಾದ ಅರ್ಥಗಳನ್ನು ಹೊಂದಿದೆ. ಸಿರಿತನ, ಸಿರಿವಂತ, ಸಿರಿಮುಡಿ, ಸಿರಿಮಂಚ, ಸಿರಿಗಿರಿ ಮುಂತಾದ ಶಬ್ದಗಳಲ್ಲಿ ಈ ಅರ್ಥಗಳಿವೆ.

**ಸಿರಿಗನ್ನಡಂ ಗೆಲ್ಗೆ** ಈ ವಾಕ್ಯವನ್ನು ಪ್ರಚಾರಕ್ಕೆ ತಂದವರು ದಿ. ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರು. ಸುಮಾರು ೧೯೩೮ ರ ವೇಳೆಗೆ ಶ್ರೀ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನು ಸ್ವೀಕರಿಸಿದ ಸಂದರ್ಭದಲ್ಲಿ ಅವರು ಬರೆದ ಕಿರುಲೇಖನದಲ್ಲಿ ಈ ಮಾತು ಉಲ್ಲೇಖಿತವಾಗಿದೆ. ಅನೇಕ ಕಡೆ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದ ಸಂದರ್ಭದಲ್ಲಿ, ಭಾಷಣದ ಕೊನೆಯಲ್ಲಿ ವಿದ್ಯಾರ್ಥಿಗಳ ಕೈಲಿ ಸಾಮೂಹಿಕವಾಗಿ ಹೇಳಿಸುತ್ತಿದ್ದರು. ಅವರು ರಚಿಸಿರುವ ಕನ್ನಡ ತಾಯ ನೋಟ ಎಂಬ ಕವಿತೆಯ ಕೊನೆಯ ಭಾಗದಲ್ಲಿ ಈ ಸಾಲುಗಳು ಬರುತ್ತವೆ.

*ಬನ್ನಿ ಮಕ್ಕಳಿರ*
*ಒಕ್ಕೊರಲಲೆಲ್ಲರೂ ಕೂಗಿ ಈ ಕೂಗ*
*ಈ ಹಿರಿಯ ಕೂಗ*

*ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ*
*ಸಿರಿಗನ್ನಡಂ ಗೆಲ್ಗೆ, ಬಾಳ್ಗೆ*
*ಕನ್ನಡ ತಾಯ್ ಗೆಲ್ಗೆ, ಬಾಳ್ಗೆ*

ಶ್ರೀಯವರ ಸಿರಿಗೊರಳಿನಿಂದ ಹೊರಟ ಈ ಜಯಕಾರವನ್ನು ಒಟ್ಟು ಸಭೆಯೇ ಒಕ್ಕೊರಳಿನಿಂದ ಘೋಷಿಸಿ ಆವರಣವನ್ನೇ ಪುಲಕಗೊಳಿಸುತ್ತಿತ್ತು. ಜನರು ಕನ್ನಡದ ಕಾರ್ಯಕ್ಕೆ ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದರು. ಆಗಿನ ಸಂದರ್ಭದಲ್ಲಿ ಅದು ಕೂಗು ಮಾತ್ರವಾಗಿರದೆ ಪವಿತ್ರವಾದ ಮಂತ್ರೋಪದೇಶದಂತೆ ಕಾರ್ಯವನ್ನು ನಿರ್ವಹಿಸುತ್ತಿತ್ತು. ಈಗ ನಡೆಯುತ್ತಿರುವ ಕನ್ನಡ ಪರವಾದ ಎಲ್ಲ ಕಾರ್ಯಗಳ ಹಿನ್ನೆಲೆಯಲ್ಲಿ ಈ ಮಂತ್ರದ ಪ್ರಭಾವವಿದೆ ಎಂಬುದನ್ನು ಮರೆಯಬಾರದು. ಆ ಕಾಲದಲ್ಲಿ ಅಂದರೆ ಅರುವತ್ತು ವರ್ಷಗಳ ಹಿಂದೆ ಇಂಥ ಅನೇಕ ಸಭೆಗಳಲ್ಲಿ ಭಾಗಿಯಾಗಿದ್ದ ನನಗೆ ಈ ಪ್ರಭಾವದ ಚಿತ್ರ ಕಣ್ಣಿಗೆ ಕಟ್ಟಿದಂತಿದೆ. ಮನಸ್ಸಿನಲ್ಲಿ ಇನ್ನೂ ಜೀವಂತವಾಗಿದೆ.

**ಸೀಗಡಿ, ಸೀಗೆಡಿ, ಸೀಗೇಡಿ** ಈ ಶಬ್ದದ ಮೂಲರೂಪ ಸೀಗಡಿ. ಒಂದು ಬಗೆಯ ಮೀನು. ತುಳು ಭಾಷೆಯಲ್ಲಿ ಇದನ್ನೇ ಕೀಕೊಡೆ ಎಂದು ಕರೆಯುತ್ತಾರೆ. ಈ ಸೀಗಡಿಯೇ ಉಚ್ಚಾರಣಾ ಭೇದದಿಂದ ಸೀಗೆಡಿ, ಸೀಗೇಡಿ ಆಗಿದೆ. ಅದು ಉಪಯೋಗವಾಗಿರುವ ಕಾವ್ಯದಿಂದ ಅದರ ಶಿಷ್ಟತೆ ನಿರ್ಧಾರವಾಗುತ್ತದೆ.

**ಸೀಗುರಿ** ಎಂಬುದು ಸರಿಯಾದ ಶಬ್ದ. ಅದಕ್ಕೆ ಚಾಮರ ಎಂದರ್ಥ. ಕನ್ನಡ ಕಾವ್ಯದಲ್ಲಿ ಈ ಅರ್ಥದಲ್ಲಿ ಅನೇಕ ಕವಿಗಳು ಉಪಯೋಗಿಸಿದ್ದಾರೆ ಈ ಕನ್ನಡ ಶಬ್ದವನ್ನು. ಸೀಗರಿ ತಪ್ಪು.

**ಸೀಮಾ, ಸಿಮ** ಸಂಸ್ಕೃತದಲ್ಲಿ ಸೀಮನ್ ಎಂಬ ಶಬ್ದವಿದೆ. ಅದು ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ಸೀಮಾ ಎಂಬ ರೂಪವನ್ನು ಪಡೆಯುತ್ತದೆ. ಅದಕ್ಕೆ ೧. ಎಲ್ಲೆ, ಗಡಿ ೨. ಕ್ಷೇತ್ರ ೩. ಹೆಗ್ಗತ್ತು ಎಂದು ಅರ್ಥ. ಸಿಮ ಎಂದರೆ ಎಲ್ಲ, ಸಕಲ, ಸಮಸ್ತ ಎಂದರ್ಥ. ಎರಡೂ ಸರಿಯಾದ ಶಬ್ದಗಳು. ಯಾವುದನ್ನಾದರೂ ಮಗುವಿಗೆ ಹೆಸರಾಗಿ ಇಡಬಹುದು.

**ಸುಂದರಿ** ಸುಂದರ ಪುಲ್ಲಿಂಗವಾದರೆ, ಸುಂದರೀ ಸ್ತ್ರೀಲಿಂಗ ಶಬ್ದ. ಸಂಸ್ಕೃತದ ಸುಂದರೀ ಶಬ್ದವೇ ಕನ್ನಡದಲ್ಲಿ ಸುಂದರಿ ಆಗಿದೆ. ಈ ಶಬ್ದ ಸು + ನರ ಎಂಬುದರಿಂದ ಬಂದಿರಬಹುದು. ಮಧ್ಯೆ ಇರುವ ದಕಾರಕ್ಕೆ ಗ್ರೀಕ್ ಭಾಷೆಯ ಪ್ರಭಾವ ಇರಬಹುದು ಎನ್ನುತ್ತಾರೆ. ಗ್ರೀಕ್ ಮತ್ತು ಸಂಸ್ಕೃತ ಈ ಭಾಷೆಗಳೆರಡಕ್ಕೂ ಬಾಂಧವ್ಯವಿರುವುದರಿಂದ ಅದು ಸಾಧ್ಯ ಎಂದೂ ಕಾಣುತ್ತದೆ. ಅರ್ಥ ಚೆಲುವೆ ಎಂದು.

**ಸುಕಾಲಿ** ಇದು ತೆಲುಗು ಭಾಷೆಯಲ್ಲಿ ಸುಕಾರಿ, ಸುಕಾಲಿ ಎಂಬ ಎರಡು ರೂಪಗಳಲ್ಲಿ ಹೆಚ್ಚು ಪ್ರಚಾರದಲ್ಲಿರುವ ಶಬ್ದ. ಕನ್ನಡದಲ್ಲಿ ಲಂಬಾಣಿ ಎಂದು ನಾವು ಕರೆಯುವ ಗುಂಪಿನ ಈ ಶಬ್ದಕ್ಕೆ ಲಂಬಾಡಿ, ಲಮಾಣಿ, ಲವಾಣ ಎಂಬ ಪರ್ಯಾಯ ರೂಪಗಳಿವೆ. ಊರಿಂದೂರಿಗೆ ಅಲೆಯುವ ಜನ. ಗುಡ್ಡಗಳ ಮೇಲೆ ಕಾಡುಗಳ ಹತ್ತಿರ ಹೆಚ್ಚಾಗಿ ವಾಸಿಸುತ್ತಾರೆ.

**ಸುಖ - ನೆಮ್ಮದಿ** ಸುಖ ಸಂಸ್ಕೃತ ಶಬ್ದ. ಇದಕ್ಕೆ ಆನಂದ, ಸಂತೋಷ ಎಂಬುದು ಮುಖ್ಯಾರ್ಥ. ಸೌಲಭ್ಯ, ಧರ್ಮ, ಆರೋಗ್ಯ ಮುಂತಾದ ಅರ್ಥಗಳೂ ಇವೆ. ಅಲ್ಲದೆ ಸಾಂಸಾರಿಕ ಸುಖ, ಪಾರಮಾರ್ಥಿಕ ಸುಖಗಳು ಬೇರೆ ಬೇರೆಯಾಗಿವೆ. ನೆಮ್ಮದಿ ಎಂಬುದು ಕನ್ನಡ ಶಬ್ದ. ಇದಕ್ಕೆ ಮುಖ್ಯವಾಗಿ ಶಾಂತಿ, ಸಮಾಧಾನ ಎಂಬುದು ಅರ್ಥ. ದೈನ್ಯವಿಲ್ಲದೆ ಬದುಕು ನಡೆಸುವುದು ನೆಮ್ಮದಿ.

**ಸುಗ್ರೀವಾಜ್ಞೆ** ಈ ಶಬ್ದಕ್ಕೆ ಕಟ್ಟುನಿಟ್ಟಾಗಿ ಪಾಲಿಸಬೇಕಾದ ಅಪ್ಪಣೆ, ಉಗ್ರಶಾಸನ ಎಂದರ್ಥ. ಇಂಗ್ಲಿಷ್‌ನ Ordinance ಎಂಬ ಶಬ್ದಕ್ಕೆ ಮಾಡಿಕೊಂಡ ಕನ್ನಡ ಶಬ್ದ. ಭಾರತದ ಸ್ವಾತಂತ್ರ್ಯ

ಹೋರಾಟದ ಸಮಯದಲ್ಲಿ ಬ್ರಿಟಿಷ್ ಸರಕಾರವು ಇಂಥ ಆಜ್ಞೆಗಳನ್ನು ಆಗಾಗ ಹೊರಡಿಸುತ್ತಿತ್ತು. ಕನ್ನಡ ಪತ್ರಿಕೆಗಳು ಆಗ ಈ ಶಬ್ದವನ್ನು ಉಪಯೋಗಿಸಿದವು. ವಿಶ್ವ ಕರ್ನಾಟಕದ ಸಂಪಾದಕ ದಿವಂಗತ ಟಿ.ಟಿ. ಶರ್ಮರು ಈ ಶಬ್ದವನ್ನು ರೂಢಿಗೆ ತಂದರೆಂದು ನನ್ನ ನೆನಪು. ರಾಮಾಯಣದಲ್ಲಿ ಬರುವ ಕಥೆಯ ಪ್ರಕಾರ ಸುಗ್ರೀವನ ರಾಜ್ಯದಲ್ಲಿ ಅವನ ಅಪ್ಪಣೆಯೆಂದರೆ ಇಂಥ ಬಿಗಿಯಿಂದ ಕೂಡಿರುತ್ತಿತ್ತು ಎಂಬ ಅಭಿಪ್ರಾಯ ಬರುತ್ತದೆ.

**ಸುಡುವಗ್ನಿ ಎಂಬುದರ ಸಮಾಸ ಸಂಧಿ ಪ್ರಕ್ರಿಯೆಗಳು** ಸುಡುವ + ಅಗ್ನಿ = ಸುಡುವಗ್ನಿ ಎಂಬುದು ರೂಪ. ಒಂದು ಕನ್ನಡ + ಒಂದು ಸಂಸ್ಕೃತ ಶಬ್ದ. ಆದರೂ ಅಲ್ಲಿ ಲೋಪಸಂಧಿಯಾಗಿದೆ. ಮಹಾಕವಿ ಪ್ರಯೋಗ. '**ಸುಡುವಗ್ನಿಗಾಪೋಶನದ ಗೊಡವೆಯೇವುದು**' ಎಂದು ರಾಘವಾಂಕ ಪ್ರಯೋಗಿಸಿದ್ದಾನೆ. ಇದನ್ನು ಸಮಾಸವಾಗಿ ಭಾವಿಸಬೇಕೆ? ಎಂಬುದು ಮುಂದಿನ ಪ್ರಶ್ನೆ. ಇದನ್ನು, ಕೇಶಿರಾಜನ ಪ್ರಕಾರ ಗಮಕ ಸಮಾಸ ಎಂದು ಹೇಳಬಹುದು. ಗಮಕ ಸಮಾಸದ ಬಗ್ಗೆ ಕನ್ನಡದಲ್ಲಿ ವಿದ್ವಾಂಸರಿಂದ ದೊಡ್ಡದಾಗಿ ಚರ್ಚೆ ನಡೆದಿದೆ. ಈಚೆಗೆ ಶ್ರೀ ಸೇಡಿಯಾಪು ಕೃಷ್ಣ ಭಟ್ಟರು ಪ್ರಕಟಿಸಿದ ಗ್ರಂಥದಲ್ಲಿ ಸಮಂಜಸವಾದ ವಿಸ್ತಾರವಾದ ಚರ್ಚೆಯಿದೆ. ಈ ವಿಷಯದಲ್ಲಿ ಆಸಕ್ತಿ ಇದ್ದವರು ಆ ಗ್ರಂಥವನ್ನು ಪರಿಶೀಲಿಸಬೇಕು. ಪುಸ್ತಕದ ಹೆಸರು: **ವಿಚಾರ ಪ್ರಪಂಚ** (ಪುಟ ೫೫೩ ಮತ್ತು ೨೬೯, ೩೯೯).

**ಸುಜಾತ** ಸತ್ಕುಲ ಪ್ರಸೂತ. ಸುಜಾತೆ = ಸತ್ಕುಲ ಪ್ರಸೂತೆ. ಸುಜಾತೆ ಎಂಬ ಕನ್ನಡದ ಶಬ್ದವು ಸಂಸ್ಕೃತದ ಸುಜಾತಾ ಎಂಬ ಶಬ್ದದಿಂದ ಬಂದಿದೆ. ಈ ಶಬ್ದವು ನಿಘಂಟಿನಲ್ಲಿ ಏಕೆ ಬಂದಿಲ್ಲ ಎಂದರೆ ಸಣ್ಣ ನಿಘಂಟುಗಳಲ್ಲಿ ಸ್ಥಳವನ್ನು ಮಿತಿಯಾಗಿ ಉಪಯೋಗಿಸುತ್ತಾರೆ. ಆದ್ದರಿಂದ ದೊಡ್ಡ ನಿಘಂಟುಗಳಲ್ಲಿ ಈ ಶಬ್ದ ಖಂಡಿತವಾಗಿ ನಮೂದಿಸಲ್ಪಟ್ಟಿರುತ್ತದೆ.

**ಸುದರ್ಶನ ಚಕ್ರ** ಈ ಚಕ್ರದ ಕಥೆ ಶಿವಪುರಾಣದಲ್ಲಿ ಬರುತ್ತದೆ. ಕಾರ್ತಿಕ ಮಾಸದ ಶುಕ್ಲ ಪಕ್ಷದ ಚತುರ್ದಶಿಯ ದಿನ ವಿಷ್ಣುವು ಕಾಶೀಕ್ಷೇತ್ರಕ್ಕೆ ಬಂದು ಶಿವನಿಗೆ ಪೂಜೆ ಮಾಡಿದನು. ಆ ಸಂದರ್ಭದಲ್ಲಿ ವಿಷ್ಣು ಎರಡು ಕಮಲ ಪುಷ್ಪಗಳಿಂದ ಶಿವನ ಪಾದಗಳಿಗೆ ಪೂಜೆ ಮಾಡಿದನು. ಆ ಎರಡರಲ್ಲಿ ಒಂದನ್ನು ಶಿವನು ವಿಷ್ಣುವಿಗೆ ಕಣ್ಣಿಗೆ ಕಾಣದಂತೆ ಮಾಡಿದನು. ಆಗ ವಿಷ್ಣುವು ಕಮಲದಂಥ ತನ್ನ ಕಣ್ಣನ್ನೇ ತೆಗೆದು ಪೂಜಿಸಿದನು. ಶಿವನು ಸಂತೃಪ್ತನಾಗಿ ವಿಷ್ಣುವಿಗೆ ತಾನು ಜಲಂಧರ ರಾಕ್ಷಸನನ್ನು ಕೊಂದ ಚಕ್ರಾಯುಧವನ್ನು ನೀಡಿದನು. ಅದೇ ಸುದರ್ಶನ ಚಕ್ರ. ಇದರ ನೆನಪಿನಲ್ಲಿ ಆ ಚತುರ್ದಶಿ, ವೈಕುಂಠ ಚತುರ್ದಶಿ ಆಗಿದೆ.

**ಸುದಾ** ಇದು 'ಶುದ್ಧ' ಎಂಬ ಸಂಸ್ಕೃತ ಶಬ್ದದ ತದ್ಭವ. ಇದಕ್ಕೆ ಸರಿಯಾದ ರೂಪ 'ಸುದ್ದಾ'. ಕನ್ನಡದಲ್ಲಿ ಇದಕ್ಕೆ ಜೊತೆಯಲ್ಲಿ, ಕೂಡ, ಒಡನೆ ಎಂದರ್ಥ. 'ಸುದಾ' ಎಂಬುದು 'ಸುದ್ದ' ಎನ್ನುವುದರ ಗ್ರಾಮ್ಯ ರೂಪ.

**ಸುದ್ದಿ** ಇದು ಶುದ್ಧಿ ಎಂಬ ಸಂಸ್ಕೃತದ ತದ್ಭವ. ಇದಕ್ಕೆ ಅರ್ಥ ಇರುವ ಸ್ಥಿತಿಗತಿಗಳ ಸ್ಪಷ್ಟವಾದ, ಖಚಿತವಾದ, ಶುದ್ಧವಾದ ಚಿತ್ರ. ಆದ್ದರಿಂದಲೇ ಇದು ವಾರ್ತೆ, ವರ್ತಮಾನ. ಇದರಲ್ಲಿ ಗೂಢಚಾರರಿಂದ ಬಂದ ಗುಪ್ತವಾರ್ತೆ ಆಗಬಹುದು. ಊರ ಜನರ ಮಾತಿನ ಊಹಾಪೋಹ ಆಗಬಹುದು, ಪುಕಾರೂ ಆಗಬಹುದು.

**ಸುದೇಷ್ಣಾ** ಎಂಬ ಶಬ್ದ ಸರಿಯಾಗಿದೆ. ಒಳ್ಳೆಯ ಹೆಸರು. ದಾನ ಮಾಡುವ ಗುಣವುಳ್ಳವಳು ಎಂದರ್ಥ. ಇದು ವಿರಾಟ ಮಹಾರಾಜನ ಹೆಂಡತಿಯ ಹೆಸರು.

**ಸುಧಾ** ಎಂಬ ಈ ಸಂಸ್ಕೃತ ಶಬ್ದಕ್ಕೆ ಅಮೃತ, ಪುಷ್ಪ ಮಕರಂದ, ಹಾಲು, ಸುಣ್ಣ, ನೆಲ್ಲಿಕಾಯಿ ಇತ್ಯಾದಿ ಅರ್ಥಗಳಿವೆ.

**ಸುನಾಯಾಸ - ಅನಾಯಾಸ** ಆಯಾಸ, ಅನಾಯಾಸ ಎಂಬುದು ಪ್ರಸಿದ್ಧ ಶಬ್ದಗಳು.

ಅವುಗಳನ್ನು ಜನಸಾಮಾನ್ಯರೂ ಪ್ರತಿನಿತ್ಯ ಉಪಯೋಗಿಸುತ್ತಾರೆ. ಅವರೇ ಸುನಾಯಾಸ ಎಂಬ ಶಬ್ದವನ್ನೂ ಉಪಯೋಗಿಸುತ್ತಾರೆ. ಇದೊಂದು ಅಪಶಬ್ದ. ಇದಕ್ಕೆ ಶಾಸ್ತ್ರಾಧಾರವಿಲ್ಲ. ಡಾ. ಕಿಟ್ಟಲ್ ಅವರು ಈ ಶಬ್ದವನ್ನು ಸುನ್ನ + ಆಯಾಸ = ಸುನಾಯಾಸ ಆಗಿರಬೇಕು ಎನ್ನುತ್ತಾರೆ. ಅವರ ಪ್ರಕಾರ ಸುನ್ನ ಎಂದರೆ ಶೂನ್ಯ. ಸುನ್ನ = ಶೂನ್ಯದ ತದ್ಭವ. ಕೇಶಿರಾಜನು ಪ್ರಯೋಗ ಸಾರದಲ್ಲಿ ಸುನ್ನಂ ಎಂದರೆ ಶೂನ್ಯಂ ಎಂದು ಉಲ್ಲೇಖ ಮಾಡಿದ್ದಾನೆ. ಇದು ಕಿಟ್ಟೆಲ್ಲರಿಗೆ ಆಧಾರವಾಗಿದೆ. ಕೇಶಿರಾಜನು ಇವೆಲ್ಲಂ **ಕವಿಮಾರ್ಗ ಮನೋಹರಂಗಳ್, ನಿರ್ದುಷ್ಟಂಗಳ್** (= ಇವೆಲ್ಲವೂ ಕಾವ್ಯದಲ್ಲಿ ಸೊಗಸನ್ನು ತರುತ್ತವೆ. ಮತ್ತು ತಪ್ಪಲ್ಲ) ಎಂದು ಘೋಷಿಸಿದ್ದರೂ ಸುನ್ನ ರೂಪವನ್ನು ಉಪಯೋಗಿಸಿರುವ ಒಂದು ಕವಿ ಪ್ರಯೋಗವೂ ನಮಗೆ ದೊರಕಿಲ್ಲ. ಎಲ್ಲರೂ ಶೂನ್ಯದ ತದ್ಭವ ಸೊನ್ನೆ ಎಂದೇ ತಿಳಿದಿರುವುದು ಸ್ಪಷ್ಟ.

ನನ್ನ ವಿವೇಚನೆ ಹೀಗಿದೆ: ಅನಾಯಾಸ ಎಂಬ ಶಬ್ದದಲ್ಲಿರುವ ಅವಧಾರಣೆ ಸಾಲದೆ ಯಾರೋ ಜನಸಾಮಾನ್ಯರು ಅದಕ್ಕೆ ಹಿಂದೆ ಸು ಸೇರಿಸಿ ಅನಾಯಾಸವಾಗಿ **ಸುನಾಯಾಸ** ಎಂಬುದನ್ನೂ ಟಂಕಿಸಿಬಿಟ್ಟಿದ್ದಾರೆ. ಇದೊಂದು ಜನತಾ ಜನಾರ್ದನನ ಸೃಷ್ಟಿ. ಬಹು ಜನಪ್ರಿಯವಾದ ಶಬ್ದ. ಅರ್ಥ ಮಾತ್ರ ಅದೇ!

**ಸುನಿಲ್, ಸುನೀಲ್, ಸುನಿಲ, ಸುನೀಲ - ಇವುಗಳಲ್ಲಿ ಯಾವುದು ಸರಿ?** ಸುನೀಲ ಎಂಬುದು ಸರಿಯಾದ ಶಬ್ದ. ಕನ್ನಡದ ಜಾಯಮಾನಕ್ಕೆ ಅರ್ಧಾಕ್ಷರದಿಂದ ಕೊನೆಗಾಣುವ ಹೆಸರುಗಳು ಹೊಂದಿಕೊಳ್ಳುವುದಿಲ್ಲ. ಆದರೂ ಅಂಥ ಹೆಸರುಗಳ ಮೇಲೆ ಅಭಿಮಾನ ಹೆಚ್ಚುತ್ತಾ ಇದೆ. ಸುನೀಲ ಎಂದರೆ ೧. ಒಳ್ಳೆಯ ನೀಲಿಬಣ್ಣ ೨. ಲಾಮಂಚ ೩. ದಾಳಿಂಬೆ ಗಿಡ ಎಂಬ ಅರ್ಥಗಳಿವೆ.

**ಸುಪನಾಸಿ** ಎಂಬುದು ಮೈಸೂರು ಜಿಲ್ಲೆಯಲ್ಲಿ ತುಂಬ ಪ್ರಚಾರದಲ್ಲಿದ್ದ ಶಬ್ದ. ಬಹಳ ವೈಯಾರ ಮಾಡುವ ಹೆಂಗಸನ್ನು ಈ ಶಬ್ದದಿಂದ ಕರೆಯುತ್ತಿದ್ದರು. ಇದೇನೂ ಅಷ್ಟು ಗೌರವಯುತವಾದುದಲ್ಲ. ಇದರ ವ್ಯುತ್ಪತ್ತಿ ನಿಶ್ಚಿತವಾಗಿಲ್ಲ. ಮರಾಠಿಯ ಸುಪ್ರಾಣೀ = ಕಾಂತಿಯುತ, ಹೊಳೆಯುವ, ಆಕರ್ಷಕ ಎಂಬ ಅರ್ಥದ ಗುಣವಾಚಕವು ವೇಸಿ = ವೇಶ್ಯೆ ಎಂಬ ಕನ್ನಡದ ತದ್ಭವದೊಡನೆ ಸೇರಿರುವ ಸಾಧ್ಯತೆಯಿದೆ. ಸುಪಾಣೀ ಶಬ್ದದ ಮೂಲವೂ ಅನುಮಾನಾಸ್ಪದವಾಗಿದೆ. ಆದರೆ ಈ ಶಬ್ದದ ಪ್ರಭಾವ ಮಾತ್ರ ವ್ಯಾಪಕವಾಗಿದ್ದ ಕಾಲ ಒಂದಿತ್ತು. ಈಗ ಇದು ಮರೆತು ಹೋಗುತ್ತಿರುವ ಶಬ್ದವಾಗಿದೆ. ಸುಪ್ಪಾಣಿ ಮುತ್ತು ಎಂಬ ಪ್ರಸಿದ್ಧವಾದ ಒಂದು ಶಬ್ದವಿದೆ. ಕನ್ನಡದಲ್ಲಿ ಅದಕ್ಕೆ ತುಂಬ ಶ್ರೇಷ್ಠವಾದ ಮುತ್ತು ಎಂದರ್ಥ. ಮುತ್ತಿನ ಮೇಲ್ಭಾಗದ ಲಾವಣ್ಯ ಚೆನ್ನಾಗಿದೆ ಎಂದು ಅದರ ಅರ್ಥ.

**ಸುಪರ್ದು** ಎಂಬುದು ಪಾರಸೀ ಭಾಷೆಯ ಶಬ್ದ. ಮರಾಠಿಯ ಮೂಲಕ ಕನ್ನಡಕ್ಕೆ ಬಂದಿದೆ. ಮೂಲದಲ್ಲಿ ಅದರ ರೂಪ **ಸುಪೂರ್ದ್**, ಮರಾಠಿಯಲ್ಲಿಯೂ ಅದೇ ರೂಪದಲ್ಲಿ ಪ್ರಯೋಗವಾಗುತ್ತದೆ. ಕನ್ನಡದಲ್ಲಿ ಸುಪರ್ದು ಎಂದಾಗಿದೆ. ಈ ಶಬ್ದಕ್ಕೆ ಏನನ್ನಾದರೂ ತನ್ನ ಸ್ವಾಮ್ಯದಲ್ಲಿ ಇಟ್ಟುಕೊಂಡಿರುವುದು ಎಂದರ್ಥ. ಆ ಜಮೀನು ನನ್ನ ಸುಪರ್ದಿನಲ್ಲಿದೆ, ಎಂದರೆ ಅದು ನನ್ನ ಅಧೀನದಲ್ಲಿದೆ ಎಂದರ್ಥ.

**ಸುಪಾರಿ** ಇದು ಅಡಕೆಯನ್ನು ಸೂಚಿಸುವ ಶಬ್ದ. ಹಿಂದಿ, ಪಾಲಿ, ಪ್ರಾಕೃತ, ಮರಾಠೀ ಭಾಷೆಗಳಲ್ಲೆಲ್ಲ 'ಸುಪಾರಿ' ಎಂಬುದೇ ಪ್ರಯೋಗದಲ್ಲಿದೆ. ಉತ್ತರ ದೇಶದ ಎಲ್ಲ ಭಾಷೆಗಳಲ್ಲಿಯೂ ಇದೇ ಶಬ್ದ ಕಂಡು ಬರುತ್ತದೆ. ಈ ಶಬ್ದದ ವ್ಯುತ್ಪತ್ತಿಯ ವಿಚಾರವಾಗಿ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಕನ್ನಡಕ್ಕಂತೂ ಇದು ಅನ್ಯದೇಶ್ಯ.

**ಸುಪ್ತ** ಎಂದರೆ ೧. ನಿದ್ದೆ ಮಾಡಿರುವ ಎಂದೂ, ೨. ನಿದ್ದೆ ಮಾಡಿರುವವನು ಎಂದೂ ಅರ್ಥಗಳಾಗುತ್ತವೆ. ೩. ನಿದ್ರೆ ಎಂದೂ ಅರ್ಥವಿದೆ. ಇದು ಸಂಸ್ಕೃತ ಶಬ್ದ.

**ಸುಬೇದಾರ್** ಇದು ಪಾರಸೀ ಭಾಷೆಯ ಶಬ್ದ. 'ಸುಭಾ' ಎಂದರೆ ಒಂದು ವಿಭಾಗ. ಅಲ್ಲಿಯ ರೆವೆನ್ಯೂ ಅಧಿಕಾರಿಗೆ 'ಸುಬೇದಾರ್' ಎಂದೂ, ಆ ಅಧಿಕಾರಕ್ಕೆ 'ಸುಬೇದಾರೀ' ಎಂದೂ ಹೆಸರು. ಕನ್ನಡದಲ್ಲಿ ಸುಬೇದಾರ್, ಸುಬೇದಾರ ಎಂಬ ರೂಪಗಳಲ್ಲಿ ಪ್ರಯೋಗದಲ್ಲಿದೆ.

**ಸುಭಾಷಿತ - ಸುಭಾಶಿತ** ಸುಭಾಷಿತ ಎಂದರೆ ಒಳ್ಳೆಯ ಮಾತು, ಹಿತವಾದ ವಿಷಯವನ್ನು ತಿಳಿಸುವ ಮಾತು. ಬಾಳಿಗೆ ಬೇಕಾಗುವ ತಿಳಿವಳಿಕೆಯನ್ನು ಕೊಡುವ ಮಾತು. ಇಂಥ ಶ್ಲೋಕಗಳಿಂದ ತುಂಬಿರುವ ಅನೇಕ ಸಂಸ್ಕೃತ ಗ್ರಂಥಗಳಿವೆ. **ಸುಭಾಷಿತ ರತ್ನಾವಳಿ, ಸುಭಾಷಿತ ರತ್ನಕೋಶ, ಸದುಕ್ತಿ ಕರ್ಣಾಮೃತ** ಇತ್ಯಾದಿ. ಈ ಶಬ್ದ ಸುಭಾಷಿತ ಬಹಳ ಪ್ರಸಿದ್ಧವಾದುದು. ಸುಭಾಶಿತ ತಪ್ಪು ಶಬ್ದ. ಅದನ್ನು ಉಪಯೋಗಿಸಬಾರದು.

**ಸುಮಿತ್ರಾ** ಎಂಬುದು ಸಂಸ್ಕೃತದ ಸರಿಯಾದ ರೂಪ. ಇದು ಸ್ತ್ರೀಲಿಂಗದ ಶಬ್ದ. ಇದು ರಾಮಾಯಣದಲ್ಲಿ ಬರುವ ಲಕ್ಷ್ಮಣ-ಶತ್ರುಘ್ನ ಎಂಬುವರ ತಾಯಿಯ ಹೆಸರು. ದಶರಥನ ಪತ್ನಿಯರಲ್ಲಿ ಒಬ್ಬಳು ಸುಮಿತ್ರೆ. **ಸೌಮಿತ್ರ** ಎಂದರೆ ಸುಮಿತ್ರೆಯ ಮಗ ಎಂದರ್ಥ. ಸಾಮಾನ್ಯವಾಗಿ ಲಕ್ಷ್ಮಣನಿಗೆ ಅನ್ವಯಿಸುತ್ತದೆ. ಸೌಮಿತ್ರಿ ಎಂಬ ರೂಪವೂ ಇದೆ.

**ಸುಮ್ಮನೆ** ಎಂಬುದು ಏನೂ ಕಾರಣವಿಲ್ಲದೆ, ಯಾವ ಸಂಬಂಧವೂ ಇಲ್ಲದೆ ಎಂಬ ಅರ್ಥವನ್ನು ನೀಡುವ ಅವ್ಯಯ. ಅದರ ದ್ವಿರುಕ್ತಿ ಸುಮ್ಮಸುಮ್ಮನೆ. ಆಡುಮಾತಿನಲ್ಲಿ ಅದು ಸುಮ್ಸುಮ್ನೆ ಎಂದಾಗುತ್ತದೆ. **'ಅಲ್ಲಿದೆ ನಮ್ಮನೆ ಇಲ್ಲಿ ಬಂದೆ ಸುಮ್ಮನೆ'** ಎಂಬ ದಾಸರ ವಾಕ್ಯವನ್ನು ಗಮನಿಸಿ. ಕನ್ನಡದಲ್ಲಿ ಈ ಶಬ್ದ ವ್ಯಾಪಕವಾಗಿ ಉಪಯೋಗದಲ್ಲಿದೆ.

**ಸುರಭಿ** ಈ ಸಂಸ್ಕೃತದ ಶಬ್ದಕ್ಕೆ ಅನೇಕ ಅರ್ಥಗಳಿವೆ. ಅವುಗಳೆಲ್ಲವನ್ನೂ ಸೂಚಿಸುತ್ತೇನೆ. ಬೇಕಾದುದನ್ನು ಆರಿಸಿಕೊಳ್ಳಬಹುದು. *೧. ಚೈತ್ರ ಮಾಸ ೨. ವಸಂತ ಋತು ೩. ಜಾಯಿಕಾಯಿ ಗಿಡ ೪. ಬಕುಳ ವೃಕ್ಷ ೫. ಕದಂಬ ವೃಕ್ಷ, ೬. ರಾಳ, ೭. ಸುವಾಸನೆ ೮. ಪರಿಮಳ ದ್ರವ್ಯ ೯. ಆನೆ ಬೇಲಮರ ೧೦. ಗೋವು ೧೧. ಕಾಮಧೇನು ೧೨. ಚಿನ್ನ ೧೩. ಗಂಧಕ.* ಇನ್ನೂ ಪರಿಮಳಯುಕ್ತವಾದ ಇತರ ಗಿಡಗಳು.

**ಸುಲೋಚನ** ಲೋಚನ ಎಂದರೆ ಕಣ್ಣು. ಕಣ್ಣಿಗೆ ಏನಾದರೂ ದೃಷ್ಟಿ ದೋಷವಿದ್ದರೆ ಅದನ್ನು ಸರಿಪಡಿಸುವುದರಿಂದ ಸುಲೋಚನ ಎಂದು ಹಿಂದಿನ ತಲೆಮಾರಿನ ಲೇಖಕರು ಈ ಪದವನ್ನು ಸೃಷ್ಟಿಸಿದ್ದಾರೆ. ಶಬ್ದ ಚೆನ್ನಾಗಿದೆ. ಇದಕ್ಕೆ ಕನ್ನಡಕ ಎಂದರ್ಥ. ಇರಲಿ ಬಿಡಿ. ಅದರ ಮೇಲೆ ಏಕೆ ಕಣ್ಣು ಹಾಕುತ್ತೀರಿ ? ಮುಂದೆ ನಿಮಗೇ ಬೇಕಾಗಬಹುದು.

**ಸೂಕ್ತ** ಎಂಬ ಸಂಸ್ಕೃತದ ಶಬ್ದಕ್ಕೆ *೧. ವೇದ ಮಂತ್ರಗಳು, ೨. ಮಧುರವಾದ ಮಾತು, ೩. ಚೆನ್ನಾಗಿ ಹೇಳಲ್ಪಟ್ಟದ್ದು* ಎಂಬ ಅರ್ಥಗಳಿವೆ. ಸೂಕ್ತಿ ಎಂಬ ಶಬ್ದಕ್ಕೆ ಒಳ್ಳೆಯ ಮಾತು ಎಂಬುದೇ ಅರ್ಥ. ಈ ಎರಡೂ ವಚ್ ಧಾತುವಿನಿಂದ ಬಂದವು.

**ಸೂತಕ** 'ಆಶೌಚ' ಎಂಬುದು ಮೈಲಿಗೆಗೆ ಅನ್ವಯವಾದ ಹಾಗೆ 'ಸೂತಕ' ಶಬ್ದವೂ ಮೈಲಿಗೆಗೆ ಅನ್ವಯವಾಯಿತು. ಆಗ 'ಸೂತಕ' ಶಬ್ದವು 'ಮೃತಾಶೌಚಕ್ಕೆ ಹತ್ತಿರ ಬಂತು. ಮರಣದ ಸಂಬಂಧವೂ ಸೂತಕಕ್ಕೆ ಅಂಟಿದ ಮೇಲೆ ಆ ಶಬ್ದವನ್ನು 'ಜನನಾಶೌಚ'ಕ್ಕೆ ಅನ್ವಯಿಸುವುದನ್ನು ಜನರು ಬಿಟ್ಟುಬಿಟ್ಟರು. ಅಷ್ಟೇ ಅಲ್ಲ. 'ಜನನಾಶೌಚ' ಎಂಬ ಶಬ್ದವೇ ಮರೆಯಾಯಿತು. ಈಗ ಎಲ್ಲರೂ ಈ ಮೈಲಿಗೆಗೆ ಕನ್ನಡ ಶಬ್ದವಾದ **ಪುರುಡ**ನ್ನೇ ಉಪಯೋಗಿಸುತ್ತಾರೆ. ಸಂಸ್ಕೃತದ ಶಬ್ದದ ಸ್ಥಾನವನ್ನು ಕನ್ನಡ ಆಕ್ರಮಿಸಿದ ಕತೆ ಹೀಗಿದೆ. ದಕ್ಷಿಣ ಕನ್ನಡದಲ್ಲಿ **ಪುರುಡಿ**ಗೆ **ಅಮೆ** ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಇದು

ತುಳುಭಾಷೆಯ ಶಬ್ದ. ಅಮೆಗೆ ತುಳುವಿನಲ್ಲಿ ೧. ಪುರುಡು ೨. ಪುರುಡಿನ ಅವಧಿ ೩. ಪುರುಡು ಕಳೆದ ಮೇಲೆ ಮಾಡುವ ಸ್ನಾನ ವಿಧಿ ಎಂಬ ಅರ್ಥಗಳಿವೆ.

**ಸೂರ್ಯ - ಸೂರಿಯ** ಸೂರ್ಯ ಶಬ್ದಕ್ಕೆ ಸೂರಿಯ ತದ್ಭವ. ಕುಮಾರವ್ಯಾಸನು ಉಪಯೋಗಿಸಿರುವ ಈ ಶಬ್ದವನ್ನು ಗಮನಿಸಿ.

*ಶೌರಿಯದಲಿದಿರಿಲ್ಲ ಕುಲದಲಿ*
*ಸೂರಿಯನ ಮಗನೊಡನೆ ಹುಟ್ಟಿದ ವೀರರೈವರು*
*ಪಾಂಡುತನಯರು* *(ಉದ್ಯೋಗಪರ್ವ - ೧೦-೧೦)*

**ಸೂಳೆ** ಓಡಿಹೋಗುವ ಸೂಳೆ ಹೆಪ್ಪಿಟ್ಟು ಹೋಗುತ್ತಾಳೆಯೆ ?

ಇದರಲ್ಲಿರುವ ಸೂಳೆ ಶಬ್ದಕ್ಕೂ ಸೂಟ್ ಶಬ್ದಕ್ಕೂ ಸಂಬಂಧವಿದೆಯೆ ? ಹಳಗನ್ನಡದ ಸೂಟ್ ಶಬ್ದಕ್ಕೆ ಸರದಿ, ಬಾರಿ ಎಂದು ಅರ್ಥ. ಹೊಸಗನ್ನಡದಲ್ಲಿಯೂ ಕೆಲವು ಕಡೆ ಸೂಳು ಶಬ್ದ ಪ್ರಯೋಗದಲ್ಲಿದೆ, ಆದರೆ ಕ್ವಚಿತ್ತಾಗಿ. ಆ ಶಬ್ದಕ್ಕೂ ಸೂಳೆ ಎಂಬ ಇನ್ನೊಂದು ಕನ್ನಡ ಶಬ್ದಕ್ಕೂ ಸಂಬಂಧವಿಲ್ಲ. ಸೂಳೆ ಎಂಬ ಶಬ್ದ ಸಂಸ್ಕೃತದ **ಶೂಲಾ** = ಸೂಳೆ ಎಂಬ ಶಬ್ದದ ತದ್ಭವ. ಇದು ದೇಶ್ಯ ಶಬ್ದವಲ್ಲ. ಸೂಟ್ ದೇಶ್ಯ ಶಬ್ದ. ಸೂಳೆಯ ದೃಷ್ಟಿ ಬೇರೆ. ಗೃಹಿಣಿಯ ದೃಷ್ಟಿ ಬೇರೆ. ಒಂದು ಮನೆಯನ್ನು ಹಾಳು ಮಾಡುವ ದೃಷ್ಟಿ; ಇನ್ನೊಂದು ಮನೆಯನ್ನು ಬೆಳಗುವ ದೃಷ್ಟಿ. ಈ ಮೇಲಿನ ಗಾದೆ ಈ ದೃಷ್ಟಿ ಭೇದವನ್ನು ಕುರಿತದ್ದು.

**ಸೂಳ್ನುಡಿ** ಎಂಬ ಶಬ್ದದಲ್ಲಿ ಎರಡು ಭಾಗಗಳಿವೆ. ಸೂಟ್ = ಸರದಿ, ಬಾರಿ, ಸರ್ತಿ. ನುಡಿ = ಮಾತು. ಇವೆರಡೂ ಸೇರಿ ಸೂಟ್ನುಡಿ ಎಂದಾಗಿದೆ. ಅದೇ ಕಾಲಕ್ರಮದಲ್ಲಿ ಸೂಳ್ನುಡಿ ಎಂದಾಗಿದೆ. ಇದಕ್ಕೆ ಮೊದಲ ಅರ್ಥ - ಒಬ್ಬರ ಸರದಿ ಬಂದಾಗ ಅವರು ಆಡುವ ಮಾತು ಅಥವಾ ಪ್ರತಿ ಮಾತು, ಪ್ರತ್ಯುತ್ತರ. ಯಾವುದಾದರೂ ಸಂದರ್ಭದಲ್ಲಿ ಹೇಳುವ ಅರ್ಥವತ್ತಾದ ಮಾತು. ಇದು ಕ್ರಮೇಣ ತಿರುಳುಳ್ಳ ಮಾತು, ಸತ್ವಪೂರ್ಣವಾದ ಹೇಳಿಕೆ, ಅಂತರಾರ್ಥವುಳ್ಳ ಮಾತು ಎಂಬ ಹೆಚ್ಚು ಅರ್ಥವತ್ತಾದ ಸತ್ವವನ್ನು ಒಳಗೊಂಡಿದೆ. ಶಿವಶರಣರ ವಚನಗಳಲ್ಲಿ ಶ್ರೇಷ್ಠವಾದ ವಚನಗಳಿಗೆ ಈ ಮಾತನ್ನು ಅನ್ವಯಿಸುತ್ತಾರೆ. 'ಶೂನ್ಯ ಸಂಪಾದನೆ' ಯಲ್ಲಿ ಇಂಥ ಅನೇಕ ವಚನಗಳಿವೆ.

**ಸುದಾಮ - ಸುಧಾಮ** ಈ ಎರಡು ಶಬ್ದಗಳೂ ಸರಿ. ಎರಡೂ ಬೇರೆ ಬೇರೆ ವ್ಯಕ್ತಿಗಳ ಹೆಸರುಗಳು. ಶ್ರೀ ಕೃಷ್ಣನ ಸ್ನೇಹಿತನಾದ ಕುಚೇಲನಿಗೆ **ಸುದಾಮ** ಎಂದು ಅಲ್ಪಪ್ರಾಣ ದಕಾರದ ಶಬ್ದ ಪ್ರಯೋಗವಾಗುತ್ತದೆ. ಕುಚೇಲ ಎಂದರೆ ಹರಿದ ಬಟ್ಟೆಯನ್ನು ಉಟ್ಟವನು ಎಂದರ್ಥ. ಕರ್ಣನ ಒಬ್ಬ ಮಗನಿಗೆ ಸುದಾಮ ಎಂಬ ಹೆಸರಿದೆ. **ಸುಧಾಮ** ಒಬ್ಬ ಮಂತ್ರಿ. ಸೀತೆಯ ತಂದೆಯಾದ ಜನಕರಾಜನ ಮಂತ್ರಿ. ಹೀಗೆ ಭಾಗವತ, ಭಾರತ, ರಾಮಾಯಣಗಳ ಸಂಬಂಧವಿದೆ ಈ ಶಬ್ದಗಳಿಗೆ.

**ಸೃಜನಶೀಲ** ಈ ಶಬ್ದ ವ್ಯಾಕರಣ ಶುದ್ಧವಾದುದಲ್ಲ. ಅದು **ಸರ್ಜನಶೀಲ** ಎಂದಾಗಬೇಕು. ಆದರೆ ಸೃಷ್ಟಿಶೀಲ ಎಂಬುದು ಶುದ್ಧವಾದುದಲ್ಲದೆ ಎಲ್ಲರಿಗೂ ಗೊತ್ತಿರುವ ಶಬ್ದ. ಇಂಗ್ಲಿಷಿನ creative ಶಬ್ದಕ್ಕೆ ಏನೇನು ಅರ್ಥಗಳಿವೆಯೋ ಅವೆಲ್ಲವನ್ನೂ ಈ ಶಬ್ದಕ್ಕೆ ತರಬಹುದು. ಸೃಜಿಸು, ಸೃಜಿಯಿಸು ಎಂಬ ರೂಪಗಳು ಹಿಂದಿನಿಂದ ಕಾವ್ಯಗಳಲ್ಲಿ ಪ್ರಯೋಗವಾಗಿವೆ. ಇಷ್ಟೆಲ್ಲ ವಿವರಿಸಿದರೂ ಸೃಜನಶೀಲ ಶಬ್ದದ ಜನಪ್ರಿಯತೆಯನ್ನು ಕಡಿಮೆ ಮಾಡುವುದಕ್ಕಾಗುವುದಿಲ್ಲ. ಆಧುನಿಕ ಲೇಖಕರೆಲ್ಲ ಈ ಶಬ್ದಕ್ಕೆ ಗಂಟುಬಿದ್ದಿದ್ದಾರೆ. ಅದು ಕನ್ನಡದಲ್ಲಿ ಉಳಿದುಬಿಡುತ್ತದೆ.

ಸೃಜನಾತ್ಮಕ ಈ ಪದ ವ್ಯಾಕರಣ ಶುದ್ಧವಾದುದಲ್ಲ. ಆದರೆ ಅನೇಕ ಲೇಖಕರು ತಮ್ಮ ಬರಹದಲ್ಲಿ ಮತ್ತು ಭಾಷಣಗಳಲ್ಲಿ ಈ ಶಬ್ದಕ್ಕೆ ಪ್ರಾಧಾನ್ಯವನ್ನು ನೀಡಿದ್ದಾರೆ. ಈ ಶಬ್ದವನ್ನು ಉಪಯೋಗಿಸದ ಆಧುನಿಕ ಲೇಖಕನೇ ಇಲ್ಲ. ಆದುದರಿಂದ ಆ ಶಬ್ದ ಉಳಿದು ಚಾಲ್ತಿಗೆ ಬಂದಿದೆ. ಅದರ ಜನಪ್ರಿಯತೆ ಎಷ್ಟಿದೆ ಅಂದರೆ ಅದನ್ನು ಕನ್ನಡ ಶಬ್ದಗಳಲ್ಲಿ ಬಹು ಪ್ರಮುಖವಾದ ಹೊಸ ಶಬ್ದವೆಂದು ಹೇಳಲೇಬೇಕಾಗುತ್ತದೆ. ಅದು ಇಂಗ್ಲಿಷಿನ creative ಎಂಬ ಶಬ್ದಕ್ಕೆ ಸಮಾನವಾಗಿ ಪ್ರಯೋಗಗೊಳ್ಳುತ್ತಿದೆ. creative ಶಬ್ದಕ್ಕೆ ಇರುವ ಎಲ್ಲ ಅರ್ಥಗಳನ್ನೂ ಈ ಶಬ್ದಕ್ಕೆ ತರಲಾಗುತ್ತಿದೆ. ಸಾಹಿತ್ಯ ಸಂದರ್ಭದಲ್ಲಿ ಕವಿಯಾದವನು ತನ್ನ ಕಲ್ಪನೆಯಿಂದ ನವೀನವಾಗಿ ಸೃಷ್ಟಿಸುವ ಎಲ್ಲಕ್ಕೂ ಈ ಶಬ್ದ ಅನ್ವಯವಾಗುತ್ತದೆ. ಇದರ ಅರ್ಥ ವ್ಯಾಪಕವಾಗಿದ್ದು ಸಾರ್ವತ್ರಿಕವಾಗಿ ಫಲಕಾರಿಯಾಗಿದೆ.

**ಸೆಣಸು-ತುದಿವರ-ಭಾಣ** ಕುಮಾರವ್ಯಾಸನಲ್ಲಿ ಶಬ್ದಗಳಿಗೆ ಪ್ರಾಧಾನ್ಯ ಬರುವ ಮೂರು ಪ್ರಸಂಗಗಳ ಪ್ರಾಯೋಗಿಕ ವಿಮರ್ಶೆ.

ಕುಮಾರವ್ಯಾಸನ ಎರಡು ಪದ್ಯಗಳನ್ನು ನಿರ್ದೇಶಿಸಿ, ಮತ್ತೊಂದು ಸಾಲನ್ನು ತಿಳಿಸಿ, ಅವುಗಳಲ್ಲಿರುವ ಸ್ವಾರಸ್ಯವನ್ನು ವಿಶದಪಡಿಸಬೇಕೆಂದು ಕೇಳಿದ್ದಾರೆ, ಕೆಲವರು. ಪದ್ಯಗಳು: ೧. ಉದ್ಯೋಗಪರ್ವ ಸಂಧಿ ೮ ಪದ್ಯ ೫೭, ೨. ಕರ್ಣಪರ್ವ ಸಂಧಿ ೨೦ ಪದ್ಯ ೧೮, ೩. ದ್ರೋಣಪರ್ವದ ೧೧ನೇ ಸಂಧಿಯ ೩೬ನೇ ಪದ್ಯದ ಮೊದಲ ಸಾಲು.

ಈ ಮೂರು ಸನ್ನಿವೇಶಗಳೂ ಕುಮಾರವ್ಯಾಸನ ಗ್ರಂಥದಲ್ಲಿ ಸೊಗಸಾದ ರಸಸ್ಥಾನಗಳು. ಅವುಗಳಲ್ಲಿ ಕಾವ್ಯ ಸೌಂದರ್ಯದ ಜೊತೆಗೆ ಕವಿಯು ಶಬ್ದಜಾಲದಲ್ಲಿ ತುಂಬುವ ಅರ್ಥವಿಸ್ತಾರವೂ ಸೇರಿದೆ. ಒಂದೊಂದಾಗಿ ಅವುಗಳನ್ನು ನನ್ನ ಅನುಭವದ ಬೆಳಕಿನಲ್ಲಿ ವಿವರಿಸುತ್ತೇನೆ.

ಮೊದಲ ಪದ್ಯ ಹೀಗಿದೆ:

*ಎಂದು ಗಂಗಾನಂದನನು ನಲ*
*ಎಂದ ಕೈಗೊಡೆ ಸುರಗಿರಿಯ ತುದಿ*
*ಯಿಂದ ಮರಿಮಿಂಚುಗಳ ಮುಗಿಲಿಳಿವಂತೆ ಭೂತಳಕೆ*
*ಅಂದು ನೀಲಾಚಲನಿಕಾಯದ*
*ಸೌಂದರಾಂಗದ ಕೌಸ್ತುಭಪ್ರಭೆ*
*ಯಿಂದ ಕಾಂಚನರಥವನಿಳಿದನು ದಾನವಧ್ವಂಸಿ.*

ಈ ಪದ್ಯ ಒಂದನ್ನೇ ಅರ್ಥ ಮಾಡಲು ಪ್ರಯತ್ನಿಸಬಾರದು. ಇದರ ಹಿಂದಿನ ಪದ್ಯ 'ಅರಿದಲೈ ಮುರವೈರಿ' ಎಂದು ಪ್ರಾರಂಭವಾಗುತ್ತದೆ. ಆ ಪದ್ಯವೂ ಈ ಪದ್ಯವೂ ಸೇರಿ ಒಂದು ಘಟಕವಾಗುತ್ತದೆ. ಇವೆರಡಕ್ಕೂ ಇರುವುದು ಒಂದೇ ಕ್ರಿಯಾಪದ. ಹೀಗೆ ಎರಡು ಪದ್ಯಗಳು ಸೇರಿ ಒಂದು ಘಟಕವಾಗುವ ಪದ್ಯಗಳನ್ನು 'ಯುಗ್ಮ' ಎಂದು ಕರೆಯುತ್ತಾರೆ.

ಇಲ್ಲಿ ಮೊದಲನೆಯ ಪದ್ಯದಲ್ಲಿ ಭೀಷ್ಮನು ಕೃಷ್ಣನಿಗೆ ಹೀಗೆ ಹೇಳುತ್ತಾನೆ: 'ಸನಕಸನಂದನಾದಿ ಮುನಿಗಳ ಸಮಾಧಿಸ್ಥಿತಿಯಲ್ಲಿಯೂ ಕಾಣಲಾಗದ ನಿಮ್ಮ ಪಾದಗಳ ದರ್ಶನ ನಮ್ಮಂಥವರಿಗೆ ದೊರಕಿತಲ್ಲಾ! ಇದು ನಿಜವಾಗಿ ಅಸಾಧ್ಯವಾದ ಘಟನೆ. ದೇವತೆಗಳು ಮಾನವರು - ಉರಗಗಳು - ಎಂಬ ಮೂರು ಲೋಕದ ಜೀವರುಗಳಲ್ಲಿ ನಾವೇ ಕೃತಾರ್ಥರು. ನಿಮ್ಮ ಪಾದಕಮಲದ ಸೇವೆ ದೊರಕಿದೆ. ಇದು ನಿಮ್ಮ ಕರುಣೆಯ ಫಲ ನಮಗೆ. ಯಾವ ಮುನಿಗಳಿಗೂ ದೊರಕದ ಅವಕಾಶ ನಮಗೆ ಸಿಕ್ಕಿದೆ.'

ಭೀಷ್ಮನು ಹೀಗೆ ಹೇಳುತ್ತಾ ಕೃಷ್ಣನು ತೇರಿನಿಂದ ಇಳಿಯುವಾಗ ಹಸ್ತಾವಧಾನದ

ಗೌರವವನ್ನು ನೀಡುತ್ತಾನೆ. ಭೀಷ್ಮನಂಥ ಮಹಾಭಕ್ತನ ಗೌರವವನ್ನು ಸ್ವೀಕರಿಸಿ ಕೃಷ್ಣನು ರಥದಿಂದ ಕೆಳಕ್ಕೆ ಇಳಿಯುತ್ತಾನೆ. ಇದು ಸಂದರ್ಭ. ಮುಂದೆ ಬರುವ ಭಾಗದಲ್ಲಿ ಕುಮಾರವ್ಯಾಸನು ಕೃಷ್ಣನ ರಥಾವತರಣದ ಅದ್ಭುತ ಚಿತ್ರವನ್ನು ಅತ್ಯಂತ ಸುಂದರವಾದ ಉಪಮಾನದ ಸಹಾಯದಿಂದ ಸೃಷ್ಟಿಸುತ್ತಾನೆ. ಕೃಷ್ಣನು ಹತ್ತಿಬಂದಿದ್ದ ರಥ, ಕಾಂಚನ ರಥ. ಅವನು ನೀಲಾಚಲನಿಕಾಯದ ಸೌಂದರಾಂಗವುಳ್ಳವನು. ಅಂಥ ದೇಹದ ಉರಸ್ಥಳದಲ್ಲಿ ಕೌಸ್ತುಭ ರತ್ನವು ಜಗಜಗಿಸುತ್ತಿದೆ. ಇದು ಹೇಗಿತ್ತೆಂದರೆ ಕಾಂಚನಪರ್ವತವಾದ ಮೇರುಗಿರಿಯ ಮೇಲಿನಿಂದ, ಮರಿಮಿಂಚುಗಳ ಥಾಳಥಳ್ಯದಿಂದ ಸೊಗಸನ್ನು ಹೊಂದುವ ಶ್ಯಾಮವರ್ಣದ ಮೋಡವು ಕೆಳಕ್ಕೆ ಅವತರಿಸುವಂತೆ ಕಂಡುಬಂದಿತು.

ಈ ಉಪಮಾನದಲ್ಲಿ ಒಂದು ಅಲೌಕಿಕ ಪ್ರಾಕೃತಿಕ ಸೌಂದರ್ಯವು ತುಂಬಿರುವುದರಿಂದ ಕೃಷ್ಣನಂಥ ಮಹಾವ್ಯಕ್ತಿಯ ಆಗಮನ ಅಲ್ಲಿ ನೆರೆದಿದ್ದವರ ಮನಸ್ಸಿನ ಮೇಲೆ ಎಂಥ ಪರಿಣಾಮ ಬೀರಿತು ಎಂಬುದರ ಪೂರ್ವಸೂಚನೆ ದೊರಕುತ್ತದೆ. ಪರಿಣಾಮವಾವುದು ಎಂಬುದು ಮುಂದಿನ ಪದ್ಯದ ಮೊದಲ ಸಾಲಿನಲ್ಲಿ ಕಾಣಬರುತ್ತದೆ. 'ಸಮರ ಸರ್ವಜ್ಞರುಗಳು (ಕೃಷ್ಣನ) ಅಂಘ್ರಿಗೆ ನಮಿಸಿದರು. ಒಳ್ಳೆಯ ನಾಟಕೀಯ ಸನ್ನಿವೇಶ. ಒಟ್ಟು ಸಭೆಯೇ ಕೃಷ್ಣನಿಗೆ ನಮಸ್ಕರಿಸಿ ಗೌರವ ತೋರಿಸುತ್ತಿದ್ದಾಗ, **ಕಮಲನಯನದ ದೇವನೇ, ಸಾಕಿಮಗೆ ಮಾಡುವುದೇನೆನುತ ತತ್ಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ** ಎನ್ನುವುದು ಕುಮಾರವ್ಯಾಸನ ಮಾತು. ಕೃಷ್ಣನೋ **ಸೆಣಸು ಸೇರದ ದೇವ** = ಸ್ಪರ್ಧೆ ಸೇರದವನು. ಆದುದರಿಂದ ಕಾಲಿನುಂಗುಟದಿಂದ ಭೂಮಿಯನ್ನು ಒತ್ತಿ ಕೌರವನ ಸಿಂಹವಿಷ್ಟರದ ಗೊಣಸು ಮುರಿಯುವಂತೆ ಮಾಡಿ ಕೌರವನೇ ತನ್ನ ಪಾದಗಳ ಬಳಿಗೆ ಉರುಳುವಂತೆ ಮಾಡುತ್ತಾನೆ. ಬಾಯಿಯಲ್ಲಿ ಮಾತ್ರ **ಧರಣಿಪತಿ ಸಿಂಹಾಸನದ ಮೇಲಿರದೆ ಬಹರೇ. ನಾವು ಬಂದೇ ಹರಸುವೆವು.** ಎಂದು ತುಂಬ ಸಮಾಧಾನದ ಮಾತನ್ನಾಡುತ್ತಾನೆ.

ಹೀಗೆ ಭೀಷ್ಮನ ಪರಮ ಭಕ್ತಿ, ಕೃಷ್ಣನ ಗಂಭೀರ ವ್ಯವಹಾರ, ಕೌರವನ ದ್ವೇಷ, ಎಲ್ಲ ಸಾಮಾಜಿಕರ ದೈವಶ್ರದ್ಧೆ ಒಟ್ಟು ಸೇರಿ ಸೊಗಸಾದ ನಾಟಕೀಯ ದೃಶ್ಯವು ಓದುಗರ ಕಣ್ಮುಂದೆ ಕಟ್ಟುವಂತೆ ಕುಮಾರವ್ಯಾಸನು ಕಾವ್ಯರಚನೆ ಮಾಡಿದ್ದಾನೆ. ಕೇವಲ ನಾಲ್ಕೇ ಪದ್ಯದಲ್ಲಿ ಕೃಷ್ಣನ ದೈವ ಸ್ವರೂಪವು ಸಕಲರ ಚಿತ್ತಕ್ಕೆ ವೇದ್ಯವಾಗುವಂತೆ ಮಾಡಿರುವ ಈ ಕವಿಶಕ್ತಿ ಸಾಮಾನ್ಯವಾದುದಲ್ಲ.

ಎರಡನೆಯ ಪದ್ಯ ಕರ್ಣಪರ್ವದ ಕಥಾಭಾಗಕ್ಕೆ ಸೇರಿದ್ದು. ಭೀಮನೊಡನೆ ವೃಷಸೇನನು ಯುದ್ಧ ಮಾಡಿ ಅವನನ್ನು ಸೋಲಿಸುವ ಪ್ರಸಂಗದ ಸಂದರ್ಭವಿದು. ಭೀಮನು ಎದುರಿಗೆ ಸಿಕ್ಕಿದಾಗ ಕರ್ಣಸುತನಾದ ವೃಷಸೇನನು **ಅರಸನನುಜನ ಕುಡಿದ ನೆತ್ತರ ಬರಿಸುವೆನು ಮೂಗಿನಲಿ** ಎಂದು ಹೇಳುತ್ತಾ ಯುದ್ಧಕ್ಕೆ ಎದುರಾಗುತ್ತಾನೆ. ಯುದ್ಧದಲ್ಲಿ **ಜವಗುಂದಿದನು ಕಲಿಭೀಮ.** ಆಗ ವೃಷಸೇನನು ಕ್ಷಣದಲ್ಲಿ ನಕುಲನನ್ನು ಸೋಲಿಸಿ, ಭೀಮನ ಎದುರಿಗೆ ನುಗ್ಗುತ್ತಾನೆ. ಆಗ ಸಹದೇವನು ವೃಷಸೇನನ ಎದುರಿಗೆ ಬಂದು ಅವನ ರಥವನ್ನು ಬಾಣಗಳ ಮಳೆಯಲ್ಲಿ ಮುಳುಗಿಸುತ್ತಾನೆ. ಅದನ್ನು ಕಂಡು ವೃಷಸೇನನು ಆಡುವ ಮಾತು ಈ ಪದ್ಯದಲ್ಲಿದೆ. ಪದ್ಯ ಹೀಗಿದೆ:

**ಮೊದಲ ಬಲುಹನು ಕಂಡೆನಿನ್ನೀ**
**ತುದಿವರನ ತನಿಗೆಚ್ಚು ನಮ್ಮನು**
**ಬೆದರಿಸುವುದೋ ಶಿವಶಿವಾ ತಪ್ಪೇನು ತಪ್ಪೇನು**

*ಸದೆಗರಿವದಿರ ಗೆಲುವುದಾವಂ*
*ಗದಲಿ ಬಹುದೋ ಎನುತ ಪರಿಹಾ*
*ಸದಲಿ ರಿಪುಭಟನಂಬುಗಳ ಕೆದರಿದನು ಕಣೆಗಳಲಿ*

ಈ ಪದ್ಯದ ಸ್ವಾರಸ್ಯವಿರುವುದು ವೃಷಸೇನನ ಮಾತಿನ ಚಮತ್ಕಾರದಲ್ಲಿ. ಈತನ ವಾಕ್‌ಶಕ್ತಿಯ ಸೌಭಾಗ್ಯವನ್ನು ಅರ್ಜುನನೆ ಮುಂದಿನ ಒಂದು ಪದ್ಯದಲ್ಲಿ ಹೊಗಳುತ್ತಾನೆ. ಆ ಪದ್ಯದ ಭಾಗ ಹೀಗಿದೆ:

*ಮುರಮಥನ ಚಿತ್ತೈಸಿದೈ ತರು*
*ವರಿಯ ಸಾಭಿಪ್ರಾಯ ವಾಕ್ಯ*
*ಸ್ಫುರಣವನು ಸಭ್ಯಾಂಗ ಭಾಷಿತ ಭಾವನಿಷ್ಠುರವ*

ಇಲ್ಲಿರುವ **ಸಾಭಿಪ್ರಾಯ ವಾಕ್ಯ ಸ್ಫುರಣ** ಮತ್ತು **ಸಭ್ಯಾಂಗ ಭಾಷಿತ ಭಾವನಿಷ್ಠುರ** ಎಂಬ ಸಮಾಸಗಳು ವೃಷಸೇನನ ವಾಕ್ಪ್ರೌಢಿಮೆಯ ಅತ್ಯುನ್ನತವಾದ ವರ್ಣನೆಗಳು. ಈಗ ವೃಷಸೇನನ ಮಾತಿನ ಅಂತರಾರ್ಥವನ್ನು ಗಮನಿಸಿ. ಭೀಮ ನಕುಲ ಈ ಇಬ್ಬರೂ ಆದ ಮೇಲೆ ಸಹದೇವ ಬಂದಿದ್ದಾನೆ ಯುದ್ಧಕ್ಕೆ. ಈ ಭಾಗ ಸಹದೇವನನ್ನು ವರ್ಣಿಸುತ್ತದೆ. ಮೊದಲು ಭೀಮನನ್ನು ವರ್ಣಿಸುತ್ತದೆ. ಪಾಂಡವರ ವಂಶವೃಕ್ಷದಲ್ಲಿ ಈಗ ಯುದ್ಧ ಮಾಡಿದವರಲ್ಲಿ **ಮೊದಲು** ಎಂದರೆ ಮರದ ಬುಡ ಭೀಮ. ಆ ಮರದ ತುದಿ ಸಹದೇವ. ಇಲ್ಲಿರುವ **ತುದಿವರ** ಎಂಬುದು **ತುದಿಮರದ** ಪರ್ಯಾಯ ರೂಪ. ಇವರು ಸದೆಗರು ಅಂದರೆ ತಮ್ಮ ಶತ್ರುಗಳನ್ನು ಸದೆಬಡಿಯುವವರು. ಇಂಥವರನ್ನು ಗೆಲ್ಲುವುದು ನಮಗೆ ಹೇಗೆ ತಾನೆ ಸಾಧ್ಯವಾದೀತು ? ಎಂದು ವೃಷಸೇನನು ಹೇಳುತ್ತಾನೆ. ಈ ಹೇಳುವುದನ್ನು ಕುಮಾರವ್ಯಾಸ **ಪರಿಹಾಸದಲಿ** ಎಂದು ವರ್ಣಿಸಿದ್ದಾನೆ. ಹೀಗೆ ಪಾಂಡವರ ವಂಶವೃಕ್ಷವನ್ನೇ ಒಂದು ರೂಪಕದಲ್ಲಿ ಜಾಲಾಡಿ ಬಿಡುವ ವೃಷಸೇನನ ಸಭ್ಯಾಂಗ ಭಾಷಿತ (ಮರ್ಯಾದೆಯ ಮಾತು) ಇದೆ. ಭಾವ ನಿಷ್ಠುರತೆಯೂ ಕಠಿಣವಾದ ಅಭಿಪ್ರಾಯವೂ ಇದೆ. ಇಂಥ ಅರ್ಥ ಪರಿಪುಷ್ಟವಾದ ಕಾವ್ಯ ರಚನೆ ಕುಮಾರವ್ಯಾಸನಿಗಲ್ಲದೆ ಮತ್ತಾರಿಗೆ ತಾನೆ ಸಾಧ್ಯ ?

ಈ ಪ್ರಶ್ನೆಗಳಿಗೆ ಅಂಟಿರುವ ಕೊನೆಯ ವಿಷಯ ಒಂದು ಮೊದಲ ಸಾಲಿಗೆ ಸಂಬಂಧಪಟ್ಟದ್ದು. ಇದು ಭಾಣ ಎಂಬ ಶಬ್ದದ್ದು. ದ್ರೋಣನನ್ನು ಅರ್ಜುನನು ಯುದ್ಧದಲ್ಲಿ ಎದುರಿಸಬೇಕಾಗಿ ಬಂದಾಗ ಅವನು ಹೀಗೆ ಕೇಳುತ್ತಾನೆ. '**ನೀವು ಹೂಣಿಗರಾಗಿ ರಿಪುವನು ಕಾವಡೆ ಇತ್ತಲೆ ತೊಲಗುವೆನು. ಕರುಣಾವಲೋಕನವೆನ್ನ ಮೇಲುಂಟಾದಡಿದಿರಹೆನು. ಆವುದು ಅನು ನಮಗೇನು ಗತಿ, ತಲೆಗಾವ ಮತವೇ ?**'

ದ್ರೋಣನ ಉತ್ತರ ಇದು: **ಕಂದನಶ್ವತ್ಥಾಮ ಹುಸಿ. ಎನಗಿಂದು ಬೇಹ ಕುಮಾರ ನೀ. ನಿನ್ನಿಂದ ತನ್ನಯ ಕೀರ್ತಿ ಮೆರೆವುದು ಮೂರು ಲೋಕದಲಿ.** ಹೀಗೆ ದ್ರೋಣನ ಆಶೀರ್ವಾದವನ್ನು ಪಡೆದು ಅರ್ಜುನ ಬೇರೆ ಕಡೆ ಯುದ್ಧ ಮಾಡಿದಾಗ ಅವನ ಕುದುರೆಗಳು ಬಾಯಾರಿ ಮುಂದುವರಿಯಲಾರದೆ ನಿಂತವು. ಆಗ ಅರ್ಜುನನು ವರುಣಬಾಣದಲ್ಲಿ ಉದಕವನ್ನು ತರಿಸಿ ಸರಸಿಯನ್ನುಂಟು ಮಾಡಿದನು. ಕೃಷ್ಣನು ಕುದುರೆಗಳ ಮೈದಡವಿ, ಗಾಯದ ಬಾಣಗಳನ್ನು ಕಿತ್ತು ಔಷಧವನ್ನು ಲೇಪಿಸಿ ಸಮಾಧಾನ ಮಾಡಿದನು. ಈ ಕುದುರೆಗಳ ಪುಣ್ಯ ಸನಕಾದಿಗಳಿಗೆ ಇಲ್ಲ ಎಂದು ದೇವತೆಗಳು ಹೊಗಳಿದರು.

ಮುಂದಿನ ಪದ್ಯದ ಮೊದಲ ಸಾಲು ಹೀಗೆ ಮುದ್ರಣವಾಗಿದೆ. '**ಮೊಗಕೆ ಭಾಣವ ಕಟ್ಟಿ ನೆಳಲಲಿ ಬಿಗಿದು ಫಲುಗುಣ ಸಹಿತ ಕೊಳನನು ನಗುತ ಹೊಕ್ಕನು.**' ಇಲ್ಲಿ ಮೊದಲ ಸಾಲಿನ 'ಭಾಣ' ಎಂಬುದು ಅಪಶಬ್ದ. ಇದು ಸಂಪಾದನೆಗೆ ಒಳಗಾಗಬೇಕಾದ

ಭಾಗ. ಕುದುರೆಗಳ ಮುಖಕ್ಕೆ ಕಟ್ಟಿದ್ದು ಖಾಣ. ಖಾಣ ಎಂದರೆ ಕುದುರೆಗಳಿಗೆ ಮತ್ತು ದನಕರುಗಳಿಗೆ ಎತ್ತು ಎಮ್ಮೆಗಳಿಗೆ ನೀಡುವ ಆಹಾರ. ಇದು ಸಂಸ್ಕೃತದ **ಖಾದನ** ಎಂಬ ಶಬ್ದದ ತದ್ಭವ. ಮುದ್ರಣ ಪ್ರತಿಗಳಲ್ಲಿರುವ ತಪ್ಪನ್ನು ತಿದ್ದಿಕೊಳ್ಳಬೇಕು. ಖಾಣವನ್ನು ಕಟ್ಟುವುದು ಎಂದರೆ ಹುರಳಿ ಮುಂತಾದ ಧಾನ್ಯಗಳ ಚೀಲವನ್ನು ಮುಖಕ್ಕೆ ಬಿಗಿದು, ಕುದುರೆ ಅದನ್ನು ತಿನ್ನಲು ಏರ್ಪಾಟು ಮಾಡಿ ಎಂದರ್ಥ. ಪ್ರತಿ ಮಾಡುವಾಗ ಕೈಬರಹದಲ್ಲಿ ಎಂಥ ತಪ್ಪುಗಳು ಉಂಟಾಗುತ್ತವೆ ಎಂಬುದಕ್ಕೆ ಇದು ಒಳ್ಳೆಯ ದೃಷ್ಟಾಂತವಾಗಿದೆ.

**ಸೆದೆ** - ಸದೆ ಇದು ಸೊಪ್ಪು ಸೆದೆ ಎಂಬಂತೆ ಜೊತೆಯಲ್ಲಿರುವ ಶಬ್ದ. ಸತ್ತೆ, ಕಸ, ಕೊಳಕು ಎಂಬುದು ಅದರ ಅರ್ಥ. ಸದೆ ಎಂಬ ರೂಪವೂ ಉಂಟು. ಗ್ರಾಮೀಣ ಪ್ರದೇಶಗಳಲ್ಲಿ ಈ ಶಬ್ದವನ್ನು ಹಾವು ಎಂಬರ್ಥದಲ್ಲಿ ಪ್ರಯೋಗಿಸುತ್ತಾರೆ. ಸೆದೆ ಮುಟ್ಟಿತು, ಸದೆ ಮುಟ್ಟಿತು ಎಂಬಂತೆ ಇದಕ್ಕೆ ಸೊಪ್ಪಿನ ಜತೆ ಇದ್ದ ಹಾವು ಎಂದರ್ಥ.

**ಸೆಮಿಸ್ಟರ್** Semester ಲ್ಯಾಟಿನ್ ಭಾಷೆಯಲ್ಲಿ semestris ಎಂಬ ಶಬ್ದವಿದೆ. ಇದಕ್ಕೆ ಪ್ರತಿ ಆರು ತಿಂಗಳಿಗೊಮ್ಮೆ ಎಂದರ್ಥ. ಆ ಶಬ್ದ ಫ್ರೆಂಚ್ ಭಾಷೆಯಲ್ಲಿ ಮತ್ತು ಜರ್ಮನ್ ಭಾಷೆಯಲ್ಲಿ semestre ಎಂಬ ರೂಪವನ್ನು ಪಡೆಯಿತು. ಜರ್ಮನ್ ವಿಶ್ವವಿದ್ಯಾನಿಲಯಗಳಲ್ಲಿ ವರ್ಷವನ್ನು ಎರಡು ಭಾಗಗಳಾಗಿ ಮಾಡಿ ಪ್ರತಿಯೊಂದನ್ನೂ ಒಂದು ಸೆಮೆಸ್ಟರ್ ಎಂದು ಕರೆದರು. ಆ ಕ್ರಮವನ್ನು ಭಾರತದಲ್ಲಿ ಅನುಸರಿಸಿದಾಗ ಈ ಶಬ್ದ ಪ್ರಚಾರಕ್ಕೆ ಬಂತು. ವರ್ಷಾರ್ಧ ಎಂಬುದು ಅದಕ್ಕೆ ಸಮಾನವಾದ ಕನ್ನಡ ಶಬ್ದ.

**ಸೇನೆ** - ಸೈನ್ಯ ಸಂಸ್ಕೃತದ ಸೇನಾ ಶಬ್ದಕ್ಕೆ ಕನ್ನಡದಲ್ಲಿ ಸೇನೆ ಎಂಬುದು ತದ್ಭವ ರೂಪ. ಇದಕ್ಕೆ ದಂಡು, ಪಡೆ, ದಳ ಎಂದು ಅರ್ಥ. ಚತುರಂಗ ಸೈನ್ಯ = ಬಲ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಆನೆ, ರಥ, ಕುದುರೆ, ಕಾಲಾಳು ಇವು ನಾಲ್ಕು ಅಂಗಗಳು ರಾಜನ ಸೈನ್ಯಕ್ಕೆ, ಇದು ಹಿಂದಿನ ಕಾಲದ ರಾಜರಿಗೆ, ಸೇನೆಗೆ. ಈಗ ಬೇರೆ. ಅದರ ವಿವರ ಇಲ್ಲಿ ಬೇಡ. ಸೈನ್ಯ ಎಂಬುದು ಮತ್ತೊಂದು ಶಬ್ದ. ಅದಕ್ಕೆ ಸಂಸ್ಕೃತದಲ್ಲಿ ೧. ಸೇನೆ, ೨. ಸೇನೆಯ ಯೋಧ ಎಂದು ಅರ್ಥ. ಯೋಧ ಎಂದರೆ ಸೈನಿಕ = ಯುದ್ಧದ ಆಳು.

**ಸೇವನೆ** ಸಂಸ್ಕೃತದಲ್ಲಿ ಸೇವನ ಎಂಬ ಶಬ್ದವಿದೆ. ಇದಕ್ಕೆ ೧. ಸೇವೆ ಮಾಡುವುದು, ಶುಶ್ರೂಷೆ ಮಾಡುವುದು. ೨. ಪೂಜೆ, ೩. ಉಪಭೋಗಿಸುವುದು, ಎಂಬ ಅರ್ಥಗಳಿವೆ. ಆದುದರಿಂದ ಗಾಳಿ ಸೇವನೆ, ತಂಬಾಕು ಸೇವನೆ ಇತ್ಯಾದಿ ಶಬ್ದಗಳು ತಪ್ಪಾಗುವುದಿಲ್ಲ.

**ಸೇವಿಸು** ಎಂಬ ಶಬ್ದಕ್ಕೆ ಕನ್ನಡದಲ್ಲಿ ಸೇವೆ ಮಾಡುವುದು, ಶುಶ್ರೂಷೆ, ಪರಿಚರ್ಯೆ, ಎಂಬ ಅರ್ಥವೂ ಉಂಟು. ಜೊತೆಗೆ ಸ್ವೀಕರಿಸು, ಅನುಭವಿಸು, ತಿನ್ನು, ಕುಡಿ ಎಂಬ ಅರ್ಥಗಳಿವೆ. ಪ್ರಾತಃಕಾಲದ ವಾಯುಸೇವನೆ, ಔಷಧ ಸೇವನೆ. ಅಪಥ್ಯವನ್ನು ಸೇವಿಸಿ ರೋಗವನ್ನು ಹೆಚ್ಚಿಸಿಕೊಂಡನು ಎಂಬ ಪ್ರಯೋಗಗಳನ್ನು ನೋಡಿ. ಕನ್ನಡ ಶಬ್ದಕ್ಕೆ ಸಂಸ್ಕೃತದಲ್ಲಿರುವ ಸೀಮಿತಾರ್ಥವೇ ಇರುತ್ತದೆ ಎಂದು ಬೆಳೆದು ಬಂದಿರುವ ಅರ್ಥಕ್ಕೆ ಕಣ್ಣು ಮುಚ್ಚಬಾರದು, ಕೆಳಗಿವಿ ಮಾಡಬಾರದು.

**ಸೇವೆ** ಇದೇ ಕೈಂಕರ್ಯ. ಎರಡೂ ಒಂದೇ ಅರ್ಥದ ಶಬ್ದಗಳು. ಸೇವಾ ಎಂಬ ಸಂಸ್ಕೃತದ ಶಬ್ದದ ತದ್ಭವ.

**ಸೈಕಲ್** ಇದು ಇಂಗ್ಲಿಷ್ ಭಾಷೆಯ Bicycle ಎಂಬ ಶಬ್ದದ ಸಂಕ್ಷಿಪ್ತ ರೂಪ. ಒಂದರ ಹಿಂದೆ ಒಂದಿರುವ ಎರಡು ಚಕ್ರಗಳ, ಹಿಡಿಯುಳ್ಳ ವಾಹನಕ್ಕೆ ಈ ಹೆಸರಿದೆ. ಇಂಗ್ಲಿಷಿನಲ್ಲಿ Cycle ಎಂಬ ಶಬ್ದಕ್ಕೂ ಬೈಸಿಕಲ್ ಎಂಬ ಅರ್ಥವೂ ಇದೆ. ಸೈಕ್ಲಿಸ್ಟ್ ಎಂದರೆ ಇಂಥ ವಾಹನಗಳನ್ನು ಉಪಯೋಗಿಸಿ ಓಡಾಡುವವನು. ಟ್ರೈಸಿಕಲ್ ಎಂಬ ಶಬ್ದವೂ ಇದೆ. ಅದಕ್ಕೆ ಮೂರು ಚಕ್ರದ ಗಾಡಿ ಎಂದರ್ಥ. Tricycle ಎಂಬುದು ಅದರ ಇಂಗ್ಲಿಷ್ ರೂಪ. ಕನ್ನಡದಲ್ಲಿ

ಬೈಸಿಕಲ್ ಎಂಬುದಕ್ಕೆ ಇಗ್ಗಾಲಿ ಎಂದು, ಟ್ರೈಸಿಕಲ್ ಎಂಬುದಕ್ಕೆ ಮೂಗಾಲಿ ಎಂದು ಹಿಂದೆ ಉಪಯೋಗಿಸುತ್ತಿದ್ದರು. ಈಚೆಗೆ ಇಂಗ್ಲಿಷ್ ಶಬ್ದಗಳನ್ನೇ ಉಪಯೋಗಿಸುವುದು ಹೆಚ್ಚಾಗಿದೆ, Bi, Tri ಎಂಬುವು ಇಂಗ್ಲಿಷ್‌ನ ಉಪಸರ್ಗಗಳು. ಎರಡು, ಮೂರು ಎಂದು ಕ್ರಮವಾಗಿ ಅವಕ್ಕೆ ಅರ್ಥ.

**ಸೊಗಡು** ಇದು ಕನ್ನಡದ ಶಬ್ದ. ಹಳಗನ್ನಡದಲ್ಲಿ ಸೊವಡು ಎಂಬ ರೂಪವಿದೆ. ಇದಕ್ಕೆ ಹಸಿಯ ವಾಸನೆ ಎಂದರ್ಥ. ಅವರೆಯ ಕಾಯಿಯ ಸೊಗಡು ಚೆನ್ನಾಗಿದೆ. ಕಾಯಿ ಇನ್ನೂ ಹೊಸದು. ಈ ಮಾತಿನಲ್ಲಿ ಆ ಶಬ್ದದ ಅರ್ಥ ತಾನೆ ಹೊಳೆಯುತ್ತದೆ.

**ಸೊಗಸು** ಈ ಶಬ್ದದ ಕಥೆ ಸ್ವಾರಸ್ಯವಾಗಿದೆ. ಸಂಸ್ಕೃತದ ಸುಖ ಎಂಬ ಶಬ್ದ ಕನ್ನಡದಲ್ಲಿ ಸೊಗ ಎಂದಾಗುತ್ತದೆ. ಸೊಗ + ಇಸು = ಸೊಗಯಿಸು ಎಂಬ ಕ್ರಿಯಾಪದವಾಗಿ ಹಿತವಾಗಿರು ಎಂಬ ಅರ್ಥವನ್ನು ಮೊದಲು ಕೊಡುತ್ತದೆ. ಆ ಬಳಿಕ ಹೊಳೆ, ಶೋಭಿಸು, ಸುಂದರವಾಗಿರು ಎಂಬ ಅರ್ಥವ್ಯಾಪ್ತಿಯನ್ನು ಪಡೆಯುತ್ತದೆ. ಅದೇ ಸೊಗಸು. ಸೊಗಸು ಎನ್ನುವುದನ್ನು ಕ್ರಿಯಾಪದವಾಗಿಯೂ ಉಪಯೋಗಿಸಬಹುದು. ಪ್ರಭುಲಿಂಗ ಲೀಲೆಯಲ್ಲಿ (೨.೨೨) **ಸಲೆ ಸೊಗಸಿನಲ್ಲಿ ಬೆಳವಲ ದೇಶಮೆಸೆದಿಹುದು** ಎಂದು ನಾಮಪದವಾಗಿದೆ. ಕುಮಾರವ್ಯಾಸನ ಉದ್ಯೋಗಪರ್ವದಲ್ಲಿ '**ಹಲವು ಮಾತೇನಖಿಳ ಜನಕೆ ಎನ್ನುಳಿವು ಸೊಗಸದು. ಕೌರವೇಶ್ವರನೊಲುಮೆ ತಪ್ಪಿದ ಬಳಿಕ ಭುವನದೊಳಗಾಪ್ತ ಜನವಿಲ್ಲ.** (ಉ. ೧೦-೧೭) ಎಂದು ಕರ್ಣನು ಹೇಳುತ್ತಾನೆ. ಇಲ್ಲಿ ಸೊಗಸದು ಎಂಬುದು ಕ್ರಿಯಾಪದ.

**ಸೊನ್ನೆ** ಶಬ್ದ ಶೂನ್ಯದ ತದ್ಭವ. ಗಣಿತದ '೦' ಎಂಬ ಅಂಕಿ ಮತ್ತು ಪೂಜ್ಯ ಎಂಬ ಶಬ್ದ ಇವು ಸೊನ್ನೆಯನ್ನು ಪ್ರತಿನಿಧಿಸುತ್ತವೆ. ಎಂದರೆ ಅವಕ್ಕೂ ಇದೇ ಅರ್ಥ.

**ಸೊಪ್ಪು ಹಾಕುವುದು** ಪ್ರಾಣಿಗಳನ್ನು ಪೋಷಿಸಲೂ ಕೆಲವು ವೇಳೆ ಕೈಗಿಡಗಳನ್ನು ಪೋಷಿಸಲೂ ಸೊಪ್ಪನ್ನು ಉಪಯೋಗಿಸುತ್ತಾರೆ. ಹೀಗೆ ಹಾಕಿದ ಸೊಪ್ಪಿನಿಂದ ಅವು ವೃದ್ಧಿ ಹೊಂದುತ್ತವೆ. ಆದ್ದರಿಂದ ಸೊಪ್ಪು ಹಾಕುವುದು ಎಂದರೆ ಅಭಿವೃದ್ಧಿಗೆ ಅವಕಾಶ ಮಾಡಿಕೊಡುವುದು, ಸೊಪ್ಪು ಹಾಕುವುದಿಲ್ಲ ಎಂದರೆ ಬೆಳೆಯಗೊಡುವುದಿಲ್ಲ ಎಂದರ್ಥ.

**ಸೋಜಿಗ** ಇದು ಸಂಸ್ಕೃತದ ಚೋದ್ಯಕ ಎಂಬುದರ ತದ್ಭವ. ಕನ್ನಡದಲ್ಲಿ ಈ ಶಬ್ದಕ್ಕೆ ಚೋಜಿಗ, ಚೋದಿಗ, ಸೋಜಿಗ ಎಂಬ ಮೂರು ಪರ್ಯಾಯಗಳಿವೆ. ಇದಕ್ಕೆ ೧. ಆಶ್ಚರ್ಯ ೨. ಆಶ್ಚರ್ಯವಾದ ವಿಷಯ ಎಂಬ ಎರಡು ಅರ್ಥಗಳಿವೆ. ಬಸವಣ್ಣನವರ ಈ ವಚನವನ್ನು ಪರಿಭಾವಿಸಿ:- '**ಜಲವ ತಪ್ಪಿಸಿ ಮತ್ಸ್ಯ ಬದುಕುವುದೇ ಸೋಜಿಗ**'.

**ಸೋಡುಮುಂಚಿ** ಈ ಶಬ್ದ ಸೋಡಮುಂಜಿ. ಮರಾಠಿ ಭಾಷೆಯನ್ನು ಆಡುವ ಕಡೆ ಇದು ಪ್ರಚಾರದಲ್ಲಿದೆ. ಸೋಡು ಎಂದರೆ ಬಿಡಿಸುವುದು, ಗಂಟು ಬಿಚ್ಚುವುದು, ಸಡಿಲ ಮಾಡುವುದು. ಬ್ರಹ್ಮಚಾರಿಗೆ ಉಪನಯನದ ಸಮಯದಲ್ಲಿ ಸೊಂಟಕ್ಕೆ ಕಟ್ಟುವ ಮುಂಜಿ ಹುಲ್ಲಿನ ಗಂಟನ್ನು ಬಿಚ್ಚುವ ವಿಧಿ ಇದು.

**ಸೋಮವಾರ ಅಮಾವಾಸ್ಯೆಗೆ ಹಾಕುವಷ್ಟು** ಜನ ಸೋಮವಾರ ಅಮಾವಾಸ್ಯೆ ಎಂಬುದು ಒಂದು ವ್ರತ. ಇದಕ್ಕೆ ಅಮಾಸೋಮವ್ರತ ಎಂದು ಹೆಸರಿದೆ. ಈ ವ್ರತದಲ್ಲಿ ಉದ್ಯಾಪನೆಯ ದಿನ ಏಳು ಕಳಶಗಳನ್ನಿಟ್ಟು ಪೂಜಿಸಿ ಮಾರನೆಯ ದಿನ ೧೦೮ ಹೋಮಗಳನ್ನು ಮಾಡಬೇಕೆಂಬ ನಿಯಮವಿದೆ. ಈ ೧೦೮ ಹೋಮಕ್ಕೆ ಉಚಿತವಾದ ೧೦೮ ವಸ್ತುಗಳನ್ನು ಹಾಕಬೇಕು. ಆದುದರಿಂದ ಸೋಮವಾರ ಅಮಾವಾಸ್ಯೆಗೆ ಹಾಕುವಷ್ಟು ಅಂದರೆ ೧೦೮ ಎಂದರ್ಥ. ನೂರೆಂಟು ಎಂಬುದರ ಅರ್ಥ ಅಪಾರವಾದ ಎಂದು ಧ್ವನಿ. ಮಾತನಾಡುವುದರಲ್ಲಿ ಅಧಿಕ ಎಂಬ ಶಬ್ದದ ಅರ್ಥವನ್ನು ವ್ರತಕರ್ಮ ನಿರತರಾದ

ಬ್ರಾಹ್ಮಣರ ಮನೆಯಲ್ಲಿ ಸೋಮವಾರ ಅಮಾವಾಸ್ಯೆಗೆ ಆಗುವಷ್ಟು ಎಂದು ಹಾಸ್ಯಕ್ಕಾಗಿ ಉಪಯೋಗಿಸುತ್ತಾರೆ.

**ಸೋಮಾರಿ** ಈ ಶಬ್ದ ವ್ಯುತ್ಪತ್ತಿ ನಿಶ್ಚಿತವಾಗಿ ಹೇಳುವಂತಿಲ್ಲ. ಸೋಂಬ, ಜೋಬ ಎಂಬ ಎರಡು ಶಬ್ದಗಳಿವೆ. ಇವೆರಡಕ್ಕೂ ಸಂಬಂಧವಿರುವಂತಿದೆ. ಜೋಬದ್ರ, ಜೋಬದ್ರ ಎಂಬ ಶಬ್ದಗಳನ್ನು ಕೇಳಿರಬಹುದು. ಆ ಶಬ್ದಕ್ಕೂ ಸೋಮಾರಿ ಎಂದೇ ಅರ್ಥ. ಸೋಮಾರಿ ಎಂದರೆ ಅಲಸಿ. ಈ ಸೋಮಾರಿ ಶಬ್ದ ಬಿಜಾಪುರದ ಕಡೆ ಮಾತ್ರ ಅಲ್ಲ. ಬೆಂಗಳೂರು ಮೈಸೂರುಗಳಲ್ಲಿಯೂ ಪ್ರಯೋಗದಲ್ಲಿದೆ. ಶೋಂಬೇರಿ ಎಂಬುದು ತಮಿಳುನಾಡಿನಲ್ಲಿ ಇರುವ ರೂಪ. ತಮಿಳಿನ ಪ್ರಭಾವಕ್ಕೆ ಒಳಗಾದವರು ಶೋಂಬೇರಿ, ಸೋಂಭೇರಿ ಎಂಬ ಶಬ್ದಗಳನ್ನು ಉಪಯೋಗಿಸುತ್ತಾರೆ. ಯಾರು ಯಾವ ರೂಪವನ್ನು ಉಪಯೋಗಿಸಿದರೂ ಸೋಮಾರಿತನ ಮಾತ್ರ ಎಲ್ಲ ಕಡೆ ವ್ಯಾಪಕವಾಗಿ **ಚಟುವಟಿಕೆ**ಯಿಂದಿದೆ.

**ಸೌದಾಮಿನೀ** ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಸೌದಾಮಿನೀ, ಸೌದಾಮ್ನಿ ಎಂಬ ರೂಪಗಳೂ ಇವೆ. ಈ ಶಬ್ದಕ್ಕೆ ಮಿಂಚು ಎಂದರ್ಥ. ಶಬ್ದವೂ ಅರ್ಥವೂ ಎರಡೂ ಚೆನ್ನಾಗಿವೆ. ಸುದಾಮ ಎಂಬ ಬೆಟ್ಟದ ಸಾಲಿನಂತೆ ದೀರ್ಘವಾಗಿರುವ ಮಿಂಚು ಎಂದು ಅರ್ಥವಿದೆ ಎಂದು ಟೀಕಾಕಾರರು ಆ ಶಬ್ದವನ್ನು ವಿವರಿಸುತ್ತಾರೆ. ಅಮರದಲ್ಲಿ ***'ತಟಿತ್ ಸೌದಾಮಿನೀ ವಿದ್ಯುತ್ ಚಂಚಲಾ ಚಪಲಾಪಿಚ'*** ಎಂಬ ಉಕ್ತಿ ಇದೆ. ತಟಿತ್, ಸೌದಾಮಿನೀ, ವಿದ್ಯುತ್, ಚಂಚಲಾ, ಚಪಲಾ ಈ ಎಲ್ಲ ಶಬ್ದಗಳಿಗೂ ಮಿಂಚು ಎಂದೇ ಅರ್ಥ. ಸಂಸ್ಕೃತದಲ್ಲಿ ಇನ್ನೂ ಇತರ ಶಬ್ದಗಳೂ ಇವೆ. ಕನ್ನಡದಲ್ಲಿ ಮಿಂಚು ಒಂದೇ ಸೊಗಸಾದ ಶಬ್ದ.

**ಸೌಭಾಗ್ಯ** ಸುಭಗಾ ಎಂದರೆ ೧. ಪತಿಯ ಪ್ರೀತಿಯನ್ನು ಪಡೆದಿರುವ ಸ್ತ್ರೀ ೨. ಅದೃಷ್ಟಶಾಲಿ, ಭಾಗ್ಯವತಿ ಇತ್ಯಾದಿ ೮-೧೦ ಅರ್ಥಗಳಿವೆ. ಇಂಥ ಹೆಂಗಸಿನ ಭಾವಕ್ಕೆ ಸೌಭಾಗ್ಯ ಎಂದು ಹೆಸರು. **'ಸುಭಗಾಯಾಃ ಭಾವಃ'**. ಕುಮಾರಸಂಭವದಲ್ಲಿ ಕಾಳಿದಾಸನು ರಚಿಸಿರುವ ಈ ರಸಸ್ನಿಗ್ಧವಾದ ವಾಕ್ಯ ತುಂಬ ಪ್ರಸಿದ್ಧವಾದದ್ದು. ***'ನಿನಿಂದ ರೂಪಂ ಹೃದಯೇನ ಪಾರ್ವತೀ ಪ್ರಿಯೇಷು ಸೌಭಾಗ್ಯಫಲಾಹಿ ಚಾರುತಾ.'*** ಸಂಸ್ಕೃತದ ಶಬ್ದ ಇದು.

**ಸೌಮಿತ್ರ ನೋಡಿ: ಸುಮಿತ್ರಾ**

**ಸೌಮ್ಯ** ಇದು ಸಂಸ್ಕೃತದ ಶಬ್ದ. ಸೋಮ = ಚಂದ್ರ. ಅವನ ಮಗ ಸೌಮ್ಯ = ಬುಧಗ್ರಹ. ಅನೇಕ ಇತರ ಅರ್ಥಗಳೂ ಈ ಶಬ್ದಕ್ಕೆ ಅಂಟಿಕೊಂಡಿವೆ. ಮುಖ್ಯವಾದವು ಇವು: ಬ್ರಾಹ್ಮಣ, ಒಂದು ವ್ರತ, ಸೋಮರಸ ಪಾನ ಮಾಡುವವನು, ಶಾಂತಚಿತ್ತನಾದವನು, ಭಕ್ತ ಇತ್ಯಾದಿ. ಸೌಮ್ಯಾ ಎಂಬುದೂ ಸಂಸ್ಕೃತ ಶಬ್ದ. ಅದಕ್ಕೆ ದುರ್ಗಾದೇವಿ ಎಂಬ ಅರ್ಥವಿದೆ. ಆದ್ದರಿಂದ ಕನ್ನಡದಲ್ಲಿ ಸೌಮ್ಯ ಎಂಬ ಹೆಸರನ್ನು ಮಕ್ಕಳಿಗೆ ಇಡಬಹುದು.

**ಸ್ಟೈನ್‌ಲೆಸ್ ಸ್ಟೀಲ್ Stainless steel, Hindalium ಎಂಬುವುಗಳಿಗೆ ಕನ್ನಡ ಶಬ್ದವೇನು?** ಕೆಲವು ಶಬ್ದಗಳು Trade Name ಆಗಿ ಬರುತ್ತವೆ. ಅವುಗಳನ್ನು ಹಾಗೆಯೇ ಇಡಬೇಕು. ಅವುಗಳಿಗೆ ಅರ್ಥವಿದೆಯೋ ಇಲ್ಲವೋ ಮುಖ್ಯವಲ್ಲ. ಏಕೆಂದರೆ ವ್ಯಾಪಾರದಲ್ಲಿ ಎಲ್ಲರೂ ಅದನ್ನೇ ಉಪಯೋಗಿಸುತ್ತಾರೆ. Hindustan Aluminium Company ಅವರ ಅಲ್ಯೂಮಿನಿಯಮ್ಮಿಂದ ಮಾಡಿದ್ದು =ಹಿಂಡಾಲಿಯಂ ಅಂಥ ಶಬ್ದ. stainless steel vessel ತುಕ್ಕು ಹಿಡಿಯದ ಉಕ್ಕಿನ ಪಾತ್ರೆ ಎಂದು ಕರೆಯಬಹುದು.

**ಸ್ಟೈಫಂಡ್ ಸ್ಟೈ ಫಂಡು** ಇದು ಇಂಗ್ಲಿಷ್ ಶಬ್ದ, Stipend ಅದರ ಉಚ್ಚಾರಣೆ ಸ್ಟೈಪೆಂಡ್. ಇದಕ್ಕೆ ಅರ್ಥ ಮತ ಪ್ರಚಾರಕರಿಗೆ ಕೊಡುವ ಸಂಬಳ ಎಂದು. ನಮ್ಮಲ್ಲಿ ಅದನ್ನು ಸರಕಾರದವರು ತರಪೇತಿ ಕೊಡುವ ಅಭ್ಯರ್ಥಿಗಳಿಗೆ ನೀಡುವ ಮಾಸಿಕ ವಿದ್ಯಾರ್ಥಿ ವೇತನವೆಂಬರ್ಥದಲ್ಲಿ ಉಪಯೋಗಿಸುತ್ತಿದ್ದಾರೆ. ಸ್ಟೈಫಂಡ್ ಅನ್ನುವುದು ತಪ್ಪು. Sty

ಎಂಬ ಒಂದು ಪದವಿದೆ. ಇಂಗ್ಲಿಷ್‌ನಲ್ಲಿ ಅದಕ್ಕೆ ೧. ಹಂದಿಗಳನ್ನು ಪೋಷಿಸುವ ಸ್ಥಳ. ೨. ಕೊಳಕು ಪ್ರದೇಶ ಎಂದರ್ಥ. sty fund ಎಂದರೆ ಕೊಳಕು ಪ್ರದೇಶಗಳ ರಕ್ಷಣೆಗೆಂದು ಕೊಡುವ ಹಣ ಎಂದು ಅರ್ಥವಾಗುತ್ತದೆ. ಸರಕಾರ ಅಂಥ ಹಣವನ್ನು ಹೆಚ್ಚಿಸಿದ್ದರೆ ಅದು ಸ್ಟೈಫಂಡ್ ಹೆಚ್ಚಳ ಅಷ್ಟೆ! ಇಂಥ ಶಬ್ದವನ್ನು ಉಪಯೋಗಿಸಬಾರದು ಅದು ತಪ್ಪು.

**ಸ್ಪಂದನ** ಎಂದರೆ ಮಿಡಿಯುವುದು. ಕಂಪನ ಹೊಂದುವುದು. ಸ್ಪಂದ ಅಂದರೆ ಚಲನೆ, ಅಲುಗಾಟ ಯಾವುದಾದರೂ ಸಂತೋಷಕ್ಕೋ ದುಃಖಕ್ಕೋ ನಾವೂ ಪ್ರತಿಯಾಗಿ ಮಿಡುಕನ್ನು ಅನುಭವಿಸುವುದು. ಈಗ ಈ ಮಾತನ್ನು ಸಾಹಿತಿಗಳ ಕೂಟದಲ್ಲಿ ಕಾವ್ಯ ಓದಿದಾಗ ಓದುಗನ ಹೃದಯದಲ್ಲಾಗುವ ಮಿಡುಕಾಟಕ್ಕೆ ಹೆಚ್ಚಾಗಿ ಉಪಯೋಗಿಸುತ್ತಾರೆ.

**ಸ್ಪಂದಿಸು** ಎಂದರೆ ಯಾವುದಾದರೂ ಒಂದು ಅನುಭವವನ್ನು ಪಡೆಯುವ ಶಕ್ತಿ ಹೊಂದಿರು ಎಂದರ್ಥ. ಕಾವ್ಯ, ನಾಟ್ಯ, ಸಂಗೀತವನ್ನು ಅನುಭವಿಸಿದಾಗ ಮೂಲದ್ರವ್ಯವನ್ನು ಎಷ್ಟರಮಟ್ಟಿಗೆ ನೀವು ಅನುಭವಿಸುತ್ತೀರಿ ಎಂಬುದು ನಿಮ್ಮ ಸ್ಪಂದನದಿಂದ ಗೊತ್ತಾಗುತ್ತದೆ. ಇಂಗ್ಲಿಷಿನ React ಎಂಬ ಶಬ್ದದ ಅನುವಾದದಂತೆ ಇದು ಪ್ರಯೋಗವಾಗುತ್ತದೆ.

**ಸ್ಮರಣೆ, ಪುನರ್‌ಸ್ಮರಣೆ** ಸ್ಮರಣೆ ಎಂಬ ಶಬ್ದಕ್ಕೆ ನೆನಪು ಎಂದರ್ಥ. ಈ ಶಬ್ದದಲ್ಲಿ ಪುನಃ ಎಂಬ ಅರ್ಥ ಕೂಡಿಕೊಂಡಿದೆ. ಪುನರ್ ಸ್ಮರಣೆ ಎಂಬ ಶಬ್ದಕ್ಕೆ ಅಷ್ಟು ಅಸ್ತಿತ್ವ ಮತ್ತು ಪ್ರಯೋಜನವಿದ್ದಂತಿಲ್ಲ. ಅದನ್ನು ಬಿಡಬಹುದು. ಆಗಾಗ ಸ್ಮರಿಸುತ್ತೇವೆ ಎಂಬಂಥ ಕಡೆಯಲ್ಲಿ ಕೂಡ **ಸ್ಮರಣೆಯೊಂದೆ ಸಾಲದೆ!**

**ಸ್ವಕಪೋಲಕಲ್ಪಿತ** ಈ ಶಬ್ದದಲ್ಲಿ ಮೂರು ಬಿಡಿ ಶಬ್ದಗಳು ಸೇರಿಕೊಂಡಿವೆ. ಸ್ವ + ಕಪೋಲ + ಕಲ್ಪಿತ. ಸ್ವಂತ ಬುದ್ಧಿಯಿಂದ ಊಹೆ ಮಾಡಿ ರಚಿಸಿದ ಎಂದು ಅರ್ಥ, ಆ ಶಬ್ದ ಸಮುದಾಯಕ್ಕೆ. ಕಪೋಲ ಎಂದರೆ ಕೆನ್ನೆ. ಕಪೋಲ ಶಬ್ದದ ವ್ಯುತ್ಪತ್ತಿ ತುಂಬ ಸ್ವಾರಸ್ಯವಾಗಿದೆ. ಊಟ ಮಾಡುವಾಗ ಅಲುಗಾಡುತ್ತದೆ ಎಂದು ಅದಕ್ಕೆ ಕಪೋಲವೆಂಬ ಹೆಸರು ಬಂದಿದೆಯಂತೆ. **'ಭೋಜನ ಸಮಯೇ ಕಂಪತೇ ಇತಿ ಕಪೋಲಃ'** ಎಂಬುದು ಟೀಕೆ. ಸ್ವಕಪೋಲ ಕಲ್ಪಿತ excogitated by ones own head ಸರಿಯೆ? ಕೆಲವರು ಕೇಳುತ್ತಾರೆ. ಸ್ವಕಪೋಲಕಲ್ಪಿತ ಎಂದರೆ ತನ್ನ ಸ್ವಂತ ತಿಳಿವಳಿಕೆಯಿಂದ ರಚಿಸಿದ ಎಂದರ್ಥ. ಇದಕ್ಕೆ ಇಂಗ್ಲಿಷಿನಲ್ಲಿ excogitated ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಇಲ್ಲಿ ex ಎಂಬುದು ಉಪಸರ್ಗ (prefix). ಇದೂ ಲ್ಯಾಟಿನ್ ಭಾಷೆಯಿಂದ ಬಂದದ್ದು. ಸಂಪೂರ್ಣಗೊಳಿಸು ಎಂಬ ಅರ್ಥದಲ್ಲಿ ಈ ಶಬ್ದದಲ್ಲಿ ಸೇರಿದೆ. ಇತರ ಕಡೆಗಳಲ್ಲಿ ex ಗೆ ಅನೇಕ ಅರ್ಥಗಳಿವೆ. Cogitate ಅಂದರೆ ಆಳವಾಗಿ ಯೋಚಿಸು, ಮಥನ ಮಾಡು ಎಂದರ್ಥ. ಆದ್ದರಿಂದ excogitateಎಂಬ ಶಬ್ದಕ್ಕೆ ಸಂಪೂರ್ಣವಾಗಿ ತನ್ನೊಳಗೆ ಆಲೋಚಿಸಿ ಎಂದರ್ಥ. by ones own head ಎಂಬ ಭಾಗ ಅನಗತ್ಯವಾಗುತ್ತದೆ.

**ಸ್ವಗತ** ಇದು ಒಂದು ನಾಟ್ಯೋಕ್ತಿ. ಬೇರೆ ಯಾರಿಗೂ ತಿಳಿಯದಂತೆ ತನಗೆ ತಾನೇ ಮಾತನಾಡಿಕೊಳ್ಳುವುದು. ನಾಟಕದ ಅನೇಕ ತಂತ್ರಗಳಲ್ಲಿ ಇದೂ ಒಂದು. ರಂಗದ ಮೇಲೆ ನಟನು ಯಾರಿಗೂ ಕೇಳದಂತೆ ಮಾತನಾಡಿಕೊಳ್ಳುತ್ತಿದ್ದರೂ ರಂಗಮಂದಿರದಲ್ಲಿರುವ ಸಾವಿರಾರು ಜನರಿಗೆ ಅದು ಕೇಳುತ್ತಿರುತ್ತದೆ. ಆದರೂ ನಟನೂ ಪ್ರೇಕ್ಷಕರೂ ಯಾರಿಗೂ ಕೇಳಲೇ ಇಲ್ಲ ಎಂಬಂತೆ ನಡೆದುಕೊಳ್ಳುತ್ತಾರೆ. ಇದೇ ನಾಟಕದ ಸೊಗಸು. ಇಂಥ ಇತರ ಅನೇಕ ಮುದ್ರೆಗಳನ್ನೂ ನಾಟ್ಯ ಶಾಸ್ತ್ರದಲ್ಲಿ ಹೇಳಲಾಗಿದೆ. **ಸ್ವಸ್ಮಿನ್ ಗತಮ್** ಎಂಬುದು ಅದರ ವಿಗ್ರಹವಾಕ್ಯ. ಸ್ವಗತವೆಂಬಂಥ ಭಾಷಣವಾಗುತ್ತಿರುವಾಗ ರಂಗದ ಮೇಲೆ ಇತರ ಪಾತ್ರಗಳಾವುವೂ ಇರುವುದಿಲ್ಲ. ಸ್ವಗತ— ಆತ್ಮನಿವೇದನೆ ಆಗಲಾರದು. ಏಕೆಂದರೆ ನಿವೇದಿಸುವುದರಲ್ಲಿ ವಿಜ್ಞಾಪನೆ ಮಾಡುವ, ಒಪ್ಪಿಸುವ, ತಿಳಿಸುವ ಕ್ರಿಯೆಗಳಿವೆ. ಸ್ವಗತದಲ್ಲಿ

ಆ ಕಾರ್ಯಗಳಿಲ್ಲ. ಇಂಗ್ಲಿಷಿನ Soliloquy ಎಂಬ ಶಬ್ದಕ್ಕೆ ಸಮಾನವಾದುದು. ಅದು ಲ್ಯಾಟಿನ್ ಭಾಷೆಯ Soliloquium ಎಂಬ ಶಬ್ದದಿಂದ ಬಂದುದು. ಕ್ರಿ.ಪೂರ್ವದಿಂದ ಈ ಸ್ವಗತ ಎಂಬ ಶಬ್ದ ನಮ್ಮ ಸಂಸ್ಕೃತ ನಾಟಕಗಳಲ್ಲಿ ಪ್ರಯೋಗಗೊಂಡಿದೆ.

**ಸ್ವಪ್ನ** ಸಂಸ್ಕೃತ ಶಬ್ದ. ಕನಸು ಕನ್ನಡದ ಶಬ್ದ. ಎರಡಕ್ಕೂ ಒಂದೇ ಅರ್ಥ. ವ್ಯತ್ಯಾಸವೇನೂ ಇಲ್ಲ. ಹಗಲುಗನಸು ಎಂದರೆ ಬೇರೆ ಅರ್ಥವಿದೆ. ಗಾಳಿಯ ಗೋಪುರವನ್ನು ಕಟ್ಟುವುದು. Building Castles in the air ಎಂಬ ಇಂಗ್ಲಿಷ್ ಶಬ್ದಪುಂಜದ ಕನ್ನಡ ಅನುವಾದ.

**ಸ್ವರ್ಗ, ಸೂರ್ಯ ಎಂಬುದನ್ನು ಬರೆಯುವುದು ಹೇಗೆ?** ಸಂಸ್ಕೃತದಲ್ಲಿ ಕೂಡ ಸ್ವರ್ಗ, ಸೂರ್ಯ ಎಂದೇ ಮುದ್ರಣ ಮಾಡುತ್ತಾರೆ, ಬರೆಯುತ್ತಾರೆ. ಸ್ವರ್ಗ್ಗ, ಸೂರ್ಯ ಎಂದು ಬರೆದರೂ ತಪ್ಪಲ್ಲ. ಏಕೆಂದರೆ ಕನ್ನಡ ಕಾಗುಣಿತದಲ್ಲಿ ಆ ಎರಡು ಬಗೆಯ ಕಾಗುಣಿತಕ್ಕೂ ಒಂದೇ ಉಚ್ಚಾರಣೆಯಿದೆ. ಅನೇಕ ವರ್ಷಗಳಿಂದ ಎರಡೂ ರೂಪಗಳನ್ನು ಒಪ್ಪಲಾಗಿದೆ.

**ಸ್ವಸ್ತಿ** ಇದು ಸಂಸ್ಕೃತ ಶಬ್ದ. ಇದಕ್ಕೆ ಒಳ್ಳೆಯದಾಗಲಿ ಎಂದರ್ಥ.

**ಸ್ವಸ್ತಿಕ** ಈ ಶಬ್ದಕ್ಕೆ ಮಂಗಳ ವಸ್ತು ಎಂದು ಅರ್ಥ. ಇದು ಸ್ವಸ್ತಿ ಎಂಬುದರಿಂದ ಬಂದದ್ದು. ಮಂಗಳಕರವಾದುದನ್ನು ಹೇಳುವ ವ್ಯಕ್ತಿಗೂ ಈ ಶಬ್ದವನ್ನೇ ಉಪಯೋಗಿಸುತ್ತಾರೆ. ಎದೆಯ ಮೇಲೆ ಒಂದು ತೋಳಿನ ಮೇಲೆ ಮತ್ತೊಂದು ತೋಳು ಬರುವಂತೆ ಇಡುವುದಕ್ಕೆ ಈ ಹೆಸರಿದೆ. ಇದು ಸುದರ್ಶನ ಚಕ್ರದ ನಾಲ್ಕು ಅರಗಳನ್ನು ಪ್ರತಿನಿಧಿಸುತ್ತದೆ ಎನ್ನುತ್ತಾರೆ.

ಈ ಆಕಾರದ ಗುರುತು ಅಶೋಕನ ಕಾಲದ ಲಿಪಿಗಳಲ್ಲಿ ಸ್ವಸ್ತಿ ಎಂಬ ಶಬ್ದವನ್ನು ಸೂಚಿಸುತ್ತದೆ ಎಂದೂ ವಿವರಿಸುತ್ತಾರೆ. ಜೈನರಲ್ಲಿ ಈಗಿನ ಅವಸರ್ಪಿಣಿ ಕಾಲದಲ್ಲಿ ಶುಭ ಚಿಹ್ನೆಗಳಲ್ಲಿ ಒಂದೆಂದು ನಂಬಲಾಗಿದೆ. ಇದು ಶಿವಲಿಂಗದ ಗುರುತೆಂದು ಕೆಲವರು ತಿಳಿಸುತ್ತಾರೆ. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ: ಹೀಗೆ ೧. ಚೌವಟ್ಟ = ನಾಲ್ಕು ದಾರಿಗಳು ಸೇರುವ ಜಾಗ ೨. ಬೆಳ್ಳುಳ್ಳಿ ೩. ಒಂದು ಬಗೆ ರೊಟ್ಟಿ ೪. ವ್ಯಭಿಚಾರಿ ೫. ಯೋಗಾಸನ ಇತ್ಯಾದಿ. ಒಂದು ಬಗೆಯ ರಚನೆಯ ಅರಮನೆಗೂ ಸ್ವಸ್ತಿಕ ಎಂಬ ಹೆಸರಿದೆ.

ಈ ರೂಪದಲ್ಲಿದ್ದರೆ ಇದು ಗ್ರೀಕರ cross ಎಂದು ವಿವರಣೆಯಿದೆ. ೧೯೩೩ ರಲ್ಲಿ National Socialist German workers' party ಯು ಇದನ್ನು ತಮ್ಮ ಪಕ್ಷದ ಲಾಂಛನವನ್ನಾಗಿ ಸ್ವೀಕರಿಸಿತು. ಅಡಾಲ್ಫ್ ಹಿಟ್ಲರ್ ಇದನ್ನೇ ತನ್ನ ನಾಜಿ ಪಕ್ಷದ ಲಾಂಛನವನ್ನಾಗಿ ಮುಂದುವರಿಸಿದನು. ಈ ಗುರುತು ಪ್ರಪಂಚದ ಅನೇಕ ದೇಶಗಳಲ್ಲಿ ಅದೃಷ್ಟವನ್ನು ತರುವುದೆಂದು ನಂಬಿಕೆಯಿದೆ. ಉತ್ತರ ಅಮೆರಿಕದ ರೆಡ್ ಇಂಡಿಯನ್ ಜನಾಂಗದಲ್ಲಿ ಮತೀಯ ಸಂಬಂಧವಾಗಿ ಉಪಯೋಗಿಸಲಾಗುತ್ತಿತ್ತು. ಇದಕ್ಕೆ Fylfot ಎಂದೂ Gammadion ಎಂದೂ ಬೇರೆ ಬೇರೆ ಹೆಸರುಗಳಿವೆ. ರಾಜರ ಸೈನ್ಯಗಳಲ್ಲಿ ಪರಾಕ್ರಮಿಗಳ ಆಯುಧಾಲಂಕಾರಗಳಲ್ಲಿ ಲಾಂಛನವಾಗಿ ಹಿಂದೆ ಇದನ್ನು ಪಾಶ್ಚಾತ್ಯ ದೇಶಗಳಲ್ಲಿ ಉಪಯೋಗಿಸುತ್ತಿದ್ದರು. ಪಾಶ್ಚಾತ್ಯರಲ್ಲಿ ಇದರ ಆಕಾರ ಬೇರೆಯಾಗಿದೆ.

**ಸ್ಥಾಯಿಭಾವ** ಮಾನವನ ಬಾಳಿನಲ್ಲಿ ಮೊದಲಿನಿಂದ ಕೊನೆಯವರೆಗೂ ಬಾಳಿನ ಭಾಗವಾಗಿ ಶಾಶ್ವತವಾಗಿ ಹೊಂದಿಕೊಂಡಿರುವ ಭಾವಗಳಿರುತ್ತವೆ. ಅಂಥ ಭಾವಗಳನ್ನು ಸ್ಥಾಯಿಭಾವಗಳೆಂದು ಕರೆಯುತ್ತಾರೆ. ಉದಾಹರಣೆಗೆ ರತಿ, ಹಾಸ್ಯ, ಶೋಕ, ಕೋಪ, ಉತ್ಸಾಹ, ಭಯ, ಜುಗುಪ್ಸೆ, ಆಶ್ಚರ್ಯ. ರತಿ ಎಂದರೆ ಗಂಡು ಹೆಣ್ಣು ಇವೆರಡು ಮಾನವ ಜಾತಿಗಳ ನಡುವೆ ಉಂಟಾಗುವ ಪ್ರೀತಿ. ಹಾಗೆಯೇ ನಗು, ಅಳು, ಕೋಪ ಮುಂತಾದುವು ಎಂದು ತಿಳಿದುಕೊಳ್ಳಬೇಕು.

**ಸ್ಮಾರ್ತ** ಎಂದರೆ ಧರ್ಮಶಾಸ್ತ್ರವನ್ನು ಅನುಸರಿಸಿ ಜೀವನವನ್ನು ನಡೆಸುವವರು. ಸ್ಮೃತಿ ಎಂದರೆ ಮನು ಮುಂತಾದವರಿಂದ ಪ್ರಣೀತವಾದ ಧರ್ಮ ಸಂಹಿತೆ. ಸ್ಮೃತಿಗಳು ವೇದಾರ್ಥಗಳನ್ನು

ಸ್ಮರಿಸಿ ರಚಿತವಾದವುಗಳಾದುದರಿಂದ ಅವುಗಳಿಗೆ ಆ ಹೆಸರು ಬಂತು. ಸ್ಮೃತಿಗಳಲ್ಲಿ ಉಕ್ತವಾದ ಕರ್ಮಗಳನ್ನು ಆಚಾರದಲ್ಲಿ ಇಟ್ಟುಕೊಂಡಿರುವವನು ಸ್ಮಾರ್ತ. ಇದಕ್ಕೆ ಶಂಕರಾಚಾರ್ಯರ ತತ್ವಗಳ ಆರಾಧಕ, ಅದ್ವೈತಿ ಎಂಬ ಬೇರೆಯ ಅರ್ಥವೂ ಇದೆ. ಸ್ಮೃತಿಗೆ ಸಂಬಂಧಿಸಿದ ಎಂಬ ಗುಣವಾಚಕದ ಅರ್ಥವೂ ಸ್ಮಾರ್ತ ಎಂಬ ಶಬ್ದಕ್ಕೇ ಇದೆ.

ಸ್ವಾತಂತ್ರ್ಯ ಸ್ವತಂತ್ರ ಎಂಬ ಸಂಸ್ಕೃತ ಶಬ್ದಕ್ಕೆ ಇತರರು ಯಾರಿಗೂ ಅಧೀನನಲ್ಲದವನು ಎಂಬ ಅರ್ಥವಿದೆ. ಸ್ವತಂತ್ರದ ಭಾವನಾಮ ರೂಪ ಸ್ವಾತಂತ್ರ್ಯ. ಇದಕ್ಕೆ ಇತರರಿಗೆ ಅಧೀನನಾಗಿಲ್ಲದಿರುವಿಕೆ, ಸ್ವಾಧೀನತೆ ಎಂದರ್ಥ. 'ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಅನೇಕ ವರ್ಷಗಳಾದುವು' ಎಂಬ ವಾಕ್ಯವನ್ನು ಗಮನಿಸಿ. ಜನರೆಲ್ಲರೂ ತಾವು ಸ್ವತಂತ್ರರೆಂದು ತಿಳಿದರೆ ದೇಶಕ್ಕೆ ಕಷ್ಟ ಬರುತ್ತದೆ, ಎಂಬುದನ್ನು ಪರಿಶೀಲಿಸಿ. ಸ್ವಾತಂತ್ರ ರೂಪ ತಪ್ಪು.

ಸ್ವಾಧ್ಯಾಯ ಈ ಸಂಸ್ಕೃತ ಶಬ್ದಕ್ಕೆ ವಿಶೇಷವಾದ ಪಾರಿಭಾಷಿಕ ಅರ್ಥವಿದೆ. ಮತ್ತೆ ಮತ್ತೆ ಆವೃತ್ತಿ ಮಾಡಿ ವೇದವನ್ನು ಅಭ್ಯಾಸ ಮಾಡುವುದು ಎಂದು ಅರ್ಥ. ಇದಕ್ಕೆ ಜಪ ಮಾಡುವುದು ಎಂದೇ ಅರ್ಥ. ಮಂತ್ರಗಳನ್ನು ವಾಚೋವಿಧೇಯವಾಗಿ ಮಾಡಿಕೊಳ್ಳುವುದು. ಈ ಶಬ್ದಕ್ಕೆ ಒಬ್ಬನೇ ಇದ್ದು ವ್ಯಾಸಂಗ ಮಾಡುವ ಅರ್ಥವಿರುವುದರಿಂದ ಈ ಶಬ್ದಕ್ಕೆ ಗ್ರಾಮ್ಯ ಎಂಬ ವಿಶಿಷ್ಟಾರ್ಥವು ವಿದ್ವಾಂಸರಲ್ಲಿ ಕ್ವಚಿತ್ಪ್ರಯೋಗದಲ್ಲಿದೆ. ಗ್ರಾಮ್ಯ = ಸಂಭೋಗ.

ಸ್ವಾಭಿಮಾನ ತನ್ನನ್ನು ಕುರಿತು ಇರುವ ಗೌರವ, ಆತ್ಮಗೌರವ. ಇದು ಕೆಲವು ವೇಳೆ ಗರ್ವವಾಗಿ ಬಿಡಬಹುದು. ಅದು ಸೊಕ್ಕು, ಕೊಬ್ಬು. ಅದು ಗೌರವವನ್ನು ಸಂಪಾದಿಸತಕ್ಕದ್ದಲ್ಲ. ಆದರೆ ಆತ್ಮಗೌರವವನ್ನು ಕಾಪಾಡಿಕೊಳ್ಳುವ ಮನಸ್ಸು ತುಂಬ ಯೋಗ್ಯವಾದುದು. ತನ್ನ ಅರ್ಹತೆಯನ್ನು ಕೀಳಾಗಿ ಎಣಿಸಲು ಅವಕಾಶ ಕೊಡದಿರುವಿಕೆಯೇ ಸ್ವಾಭಿಮಾನ.

ಸ್ವಾಮಿನಿ ಗಂಡಸರಿಗೆ ಪತ್ರ ಬರೆಯುವಾಗ 'ಸ್ವಾಮಿ' ಎಂದು ಬರೆಯುತ್ತೇವೆ. ಹೆಂಗಸರಿಗೆ ಬರೆಯುವಾಗ ಸ್ವಾಮಿನಿ ಎಂದು ಬರೆಯಬಹುದೇ? ಸ್ವಾಮಿನಿ ಎಂಬ ಶಬ್ದವನ್ನು ಒಡತಿ ಎಂಬರ್ಥದಲ್ಲಿ ಉಪಯೋಗಿಸಬಹುದು. ರಾಜನ ಪ್ರಿಯ ಪತ್ನಿಯನ್ನು ಕುರಿತು ಸಂಸ್ಕೃತದಲ್ಲಿ ಈ ಶಬ್ದದ ಪ್ರಯೋಗಗಳಿವೆ. ಕನ್ನಡದಲ್ಲಿ ಇದು ಪತ್ರ ಪ್ರಸಂಗದಲ್ಲಿ ಸರಿ ಹೊಂದುವುದಿಲ್ಲ. ಮಾನ್ಯೆ ಎಂಬುದು ಸಂಭಾವ್ಯ ರೂಪ. ಆದರೆ ಪ್ರಯೋಗದಲ್ಲಿಲ್ಲ. ಆದುದರಿಂದ ಶ್ರೀಮತಿ ಎಂಬ ಶಬ್ದವನ್ನೇ ಉಪಯೋಗಿಸುವುದು ಉತ್ತಮ. ಅವರ ಹೆಸರು ಗೊತ್ತಿದ್ದರೆ ಅದನ್ನು ಸೇರಿಸಿ ಬರೆಯುವುದು ಮತ್ತೂ ಶ್ರೇಷ್ಠ.

ಸ್ತುತ್ಯರ್ಹ ಇದೊಂದು ಶಬ್ದ ಯಾವ ಸನ್ಮಾನ ಸಮಾರಂಭದಲ್ಲಿಯೂ ಬಹು ಸಲ ಸ್ತುತ್ಯಾರ್ಹ ಎಂದು ತಪ್ಪಾಗಿ ತಲೆ ಹಾಕುವ ಶಬ್ದ. ಈ ಮಹಾವ್ಯಕ್ತಿ ಹೀಗೆ ಸ್ತುತ್ಯಾರ್ಹವಾದ ಕೆಲಸವನ್ನು ಮಾಡಿದ್ದಾರೆ. ಜನಸೇವೆ, ಜನಾರ್ದನ ಸೇವೆ ಎರಡನ್ನೂ ಒಟ್ಟಿಗೆಯೇ ಮಾಡುವುದು ಸ್ತುತ್ಯಾರ್ಹ. ಹೀಗೆ ಭಾಷಣಕಾರರ ಬಾಯಿಯಲ್ಲಿ ಉಪಯೋಗದಲ್ಲಿರುವ ಶಬ್ದ ಇದು. ಇದು ತಪ್ಪು ಶಬ್ದ. ಅಬದ್ಧ ರೂಪ. 'ಸ್ತುತಿ + ಅರ್ಹ' ಎನ್ನುವುದು ಸ್ತುತ್ಯರ್ಹ ಎಂದೇ ರೂಪವನ್ನು ಪಡೆಯಬೇಕು. ಹೊಗಳಿಕೆಗೆ ಅರ್ಹವಾಗಿರುವ ಯಾವ ವಿಷಯವೇ ಆಗಲಿ ಅದನ್ನು ಮೆಚ್ಚಬೇಕಾದುದು ಸರಿಯೇ. ಆದರೆ ಆ ಮೆಚ್ಚಿಕೆಗೆ ದೀರ್ಘ ಪ್ರಯೋಗದಿಂದ ಮತ್ತಾವ ಆಧಿಕ್ಯವೂ ಉಂಟಾಗುವುದಿಲ್ಲ. ಒಬ್ಬರು ಹರಿಕಥೆಯ ದಾಸರು ಒಮ್ಮೆ ಹೇಳಿದ್ದು ನನಗೆ ನೆನಪಿದೆ. 'ಸೌಂದರ್ಯ' ಎಂಬ ಶಬ್ದದಲ್ಲಿ ಸೌಂದರ್ಯದ ಹಿರಿಮೆ ಸಾಕಷ್ಟು ಪ್ರಕಟವಾಗುವುದಿಲ್ಲ. ಆದುದರಿಂದ ಆ ಶಬ್ದವನ್ನು ನಿಜವಾದ ಸುಂದರರಿಗೆ ಅನ್ವಯಿಸುವಾಗ 'ಸೌಂಧರ್ಯ' ಎಂದು ಉಚ್ಚರಿಸಬೇಕು. 'ಸ್ತುತ್ಯಾರ್ಹ' ಶಬ್ದಕ್ಕೂ ಈ ಕಾರಣ ಕೊಡಬಹುದಾದರೆ ಜನ ಪರಿಶೀಲಿಸಬೇಕು. ಏನೇ ಆದರೂ ಈ ಅಪಶಬ್ದವನ್ನು ದೂರ ಮಾಡುವುದು ಉತ್ತಮ.

**ಸ್ಥಿತ್ಯಂತರ** ನೀರು ಆವಿಯಾದರೆ ಸ್ಥಿತ್ಯಂತರ. ಬಡತನ ತಪ್ಪಿ ಸಿರಿತನ ಬಂದರೆ ಅದು ಸ್ಥಿತ್ಯಂತರ. ಹೀಗೆ ಇದರ ಅರ್ಥ ವ್ಯಾಪಕ. ಬೇರೆಯ ಸ್ಥಿತಿ ಎಂದು ಅದರ ಅರ್ಥ ಸಂಸ್ಕೃತದಲ್ಲಿ.

**ಸ್ನಿಗ್ಧ** ಷ್ಣು ಎಂಬ ಧಾತುವಿನಿಂದ ಆದ ವಿಶೇಷಣ. ಗುಣವಾಚಕ ಶಬ್ದ. ನಾಮಪದವೂ ಆಗಬಹುದು. ಇದಕ್ಕೆ ಪ್ರಿಯವಾದ, ನುಣುಪಾಗಿರುವ, ನಿಬಿಡವಾದ, ಕೋಮಲವಾದ ಎಂಬ ಅರ್ಥಗಳು ಇವೆ.

**ಸ್ಫೂರ್ತಿಗೂ ಪ್ರತಿಭೆಗೂ ಏನು ವ್ಯತ್ಯಾಸ?** ಸ್ಫೂರ್ತಿ ಎಂಬ ಶಬ್ದ ಸ್ಫುರ ಎಂಬ ಶಬ್ದದಿಂದ ಬಂದದ್ದು. ಆ ಶಬ್ದಕ್ಕೆ ಮೂಲ ಅರ್ಥ ಸಂಚಲನೆ. ಕಂಪನ, ಸ್ಪಂದನ. ಆಮೇಲೆ ಬುದ್ಧಿಗೆ ತೋರುವುದು, ಹೊಳೆಯುವುದು, ಸ್ಫುರಣವಾಗುವುದು ಎಂಬುದು ಎರಡನೆಯ ಅರ್ಥ. ಸ್ಫೂರ್ತಿ ಶಬ್ದಕ್ಕೂ ಇವೇ ಅರ್ಥಗಳಿವೆ. ಪ್ರತಿಭಾ ಶಬ್ದಕ್ಕೆ ನಿಘಂಟಿನಲ್ಲಿ ಬೇರೆ ಬೇರೆ ಅರ್ಥಗಳಿವೆ. *೧. ಬುದ್ಧಿಶಕ್ತಿ ೨. ತಿಳಿವಳಿಕೆ ೩. ದೀಪ್ತಿ, ಪ್ರಕಾಶ ೪. ಆಗಾಗ ಹೊಸ ಹೊಸದಾಗಿ ಭಾವಗಳ ಹೊಳಪನ್ನು ನೀಡುವ ಚೈತನ್ಯ.* ಈ ಕೊನೆಯ ಅರ್ಥ ಕವಿ ಪ್ರತಿಭೆಗೆ ಸಂಬಂಧಿಸಿದ್ದು. ಕಾವ್ಯಮೀಮಾಂಸೆಯಲ್ಲಿ ಇದಕ್ಕೆ ವ್ಯಾಪಕವಾದ ವಿವರಣೆಗಳಿವೆ.

**Song composer ಮತ್ತು music composer ಎಂಬ ಶಬ್ದಗಳ ವ್ಯತ್ಯಾಸ** ಒಂದು ಹಾಡಿನ ಸಾಹಿತ್ಯವನ್ನು ರಚಿಸುವವನು ಕವಿ. ಆ ಹಾಡನ್ನು ಯಾವ ರಾಗದಲ್ಲಿ ಹೇಗೆ ಹಾಡಬೇಕೆಂದು ವಿವರವಾಗಿ ತಿಳಿಸಿಕೊಡುವವನು ಸಂಗೀತದ ನಿರ್ದೇಶಕ. ಕನ್ನಡದಲ್ಲಿ ಹಾಡನ್ನು ರಚಿಸುವವರನ್ನು ವಾಗ್ಗೇಯಕಾರರು ಎಂಬ ಹೆಸರಿನಿಂದ ಕರೆಯುತ್ತಾರೆ. ಅಂದರೆ ಅವರೇ ರಚಿಸಿ ಅವರೇ ಹಾಡಲು ಸಮರ್ಥರು ಎಂದು ಅರ್ಥ.

# ಹ

**ಹಂಗಾಮ** ಎನ್ನುವುದು ಪಾರಸೀ ಭಾಷೆಯ ಶಬ್ದ. ಅದಕ್ಕೆ ಋತುಮಾನ, ಕಾಲ, ಸಮಯ ಎಂದರ್ಥ. ಹಂಗಾಮಾ ಎನ್ನುವುದು ಅಖಾಡ, ಮರಾಠೀ ಭಾಷೆಯಲ್ಲಿ. ಅಲ್ಲದೆ ಆ ಶಬ್ದಕ್ಕೆ ಕಿರುಚಾಟ, ಕೂಗಾಟ, ದೊಂಬಿ, ಗಲಾಟೆ ಎಂಬ ಅರ್ಥಗಳೂ ಇವೆ. ಹಂಗಾಮಿ ಎಂದರೆ ಸ್ವಲ್ಪ ಸಮಯಕ್ಕಾಗಿ ಇರುವ, ಇನ್ನೊಬ್ಬರ ಸ್ಥಾನದಲ್ಲಿ ಬದಲಿಯಾಗಿರುವ ಎಂದರ್ಥ.

**ಹಂತಿಪದ** ಹಂತಿಯ ಪದಗಳು ಅಥವಾ ಹಂತಿಯ ಹಾಡುಗಳು ಉತ್ತರ ಕನ್ನಡದ ಜಾನಪದ ಗೀತಗಳ ಒಂದು ಬಗೆ. ವ್ಯವಸಾಯದ ವೃತ್ತಿಯನ್ನೇ ಹೆಚ್ಚಾಗಿ ಕುರಿತಿರುವುದು ಈ ಹಾಡುಗಳ ವೈಶಿಷ್ಟ್ಯ. ಕಣದಲ್ಲಿ ಮೇಟಿಯನ್ನು ನೆಟ್ಟು ಅದರ ಸುತ್ತ ಹಾಕಿರುವ ಬೆಳೆಯ ತೆನೆಗಳನ್ನು ತುಳಿಸಲು ದನಗಳ ಪಂಕ್ತಿ = ಹಂತಿ (ಸಾಲು)ಯನ್ನು ಕಟ್ಟಿ, ಹಾಡು ಹೇಳುತ್ತಾ ರಾತ್ರಿಯೆಲ್ಲ ಕೆಲಸ ಮಾಡುವುದನ್ನು ರೈತರು ಚೆನ್ನಾಗಿ ಬಲ್ಲರು. ಈ ಕೆಲಸ ಅನೇಕ ದಿನಗಳವರೆಗೆ ನಡೆಯುತ್ತದೆ. ದನಗಳ ಹಂತಿಯನ್ನು ಹೊಡೆಯುತ್ತಾ ಹಾಡುವ ಹಾಡೇ ಹಂತಿಯ ಹಾಡು. ಈ ಹಾಡುಗಳಲ್ಲಿ ಹೆಚ್ಚಾಗಿ ಹರಿಜನರ ಸೃಷ್ಟಿಯೇ ಇರಬಹುದು. ಅಶ್ಲೀಲದ ನುಡಿಗಳೂ ಇರಬಹುದು.

**ಹಂಪಿ** ಈ ಊರಿನ ಹೆಸರು ಹಂಪೆ. ಉತ್ತರ ಕರ್ನಾಟಕದಲ್ಲಿ ಇಂಥ ಶಬ್ದಗಳನ್ನು ಸಾಮಾನ್ಯವಾಗಿ ಜನರು ಇಕಾರವಾಗಿಯೇ ಉಚ್ಚರಿಸುತ್ತಾರೆ. ಕಾಗೆ-ಕಾಗಿ, ಮನೆ-ಮನಿ ಇತ್ಯಾದಿ. ಬರವಣಿಗೆಯಲ್ಲಿ ಹಂಪೆ ಎಂಬುದೇ ಪ್ರಾಚುರ್ಯದಲ್ಲಿದೆ. ಹಂಪೆಯ ಹರಿಹರ, ಹಂಪೆಯ ರಾಘವಾಂಕ ಪಂಡಿತ ಎಂಬುದು ಕಾವ್ಯಗಳಲ್ಲಿರುವ ಮಾತುಗಳು.

ಹರಿಹರನ ಶತಕದಲ್ಲಿ ಹಂಪೆಯಾಳ್ದನೇ ಎಂದೇ ವಿರೂಪಾಕ್ಷದೇವನನ್ನು

ಸಂಬೋಧಿಸಲಾಗಿದೆ. ಬೇಂದ್ರೆಯವರು ತಮ್ಮ ಒಂದು ಕವನದಲ್ಲಿ 'ಹಂಪೆಯ ಕೊಂಪೆಯ ನೋಂಪಿಯು ಫಲಿಸಲಿ' ಎಂದು ಹೇಳಿದ್ದಾರೆ. ನೋಂಪಿ ಎಂಬುದಕ್ಕೆ ಹಂಪಿ ಎಂಬುದು ಪ್ರಾಸವಾಗುವುದಾದರೂ ಆ ಶಬ್ದವನ್ನು ಹಂಪೆ ಎಂದೇ ಇಟ್ಟಿದ್ದಾರೆ. ಇದನ್ನೆಲ್ಲ ನಾವು ನೆನೆಯಬೇಕು. ಹಳೆಯ ಕಾವ್ಯಗಳಲ್ಲಿ ಹಂಪಿ ಎಂಬ ಶಬ್ದದ ಪ್ರಯೋಗವೇ ನನಗೆ ಕಾಣಲಿಲ್ಲ. ಪಂಪಾ ಎಂಬ ಸಂಸ್ಕೃತ ಶಬ್ದ ಹಂಪೆ ಎಂದಾಗಿದೆ.

**ಹಂಸಕ್ಷೀರ ನ್ಯಾಯ** ಇದೊಂದು ಲೌಕಿಕ ನ್ಯಾಯ. ಒಂದು ನಂಬಿಕೆಯ ಮೇಲೆ ನಿಂತಿರುವ ಹೇಳಿಕೆ. ಹಂಸ ಪಕ್ಷಿಗೆ ಒಂದು ವಿಶೇಷ ಸಾಮರ್ಥ್ಯವಿದೆಯಂತೆ! ಅದರ ಮುಂದೆ ನೀರು ಬೆರೆಸಿದ ಹಾಲನ್ನು ಇಟ್ಟರೆ ಅದು ಹಾಲೆಲ್ಲವನ್ನೂ ಹೀರಿ ನೀರನ್ನು ಮಾತ್ರ ಹಿಂದೆ ಬಿಡುತ್ತದೆಯಂತೆ. ಇದು ಆ ಪಕ್ಷಿಗೆ ಮಾತ್ರ ಇರುವ ಸಾಮರ್ಥ್ಯ. ಹಾಗೆಯೇ ಕೆಡುಕನ್ನೆಲ್ಲ ಬಿಟ್ಟು ಒಳಿತನ್ನೆಲ್ಲ ಸ್ವೀಕರಿಸಿ ಎಂಬುದು ಅದರ ಹಿಂದೆ ಇರುವ ಅರ್ಥ.

**ಹಂಸತೂಲಿಕಾತಲ್ಪ** ಈ ಶಬ್ದದಲ್ಲಿ ಮೂರು ಶಬ್ದಗಳು ಸಮಾಸವಾಗಿ ಸೇರಿವೆ. ಹಂಸ, ತೂಲಿಕಾ, ತಲ್ಪ. ತಲ್ಪ = ಹಾಸಿಗೆ, ತೂಲಿಕಾ = ಹತ್ತಿ, ಹಕ್ಕಿಗಳ ತುಪ್ಪುಳು, ಹಂಸ = ಹಂಸಪಕ್ಷಿ. ಆದುದರಿಂದ ಆ ಶಬ್ದಕ್ಕೆ 'ಹಂಸ ಪಕ್ಷಿಯ ತುಪ್ಪುಳದಿಂದ ಮಾಡಿದ ಹಾಸಿಗೆ' ಎಂದರ್ಥ. ಇದು ಹತ್ತಿಗಿಂತ ಮೃದುವಾಗಿರುವ ತುಪ್ಪುಳಿನಿಂದ ಮಾಡಿದ ಹಾಸಿಗೆ. ರಾಜಭೋಗ ಉಳ್ಳವರು ಉಪಯೋಗಿಸುವ ಹಾಸಿಗೆ.

**ಹಂಸಧ್ವನಿಗೂ ಹಂಸಕ್ಕೂ ಸಂಬಂಧವೇನು?** ಸಂಗೀತದಲ್ಲಿ ಒಂದು ರಾಗವಾಗಿರುವ ಈ ಹೆಸರಿನಲ್ಲಿರುವ ಹಂಸ ಶಬ್ದವು ಹಂಸಪಕ್ಷಿಯ ಧ್ವನಿಗೆ ಸಂಬಂಧಪಟ್ಟದ್ದಲ್ಲ ಎಂಬುದು ಸ್ಪಷ್ಟ. ಹಂಸದ ಧ್ವನಿಯು ಇಂಪಾದುದೆಂಬ ಕವಿಸಮಯ ಕೂಡ ಇಲ್ಲ. ಆದುದರಿಂದ ಈ ಶಬ್ದವನ್ನು ಸಂಗೀತ ಕ್ಷೇತ್ರದ ವಿದ್ವಾಂಸರು ಸ್ಪಷ್ಟಪಡಿಸಬೇಕು. ಇಂಗ್ಲಿಷಿನಲ್ಲಿ Swan song ಎಂಬ ನುಡಿಗಟ್ಟು ಪ್ರಯೋಗದಲ್ಲಿದೆ. ಪಾಶ್ಚಾತ್ಯರ ಪೌರಾಣಿಕ ಕಥೆಗಳಲ್ಲಿ ಹಂಸಪಕ್ಷಿಯು ಸಾಯುವುದಕ್ಕೆ ಮುಂಚೆ ತುಂಬ ಇಂಪಾಗಿ ಹಾಡುತ್ತದೆ ಎಂಬ ವಿವರಣೆ ಬರುತ್ತದೆ. ಅದರಿಂದ ಯಾವನಾದರೂ ಕವಿಯು ರಚಿಸಿದ ಕೊನೆಯ ಕವನವನ್ನು ಆತನ Swan Song ಎಂದು ಹೇಳುತ್ತಾರೆ. ಕನ್ನಡದಲ್ಲಿ ಪ್ರಸಿದ್ಧವಾಗಿರುವ ತರಾಸು ಅವರ ಹಂಸಗೀತೆ ಎಂಬ ಕಾದಂಬರಿಯಲ್ಲಿ ಈ ನುಡಿಗಟ್ಟಿನ ಸಂಬಂಧದ ಕನ್ನಡ ಕಥೆ ಬರುತ್ತದೆ.

**ಹಂಸಪಾದ** ಇದು ಸಂಸ್ಕೃತ ಶಬ್ದ. ಇದಕ್ಕೆ ಹಂಸ ಪಕ್ಷಿಯ ಕಾಲು ಎಂದೇ ಅರ್ಥ. ಕಾಕಪಾದ ಎಂಬ ಶಬ್ದ ಒಂದಿದೆ ಸಂಸ್ಕೃತದಲ್ಲಿ. ಬರಹದ ಹಸ್ತಪ್ರತಿಗಳಲ್ಲಿ ಏನಾದರೂ ತಪ್ಪಿಹೋಗಿದ್ದರೆ ಅದನ್ನು ಸೇರಿಸಬೇಕು ಎಂಬುದನ್ನು ತೋರಿಸಲು ಹಾಕುವ ಗುರುತಿಗೆ ಕಾಕಪಾದ ಎಂಬ ಶಬ್ದವನ್ನು ಉಪಯೋಗಿಸುತ್ತಿದ್ದರು ಹಿಂದೆ. ಈಚೆಗೆ ಕಾಕಪಾದದ ಬದಲು ಹಂಸಪಾದ ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಇದು ಮುದ್ರಣದ ಕರಡು ತಿದ್ದುವಾಗ ಉಪಯೋಗಿಸುವ ಗುರುತು ^ ಅಥವಾ h ಹೀಗೆ ಇರುತ್ತದೆ. ಅದು ಕಾಗೆ ಅಥವಾ ಹಂಸದ ಕಾಲಿನಂತೆ ಇರುವುದರಿಂದ ಈ ಹೆಸರು ಬಂದಿದೆ.

**ಹಂಸವೇಣಿ** ಕಾವ್ಯಗಳಲ್ಲಾಗಲಿ ಮಾತಿನಲ್ಲಾಗಲಿ ಹಂಸವೇಣಿ ಎಂಬ ಶಬ್ದವನ್ನು ನಾನು ಕೇಳಿಲ್ಲ, ನೋಡಿಲ್ಲ. ಹಂಸಗಮನೆ, ಹಂಸಗತಿ, ಹಂಸತೂಲಿಕಾತಲ್ಪ, ಹಂಸನಾದ, ಹಂಸಪಾದ, ಹಂಸಮಾಲೆ, ಹಂಸಯಾನೆ, ಹಂಸವಾಹನೆ ಇತ್ಯಾದಿ ಶಬ್ದಗಳನ್ನೂ ಅವುಗಳ ಪರ್ಯಾಯಗಳನ್ನೂ ಬಲ್ಲೆ. ನರೆತ ತಲೆಯ ಸುಂದರಿ ಜಡೆ ಹೆಣೆದುಕೊಂಡಿದ್ದರೆ ಅದನ್ನು ಹಂಸವೇಣಿ ಎಂದು ಯಾರಾದರೂ ಹಾಸ್ಯಕ್ಕೆ ಉಪಯೋಗಿಸಿರಬಹುದು. ಇಲ್ಲದಿದ್ದರೆ ಏನೂ ತಿಳಿಯದೆ ಉಪಯೋಗಿಸಿರಬಹುದು ಎಂದೇ ತಿಳಿದಿದ್ದೆ. ಆದರೆ ಕೊಯಮತ್ತೂರಿನಲ್ಲಿ ನಡೆಯುವ ಒಂದು ವಿವಾಹದಲ್ಲಿ ಸುಬ್ರಮಣಿಯನ್ ಎಂಬ ವರನು

ಹಂಸವೇಣಿ ಎಂಬ ಕನ್ಯೆಯನ್ನು ವಿವಾಹವಾಗುವುದಾಗಿ ಲಗ್ನಪತ್ರಿಕೆಯಲ್ಲಿ ಸ್ಪಷ್ಟವಾಗಿ ಉಲ್ಲೇಖವಾಗಿದೆ. ತಮಿಳುನಾಡಿನಲ್ಲಿ ಹಂಸವೇಣಿ ಎಂಬ ಹೆಸರನ್ನು ಸ್ತ್ರೀಯರು ಒಪ್ಪಿಕೊಂಡಿರುವುದಕ್ಕೆ ಇದು ಸೂಕ್ತವಾದ ದೃಷ್ಟಾಂತ. ಈಗ ಹಂಸವೇಣಿ ಶಬ್ದಕ್ಕೆ ಅರ್ಥವನ್ನು ಹುಡುಕುವುದು ನನ್ನ ಪಾಲಿಗೆ ಬಂತು. ಹಂಸವೇಣಿ ಎಂಬುದು ಕೇಳುವುದಕ್ಕೆ ಚೆನ್ನಾಗಿದೆ ಎಂದು ತಂದೆತಾಯಿಗಳು ಆ ಹೆಸರನ್ನು ಈ ಹುಡುಗಿಗೆ ಇಟ್ಟರೋ ಬೇರೆಯ ಅರ್ಥವನ್ನು ಹೊಂದಿಸಿ ಇಟ್ಟರೋ ಕಾಣೆ! ಹಂಸ ಎಂಬ ಶಬ್ದಕ್ಕೆ ಶ್ರೇಷ್ಠ ಎಂಬ ಅರ್ಥ ಒಂದಿದೆ. ಅದನ್ನು ಅನ್ವಯಿಸಿ ಶ್ರೇಷ್ಠವಾದ ಕೇಶರಾಶಿಯುಳ್ಳವಳು ಎಂದು ಹೇಳಬಹುದೇನೋ! ಅಂತೂ ತಮಿಳುನಾಡಿನ ಸ್ತ್ರೀಯರಿಗೆ ಈ ಹೆಸರು ಪ್ರಿಯವಾಗಿದೆ ಎಂದಾಯಿತು. ಇರಲಿ ಬಿಡಿ.

**ಹಕೀಕತ್** ಅರಬ್ಬೀ ಭಾಷೆಯಲ್ಲಿ ಹಕೀಕತ್ ಎಂದರೆ ಸತ್ಯ. ಹಕೀಕತ್ ನಾಮಾ ಎಂದರೆ ಸತ್ಯವನ್ನು ಕುರಿತು ಹೇಳಿಕೆಯ ಪತ್ರ. ಕನ್ನಡದಲ್ಲಿ ವ್ಯವಹಾರಗಳು ಮತ್ತು ಘಟನೆಗಳು ಎಂಬ ಅರ್ಥವೂ ಇದೆ. ಅವುಗಳ ಹಿಂದಿರುವ ಸತ್ಯಾಸತ್ಯತೆಯ ವಿಷಯವೂ ಸೂಚಿತವಾಗಿದೆ.

**ಹಗರಣ ನಗೆಯು ಬರುತಿದೆ ಜಗದ ಜಾಣರೆಲ್ಲ ಕೂಡಿ ಹಗರಣವ ಮಾಡುವುದ ಕಂಡು ನಗೆಯು ಬರುತಿದೆ** ಇಲ್ಲಿ ಹಗರಣ ಎಂಬುದು ಪ್ರಕರಣ ಎಂಬ ಸಂಸ್ಕೃತ ಶಬ್ದದ ತದ್ಭವ. ಆ ಬಗ್ಗೆ ಅನುಮಾನವಿಲ್ಲ. ಹಗರಣಕ್ಕೆ ವ್ಯಾಪಕವಾದ ಅರ್ಥವಿದೆ. ಮುಖ್ಯವಾಗಿ ನಟನೆ. ಎಲ್ಲ ವ್ಯವಹಾರದಲ್ಲಿ ಕಾಣುವ ಮಿಥ್ಯಾವ್ಯಾಪಾರದ ಸಂಪೂರ್ಣ ವ್ಯಂಗ್ಯಚಿತ್ರವಿಲ್ಲಿದೆ. ಇದೂ ಕೂಡ ಸ್ವಾರಸ್ಯವಾದ ದಾಸರ ಪದ. ನೋಡಿ: **ಪ್ರಕರಣ**

**ಹಗುರದಿಂದ ತುಂತುರು ಮಳೆಯಾಗಬಹುದು** ಇದು ಇಂಗ್ಲಿಷ್ ಭಾಷೆಯ ಹವಾಮಾನದ ವರದಿಯನ್ನನುಸರಿಸಿ ಮಾಡಿದ ಭಾಷಾಂತರದ ಹಾವಳಿ. ಆಕಾಶವಾಣಿ, ದೂರದರ್ಶನಗಳಲ್ಲಿ ಬರುವ ಈ ಬಗೆಯ ಅನುವಾದಗಳನ್ನು ಅಲ್ಲಿಯ ಅಧಿಕಾರಿಗಳು ಪುನಃ ಗಮನಿಸಬೇಕು. Drizzle ಎಂಬ ಇಂಗ್ಲಿಷಿನಲ್ಲಿರುವ ವ್ಯಾಪಕವಾದ ಅರ್ಥ ನಮ್ಮಲ್ಲಿಲ್ಲ. ಅದು ಕ್ರಿಯಾಪದವೂ ಆಗಬಹುದು. ನಾಮಪದವೂ ಆಗಬಹುದು. ಕನ್ನಡದಲ್ಲಿ ಅದು ಸಾಧ್ಯವಿಲ್ಲ. Drizzle ಎಂದರೆ very light rain ಎಂದೇ ಅರ್ಥ. Light ಶಬ್ದಕ್ಕೂ ಇಂಗ್ಲಿಷಿನಲ್ಲಿ ಬೇರೆ ಬೇರೆ ಅರ್ಥಗಳಿವೆ. ಭಾರಕ್ಕೆ ವಿರುದ್ಧವಾದುದು ಹಗುರ. Heavy rain, light rain ಎನ್ನುವುದು ಇಂಗ್ಲಿಷಿನಲ್ಲಿ ಸರಿ. ಕನ್ನಡದಲ್ಲಿ heavy rain ಭಾರಿ ಮಳೆ ಮಾಡಿದ್ದಾರೆ. ಅದು ಸರಿಯಾಗಿದೆ. ತೂಕದ ಮಳೆ ತಪ್ಪಾಗುತ್ತಿತ್ತು. Light rain ಗೆ ತುಂತುರು ಮಳೆ ಸಾಕು. ಅಥವಾ ಲಘುವರ್ಷ ಎಂಬ ಸಂಸ್ಕೃತ ಶಬ್ದವಾಗಬಹುದು. ಹಗುರ ಎಂಬುದು ಸರಿಯಲ್ಲ. ಅಲ್ಪ-ಸ್ವಲ್ಪ ಮಳೆಯಾಗಬಹುದು ಎಂದು ಹೇಳಿದರೆ ಕನ್ನಡದ ಜಾಯಮಾನಕ್ಕೆ ಹತ್ತಿರ.

**ಹಜಾಮತಿ** ಹಜಾಮ ಎಂಬುದು ಅರಬ್ಬಿಯ ಶಬ್ದ. ಅದಕ್ಕೆ ನಾಪಿತ, ನಾಯಿಂದ ಎಂದು ಅರ್ಥ. ಹಜಾಮತ ಶಬ್ದಕ್ಕೆ ಆ ಭಾಷೆಯಲ್ಲಿ ಗಡ್ಡ, ದಾಡಿ ಎಂದರ್ಥ. ಹಜಾಮತಿ ದಾಡಿ ಮತ್ತು ತಲೆ ಕೂದಲನ್ನು ಲಕ್ಷಣವಾಗಿ ಕತ್ತರಿಸುವ ಕೆಲಸ. ಇದನ್ನೇ ಕೆಲವು ಕಡೆಗಳಲ್ಲಿ ಉದ್ಯೋಗ ಎಂದು ಕರೆಯುತ್ತಾರೆ. ದಕ್ಷಿಣ ಕನ್ನಡ, ಮೈಸೂರುಗಳಲ್ಲಿ ಈ ಉದ್ಯೋಗಕ್ಕೆ ಕೆಲಸ, ಕಷ್ಟ ಎಂಬ ಶಬ್ದಗಳನ್ನು ಉಪಯೋಗಿಸುತ್ತಾರೆ. ಆ ಕಾರ್ಯಕ್ಕೆ ಒಂದು ಗೌರವ ಸೂಚಕವಾಗಿ ಉಪಯೋಗಿಸುವ ಶಬ್ದಗಳು ಅವು. ಇವು ಕ್ಷೌರ ಎಂಬ ಅರ್ಥದ ಶಬ್ದ. ಕ್ಷೌರ ಶಬ್ದಕ್ಕೆ ಕಷ್ಟ ಎಂಬ ಅರ್ಥ ಬೆಳೆದು ಬಂತು. ಆದುದರಿಂದ ಹಜಾಮತಿಗೂ ಕಷ್ಟ ಎಂಬ ಅರ್ಥ ಹೊಂದಿಕೊಂಡಿದೆ. ಸಾಮಾನ್ಯವಾಗಿ ಇದು ಕ್ಷೌರಿಕನು ತನ್ನ ಕತ್ತಿಯನ್ನು

ಹರಿತ ಮಾಡುವಾಗ ಕಾಣಿಸುವ ಅಂಗ ಚಲನೆಯನ್ನು ಅನುಕರಿಸಿ ಆಡುವ ಮಾತು; ಜೂಜುಗಾರರ ಗುಂಪಿನಲ್ಲಿ ತುಂಬ ವ್ಯಾಪಕವಾಗಿದೆ.

**ಹಡಪ** ಎಂಬುದು ಕನ್ನಡದ ಶಬ್ದ. ಅದಕ್ಕೆ ಮೂಲ ಅಡೆಪ, ಅಡಪ. ಇದಕ್ಕೆ ತಮಿಳಿನಲ್ಲಿ ಅಡೈಪ್ಪೈ, ಮಲೆಯಾಳದಲ್ಲಿ ಅಡಪ್ಪಂ, ತೆಲುಗಿನಲ್ಲಿ ಅಡಪಮು ಎಂಬ ಜ್ಞಾತಿ ಶಬ್ದಗಳಿವೆ. ಇದಕ್ಕೆ ಅಡಕೆ ಮತ್ತು ಎಲೆ, ಸುಣ್ಣ ಇವುಗಳನ್ನು ಇಟ್ಟುಕೊಂಡಿರುವ ಚೀಲ ಎಂದರ್ಥ. ನಮ್ಮ ಆದಿಕಾವ್ಯವಾದ ಪಂಪನ ಆದಿಪುರಾಣದಲ್ಲಿಯೇ **'ಚಾಮರದ, ಅಡಪದ, ಡವಕೆಯ, ಕನ್ನಡಿಯ ಪರಿಚಾರಿಕೆಯರುಂ'** ಎಂಬ ಪ್ರಯೋಗ ಕಂಡುಬರುತ್ತದೆ. (೩-೨೩ ವಚನ). ಈಚೆಗೆ ಹೊಸ ಕನ್ನಡದಲ್ಲಿ ಹಡಪ ಎಂಬ ರೂಪವನ್ನು ಈ ಶಬ್ದ ಪಡೆದಿದೆ. ಹಾಗೆಯೇ ಅರ್ಥದಲ್ಲಿಯೂ ಬದಲಾವಣೆಯಾಗಿದೆ. ಈಗ ಹಡಪ ಎಂದರೆ ಕ್ಷೌರಿಕನ ಕೆಲಸದ ಸಾಮಾನುಗಳುಳ್ಳ ಕೈಪೆಟ್ಟಿಗೆ. ಈಗೀಗ ಆತ್ಮೀಯ ಸ್ನೇಹಿತರು ತಾವು ಕಚೇರಿಗೆ ಒಯ್ಯುವ ಸಣ್ಣ ಪೆಟ್ಟಿಗೆ (Briefcase) ಗೆ ಹಡಪ ಎಂಬ ಶಬ್ದವನ್ನು ಉಪಯೋಗಿಸುವುದನ್ನು ಕೇಳಿದ್ದೇನೆ. ಆಫೀಸಿಗೆ ಹೊರಟ್ಟಿದ್ದೀಯೋ ? ಎಲ್ಲಿ ಹಡಪ ? ಎಂದು ಕೇಳುವುದುಂಟು. ಆತ್ಮೀಯರಲ್ಲದವರಲ್ಲಿ ಈ ಶಬ್ದವನ್ನು ಪ್ರಯೋಗಿಸಿದರೆ ಅಪಾಯ. ಸ್ನೇಹಕ್ಕೆ ಧಕ್ಕೆಯುಂಟಾಗುತ್ತದೆ.

**ಹತ್ತಲ್ಲ, ಹರಿಯಲ್ಲ** ಈ ಆಡುನುಡಿಯ ಶಿಷ್ಟರೂಪ ಹತ್ತುವುದಿಲ್ಲ, ಹರಿಯುವುದಿಲ್ಲ. ಹೀಗೆ ಹೇಳಿದರೆ ಯಾವುದಾದರೂ ಮಾತಿನ ಕೆಲಸಕ್ಕೆ ಮೊದಲಿಲ್ಲ, ಕೊನೆಯಿಲ್ಲ ಎಂದು ಅರ್ಥ ಅಷ್ಟೆ. ಹರಿ ಎಂದರೆ ಕೊನೆಯಾಗು ಎಂಬ ಅರ್ಥವಿದೆ. ಅದರ ಹಿಂದಿನ ರೂಪ ಪರಿ. ಹತ್ತು ಎಂದರೆ ಸೇರು, ಅಂಟು, ಪ್ರಾರಂಭಿಸು ಎಂಬ ಅರ್ಥಗಳಿವೆ.

**ಹತ್ತಿಕ್ಕು** ಈ ಕನ್ನಡ ಶಬ್ದಕ್ಕೆ ಮೇಲೇಳುತ್ತಿರುವವರನ್ನು ಏಳದಂತೆ ಮಾಡುವುದು. ಹತ್ತಿ + ಇಕ್ಕು. ಅಂಟಿ, ಜತೆಯಲ್ಲಿದ್ದು ಮೇಲೇರಿ ಕೆಳಕ್ಕೆ ಬೀಳಿಸಿ ಮತ್ತೆ ಏಳದಂತೆ ಮಾಡುವುದು. ಇದನ್ನು Nipping ಎಂಬ ಇಂಗ್ಲಿಷ್ ಶಬ್ದದಿಂದ ಸರಿಯಾಗಿ ಸೂಚಿಸಬಹುದು. ಇದು ರಾಜಕೀಯದಲ್ಲಿ ಮೊದಲಾಯಿತು. ಈಗ ಎಲ್ಲ ಕ್ಷೇತ್ರಗಳಲ್ಲಿಯೂ ವ್ಯಾಪಕವಾಗಿದೆ. ಸ್ಪಷ್ಟವಾಗಿ ಇಂಥ ಕಾರ್ಯದ ಹಿಂದೆ ಸ್ವಾರ್ಥ ಮನೆಮಾಡಿರುತ್ತದೆ. ಇದು ಇಂದಿನ ಸಾಮಾಜಿಕ ಜಾಡ್ಯ. ಇಲ್ಲಿನ ಹತ್ತಿ ಎಂಬ ಶಬ್ದ ಹಳಗನ್ನಡದ ಪತ್ತು ಶಬ್ದದಿಂದ ಬಂದದ್ದು. ಅದಕ್ಕೆ ಅಂಟು, ಹಿಂಬಾಲಿಸು, ಜತೆಯಲ್ಲಿಯೇ ಇರು ಎಂಬ ಅರ್ಥಗಳಿವೆ. ಆದರೆ ಪತ್ತಿಕ್ಕು ಎಂಬ ಶಬ್ದದ ಪ್ರಯೋಗ ಸಿಕ್ಕಿಲ್ಲ. ಆದುದರಿಂದ ಇದು ಈಚಿನ ಬೆಳವಣಿಗೆ ಇರಬೇಕು.

**ಹತ್ತೊಂಬತ್ತು** ಇದು ಸರಿಯಾದ ಶಬ್ದ. ಹತ್ತು + ಒಂದು ಕಡಿಮೆ ಹತ್ತು (ಒಂಬತ್ತು) = ಹತ್ತೊಂಬತ್ತು. ಅಲ್ಲಿ ರಕಾರದ ಒತ್ತಿಗೆ ಅವಕಾಶವೇ ಇಲ್ಲ. ಆದರೆ ಗ್ರಾಮೀಣರಲ್ಲಿ ಹತ್ರೊಂಬತ್ತು ಬಳಕೆಯಲ್ಲಿದೆ. ಇದು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಪ್ರಚಾರದಲ್ಲಿದೆ.

**ಹದ** ಇದು ಹಳಗನ್ನಡದ ಪದ ಎಂಬುದರ ಹೊಸಗನ್ನಡ ರೂಪ. ಇದಕ್ಕೆ ಹೊಂದಿಕೊಳ್ಳುವ ಪ್ರಯೋಜನಕರವಾದ ಎಂದರ್ಥ. ಹದವಾದ ಮಳೆ ಬಂತು ಎಂಬ ವಾಕ್ಯವನ್ನು ನೋಡಿ.

**ಹದಗು** ಹದುಗು = ಪದುಗು. ಈ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ಹಿಮ್ಮೆಟ್ಟು, ಹಿಂದೆ ಸರಿ; ೨. ಒಳಗೆ ಸೇರಿಕೊ, ಮರೆಯಾಗು, ಅಡಗು; ೩. ಸುಳ್ಳಾಗು; ೪. ಕುಗ್ಗು, ಕುಸಿ.* ಹದಗು ಈ ಶಬ್ದ ತಪ್ಪು. ಹುದುಗು = ಪುದುಗು. ಈ ಶಬ್ದಕ್ಕೆ ೧. ಅಧಿಕವಾಗು, ಹೆಚ್ಚಾಗು, ೨. ಉಬ್ಬು, ಉಕ್ಕು ಎಂಬ ಅರ್ಥಗಳಿವೆ. ಮಿಕ್ಕ ಅರ್ಥಗಳು ಅಷ್ಟು ಪ್ರಚಾರದಲ್ಲಿಲ್ಲ.

**ಹದಿಬದೆ** ಇದು ಸಂಸ್ಕೃತದ ಪತಿವ್ರತಾ ಎಂಬ ಶಬ್ದದ ತದ್ಭವ. ಅದೇ ಅರ್ಥ. ಕನ್ನಡದಲ್ಲಿ **'ಹದಿಬದೆಯ ಧರ್ಮ'** ಎಂಬ ಪ್ರಸಿದ್ಧವಾದ ಒಂದು ಸಾಂಗತ್ಯ ಗ್ರಂಥವಿದೆ. ಸಂಚಿಯ ಹೊನ್ನಮ್ಮನ ಈ ಕಾವ್ಯದಿಂದ ಒಂದು ವಾಕ್ಯವನ್ನು ಉದ್ಧಾರ ಮಾಡಿ ತೋರಿಸುತ್ತೇನೆ:

*ಉದಯ ಕಾಲದೊಳೆದ್ದೊಲಿದಿಷ್ಟದೈವದ*
*ಪದಗಳ ಪಾಡುವಂದದೊಳು*
*ಹದಿಬದೆಯರ ಪೆಸರ್ಗೊಂಡು ಪೊಗಳ್ವುದು*
*ವಿದಿತವ್ಯಸಲೆ ವೈದಿಕರಿಗೆ*

ಇನ್ನೂ ಸ್ಪಷ್ಟ ಅರ್ಥ ತಿಳಿಯಬೇಕಾದರೆ ಹೊನ್ನಮ್ಮನದೇ ಮತ್ತೊಂದು ಪದ್ಯವನ್ನು ನೋಡಿ.

*ದ್ಯೂತ ಕೇಳಿಯೊಳು ಅಜ್ಞಾತವಾಸದೊಳಂದು*
*ಧಾತು ಗುಂದದೆ ಪಾಂಚಾಲಿ*
*ಓತು ಪಾಂಡವರನೊಲಿಸಿ ಹದಿಬದೆಯರ*
*ಚೈತಲೆವಣಿಯೆನಿಸಿದಳು.*

**ಹದಿನೈದು** ಹತ್ತು <ಹದಿನ್ + ಐದು = ಹದಿನೈದು. ಎರಡೂ ಅಂಕಿಗಳು ಸೇರಿ ಆಗಿರುವ ಸಮಾಸ. ಆದ್ದರಿಂದ ಅದು ದ್ವಿಗುಸಮಾಸ. ದ್ವಿಗುವಿನಲ್ಲಿ ಪೂರ್ವ ಪದವು ಸಂಖ್ಯೆಯಾಗಿದ್ದರೆ ಸಾಕು. ಎರಡೂ ಸಂಖ್ಯೆಯಾದರೂ ಅದೂ ದ್ವಿಗು ಸಮಾಸವೇ.

**ಹದಿನೆಂಟಿ** ಎಂದು ಒಂದು ಬೈಗಳ ಶಬ್ದ. ಇದು ಸ್ತ್ರೀಯನ್ನು ಕುರಿತದ್ದು. ಅನೇಕರ ಸಂಬಂಧವನ್ನು ಹೊಂದಿರುವವಳು ಎಂದರ್ಥ. ಹದಿನೆಂಟು, ಇಪ್ಪತ್ತಾರು, ಇಪ್ಪತ್ತೆಂಟು, ನಾಲ್ಕಾರು, ಮೂವತ್ತಾರು ಈ ಶಬ್ದಗಳಿಗೆ ಪರ್ಯಾಯವಾಗಿ ಅನೇಕ ಎಂಬ ಅರ್ಥವೇ ಇದೆ ಕನ್ನಡದ ಆಡುಮಾತಿನಲ್ಲಿ. ಆದುದರಿಂದ ಇದು ಬಹು ಸಮರ್ಥವಾದ ಬೈಗಳು.

**ಹದ್ದು** ಈ ಶಬ್ದ ಕನ್ನಡದ್ದು. ಇದು ಹಿಂದಿನ ಕನ್ನಡದಲ್ಲಿ ಅಂದರೆ ಹಳೆಯ ಕನ್ನಡದಲ್ಲಿ ಪರ್ದು ಎಂದಿದ್ದಿತು. ಅದೇ ಹೊಸಗನ್ನಡದಲ್ಲಿ ಹದ್ದು ಎಂದಾಗಿದೆ. ತದ್ಭವ ಎಂಬ ಶಬ್ದವನ್ನು ಹೆಚ್ಚಾಗಿ ಸಂಸ್ಕೃತದಿಂದ ಬದಲಾಗಿ ಬಂದ ಕನ್ನಡ ಶಬ್ದಗಳಿಗೆ ಉಪಯೋಗಿಸುತ್ತಾರೆ. ಇದು ಅಂಥ ಶಬ್ದವಲ್ಲ.

**ಹನುಮ ಶಬ್ದದ ತದ್ಭವ ಏನು?** ಹನುಮ ಶಬ್ದದ ತದ್ಭವ **ಅಣುವ.** ಸಂಸ್ಕೃತದಲ್ಲಿ ಹನುಮತ್ ಶಬ್ದ ಪುಲ್ಲಿಂಗ ನಾಮಪದ. ಇದಕ್ಕೆ ಹನುಮಂತ, ಆಂಜನೇಯ ಎಂದರ್ಥ. ಹನೂಮಾನ್ ಎಂಬ ರೂಪವೂ ಉಂಟು. ಈ ಹೆಸರು ಬಂದುದಕ್ಕೆ ಒಂದು ಕಥೆಯಿದೆ. ಇಂದ್ರನು ತನ್ನ ವಜ್ರಾಯುಧದಿಂದ ಆಂಜನೇಯನ ಕೆನ್ನೆಗೆ ಹೊಡದನಂತೆ. ಹನೂ = ಕಪೋಲದ ಕೆಳಗಿನ ಭಾಗ. ಆಗ ಅವನ ಮೂತಿ ಸೊಟ್ಟಾಯಿತು. ಆದ್ದರಿಂದ ಅವನಿಗೆ ಹನುಮಂತನೆಂಬ ಹೆಸರು ಎಂದು ರಾಮಾಯಣದ ಉತ್ತರ ಕಾಂಡದಲ್ಲಿ ಬರುತ್ತದೆ.

**ಹಪಹಪಿ** ಎಂದರೆ ಆಸೆ, ಬಯಕೆ. ಮರಾಠೀ ಭಾಷೆಯ ಹಪಾಪಿ ಎಂಬ ಶಬ್ದದಿಂದ ಬಂದಿದೆ.

**ಹಬ್ಬ** ಇದು ಕನ್ನಡ ಶಬ್ದ. ಇದಕ್ಕೆ ಹಿಂದೆ ಹಳಗನ್ನಡದಲ್ಲಿ ಸಂಸ್ಕೃತದ ಪರ್ವ ಶಬ್ದವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಆ ಶಬ್ದದ ಈಗಿನ ರೂಪ ಹಬ್ಬ. ಹಬ್ಬ ಎಂದರೆ ಪರ್ವದಿನ. ಸಂಸ್ಕೃತದಲ್ಲಿ ಪರ್ವನ್ ಶಬ್ದಕ್ಕೆ ಉತ್ಸವ ಎಂದರ್ಥ. ಒಂದು ಮಾಸದಲ್ಲಿ ಐದು ಪರ್ವಕಾಲಗಳಿವೆ. ಅವು ಅಷ್ಟಮಿ, ಚತುರ್ದಶಿ, ಪೂರ್ಣಿಮೆ, ಅಮಾವಾಸ್ಯೆ ಮತ್ತು ಸಂಕ್ರಮಣ. ಪರ್ವನ್ ಶಬ್ದಕ್ಕೆ ಇತರ ಅರ್ಥಗಳೂ ಇವೆ. ಕನ್ನಡದಲ್ಲಿ ಹಬ್ಬ, ಉತ್ಸವದಿನ ಎಂದಷ್ಟೇ ಅರ್ಥದಲ್ಲಿ ಉಪಯೋಗಿಸುತ್ತೇವೆ. 'ಬಾ, ನಿನಗೆ ಹಬ್ಬ ಮಾಡುತ್ತೇನೆ' ಎಂದಾಗ ತಕ್ಕ ಶಿಕ್ಷೆ ಎಂದರ್ಥ.

**ಹಬ್ಬಕ್ಕೆ ತಂದ ಹರಕೆಯ ಕುರಿ** ಇದು ಬಹು ಅರ್ಥವತ್ತಾದ ವಚನ. ಹರಕೆ ಎಂದರೆ ದೇವರು ತಮಗೆ ಶುಭವನ್ನು ಮಾಡಿದರೆ ದೇವರಿಗೆ ಏನಾದರೂ ಅರ್ಪಣೆ ಮಾಡುತ್ತೇವೆ

ಎಂದು ಹರಸಿಕೊಳ್ಳುವುದು. ಹರಕೆಯ ಕುರಿ ಆ ದೇವರಿಗೆ ಬಲಿ ಕೊಡಲು ತಂದ ಕುರಿ. ಹಬ್ಬದಲ್ಲಿ ದೇವರಿಗೆ ಕುರಿಯನ್ನು ಬಲಿ ಕೊಟ್ಟ ಮೇಲೆ ಅದನ್ನು ಅಡುಗೆ ಮಾಡಿ ಎಲ್ಲರೂ ಊಟ ಮಾಡುವುದಕ್ಕೆ ಸಿದ್ಧಪಡಿಸುವ ಉತ್ಸವ. ಹೀಗೆ ಹರಕೆಯ ಕುರಿಯನ್ನು ಬಲಿ ಕೊಡುವುದಕ್ಕೆ ತಂದುದೆಂಬುದು ಕುರಿಗೆ ತಿಳಿಯದು. ಅದು ತಾನು ಬದುಕಬೇಕಾದರೆ ತಿನ್ನಬೇಕು ತಾನೆ. ಆದುದರಿಂದ ಬದುಕುತ್ತೇನೆಂಬ ಆಸೆಯಿಂದ ಹಬ್ಬದ ತೋರಣದ ಸೊಪ್ಪನ್ನು ಮೇಯುತ್ತದೆ. ಅದು ಎಷ್ಟು ವಿಚಿತ್ರವಾದುದು ಎಂದು ಹೇಳಿ ಅದನ್ನೇ ಮಾನವನ ಬಾಳಿಗೂ ಅನ್ವಯಿಸುತ್ತಾರೆ ಬಸವಣ್ಣನವರು. (ವಚನ ೩೫.)

**ಹಮಾಲ** ಇದು ಅರಬ್ಬಿಯಲ್ಲಿ **ಹಮ್ಮಾಲ್** ಎಂಬಂತೆ ಇರುವ ಶಬ್ದ. ಹಿಂದಿಯಲ್ಲಿಯೂ ಹಾಗೆಯೇ ಇದೆ. ಇದಕ್ಕೆ ಭಾರವನ್ನು ಅಂದರೆ ಭಾರವಾದ ಸಾಮಾನುಗಳನ್ನು ಹೊರುವ ಆಳು, ಕೂಲಿ ಎಂದರ್ಥ. ಮರಾಠಿಯಲ್ಲಿಯೂ ಹಮಾಲ್ ಎಂದೇ ಪ್ರಯೋಗದಲ್ಲಿದೆ. ಕನ್ನಡ ದೇಶದಲ್ಲಿ ಹೆಚ್ಚಾಗಿ ರೈಲ್ವೇ ನಿಲ್ದಾಣಗಳಲ್ಲಿಯೂ, ಬಸ್ ನಿಲ್ದಾಣಗಳಲ್ಲಿಯೂ ಈ ಶಬ್ದವನ್ನು ಕೇಳುತ್ತೇವೆ. ಹಮಾಲಿ ಎಂಬ ರೂಪವೂ ಪ್ರಯೋಗದಲ್ಲಿದೆ. ಅದಕ್ಕೆ ಕೂಲಿ ಎಂದೂ ಕೂಲಿಯ ಕೆಲಸ ಎಂದೂ ಎರಡು ಅರ್ಥಗಳಿವೆ.

**ಹಮ್ಮಿಣಿ** ಇದು ನಮಗೆ ಮರಾಠಿಯಿಂದ ಬಂದಿರುವ ಶಬ್ದ. ಇದಕ್ಕೆ ಹುರಿನೂಲಿನಿಂದ ಬಲೆಬಲೆಯಾಗಿರುವಂತೆ (Net) ಉದ್ದವಾಗಿ ಹೆಣೆದಿರುವ ಚೀಲ ಎಂದರ್ಥ. ನಾನು ನಮ್ಮ ಮಾವನವರು ಉಪಯೋಗಿಸುತ್ತಿದ್ದ ಒಂದು ರೂಪಾಯಿ ನಾಣ್ಯ ಮಾತ್ರ ಹಾಕಬಹುದಾಗಿದ್ದ ನೂರು ನಾಣ್ಯಗಳನ್ನು ಹಿಡಿಯುವ ಹಮ್ಮಿಣಿಯನ್ನು ಕಣ್ಣಾರೆ ನೋಡಿದ್ದೆ. ಈಗ ಈ ಬಗೆಯ ಹಮ್ಮಿಣಿಗಳು ಚರಿತ್ರೆಯ ವಸ್ತುವಾಗಿವೆ. ಈ ಶಬ್ದಕ್ಕೆ ಕನ್ನಡದಲ್ಲಿ ಹಮ್ಮೀಣಿ, ಹಿಮ್ಮಣಿ, ಹಿಮ್ಮೇಣಿ ಎಂಬ ಪರ್ಯಾಯಗಳಿವೆ. ಇದು ಒಂದು ಬಗೆಯ ಥೈಲಿ, ಥೈಲಿ ಎಂದರೆ ಹಣವಿಡುವ ಚೀಲ. ಈ ಶಬ್ದವು ಸಂಸ್ಕೃತದ ಸ್ಥಗಿಕಾ ಎಂಬುದರಿಂದ ಬಂದಿದೆ. ಸ್ಥಗೀ ಪ್ರಾಕೃತದಲ್ಲಿ ಥಇಆ ಎಂದಾಗುತ್ತದೆ. ಅದೇ ಬಳಿಕ ಥಯಲಿಯಾ ಆಗಿ ಕೊನೆಗೆ ಥೈಲಿ ಆಗಿದೆ.

**ಹಮ್ಮಿಕೊಳ್ಳುವುದು** ಹಮ್ಮು ಎಂಬ ಶಬ್ದಕ್ಕೆ ಹಗ್ಗವನ್ನು ಹೊಸೆಯುವುದು ಎಂದು ಅರ್ಥವಿದೆ. ಈ ಶಬ್ದಕ್ಕೆ ಉತ್ತರ ಕರ್ನಾಟಕದಲ್ಲಿ ಯಾವುದಾದರೂ ಕಾರ್ಯದ ಏರ್ಪಾಟಿಗೆ ಸಂಬಂಧಿಸಿದ ಅರ್ಥವಿದೆ. ಅದೂ ಅಲ್ಲದೆ ಅಹಂ ಎಂಬುದರ ತದ್ಭವವಾಗಿ ಹಮ್ಮು ಎಂಬ ಶಬ್ದ ರೂಪವಿದೆ. ಇದು ಹೆಚ್ಚಾಗಿ ಗ್ರಾಮ್ಯ ಪ್ರಯೋಗವಾಗಿ ಆಡುಮಾತಿನಲ್ಲಿದ್ದರೂ ಬಸವಣ್ಣನವರ ವಚನಗಳಲ್ಲಿ **ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು** ಎಂಬಂಥ ಕಡೆ ಸಾಹಿತ್ಯದಲ್ಲಿ ಕಾಣಿಸಿಕೊಂಡಿದೆ. ಜಂಭ, ಹೆಮ್ಮೆ ಎಂದೇ ಅರ್ಥ. ಎರಡಕ್ಕೂ ಪರಸ್ಪರ ಸಂಬಂಧವಿಲ್ಲ.

**ಹರತಾಳ** ಇದೊಂದು ಚರಿತ್ರೆಯುಳ್ಳ ಶಬ್ದ. ಇದರ ಮೂಲ ಹಿಂದಿಯ **ಹಡತಾಲ** ಎಂಬ ಶಬ್ದ. ಹಿಂದಿಯಲ್ಲಿ ಆ ಶಬ್ದಕ್ಕೆ ಸಾಮೂಹಿಕವಾಗಿ ಎಲ್ಲ ಕೆಲಸ ಕಾರ್ಯಗಳನ್ನೂ ನಿಲ್ಲಿಸುವುದು, ಆ ಮೂಲಕ ಅಸಂತೋಷವನ್ನು ವ್ಯಕ್ತಪಡಿಸುವುದು ಎಂದು ಅರ್ಥ. ಇದರ ವ್ಯುತ್ಪತ್ತಿಯನ್ನು ಹಿಂದೀಕೋಶಗಳು ಸ್ಪಷ್ಟಪಡಿಸಿಲ್ಲ. ಮರಾಠಿಯಲ್ಲಿಯೂ ಹರತಾಳ ಶಬ್ದವಿದೆ. ಇದೇ ಅರ್ಥ. ಮರಾಠಿಯ ವಿದ್ವಾಂಸರು ಈ ಶಬ್ದವನ್ನು ಕನ್ನಡದ ಹೋರೆ = ಕೆಲಸ + ತಾಳು = ತಡಮಾಡು ಎಂಬುದರಿಂದ ವ್ಯುತ್ಪತ್ತಿ ಮಾಡುತ್ತಾರೆ. ಇದು ವಿಚಿತ್ರವಾಗಿ ಕಾಣುತ್ತದೆ. ಬಾಜಾರಬಂದೇ, ಬಂದ್, ಮುಚ್ಚೇಟೆ ಮುಂತಾದ ಶಬ್ದಗಳೆಲ್ಲ ಆಮೇಲಿನಿಂದ ಸೃಷ್ಟಿಯಾದವು. ಇದು ಹಿಂದೀ ಶಬ್ದವೇ ಹಡತಾಲ ಎಂದು ತೀರ್ಮಾನಿಸಬೇಕು. ಈ

ಬಗೆಯ ವ್ಯತ್ಯಾಸ, ಡಕಾರ ರಕಾರವಾಗುವುದು ಈ ಭಾಷೆಗಳಲ್ಲಿ ಸಾಮಾನ್ಯ. ಉದಾ. ಬಡೋದ - ಬರೋಡ.

**ಹರಾಕಿರಿ** ಇದು ಜಪಾನೀ ಭಾಷೆಯ ಶಬ್ದ. ಜಪಾನೀ ಭಾಷೆಯಲ್ಲಿ ಹರ = **ಹೊಟ್ಟೆ, ಕಿರಿ =ಸೀಳು.** ಪ್ರಾಚೀನ ಕಾಲದಲ್ಲಿ ಜಪಾನಿನ ಸಿರಿವಂತರು ತಮ್ಮ ಅಧೀನದಲ್ಲಿ ಹೊಂದಿರುತ್ತಿದ್ದ ಸೈನಿಕರ ಸಮೂಹಕ್ಕೆ **ಸಾಮುರೈ** ಎಂಬ ಹೆಸರಿತ್ತು. ಅವರು ತಮ್ಮ ಸ್ವಾಮಿಭಕ್ತಿಯ ಪ್ರದರ್ಶನಕ್ಕಾಗಿ ಒಡೆಯನು ಹೇಳಿದಾಗ ಕತ್ತಿಯಿಂದ ತಮ್ಮ ಹೊಟ್ಟೆಯನ್ನು ಸೀಳಿಕೊಂಡು ಸಾಯುತ್ತಿದ್ದರು. ಇದಕ್ಕೆ ಹರಾಕಿರಿ ಎಂಬ ಹೆಸರಿದೆ. ಈ ಆತ್ಮಹತ್ಯೆ ತನ್ನ ಗೌರವವನ್ನು ಉಳಿಸಿಕೊಳ್ಳುವುದಕ್ಕಾಗಿ ಇರಬಹುದು ಅಥವಾ ನ್ಯಾಯಾಲಯದ ಶಿಕ್ಷೆಗೆ ಪ್ರತಿಯಾಗಿ ತಾವೇ ಕೈಗೊಳ್ಳುತ್ತಿದ್ದ ಶಿಕ್ಷೆಯಾಗಿರಬಹುದು. ನಮ್ಮ ದೇಶದ ಚಾರಿತ್ರಿಕ ನಡವಳಿಯಾದ ಜೋಳವಾಳಿ, ವೇಳೆವಾಳಿಗಳ ಕಥೆಗಳನ್ನು ಇದು ನೆನಪಿಗೆ ತರುತ್ತದೆ.

**ಹರಿಕಾರ** ಎಂದರೆ ಬೇಗ ಓಡುವವನು. ವರ್ತಮಾನವನ್ನು ಎಲ್ಲರಿಗಿಂತ ಮುಂಚೆ ಒಯ್ಯುವ ಸೇವಕ. ಅರಮನೆಗಳಲ್ಲಿ ಇದು ಒಂದು ಮುಖ್ಯವಾದ ಸ್ಥಾನವಾಗಿತ್ತು ಹಿಂದೆ. ಹರಿಕಾರ ಎಂಬುದನ್ನು ಆಲಂಕಾರಿಕವಾಗಿಯೂ ಉಪಯೋಗಿಸುತ್ತಾರೆ. ಈ ಪ್ರಯೋಗ ಈಚೀಚೆಗೆ ಪ್ರಧಾನವಾಗುತ್ತಿದೆ. ಇಂಗ್ಲಿಷಿನ Forerunner, Harbinger, Herald, Precursor ಎಂಬ ಶಬ್ದಗಳಿಗೆ ಸರಿಸಮಾನವಾಗಿ ಉಪಯೋಗಿಸುತ್ತಾರೆ. **ಗೋಪಾಲಕೃಷ್ಣ ಅಡಿಗರು ನವ್ಯಪಂಥದ ಹರಿಕಾರರಾಗಿದ್ದರು,** ಎಂಬ ವಾಕ್ಯವನ್ನು ಗಮನಿಸಿ.

**ಹರಿಸುಟಗೆ** ಎಂಬುದು ಅತ್ಯಂತ ಅಪೂರ್ವವಾದ ಶಬ್ದ ಎಂಬ ಬಗ್ಗೆ ಅನುಮಾನವೇ ಇಲ್ಲ. ಈ ಶಬ್ದ ಚಾಮರಸನ ಪ್ರಭುಲಿಂಗಲೀಲೆ ಎಂಬ ಗ್ರಂಥದಲ್ಲಿ ಪ್ರಯೋಗವಾಗಿದೆ. ಅಲ್ಲಿ ಹರಿಸುಟಿ, ಹರಿಸುಟಗೆ ಎಂಬ ಎರಡು ರೂಪಗಳು ಕಂಡುಬರುತ್ತವೆ. ಮೊದಲು ಹರಿಸುಟಿ ಎಂಬ ಶಬ್ದವು ಬರುವ ಪ್ರಯೋಗವನ್ನು ಗಮನಿಸೋಣ.

> *"ಬೀಳುತೇಳುತಲಿ ಹಾಡುತಲಿ*
> *ನಲಿನಲಿದು ಹರಿಸುಟಿಯಾಡುತಲಿ*
> *ನಾನಾ ವಿನೋದವ ಮಾಡುತಿರ್ದನು*
> *ಜಗದೊಳಾ ಪ್ರಭು ಲಿಂಗಲೀಲೆಯಲಿ"* *(೨೨-೩೫)*

ಪ್ರಭುದೇವನು ಲಿಂಗಲೀಲೆ ಎಂಬ ಆಟವನ್ನು ಆಡುತ್ತಿದ್ದನು. ಬೀಳುತ್ತ ಏಳುತ್ತ, ಹಾಡುತ್ತ, ಹರಿಸುಟಿ ಎಂಬ ಆಟವನ್ನು ಆಡುತ್ತ ಇದ್ದನು. ಇದು ಒಂದು ಆಟ, ಒಬ್ಬನು ಓಡುತ್ತ ಇತರರು ತನ್ನನ್ನು ಹಿಡಿಯಬೇಕೆಂದು ಆಹ್ವಾನಿಸುತ್ತ ಇರುವ ಆಟ. ಈಗಿನ ಜೂಟಾಟ ಇದ್ದಂತೆ. ಅಂದರೆ ಪ್ರಭು ತನ್ನ ಮಾಯೆಯನ್ನು ಇತರರು ಅರ್ಥ ಮಾಡಿಕೊಳ್ಳಲು ನೀಡಿದ ಆಹ್ವಾನದಂತೆ ಇದೆ. ಆದರೆ ಅವನು ಯಾರೆಂದು ಯಾರಿಗೂ ತಿಳಿಯಲೇ ಇಲ್ಲ. ಈ ಪದ್ಯವು ಪ್ರಭುದೇವನಿಗೆ ಸಂಬಂಧಪಟ್ಟದ್ದೆ ಇದೆ. ಹರಿಸುಟಗೆ ಎಂಬ ಶಬ್ದವು ಮಾಯೆಯ ಜೀವನಕ್ಕೆ ಅಂಟಿಕೊಂಡಂತೆಯೂ ಪ್ರಭುಲಿಂಗಲೀಲೆಯಲ್ಲಿ ಮತ್ತೊಂದು ಕಡೆ ಪ್ರಯೋಗವಾಗಿದೆ. ಮಾಯೆ ಹೇಳುವ ಮಾತು ಇದು:

> *"ಹರಿಯನೆದೆಯನು ಮೆಟ್ಟಿದೆನು ಶಂ*
> *ಕರನನರ್ಧಾಂಗದೊಳು ನೆಟ್ಟನೆ*
> *ಹರಿಸುಟಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ"* *(೭-೫೭).*

ಈ ಕಾವ್ಯದಲ್ಲಿ ಮಾಯೆ ಪಾರ್ವತಿಯ ಒಂದು ಶಕ್ತಿಯ ಅವತಾರ. ಅವಳು ಈಶ್ವರನೊಡನೆ ಅರ್ಧಾಂಗಿಯಾಗಿ ಅರ್ಧನಾರೀಶ್ವರ ಸ್ವರೂಪದಲ್ಲಿದ್ದರೂ ಈಶ್ವರನನ್ನೇ

ತನ್ನ ಮಾಯೆಗೆ ಒಳಗು ಮಾಡಿದವಳು. ಈಶ್ವರ ಓಡಾಟವಾಡುತ್ತಿದ್ದನೇ ಹೊರತು ಅವಳ ಮಾಯೆಯನ್ನು ಅರ್ಥ ಮಾಡಿಕೊಳ್ಳಲಿಲ್ಲ - ಎಂಬುದು ಅವಳ ವಿವರಣೆ. ಈ ಎರಡು ಕಡೆಗಳಲ್ಲಿಯೂ ಇರುವ ಶಬ್ದ ಒಂದೇ ಎಂಬ ಬಗ್ಗೆ ಅನುಮಾನವಿಲ್ಲ. ಹರಿಸುಟಿಗೆ ಎಂಬ ಶಬ್ದದಲ್ಲಿ ಎರಡು ಶಬ್ದಗಳು ಅಡಗಿವೆ. ಹರಿ + ಸುಟಿಗೆ. ಹರಿ ಎಂಬುದು ಪರಿ ಎಂಬ ಹಳಗನ್ನಡದ ನಡುಗನ್ನಡ ರೂಪ. ಅದು ಪಜೆ ಎಂಬ ಶಬ್ದದಿಂದ ಬೇರೆಯಾದುದು. ಆದ್ದರಿಂದ ಆ ಶಬ್ದದ ಅರ್ಥ ಓಡು, ಓಡಾಡು ಎಂದೇ ಎಂಬುದು ನಿಶ್ಚಯ. ಹಳಗನ್ನಡದಲ್ಲಿ ಸುಟ್ಟು ಎಂಬ ಧಾತುವಿದೆ. ಇದಕ್ಕೆ ತೋರ್ಬೆರಳಿನಲ್ಲಿ ತೋರಿಸು, ಗುರುತುಹಿಡಿ ಎಂದರ್ಥ. ಸುಟ್ಟುಂಬೆ ಎಂದರೆ ತೋರುಬೆರಳು. ಸುಟ್ಟು ಶಬ್ದಕ್ಕೆ ಇಗೆ ಪ್ರತ್ಯಯ ಸೇರಿದರೆ ಸುಟ್ಟು + ಇಗೆ = ಸುಟ್ಟಿಗೆ ಆಗುತ್ತದೆ. ಅದೇ ಆ ಬಳಿಕ ಸುಟಿಗೆ ಆಗಿದೆ. ಹರಿ + ಸುಟಿಗೆ = ಓಡಾಟದಲ್ಲಿ ಗುರುತಿಟ್ಟು ತೋರಿಸುವುದು.

**ಹರೆ** ಎಂಬುದು ಪರೆ ಎಂಬ ಶಬ್ದದ ಹೊಸಗನ್ನಡ ರೂಪ. ಹರೆಯುವುದು ಎಂದರೆ ಹರಡುವುದು, ವಿಸ್ತಾರವಾಗಿ ಹಬ್ಬಿಕೊಳ್ಳುವುದು ಎಂದರ್ಥ. ಇದಕ್ಕೆ ಇತರ ಅರ್ಥಗಳೂ ಇವೆ. ೧. ಚದರು, ಕೆದರು, ೨. ಇಲ್ಲವಾಗು ೩. ತೇಕು, ತೆವಳು ಎಂದೂ ಅರ್ಥವಿದೆ. ಆದರೆ ಈ ಶಬ್ದದ ಪ್ರಯೋಗ ಅಷ್ಟು ಪ್ರಚಾರದಲ್ಲಿಲ್ಲ.

**ಹರ್ಯಕ್ಷ** ಈ ಸಂಸ್ಕೃತ ಶಬ್ದಕ್ಕೆ ಸಿಂಹ ಎಂದರ್ಥ. ಹಳದಿಯ ಬಣ್ಣದ ಕಣ್ಣುಗಳಿವೆ ಎಂದು ಈ ಹೆಸರು ಬಂದಿದೆಯಂತೆ. **ಹರಿಣೀ ಕಪಿಲ ವರ್ಣೇಽಕ್ಷಿಣೀ ಅಸ್ಯ ಇತಿ ಹರ್ಯಕ್ಷಃ** ಸಿಂಹಕ್ಕೆ ಸಂಸ್ಕೃತದಲ್ಲಿ ಇತರ ಹೆಸರುಗಳೂ ಇವೆ. ಮೃಗೇಂದ್ರ, ಪಂಚಾಸ್ಯ, ಕೇಸರೀ, ಹರಿ, ಕಂಠೀರವ, ಮೃಗರಿಪು ಇತ್ಯಾದಿ.

**ಹಲಧರ, ಹಲಧರರೂಪ** ಹಲ ಎಂದರೆ ನೇಗಿಲು. ಹಲಧರ ಎಂದರೆ ನೇಗಿಲನ್ನು ಆಯುಧವಾಗಿ ಹೊಂದಿರುವ ಬಲರಾಮ, ಹಲಧರರೂಪ. ಜಯದೇವ ಕವಿಯ ಗೀತಗೋವಿಂದವೆಂಬ ಕಾವ್ಯದಲ್ಲಿ ಈ ಶಬ್ದವು ಪ್ರಯೋಗವಾಗಿದೆ.

ಮೊದಲನೆಯ ಅಷ್ಟಪದಿಯ ೮ನೆಯ ಶ್ಲೋಕ ಇದು.

***ವಹಸಿ ವಪುಷಿ ವಿಶದೇ ವಸನಂ ಜಲದಾಭಂ***
***ಹಲಹತಿಭೀತಿಮಿಲಿತ ಯಮುನಾಭಂ***
***ಕೇಶವಧೃತ ಹಲಧರರೂಪ***
***ಜಯ ಜಗದೀಶ ಹರೇ!!***

ಹರಿಯೇ, ಕೇಶವನೇ, ಮೋಡದ ಹಾಗೆ ನೀಲಿಯ ಬಣ್ಣದ ವಸ್ತ್ರವನ್ನು ಧರಿಸಿಕೊಂಡಿರುವ ನೀನು ಹೇಗೆ ಕಾಣಿಸುತ್ತೀಯೆ ಎಂದರೆ, ನಿನ್ನ ಹಲಾಯುಧಕ್ಕೆ ಯಮುನಾ ನದಿಯೇ ಹೆದರಿ ಬಂದು ನಿನ್ನ ಸೇವೆಗೆ ಸಿದ್ಧವಾಗಿ ನಿನ್ನನ್ನು ಆಲಿಂಗಿಸಿಕೊಂಡಿರುವಂತೆ ಕಾಣುತ್ತದೆ. ಹೀಗೆ ಬಲರಾಮನಾಗಿ ನೀನು ಗೆಲವನ್ನು ಪಡೆದೆ ಕೃಷ್ಣನೇ. ಇದು ಅರ್ಥ. ಇದನ್ನು ನಾಟ್ಯದಲ್ಲಿ ಸೊಗಸಾಗಿ ಅಭಿನಯಿಸಬಹುದು.

**ಹಲವು, ವಿವಿಧ, ಬಗೆಬಗೆ, ಅನೇಕ** ಹಲವು, ಅನೇಕ ಈ ಎರಡನ್ನೂ ಒಂದು ಗುಂಪನ್ನಾಗಿ ಮಾಡಬಹುದು. ಇಂಗ್ಲಿಷಿನ Many ಎಂಬ ಶಬ್ದಕ್ಕೆ ಇವು ಸಮಾನವಾದ ಅರ್ಥವನ್ನು ನೀಡುತ್ತವೆ. ವಿವಿಧ, ಬಗೆಬಗೆ, ನಾನಾಬಗೆ ಇವು ಮೂರನ್ನೂ ಬೇರೆ ಗುಂಪಾಗಿ ಮಾಡಬಹುದು. ಇಂಗ್ಲಿಷಿನ Variety ಶಬ್ದಕ್ಕೆ ಸಮಾನ ಅರ್ಥವನ್ನು ಇವು ನೀಡುತ್ತವೆ.

**ಹಲಾಲ್‌ಟೋಪಿ:** ದಗಲ್‌ಬಾಜಿ. ದಗಲ್ ಎಂದರೆ ಮೋಸ. ಹಿಂದೀ, ಮರಾಠೀ ಭಾಷೆಗಳಲ್ಲಿ ಈ ಅರ್ಥ. ದಗಲ್‌ಬಾಜಿ - ಮೋಸಗಾರ. ಇದೂ ಅಲ್ಲಿಂದಲೇ ಬಂದುದು.

ಮೋಸಗಾರನನ್ನು ಕನ್ನಡದಲ್ಲಿ ದಗಲ್‌ಬಾಜಿ ಮನುಷ್ಯ ಎಂದು ಕರೆಯುತ್ತಾರೆ. ಹಲಾಲಖೋರ ಎಂಬ ಶಬ್ದವು ಮಲ ಗುಡಿಸುವವನಿಗೆ ಅನ್ವಯಿಸುವ ಶಬ್ದ. ಕಕ್ಕಸು ಗುಡಿಸುವವನಿಗೆ ಈ ಶಬ್ದವನ್ನು ಅನ್ವಯಿಸುತ್ತಾರೆ. ಇದು ಟೋಪಿ ಎಂಬ ಶಬ್ದದ ಜೊತೆ ಸೇರುವುದಿಲ್ಲ. **ಹಲಾಲ್‌ಟೋಪಿ** ಎಂದರೆ ಬೇಜವಾಬ್ದಾರಿಯಾದ ವ್ಯಕ್ತಿ. ಯಾವ ಹೊಣೆಯನ್ನೂ ಹೊರದವನು ಎಂಬ ಅರ್ಥವಿದೆ. ಇದು ಹಿಂದೀ ಭಾಷೆಯ **ಆಲಲ್ ಟಪ್ಪೂ** ಎಂಬ ಶಬ್ದದಿಂದ ಬಂದಿದ್ದು. ಅದಕ್ಕೆ ಸಂಬಂಧವಿಲ್ಲದ ಎಂದರ್ಥ. ಇದು ಕನ್ನಡದಲ್ಲಿ ವ್ಯಾಪಕವಾಗಿ ಪ್ರಯೋಗದಲ್ಲಿರುವ ಶಬ್ದ.

**ಹಲ್ಲಿ** ಹಲ್ಲಿ ಎಂಬುದು ಹಳಗನ್ನಡದ ಪಲ್ಲಿ ಶಬ್ದದಿಂದ ಬಂದುದು. ಸಂಸ್ಕೃತದ ಪಲ್ಲೀ ಎಂಬ ಶಬ್ದದಿಂದ ಬಂದಿದೆ. ಪಲ್ಲೀ ಎಂದರೆ ಸಂಸ್ಕೃತದಲ್ಲಿ *೧. ಸಣ್ಣ ಮನೆ, ಗುಡಿಸಲು ೨. ಚಿಕ್ಕ ಗ್ರಾಮ, ಹಳ್ಳಿ ೩. ಹಲ್ಲಿ ಎಂಬ ಹಲವು ಅರ್ಥಗಳಿವೆ.* ಹಲ್ಲಿಗೆ ಸಂಸ್ಕೃತದಲ್ಲಿ **ಗೃಹಕೋಕಿಲಾ** ಎಂಬ ತುಂಬ ಗೌರವದ ಹೆಸರಿದೆ. ಹಲ್ಲಿ ಶಕುನವನ್ನು ಸೂಚಿಸುವ ಪ್ರಾಣಿ. ಹಳ್ಳಿಯ ಜನರೂ ಪ್ರಾಚೀನ ಸಂಪ್ರದಾಯದವರೇ. 'ಪಲ್ಲೀ ಪತನ ಫಲಂ' ಎಂಬ ಪಂಚಾಂಗದ ಭಾಗದಲ್ಲಿ ನಂಬಿಕೆಯುಳ್ಳವರಾಗಿದ್ದರೆ, ಹಲ್ಲಿ ಬಲಭಾಗದಲ್ಲಿ ಲೊಚಗುಟ್ಟಿದರೆ ಅಶುಭ, ಎಡಭಾಗದಲ್ಲಿ ಲೊಚಗುಟ್ಟಿದರೆ ಶುಭ ಎಂದು ಜನ ನಂಬುತ್ತಾರೆ. ಕನಕದಾಸರು, **'ದೂರಿತು ಬಲದ ಭಾಗದಿ ಪಲ್ಲಿ'** ಎಂದು ಮೋಹನತರಂಗಿಣಿಯಲ್ಲಿ (೬-೨೫) ಅಪಶಕುನವನ್ನು ಸೂಚಿಸಿದ್ದಾರೆ. ಹಲ್ಲಿ ಇತರ ಶಕುನಗಳನ್ನೂ ಸೂಚಿಸುತ್ತದೆ.

**ಹಸಿರು** ಎಂಬ ಶಬ್ದಕ್ಕೆ ಮೂಲ ಪಸುರ್ ಎಂಬ ಹಳಗನ್ನಡ ಶಬ್ದ. ಪಸುರ್ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. *೧. ಪಚ್ಚೆಯ ಬಣ್ಣ. ೨. ಹಳದಿ ಬಣ್ಣ. ೩. ಕಪ್ಪು ಬಣ್ಣ ೪. ಒಂದು ಬಗೆಯ ರತ್ನ, ಮರಕತ ೫. ಹೊಸತನ ೬. ಪ್ರಾಯದ ಕೆಚ್ಚು* ಇತ್ಯಾದಿ. ಹಚ್ಚ ಹಸಿರು ಎಂಬುದು ದ್ವಿರುಕ್ತಿ. ಹಸಿರು + ಹಸಿರು = ಹಚ್ಚಹಸಿರು ಎಂದು ಇದರ ವ್ಯುತ್ಪತ್ತಿ. ತುಂಬ ಹಸಿರು ಬಣ್ಣ ಎಂದು ಅದರ ಅರ್ಥ. ಹೊಚ್ಚಹಸಿರು ಶಬ್ದ ಸರಿಯಲ್ಲ; ತಪ್ಪು. ಹಸಿರು ತರಕಾರಿ = ಸೊಪ್ಪು ಎಂದು ಈ ಬಗ್ಗೆ ಕೆಲವರು ಉಪಯೋಗಿಸುವ ಮಾತಿದೆ. ಇದು ಲಾಲ್ ತರಕಾರಿ = ಮಾಂಸ ಎಂಬ ಶಬ್ದದ ಸಾಮ್ಯದಿಂದ ಬಂದಂತಿದೆ.

**ಹಸೆಮಣೆ** ಇದು ಹಳಗನ್ನಡದ **ಪಸೆವಣೆ** ಎಂಬುದರಿಂದ ಬೆಳೆದು ಬಂದ ಹೊಸಗನ್ನಡದ ಶಬ್ದ. ಪಸೆ, ಹಸೆ ಎಂದರೆ ಚಿತ್ತಾರ. ಮರದಿಂದ ಮಾಡಿದ ಮಣೆಗಳ ಮೇಲೆ ರೇಖೆಗಳಿಂದ ಚಿತ್ತಾರವನ್ನು ಬಿಡಿಸುತ್ತಾರೆ. ಇಂಥ ಮಣೆಗಳ ಮೇಲೆ ಹಬ್ಬಹರಿದಿನಗಳಲ್ಲಿ, ಮದುವೆ ಮುಂಜಿಗಳಲ್ಲಿ, ಸಂಬಂಧಪಟ್ಟ ವ್ಯಕ್ತಿಗಳನ್ನು ಕೂರಿಸುತ್ತಾರೆ. ಮಣೆಯ ಮೇಲೆ ಚಿತ್ತಾರವಿಲ್ಲದಿದ್ದರೂ ಚಿತ್ತಾರವಿರುವ ಬಟ್ಟೆಗಳನ್ನು ಹಾಸಿ ಕೂರಿಸುತ್ತಾರೆ. ಅದೇ ಹಸೆಮಣೆ ಅಥವಾ ಹಸೆಯ ಮಣೆ. ಹಸೆ ಎನ್ನುವುದಕ್ಕೆ ಹಾಸು ಎಂಬ ನಾಮಪದದ ಅರ್ಥವೂ ಇದೆ. ಆಗ ಅದು ಮಣೆಯ ಮೇಲೆ ಹಾಸುವ ಬಟ್ಟೆ. ಹಾಸಿಗೆ ಎಂಬ ಅರ್ಥವೂ ಕೆಲವು ಸಲ ಬರುವುದುಂಟು. ಮನೆಗಳ ಮುಂದೆ ರಂಗೋಲಿಯಿಂದ ರಚಿಸುವ ಚಿತ್ರಗಳಿಗೂ ಹಸೆ ಎಂಬ ಹೆಸರಿದೆ. ಪಸೆನಿಲ್, ಹಸೆನಿಲ್ಲು ಎಂದರೆ ಮದುವೆಯಾಗು ಎಂದರ್ಥ.

**ಹಸ್ತಸಾಮುದ್ರಿಕೆ** ಸಮುದ್ರ ಎಂದರೆ ದೇಹದ ಮೇಲಿನ ಗುರುತು, ಗೆರೆ ಮುಂತಾದುವು. ಸಾಮುದ್ರಿಕೆ ಎಂದರೆ ಅಂಥ ಗುರುತುಗಳಿಗೆ ಸಂಬಂಧಿಸಿದುದು. ಇದೊಂದು ಶಾಸ್ತ್ರ. ಮಾನವನ ದೇಹದ ಹಸ್ತವಿಭಾಗಗಳಲ್ಲಿರುವ ಚಿಹ್ನೆ ಅಥವಾ ಗೆರೆಗಳನ್ನು ಪರೀಕ್ಷಿಸಿ ಆತನ ಭವಿಷ್ಯವನ್ನು ತಿಳಿಸುವ ಶಾಸ್ತ್ರ. ಅದಕ್ಕೆ ಸಾಮುದ್ರಿಕ ಶಾಸ್ತ್ರ ಎಂದು ಹೆಸರು. ಹಾಗೆ ಭವಿಷ್ಯವನ್ನು ಈ ಶಾಸ್ತ್ರದ ಆಧಾರದ ಮೇಲೆ ತಿಳಿಸುವವನಿಗೆ ಸಾಮುದ್ರಕ ಎಂದು ಹೆಸರು. ಸಾಮುದ್ರಿಕ ಎಂಬ ರೂಪದ ಪ್ರಯೋಗವೂ ಉಂಟು. 'ಸಾಮುದ್ರ ತಿಲಕ' ಎಂಬುದು

ದುರ್ಲಭ ರಾಜನ ಈ ವಿಚಾರದ ಒಂದು ಗ್ರಂಥ. ಇದು ಪ್ರಸಿದ್ಧವಾದ ಗ್ರಂಥ. ಹಸ್ತ ಸಾಮುದ್ರಿಕೆ ಎಂಬುದರಲ್ಲಿ ಹಸ್ತ ಎಂಬ ಭಾಗ ಅನಗತ್ಯವಾದುದು. ಏಕೆಂದರೆ ಸಾಮುದ್ರಿಕೆ ಎಂಬುದರಲ್ಲಿ ಆ ಅರ್ಥವೂ ಇದೆ. ಆದರೆ ಹಸ್ತದ ಗೆರೆಗಳನ್ನೇ ಕುರಿತು ವಿವರವಾಗಿ ತಿಳಿಸಬಯಸುವ ಕೆಲವರು ಈ ಶಾಸ್ತ್ರದ ಆ ಭಾಗವನ್ನು ಚೆನ್ನಾಗಿ ಅರಿತಿರುತ್ತಾರೆ. ಅವರು ಹಸ್ತಸಾಮುದ್ರಿಕೆ ಎಂಬ ಶಬ್ದವನ್ನು ಜಾರಿಗೆ ತಂದು ದೊಡ್ಡ ದೊಡ್ಡ ಬೋರ್ಡುಗಳನ್ನೂ ಬರೆದು ಈ ಶಬ್ದಕ್ಕೆ ಪ್ರಾಚುರ್ಯವನ್ನು ತಂದಿದ್ದಾರೆ. ಈ ಶಾಸ್ತ್ರವನ್ನು ಎಷ್ಟರಮಟ್ಟಿಗೆ ನಂಬಬಹುದು ಎಂಬುದು ಪ್ರತಿಯೊಬ್ಬ ವ್ಯಕ್ತಿಗೆ ಸಂಬಂಧಿಸಿದ ರಹಸ್ಯ ವಿಷಯ. ಅದನ್ನು ನಾವು ಕೆಣಕಬಾರದು.

**ಹಳವಂಡ** ಈ ಶಬ್ದವು ಹೆಚ್ಚಾಗಿ ಉತ್ತರಕನ್ನಡ ಪ್ರದೇಶದಲ್ಲಿ ಉಪಯೋಗವಾಗುತ್ತದೆ. ಇದಕ್ಕೆ *೧. ತೀವ್ರವಾದ ಬಯಕೆ ೨. ಚಿಂತೆ, ವ್ಯಥೆ ೩. ಭ್ರಮೆ ೪. ನಾಶ ಎಂಬ ಅರ್ಥಗಳಿವೆ.* ಈ ಎಲ್ಲ ಅರ್ಥಗಳಿಗೂ ಧಾರವಾಡದ ಜನತೆಯ ಮಾತಿನಲ್ಲಿ ಬರಹಗಳಲ್ಲಿ ದೃಷ್ಟಾಂತಗಳು ಸಿಕ್ಕುತ್ತವೆ. ಮರಾಠಿಯ ಹಳಬಳ, ಹಳಹಳ, ಪ್ರಾಕೃತದ ಹಲಹಲ, ಹಿಂದಿಯ ಹಲಬಲ ಎಂಬ ಶಬ್ದಗಳಿಗೂ ಈ ಶಬ್ದಕ್ಕೂ ಸಂಬಂಧವಿದೆ.

**ಹಳೆ ಕರ್ನಾಟಕ, ಹಳೆನಾಡ ಕರ್ನಾಟಕ - ಎಂಬುವು ಎರಡೂ ಒಂದೆಯೇ?**
ಬ್ರಾಹ್ಮಣರ ಒಂದು ಉಪಪಂಗಡದಲ್ಲಿನ ಜನರನ್ನು ಹಳೇ ಕರ್ನಾಟಕರು, ಹಳೆನಾಡ ಕರ್ನಾಟಕರು ಎಂದು ಕರೆಯುತ್ತಾರೆ. ಈ ಜನರು ಯಾವುದೋ ಮಠಾಧಿಪತಿಗಳಿಂದ ಬಹಿಷ್ಕೃತರಾಗಿದ್ದರೆಂದು ಒಂದು ಕಥೆಯಿದೆ. ಅದಕ್ಕೆ ಯಾವ ಆಧಾರವೂ ಚಾರಿತ್ರಿಕ ದಾಖಲೆಯೂ ಇಲ್ಲ. ಬಡಗನಾಡು ಬ್ರಾಹ್ಮಣರು, ವೇಲನಾಡು ಬ್ರಾಹ್ಮಣರು ಎಂಬಂತೆ ಹಳೆನಾಡು ಕರ್ನಾಟಕರು ಒಂದು ಒಳಪಂಗಡ. ಹಿಂದೆ ಇವರು ಗ್ರಾಮೀಣ ಪ್ರದೇಶದಲ್ಲಿದ್ದು ಮುಂದುವರಿದಿರಲಿಲ್ಲ. ಈಗ ಅವರಲ್ಲಿ ಅನೇಕರು ಉನ್ನತ ಸ್ಥಾನಗಳಲ್ಲಿದ್ದು ಗೌರವಾರ್ಹರಾಗಿದ್ದಾರೆ. ಅವರು ಈಗ ಆರ್ಥಿಕವಾಗಿಯೂ ಸಾಂಸ್ಕೃತಿಕವಾಗಿಯೂ ಮುಂದುವರಿದವರಾಗಿದ್ದಾರೆ.

**ಹಾಕಿ** ಎಂಬ ಶಬ್ದಕ್ಕೆ ಫ್ರೆಂಚ್ ಭಾಷೆ ಮೂಲ. ಆ ಭಾಷೆಯಲ್ಲಿ Hoquet ಎಂಬ ಶಬ್ದವಿದೆ. ಇದಕ್ಕೆ ಬಾಗಿರುವ ಕೋಲು ಎಂಬ ಅರ್ಥ. ಆ ಶಬ್ದದಿಂದ Hockey ಆಟದ ಹೆಸರು ಬಂದಿದೆ.

**ಹಾಗೂ, ಮತ್ತು** ಇವುಗಳಿಗೆ ಸ್ವಲ್ಪ ವಿವರಣೆ ಅಗತ್ಯ. ಹಾಗೆ ಎಂಬ ಶಬ್ದಕ್ಕೆ ಊ ಎಂಬ ಅವಧಾರಣೆಯ ಪ್ರತ್ಯಯ ಸೇರಿದರೆ ಹಾಗೆಯೂ ಹಾಗೂ ಎಂಬ ಎರಡೂ ರೂಪಗಳು ಸಿದ್ಧಿಸುತ್ತವೆ. ಮೊದಲನೆಯದು ಆಗಮ ಸಂಧಿ ಎರಡನೆಯದು ಲೋಪಸಂಧಿ; ಎರಡೂ ಸರಿ. ಆದರೆ ಹಾಗೂ ಎಂಬುದು ಹೆಚ್ಚಾಗಿ ಪ್ರಯೋಗವಾಗುತ್ತಿದೆ. ಮತ್ತೆ + ಊ = ಮತ್ತೆಯೂ, ಮತ್ತೂ ಎಂದು ಎರಡು ರೂಪಗಳು ಸಿದ್ಧಿಸುತ್ತವೆ. ಈ ಮತ್ತೂ ಎಂಬುದೇ ಹ್ರಸ್ವಗೊಂಡು **ಮತ್ತು** ಎಂದು ಹೆಚ್ಚಾಗಿ ಪ್ರಯೋಗದಲ್ಲಿದೆ. ಮದ್ಯವನ್ನು ಕುಡಿದಾಗ ಬರುವ ಮತ್ತಿಗೂ ಇದಕ್ಕೂ ಸಂಬಂಧವಿಲ್ಲ. ಹಾಗೆಯೂ ಎಂದರೆ ಅದಲ್ಲದೆ ಎಂದರ್ಥ. ಮತ್ತೆಯೂ ಎಂದರೆ ಅದರ ಜೊತೆಗೆ ಎಂದರ್ಥ. ಎರಡನ್ನೂ ಒಂದೇ ರೀತಿಯಲ್ಲಿ ಪ್ರಯೋಗಿಸಬಹುದು. ಈಚೆಗೆ ಕೆಲವರು 'ಹಾಗು ಎಂದಷ್ಟೇ ಏಕೆ ಪ್ರಯೋಗಿಸಬಾರದು?' ಎಂದು ಪ್ರಶ್ನಿಸಿದ್ದಾರೆ. ಮತ್ತು ಎಂಬುದರ ಸಾಮ್ಯದ ಮೇಲೆ ಹಾಗು ಎಂದೇ ಪ್ರಯೋಗಿಸಬಹುದು. ಸಂಪ್ರದಾಯದ ಕಿವಿಗಳಿಗೆ ಸ್ವಲ್ಪ ವಿಚಿತ್ರವಾಗಿ ಕೇಳಿಸುತ್ತದೆ ಅಷ್ಟೆ. ಆದರೆ ಅದು ತಪ್ಪಲ್ಲ. ನೋಡಿ: ಮತ್ತು

**ಹಾಜರಾತಿ** ಇದು ಅರಬ್ಬಿಯ **ಹಾಜೇರ್** ಶಬ್ದದಿಂದ ಬಂದಿದೆ. ನಮ್ಮಲ್ಲಿ ನಾವು ನೇಮಕಾತಿ

ಎಂಬ ಶಬ್ದವನ್ನು ರೂಪಿಸಿಕೊಂಡ ಹಾಗೆ ಹಾಜರಾತಿ ಎಂದು ಮಾಡಿಕೊಂಡಿದ್ದೇವೆ. ಅದಕ್ಕೆ ಬಂದಿರುವುದು ಎಂದರ್ಥ. ಮಂಜೂರಾತಿ ಎಂಬ ಶಬ್ದವನ್ನು ಗಮನಿಸಿ.

**ಹಾಜರು** ಇದು ಅರಬ್ಬಿ ಭಾಷೆಯ ಹಾಜೀರ್ ಎಂಬ ಶಬ್ದದಿಂದ ಬಂದದ್ದು. ಬಂದಿರುವುದು, ಎದುರಿಗೆ ಇರುವುದು ಎಂದು ಅರ್ಥ.

**ಹಾಜರಿರು, ಆಸೀನರಾಗಿರು, ಉಪಸ್ಥಿತರಿರು, ಭಾಗವಹಿಸು** ದೂರದರ್ಶನದಲ್ಲಿ ಪ್ರಯೋಗವಾಗುವ ಈ ಶಬ್ದಗಳನ್ನು ಕುರಿತು ವಿವರಣೆ ಬೇಕೆಂಬುದು ಸ್ವಾಭಾವಿಕವಾದ ಅಪೇಕ್ಷೆ. ಒಂದು ಸಮಾರಂಭದಲ್ಲಿಯೇ ಅನೇಕರು ಹಾಜರಿರುತ್ತಾರೆ. ಅಂಥವರ ಹೆಸರನ್ನು ಹೇಳಲೇಬೇಕೆಂಬುದು ದೂರದರ್ಶನದವರ ಅಪೇಕ್ಷೆ. ಇದಕ್ಕೆ ಕಾರಣವನ್ನು ನಾವು ಹುಡುಕಬಾರದು. ಹೀಗಾಗಿ ಕೆಲವರು ಉಪಸ್ಥಿತರಿದ್ದರು ಎಂದೂ ಕೆಲವರು ಆಸೀನರಾಗಿದ್ದರು ಎಂದೂ ಕೆಲವರು ಹಾಜರಿದ್ದರು ಎಂದೂ ಹೇಳಿದರೆ ಅವರಿಗೂ ಗೌರವ. ಶಬ್ದಗಳಿಗೂ ಗೌರವ ಅಷ್ಟೇ. ಇದ್ದರು ಎಂಬುದಷ್ಟೇ ಆ ಪ್ರಯೋಗಗಳ ತಾತ್ಪರ್ಯ. ಅವರು ಇದ್ದದ್ದಲ್ಲದೆ ಬೇರೇನನ್ನೂ ಮಾಡಿರುವುದಿಲ್ಲ.

**ಹಾಡಿದ್ದೇ ಹಾಡೋ ಕಿಸಿಬಾಯಿದಾಸ ಎಂಬ ಗಾದೆಯ ಅರ್ಥ.** ಇದಕ್ಕೆ ಅರ್ಥ ಕಿಸಿದ ಬಾಯಿಯುಳ್ಳ ದಾಸ. ಈ ಶಬ್ದಕ್ಕೆ ಮೂರ್ಖ ಎಂದೂ ದಡ್ಡ ಎಂದೂ ಅರ್ಥವಿರುವ ಪ್ರಯೋಗಗಳಿವೆ. ಆದರೆ ಈಗ ಗಾದೆಯಲ್ಲಿರುವ ಅರ್ಥ ಸ್ಪಷ್ಟವಾಗಬೇಕಾದರೆ ಗಾದೆಯ ರೂಪವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಅದು ಹಾಡಿದ್ದೇ ಹಾಡುವ ಕಿಸಿಬಾಯಿದಾಸ. ಈ ದಾಸ ಭಿಕ್ಷೆಗೆ ಬರುವವನು. ಅವನಿಗೆ ಬಾಯಿಗೆ ಬರುವುದು ಒಂದೇ ಹಾಡು. ಅದನ್ನು ಒಂದೇ ರೀತಿಯಲ್ಲಿ ಹಾಡುತ್ತಾನೆ. ಹೀಗಿರುವುದು ಹಾಸ್ಯಾಸ್ಪದ. ಅಲ್ಲದೆ ಅವಮಾನಕರ. ಇಷ್ಟಿದ್ದೂ ಆ ದಾಸ ಅದನ್ನೇ ಹಾಡುತ್ತಾನೆ. ಇದು ಅವನ ಚಿತ್ರ. ಕೆಲವು ವೇಳೆ ಉಪನ್ಯಾಸ ಮಾಡುವವರು ಒಂದೇ ವಿಷಯವನ್ನು ಕುರಿತು ಅನೇಕ ಕಡೆಗಳಲ್ಲಿ ಒಂದೇ ರೀತಿ ಮಾತನಾಡಿದರೆ ಅವರಿಗೂ ಈ ಗಾದೆಯನ್ನು ಅನ್ವಯಿಸುತ್ತಾರೆ.

**ಹಾಡು ಹಗಲಲ್ಲೇ ದರೋಡೆ** ಹಾಡು ಹಗಲು ಹೊಗಳುವುದಕ್ಕೆ ಅರ್ಹವಾದ ಹಗಲು, ಬೆಳಕು. ಅಂದರೆ ಎಲ್ಲಕಡೆ ಬೆಳಕಿರುವ, ಎಲ್ಲರೂ ಕಾಣಬಹುದಾದ ಸನ್ನಿವೇಶದಲ್ಲಿ ಆಗುವ ದರೋಡೆ ಅದು. ಹೀಗೆ ಹೇಳುವುದರಿಂದ ದರೋಡೆಕಾರರು ತುಂಬ ಧೈರ್ಯದಿಂದ ಎಲ್ಲ ಪೂರ್ವಸಿದ್ಧತೆಗಳಿಂದ ಮಾಡಿದ ದರೋಡೆ ಎಂದು ವಿವರಣೆ.

**ಹಾತೆ** ಇದು ಒಂದು ಹುಳು. ದೀಪಕ್ಕೆ ಬೀಳುವ ಪತಂಗವೆಂಬ ಹುಳುವಿಗೂ 'ತುಂಡಂಗಿ' ಎಂಬ ಕ್ರಿಮಿಗೂ ಇದನ್ನು ಅನ್ವಯಿಸುತ್ತಾರೆ. ಬೇರೆ ಬೇರೆ ಕಡೆಗಳಲ್ಲಿ ಇದರ ಉಪಯೋಗ ಬೇರೆ ಬೇರೆಯಾಗಿದೆ. 'ಅಕ್ಕಳೆ' 'ಎಕ್ಕಳೆ'ಎಂದೂ ಇದನ್ನು ಕರೆಯುತ್ತಾರೆ. ಈ ಶಬ್ದದ ಮೂಲರೂಪ 'ಪಾತೆ' ಇದಕ್ಕೆ ಪಾತರಗಿತ್ತಿ, ಚಿಟ್ಟೆ ಎಂದೂ ಗೋವಿಂದ ಪೈಗಳೂ ಅವರ ಗಿಳಿವಿಂಡಿನಲ್ಲಿ ಅರ್ಥ ಕೊಟ್ಟಿದ್ದಾರೆ. ಸಾಮಾನ್ಯವಾಗಿ ಜರಲೆಗೂ ದೀಪದ ಹುಳುವಿಗೂ ಅನ್ವಯಿಸುವುದು ಹೆಚ್ಚು. ಇವೆಲ್ಲ ಬೇರೆ ಬೇರೆಯ ವ್ಯುತ್ಪತ್ತಿ ಇರುವ ಶಬ್ದಗಳು ಎಂಬುದಂತೂ ಸ್ಪಷ್ಟ. ಅದನ್ನು ವಿಚಾರ ಮಾಡಬೇಕಾದ ಅಗತ್ಯವಿದೆ.

**ಹಾನ, ಹಾರ, ಹಾಳ** ಎಂದರೆ ಇಹನು, ಇಹರು, ಇಹಳು ಅಥವಾ ಇದ್ದಾನೆ, ಇದ್ದಾರೆ, ಇದ್ದಾಳೆ ಎಂದೇ ಅರ್ಥ. ಈ ಬಗೆಯ ವರ್ಣಪಲ್ಲಟಗಳು ಇತರ ಕಡೆಗಳಲ್ಲಿ ಕಂಡುಬರುವುದನ್ನು ಎಲ್ಲರೂ ಗಮನಿಸಬಹುದು. ಫಲಾಹಾರ ಎಂಬ ಶಬ್ದ ಫಳಾರ ಆಗಿಲ್ಲವೇ. ಇದೂ ಕೂಡ ಆಡುಮಾತಿಗೆ ಸಂಬಂಧಪಟ್ಟದ್ದು. ಶಿಷ್ಟವಾದ ಬರವಣಿಗೆಯಲ್ಲಿ ಇಂಥ ಶಬ್ದಗಳನ್ನು " " ಎಂಬಂಥ ಬಕಗ್ರೀವಗಳಲ್ಲಿ ಸೂಚಿಸುವುದೂ ಉಂಟು. ಇಲ್ಲದಿದ್ದರೆ ಕಾದಂಬರಿಗಳಲ್ಲಿ ಪ್ರಾದೇಶಿಕ ಭಾಷೆಯನ್ನೇ ಉಪಯೋಗಿಸಿ ಸಂಭಾಷಣೆಗಳನ್ನು

ರಚಿಸಿದಾಗ ಅವೂ ಇಣುಕಬಹುದು. ಆದರೆ ಇವು ಶಿಷ್ಟವಾದ ಬರವಣಿಗೆಯಾಗುವುದಿಲ್ಲ. ವಿಶಿಷ್ಟವಾದ ಶೈಲಿಯ ಉದಾಹರಣೆಗಳಾಗುತ್ತವೆ. ಅಹಗೆ, ಇಹಗೆ, ಎಹಗೆ ಎಂಬ ಶಬ್ದಗಳಲ್ಲಿ ವರ್ಣಪಲ್ಲಟವಾಗಿ ಹಾಗೆ ಹೀಗೆ ಹೇಗೆ ಎಂಬ ಶಬ್ದ ರೂಪಗಳು ಸಿದ್ಧಿಸಿವೆ. ಆ ಶಬ್ದಗಳು ಶಿಷ್ಟ ಪ್ರಯೋಗದಲ್ಲಿ ಒಪ್ಪಿಗೆ ಪಡೆದಿವೆ.

**ಹಾರವಯ್ಯ** ಇದು ಕನ್ನಡದ ಶಬ್ದ. ದ್ರಾವಿಡ ಭಾಷೆಗಳಲ್ಲಿ ಜ್ಞಾತಿ ಶಬ್ದಗಳಿವೆ. ಹಳಗನ್ನಡದ ಪಾರ್ವ ಎಂದರೆ ಬ್ರಾಹ್ಮಣ ಎಂದರ್ಥ. ಪಾರ್ ಎಂದರೆ ೧. ನೋಡು. ೨. ಎದುರುನೋಡು ೩. ವಿಚಾರ ಮಾಡು ಆಲೋಚಿಸು ಎಂಬ ಅರ್ಥಗಳಿವೆ. ಹೀಗೆ ವಿಚಾರ ಮಾಡುವವನು ಪಾರ್ವ, ಬ್ರಾಹ್ಮಣ. ಅಂದರೆ ಧರ್ಮಗ್ರಂಥಗಳನ್ನು ಓದಿ, ವಿಚಾರ ಮಾಡಿ ತಿಳಿದವನು. ಬ್ರಹ್ಮಜ್ಞಾನಿ ಎಂಬ ಅರ್ಥ ಬರುತ್ತದೆ. ಈ ಶಬ್ದಕ್ಕೆ ಪಾರುವ, ಪಾರ್ಬ, ಹಾರವ, ಹಾರ್ವ ಎಂಬ ಪರ್ಯಾಯ ರೂಪಗಳಿವೆ. ಹಾರವ + ಅಯ್ಯ = ಹಾರವಯ್ಯ. ಅಯ್ಯ ಎನ್ನುವುದು ಒಂದು ಗೌರವ ಸೂಚಕ ಶಬ್ದ. ಅದು ಆರ್ಯ ಎಂಬುದರ ತದ್ಭವ. ಹಾರವಯ್ಯ ಎಂಬುದನ್ನು ಬಡಬ್ರಾಹ್ಮಣ ಎಂಬ ಅರ್ಥದಲ್ಲಿ ಬಳಸುವುದೂ ಉಂಟು.

**ಹಾರವಿತ್ತಿ** ಹಾರವ ಎಂಬ ಶಬ್ದದ ಸ್ತ್ರೀಲಿಂಗ ರೂಪ ಹಾರವಿತಿ ಮತ್ತು ಹಾರವಿತ್ತಿ. ಈ ಶಬ್ದಗಳಿಗೆ ಹಳಗನ್ನಡದಲ್ಲಿ ಪಾರ್ವಂತಿ, ಪಾರ್ವತಿ, ಪಾರ್ವಿತಿ ಎಂಬ ರೂಪಗಳಿವೆ. ಈ ಶಬ್ದಗಳಿಗೆ ಬ್ರಾಹ್ಮಣನ ಹೆಂಡತಿ ಎಂದೂ ಬ್ರಾಹ್ಮಣ ಹೆಂಗಸು ಎಂದೂ ಅರ್ಥಗಳಿವೆ. ಹಾರವ +ಇತಿ = ಹಾರವಿತಿ. ಇತಿ ಮತ್ತು ಇತ್ತಿ ಎಂಬ ಎರಡು ಪ್ರತ್ಯಯಗಳೂ ಸ್ತ್ರೀಲಿಂಗ ಪ್ರತ್ಯಯಗಳು.

**ಹಾರ್ಮೋನಿಯಂ** ಎಂಬುದು ಲ್ಯಾಟಿನ್ ಭಾಷೆಯ ಶಬ್ದ. ತಿದಿಯಂತೆ ಗಾಳಿಯನ್ನು ಒತ್ತಿ ಲೋಹದ ತೆಳು ತುಂಡುಗಳ ಕಂಪನವನ್ನುಂಟುಮಾಡಿ ಧ್ವನಿ ಹೊರಡಿಸುವ ಸಂಗೀತವಾದ್ಯ.

**ಹಾಸುಹೊಕ್ಕು** ನೇಯ್ಗೆಯಲ್ಲಿ ಉದ್ದಕ್ಕೆ ಹಾಕುವ ನೂಲು, ಹಾಸು. ಅಡ್ಡಕ್ಕೆ ಸೇರಿಸುವ ನೂಲು, ಹೊಕ್ಕು. ಹಾಸುಹೊಕ್ಕಾಗಿ ಎಂದರೆ ಚೆನ್ನಾಗಿ, ಹದವಾಗಿ ಬೆರೆತುಕೊಂಡಿರುವುದು, ಹೊಂದಿಕೊಂಡಿರುವುದು, ವ್ಯಾಪಕವಾದುದು ಎಂದರ್ಥ. 'ಕನ್ನಡದ ಪ್ರಾಚೀನ ಕಾವ್ಯ'ಗಳಲ್ಲಿ ನವರಸಗಳ ನಿರೂಪಣೆ ಹಾಸುಹೊಕ್ಕಾಗಿದೆ' ಎಂಬ ವಾಕ್ಯವನ್ನು ನೋಡಿ.

**ಹ್ಯಾಟ್ಸಾಫ್ ಶಬ್ದಕ್ಕೆ ಕನ್ನಡ ಏನು ?** ಹ್ಯಾಟ್ ಆಫ್ (Hat off) ಎಂಬುದು ಇಂಗ್ಲಿಷಿನ ಒಂದು ನುಡಿಗಟ್ಟಿನ ಸಂಕ್ಷಿಪ್ತ ರೂಪ. ಆ ನುಡಿಗಟ್ಟು ಹೀಗಿದೆ. To take one's hat off. ಇದು ತಮ್ಮ ಮೆಚ್ಚಿಕೆಯನ್ನು ಸೂಚಿಸುವ ಒಂದು ಮಾರ್ಗ. ಇಂಗ್ಲೆಂಡಿನ ಮತ್ತು ಅಮೆರಿಕದ ಜನತೆಯಲ್ಲಿ ಅಂಥ ಗೌರವಾರ್ಹವಾದ ವ್ಯಕ್ತಿಯನ್ನು ಕಂಡಾಗ ತಾವು ಧರಿಸಿದ್ದ ತಲೆಯ ಮೇಲಿನ ಹ್ಯಾಟನ್ನು ತೆಗೆದು, ತಲೆಯನ್ನು ತಗ್ಗಿಸಿ ಸಂತೋಷದಿಂದ ಮಾತನಾಡಿಸುತ್ತಾರೆ. ತಲೆಯ ಮೇಲೆ ಇರುವುದು ಒಂದೇ Hat ತಾನೆ ? ಆದುದರಿಂದ Hats off ತಪ್ಪು. ತುಂಬ ಜನ ಸೇರಿದ್ದು ಎಲ್ಲರೂ ತಮ್ಮ Hat ಗಳನ್ನು ತೆಗೆದರೂ ಒಬ್ಬೊಬ್ಬರೂ ಒಂದೊಂದೇ ತೆಗೆಯುತ್ತಾರೆ. ನಮ್ಮಲ್ಲಿ ರುಮಾಲನ್ನಾಗಲಿ ಟೋಪಿಯನ್ನಾಗಲಿ ತೆಗೆಯುವ ಸಂಪ್ರದಾಯವಿಲ್ಲ. ಅಲ್ಲದೆ ಅವುಗಳನ್ನು ತೆಗೆಯುವುದಕ್ಕೆ ಅವು ಈಗ ಯಾವ ತಲೆಯ ಮೇಲೆಯೂ ಕಾಣುವುದೇ ಇಲ್ಲ. ಆದುದರಿಂದ ನಾವು ತಿಳಿಸುವ ಗೌರವ ಸೂಚಕವಾದ ಮಾರ್ಗವನ್ನೇ ಅನುಸರಿಸಬೇಕು. ಶಾಭಾಸ್, ಒಳ್ಳೆ ಕೆಲಸ ಮಾಡಿದಿರಿ. ಎಂದೋ ಇತರ ರೀತಿಗಳಲ್ಲೋ ಗೌರವವನ್ನು ತೋರಿಸುವ ಕೆಲಸವನ್ನಂತೂ ಮಾಡಬೇಕು.

**ಹಿಂಗು-ಇಂಗು** ಹಿಂಗು ಎನ್ನುವುದು ಸಂಸ್ಕೃತದ ಶಬ್ದ. ಇಂಗು ತದ್ಭವ ರೂಪ. ರಾಮಠ ಎಂಬ ಇನ್ನೊಂದು ಹೆಸರೂ ಇದೆ ಅದಕ್ಕೆ. ಇದು ಪರ್ಷಿಯಾ ದೇಶದಲ್ಲಿ ಬೆಳೆಯುವ ಒಂದು ಗಿಡದ ಹಾಲಿನಿಂದ ದೊರೆಯುವ ವಸ್ತು. ಇದನ್ನು ಅಡುಗೆಗೂ ಔಷಧಿಗೂ ಉಪಯೋಗಿಸುತ್ತಾರೆ. ಪಾರಸೀ ಭಾಷೆಯಲ್ಲಿಯೂ ಅದು ಹಿಂಗು ಎಂಬ ಹೆಸರನ್ನೇ

ಪಡೆದಿದೆ. ಭಾರತದ ಎಲ್ಲ ಭಾಷೆಗಳಲ್ಲಿಯೂ ಈ ಶಬ್ದ ಅಲ್ಪ ಸ್ವಲ್ಪ ಭೇದದೊಡನೆ ಪ್ರಚಾರದಲ್ಲಿದೆ. ನೋಡಿ: ಇಂಗು.

**'ಹಿಂದು'** ಯಾವ ಭಾಷೆ ಇದು ಸಿಂಧೂ ಶಬ್ದದ ಅಪಭ್ರಂಶ. ಅನೇಕ ಭಾಷೆಗಳಲ್ಲಿ ಪ್ರಯೋಗದಲ್ಲಿದೆ. ಪಾರಸೀ ಭಾಷೆಯಲ್ಲಿಯೂ ಇದೆ. ಇಂಗ್ಲಿಷಿನಲ್ಲಿಯೂ ಇದೆ.

**ಹಿಕ್‌ಮತ್** ಇದು ಅರಬ್ಬಿ ಶಬ್ದ. ಇದಕ್ಕೆ ಒಂದು ಹಂಚಿಕೆ, ಉಪಾಯ, ಚಮತ್ಕಾರ, ಪಿತೂರಿ, ಕೌಶಲ ಎಂಬ ಅರ್ಥಗಳು ಸಂದರ್ಭಾನುಸಾರ ಬರುತ್ತವೆ. ಆದುದರಿಂದ ಆ ಶಬ್ದವನ್ನು ಉಪಯೋಗಿಸುವವರಲ್ಲಿ ತುಂಬ ಹಿಕ್ಮತ್ ಇರಬೇಕು, ಹುಷಾರ್.

**ಹಿಟ್ಟು** ಶಬ್ದದ ಮೂಲ ಪಿಟ್ಟು. ಹಳಗನ್ನಡ. ಧಾನ್ಯವನ್ನು ಬೀಸಿ ಮಾಡಿದ ಪುಡಿ. ಇದು ನಯವಾಗಿರಬಹುದು, ತರಿಯಾಗಿರಬಹುದು. ರಾಗಿಯಿಂದ ಮಾಡಿದ ಹಿಟ್ಟಿನ ಮುದ್ದೆಗೆ ವಿಶೇಷ ಗೌರವದಿಂದ ಹಿಟ್ಟು ಎಂದು ಕರೆಯುತ್ತಾರೆ. ಪ್ರಾಚೀನ ಕನ್ನಡ ದೇಶದಲ್ಲಿ ಇದ್ದ ಹದಿನೆಂಟು ಬಗೆಯ ವೃತ್ತಿಗಳಿಗೆ ಹಿಟ್ಟುಗಳು ಎಂದು ಹೆಸರಿದ್ದಿತು. ಬಹುಶಃ ಇದೂ ಕೂಡ ಜೀವಿಕೆಯ ಆಧಾರ ಎಂಬ ಅರ್ಥದಲ್ಲಿಯೇ ಬೆಳೆದು ಬಂದುದಾಗಿರಬೇಕು.

**ಹಿಡಗಲು** ಹಿಡಿಯೊಳಗೆ ಅಡಗುವಷ್ಟು ಹಿಡಿಯುಳ್ಳ (ಗುಡಿಸುವ) ಸಾಧನ. ಪೊರಕೆ. ಈ ವಸ್ತುವಿಗೆ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಶಬ್ದಗಳಿವೆ. ಹಿಡಗಲು, ಹಿಡಿಸೂಡಿ, ಸೂಡಿ, ಸೂಡಿಗೆ, ಕಸಪರಕೆ, ಕಸೊಡಿಗೆ, ಪರಕೆ, ಕಸಬರಿಗೆ, ಪೊರಕೆ ಇತ್ಯಾದಿ.

**ಹಿಡಿ** ಎಂಬುದು ಕ್ರಿಯಾಪದವಾದರೆ ೧. ಆಕ್ರಮಿಸು, ಮುತ್ತು ೨. ಹೊಂದು ೩. ತಗಲು, ಬೇಕಾಗು ೪. ಅಂಗೀಕರಿಸು ೫. ಒಗ್ಗು, ಹೊಂದಿಕೋ ೬. ನಿರೋಧಿಸು. ೭. ಹಿಸುಕು ೮. ಮುಷ್ಟಿಯಿಂದ ತೆಗೆದುಕೊ ಎಂದೂ, ನಾಮಪದವಾದರೆ ೧. ಕತ್ತಿಯನ್ನು ಹಸ್ತವು ಒಳಗೊಳ್ಳುವ ಭಾಗ. ೨. ಕಸಬರಿಗೆ ೩. ಮುಷ್ಟಿ ೪. ಮುಷ್ಟಿಯನ್ನು ಒಳಗೊಳ್ಳುವ ಪ್ರಮಾಣದಷ್ಟು (ಧಾನ್ಯ ಇತ್ಯಾದಿ). ಇದು ಅನೇಕ ಇತರ ಶಬ್ದಗಳ ಜೊತೆ ಸೇರಿ ಬೇರೆ ಬೇರೆ ಸಮಾಸಗಳಾಗುತ್ತವೆ. ನೋಡಿ: ತೆರೆ, ಮುಟ್ಟು.

**ಹಿಮಾಂಶು** ಈ ರೂಪ ಶುದ್ಧವಾದುದು. ಅಂಶು ಎಂದರೆ ಕಿರಣ ಎಂದರ್ಥ. ಹಿಮ + ಅಂಶು = ಹಿಮಾಂಶು = ತಂಪಾದ ಕಿರಣವುಳ್ಳವನು ಅಂದರೆ ಚಂದ್ರ. ಶೀತಾಂಶು, ತಂಗದಿರ ಮುಂತಾದ ಶಬ್ದಗಳಿಗೂ ಇದೇ ಅರ್ಥ.

**ಹೀನಾಯ-ಹೀನ** ಹೀನಾಯ ಮತ್ತು ಹೀನ ಎಂಬ ಎರಡೂ ಶಬ್ದಗಳಿಗೆ ಸಂಬಂಧವಿದೆ. ಹೀನ-ಕೀಳಾದ, ಕಡಿಮೆ ರೀತಿಯ, ತುಚ್ಛ ಇತ್ಯಾದಿ ಅರ್ಥಗಳಿಂದ ಕೂಡಿದೆ. ಆಯ ಎಂದರೆ ಗಳಿಕೆ. ಹೀನ + ಆಯ = ಕೀಳಾದ ಗಳಿಕೆ. ತುಚ್ಛವಾದ ಆಯ ಎಂಬುದು ಮೊದಲ ಅರ್ಥವಾದರೂ ಅದು ಬೆಳೆದು ಅವಮಾನ ಎಂಬ ಅರ್ಥವನ್ನು ಪಡೆಯುತ್ತದೆ. ಆದಾಯವನ್ನು ಕುರಿತು ಮಾತನಾಡುವಾಗ ಒಳಕ್ಕೆ ಬಂತು ಎಂಬ ಒಂದು ಮಾತಿದೆ. ಇದು ನಷ್ಟವನ್ನು ಸೂಚಿಸುತ್ತದೆ. ಅವಮಾನವು ಮಾನಕ್ಕೆ ಆದ ನಷ್ಟ. ಹೀಗೆ ಈ ಹೀನಾಯ ಶಬ್ದವನ್ನು ಅರ್ಥಮಾಡಬೇಕು. ಹೀನಾಮಾನವಾಗಿ ಬೈದರು ಎಂಬುದು ಒಂದು ನುಡಿಗಟ್ಟು. ಇಲ್ಲಿರುವ ಹೀನಾಮಾನ ಎಂಬುದು ಹೀನಮಾನ ಎಂಬ ಸರಿಯಾದ ಶಬ್ದವನ್ನು ಉಚ್ಚರಿಸುವಾಗ ಉಂಟಾಗುವ ಕಾಕು. ಆ ಎಂಬುದು ಅತಿಶಯವನ್ನು ಸೂಚಿಸುತ್ತದೆ. ಸಿಕ್ಕಾಬಟ್ಟೆ, ಕಂಡಾಬಟ್ಟೆ, ಮಣ್ಣಾಂಗಟ್ಟಿ ಎಂಬ ಶಬ್ದಗಳನ್ನು ಹೋಲಿಸಿ.

**ಹುಂಬ** ಇದು ಮರಾಠೀ ಶಬ್ದ. ಇದಕ್ಕೆ ವಿರುದ್ಧವಾದ ಶಾಣ ಎಂಬುದು ಮರಾಠಿಯ ಶಹಾಣ ಎಂಬ ಶಬ್ದದ ಪರ್ಯಾಯ ಪದ. ಅದು ತಿಳಿಯದಿದ್ದರೆ ಜಾಣ ಎಂಬುದನ್ನೇ ಇಟ್ಟುಕೊಳ್ಳಬಹುದು. ಮರಾಠಿಯಲ್ಲಿ ಹುಂಬರ್ (ರೀ) ಶಬ್ದಕ್ಕೆ ದನಗಾಹಿ = ದನ ಕಾಯುವವನ ಆಟ ಎಂಬ ಅರ್ಥವಿದೆ. ಅದರಿಂದಲೇ ದಡ್ಡ ಎಂಬ ಅರ್ಥವೂ ಬೆಳೆದು

ಬಂದಿದೆ. ನಮ್ಮಲ್ಲಿ ಗ್ರಾಮೀಣ ಪ್ರದೇಶದಲ್ಲಿ **ದನಕಾಯಿ ಹೋಗು** ಎಂಬ ಬೈಗುಳವೂ, **ಮಣ್ಣು ಹೊರು ಹೋಗು** ಎಂಬುದೂ ಹೀಗೆ ಹೀನಾರ್ಥಗಳನ್ನು ಪಡೆದು ಪ್ರಯೋಗದಲ್ಲಿವೆ. ಹುಂಬ ಶಬ್ದದ ಅರ್ಥ ದಡ್ಡ, ಪೆದ್ದ.

**ಹುಕುಮ್** ಹುಕುಂ ಎಂಬುದು ಅರಬ್ಬಿಯ 'ಹುಕುಮ್' ಎಂಬ ಶಬ್ದದ ಕನ್ನಡ ರೂಪ. ಅದಕ್ಕೆ ಅಪ್ಪಣೆ, ಆಜ್ಞೆ ಎಂದರ್ಥ. 'ಹುಕ್ಕುಂ' ತಪ್ಪು. ಅರಬ್ಬಿಯಲ್ಲಿ ಆ ಶಬ್ದದ ರೂಪ ಹುಕುಮ್. ಹುಕುಂಬಾರದಾರ್ ಎಂದರೆ ಆಜ್ಞಾಸೇವಕ. ಹುಕಮತ್ ಎಂದರೆ ಅಧಿಕಾರ.

**ಹುಜೂರ್** ಈ ಶಬ್ದ ಅರಬ್ಬಿ ಭಾಷೆಯದು. ಇದಕ್ಕೆ ಅರ್ಥ ೧. ರಾಜನ ಆಸ್ಥಾನ. ೨. ಒಡೆಯ, ಯಜಮಾನ, ದೊರೆ.

**ಹುಟ್ಟು ಹಬ್ಬ - ಹುಟ್ಟಿದ ಹಬ್ಬ** ಇದು ಬಹುಸಾಮಾನ್ಯವಾಗಿ ಎಲ್ಲರ ಮನೆಗಳಲ್ಲೂ ಆಚರಿಸುವ ಉತ್ಸವ. ಮಕ್ಕಳ ಹುಟ್ಟುಹಬ್ಬವನ್ನು ಉತ್ಸಾಹದಿಂದ ಆಚರಿಸುತ್ತಾರೆ. ೮.೬.೯೧ ರಂದು ಮಗು ಜನಿಸಿದರೆ ಆವತ್ತೇ ಮೊದಲನೆಯ ಹುಟ್ಟುಹಬ್ಬ. ೮.೬.೯೨ ವರ್ಷದ ಹೆಚ್ಚು ಅಥವಾ ಎರಡನೆಯ ಹುಟ್ಟುಹಬ್ಬ ಅಂದರೆ ಎರಡನೆಯ ವರ್ಷದ ಪ್ರಾರಂಭ. ಹೀಗೆ ಎಣಿಸಿದರೆ ಕ್ರಿ.ಶ. ೮.೬.೨೦೫೧ ಆ ಮಗು ಬೆಳೆದು ಕೆಲಸಕ್ಕೆ ಸೇರಿದ್ದರೆ ನಿವೃತ್ತಿ ಹೊಂದುತ್ತದೆ. ಷಷ್ಟಿಪೂರ್ತಿಯನ್ನು ಆಚರಿಸುತ್ತದೆ.

**ಹುಡುಗಿ** ಕನ್ನಡದ ಶಬ್ದ ಇದು. ಹುಡುಗ ಇನ್ನೂ ಚಿಕ್ಕವ. ತರುಣನಿಗಿಂತ ಚಿಕ್ಕವ. ಸ್ತ್ರೀಲಿಂಗ ಹುಡುಗಿ. ಹುಡುಗು ಎಂಬ ಶಬ್ದವೂ ಇದೆ. ಅದಕ್ಕೆ ಬಾಲಿಶವಾದ ಗುಣ ಎಂದರ್ಥ. Childish ಎಂಬ ಶಬ್ದಕ್ಕೆ ಸಂವಾದಿಯಾದದ್ದು. ಕನ್ನಡದಲ್ಲಿ ಎರಡು ಗಾದೆಗಳಿವೆ. ಅವು ಈ ಶಬ್ದದ ಅರ್ಥವನ್ನು ಸ್ಪಷ್ಟಪಡಿಸುತ್ತವೆ. ೧. ಹುಡುಗ ನಂಟನಲ್ಲ - ಹುಲ್ಲು ಬೆಂಕಿಯಲ್ಲ ೨. ಹುಡುಗ ಮಿಂಡನಲ್ಲ - ಗಿಡುಗ ಪಕ್ಷಿಯಲ್ಲ. ಹೈದ ಎಂಬ ಗ್ರಾಮೀಣ ಶಬ್ದವಿದೆ. ಇದಕ್ಕೆ ಹೈಕಳು ಎಂಬುದು ಬಹುವಚನ. ಇವೆರಡರ ಸಂಬಂಧದಿಂದ ಇವುಗಳ ಮೂಲದ ಬಗ್ಗೆ ಬೆಳಕು ಬೀಳುತ್ತದೆಯೇ ಪರಿಶೀಲಿಸಬೇಕು. ಪುಡುಗ ಎಂಬ ರೂಪವಿಲ್ಲ!

**ಹುಣಸೆ** ಈ ಶಬ್ದಕ್ಕೆ ಪುಳಿಸೆ ಎಂಬುದು ಮೂಲ ರೂಪ. ಅದು ಕೂಡ ಪುಳಿ ಎಂಬ ಶಬ್ದದಿಂದಲೇ ಬಂದಿರಬೇಕು. ಪುಳಿ ಎಂಬುದಕ್ಕೆ ಹುಣಸೆಹಣ್ಣು ಎಂಬ ಅರ್ಥ ೧೦ನೆಯ ಶತಮಾನದ ಪಂಪಭಾರತದಲ್ಲಿಯೇ ಕಂಡುಬರುತ್ತದೆ. **ಪುಳಿಯೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಾರೋದಯನ ಬಿಂಬಾಧರಮ್** ಎಂದು ಪ್ರಯೋಗವಿದೆ. ಹುಣಸೆಯ ಹಣ್ಣಿನಲ್ಲಿ ತೊಳೆದ ಹವಳದ ಬಟ್ಟನಂತೆ ಕೆಂಪಗೆ ಹೊಳೆಯುವ ತುಟಿ ಎಂದದಕ್ಕೆ ಅರ್ಥ. ಈ ಪುಳಿ, ಪುಳಿಸೆ ಆಗಿ ಆ ಬಳಿಕ ಪುಣಸೆ ಎಂಬ ರೂಪವನ್ನು ಪಡೆದಿರಬೇಕು. ಈ ರೂಪದ ವ್ಯತ್ಯಾಸವು ಕೂಡ ಕ್ರಿ.ಶ. ೮೧೫೮ ಒಂದು ಶಾಸನದಲ್ಲಿ ಕಂಡುಬರುತ್ತದೆ. ಆದುದರಿಂದ ಣ ಕಾರದ ರೂಪ ಕೂಡ ಬಹಳ ಹಳೆಯದು. ಪುಳಿಸೆ ಎಂಬ ಶಬ್ದಕ್ಕೆ ೧೫ ಪರ್ಯಾಯ ರೂಪಗಳಿವೆ. ಕನ್ನಡದಲ್ಲಿ ಪುಣಸೆ, ಪುಣೆಸೆ, ಪುಣುಸೆ, ಪುಣ್ಸೆ, ಪುಳುಂಸೆ, ಹುಣಚೆ, ಹುಣಸಿ, ಹುಣಸೆ, ಹುಣಿಚೆ, ಹುಣಿಚೆ, ಹುಣಿಸೆ, ಹುಣುಸೆ, ಹುಳಿಸೆ. ಇದು ಒಂದು ಮರ. ಅದರ ಹಣ್ಣೂ ಆಗಬಹುದು. ಒಂದು ಊರಿನ ಹೆಸರಾಗಬಹುದು. ಹುಣಸೆಯ ತೋಪಾಗಬಹುದು. ಪುಣಿಸೆಯ ಗಂಗ ಎಂಬ ವೀರನ ಹೆಸರು ಶಾಸನಗಳಲ್ಲಿ ದೊರಕುತ್ತದೆ. ಇದು ಕಥೆ. ಹುಣಸೆಯ ಮರದಲ್ಲಿ ಬ್ರಹ್ಮರಾಕ್ಷಸನು ವಾಸಮಾಡುತ್ತಾನೆ ಎಂಬ ನಂಬಿಕೆ ಹಿಂದೆ ಇತ್ತು. ಈಗ ಆ ಬ್ರಹ್ಮರಾಕ್ಷಸನು ಕೇವಲ ದೆವ್ವವಾಗಿಬಿಟ್ಟಿದ್ದಾನೆ. ರಾತ್ರಿಯ ಹೊತ್ತು ಹುಣಸೆಯ ಮರದ ಕೆಳಗೆ ಯಾರೂ ಇರುವ ಧೈರ್ಯ ಮಾಡುವುದಿಲ್ಲ. ಇದು ಗ್ರಾಮೀಣ ಜನರಲ್ಲಿ ಕೆಲವರ ನಂಬಿಕೆ, ಈಗಲೂ.

**ಹುಣ್ಣಿಮೆ** ಇದು ಪೂರ್ಣಿಮಾ ಎಂಬ ಶಬ್ದದ ತದ್ಭವ. ಪೂರ್ಣಮಾ, ಪೂರ್ಣಿಮಾ ಎಂಬ

ಎರಡು ರೂಪಗಳಿವೆ ಸಂಸ್ಕೃತದಲ್ಲಿ. ಅವುಗಳಲ್ಲಿ ಪೂರ್ಣಿಮಾ ಎಂಬ ಒಂದರಿಂದ ಕನ್ನಡಕ್ಕೆ ಪುಣ್ಣಿಮೆ ಎಂಬ ರೂಪ ಬರುತ್ತದೆ. ಅಲ್ಲಿಂದ ಮುಂದೆ ಈ ಶಬ್ದವು ಪಡೆದಿರುವ ಬೇರೆ ರೂಪಗಳ ಸಂಖ್ಯೆ ಆಶ್ಚರ್ಯವಾಗುವಂತೆ ಹೆಚ್ಚಾಗಿದೆ. ನೋಡಿ. ಪುಣ್ಣಮಿ, ಪುಣ್ಣಮೆ, ಪುಣ್ಣೆಮೆ, ಪುಣ್ಣಿವೆ, ಹುಣ್ಣುಮೆ, ಪುಣ್ಣುವೆ, ಪುಣ್ಯಮೆ, ಪುನ್ನಮಿ, ಪೂರ್ಣಮಿ, ಹುಣಿಮೆ, ಹುಣಿವೆ, ಹುಣುಮೆ, ಹುಣ್ಣಮಿ, ಹುಣ್ಣವೆ, ಹುಣ್ಣಿಮೆ, ಹುಣ್ಣಿವೆ, ಹುಣ್ಣಮೆ ಹೀಗೆ ಇಪ್ಪತ್ತು ರೂಪಗಳಲ್ಲಿಯೂ ಕವಿ ಪ್ರಯೋಗಗಳಿವೆ. ನಮ್ಮ ಜನಕ್ಕೆ ಪೂರ್ಣಿಮೆ ಎಷ್ಟು ಪ್ರಿಯವಾದುದು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬಹುದು. ಹೊಸಗನ್ನಡದಲ್ಲಿ ಈಗ ಹುಣ್ಮೆ ಎಂದು ಕೆಲವರು ಉಪಯೋಗಿಸುತ್ತಿದ್ದಾರೆ. ರೂಪ ವಿಚಿತ್ರವಾದರೂ ಈ ಶಬ್ದದ ಅರ್ಥ ಸ್ಪಷ್ಟ.

**ಹುದಿಲ ಹಂತಿ** ಹುದಿಲ ಎಂದರೆ ಕೆಸರು, ರಾಡಿ. ಹಂತಿ ಎಂದರೆ ಸಾಲು. ಕೆಸರಿನ ಸಾಲು ಎಂದರೆ ಅರ್ಥವಾಗುವುದಿಲ್ಲ. ಹುದಿಲು ಎಂಬ ಶಬ್ದಕ್ಕೆ ಬೇರೆ ಬೇರೆ ಅರ್ಥಗಳೂ ಇವೆ. ಕಳ್ಳ ಮರಳು, ಕಳ್ಳ ಉಸುಬು ಎಂಬುದು ಒಂದರ್ಥ. ಆಲಂಕಾರಿಕವಾಗಿ ಗೊಂದಲ, ಗೋಜು ಎಂಬ ಅರ್ಥವೂ ಇದೆ. ಆದುದರಿಂದ ಹುದಿಲ ಹಂತಿ ಎಂದರೆ ಗೊಂದಲಗಳ ಸಮೂಹ, ಅನೇಕ ಗೋಜುಗಳು ಎಂಬ ಅರ್ಥವನ್ನು ಮಾಡಬಹುದು. ಸರಿಯಾದ ರೂಪ ಹುದಿಲ ಹಂತಿ. ರೈತರು ಧಾನ್ಯವನ್ನು ಬೇರೆ ಮಾಡುವಾಗ ಮಳೆ ಬಂದರೆ ಕಾಳುಗಳು ಕೆಸರಿನಲ್ಲಿ ಸೇರಿಬಿಡುತ್ತವೆ. ಅದು ತುಂಬ ಗೊಂದಲದ ಪರಿಸ್ಥಿತಿ. ಈ ಬಗ್ಗೆ ಗಲಗಲಿಯ ಯುವಕ ಕವಿ ಶ್ರೀಕೋರಟಕರ ಅರ್ಜುನ ಅವರು ಹುದಲ್ಹಂತಿ ಎಂಬ ಒಂದು ಕಿರು ಕವನ ಸಂಕಲನವನ್ನು ಪ್ರಕಟಪಡಿಸಿದ್ದಾರೆ.

**ಹುನ್ನಾರು** ಇದು ಹುನರ್ ಎಂಬ ಪಾರಸೀ ಶಬ್ದದ ಕನ್ನಡ ರೂಪ. ಇದಕ್ಕೆ ಶಕ್ತಿ, ಸಾಮರ್ಥ್ಯ, ವಿದ್ವತ್ತು, ಕೌಶಲ, ಚುರುಕುತನ ಮುಂತಾದ ಅರ್ಥಗಳಿವೆ. ಕನ್ನಡದಲ್ಲಿ ಉಪಾಯಗಳನ್ನು ಹುಡುಕುವಿಕೆ, ಯೋಚನೆ ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಈ ಶಬ್ದಕ್ಕೆ ಅಷ್ಟು ಗೌರವವಾದ ಅರ್ಥ ಮಾಯವಾಗುತ್ತಿದೆ. ಇಂಗ್ಲಿಷಿನ Clever ಅರ್ಥ ತುಂಬಿಕೊಳ್ಳುತ್ತಿದೆ.

**ಹುರಳೀಕಾಯಿ** ಬೀನ್ಸ್ ಎಂಬುದನ್ನೇ ಹುರಳೀಕಾಯಿ ಎಂದು ಕರೆಯುವ ರೂಢಿಯ ಶಬ್ದ. ತಿಂಗಳ ಹುರುಳಿ ಎಂಬುದರ ಸಂಕ್ಷಿಪ್ತರೂಪ. ಹುರಳೀ ಧಾನ್ಯ ಇನ್ನೊಂದು. ತೊಗರಿ ಧಾನ್ಯ, ಹೆಸರು ಧಾನ್ಯ ಎಂದು ಕರೆಯುವಂತೆ. ಇಂಗ್ಲಿಷ್‌ನಲ್ಲಿ Horse gram ಎನ್ನುತ್ತಾರೆ.

**ಹುರಿಯಾಳು** ಹುರಿ ಎಂಬ ಶಬ್ದಕ್ಕೆ ಪುರಿ ಮೂಲ. ಇದು ಕನ್ನಡದ ಶಬ್ದ. ಪುರಿ ಎಂಬುದಕ್ಕೆ ಉತ್ಸಾಹ ಎಂಬ ಒಂದು ಮುಖ್ಯವಾದ ಅರ್ಥವಿದೆ. ಆದುದರಿಂದ ಹುರಿಯಾಳು ಎಂದರೆ ಉತ್ಸಾಹದಿಂದ ಸ್ಪರ್ಧೆಗೆ ನಿಂತಿರುವ ವ್ಯಕ್ತಿ ಎಂದರ್ಥ.

**ಹುರುಳು** ಎಂದರೆ ಸತ್ವ; ತಿರುಳು. ಹಣ್ಣುಗಳ ಮತ್ತು ಕಾಯಿಗಳ ಒಳಭಾಗ ಹೇಗೆ ಮುಖ್ಯವೋ ಹಾಗೆ ಇರತಕ್ಕದ್ದು. ಇದೇ ಸಾರ, ಕೆಚ್ಚು, ಅಂತಸ್ಸತ್ವ. ತಿಳಲು ಎಂಬ ಬೇರೆಯ ರೂಪವೂ ಅದಕ್ಕೆ ಉಂಟು. ತಿರುಳ್ಗನ್ನಡ ಎಂದರೆ ಸತ್ವಯುತವಾದ ಕನ್ನಡ ಭಾಷೆ ಎಂದರ್ಥ. **ಪುರಿಗೆ ಜೆಯ ತಿರುಳಕನ್ನಡ** ಎಂದು ಪಂಪ ಹೇಳಿದರೆ, ರನ್ನ **ತಿರುಳ ಕನ್ನಡಂ ಮಧುರಮ್ಯೋತ್ಪನ್ನಂ** ಎನ್ನುತ್ತಾನೆ. ನಮ್ಮ ಕವಿಗಳಿಗೆ ಕನ್ನಡ ಭಾಷೆಯೆಂದರೆ ಅಷ್ಟು ಅಭಿಮಾನ. ಕನ್ನಡದಲ್ಲಿ ಎಷ್ಟು ಹುರುಳು ಇದೆ ಎಂಬುದನ್ನು ತಿಳಿಯಲು ನಮ್ಮ ಪ್ರಾಚೀನ, ಆಧುನಿಕ ಕಾವ್ಯ ರಾಶಿಯಲ್ಲಿ ಮುಳುಗಿ ಏಳಬೇಕು. ಆಗ ನಿಮ್ಮ ಸ್ವಂತ ಹುರುಳು ಅಧಿಕಗೊಳ್ಳುತ್ತದೆ.

**ಹುಲಿಸುವುದು** ಯತ್ನ ಮಾಡುವುದು ನಿಲ್ಲದೆ ಇದ್ದರೆ ಅದು ಫಲಿಸುವುದು, ಫಲವನ್ನು ನೀಡುತ್ತದೆ. ಆ ಬಳಿಕ ಆ ಫಲ ಹುಲಿಸುತ್ತದೆ = ಅಧಿಕವಾಗುತ್ತ ಹೋಗುತ್ತದೆ. ಕನ್ನಡದಲ್ಲಿ

ಹುಲಸು, ಹುಲುಸು, ಹುಲಿಸು ಎಂಬ ಮೂರು ರೂಪಗಳಲ್ಲಿ ಪ್ರಯೋಗವಾಗುವ ಈ ಶಬ್ದಕ್ಕೆ ಹೆಚ್ಚಾಗು, ಅಧಿಕವಾಗು, ಪ್ರಮಾಣದಲ್ಲಿ ತುಂಬುತ್ತಾ ಬರು ಎಂಬ ಅರ್ಥಗಳಿವೆ. ಹೊಯ್ಸಳ ಕರ್ನಾಟಕ ಪಂಗಡದ ಮತ್ತು ಬೊಬ್ಬೂರುಕಮ್ಮೆ ಪಂಗಡದ ಮನೆತನಗಳಲ್ಲಿ ಈ ಶಬ್ದವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಎಸ್.ಜಿ. ನರಸಿಂಹಾಚಾರ್ಯರು ರಚಿಸಿರುವ ಮರಳಿಯತ್ನವ ಮಾಡು ಎಂಬ ಕವನದ ಕೊನೆಯ ಪದ್ಯದಲ್ಲಿ ಬರುವ ಮೂರು ಸಾಲುಗಳು ಹೀಗಿವೆ:

*ಸುಲಭವಹುದಾ ಕೆಲಸ*
*ಫಲಿಸುವದು ಹುಲಿಸುವುದು*
*ನೆಲೆಗಿಡದೆ ಯತ್ನವನು ಮಾಡು ಮಗುವೆ*

**ಹು, ಹೂ, ಹೂವು, ಹುವು:** ಎಂಬ ರೂಪಗಳಲ್ಲಿ ಯಾವುದು ಸರಿ? ಈ ಎಲ್ಲಕ್ಕೂ ಮೂಲ ಶಬ್ದ ಹಳಗನ್ನಡದ 'ಪೂ'. ಈ ಶಬ್ದಕ್ಕೆ ಕ್ರಿಯಾಪದವಾದರೆ ಹೂವು ಬಿಡು ಎಂದೂ ನಾಮಪದವಾದರೆ ಹೂವು ಎಂದೂ ಅರ್ಥವಾಗುತ್ತದೆ. ಹೊಸಗನ್ನಡದಲ್ಲಿ ಹೂ, ಹೂವು, ಹುವ್ವು ಎಂಬ ರೂಪಗಳು ಪ್ರಯೋಗದಲ್ಲಿವೆ. ಹು, ಹುವು ಎಂಬುವು ಪ್ರಯೋಗದಲ್ಲಿಲ್ಲ. ಗ್ರಾಮ್ಯವಾಗಿ ಹುವ್ವ ಎಂಬುದೂ ಉಂಟು. ದಕ್ಷಿಣ ಕನ್ನಡ ಪ್ರದೇಶದಲ್ಲಿ ಹೂಗ ಎಂಬುದು ಪ್ರಯೋಗದಲ್ಲಿದೆ. ಕೆಲವು ಷಟ್ಪದಿ ಕಾವ್ಯಗಳಲ್ಲಿ ಕೂಡ ಹೂಗ ಪ್ರಯೋಗವಿದೆ.

**ಹೂಬೇಹೂಬು** ಪಾರಸೀ ಭಾಷೆಯಲ್ಲಿ ರೂಬರೂ ಎಂಬ ಶಬ್ದವಿದೆ. ಅದಕ್ಕೆ ಎದುರುಬದುರು ಎಂದು ಅರ್ಥ. ಹೂಬಹೂ ಎಂಬ ಶಬ್ದವು ಅರಾಬಿಕ್ ಭಾಷೆಯಿಂದ ಬಂದದ್ದು, ಉರ್ದುವಿನ ಮೂಲಕ ಬಂದು ಹಿಂದಿಯಲ್ಲಿ ಸೇರಿಕೊಂಡಿದೆ. ಇದಕ್ಕೆ ತದ್ರೂಪು, ಯಥಾವತ್ ಎಂಬ ಅರ್ಥಗಳಿವೆ. ಬೀದರ್ ಪ್ರದೇಶವು ಬಹುಕಾಲ ಉರ್ದು ಪ್ರಭಾವಕ್ಕೆ ಒಳಗಾದ್ದರಿಂದ ಅಲ್ಲಿ ಕನ್ನಡದಲ್ಲಿ ಅದು ಹೂಬೇಹೂಬು ಆಗಿದೆ. ಈ ಶಬ್ದದ ಕನ್ನಡ ವ್ಯುತ್ಪತ್ತಿ ಅನಿಶ್ಚಿತ. ಇದು ಈಚಿನ ಕನ್ನಡದಲ್ಲಿ ಕಾಣುವ ಶಬ್ದ. ಪ್ರಾಚೀನ ಕನ್ನಡದಲ್ಲಾಗಲೀ ನಡುಗನ್ನಡದಲ್ಲಾಗಲೀ ಈ ಶಬ್ದ ಕಾಣಬರುವುದಿಲ್ಲ. ನನ್ನ ವಿಶ್ಲೇಷಣೆಯಲ್ಲಿ ಎದರು ಬದಲು ಎಂದು ಇದ್ದದ್ದು ಎದುರುಬದರು ಆಗಿರಬೇಕು. ಎದುರು ಬದಲು ಎಂದರೆ ಎದುರಿಗೆ ಇರುವ ಪ್ರತಿ (Duplicate) ವಸ್ತು ಎಂದು ಅರ್ಥವಾಗುತ್ತದೆ. ಇದು ಕೇವಲ ಊಹಾತ್ಮಕ. ನಿಶ್ಚಿತವಾದ ವ್ಯುತ್ಪತ್ತಿ ಅಲ್ಲ.

ಪಾರಸೀ ಶಬ್ದಕ್ಕೆ ಈಗ ಹಿಂದಿರುಗೋಣ. ರೂಬರೂ ಶಬ್ದಕ್ಕೆ ಜೊತೆಯಲ್ಲಿ ಪಾರಸೀ ಭಾಷೆಯಲ್ಲಿಯೇ ರೂಬೇರೂಬ್ ಎಂಬ ಶಬ್ದವೂ ಇದೆ. ಇದಕ್ಕೆ ತದ್ವತ್ತು ಅದೇ ರೀತಿ ಎಂದು ಅರ್ಥ. ಇದು ಮರಾಠೀ ಭಾಷೆಯಲ್ಲಿ ಪ್ರಯೋಗದಲ್ಲಿದೆ. ಅಲ್ಲಿಂದ ಕನ್ನಡಕ್ಕೆ ಬರುವಾಗ ಬೀದರ್ ಜಿಲ್ಲೆಗೆ ಬರುವ ವೇಳೆಗೆ ಇದೇ ಶಬ್ದ ಹೂಬೇಹೂಬು ಆಗಿರಬಹುದು. ಇದು ಸಾಧ್ಯ. ನೋಡಿ: ರೂಬುರೂಬು

**ಹೂವಾಡಗಿತ್ತಿ** ಇದು ಕನ್ನಡದ ಶಬ್ದ. ಇದು ಹೀಗೆ ಬೆಳೆದ ರೀತಿ ಸ್ವಾರಸ್ಯವಾಗಿದೆ. ಹಳಗನ್ನಡದಲ್ಲಿ ಪೂವಡಿಗ ಎಂದರೆ ಹೂವನ್ನು ಕಟ್ಟಿ ಮಾರುವವನು, ಹೂವಿನ ವ್ಯಾಪಾರಿ. ಪೂ + ಅಡಿಗ = ಪೂವಡಿಗ. ಅಡಿಗ ಎಂಬುದು ಒಂದು ಪ್ರತ್ಯಯ. ಅದು ಇದರಲ್ಲಿ ವರ್ತಿಸುವವನು ಎಂಬ ಅರ್ಥದಲ್ಲಿ ಸೇರುತ್ತದೆ. ಹೀಗೆ ಆಗಿರುವ ಶಬ್ದಗಳು ದೇವಡಿಗ, ಪಾವಡಿಗ, ಪೂವಡಿಗ. ಪೂವಡಿಗ ಎಂಬುದಕ್ಕೆ ಸ್ತ್ರೀ ಲಿಂಗದ ಪ್ರತ್ಯಯ ಇತಿ, ಇತ್ತಿ ಸೇರಿದರೆ ಪೂವಡಗಿತಿ, ಪೂವಡಿಗಿತ್ತಿ ಎಂದು ರೂಪವಾಗುತ್ತದೆ. ಇದೇ ಹೂವಡಿಗಿತಿ, ಹೂವಡಿಗಿತ್ತಿ

ಎಂಬ ರೂಪವನ್ನು ಪಡೆಯುತ್ತದೆ. ಹೂವಾಡಿಗಿತ್ತಿ ಎಂಬ ರೂಪ ಹಾವಾಡಗಿತ್ತಿ ಎಂಬುದರ ಸಾಮ್ಯದಿಂದ ಆದ ರೂಪ.

**ಹೃಷೀಕೇಶ** ಇದೊಂದು ಸಂಸ್ಕೃತ ಶಬ್ದ. ಹೃಷೀಕ ಎಂದರೆ ಇಂದ್ರಿಯ. ಇಂದ್ರಿಯವು **ಹೃಷ್ಯತೀತಿ ಹೃಷೀಕಂ** ಎಂಬ ವಿವರಣೆಯನ್ನು ಹೊಂದಿದೆ. ಹರ್ಷವನ್ನು ಪಡೆಯುವ ಸಾಧನ ಅದು ಎಂದು ಹೃಷೀಕ. ಹೃಷೀಕಕ್ಕೆ ಈಶ, ಹೃಷೀಕೇಶ, ಇಂದ್ರಿಯಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುವವನು. ಈ ಶಬ್ದದಲ್ಲಿ ಕೇಶ ಎಂಬುದು ಇಲ್ಲ. ಅದು ಈಶಮಾತ್ರ. ಕೇಶವ ಶಬ್ದದಲ್ಲಿ ಕೇಶ ಇದೆ. **ಶೋಭನಾಃ ಕೇಶಾ ಯಸ್ಯ ಸಃ ಕೇಶವಃ** ಯಾರ ಕೂದಲು ಅಲಂಕಾರಯುಕ್ತವಾಗಿದೆಯೋ ಅವನು ಕೇಶವ. ಈ ಎಲ್ಲ ಹೆಸರೂ ವಿಷ್ಣುವಿಗೆ ಸಲ್ಲುತ್ತವೆ.

**ಹೆಂಗಸು, ಮಹಿಳೆ, ಸ್ತ್ರೀ, ಹೆಣ್ಣು** ಈ ಶಬ್ದಗಳಲ್ಲಿ ಮೊದಲನೆಯದು ಕೊನೆಯದು ಕನ್ನಡ, ಮಧ್ಯದ ಎರಡರ ಮೂಲ ಸಂಸ್ಕೃತ. ಕನ್ನಡದಲ್ಲಿ ಹೆಣ್ಣು, ಹೆಂಗಸು ಎಂಬ ಎರಡು ಶಬ್ದಗಳಿಗೂ ಒಂದೇ ಮೂಲವಾದರೂ ಅರ್ಥದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಹೆಣ್ಣು ಸ್ವಲ್ಪ ಚಿಕ್ಕ ವಯಸ್ಸಿನವರಿಗೂ ಹೆಂಗಸು ದೊಡ್ಡ ವಯಸ್ಸಿನವರಿಗೂ ಸಾಮಾನ್ಯವಾಗಿ ಅನ್ವಯವಾಗುತ್ತವೆ. ಹಳಗನ್ನಡದ ಪೆಣ್ ಶಬ್ದದಿಂದ ಹೆಣ್ಣು ಬಂದಿದೆ. ಪೆಣ್ < ಪೆಣ್ಣು <ಹೆಣ್ಣು. ಇದು ಅದು ವ್ಯತ್ಯಾಸವಾಗಿರುವ ಕ್ರಮ. ಹೆಂಗಸು ಶಬ್ದಕ್ಕೆ ಬೇರೆಯ ಕ್ರಮವಿದೆ. ಪೆಣ್ + ಕೂಸು = ಪೆಂಗೂಸು. ಹೆಣ್ಣು + ಕೂಸು = ಹೆಂಗೂಸು < ಹೆಂಗುಸು < ಹೆಂಗಸು. ಬರಿಯ ಕೂಸು ಶಬ್ದಕ್ಕೂ ಹೆಣ್ಣು ಮಗು ಎಂಬ ಅರ್ಥವೇ ಹೆಚ್ಚಾಗಿದೆ. 'ನಮ್ಮ ಕುನ್ನಿಗೆ ಕೂಸ ಕೊಡಬೇಡ' ಎಂಬ ವಚನ ಒಂದರ ಭಾಗವನ್ನು ಪರಿಶೀಲಿಸಿ. ಕೂಸು ಶಬ್ದಕ್ಕೆ ಗಂಡು ಮಗು ಎಂಬ ಅರ್ಥವೂ ಕೆಲವು ಕಡೆಗಳಲ್ಲಿ ಉಂಟು.

ಸಂಸ್ಕೃತದಲ್ಲಿ ಹೆಂಗಸು ಎಂಬ ಅರ್ಥದ ಅನೇಕ ಶಬ್ದಗಳಿವೆ. ಮಹಿಲಾ, ಸ್ತ್ರೀ, ಯೋಷಿತ್, ಅಬಲಾ, ಯೋಷಾ, ನಾರೀ, ಸೀಮಂತಿನೀ, ವಧೂ, ವನಿತಾ, ಪ್ರಮದಾ ಇತ್ಯಾದಿ. ಸಂಸ್ಕೃತದ ಈ ಶಬ್ದಗಳಿಗೆ ಶಬ್ದದ ವ್ಯುತ್ಪತ್ತಿಯನ್ನು ಅನುಸರಿಸಿ ಬೇರೆ ಬೇರೆ ಅರ್ಥಗಳಿವೆ. ಇವಳಲ್ಲಿ ಮಕ್ಕಳಾಗುತ್ತವೆ ಎಂಬರ್ಥ ಸ್ತ್ರೀ ಶಬ್ದಕ್ಕೆ ಇದೆ ಎಂದು ವಿದ್ವಾಂಸರು ವಿವರಿಸುತ್ತಾರೆ. ಮಹಿಲಾ (ಮಹಿಳೆ) ಶಬ್ದವು ಮಕ್ಕಳನ್ನು ಹೆತ್ತು ಉತ್ಸವವನ್ನು, ಸಂತೋಷವನ್ನು ತರುತ್ತಾಳೆ ಎಂಬರ್ಥವನ್ನು ಕೊಡುತ್ತದೆ. ಗಂಡಸಿನ ಬಲದಷ್ಟು ಬಲ ಇವಳಿಗೆ ಇಲ್ಲ ಎಂದು ಅಬಲಾ ಎಂಬ ಶಬ್ದ ತಿಳಿಸುತ್ತದೆ. ಅಮರಕ್ಕೆ ಟೀಕೆಯನ್ನು ಬರೆದಿರುವ ಅನೇಕರು ಹೀಗೆ ಬೇರೆ ಬೇರೆ ಅರ್ಥವನ್ನು ತಿಳಿಸುತ್ತಾರೆ. ಕವಿಗಳಲ್ಲಿ ಸಮರ್ಥರಾದ ಕೆಲವರು ಈ ಶಬ್ದಗಳಲ್ಲಿ ಸಂದರ್ಭಕ್ಕೆ ಸರಿಯಾಗಿ ಬೇಕಾದ ಶಬ್ದವನ್ನು ಆರಿಸುತ್ತಾರೆ. ಅಭಿಜ್ಞಾನ ಶಾಕುಂತಲದ ಐದನೆಯ ಅಂಕದಲ್ಲಿ ಶಕುಂತಲೆಯು ದುಷ್ಯಂತನಿಗೆ ಉಂಗುರವನ್ನು ತೋರಿಸಲು ಹೋದಾಗ ಅದು ಕಾಣದೆ "ನನ್ನ ಬೆರಳಿನ ಉಂಗುರ ಇಲ್ಲವಲ್ಲಾ" ಎನ್ನುವಳು. ಅವಳೊಡನಿದ್ದ ಗೌತಮಿಯು "ಶಚೀತೀರ್ಥದಲ್ಲಿ ಬೆರಳಿನಿಂದ ಜಾರಿ ಬಿದ್ದಿರಬಹುದು" ಎನ್ನುತ್ತಾಳೆ. ಆಗ ಶಕುಂತಳೆ ಗರ್ಭಿಣಿಯೆಂದರಿತಿದ್ದ ರಾಜನು "ಸ್ತ್ರೀಯರು ಸಮಯಕ್ಕೆ ತಕ್ಕ ಬುದ್ಧಿಯುಳ್ಳವರೆಂಬುದು ಸುಳ್ಳಲ್ಲ" ಎನ್ನುತ್ತಾನೆ. ಸಂಸ್ಕೃತ ಮೂಲದಲ್ಲಿ **"ಇದಂ ತತ್ ಪ್ರತ್ಯುತ್ಪನ್ನಮತಿ ಸ್ತ್ರೈಣಮಿತಿ/ ಯದುಚ್ಯತೇ"** ಎಂದಿದೆ. ಸ್ತ್ರೀ ಸಂಬಂಧ ವಾಚಕವನ್ನೇ ಮೂಲ ಲೇಖಕನೂ ಅನುವಾದಕನೂ ಉಳಿಸಿಕೊಂಡಿರುವುದರಿಂದ ಆ ಪ್ರಯೋಗದಲ್ಲಿ ಪ್ರತಿಭಾಜನ್ಯವಾದ ಚಮತ್ಕಾರವಿದೆ ಎಂಬುದು ಹೊಳೆಯದಿರದು. ಹೀಗೆ ಎಲ್ಲ ಕವಿಗಳೂ ಶಬ್ದಗಳನ್ನು ಆರಿಸುತ್ತಾರೆ ಸೊಗಸಿನ ಸೃಷ್ಟಿಗೋಸ್ಕರ. ವಾಚನಾನುಭವದಿಂದ ತಿಳಿಯಬೇಕು.

**ಹೆಂಜೇರು** ಈ ಊರು ಆಂಧ್ರಪ್ರದೇಶದಲ್ಲಿ ಮಡಕಶಿರ ತಾಲ್ಲೂಕಿನಲ್ಲಿ ಇದೆ.

ಚಿಕ್ಕನಾಯಕನಹಳ್ಳಿಯ ಬಳಿಯ ಸಣ್ಣ ಗುಡ್ಡದ ಮೇಲಿರುವ ಕಾಲಭೈರವನ ಭಕ್ತರು ಆ ದೇವರನ್ನು ಹಂಜೇರಪ್ಪ, ಹೆಂಜೇರು ಭೈರವ ಎಂದು ಕರೆಯುತ್ತಾರೆ.

**ಹೆಂಬೇಡಿ** ಎಂದರೆ ಹೆಣ್ಣಿನ ಹಾಗೆ ಹೇಡಿಯಾದವನು, ತುಂಬ ಹೇಡಿಯಾದವನು ಎಂದರ್ಥ. ಪೆಣ್ < ಹೆಂ + ಹೇಡಿ > ಪೇಡಿ = ಹೆಂಬೇಡಿ. ಈ ಶಬ್ದದಲ್ಲಿ ಹಿರಿಯ ಎಂಬ ಅರ್ಥದ ಪೆರ್ಮೆ ಶಬ್ದದ ಸಂಬಂಧವಿಲ್ಲ. ಪೆರ್ಬೇಡಿ ಎಂಬ ರೂಪವು ಪ್ರಯೋಗದಲ್ಲಿಲ್ಲ. ಹೆಂಬೇಡಿಯಲ್ಲಿ ಹೆಣ್ < ಹೆಣ್ಣು > ಪೆಣ್ ಎಂಬುದೇ ಪ್ರಧಾನವೆಂದು ಎಣಿಸಬೇಕು.

**ಹೆಗಡೆ** ಎಂಬ ಶಬ್ದವನ್ನು ಮಕ್ಕಳಿಗೆ ನಾಮಕರಣ ಮಾಡುವಾಗ ಉಪಯೋಗಿಸುವುದು ಸೂಕ್ತವಲ್ಲ. ಆ ಶಬ್ದ ಒಂದು ಅಧಿಕಾರದ ಹೆಸರು. ಅದರ ಮೂಲ ಶಬ್ದ ಪೆರ್ಗಡೆ. ಅದೊಂದು ಅಧಿಕಾರ. ಗ್ರಾಮದ ಮುಖ್ಯಾಧಿಕಾರಿ, ಅರಮನೆಯ ಮೇಲ್ವಿಚಾರಕ ಇತ್ಯಾದಿ. ಅದನ್ನು ಬಿರುದಾಗಿ ಮಾತ್ರ ಉಪಯೋಗಿಸಬೇಕು. ಈಚೆಗೆ ಇದನ್ನು ಒಂದು ಮನೆತನದ ಹೆಸರಾಗಿ ಅಂಕಿತನಾಮದ ಜೊತೆಯಲ್ಲಿ ಉಪಯೋಗಿಸುತ್ತಾರೆ. ಕೆಲವರು ಬ್ರಾಹ್ಮಣರೂ, ಜೈನರೂ, ಬಂಟರೂ ಈ ಹೆಸರನ್ನು ಉಪಯೋಗಿಸುತ್ತಾರೆ. ಆದರೆ ಇದು ಜಾತಿ ವಾಚಕವಲ್ಲ. ಐತಾಳ, ಹಂದೆ, ಮಲ್ಯ ಎಂಬಂತೆ ವಂಶನಾಮ. ನೋಡಿ: ಪೆರ್ಗಡೆ.

**ಹೆಚ್ಚುಗಟ್ಟಳೆ** ಈ ಶಬ್ದ ಹೆಚ್ಚು ಮತ್ತು ಕಟ್ಟಳೆ ಎರಡೂ ಸೇರಿ ಆಗಿರುವ ಶಬ್ದ. ಹೆಚ್ಚುಗಟ್ಟಳೆ ಎಂಬುದು ಸರಿಯಾದ ರೂಪ. ಹೆಚ್ಚುಕಟ್ಟಲೆ ಸರಿಯಾದ ರೂಪವಲ್ಲ. ಅದು ಆಡುಮಾತಿನಲ್ಲಿದೆ ಅಷ್ಟೆ. ಕಟ್ಟಳೆ ಎಂದರೆ ನಿಯಮ, ನಿರ್ಬಂಧ. ಮನೆಯಲ್ಲಿ ಪಿತೃಶ್ರಾದ್ಧದ ದಿನವನ್ನು ಹೆಚ್ಚುಗಟ್ಟಳೆ ಎಂದು ಕರೆಯುತ್ತಾರೆ. ಏಕೆಂದರೆ ಆ ಹೊತ್ತು ಎಲ್ಲವೂ ದಿನನಿತ್ಯಕ್ಕಿಂತ ಹೆಚ್ಚು ನಿಯಮಬದ್ಧವಾಗಿರುತ್ತವೆ. ಆದ್ದರಿಂದ ಹೆಚ್ಚುಗಟ್ಟಳೆ = ಶ್ರಾದ್ಧ. ಅದನ್ನು **ತದ್ದಿನ** ಎಂದೂ ಕರೆಯುತ್ತಾರೆ.

**ಹೆಚ್ಚುವರಿ ನೋಡಿ: ಇಳುವರಿ**

**ಹೆಡತಲೆ** ಇದಕ್ಕೆ ತಲೆಯ ಹಿಂಭಾಗ ಎಂದರ್ಥ. ಇದರ ಮೂಲ ಪೆಡದಲೆ, ಪೆಜಗು + ತಲೆ ಎಂದರೆ ತಲೆಯ ಹಿಂಭಾಗ ಎಂದು ಅರ್ಥ. ಈ ಪೆಡತಲೆಯೇ ಹೆಡತಲೆ, ಹೆಡದಲೆ ಎಂಬ ರೂಪಗಳಲ್ಲಿ ಕನ್ನಡದಲ್ಲಿ ಪ್ರಯೋಗವಾಗುತ್ತಾ ಇದೆ.

**ಹೆಣ್ಣು; ಹೆಂಣು, ಕಂಣು ಕಣ್ಣು** ಈ ಜೊತೆಗಳಲ್ಲಿ ಯಾವುದು ಸರಿಯಾದ ರೂಪ? ಹಳಗನ್ನಡದಲ್ಲಿ ಪೆಣ್ ಎಂಬ ರೂಪವಿತ್ತು. ಅದು ಹೊಸಗನ್ನಡದಲ್ಲಿ ಹೆಣ್ಣು ಎಂದಾಗಿದೆ. ಹಾಗೆಯೇ ಹಳಗನ್ನಡದ ಕಣ್ ಹೊಸಗನ್ನಡದಲ್ಲಿ ಕಣ್ಣು ಎಂದಾಗಿದೆ. ಣಕಾರ ಸಹಿತವಾಗಿ ಬರೆಯುವುದೇ ಸರಿ. ಹಿಂದೆ ಕನ್ನಡದ ಬರವಣಿಗೆಯಲ್ಲಿ ಣ ಕಾರ ಮಕಾರಗಳು ಒತ್ತಕ್ಷರಗಳಾದಾಗ ಅನುಸ್ವಾರವನ್ನು ಉಪಯೋಗಿಸಿ ಶಬ್ದಗಳನ್ನು ಬರೆಯುವ ಪದ್ಧತಿ ಇತ್ತು. ಕೆಲವು ಹಸ್ತಪ್ರತಿಗಳಲ್ಲಿಯೂ ಈ ರೂಪಗಳು ಕಾಣಬರುತ್ತವೆ. ಅಂಣ, ಮಂಣು, ಸುಂಣ, ಬೆಂಣೆ, ತಂಮ ಇತ್ಯಾದಿ. ಈಗ ಸ್ವಾಭಾವಿಕವಾಗಿಯೇ ಹಾಗೆ ಬರೆಯುವುದು ತಪ್ಪು ಎಂಬ ತಿಳಿವಳಿಕೆ ಪ್ರಚಾರವಾಗಿದೆ.

**ಹೆಬ್ಬಾವು, ಹೆಗ್ಗಣ** ಇವುಗಳ ವಿಗ್ರಹ ವಾಕ್ಯವೇನು? ಪಿರಿದು + ಪಾವು = ಪೆರ್ಬಾವು. ಈ ರೂಪ ಹಿಂದಿನದು. ಅದರಿಂದ ಹೆಬ್ಬಾವು ಎಂಬುದು ಮುಂದಿನ ರೂಪ. ಆದುದರಿಂದ ಪೆರ್ ಎಂಬ ಸಂಕ್ಷಿಪ್ತರೂಪವು ಹೆರ್ ಆಗುತ್ತದೆ. ಆದರೆ ಹೆರ್ + ಹಾವು ಈ ಎರಡೂ ಸೇರಿದುದರಿಂದ ಹೆಬ್ಬಾವು ಆಗುವುದಿಲ್ಲ ಎಂಬುದನ್ನು ನೆನಪಿಡಬೇಕು. ಹೆಗ್ಗಣ ಎಂಬ ಶಬ್ದಕ್ಕೆ ವಿಗ್ರಹವಾಕ್ಯವನ್ನು ಬರೆಯಿರಿ ಎಂದು ಯಾವ ಶಾಲೆಯಲ್ಲಿಯೂ ಯಾವ ಅಧ್ಯಾಪಕರೂ ಪ್ರಶ್ನೆಯನ್ನೇ ಕೇಳಿರಲಾರರು. ಹೆಗ್ಗಣ ಒಂದು ಸಮಾಸ ಪದವಲ್ಲ. ಅದು ಒಂದು ದೇಶ್ಯ ಶಬ್ದ. ಕ್ರಿ.ಶ. ೧೨ನೇ ಶತಮಾನದಿಂದಲೂ ಈ ಶಬ್ದವು ಕನ್ನಡ ಸಾಹಿತ್ಯದಲ್ಲಿ

ದಾಖಲಾಗಿದೆ. ಆದುದರಿಂದ ಇನ್ನೂ ಒಂದೆರಡು ಶತಮಾನಗಳಷ್ಟು ಹಿಂದಿನಿಂದಲೂ ಅದು ಅಸ್ತಿತ್ವದಲ್ಲಿ ಇದ್ದಿರಬೇಕು. ಕನ್ನಡದಲ್ಲಿ ಒಂದೆರಡು ಕಡೆ ಕಾಣುವ ಪೆರ್ಗಣ ಎಂಬ ರೂಪ ಪ್ರೇತ ಶಬ್ದವೆಂದು (ghost word) ಕಾಣುತ್ತದೆ. ನಯಸೇನನೆಂಬ ಕವಿಯ ಕಾವ್ಯದಲ್ಲಿ ಪೆರ್ಗಣ, ಪೆಗ್ಗಣ ಎಂಬ ಎರಡೂ ರೂಪಗಳೂ ಕಾಣುತ್ತವೆ. ಹಳೆಯ ನಿಘಂಟುಗಳಲ್ಲಿ ಪೆಗ್ಗಣ ಎಂಬ ರೂಪವೇ ಕಾಣಬರುತ್ತದೆ. ಆದುದರಿಂದ ಹೆಗ್ಗಣವೂ ದಪ್ಪ ಇಲಿಯಾದುದರಿಂದ ಆ ಶಬ್ದದಲ್ಲಿ ಪಿರಿದು > ಪೆರ್ ಎಂಬ ರೂಪದ ಪ್ರವೇಶವಾದಂತೆ ಕಂಡುಬರುತ್ತದೆ. ಆಶ್ಚರ್ಯಕರವಾದ ವಿಷಯವೆಂದರೆ ತಮಿಳು, ತೆಲುಗು, ಮಲೆಯಾಳ ಭಾಷೆಗಳಲ್ಲಿ ಈ ಶಬ್ದಕ್ಕೆ ಜ್ಞಾತಿ ಶಬ್ದಗಳಿಲ್ಲ. ಆದರೆ ಕೊಡವ, ಕೋತ ಭಾಷೆಗಳಲ್ಲಿ ಎಗಮನ್, ಎಗಣ್, ಪೆಗಣ್ ಎಂಬ ರೂಪಗಳು ಜ್ಞಾತಿ ಶಬ್ದಗಳಾಗಿವೆ. ಸ್ಪಷ್ಟವಾಗಿ ಇದು ಸ್ವತಂತ್ರ ಶಬ್ದ. ಸಮಾಸವಲ್ಲ. ಆದುದರಿಂದ ಪೆರ್ಗಣ ಎಂಬುದು ಪ್ರೇತಶಬ್ದ. ಅದಕ್ಕೆ ಅಸ್ತಿತ್ವವಿಲ್ಲ. ತೆಲುಗಿನಲ್ಲಿ ಹೆಗ್ಗಣಕ್ಕೆ ಪಂದಿಕೊಕ್ಕು ಎನ್ನುತ್ತಾರೆ. ಈ ಶಬ್ದದಿಂದಲೇ ಇಂಗ್ಲಿಷಿನ 'ಬ್ಯಾಂಡಿಕೂಟ್' ಎಂಬ ಶಬ್ದ ಬಂದಿರುವುದು. 'ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವರಿಗೆ ಕೋಡಗ ಮುದ್ದು' ಎಂಬ ಗಾದೆಯಲ್ಲಿ ಕಾಣುವ ಕೋಡಗ = ಕಪಿ ಎಂಬ ಶಬ್ದವನ್ನು ನೋಡಿ. ಅದೂ ಕೂಡ ಸಮಾಸವಲ್ಲ. ಅದು ಒಂದು ಸ್ವತಂತ್ರ ಶಬ್ದ. ಕೋಡು = ಕೊಂಬೆ, ಕಪಿ = ಶಾಖಾಚರ. ಈ ಸಂಬಂಧದ ಸಾಮ್ಯದಿಂದ ಮನಸ್ಸಿಗೆ ಕೋಡಗ ಕೋಡು ಶಬ್ದದಿಂದ ಬಂದಿರಬಹುದೆಂಬ ಶಂಕೆಯುಂಟಾಗುತ್ತದೆ. ಅದು ನಿಷ್ಕಾರಣವಾದ ಶಂಕೆ, ತಮಿಳಿನಲ್ಲಿ ಕೋಟಂ ಎಂಬ, ತುಳುವಿನಲ್ಲಿ ಕೊಡಂಜ, ಕೊಡಂಜಿ ಎಂಬ ಜ್ಞಾತಿ ಶಬ್ದಗಳಿವೆ.

ಹೀಗೆ ಹೆಗ್ಗಣದ, ಕೋಡಗದ, ಹೆಬ್ಬಾವಿನ ಚರಿತ್ರೆ ತುಂಬ ಸ್ವಾರಸ್ಯಪೂರ್ಣವಾಗಿದೆ. ಈ ಶಬ್ದಗಳು ನಮ್ಮನ್ನು 'ಕೋಲ ತುದಿಯ ಕೋಡಗನಂತೆ' ಕುಣಿಸುತ್ತವೆ.

**ಹೇರಿಗ** ಗೂಢಚಾರ, ಬೇಹುಗಾರ.

**ಹೈಕು** ಎಂಬುದು ಜಪಾನಿ ಭಾಷೆಯಲ್ಲಿ ರಚಿತವಾಗುವ ಮೂರು ಸಾಲಿನ ಪದ್ಯ. ನಮ್ಮ ತ್ರಿಪದಿಯಂತೆ ಇರುತ್ತದೆ. ಅದರ ಛಂದಸ್ಸು ಬೇರೆ ಬಗೆಯದು. ೧೭ ಅಥವಾ ೧೯ Syllableಗಳಿಂದ ಕೂಡಿರುತ್ತದೆ. ಸಿಲಬಲ್ ಎಂದರೆ ಒಂದು ಉಸಿರಿನ ಉಚ್ಚಾರಣೆ.

**ಹೈರಾಣ** ಇದು ಅರಬ್ಬೀ ಶಬ್ದ. ನಮಗೆ ಹಿಂದೀ ಭಾಷೆಯ ಮೂಲಕ ಬಂದಿದೆ. ಇದಕ್ಕೆ ಅರ್ಥ ಸುಸ್ತಾದ, ದಣಿದ, ವ್ಯಗ್ರನಾದ, ರೋಗಗ್ರಸ್ತ, ಬಡ, ದುರ್ಬಲ ಎಂಬ ಅರ್ಥಗಳಿವೆ. ಹಿಂದಿಯಲ್ಲಿ ಈ ಶಬ್ದ ಹೈರಾನ್. ಅದಕ್ಕೆ ಅರ್ಥ ಆಶ್ಚರ್ಯ, ಚಕಿತ, ದಿಗ್ಭ್ರಮೆಗೊಂಡ, ಕಕ್ಕಾಬಿಕ್ಕಿಯಾದ. ಎಲ್ಲಕಡೆ ಇದು ಗುಣವಾಚಕದ ಅರ್ಥವನ್ನು ಹೊಂದಿದೆ. ಮರಾಠೀ ಭಾಷೆಯಲ್ಲಿಯೂ ಈ ಶಬ್ದ ಪ್ರಸಿದ್ಧ. ಕನ್ನಡಕ್ಕೆ ಮರಾಠೀ ಮೂಲಕ ಬಂದಿರಬಹುದು.

**ಹೈವಾನ್** ಎಂದರೆ ಅರಬ್ಬಿ ಭಾಷೆಯಲ್ಲಿ ಪ್ರಾಣಿ, ಚತುಷ್ಪಾದಿ, ಕಾಲ್ನಡೆ ಎಂದರ್ಥ. ಅದೇ ಅರ್ಥದಲ್ಲಿ ಕನ್ನಡದಲ್ಲಿಯೂ ಉಪಯೋಗಿಸುತ್ತೇವೆ. ಇದು ಹಿಂದೀ ಭಾಷೆಯಲ್ಲಿ ಹೆಚ್ಚಾಗಿ ಪ್ರಯೋಗದಲ್ಲಿದ್ದು ಅಲ್ಲಿಂದ ನಮಗೆ ಬಂದಿದೆ. ಕೆಲವರು ಎಲ್ಲ ಪ್ರಾಣಿಗಳಿಗೂ ಅನ್ವಯಿಸುವ ಈ ಶಬ್ದವನ್ನು ಒಂದೇ ಪ್ರಾಣಿಗೆ = ಕತ್ತೆಗೆ ಅನ್ವಯಿಸಿ ಬೈಗಳಾಗಿಯೂ ಉಪಯೋಗಿಸುತ್ತಿದ್ದಾರೆ.

**ಹೊಂಕ** ದಿವಂಗತ ವಿ. ಸೀತಾರಾಮಯ್ಯನವರ 'ಅರಲು-ಬರಲು' ಎಂಬ ಕವನಸಂಕಲನದ ಒಂದು ಸಾಲಿನಲ್ಲಿ 'ಹೊಂಕ' ಎಂಬ ಶಬ್ದವಿದೆ. ಪೊಂಕು ಎಂಬುದು ಪೊಂಗು ಎಂಬ ಧಾತುವಿನಿಂದ ಬಂದಿದೆ. ಇದು ಹಳಗನ್ನಡದ ಪೊಂಕು ಎಂಬುದರ ಆಧುನಿಕ ರೂಪ. ಇದಕ್ಕೆ ಜಂಬ ಎಂಬ ಅರ್ಥವಿದೆ. ಅದು ಹೊಂದುತ್ತದೆಯೇ? ಕಾವ್ಯದಲ್ಲಿ ಬರುವ

ಶಬ್ದಗಳಿಗೆ ಅವು ಬರುವ ಸಂದರ್ಭಕ್ಕೆ ಅನುಸಾರವಾಗಿ ಅರ್ಥವ್ಯಾಪ್ತಿ ಹೆಚ್ಚುತ್ತದೆ. ಆದುದರಿಂದ ಈ ಸಂದರ್ಭದಲ್ಲಿ 'ಗರ್ವ, ಜಂಬ', ಎನ್ನುವುದಕ್ಕಿಂತ 'ಆತ್ಮವಿಶ್ವಾಸ, ಆತ್ಮಪ್ರತ್ಯಯ' ಎಂಬ ಅರ್ಥ ಹೆಚ್ಚು ಉಚಿತ. ಇದು ಹೊಂಕ ಶಬ್ದಕ್ಕೆ ವ್ಯಾಪಕವಾದ ಅರ್ಥವಾಗುತ್ತದೆ. 'ಶಬ್ದಕ್ಕೆ ಅರ್ಥ ನಿಘಂಟುವಿನಿಂದ ಭಾವಕ್ಕೆ ಅರ್ಥ ಭಗವಂತನಿಂದ' ಎಂಬ ಡಿವಿಜಿಯವರ ಮಾತು ಇಲ್ಲಿ ನೆನಪಿಗೆ ಬರುತ್ತದೆ. ಕಾವ್ಯದ ಅರ್ಥ ಸ್ಫುರಿಸಬೇಕಾದರೆ ಆಯಾ ಸನ್ನಿವೇಶದ ಎಲ್ಲ ಮುಖದ ಪರಿಶೀಲನೆ ಅಗತ್ಯ. ಕೆಲವು ಕವಿಗಳು ಕೆಲವು ಶಬ್ದಗಳನ್ನು ವಿಶಿಷ್ಟ ರೀತಿಯಲ್ಲಿ ವಿವಿಧಾರ್ಥಗಳಲ್ಲಿ ಪ್ರಯೋಗಿಸುತ್ತಾರೆ. ಇದು ಅವರು ಶಬ್ದಕ್ಕೆ ತರುವ ಹೊಸಶಕ್ತಿ. ಈಗಿನವರು 'ಶಬ್ದವನ್ನು ದುಡಿಸಿಕೊಳ್ಳುವುದು' ಎಂದು ಇದನ್ನು ಕರೆಯುತ್ತಾರೆ. ಕವಿಯ ಹಿರಿಮೆ ಸಾರುವ ಸಾಮರ್ಥ್ಯಗಳಲ್ಲಿ ಇದೂ ಮುಖ್ಯವಾದುದು.

**ಹೊಂತ** ಈ ಶಬ್ದವನ್ನು ಸಂಸ್ಕೃತದ ಪಂಥ ಎಂಬ ಶಬ್ದದಿಂದ ವ್ಯುತ್ಪತ್ತಿ ಮಾಡುತ್ತಾರೆ. ಅದು ಅನುಮಾನಾಸ್ಪದವಾದುದು. ತೆಲುಗಿನಲ್ಲಿ ಹೊಂತೆ ಎಂಬ ಶಬ್ದವಿದೆ. ಇದು ದ್ರಾವಿಡ ಶಬ್ದವಿದ್ದರೂ ಇರಬಹುದು. ಆದರೆ ಹಳಗನ್ನಡದಲ್ಲಿ ಪೊಂತ ಎಂಬ ಶಬ್ದ ರೂಪ ಸಿಕ್ಕಿಲ್ಲ. ಆದುದರಿಂದ ಇದರ ಮೂಲವನ್ನು ಸದ್ಯದಲ್ಲಿ ? ಎಂದು ಗುರುತಿಸಲು ನಾನು ಅಪೇಕ್ಷೆ ಪಡುತ್ತೇನೆ. ಈ ಶಬ್ದಕ್ಕೆ ಅರ್ಥವೇನೋ ಸ್ಪಷ್ಟ. **ಹೊಂತಕಾರ** ಎಂದರೆ ಸಮಯಕ್ಕೆ ಬೇಕಾದ ಪ್ರಜ್ಞೆಯುಳ್ಳವನು, ಚತುರ, ಚಾಣಕ್ಯನಂತೆ ತೀಕ್ಷ್ಣಮತಿಯುಳ್ಳವನು ಎಂದರ್ಥ. ಇದರಿಂದ ಹೊಂತ ಶಬ್ದದ ಅರ್ಥ ಸ್ಪಷ್ಟ.

**ಹೊಡೆಹಾಳೆ** ಇದು ಸರಿಯಾದ ಶಬ್ದ. ವಡಾಳೆ, ಹೊಡಾಳೆ ಎರಡೂ ಗ್ರಾಮ್ಯ ರೂಪಗಳು. ಅಡಕೆ ಮುಂತಾದ ಗಿಡಗಳಲ್ಲಿ ಎಳೆಯ ತೆನೆ ಹೊರ ಬರುವಾಗ ಆ ಹೊಡೆಯನ್ನು ಮುಚ್ಚಿರುವ ಒಂದು ಹಾಳೆ ಇರುತ್ತದೆ. ಹೊಡೆ ಎಂದರೆ ತೆನೆ. ಇದನ್ನು ಮುಚ್ಚಿರುವ ಹಾಳೆ ಹೊಡೆ ಹಾಳೆ. ಇದನ್ನೇ Sheath ಎಂದು ಇಂಗ್ಲಿಷಿನಲ್ಲಿ ಕರೆಯುವುದು. ಈ ಹಾಳೆಯನ್ನು ತೆಗೆದು ಕೊನೆಗಳನ್ನು ಕತ್ತರಿಸಿ ಊಟದ ತಟ್ಟೆಯಂತೆ ಉಪಯೋಗಿಸುತ್ತಾರೆ. ಹಿಂದೆ ಬೆಣ್ಣೆಯನ್ನು ಇದರಲ್ಲಿ ಕಟ್ಟಿಕೊಂಡು ಊರುಗಳಿಗೆ ತೆಗೆದುಕೊಂಡು ಹೋಗುತ್ತಿದ್ದರು.

**ಹೊತ್ತಿಸು** ಹೊತ್ತಿಸು, ಹೊಚ್ಚು ಈ ಎರಡು ಶಬ್ದಗಳನ್ನು ಒಂದೇ ಅರ್ಥದಲ್ಲಿ ಬಳಸಬಹುದೇ ? ಈ ಎರಡು ಶಬ್ದಗಳ ಮೂಲವೇ ಬೇರೆಬೇರೆಯಾಗಿವೆ. ಪೊತ್ತಿಸು ಎಂದರೆ ಬೆಂಕಿ ಮುಂತಾದುವನ್ನು ಪುಟಗೊಳಿಸು ಎಂದರ್ಥ. ಇದರಿಂದ ದೀಪವನ್ನು ಹೊತ್ತಿಸು ಎಂಬ ಶಬ್ದರೂಪ ಸರಿ. ಆದರೆ ಪತ್ತಿಸು = ಅಂಟಿಸು ಎಂಬ ಬೇರೆ ಶಬ್ದವಿದೆ. ದೀಪವನ್ನು ಅಂಟಿಸು ಎಂದು ಪ್ರಯೋಗದಲ್ಲಿದೆ. ಈ ಎರಡು ಶಬ್ದಗಳ ಉಪಯೋಗದಲ್ಲಿ ಪರಸ್ಪರ ಗೊಂದಲವಾಗಿ ಎರಡೂ ರೂಪಗಳಿಗೆ ದೀಪವನ್ನು ಹಚ್ಚುವುದು ಎಂಬ ಅರ್ಥ ಬರುತ್ತದೆ. ಆದುದರಿಂದ ಹೊತ್ತಿಸು, ಹತ್ತಿಸು, ಹಚ್ಚು ಎಂಬ ಮೂರೂ ರೂಪಗಳು ಸರಿ. ಹೊಚ್ಚು ಎನ್ನುವುದಕ್ಕೆ ಹೊದೆಸು, ಹೊದೆಯಿಸು = ಬಟ್ಟೆಯನ್ನು ಮೈಮೇಲೆ ಮುಚ್ಚು ಎಂದು ಅರ್ಥ. ಇದು ವ್ಯಾಪಕವಾಗಿ ಬೇರೆ ಬೇರೆ ಕಡೆಗಳಲ್ಲಿ ಉಪಯೋಗವಾಗುತ್ತದೆ. ಪ್ರಾದೇಶಿಕವಾಗಿ ಈ ಎರಡು ಶಬ್ದಗಳು 'ಹಚ್ಚು, ಹೊಚ್ಚು' ಎಂಬುವ ಗೊಂದಲಕ್ಕೆ ಕಾರಣವಾಗಿದ್ದರೆ ಆಶ್ಚರ್ಯವಿಲ್ಲ. ಅವುಗಳಿಗೆ ಇರುವ ಅರ್ಥಭೇದವನ್ನು ಮೇಲೆ ತಿಳಿಸಿರುವಂತೆ ಗಮನಿಸಿದರೆ ಸಾಕು. ಆಗ ಬರಹದಲ್ಲಿ ಸರಿಯಾಗಿ ಉಪಯೋಗಿಸಬಹುದು.

**ಹೊರತು** 'ನೀವು ಉತ್ತರಿಸದ ಹೊರತು ನಾನು ಊಟ ಮಾಡುವುದಿಲ್ಲ. ಬಸ್ ದರದ ಏರಿಕೆಯ ವಿರುದ್ಧ ಪ್ರತಿಭಟನೆ.' ಈ ವಾಕ್ಯಗಳು ಸರಿಯಾಗಿವೆಯೋ ? ಮೊದಲ ವಾಕ್ಯ ಹೀಗಿರಬೇಕು - 'ನೀವು ಉತ್ತರಿಸಿದ ಹೊರತು ನಾನು ಊಟ ಮಾಡುವುದಿಲ್ಲ'. ಇನ್ನೊಂದು ವಾಕ್ಯವನ್ನು ಬರೆಯುತ್ತೇನೆ - ನೀವು ನಮ್ಮ ಮನೆಗೆ ಬಂದ ಹೊರತು ನಾನು

ನಿಮ್ಮ ಮನೆಗೆ ಬರುವುದಿಲ್ಲ. ಹೀಗೆ ಬರೆದರೆ ಅರ್ಥ ಸ್ಪಷ್ಟ. ಅದಕ್ಕೆ ಬದಲಾಗಿ ಮೊದಲ ವಾಕ್ಯದಲ್ಲಿ 'ಉತ್ತರಿಸದ' ಎಂದೂ ಎರಡನೆಯ ವಾಕ್ಯದಲ್ಲಿ ಬರದ ಎಂದೂ ನಿಷೇಧಾರ್ಥ ಶಬ್ದಗಳನ್ನು ಉಪಯೋಗಿಸುವುದು ತಪ್ಪು. ರೂಢಿಯಲ್ಲಿ ಈ ತಪ್ಪು ಶಬ್ದಗಳನ್ನು ಉಪಯೋಗಿಸುವುದನ್ನೂ ನಾನು ಕೇಳಿದ್ದೇನೆ. ಯಾರಾದರೂ ಈ ವಿಚಾರವನ್ನು 'ತಿಳಿಸಿದ' ಹೊರತು ಆ ತಪ್ಪು ನಿಲ್ಲುವುದಿಲ್ಲ. ತಿಂದ ಹೊರತು ತಿನ್ನದ ಹೊರತು, ತಿಳಿಸಿದ ಹೊರತು, ತಿಳಿಸದ ಹೊರತು - ಈ ಬಗೆಯ ಪದಪುಂಜಗಳನ್ನು ಬಳಸುವಾಗ ಯಾವುದು ಸರಿ ಎಂಬುದು ಪ್ರಶ್ನೆ. ಹೊರತು ಎಂಬುದು ಇಂಗ್ಲಿಷ್ ಭಾಷೆಯ except ಎಂಬ ಶಬ್ದದ ಅರ್ಥವನ್ನು ಹೊಂದಿದೆ. ಆದುದರಿಂದ ಈ ಶಬ್ದ ಸೇರುವ ಹಿಂದಿನ ಶಬ್ದ ನಿಷೇಧಾತ್ಮಕವಾಗಿರಬಾರದು. ತಿಂದ, ತಿಳಿಸಿದ ಎಂದೇ ಇರಬೇಕು.

ಈಗ, ಬಸ್ಸಿಗೆ ಬರೋಣ. ಬಸ್ ದರಗಳ ಏರಿಕೆಯ ವಿರುದ್ಧವಾಗಿ ಈ ಪ್ರತಿಭಟನೆ ಎಂಬುದು ಆ ವಾಕ್ಯದ ಉದ್ದೇಶ. ಹಾಗೆ ಇಲ್ಲದಿದ್ದರೆ ಆ ವಾಕ್ಯ ಅರ್ಥವೇ ಆಗುವುದಿಲ್ಲ. ಪ್ರತಿಭಟನೆಯನ್ನು ನಡೆಸುವ ಜನರ ಮಟ್ಟದಲ್ಲಿಯೂ ಕನ್ನಡದ ಬಗ್ಗೆ ಕಳಕಳಿಯಿದ್ದು ಸರಿಯಾದ ಭಾಷೆಯ ಪ್ರಯೋಗಗಳನ್ನು ಕುರಿತು ಸರಿಯಾದ ಆಲೋಚನೆ ಮಾಡುವ ಕಾಲ ಬೇಗನೆ ಬರಲಿ ಎಂದು ನಾನು ಹಾರೈಸುತ್ತೇನೆ. ಮೊನ್ನೆ ತಾನೇ ಆಟೋರಿಕ್ಷಾಗಳನ್ನು ಓಡಿಸುವವರ ಮುಷ್ಕರ ಬೆಂಗಳೂರಿನಲ್ಲಿ ನಡೆಯಿತು. ಆಗ ಕೆಲವರು ಹಿಡಿದಿದ್ದ ಫಲಕದ ಬರಹ ಹೀಗಿತ್ತು: "ಆಮರಣಾಂತರ ಉಪವಾಸ ಸತ್ಯಾಗ್ರಹ" ಇಂಥ ತಪ್ಪುಗಳನ್ನು ಮಾಡಬಾರದು. ಬಸ್ ದರದ ಏರಿಕೆಗೆ ಪ್ರತಿಭಟನೆ ಎಂದರೆ ಸಾಕು.

**ಹೊಲಬು** ಎಂಬುದು ಕನ್ನಡದ ಶಬ್ದ. ಮೂಲದಲ್ಲಿ ಹಳಗನ್ನಡದಲ್ಲಿ ಇದು ಪೊಲಂಬು ಎಂದಿದೆ. ಹೊಸಗನ್ನಡದಲ್ಲಿ ಹೊಲಬು. ಇದಕ್ಕೆ ಅರ್ಥ ದಾರಿ. ಸರ್ವಜ್ಞನ ವಚನವೊಂದರಲ್ಲಿ ಹೀಗಿದೆ. **ಹೊಲಬನರಿಯದ ಗುರುವು, ತಿಳಿಯಲರಿಯದ ಶಿಷ್ಯ, ನೆಲೆಯನಾರಯ್ಯದನ ಉಪದೇಶ, ಅಂಧಕನು ಕೊಳನ ಹೊಕ್ಕಂತೆ ಸರ್ವಜ್ಞ. ಹೊಲಬಾಗಲಿಲ್ಲ** ಎಂದರೆ ದಾರಿ ತಿಳಿಯಲಿಲ್ಲ ಎಂದರ್ಥ. ಹೊಲಬುಗೊಳ್ಳು ಎಂದರೆ ಸರಿಯಾದ ದಾರಿಯನ್ನು ಹಿಡಿ ಎಂದರ್ಥ.

**ಹೊಸಶೀಷೆಯಲ್ಲಿ ಹಳೇ ಮದ್ಯ ಎಂಬ ಗಾದೆ ಸುಳ್ಳಲ್ಲವೇ?** ಇದು ಇಂಗ್ಲಿಷ್ ಗಾದೆಯ ತಪ್ಪು ಅನುವಾದ. ಇಂಗ್ಲಿಷ್ ಗಾದೆ ಹೀಗಿದೆ: "To put new wine into old bottles." ಹೀಗೆ ಮಾಡುವುದು ಸರಿಯಲ್ಲ ಎಂದು ಅದರ ಅರ್ಥ. ಯಾವಾಗಲಾದರೂ ಸರಿಯಲ್ಲದ ಕೆಲಸವನ್ನು ಮಾಡುವುದಕ್ಕೆ ಯಾರಾದರೂ ಪ್ರಯತ್ನಪಟ್ಟಾಗ ಈ ಪ್ರಸಿದ್ಧವಾದ ವಾಕ್ಯವನ್ನು ಉಪಯೋಗಿಸುತ್ತಾರೆ. ಇದು ಏಕೆ ಪ್ರಸಿದ್ಧ ಎಂದರೆ, ಇದು The Holy Bible ಗ್ರಂಥದಲ್ಲಿ ಬರುವ ಮಾತು. The new testament ಎಂಬ ಹೊಸ ಒಡಂಬಡಿಕೆಯಲ್ಲಿ ಮೊದಲ ಅಧ್ಯಾಯವಾಗಿ The holy Gospel of Jesus Christ according to Matthew ಎಂಬುದು ಬರುತ್ತದೆ. ಅದರಲ್ಲಿ ೯ನೆಯ ಭಾಗದಲ್ಲಿ ೧೭ನೆಯ ವಾಕ್ಯವಾಗಿ ಈ ಕೆಳಗಿರುವ ಮಾತುಗಳು ಬರುತ್ತವೆ:

"Nor is new wine put into old wine skins. If that is done, the skins burst. And there is the wine spilt and the skins spoiled. If the wine is new, it is put into fresh wine skins. And so both are kept safe." ಹಳೆಯ ಪದ್ಧತಿಗಳನ್ನು ಹೊಸ ಪದ್ಧತಿಗೆ ಜೋಡಿಸುವುದು ಹಳೆಯ ಚಿಂದಿಯನ್ನು ಹೊಸಬಟ್ಟೆಯನ್ನೂ ಸೇರಿಸಿ ತೇಪೆ ಮಾಡಿದಂತೆ ಎಂದು ಜೀಸಸ್ ವಿವರಣೆ ನೀಡುವಾಗ ಈ ಮಾತನ್ನಾಡುತ್ತಾನೆ. ಮೇಲಿನ ವಾಕ್ಯ ಭಾಗದಲ್ಲಿ Skin ಎಂದರೆ Bottle ಎಂದೇ ಅರ್ಥ. ಇದೇ 'ಬುದ್ದಲಿ' ಎಂದು ಕನ್ನಡದಲ್ಲಿ

ಉಪಯೋಗದಲ್ಲಿದೆ. ಹಳೆಯ ಚರ್ಮದ ಚೀಲಕ್ಕೆ ಹೊಸ ಮದ್ಯವನ್ನು ಹಾಕಿದರೆ ಮದ್ಯದ ಹುದುಗು ಹೆಚ್ಚಾಗಿ ಚರ್ಮವು ಬಿರುಕು ಬಿಡುತ್ತದೆ. ಆಗ ಚರ್ಮದ ಚೀಲವೂ ಮದ್ಯವೂ ಎರಡೂ ನಾಶವಾಗುತ್ತದೆ ಎಂಬುದು ಈ ಸನ್ನಿವೇಶದ ಅರ್ಥ. ಇದೇ ಹೊಸ ಇಂಗ್ಲಿಷಿನಲ್ಲಿ To put new wine into old bottles ಎಂದು ಆಗಿ ಪ್ರಚಾರದಲ್ಲಿದೆ. ಕನ್ನಡದಲ್ಲಿ ಮಾತನಾಡುವಾಗ ಕೆಲವರು To put old wine in new bottles. ಎಂದು ಉಪಯೋಗ ಮಾಡುವುದನ್ನು ನಾನೂ ಕೇಳಿದ್ದೇನೆ. ಇದನ್ನು ಸರಿಯಾಗಿ ತಿಳಿದಿರುವವರು ಆ ಹೊಸ ಅರ್ಥವಿಲ್ಲದ ಗಾದೆಯನ್ನು ಬಳಸುವುದಿಲ್ಲ. ಇಲ್ಲದಿದ್ದರೆ ಆ ಗಾದೆಯನ್ನು ತಿರುಚಿ ಯಾವುದಾದರೂ ಹೊಸ ಅರ್ಥ ಹಾಕಲು ಪ್ರಯತ್ನಪಡುತ್ತಾರೆ. ಅದು ಅಷ್ಟು ಸರಿಯಾಗುವುದಿಲ್ಲ. ಅಲ್ಲಾವುದ್ದೀನ್ ಮತ್ತು ಅದ್ಭುತ ದೀಪ ಎಂಬ ಕಥೆಯಲ್ಲಿ ಬರುವ New lamps for old ಎನ್ನುವುದನ್ನು Old lamps for new (ಹಳೆಯ ದೀಪದ ಕಂಬಗಳಿಗೆ ಹೊಸ ದೀಪದ ಕಂಬ) ಎಂಬುದನ್ನು ಹೊಸ ದೀಪದ ಕಂಬಗಳಿಗೆ ಹಳೆಯ ದೀಪದ ಕಂಬ ಎಂದು ತಿದ್ದಿದರೆ ಆ ಕಥೆಗೆ ಅದು ಹೇಗೆ ಅನ್ವಯವಾಗುವುದಿಲ್ಲವೋ ಹಾಗೆ ಈ ಗಾದೆಯೂ ಆಗುತ್ತದೆ ಎಂದು ತಿಳಿದುಕೊಳ್ಳಬೇಕು.

**ಹೊಳೆದಾಟಿದ ಮೇಲೆ ಅಂಬಿಗನ ಮಿಂಡ** ಎಂಬ ಗಾದೆಗೆ ಬೇರೆಯೇ ಅರ್ಥವಿದೆ. ಮಿಂಡ ಎಂಬ ಕನ್ನಡ ಶಬ್ದಕ್ಕೆ ೧. ವೀರ, ಪರಾಕ್ರಮಿ, ಧೈರ್ಯಶಾಲಿ, ೨. ಶ್ರೇಷ್ಠ ವ್ಯಕ್ತಿ ೩. ಹೆದರಿಕೆಯನ್ನುಂಟು ಮಾಡುವವನು, ಭಯಂಕರನಾದವನು. ೪. ಪ್ರಾಯದವನು ೫. ಉಪಪತಿ ಎಂಬ ಅರ್ಥಗಳಿವೆ. ಹೊಳೆ ದಾಟುವುದಕ್ಕೆ ಅಂಬಿಗನ ಸಹಾಯ ಬೇಕು. ದಾಟಿದ ಮೇಲೆ ಅವನ ಸಹಾಯ ಬೇಡ. ಆಗ ಅಂಬಿಗನಿಗಿಂತ ದೋಣಿಯಲ್ಲಿ ಕುಳಿತವ ತಾನು ಹೆಚ್ಚೆಂದು ವರ್ತಿಸುವವನಾಗಿರುತ್ತಾನೆ. ಅಂಥ ವರ್ತನೆ ಅಸಭ್ಯವಾದದ್ದು. ತನ್ನ ಕೆಲಸವಾಗುವ ತನಕ ಸುಮ್ಮನೆ ಇದ್ದು ಕೆಲಸವಾದ ಮೇಲೆ ಎಲ್ಲವೂ ತನ್ನಿಂದಲೇ ಆಯಿತು. ಮತ್ತೊಬ್ಬರ ಸಹಾಯವೂ ಇರಲಿಲ್ಲ ಎಂದು ಜಂಬವನ್ನು ಕೊಚ್ಚಿಕೊಳ್ಳುವ ನೀಚವ್ಯಕ್ತಿಗಳನ್ನು ಈ ಗಾದೆ ಸೂಚಿಸುತ್ತದೆ. ಅಷ್ಟೇ ಅಲ್ಲ. ಹಾಗೆ ಮಾಡುವುದು ಸುಸಂಸ್ಕೃತನ ಲಕ್ಷಣವಲ್ಲ ಎಂದು ಒತ್ತಿ ಹೇಳುತ್ತದೆ.

**ಹೋಟೇಲ ಹೊಟೇಲ್** Hotel ಇಂಗ್ಲಿಷ್ ಶಬ್ದಕ್ಕೆ ಒತ್ತು tel ಎಂಬ ಭಾಗದ ಮೇಲೆ ಬೀಳುತ್ತದೆ. ಇಂಗ್ಲಿಷ್ ಜನರ ಉಚ್ಚಾರಣೆಯಲ್ಲಿ, ಕನ್ನಡದಲ್ಲಿ police ಎಂಬುದು ಹೇಗೆ ಪೊಲೀಸ್ ಆಗಿದೆಯೋ ಹಾಗೆ ಹೊಟೇಲ್ ಎಂಬುದು ಸರಿ. ಆದರೆ ಹೋಟಲು ಎಂದೂ ಕೆಲವು ಕಡೆಗಳಲ್ಲಿ ಪ್ರಚಾರದಲ್ಲಿದೆ. ಹೊಟೆಲ ಹೊಟೇಲ ಇದು ಪ್ರಾದೇಶಿಕ ರೂಪಗಳು.

**ಹೋತೃ** ಇದು ಸಂಸ್ಕೃತದ ಶಬ್ದ. ಈ ಶಬ್ದಕ್ಕೆ 'ಹೋಮ ಮಾಡುವವನು' ಎಂದು ಅರ್ಥ. ಋಗ್ವೇದವನ್ನು ತಿಳಿದ ಋತ್ವಿಕ್ಕಿಗೂ ಇದನ್ನು ಅನ್ವಯಿಸುತ್ತಾರೆ.

**ಹೋದೀತು - ಹೋದಾತು**. ಇದು ವ್ಯಾಕರಣದ ವಿಚಾರ. ನಡೆಯಬೇಕಾಗಿರುವ ಯಾವುದಾದರೂ ವಿಷಯದಲ್ಲಿ ಸಂದೇಹವನ್ನೋ ಊಹೆಯನ್ನೋ ಸಾಧ್ಯತೆಯನ್ನೋ ತಿಳಿಸುವ ಕ್ರಿಯಾಪದದ ರೂಪವು ಒಂದಿದೆ. ಇದನ್ನು ಸಂಭಾವನಾ ರೂಪ ಎಂದು ವ್ಯಾಕರಣದಲ್ಲಿ ಕರೆಯುತ್ತಾರೆ. ಆಗು ಶಬ್ದಕ್ಕೆ ಆದಾನು, ಆದಾಳು, ಆದೀತು, ಆದಾರು, ಆದಾವು, ಆದೀಯೆ, ಆದೀರಿ, ಆದೇನು, ಆದೇವು ಎಂಬ ರೂಪಗಳು ಸಾಧ್ಯ. ಆದಾತು ಮುಂತಾದುವು ಗ್ರಾಮ್ಯ ರೂಪಗಳು. ಹೋದೀತು, ಆದೀತು ಸರಿಯಾದ ರೂಪಗಳು.

**ಹೋದೆಯಾ ಪಿಶಾಚಿ ಎಂದರೆ ಬಂದೆ ಗವಾಕ್ಷೀಲಿ ಎಂಬ ಮಾತಿನ ಅರ್ಥವೇನು?** ಮಾನವರ ಜೀವನದಲ್ಲಿ ಅನೇಕ ಕ್ಲಿಷ್ಟವಾದ ಸನ್ನಿವೇಶಗಳು ಉಂಟಾಗುತ್ತವೆ. ಕೆಲವು ಸಮಯದಲ್ಲಿ ಏನಾದರೂ ಮಾಡಿ ತೊಂದರೆ ಕೊಡುವ ವ್ಯಕ್ತಿಯನ್ನೋ ಸನ್ನಿವೇಶವನ್ನೋ

ದೂರಮಾಡಲು ಪ್ರಯತ್ನಪಡುತ್ತೇವೆ. ಆದರೆ ಆ ಶಕ್ತಿಗಳು ಅಷ್ಟು ಬೇಗ ಬಿಡುಗಡೆ ನೀಡುವುದಿಲ್ಲ. ಪಿಶಾಚಿ ಮೆಟ್ಟಿದಂತೆ ಮೆಟ್ಟಿಬಿಟ್ಟಿರುತ್ತವೆ. ಅಂಥ ಸಮಯಗಳಲ್ಲಿ ಸ್ವಲ್ಪ ಶಾಂತಿ ದೊರಕಿದರೂ ಆ ವ್ಯಕ್ತಿ ಹೋದೆಯಾ ಪಿಶಾಚಿ ಎಂದು ನಿಟ್ಟುಸಿರುಬಿಡುತ್ತಾನೆ. ಆದರೆ ಅದು ಹೆಚ್ಚುಕಾಲದ ಬಿಡುಗಡೆಯಾಗಿರುವುದಿಲ್ಲ. ಮತ್ತೆ ಯಾವುದೋ ತೊಂದರೆ ಬಂದು ಮೆಟ್ಟಿಕೊಳ್ಳುತ್ತದೆ. ಆಗ ಅಂಥ ವ್ಯಕ್ತಿಗಳು ಹೇಳುವ ಮಾತು ಇದು: 'ಹೋದೆಯಾ ಪಿಶಾಚಿ ಅಂದರೆ ಬಂದೆ ಗವಾಕ್ಷೀಲಿ' ಎಂದು ಬಂದೇ ಬಿಡುತ್ತದೆ. ಮಕ್ಕಳ ಕಾಟವನ್ನು ತಪ್ಪಿಸಲು ಪ್ರಯತ್ನಪಟ್ಟ ತಾಯಿಯರು ಈ ಮಾತನ್ನು ತುಂಬ ಉಪಯೋಗಿಸುತ್ತಾರೆ.

**ಹೋಬಳಿ** ಇದು ತಾಲ್ಲೂಕಿನ ಮುಖ್ಯ ವಿಭಾಗಗಳಲ್ಲಿ ಒಂದು. ಜಿಲ್ಲೆ, ತಾಲ್ಲೂಕು, ಕಸಬ, ಹೋಬಳಿ ಇದು ಕಂದಾಯದ ವಸೂಲಿಗೆ ಮಾಡಿಕೊಂಡಿರುವ ಉಪವಿಭಾಗಗಳು. ಒಟ್ಟು ಒಂದು ರಾಜ್ಯವನ್ನು ಈ ಕ್ರಮದಲ್ಲಿ ವಿಭಾಗಗಳಾಗಿ ಮಾಡಿರುತ್ತಾರೆ. ಈ ಶಬ್ದದ ಮೂಲ ಸ್ಪಷ್ಟವಿಲ್ಲ. ಕನ್ನಡದ ಹಿಂದಿನ ರೂಪದಲ್ಲಿ ಪೋಬಳಿ ಎಂಬುದು ಒಂದು ಶಬ್ದವಿದೆ. ಅರ್ಥ = ಹೋಗುವ ಜಾಗ. ಕವಿರಾಜಮಾರ್ಗದಲ್ಲಿ ಇದರ ಪ್ರಯೋಗವಿದೆ (೩-೧೮೬) ಸ್ಮರನಸ್ತ್ರ **ಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯಂ ಪೋಬಟಿಯಂ ದೊರೆಕೊಳಿಸಲಾಗದದಱಿಂ ಶರತತಿಯಲ್ತು.** ಇಲ್ಲಿ ಪೋಬಟಿ ಎಂದರೆ ಹೋದಸ್ಥಳ. ಇಷ್ಟು ಹಳೆಯ ಪ್ರಯೋಗಕ್ಕೆ ಕಸಬಾ ವಿಭಾಗಗಳಲ್ಲಿ ಒಂದು ಎಂಬುದು ಸರಿಯಾದ ಅರ್ಥವಾಗಲಾರದು. ಕಿಟ್ಟೆಲ್ ತೆಲುಗಿನ ಓಮ್ಬಡ್ಡೆ ಎಂಬ ಶಬ್ದವನ್ನು ದಾಖಲಿಸಿದ್ದಾನೆ. ಇದರ ಅಸ್ತಿತ್ವವನ್ನು ಪರಿಶೀಲಿಸಬೇಕು.

**ಹೋಮ** ಎಂಬ ಶಬ್ದಕ್ಕೆ ದೇವತೆಗಳಿಗೆ ಅಗ್ನಿಯಲ್ಲಿ ಆಜ್ಯ (ತುಪ್ಪ)ವನ್ನು ಅರ್ಪಿಸುವುದು ಎಂದರ್ಥ. ಅಗ್ನಿಯಲ್ಲಿ ಅರ್ಪಿಸಿದರೆ ಅದು ದೇವತೆಗಳಿಗೆ ತಲುಪಿ ಅವರು ತೃಪ್ತರಾಗಿ ಲೋಕಕ್ಕೆ ಒಳಿತನ್ನು ಮಾಡುತ್ತಾರೆ ಎಂಬ ನಂಬಿಕೆಯಿದೆ. ಆದುದರಿಂದಲೇ ವ್ಯರ್ಥವಾದ ಕಾರ್ಯವನ್ನು ನೀರಿನಲ್ಲಿ ಹೋಮ ಮಾಡಿದ ಹಾಗಾಯಿತು ಎನ್ನುತ್ತಾರೆ. ಅಗ್ನಿಯಿಲ್ಲದೆ ಹೋದರೆ ಆ ಹೋಮದ್ರವ್ಯ (ತುಪ್ಪ)ವು ಹೋಗಬೇಕಾದ ಕಡೆಗೆ ತಲುಪುವುದಿಲ್ಲ. ಇವೆಲ್ಲ ನಂಬಿಕೆಗೆ ಸಂಬಂಧಪಟ್ಟ ವಿಷಯಗಳು.

**ಹೋಳಾಗಿರೀ** ಇದು ಹೋಳಾಗಿರಿ ಎಂಬ ಶಬ್ದದ ಗ್ರಾಮ್ಯ ಉಚ್ಚಾರಣೆ ಅಷ್ಟೇ! ಹೋಳು = ಎರಡುಭಾಗ. ಹೋಳು +ಆಗು +ಇರಿ (ಇದು ಬಹುವಚನದ ಪ್ರತ್ಯಯ) = ಹೋಳಾಗಿರಿ. ಆಗು ಏಕವಚನ. ಆಗಿ, ಆಗಿರಿ ಎರಡೂ ಬಹುವಚನದ ರೂಪಗಳು. ಇದಕ್ಕೆ ಎರಡು ಭಾಗವಾಗಿ, ದಾರಿ ಬಿಡಿ ಎಂದು ಅರ್ಥ. ಕೆಲವರು ಇದೇ ಶಬ್ದದ ವಿವರಣೆಯನ್ನು ನೀಡುತ್ತ ಇದು ಹೊರಳು ಶಬ್ದದಿಂದ ಬಂದದ್ದು. ಹೊರಳು = ಹಿಂದಿರುಗು. ಆದ್ದರಿಂದ ಮುಂದೆ ನುಗ್ಗಬೇಡಿ ಎಂದು ಅರ್ಥ ಎಂದು ವ್ಯಾಖ್ಯಾನ ಮಾಡಿದ್ದಾರೆ. ಬಹುವಚನ ಪ್ರತ್ಯಯ ಸೇರಿಲ್ಲದ ಹೊರಳು — ಹೊಳ್ಳು ಎಂಬ ಕೂಗು ಇದ್ದರೆ ಆಗ ಆ ಶಬ್ದದಿಂದಲೂ ಇದು ಬಂದಿರುವ ಸಾಧ್ಯತೆಯಿದೆ.

**ಹ್ಯಾಟ್‌ಟ್ರಿಕ್ (Hat trick)** ಈ ಇಂಗ್ಲಿಷ್ ಶಬ್ದ ಕ್ರಿಕೆಟ್ ಆಟದ ಪ್ರಪಂಚಕ್ಕೆ ಸೇರಿದ್ದು. ಒಂದಾದ ಮೇಲೆ ಒಂದರಂತೆ ಮೂರು ಸಲ ಚೆಂಡನ್ನು ಚಾಲು ಮಾಡಿ ಸತತವಾಗಿ ಮೂರು ಜನರನ್ನು ಆಟದಿಂದ ಹೊರಕ್ಕೆ ಕಳುಹಿಸುವುದಕ್ಕೆ ಈ ಹೆಸರಿದೆ. Hat ಏಕೆ ಎಂದರೆ, ಹಿಂದೆ ಇಂಥ ಕಷ್ಟಕರವಾದ ರೀತಿಯಲ್ಲಿ ಮೂರು ಜನರನ್ನು ಹೊರ ಹಾಕಿದವನಿಗೆ ಒಂದು ಹೊಸ Hat ನ್ನು ಬಹುಮಾನವಾಗಿ ಕೊಡುವ ಪದ್ಧತಿ ಇತ್ತು. ಆ Hat ನ್ನು ಸಂಪಾದನೆ ಮಾಡುವ Trick ಅದು. ಈಗ ಈ ಪದ್ಧತಿ ನಿಂತು ಹೋಗಿದೆ. ಆದರೆ ಆ ಶಬ್ದ ಉಳಿದು ಬಂದಿದೆ.

**ಹ್ಯಾಬಿಟ್ Habit** ಇಂಗ್ಲಿಷಿನಲ್ಲಿರುವ Habit ಶಬ್ದ ಹಳೆಯ ಫ್ರೆಂಚ್ ಭಾಷೆಯ ಶಬ್ದ. ಹಳೆಯ

ಇಂಗ್ಲಿಷಿನಲ್ಲಿ ಅದು Abit ಎಂದು ಇದ್ದು Habite ಆಗಿ ಬಳಿಕ ಈಗಿನ ಕಾಗುಣಿತವನ್ನು ಪಡೆದಿದೆ. ಈ ಶಬ್ದಕ್ಕೆ ೧. ಒಂದು ಕಾರ್ಯವನ್ನು ಮತ್ತೆ ಮತ್ತೆ ಮಾಡುವ ಕ್ರಮ ಎಂಬ ಅರ್ಥವಿದೆ. ಯಾಂತ್ರಿಕವಾಗಿ ನಡೆಯುವ ಕಾರ್ಯಕ್ರಮ ಎಂಬ ಅಭಿಪ್ರಾಯವೂ ಅದರಲ್ಲಿ ಅಡಗಿದೆ. ೨. ಕ್ರೈಸ್ತ ಮಠಗಳವರ ಉಡುಪಿಗೂ, ಕುದುರೆ ಸವಾರಿ ಮಾಡುವ ಹೆಂಗಸರು ಗಂಡಸಿನ ಜೊತೆಯಲ್ಲಿ ಒಂದು ಕಡೆಗೆ ಎರಡು ಕಾಲುಗಳನ್ನೂ ಇಳಿಬಿಟ್ಟು ಕುದುರೆಯ ಮೇಲೆ ಕೂಡುವಾಗ ಉಡುವ ಬಟ್ಟೆಗೂ ಈ ಹೆಸರಿದೆ. ಮೊದಲನೆಯ ಅರ್ಥವನ್ನು ವಿವರಿಸುವಾಗ ಇಂಗ್ಲಿಷಿನಲ್ಲಿಯೇ Practice which has become customary ಎಂಬ ವಿವರಣೆ ದೊರಕುತ್ತದೆ. ಆದ್ದರಿಂದ Practice ಶಬ್ದದ ಅರ್ಥಕ್ಕೂ ಇದಕ್ಕೂ ಸಂಬಂಧವಿರುವುದು ಸ್ಪಷ್ಟ. Practice ಶಬ್ದಕ್ಕೆ ಅರ್ಥ ಕೊಡುವಾಗ Action repeatedly performed, habit, custom ಎಂದು ಕೊಡುತ್ತಾರೆ. Practice ಶಬ್ದವೂ ಕೂಡ ಫ್ರೆಂಚ್ ಭಾಷೆಯಿಂದ ಬಂದುದೇ ಆಗಿದೆ. ಒಂದೇ ಭಾಷೆಯಾದರೂ ಮೂಲ ಬೇರೆ.

ಈ ಸಂಬಂಧದಲ್ಲಿ ಒಂದು ತತ್ತ್ವವನ್ನು ನೆನಪಿಡಬೇಕು. ಯಾವ ಭಾಷೆಯಲ್ಲಿಯೇ ಆಗಲಿ ಒಂದು ಶಬ್ದಕ್ಕೆ ಎಲ್ಲ ವಿಷಯಗಳಲ್ಲಿ ಸಮಾನಾರ್ಥವನ್ನು ನೀಡುವ ಎರಡು ಶಬ್ದಗಳು ಇರುವುದಿಲ್ಲ. ಸಮೀಪಾರ್ಥ ಶಬ್ದಗಳು ಹೆಚ್ಚಾಗಿರುತ್ತವೆ. ಹೀಗಿರುವುದರಿಂದಲೇ ನಿಘಂಟುಗಳ ರಚನೆ ಕಷ್ಟಕರವಾದ ಕೆಲಸ ಎನ್ನುವುದು.

ಇಷ್ಟೆಲ್ಲವನ್ನೂ ಹೇಳಿ ಮುಖ್ಯ ಪ್ರಶ್ನೆಗೆ ಈಗ ಬರುತ್ತಿದ್ದೇನೆ. ಕನ್ನಡದಲ್ಲಿ ನಾವು ಉಪಯೋಗಿಸುವ ಅಭ್ಯಾಸ, ಸಂಪ್ರದಾಯ, ಚಾಳಿ, ಅನುಷ್ಠಾನ, ಚಟ, ನಡಾವಳಿ, ಇರಸರಿಕೆ ಮುಂತಾದ ಪದಗಳನ್ನು ನೋಡಿ. ಒಂದೊಂದಕ್ಕೂ ಎಷ್ಟು ವ್ಯತ್ಯಾಸಗಳಿವೆ. ಆದುದರಿಂದ ಭಾಷೆಯ ಬೆಳವಣಿಗೆಯ ಸಮಯದಲ್ಲಿ ಒಂದು ಶಬ್ದವನ್ನು ಹೆಚ್ಚು ಜನ ಯಾವ ಯಾವ ಅರ್ಥದಲ್ಲಿ ಉಪಯೋಗಿಸುತ್ತಾರೊ ಅಷ್ಟು ಅರ್ಥ ಆ ಶಬ್ದಕ್ಕೆ ವ್ಯಾಪಕವಾಗಿ ಅಂಟಿಕೊಳ್ಳುತ್ತದೆ. ಆದುದರಿಂದ ಅಭ್ಯಾಸ ಶಬ್ದಕ್ಕೆ ಇನ್ನೊಂದು ಅರ್ಥ ಅಂಟಿಕೊಳ್ಳುವ ಸಾಧ್ಯತೆ ಇರುವಾಗ ಅದಕ್ಕೆ ಕುಮ್ಮಕ್ಕು ಕೊಡುವ ಕಾರ್ಯವನ್ನು ಲೇಖಕರು ಮಾಡಬೇಕು. ಇದರಿಂದ ಭಾಷೆಯ ಶಬ್ದಗಳ ಪ್ರಯೋಜನ ಹೆಚ್ಚುತ್ತದೆ. ಅಭ್ಯಾಸ ಅಂಥ ಶಬ್ದಗಳಲ್ಲಿ ಒಂದು ಎಂದು ನನ್ನ ಅನಿಸಿಕೆ.

**ಹೌಹಾರು** ಇದು ಬಹಳ ಆಳವಾಗಿ ಪರಿಶೀಲಿಸಬೇಕಾದ ಶಬ್ದ. ಹಳಗನ್ನಡದಲ್ಲಿ ಪಂಪನ ರನ್ನನ ಕಾಲದಿಂದ ಈ ಶಬ್ದ ಪ್ರಯೋಗದಲ್ಲಿದೆ. ಆಗ ಅದು ಪೌವನೆ ಪಾಱು ಎಂದಿತ್ತು. ಕ್ರಮೇಣ ಹೌಹಾರು ಎಂದಾಗಿದೆ. ಪಂಪ ಭಾರತದಲ್ಲಿ **"ಸಿಂಹನಾದದಿಂದಲ್ಲಿಯ ಜಲಚರಂಗಳೆರ್ದೆ ಪೌವನೆ ಪಾಱುವನ್ನೆಗಮಾರ್ದು"** ಎಂದು ವಿಂಧ್ಯಕನೆಂಬ ಕಿರಾತನ ಕಾರ್ಯವನ್ನು ವರ್ಣಿಸಲಾಗಿದೆ. (೧೩-೭೬ ವಚನ). ಗದಾಯುದ್ಧದಲ್ಲಿ **"ತತ್ಸರೋವರದೆರ್ದೆ ಪವ್ವನೆ ಪಾಱುವಂತೆ"** ಪಕ್ಷಿಗಳು ಹಾರಿದುವು ಎಂದಿದೆ. ಗದಾಯುದ್ಧ (೭-೧೭). ಇಂಥ ಪ್ರಯೋಗಗಳು ಕಾದಂಬರಿ ಪೂರ್ವಭಾಗ (೮೯), ರಾಮಾಶ್ವಮೇಧ (೫೪-೭), ಮುಂತಾಗಿ ಅನೇಕ ಕಡೆಗಳಲ್ಲಿ ದೊರಕುತ್ತವೆ. ನಂಬಿಯಣ್ಣನ ರಗಳೆಯಲ್ಲಿ ಹವ್ವನೆ ಹಾಜೆ ಎಂಬ ರೂಪದಲ್ಲಿಯೇ ಇದೆ. ಈ ಕಡೆಗಳಲ್ಲೆಲ್ಲ ಪವ್ವನೆ ಎನ್ನುವುದು ಅನುಕರಣ ಶಬ್ದ. ಅದಕ್ಕೆ ಇದ್ದಕ್ಕಿದ್ದಂತೆ ಹಾರು, ನೆಗೆ ಎಂದರ್ಥ. ಅದು ಹೆದರಿಕೆಯಿಂದ ಇರಬಹುದು. ಇತರ ಕಾರಣಗಳಿಗಾಗಿ ಇರಬಹುದು. ಅತೀವವಾದ ಹೆದರಿಕೆ, ಚಿಂತೆ, ಆಶ್ಚರ್ಯ, ಆನಂದಗಳಲ್ಲಿ ಹೀಗೆ ಆಗಬಹುದು. ಪವ್ವನೆ ಪಾಱು ಎನ್ನುವುದೇ ಹೌಹಾರು ಎಂದು ಸಂಕ್ಷಿಪ್ತಗೊಂಡಿದೆ. ಆದ್ದರಿಂದ ಚಿಂತೆ ದುಃಖಾದಿಗಳಿಂದ ಎದೆ ಬಡಿದುಕೊಳ್ಳು ಎಂದು ಅರ್ಥ.

ಸದ್ಯದಲ್ಲೇ ಪ್ರಕಟವಾಗಲಿದೆ

ನವಕರ್ನಾಟಕ ಕೈಪಿಡಿ

# ರಂಗಭೂಮಿ

*ಪ್ರಾಯೋಗಿಕ ಮಾರ್ಗದರ್ಶಿ*

*ರಚನೆ :* ಎನ್. ಎಸ್. ವೆಂಕಟರಾಮ್

* ಪಾಶ್ಚಾತ್ಯ ರಂಗಭೂಮಿ, ಭಾರತೀಯ ರಂಗಭೂಮಿ ಮತ್ತು ಕನ್ನಡ ರಂಗಭೂಮಿಯ ಉದಯ ಹಾಗೂ ವಿಕಾಸದ ಸಂಕ್ಷಿಪ್ತ ಪರಿಚಯ.

* ಪಾಶ್ಚಾತ್ಯ ಮತ್ತು ಭಾರತೀಯ ರಂಗಶೈಲಿಗಳು, ರಂಗ ಪದ್ಧತಿಗಳು ಹಾಗೂ ರಂಗ ರೂಪಗಳ ಸರಳ ನಿರೂಪಣೆ.

*ಆಧುನಿಕ ರಂಗತಂತ್ರಗಳ ವಿಸ್ತೃತ ಮಾಹಿತಿ ಹಲವಾರು ರೇಖಾಚಿತ್ರಗಳು ಹಾಗೂ ಛಾಯಾಚಿತ್ರಗಳು.*

*ವಿಲಾಸಿ ತಂಡಗಳ ರಂಗ ಕಾರ್ಯಕರ್ತರು ಮತ್ತು ಶಾಲಾ ಕಾಲೇಜುಗಳ ಸಾಂಸ್ಕೃತಿಕ ವ್ಯವಸ್ಥಾಪಕರಿಗಾಗಿ ಉಪಯುಕ್ತ ಮಾರ್ಗದರ್ಶಿ.*

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆಪೆಟ್ಟಿಗೆ 5159, ಬೆಂಗಳೂರು - 560001.

ನವಕರ್ನಾಟಕ ಪ್ರಕಾಶನದ ಪ್ರಕಟಣೆಗಳು

## ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು

ಲೇಖಕರು : **ಎನ್. ಪಿ. ಶಂಕರನಾರಾಯಣ ರಾವ್**

ಸುಮಾರು ಇನ್ನೂರು ವರ್ಷಗಳ ಕಾಲ ಪರಕೀಯರ ದಾಸ್ಯದಲ್ಲಿದ್ದ ಭಾರತವನ್ನು ವಿಮೋಚನಗೊಳಿಸಲು, ಈ ದೇಶದ ಆದಿವಾಸಿಗಳಿಂದ ಹಿಡಿದು ರಾಜಕೀಯ ಪಕ್ಷಗಳು, ರೈತರು, ಕಾರ್ಮಿಕರು ಹಾಗೂ ಇತರ ಚಳವಳಿಗಳು ತಮ್ಮದೇ ರೀತಿಯಲ್ಲಿ ನಡೆಸಿದ ಹೋರಾಟವನ್ನು ಸಮಗ್ರವಾಗಿ ಚಿತ್ರಿಸುವ ಕೃತಿ.

**ಪುಟ : 400** (2ನೇ ಮುದ್ರಣ) **ಬೆಲೆ : ಸಾಧಾರಣ ಪ್ರತಿ ರೂ. 110**
**ಗ್ರಂಥಾಲಯ ಪ್ರತಿ ರೂ. 150**

## ಪ್ರಾಚೀನ ಭಾರತ

ಮೂಲ : **ಪ್ರೊ॥ ರಾಮ್ ಶರಣ್ ಶರ್ಮ**

ಅನುವಾದ : **ಎನ್. ಪಿ. ಶಂಕರನಾರಾಯಣ ರಾವ್**

*ಪ್ರಾಚೀನ ಭಾರತದ ಭೌಗೋಳಿಕ ಹಿನ್ನೆಲೆಯನ್ನು, ಶಿಲಾಯುಗ-ತಾಮ್ರಯುಗಗಳಿಂದ ಪ್ರಾರಂಭಿಸಿ ಹಲವು ನಾಗರಿಕತೆಗಳನ್ನು, ಸಾಮಾಜಿಕ ವ್ಯವಸ್ಥೆಗಳನ್ನು, ಮತಧರ್ಮಗಳನ್ನು, ದಂಡಯಾತ್ರೆಗಳನ್ನು, ಸಾಮ್ರಾಜ್ಯಗಳನ್ನು, ತತ್ವಶಾಸ್ತ್ರಗಳನ್ನು ಕಂಡ ಪ್ರಾಚೀನ ಭಾರತೀಯ ಇತಿಹಾಸದ ಮಹತ್ವವನ್ನು ತಿಳಿಸುವ ಕೃತಿ. ಹಲವು ಚಿತ್ರಗಳು ಹಾಗೂ ಭೂಪಟಗಳ ಸಹಿತ.*

**ಪುಟ : 284** **ಬೆಲೆ : ರೂ. 95**




ಡೆಮ್ಮಿ 1/4, ಒಟ್ಟು 680 ಪುಟಗಳು
4 ಸಂಪುಟಗಳ ಬೆಲೆ : ರೂ. 1800

ನವಕರ್ನಾಟಕ ಪ್ರಕಾಶನದ
ಹೆಮ್ಮೆಯ ಕೊಡುಗೆ!

ಭಾರಿ ಉಳಿತಾಯ ರೂ.450

ನವಕರ್ನಾಟಕ
# ಜ್ಞಾನ-ವಿಜ್ಞಾನ ಕೋಶ

ಪ್ರಧಾನ ಸಂಪಾದಕರು :
ಪ್ರೊ॥ ಎಂ. ಎ. ಸೇತುರಾವ್
ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್

ಕನ್ನಡದಲ್ಲಿ ಪ್ರಥಮ ಪ್ರಯತ್ನ

ಸಲಹಾ ಮಂಡಳಿ ಸದಸ್ಯರು : ಪ್ರೊ॥ ಜೆ. ಆರ್. ಲಕ್ಷ್ಮಣರಾವ್
ಪ್ರೊ ॥ ಅಡ್ಯನಡ್ಕ ಕೃಷ್ಣ ಭಟ್, ಶ್ರೀ ಕೊಳ್ಳೇಗಾಲ ಶರ್ಮ
ಡಾ॥ ಕೆ. ವಿ. ವೆಂಕಟರಾಮು, ಶ್ರೀ ಸಿ. ಆರ್. ಕೃಷ್ಣರಾವ್
ಆಯಾ ಕ್ಷೇತ್ರಗಳ ಪರಿಣತ 23 ಜನಪ್ರಿಯ ಲೇಖಕರ
1000ಕ್ಕೂ ಹೆಚ್ಚು ಲೇಖನಗಳು, 1500ಕ್ಕೂ ಹೆಚ್ಚು ವರ್ಣಚಿತ್ರಗಳು




ಪ್ರಕಟಣೆ : ಮಾರ್ಚ್ 1998
ಪ್ರಕಟಣಾಪೂರ್ವ
ರಿಯಾಯಿತಿ

**25 %**

ರಿಯಾಯಿತಿ ಬೆಲೆ ರೂ. 1350
ರೂಪಾಯಿ 100
ಇಂದೇ ಪಾವತಿಸಿ ಹೆಸರು
ನೋಂದಾಯಿಸಿ




ಆಕರ್ಷಕ ಬಹುವರ್ಣ ಮುದ್ರಣ

ವಿಶೇಷ ಆಕರ್ಷಣೆ

ಪ್ರಕಟಣಾಪೂರ್ವ ರಿಯಾಯಿತಿಯ ನೋಂದಾಯಿತರಿಗೆ
ನವಕರ್ನಾಟಕದ ಇತರ ಎಲ್ಲಾ ಪ್ರಕಟಣೆಗಳ ಮೇಲೆ
ಶೇಕಡಾ 20ರ ರಿಯಾಯಿತಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ಬೆಂಗಳೂರು - ಮಂಗಳೂರು - ಮೈಸೂರು - ಗುಲ್ಬರ್ಗಾ
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159
ಬೆಂಗಳೂರು - 560 001 ದೂರವಾಣಿ : 2203580 2203581




**ಬ್ಯಾಂಕ್‌ಗಳಿಂದ ಸಾಲಸೌಲಭ್ಯ**

ಕೆನರಾ, ಸಿಂಡಿಕೇಟ್, ವಿಜಯಾ ಮತ್ತು ಕರ್ಣಾಟಕ ಬ್ಯಾಂಕ್
ಈ ಸಂಪುಟಗಳನ್ನು ಕೊಳ್ಳಲು ಸುಲಭ ಕಂತುಗಳ ಸಾಲ ನೀಡುತ್ತವೆ.
ನಿಮ್ಮ ಸಮೀಪದ ಬ್ಯಾಂಕ್ ಶಾಖೆಯಲ್ಲಿ ವಿಚಾರಿಸಿ

## ಇಗೋ ಕನ್ನಡ

ಇದನ್ನು ಅರ್ಥಕೋಶ ಅಥವಾ ನಿಘಂಟು ಎಂದೇ ತಿಳಿಯಬೇಕಾಗಿಲ್ಲ. ಓದಿದಾಗ ಮುದ ಕೊಡುವ ಇದರ ವ್ಯಾಪಕತೆ ಒಂದು ಪದಕ್ಕೆ ಅರ್ಥ ನೀಡುವಷ್ಟಕ್ಕೆ ಮಾತ್ರವೇ ಸೀಮಿತವಾಗಿಲ್ಲ. ಪದದ ಅರ್ಥ ಹುಡುಕುತ್ತ ಅದರ ಬೇರು, ಕಾಂಡ, ರೆಂಬೆ-ಕೊಂಬೆ ಇತ್ಯಾದಿಗಳ ಮೂಲ ಶೋಧಿಸಿ, ಬಳಕೆಯಲ್ಲಿ ಅದು ಹೇಗೆಲ್ಲ ಬದಲಾವಣೆಗೊಳಗಾಗಿದೆ ಎಂಬುದನ್ನು ಪತ್ತೆ ಮಾಡುವ, ಅಂತೆಯೇ ಭಾಷಾಜ್ಞಾನದ ಹಾಗೂ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಕ್ರಿಯಾಶೀಲವಾದ ಪರಿಶ್ರಮ ಈ ಕೃತಿಗೆ ಹಿನ್ನೆಲೆಯಾಗಿದೆ.

ಅರ್ಥದ ಬೆನ್ನೇರಿ ಸಂಚರಿಸುವಾಗ ಜನಸಾಮಾನ್ಯರ ನುಡಿಗಟ್ಟಿನ ಜತೆಗೆ ಸಂಸ್ಕೃತ ಕಾವ್ಯಗಳ, ಹಳೆಗನ್ನಡ, ನಡುಗನ್ನಡ, ಆಧುನಿಕ ಕನ್ನಡದ ಗದ್ಯ ಪದ್ಯಗಳಲ್ಲದೆ ಅಲ್ಲಲ್ಲಿ ವ್ಯಾಕರಣದ ಪರಿಚಯ ಮಾಡಿಕೊಡುತ್ತ, ಅನ್ಯದೇಶ್ಯ ಪದಗಳು ನಮ್ಮ ನುಡಿಗಟ್ಟಿನಲ್ಲಿ ನುಸುಳಿಕೊಂಡು, ತಮ್ಮ ನೆಲೆಯನ್ನು ಖಾಯಂಗೊಳಿಸಿಕೊಂಡ ಪರಿಯ ರೋಚಕ ಅನುಭವ ನೀಡುವ ಪುಸ್ತಕ ಇದು. ಹಾಗಾಗಿ ಬೇರೆಲ್ಲ ನಿಘಂಟುಗಳಿಗಿಂತ 'ಇಗೋ ಕನ್ನಡ'ಕ್ಕೆ ಹೆಚ್ಚಿನ ಮಹತ್ವ. ಮನೆಗಳಲ್ಲಿ, ಶಾಲೆಗಳಲ್ಲಿ, ಗ್ರಂಥಾಲಯಗಳಲ್ಲಿ ಇರಲೇಬೇಕಾದ ಪುಸ್ತಕ ಇದು.

ತಿಳಿವಳಿಕೆಯ ಪರಿಧಿಯನ್ನು ವಿಸ್ತರಿಸುವ ಭಾಷೆ, ಸಾಮಾಜಿಕ ಸೌಹಾರ್ದತೆಯನ್ನೂ ಕಾಪಿಡುವ ತನ್ನ ಕ್ರಿಯೆಯಲ್ಲಿ ಇತರ ಭಾಷೆಗಳಿಂದ ಕೊಡು-ಕೊಳ್ಳು ಮಾಡಿಕೊಳ್ಳುತ್ತಾ ತಾನೂ ಬೆಳೆಯುತ್ತದೆ. 'ಕನ್ನಡ ಭಾಷೆಯಲ್ಲಿ ಅನ್ಯದೇಶ್ಯ ಶಬ್ದಗಳು' ಹಾಗೂ 'ದೇಶ್ಯ ಶಬ್ದಗಳು' ನಮ್ಮ ಭಾಷೆಯನ್ನು ಶ್ರೀಮಂತಗೊಳಿಸಿವೆ. ಇವುಗಳನ್ನೆಲ್ಲ ಓದುಗರು ಪ್ರೊ॥ ಜಿ. ವೆಂಕಟಸುಬ್ಬಯ್ಯನವರ ಈ ಗ್ರಂಥದಲ್ಲಿ ತಿಳಿಯಬಹುದು.



ವಿದ್ಯೆ, ವಿದ್ವತ್ತು, ಸೃಜನಶೀಲ ಪ್ರತಿಭೆ ಮತ್ತು ವಿನಯಗಳಿಂದ ಕೂಡಿದ ಹಳೆಯ ತಲೆಮಾರಿನ ಸಾರಸ್ವತಲೋಕದ ವಿಶಿಷ್ಟ ಮಾದರಿಗೆ ಒಂದು ಜೀವಂತ ನಿದರ್ಶನ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು. ವಂಶವಾಹಿಯಾಗಿ ವಿದ್ವತ್ತನ್ನು ಬಳುವಳಿಯಾಗಿ ಪಡೆದ ವೆಂಕಟಸುಬ್ಬಯ್ಯನವರು ಸ್ವಂತ ಅಧ್ಯಯನ, ಬೋಧನೆ, ಸಂಶೋಧನೆಗಳಿಂದ ಗುಪ್ತಗಾಮಿಯಾಗಿ ರಕ್ತದೊಳಗಿದ್ದ ಈ ಆಜ್ಯವನ್ನು ಹೊತ್ತಿಸಿ, ಪ್ರಜ್ವಲಿಸುವಂತೆ ಮಾಡಿ ಅದನ್ನು ಶಿಖೆಯಲ್ಲಿ 'ವಿದ್ಯಾಲಂಕಾರ'ವಾಗಿ ಮುಡಿದವರು; ಸಾವಿರಾರು ಜನ ಶಿಷ್ಯರಿಗೆ, ಸಾಹಿತ್ಯ ಪಿಪಾಸುಗಳಿಗೆ ಜ್ಞಾನ ದೀವಿಗೆಯಾದವರು. ವೆಂಕಟಸುಬ್ಬಯ್ಯನವರ ಪ್ರತಿಭೆಯ ಆಯಾಮಗಳು ಹಲವಾರು. ಈ ಸೃಜನಶೀಲ ಪ್ರತಿಭೆಗೆ ವಿದ್ವತ್ತಿನ ಸ್ಪರ್ಶವೂ ಕೂಡಿದಾಗ ಹಲವಾರು ಕುಡಿಗಳು ಕೊನರಿದವು. ಇಂಥ ಕುಡಿಗಳಲ್ಲಿ ಕನ್ನಡ ನಿಘಂಟು ದಾಂಗುಡಿ ಇಟ್ಟು ಒಂದು ಮಹಾವೃಕ್ಷವಾಗಿಯೇ ಬೆಳೆದು ಇಂದು ಕನ್ನಡಿಗರ ಮನೆಮನೆಗಳಲ್ಲಿ ಬೆಳಗುತ್ತಿದೆ.

ಎಂ. ಎ. ಪದವಿಯಲ್ಲಿ ಸುವರ್ಣಪದಕ ವಿಜೇತರಾಗಿ ಕಾಲೇಜಿನಿಂದ ಹೊರಬಂದ ವೆಂಕಟಸುಬ್ಬಯ್ಯನವರು ನಲವತ್ತು ವರ್ಷಗಳ ಕಾಲ ಅಧ್ಯಾಪಕರಾಗಿ, ಪ್ರಾಚಾರ್ಯರಾಗಿ ದುಡಿದು ಅದಕ್ಕೆ ಹೆಗಲೆಣೆಯಾಗಿಯೇ ಕನ್ನಡ ನುಡಿಯ ಕೆಲಸಗಳಲ್ಲಿ ಅಹರ್ನಿಶಿ ಕ್ರಿಯಾಶೀಲರಾಗಿ ಯುವಪೀಳಿಗೆಗೆ ಮೇಲ್ಪಂಕ್ತಿಯಾಗಿ ನಿಂತವರು. ಕನ್ನಡ ನುಡಿಯ ಅರ್ಥ, ಅಂತರಾರ್ಥಗಳನ್ನು, ಅದರ ಆಜು-ಬಾಜುಗಳನ್ನು, ಆಳ-ವಿಸ್ತಾರಗಳನ್ನು ಕುರಿತು ಅಧಿಕಾರಯುತವಾಗಿ ಮಾತನಾಡಬಲ್ಲ ಕೆಲವೇ ವಿದ್ವಾಂಸರಲ್ಲಿ ವೆಂಕಟಸುಬ್ಬಯ್ಯನವರು ಅಗ್ರಗಣ್ಯರು. ಚಲನಶೀಲವಾದ ಭಾಷೆಯ ಜೊತೆಗೇ ಲೇಖಕನಾದವನು ಬೆಳೆಯುತ್ತಾನೆ ಎಂಬುದಕ್ಕೆ ಸ್ಫಟಿಕಸದೃಶ ನಿದರ್ಶನ ವೆಂಕಟಸುಬ್ಬಯ್ಯನವರು. ಪ್ರತಿಭಾನ್ವಿತನ ಕೈಯಲ್ಲಿ ಎಷ್ಟು ಸಮರ್ಥವಾಗಿ ವಾಚ್ಯಾರ್ಥ ಧ್ವನ್ಯರ್ಥಗಳಿಂದ ಕೂಡಿ ಹೇಗೆ ಮಾತು ಮಾಣಿಕ್ಯವಾಗಬಲ್ಲದು ಎಂಬುದನ್ನು ಅಂಗೈನೆಲ್ಲಿಯಂತೆ ಸ್ಪಷ್ಟವಾಗಿ ತೆರೆದಿಟ್ಟು ಅವರು ನಿಮ್ಮನ್ನು ವಿಸ್ಮಯಗೊಳಿಸುತ್ತಾರೆ. ಎಂದೇ ಅವರ 'ಇಗೋ ಕನ್ನಡ' ನಮ್ಮ ಅತ್ಯಂತ ಜನಪ್ರಿಯ ಅಂಕಣ. ಐದು ವರ್ಷಗಳಿಂದ ಪ್ರಜಾವಾಣಿ ಸಾಪ್ತಾಹಿಕ ಪುರವಣಿಯಲ್ಲಿ ನುಡಿಮಾಲೆಯಾಗಿ ಕಂಗೊಳಿಸುತ್ತಾ ಸಹಸ್ರಾರು ಜನರ ಭಾಷಾಜ್ಞಾನದ ಎಲ್ಲೆಗಳನ್ನು ವಿಸ್ತರಿಸುತ್ತಿರುವ ಈ ಅಂಕಣದ ಬರಹಗಳು ಈಗ ಪುಸ್ತಕ ರೂಪದಲ್ಲಿ ಬಂದು ಕನ್ನಡಿಗರ ಮನೆಗಳನ್ನು ಅಲಂಕರಿಸಲಿರುವುದು, ಮನಗಳನ್ನು ಬೆಳಗಿಸಲಿರುವುದು ನಮಗೆ ಹೆಮ್ಮೆಯ ವಿಚಾರ, ಸಂತೋಷದ ಸಂಗತಿ.

**ಜಿ. ಎನ್. ರಂಗನಾಥ ರಾವ್**
ಸಹ-ಸಂಪಾದಕರು, ಪ್ರಜಾವಾಣಿ, ಬೆಂಗಳೂರು

**ISBN 81-7302-275-5**